॥ ಶ್ರೀ ರಾಮ ॥

— ಶ್ರೀ ಸಮರ್ಥರ —

# ದಾ ಸ ಬೋ ಧೆ

(ಕನ್ನಡ ಗದ್ಯದಲ್ಲಿ ಸಂಪೂರ್ಣ)








— ಬರೆದವರು —

ಕೃಷ್ಣಾಜಿ ಶ್ರೀಪಾದರಾವ ಕುಲಕರ್ಣಿ (ಹಿರೇಬಾಗೇವಾಡಿ)

೧೯೫೫) (ಬೆಲೆ ರೂ. ೫

ಮುದ್ರಕರು-
ಎಸ್ ಡಿ ಜಕಾತಿ ಎ ಎ. ಎಸ್ ಎಲ್. ಸಿ
ಸಪ್ತಿಕ ಪ್ರೆಸ್ ಮುರಾರಾಗಲ್ಲಿ, ಹುಬ್ಬಳ್ಳಿ

ಮೊದಲನೆಯ ಮುದ್ರಣ ೧೦೦೦ ಪ್ರತಿಗಳು

— ಪ್ರಕಾಶಕರು —
ಕೆ. ಎಸ್ ಕುಲಕರ್ಣಿ ಬುಕ್ ಡಿಪೊ
ಸ್ಟೇಶನ ರೋಡ, ಹುಬ್ಬಳ್ಳಿ,

# ಪ್ರಸ್ತಾವನೆ

ಈ ಮೊದಲು ನಮ್ಮ ಗ್ರಂಥ ಪ್ರಕಾಶನ ಕಾರ್ಯವು ಕೇವಲ ಶಾಸ್ತ್ರೋಪಯೋಗೀ ಪುಸ್ತಕಗಳನ್ನೇ ಹೆಚ್ಚಾಗಿ ಪ್ರಕಟಿಸುವದರಲ್ಲಿ ಪ್ರವರ್ತನವಾಗಿದ್ದಿತು ಇತ್ತಿತ್ತಲಾಗಿ ಧಾರ್ಮಿಕ ಆಧ್ಯಾತ್ಮಿಕ ಹಾಗು ಬೋಧಪ್ರದವಾದ ಚಿಕ್ಕ ದೊಡ್ಡ ಗ್ರಂಥಗಳನ್ನು ಸಂಗ್ರಹಿಸಿ ಹೊರಡಿಸುವದರಲ್ಲಿಯೂ ಉದ್ಯುಕ್ತವಾಗಿದೆಯೆಂದು ಹೇಳುವದಕ್ಕೆ ನಮಗೆ ತುಂಬಾ ಉತ್ಸುಕತೆಯೆನ್ನಿಸುತ್ತದೆ ಮುಖ್ಯವಾಗಿ ವಾಚಕರ ಮನಸ್ತೃಪ್ತಿಯನ್ನು ಸಫಲಗೊಳಿಸುವದೇ ನಮ್ಮ ಪ್ರಕಟನೆಯ ಉದ್ದೇಶವಾಗಿದೆ ಈ ನಮ್ಮ ಹಂಬಲಕ್ಕನುಸರಿಸಿ ಪ್ರಥಮತಃ ಹಲವು ಚಿಕ್ಕ ಪುಸ್ತಕಗಳನ್ನಲ್ಲದೆ 'ಶ್ರೀ ಗುರು ಚರಿತ್ರೆ' ಎಂಬ ಮಹತ್ತಮ ಪ್ರಾಸಾದಿತ ಗ್ರಂಥವನ್ನು ಪ್ರಕಟಿಸಿರುವೆವು ನಂತರ ದೊಡ್ಡದಾದ ಎರಡನೆಯ ಗ್ರಂಥವೆಂದರೆ ಇದೀಗ ಪ್ರಕಾಶನಗೊಳಿಸುವ ಈ 'ಶ್ರೀ ಸಮರ್ಥರ ದಾಸಬೋಧೆ'ಯು ಬೋಧಪರವೂ ನೀತಿ ನಯಾನ್ವಿತವೂ ಆಗಿರುವ ಈ ಗ್ರಂಥವಾದರೂ ಸಿದ್ಧಪ್ರಣೀತ 'ಶ್ರೀ ಗುರು ಚರಿತ್ರೆ'ಯಂತೆ ಕನ್ನಡದ ಸರಳ ಗದ್ಯ ಶೈಲಿಯಲ್ಲಿ ಇಡಿಯಾಗಿ ಬರೆಯಲ್ಪಟ್ಟಿದೆ ಇದರ ಮೂಲವೂ ಆ ಗ್ರಂಥದಂತೆ ಮಹಾರಾಷ್ಟ್ರ ಭಾಷೆಯ ಓವೀ ರೂಪದಲ್ಲಿ ಇದು ಸುಮಾರು ಮುನ್ನೂರು ವರುಷಗಳ ಹಿಂದಿನ ಲೋಕೋತ್ತರ ಮಹಂತನೊಬ್ಬನ ವಾಣಿಯಿಂದ ಸ್ಫುರಿತವಾದುದು ಇವೆರಡು ಗ್ರಂಥಗಳು ಆ ಸಿದ್ಧ ಮಹಂತರ ಮಾತೃ ಭಾಷೆಯಲ್ಲಿದ್ದರೂ ಮಹಾರಾಷ್ಟ್ರ ಹಾಗು ಮಹಾರಾಷ್ಟ್ರೇತರ ಪ್ರಾಂತಗಳಲ್ಲಿ ಇವಕ್ಕಿರುವ ಪೂಜ್ಯತೆಯೂ ಮಹತ್ವವೂ ಇಂದಿಗೂ ಚಿರಂತನವಾಗಿ ಉಳಿದಿವೆ ಹೀಗಿದ್ದರೂ ನಮ್ಮ ಕನ್ನಡ ನಾಡಿನಲ್ಲಿ ಈ ಮೂಲ ಗ್ರಂಥಗಳ ಪ್ರಚಾರವು ಅಷ್ಟೊಂದಾಗಿಲ್ಲವಲ್ಲ! ಆ ಗ್ರಂಥಭಾಷೆಯ ಬಳಿಕೆ ನಮ್ಮಲ್ಲಿ ಹೆಚ್ಚಾಗಿ ಇಲ್ಲದುದೇ ಇದಕ್ಕೆ ಕಾರಣವು ಇದೇ ಒಂದು ಕೊರತೆಯನ್ನು ಹೇಗೆ ನೀಗಬಹುದಂಬದರ ವಿಚಾರವು ಈ ಮೊದಲು ನಮ್ಮ ನಾಡಿನ ಕೆಲವರಲ್ಲಿ ಹೊಳೆದದ್ದು ಆಶ್ಚರ್ಯವಲ್ಲ ಅದಕ್ಕಾಗಿ ಕೆಲವು ಪಂಡಿತರು ಆ ಗ್ರಂಥಗಳನ್ನು ಕನ್ನಡದಲ್ಲಿ ಬರೆದು ಪ್ರಸಿದ್ಧ ಮಾಡಿದರು ಆದರೆ ಅವರವರು ಬರೆದ ಯಾವ ಗ್ರಂಥಗಳೂ ಸಂಪೂರ್ಣವಿರದ್ದರಿಂದ ಅವುಗ

ಳಿಂದ ಭಾವಿಕರ ಜಿಜ್ಞಾಸೆಯು ತುಂಬಿ ಬರಲಿಲ್ಲೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ ಈ ಸ್ಥಿತಿಯಲ್ಲಿರುವ ಭಾವಿಕರ ಅಂತರ್ಯವನ್ನೇ ತರ್ಕಿಸಿ ನಾವು ಆ ಗ್ರಂಥಗಳ ಸಮಗ್ರ ರುಚಿಯನ್ನು ಅವರೂ ಇನ್ನಿತರರೂ ಸವಿಯಲೆಂದು ಅವುಗಳನ್ನು ಕನ್ನಡದ ಸರಳ ಗದ್ಯ ಶೈಲಿಯಲ್ಲಿ ಪ್ರಸಿದ್ಧಿಸುವ ಸಾಹಸಕ್ಕೆ ಕೈ ಹಾಕಿದೆವು ಭಗವಾನ್ ಶ್ರೀ ರಘು ರಾಮನ ಕೃಪೆಯಿಂದ ಆ ನಮ್ಮ ಹವಣಿಕೆ ಇದೀಗ ಕೈಗೊಂಡಿತೆಂದು ಈಗ ಹೇಳಲು ನಮಗೆ ಬಾಧಕವೇನು ? ಶ್ರೀ ಗುರು ಚರಿತ್ರೆಯು ಈ ಮೊದಲೇ ಪ್ರಕಟವಾಗಿದೆ ಕನ್ನಡ ನಾಡಿನ ದೂರ ದೂರಿನ ಅದೆಷ್ಟೋ ಭಾವಿಕರು ಇಂದಿಗೆ ಆ ಪ್ರಾಸಾದಿತ ಗ್ರಂಥದ ಪಾರಾಯಣ ಪಠಣ ನಡೆಯಿಸಿರಲು ಸಾಕು ನಂತರ ಈ 'ಶ್ರೀ ಸಮರ್ಥರ ದಾಸಬೋಧೆ'ಯನ್ನು ಇಂದಿನ ಶುಭ ದಿನದಲ್ಲಿ ಪ್ರಸಿದ್ಧ ಪಡಿಸುವೆವು ಬಹಿರಂಗದ ಸ್ವರೂಪದ ಸೌಂದರ್ಯಕ್ಕೆ ಶ್ರಿ ಸಮರ್ಥರ ನೈಜ ಸ್ವರೂಪವನ್ನು ತೋರಿಸುವ ತೈಲ ಚಿತ್ರವನ್ನೂ ಅವರ ಹೃದಯಸ್ಥಿತ ಶ್ರೀ ರಘು ರಾಮನು ಕೋದಂಡ ಧರಿಸಿದ ಚಿತ್ರವೊಂದನ್ನು ಈ ಗ್ರಂಥದಲ್ಲಿ ನೇರಿಸಿದೆ ಮೇಲಾಗಿ ಸಮರ್ಥರ ಸಂಕ್ಷಿಪ್ತ ಚರಿತ್ರೆಯನ್ನೂ ಕೊಟ್ಟಿದೆ ಕೊಳ್ಳುವವರ ಮನಮೆಚ್ಚುವಂತೆ ಗ್ರಂಥವನ್ನು ಕ್ಯಾಲಿಕೋ ಬೈಂಡಿನಲ್ಲಿ ಸಿದ್ಧಗೊಳಿಸಿದೆ.

ಇನ್ನು ಕೊನೆಯದಾಗಿ ಈ ಗ್ರಂಥದ ನಮ್ಮ ಪ್ರಕಾಶನದಲ್ಲಿ ಸಹಾಯಕಾರಿಗಳಾದವರೆಲ್ಲರಿಗೂ ಮತ್ತು ಈ ಗ್ರಂಥವನ್ನು ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿಕೊಡುವ ಕಾರ್ಯದಲ್ಲಿ ನೆರವಾದ ಸ್ವಸ್ತಿಕ ಪ್ರೆಸ್ಸಿನ ಒಡೆಯರಾದ ಶ್ರೀ ಎಮ್ ಡಿ ಜಕಾತೆ ಇವರಿಗೆ ಚಿರಋಣಿಯಾಗಿದ್ದೇವೆ

೨೪-೩-೧೯೫೫
ಮನ್ಮಥ ಸಂವತ್ಸರ ಯುಗ ಪ್ರತಿಪದೆ
ಶಕೆ ೧೮೭೭

**ಕೆ ಎಸ್ ಕುಲಕರ್ಣಿ**
ಗ್ರಂಥ ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು
ಸ್ಟೇಶನರೋಡ, **ಹುಬ್ಬಳ್ಳಿ**

## ಶ್ರೀ ದಾಸಬೋಧೆಯು

# ಅನುಕ್ರಮಣಿಕೆಯು

|| ಜಯ ಜಯ ರಘುವೀರ ಸಮರ್ಥ ||



ಶ್ರೀ ರಾಮ

# ---ಶ್ರೀ ಸಮರ್ಥ ರಾಮದಾಸರು---

(ಸಂಕ್ಷಿಪ್ತ ಪರಿಚಯ—ಲೇ॥ ಕೃ ಶ್ರೀ ಕುಲಕರ್ಣಿ ಹಿರೇಬಾಗೇವಾಡಿ)

ಶ್ರೀ ರಾಮಪದ ರಜೋದ್ಧೂಲಿತ ಪುಣ್ಯಪವಿತ್ರವಾದ ಪಂಚವಟಿಯ ಪ್ರದೇಶವು ಗೋದಾವರಿಯ ನೆರೆಯಲ್ಲಿ ಹಬ್ಬಿದೆ ಅಲ್ಲಿ 'ಅಂಬಡ' ಎಂಬ ಪರಗಣೆಯ ನಾಡು ಆ ನಾಡಿನಲ್ಲಿ 'ಜಾಂಬ' ಎಂಬ ಜನಪದವೇ ಶ್ರೀ ಸಮರ್ಥರ ಜನ್ಮಗ್ರಾಮವು ೧೬ನೆಯ ಶತಕದಲ್ಲಿ ಸೂರ್ಯಾಜಿ ಪಂತನೆಂಬವನು ಆ ಹಳ್ಳಿಯ ಕರಣಿಕನಾಗಿದ್ದನು ಆತನ ಧರ್ಮಪತ್ನಿ ರಾಣೂಬಾಯಿಯು ಈ ದಂಪತಿಗಳ ಉದರದಿಂದಲೇ ಸಮರ್ಥರ ಜನನವಾದುದು ಸುಶೀಲನಾದ ಸೂರ್ಯಾಜಿ ಪಂತನು ಶ್ರೀ ರಾಮನ ಉಪಾಸನೆಯನ್ನು ಬಲವಾಗಿ ಸಾಧಿಸಿಕೊಂಡುದರ ಫಲವಾಗಿ ಗಂಗಾಧರ ಹಾಗು ನಾರಾಯಣ ಎಂಬ ಇಬ್ಬರು ಗಂಡು ಮಕ್ಕಳ ಭಾಗ್ಯವು ಆ ಪಂತನಿಗೆ ದೊರೆಯಿತು ಈ ಮಕ್ಕಳಲ್ಲಿ ಕಿರಿಯನಾದ ನಾರಾಯಣನೇ ಮುಂದೆ ಸಮರ್ಥ ಪದದಿಂದ ಹೆಸರಾದನು ಇವನೇ ಶ್ರೀ ದಾಸಬೋಧೆಯ ಪ್ರವರ್ತಕನು ಹಾಗು 'ಸಮರ್ಥ ರಾಮದಾಸರು' ಎಂದು ವಿಖ್ಯಾತರಾದವರು

ಶಕೆ ೧೫೩೦ನೆಯ ಚೈತ್ರ ಶುಕ್ಲದ ನವಮಿಯು ಅಂದು ನಡು ಹಗಲಿನಲ್ಲಿ ಅಂದರೆ ಶ್ರೀ ರಾಮನು ಜನ್ಮ ತಾಳಿದ ಮುಹೂರ್ತದಲ್ಲಿ ಶ್ರೀಸಮರ್ಥರ ಜನನವಾಯಿತು ಇದೊಂದು ವಿಚಿತ್ರಯೋಗಾಯೋಗವೆಂದ ಸೂರ್ಯಾಜಿಯೂ ರಾಣೂಬಾಯಿಯೂ ಭಾವಿಸಿದರಲ್ಲದೆ ಜಾತನು ಮುಂದೆ ಸಮರ್ಥ ಖ್ಯಾತನಾಗುವನೆಂದು ಆಗಲೇ ನಿಶ್ಚಿತ ಮತಿ ತಾಳಿದರು

ಸೂರ್ಯಾಜಿಪಂತನು ನಾರಾಯಣನ ಉಪನಯನವಾದ ಕೆಲ ದಿನದಲ್ಲಿ ಕಾಲವಾದನು ಆಗ ನಾರಾಯಣನಿಗೆ ಏಳೇ ವರುಷ ವಯಸ್ಸಾಗಿದ್ದಿತು ಮುಂದೆ ತಾಯಿ ರಾಣೂಬಾಯಿಯೇ ಲಾಲನಪಾಲನದೊಂದಿಗೆ ಆತನ ಶಿಕ್ಷಣದ ಕಡೆಗೆ ಲಕ್ಷ್ಯ ಪೂರೈಸಿದಳು ನಾರಾಯಣನಿಗೀಗ ಹನೆರಡು ವರುಷ ತುಂಬಿವೆ ಮಗನ ಲಗ್ನ ಮಾಡಿ ತನ್ನ ಇತಿ ಕರ್ತವ್ಯ ಮುಗಿಸುವ ಹಂಬಲವು ರಾಣೂಬಾಯಿಯದು ಅದಕ್ಕಾಕೆ ಕನ್ಯೆ ಗೊತ್ತುಪಡಿಸಿ ಮಗನ ಲಗ್ನ ಹಮ್ಮಿದಳು

ಲಗ್ನದ ಪೂರ್ವ ಸಿದ್ಧತೆಗಳೆಲ್ಲ ಮುಗಿದು ಒಳ್ಳೆಯ ಮುಹೂರ್ತ ಗೊತ್ತು ಮಾಡಲಾಯಿತು ಬೀಗರಾದಿಯಾಗಿ ಎಲ್ಲರೂ ಮದುವೆಗೆ

ಬಂದವರು ವಧೂವರರ ವಿವಾಹ ಪೂರ್ವದ ವಿವಿಧ ವೃದ್ಧಾಚಾರಗಳೆಲ್ಲ ಕೊನೆಗಂಡವು ಮುಖ್ಯವಿಧಿಯಾದ ಅಕ್ಷತಾರೋಪಣಕ್ಕೆ ಸಿದ್ಧವಾಗಿದೆ ಮದುವಣಿಗರು ಹಸೆಯ ಮೇಲೆ ಬಂದು ಎದುರುಬದರಾಗಿ ಕುಳಿತಿರುವರು ಅವರ ಮಧ್ಯದಲ್ಲಿ ಅಂತ ಪಟವು ಸ್ವಸ್ತಿಕಾಂಕಿತದಿಂದ ಶೋಭಿಸುತ್ತದೆ ಪುರೋಹಿತರುಚ್ಚರಿಸುವ ಮಂಗಲಾಷ್ಟಕ ಪದ್ಯಗಳೂ, ಮಂಗಲ ವಾದ್ಯ ಧ್ವನಿಗಳೂ ನಿಚ್ಚಳವಾಗಿ ಕೇಳ ಬರಹತ್ತಿವೆ ಮಂಗಲಾಷ್ಟಕ ಮುಗಿದು 'ಸುಮೂಹೂರ್ತೇ ಸಾವಧಾನ' ಎಂಬ ಸ್ವಸ್ತಿವಾಚಕ ವಾಕ್ಯವು ಮದುವಣಿಗ ನಾರಾಯಣನ ಕಿವಿಯನ್ನು ಕೊರೆದು ಅವನ ಹೃದಯ ಸೇರಿತು ಸಾವಧಾನವೆಂಬುದನ್ನು ಕೇಳಿದನು ಕೂಡಲೇ ಅಂತಃಪಟವನ್ನು ಪುರೋಹಿತರಿಂದ ಕಸಿದೊಗೆದನು ಅಲ್ಲಿಂದ ಟಣ್ಣನೆ ಜಿಗಿದು ವಿವಾಹ ಮಂಟಪದಿಂದ ಪಾರಾಗಿ ಓಡಿಬಿಟ್ಟನು ಇಂತಾದ ಆಗಿನ ಸಂದರ್ಭವು ಆ ಸಮರ್ಥನ ಹೊರತು ಉಳಿದವರಿಗೆ ಕಳವಳಿಕೆಯನ್ನುಂಟು ಮಾಡಿದರೂ ನಾರಾಯಣನಲ್ಲಿ ಲೋಕೋತ್ತರ ತಿಳುವಳಿಕೆಯನ್ನು ಜಾಗೃತವನ್ನಾಗಿ ಮಾಡಿತು ಮತ್ತು ಅದರಿಂದಲೇ ಮುಂದೆ ಆ ನಾರಾಯಣನು 'ಸಮರ್ಥ' ಪದದಿಂದ ಪ್ರಸಿದ್ಧನಾದನು

ವಿವಾಹ ಮಾಡಿಕೊಳ್ಳುವದನ್ನು ಬಿಟ್ಟು ಓಡಿ ಹೋದ ಸಮರ್ಥರು ಪಂಚವಟಿಯಿಂದ ೨ ಮೈಲಿನ ಮೇಲಿದ್ದ ಟಾಕಳಿಗೆ ಹೋದರು ಮುಂದೆ ಭಾರತದಲ್ಲೆಲ್ಲ ತೀರ್ಥಾದಿಗಳನ್ನು ಸಂಚರಿಸಿದರು ಕೃಷ್ಣಾ ತೀರದಲ್ಲಿ ಬಹು ಕಾಲವಾಗಿದ್ದರು ತಮ್ಮದೇ ಒಂದಾದ ರಾಮೋಪಾಸನೆಯ ಸಾಂಪ್ರದಾಯವನ್ನುಬೆಳೆಯಿಸಿದರು ಹಾಗೂ ಅದರ ಪ್ರವೃದ್ಧಿಯ ಕುರಿತು ಸತತವೂ ಅವರ ಪ್ರಯತ್ನ ಸಾಗಿತು ಅದೆಷ್ಟೋ ಜನರು ಅವರ ಶಿಷ್ಯತ್ವ ವಹಿಸಿದರು ಸಮರ್ಥರ ನಿರಿಚ್ಛೆ, ವಿಶ್ವಹಿತಚಿಂತನೆ, ಬ್ರಾಹ್ಮಣ್ಯ ರಕ್ಷಣೆಯ ಚಿಂತೆ ಇವೆಲ್ಲವು ಅವರ ಸಾಂಪ್ರದಾಯ ಸ್ಥಿರತ್ವಕ್ಕೆ ಕಾರಣಗಳಾದವು ತಪಸ್ಸು, ಉಪಾಸನೆ, ಧರ್ಮನಿಷ್ಠೆ ಇವುಗಳ ಮೂಲಕವಾಗಿಯೇ ಬಲವರ್ಧನೆಯಾಗುವದೆಂದು ಜಗತ್ತಿಗೇ ಆದರ್ಶವಾಗಿ ತೋರಿಸಿದ ಈ ಮಹಂತ–ಮಹಾನುಭಾವರು ೭೩ವರುಷ ವಯಸ್ಸಾಗುವವರೆಗೆ ತಮ್ಮ ದೇಹ ಸವೆಯಿಸಿ ಸಜ್ಜನಗಡದಲ್ಲಿ ಕೀರ್ತಿರೂಪದಿಂದ ಅಮರರಾದರು (ಶಕೆ ೧೬೦೩)

ಇಂತಿದೆ ಶ್ರೀ ಸಮರ್ಥ ರಾಮದಾಸರ ಸಂಕ್ಷಿಪ್ತ ಪರಿಚಯವು



|| ಜಯ ಜಯ ರಘುವೀರ ಸಮರ್ಥ ||

# ಶ್ರೀ ದಾಸಬೋಧೆ

## ೧ ಸ್ತವನದಶಕ

---

ಶ್ರೀರಾಮ॥ |೧ಗ್ರಂಥಾರಂಭಲಕ್ಷಣ।ಶ್ರೋತೃಗಳು'ಇದಾವಗ್ರಂಥವು?ಇದರಲ್ಲಿ ಹೇಳಿರುವದೇನು?ಹಾಗು ಇದರ್‌ಶ್ರವಣದಿಂದ ಫಲವೇನು?"ಎಂದು ಪ್ರಶ್ನೆಗಳನ್ನು ಕೇಳಲಾಗಿ ಶ್ರೀ ಗುರುಗಳು-ಈ ಗ್ರಂಥಕ್ಕೆ'ಗುರು ಶಿಷ್ಯರ ಸಂವಾದ ಸ್ವರೂಪದ ದಾಸಬೋಧೆಯೆಂಬ ನಾಮವಿರುವದು ಇದರಲ್ಲಿ ಭಕ್ತಿಮಾರ್ಗವನ್ನು ವಿಸ್ತರಿಸಿದೆ ನವವಿಧ ಭಕ್ತಿಗಳ ಲಕ್ಷಣಗಳನ್ನೂ ಜ್ಞಾನ-ವೈರಾಗ್ಯಗಳ ಲಕ್ಷಣಗಳನ್ನೂ ಹೇಳಿರುವದಲ್ಲದೆ ವಿಶೇಷವಾಗಿ ಅಧ್ಯಾತ್ಮ ವಿಷಯವನ್ನು ವಿವರಿಸಿದೆ ಈ ಗ್ರಂಥದಲ್ಲಿ 'ಭಕ್ತಿಯೋಗದಿಂದ ಮಾನವನು ದೇವ ಸಾಕ್ಷಾತ್ಕಾರ ಮಾಡಿಕೊಳ್ಳುವನು' ಎಂಬ ಅಭಿಪ್ರಾಯವು ಒಡಮೂಡುತ್ತದೆ. ಮುಖ್ಯವಾಗಿ ಈ ದಾಸಬೋಧೆಯಲ್ಲಿ ಭಕ್ತಿ ಮತ್ತು ಶುದ್ಧಜ್ಞಾನಗಳ ನಿಶ್ಚಯವನ್ನು ಹೇಳಿದೆ ಆತ್ಮಸ್ಥಿತಿಯೆಂದರೇನು ? ಶುದ್ಧಬೋಧೆ ಹೇಗಿರುವದು? ಸಾಯುಜ್ಯ ಮುಕ್ತಿಯುದಾವುದು? ಮೋಕ್ಷದ ಸ್ವರೂಪವೆಂತು? ಶುದ್ಧ ಸ್ವರೂಪವೆಂದಾವುದಕ್ಕನ್ನಬೇಕು? ವಿದೇಹ ಸ್ಥಿತಿ, ಅಲಿಪ್ತತೆಗಳ ಲಕ್ಷಣಗಳೇನು? ಶ್ರೇಷ್ಠ ದೇವನಾರು? ಶ್ರೇಷ್ಠ ಭಕ್ತನಾವನು? ಜೀವ-ಶಿವರ ಸಂಬಂಧ ಸ್ವರೂಪಗಳೇನು? ಹಲವು ಮತಗಳಿಗನುಸರಿಸಿ ಬ್ರಹ್ಮನ ಸಂಬಂಧ ವಿಚಾರ, ತಾನಾರೆಂಬದರ ವಿಚಾರಗಳನ್ನೂ, ಉಪಾಸನೆ,

ಕವಿತ್ವ, ಚಾತುರ್ಯ, ಮಾಯಾಜನಿತ, ಪಂಚಭೂತಗಳು, ಇವುಗಳ ಲಕ್ಷಣ ಗಳನ್ನೂ ಹೇಳಿದೆ ಅಲ್ಲದೆ ಕರ್ತೃವು ಯಾರು? ಇದನ್ನೂ ವಿಶದವಾಗಿ ಹೇಳಿದೆ ಹಲವು ಸಂದೇಹ, ಅನುಮಾನಗಳ ನಿರಸನ ಮಾಡಿದೆ

ಈ ಪ್ರಕಾರವಾಗಿ ಹಲವು ಸಂಗತಿಗಳನ್ನು ಈ ಗ್ರಂಥದಲ್ಲಿ ನಿರೂಪಿ ಸಿದೆ ಇದರಲ್ಲಿ ವಿಶದೀಕರಿಸಿದ ಎಲ್ಲ ವಿಷಯೋಪವಿಷಯಗಳನ್ನು ಇಲ್ಲಿ ಹೇಳಿಲ್ಲ ಅವೆಲ್ಲವುಗಳ ಸಂಗಮತೆಗಾಗಿ ಈ ಗ್ರಂಥದಲ್ಲಿ ದಶಕಗಳೆಂಬ ಭಾಗಗಳನ್ನೂ ಸಮಾಸಗಳೆಂಬ ಅಂತರ್ಗತ ಭಾಗಗಳನ್ನೂ ಪ್ರತ್ಯೇಕಿಸಿ ಸ್ಪಷ್ಟಗೊಳಿಸಿದೆ ಹಲವು ಗ್ರಂಥಗಳಲ್ಲಿಯ ವಿಚಾರ, ಉಪನಿಷದ್, ವೇದಾಂತ, ಶ್ರುತಿಗಳ ಸಿದ್ಧಸಾರ ಸ್ವಾನುಭವಕ್ಕೆ ಗೋಚರಿಸಿದ ನಿರ್ಧಾರ ಇವುಗಳನ್ನು ಇದರಲ್ಲಿ ಸಮನ್ವಯಗೊಳಿಸಿದೆ. ಇದರಲ್ಲಿ ಸ್ವಲ್ಪವೂ ಸಹ ಮಿಥ್ಯವಿರದೆ ಪ್ರತ್ಯಕ್ಷಾನುಭವಯುಕ್ತವಾಗಿದೆ ಕೇವಲ ಮತ್ಸರಬುದ್ಧಿ ಯಿಂದ ಇವನ್ನೆಲ್ಲ ನಂಬದವನು ಶಿವಗೀತೆ ಮೊದಲಾದ ಹಲವು ಗೀತೆ ಗಳು, ಉಪನಿಷದುಗಳು, ಭಾಗವತ ಮೊದಲಾದ ಹಲವು ಗ್ರಂಥಗಳು ಇವೆಲ್ಲವುಗಳಿಂದ ಪ್ರತಿಪಾದಿತ ಭಗವದ್ವಾಕ್ಯಗಳಿಗೇ ಮಿಥ್ಯತೆಯನ್ನು ಕಲ್ಪಿಸಿದಂತಾಗುವದು ಇಂತು ಭಗವದ್ವಚನದಲ್ಲಿ ವಿಶ್ವಾಸವಿರದವನು ಪತಿತನು ಈ ಗ್ರಂಥದಲ್ಲಿ ಉಲ್ಲೇಖಿತವಾದುದೆಲ್ಲ ಭಗವದ್ವಾಕ್ಯನಿಯು ಕ್ತವಾಗಿವೆ ಗ್ರಂಥವನ್ನು ಪೂರ್ಣ ಅವಲೋಕಿಸದೆ ದೂಷಿಸುವವನು ದುರಾತ್ಮನು, ದುರಭಿಮಾನಿಯು, ಹಾಗು ಮತ್ಸರವುಳ್ಳಾತನು ಇಂಥವನು ಅನ್ಯರ ಹೇಳಿಕೆಯನ್ನು ತಿರಸ್ಕರಿಸಿದಲ್ಲಿ ಮುಂದೆ ಅವನಲ್ಲಿ ಕ್ರೋಧ ವಿಕಾ ರವು ಹೆಚ್ಚುವದು ಹೀಗೆ ಅವನ ಅಂತರ್ಭಾವವು ನಾಶವಾಗಿ ಅದು ಕಾಮ ಕ್ರೋಧಗಳಿಂದ ಪೀಡಿತವೂ ಅಹಂಭಾವಯುಕ್ತವೂ ಆದುದು ಪ್ರತ್ಯಕ್ಷ ಕಾಣುವದು

ಕಾಮಕ್ರೋಧಾದಿಗಳಿಂದ ಜಂಜಡವಾದುದನ್ನು ಒಳ್ಳೆಯದೆಂದು ಹೇಗೆ ಹೇಳುವದು? ಅಮೃತಸೇವನೆ ಮಾಡಿದರೆ ಮೃತ್ಯುವುಂಟಾಗು ವದೇ? ಇನ್ನು ಈ ಹೇಳಿಕೆ ಅದಂತಿರಲಿ ಅಧಿಕಾರಯುಕ್ತರಾದವರು ಅಭಿಮಾನ ಬಿಟ್ಟು ಈ ಗ್ರಂಥ ನಿರೀಕ್ಷಿಸಲು ಇದು ಉತ್ತಮತರವೆಂಬುದು ಗೊತ್ತಾಗುವದು

ಬಳಿಕ ಶ್ರೋತೃಗಳು ಗ್ರಂಥದ ವಿಷಯಕ್ಕೆ ಆಕ್ಷೇಪಿಸಿದ್ದಕ್ಕೆ — ಈ ಗ್ರಂಥದಲ್ಲಿ ಹೇಳಿರುವುದೆಲ್ಲವನ್ನು ಸಂಗ್ರಹಿಸಿ ಹೇಳಿರುವದು ಇದರ ಶ್ರವಣದಿಂದ ಕೂಡಲೇ ಕ್ರಿಯೆ ಬದಲಿಸಿ ಒಮ್ಮೆಲೇ ಸಂಶಯ ದೂರಾಗುವದು ಒಳ್ಳೆಯ ಮಾರ್ಗ ದೊರೆತು ಅದರಿಂದ ಸಾಯುಜ್ಯಮುಕ್ತಿಯ ತತ್ವವು ಗೊತ್ತಾಗುವದು

ಅಜ್ಞಾನ ದುಃಖ-ಭ್ರಾಂತಿಗಳು ದೂರಾಗಿ ತೀವ್ರವೇ ಜ್ಞಾನಪ್ರಾಪ್ತಿಯಾಗುವದು ಇಂತಿದೆ ಈ ಗ್ರಂಥದ ಫಲಶ್ರುತಿ ಯೋಗಿಗಳಿಗೆ ವೈರಾಗ್ಯ ಸಂಪತ್ತೂ ವಿವೇಕಚಾತುರ್ಯವೂ ಉಂಟಾಗುವವು ಮಾನವನಲ್ಲಿಯ ಭ್ರಾಂತಿ, ಅವಗುಣ, ಅಪಲಕ್ಷಣಗಳೆಲ್ಲ ದೂರಾಗಿ ಆತನು ಸಲ್ಲಕ್ಷಣಯುತನಾಗುವನು ಧೂರ್ತರು, ತಾರ್ಕಿಕರು, ವಿಮರ್ಶಕರು ಇವರಿಗೆಲ್ಲ ಇದರ ಸಮಯ ತಿಳಿಯುವದು ಆಲಸ್ಯವುಳ್ಳವರು ಉತ್ಸಾಹವುಳ್ಳವರಾಗುವರು ಪಾಪಿಗಳೂ ನಿಂದಕರೂ ಭಕ್ತಿಮಾರ್ಗವನ್ನು ಒಪ್ಪುವರು ಸಂಸಾರ ಲೋಲುಪರು ಮುಮುಕ್ಷುಗಳಾಗುವರು ಮೂರ್ಖರಲ್ಲಿ ದಕ್ಷತೆ ಹೆಚ್ಚುವದು ಭಕ್ತಿಮಾರ್ಗ ಕಡೆಗಣಿಸುವವರು ಭಕ್ತಿವಂತರಾಗಿ ಮೋಕ್ಷ ಹೊಂದುವರು ಅನೇಕ ಪಾಪಯುಕ್ತ ಪತಿತನು ಪವಿತ್ರನಾಗುವನು ಈ ಗ್ರಂಥ ಶ್ರವಣದಿಂದ ಪ್ರಾಣಿಗಳು ಉತ್ತಮ ಗತಿ ಹೊಂದುವವು ದೇಹಬುದ್ಧಿಯಿಂದ ಒದಗುವ ವ್ಯಥೆಗಳೂ, ಸಂಶಯ – ಅನುಮಾನಗಳೂ, ಪ್ರಾಪಂಚಿಕ ಚಿಂತೆಗಳೂ ನಾಶವಾಗುವವು

ಈ ಗ್ರಂಥದ ಭಾವಾರ್ಥವನ್ನು ಸರಿಯಾಗಿ ತಿಳಿದವರಿಗೆ ಯೋಗ್ಯ ಫಲವೂ ಮತ್ಸರಭಾವವನ್ನೆಣಿಸುವವರಿಗೆ ಕುತ್ಸಿತ ಫಲವೂ ದೊರಕುವದು

ಶ್ರೀ ರಾಮ |೨ಗಣೇಶಸ್ತವನ| ಓಂ ಗಣನಾಯಕನೇ! ಸರ್ವಸಿದ್ಧಿ ಪ್ರದಾತನೆ! ಅಜ್ಞಾನ-ಭ್ರಾಂತಿಗಳನ್ನು ಹರಿಮೊಗೆಯುವವನೆ! ಬೋಧರೂಪನೆ! ನಿನಗೆ ನಮಸ್ಕಾರವು ನೀನು ನನ್ನ ಹೃದಯ ಸೇರು ಅಲ್ಲಿಯೇ ಚಿರಕಾಲ ವಾಸವಾಗಿ ಇರು ನೀನು ನನ್ನನ್ನು ದಯೆಯ ಕಡೆಗಣ್ಣಿನಿಂದ ನೋಡು ನನಗೆ ಮಾತನಾಡುವ ಬಲವನ್ನು ಕೊಡು. ನಿನ್ನ ನಾಮಕೃಪೆಯಾಗಲು ವಿಘ್ನಗಳೆಲ್ಲ ಅಂಜುವವು ಹಾಗು ಅವು ನಿನ್ನ ಸ್ಮರಣೆಯಿಂದ ದೂರಾಗುವವು. ಆದ್ದರಿಂದಲೇ ನಿನಗೆ 'ವಿಘ್ನಹರ' ಎಂಬ ಹೆಸರು ಸಾರ್ಥಕವಾಗಿರುವದು ನೀನು

ಅನಾಥರ ತೌರುಮನೆಯಂತಿರುವಿ. ಹರಿಹರ ಮೊದಲಾದ ದೇವತೆಗಳೆಲ್ಲರಿಗೂ ನೀನು ವಂದ್ಯನು ನಿನ್ನನ್ನು ನಮಸ್ಕರಿಸಿ ಮಂಗಳಕಾರ್ಯವನ್ನಾರಂಭಿಸಲು ಸರ್ವಸಿದ್ಧಿಯಾಗುವದು ಯಾವ ಅಡೆತಡೆಗಳೂ ಉಪಾಧಿಗಳೂ ಉಂಟಾಗುವದಿಲ್ಲ ನಿನ್ನನ್ನು ಸ್ಮರಿಸುವದರಿಂದ ಪರಮ ಸಮಾಧಾನವಾಗುವದು ಹಾಗೂ ಇಂದ್ರಿಯಗಳನ್ನೆಲ್ಲ ತೊರೆದ ಮನಸ್ಸು ಕಣ್ಣಲ್ಲಿ ಬಂದು ನಿಲ್ಲುವದು ನಿನ್ನ ಚೆಲುವಿನ ರೂಪ ಕಂಡು ಎಲ್ಲ ದೇವತೆಗಳು ಕುಣಿಕುಣಿದು ನಲಿಯುವರು ಹಾಗು ಮುಗ್ಧರಾಗುವರು

ದೇವಾ! ನೀನು ಸದಾವಕಾಲವೂ ಬ್ರಹ್ಮಾನಂದದಿಂದ ಗುಂಗಾಗಿ ತಲೆಯನ್ನು ಅಲ್ಲಾಡಿಸುತ್ತಿರುವಿ ಯಾವಾಗಲೂ ನಿನ್ನ ಉಲ್ಹಾಸವೃತ್ತಿಯೂ ಪ್ರಸನ್ನ ಮುಖಮುದ್ರೆಯೂ ಆನಂದದಾಯಕವಾಗಿರುವವು ಸಿಂಧೂರ ವರ್ಣದಿಂದ ಒಪ್ಪುವ ನಿನ್ನ ಭವ್ಯರೂಪವೂ ಉಗ್ರಮೂರ್ತಿಯೂ ಪ್ರಚಂಡತೆಯೂ ಅಗಲಾದ ಮಸ್ತಕವೂ ಆಹ್ಲಾದದಾಯಕಗಳು ಹಲವು ಸುಗಂಧ ಪರಿಮಳಯುಕ್ತ ಮದಸ್ರಾವವು ನಿನ್ನ ಗಂಡಸ್ಥಲದಿಂದ ಒಂದೇಸವನೆ ಸುರಿಯುವದು ಅದಕ್ಕೆ ಭ್ರಮರಗಳು ಮೋಹಿಸಿ ಬಂದು ಕುಳಿತು ಝೇಂಕಾರ ಶಬ್ದ ಮಾಡುವವು ನಿರಿಗಗಟ್ಟಿದ ನಿನ್ನ ಸೊಂಡಿಲೂ, ಮನಹರವೂ ಅಧರ ಸ್ಥಲವೂ ಬಲು ಶೋಭಾಯಮಾನವಾಗಿರುವವು ಇವನ್ನೆಲ್ಲ ವರ್ಣಿಸುವದು ಅಶಕ್ಯವು

ಶ್ರೀ ಗಣೇಶನು ಸಕಳವಿದ್ಯೆಗಳಿಗೆ ಅಧಿಪತಿಯಾಗಿರುವನು ಅವನ ಸಣ್ಣವಾದ ಕಣ್ಣುಗಳು ಬುದ್ಧಿಮತ್ತೆಯ ದ್ಯೋತಕವಾಗಿರುವವು ಅವನ ಮೃದುವಾದ ಹಾಗುಹರವಾದ ಕಿವಿಗಳ ಬೀಸುವಿಕೆ, ರತ್ನ ಖಚಿತ ಮುಕುಟ ಕಾಂತಿ, ಹಾಗು ಅದರ ಹಲವು ವರ್ಣಗಳಿಂದ ಹೊರಟ ಪ್ರಕಾಶ, ಮೇಲೆ ಕೆಚ್ಚಿದ ಥಳಥಳಿಸುವ ನೀಲರತ್ನ, ಕರ್ಣದಲ್ಲಿಯ ನೀಳ್ದ ಕುಂಡಲಗಳು, ಸುವರ್ಣ ಬಣ್ಣದ ಬಲವಾದ ಕೋರೆ, 'ಹಾಗು ಅದರ ಮೂಲಕ್ಕೆ ಕೂಡ್ರಿಸಿದ ಕೆಳತಗಡು, ವಿಶಾಲ ಹಾಗು ಡೊಳ್ಳಿನಂಥಹೊಟ್ಟೆ, ನಡಕ್ಕೆ ಕಟ್ಟಿದ ಚಿಕ್ಕಚಿಕ್ಕ ಗೆಜ್ಜೆ ಹಾಗು ಮಣಿಗಳು, ಅವುಗಳ ಇಂಪಾದ ಸಪ್ಪಳಗಳು, ಹೊಟ್ಟೆಗೆ ಸುತ್ತಿದ ಸರ್ಪವು ಇದಲ್ಲದೆ ಅವನ ನಾಲ್ಕೋಳುಗಳು, ಲಂಬವಾದ ಉದರವು ಕೆಂಪು ಪೀತಾಂಬರವು, ಕಮಲದೋಪಾದಿಯಿರುವ ಸುಳಿಸುಳಿಯಾದ ಹೊಕ್ಕಳು, ಹಲವುತರದ

ಹೂಮಾಲೆಗಳು, ರತ್ನ ಜಡಿತಪದಕಹಾರವು,ಒಂದು ಕೈಯಲ್ಲಿಯ ಕೊಡಲಿ, ಇನ್ನುಳಿದ ಕೈಗಳಲ್ಲಿದ್ದ ಕಮಲ, ಅಂಕುಶ, ಮೋದಕ ಇವೆಲ್ಲವುಗಳಿಂದ ಪರಿಶೋಭಿತನಾಗಿದ್ದ ಗಜಾನನು ಕೌಶಲ್ಯಯುಕ್ತ ನಟನಾಟ್ಯ- ತಾಲಸ್ವರ ಗಳಿಂದಲೂ ವಾದ್ಯವೈಭವಗಳಿಂದಲೂ ಹುಂಕಾರದ ಮಂಜುಳ ದ್ವನಿ ಮಾಡುತ್ತ ಕುಣಿದಾಡಹತ್ತಿದನು

ಇಂಥ ಗಜಾನನ ಮೂರ್ತಿಯು ಚಾಪಲ್ಯದಲ್ಲಿ ಹೆಚ್ಚಿನವನು ಸುಂದರ ರೂಪನು, ಒಳ್ಳೇ ಲಾಕ್ಷಣಿಕನು, ಲಾವಣ್ಯದಲ್ಲಿ ಮಿಗಿಲಾದವನು ಅವನ ಅವನ ನಟನೆಯಿಂದ ನೇವುರಗಳ ಝಣಝಣ ಧ್ವನಿಯು ರಮ್ಯವೆನಿಸು ವದು ಗೆಜ್ಜೆ ಕಡಗಗಳಿಂದ ಅವನ ಪಾದಗಳು ಒಳ್ಳೇ ಮನೋಹರವಾಗಿ ತೋರುವವು ಇಂಥ ಸೌಂದರ್ಯಯುತನಾದ ಆತನು ಈಶ್ವರನ ಸಭೆಗೆ ಬರಲು ಅವನ ದಿವ್ಯ ವಸ್ತ್ರಗಳಿಂದ ಪ್ರಭೆಯು ಸುತ್ತೆಲ್ಲ ಇಡಿಗುವದು ಅಷ್ಟನಾಯಕರೆಲ್ಲರು ಆತನಿಂದ ಸಾಹಿತ್ಯವನ್ನು ದೊರಕಿಸುವರು

ಈ ಪ್ರಕಾರ ಸರ್ವಾಂಗಸುಂದರನೂ, ಸಕಲ ವಿದ್ಯಾನಿಧಿಯೂ ಆದ ಗಣನಾಯಕನಿಗೆ ನನ್ನ ಸಾಷ್ಟಾಂಗ ನಮಸ್ಕಾರವು ಧ್ಯಾನದಿಂದ ಗಣೇಶ ನನ್ನು ಕಾಣಲು ಭ್ರಾಂತಿ ದೂರಾಗಿ ಬುದ್ಧಿ ಪ್ರಕಾಶವಾಗುವದು ಅವನ ಗುಣಾನುವಾದ ಶ್ರವಣದಿಂದ ಸರಸ್ವತಿ ಮೆಚ್ಚುವಳು ಬ್ರಹ್ಮಾದಿಗಳಿಂದ ವಂದಿತಳಾದ ಸರಸ್ವತಿಯು ಗಣಪತಿಯನ್ನು ಹೊಗಳುವಳೆಂದ ಮೇಲೆ ಮಾನವರ ಪಾಡೇನು ? ಅದಿರಲಿ ಬುದ್ಧಿಮಾಂದ್ಯತೆ ನೀಗುವದಕ್ಕೆ ಗಣೇಶ ನನ್ನು ಸ್ಮರಿಸಬೇಕು ಮೂರ್ಖನು, ಲಕ್ಷಣರಹಿತನು, ಅತಿ ಹೀನನು ಇವ ರೆಲ್ಲರು ಗಣೇಶನ ಸ್ಮರಣೆಯಿಂದ ಎಲ್ಲ ವಿಷಯಗಳಲ್ಲಿ ದಕ್ಷರೂ, ಪಂಡಿತರೂ, ಆಗುವರು

ಗಜಾನನನು ಪರಮ ಸಮರ್ಥನು ಹಾಗು ಎಲ್ಲರ ಮನೋರಥ ಪೂರೈ ಸುವನು ಕಲಿಯುಗದಲ್ಲಿ ಸರಸ್ವತೀ ಗಣೇಶರನ್ನು ಭಜಿಸುವದು ಅತ್ಯಂತ ಹಿತಪ್ರದವೆಂಬುದು ಅನುಭವಸಿದ್ಧವು

ಇಂಥ ಮಂಗಳಮೂರ್ತಿ ಗಣೇಶನನ್ನು ನಾನು ಪರಮಾರ್ಥದಾಶೆ ಯಿಂದ ನನಗೆ ತಿಳಿದಮಟ್ಟಿಗೆ ಸ್ತುತಿಸುವೆನು

ಶ್ರೀರಾಮ।೩ ಶಾರದಾಸ್ತವನ। ಇನ್ನು ವೇದಮಾತೆಯಾದ ಸರಸ್ವತಿಯನ್ನು

ವಂದಿಸುವೆನು ಆ ಶಾರದಾದೇವಿಯು ಬ್ರಹ್ಮನ ಮಗಳು ಆ ವಾಗ್ದೇವಿ ಶಬ್ದಕ್ಕೆ ಆದಿಯು ಆಕೆಯೇ ಮಹಾಮಾಯ ಆಕೆಯಿಂದಲೇ ಶಬ್ದಗಳು ಪತೆಯೇ ಮೊಳೆಯುವವು ಅಪಾರ ವೇದಗಳೆಲ್ಲ ಆಕೆಯ ಮುಖದಿಂದ ಬಂದವು ಶಬ್ದಗಳಲ್ಲಿರುವ ಅಭ್ಯಂತರವನ್ನು ಎತ್ತಿ ತೋರಿಸಿದವಳು ಆ ಶಾರದಾ ದೇವಿಯು ಯೋಗಿಗಳಿಗೆ ಸಮಾಧಿಯೂ, ಧೀರರಿಗೆ ಕೃತಬುದ್ಧಿಯೂ ಆಗಿ ಉಪಾಧಿಯಾದ ಅವಿದ್ಯೆಯನ್ನು ಹರಿದೊಗೆಯುವಳು ಆಕೆ ಮಹಾಪುರುಷ ಬ್ರಹ್ಮನ ರಾಣಿಯಾಗಿರುವಳು ಸಾಧುಗಳ ತೂರ್ಯಾವಸ್ಥೆಗೆ ಹೊಂದಿಕೊಳ್ಳುವ ಮಹಾತ್ಮಾರ್ಯವನ್ನು ಅವಳಿಂದಲೇ ಸಾಧಿಸಿಕೊಳ್ಳುವರು ಆ ಸರಸ್ವತಿಯು ಜ್ಞಾನಿಗಳಿಗೆ ಶಾಂತಿದಾಯಿಕೆ ಈಶ್ವರನ ಮಾಯಾಶಕ್ತಿಯೆಂದರೆ ಆಕೆಯೇ ಆಶಯನ್ನು ತೊರೆದ ಜ್ಞಾನಿಗಳಲ್ಲಿಯ ವಿರಕ್ತಿಯು ತಾನಾಗಿ ಆಕೆ ಶೋಭಿಸುವಳು ಲೀಲೆಯಿಂದ ಅನಂತ ಬ್ರಹ್ಮಾಂಡಗಳನ್ನುಂಟು ಮಾಡಿ ವಿನೋದದಿಂದ ಅವನ್ನೆಲ್ಲ ಮರಿದ' ಹಾಕುವ ಮಹಾಪುರುಷನ ಸೀಮೆಯನ್ನು ಮೀರಿನಿಂತವಳೆಂದರೆ ಈಕೆಯೆ ಈಕೆ ಬ್ರಹ್ಮಾದಿಕರಿಗೂ ಕೂಡ ಪ್ರತ್ಯಕ್ಷ ನೋಡಲು ತೋರದಾಗುವಳು, ಅವರ ವಿಚಾರಕ್ಕೆ ನಿಲುಕದವಳು, ಇಂತು ಆಕೆಯ ಅಂತಪಾರವು ಅವರಿಗಾಗದು ಈಕೆ ಜಗದಾತ್ಮನ ಸರ್ವನಾಟಕಕ್ಕೆ ಜೀವಾಳವು ಬುದ್ಧಿವಂತರಲ್ಲಿ ನಿರ್ಮಲ ಸ್ಫೂರ್ತಿಯೂ ಹಾಗು ಸ್ವಾನಂದ ಪಡೆದವರ ಜ್ಞಾನಶಕ್ತಿಯೂ ಆಗಿರುವಳು

ಈಕೆಯ ಸುಂದರ ರೂಪು ಶೋಭಾಯಮಾನವು ಈಕೆ ಪರಬ್ರಹ್ಮನೆಂಬ ಸೂರ್ಯನ ಕಾಂತಿಯಂತಿರುವಳು ಶಬ್ದವನ್ನು ಉಚ್ಚರಿಸಿ ಸಂಸಾರ ನಾಶಗೊಳಿಸುವವಳು, ಮತ್ತು ಈ ಶಾರದೆ ಮೋಕ್ಷ ಲಕ್ಷ್ಮಿಯ ಪ್ರಾಪ್ತಿಗೆ ಕಲ್ಯಾಣಕಾರಿಯು ಈಕೆಯೇ ಬ್ರಹ್ಮರಂಧ್ರದಿಂದ ಅಮೃತ ರೂಪವಾಗಿ ಒಸರುವ ಹದಿನೇಳನೆಯ ಜೀವನಕಳೆಯು ಸತ್ವರೂಪಳೂ, ಶಾಂತಳೂ, ಲಾವಣ್ಯಸ್ವರೂಪಳೂ ಇವಳಾಗಿರುವಳು ಈಕೆ ಅವ್ಯಕ್ತ ಪರಬ್ರಹ್ಮನಲ್ಲಿ ವ್ಯಕ್ತಳಾಗಿ ತೋರುವವಳು ಇಚ್ಛಾ ಶಕ್ತಿಯನ್ನು ಹೆಚ್ಚಿಸುವವಳು ಕಲಿಕಾಲವನ್ನು ನಿಯಂತ್ರಣದಲ್ಲಿರಿಸಿಕೊಂಡು ಸದ್ಗುರುವಿನ ಕೃಪೆಗೆ ಪಾತ್ರರನ್ನಾಗಿ ಮಾಡುವವಳು ಪಾರಮಾರ್ಥಿಕರಲ್ಲಿ ಸಾರಾಸಾರ ವಿಚಾರವನ್ನು

ಉದ್ಯೋತಿಸುವವಳು ಕೇವಲ ಶಬ್ದ ಬಲದಿಂದ ಭವಸಾಗರವನ್ನು ದಾಟಿಸ ಸುವವಳು

ಇಂತು ಹಲವು ವೇಷಗಳಿಂದ ನಟನೆ ಮಾಡುವ ಈ ಮಾಯಾ ಶಾರ ದೆಯು ಒಬ್ಬಳೇ ಆದರೆ ಒಂದೇ ದೇಹದಲ್ಲಿ ನಾಲ್ಕು ಪ್ರಕಾರದ ವಾಣಿಗಳ ವಿಸ್ತಾರವನ್ನು ತೋರುವಳು

ಈ ಶಾರದಾ ದೇವಿಯು ತನ್ನ ಕರ್ತೃತ್ವ ಶಕ್ತಿಯಿಂದ ತಾನೇ ವಾಣಿ ಯಲ್ಲಿ ಸ್ಥಿತಳಾಗಿ ನಿಂತು ವೇದಗಳನ್ನು ಬೀರಿದಳು ಈಕೆ ಬ್ರಹ್ಮಾದಿಗಳಿಗೆ ಜನನಿಯಾಗಿ ಹರಿಹರರಿಂದ ಮೂರು ಲೋಕಗಳನ್ನೊಳಗೊಂಡ ಸೃಷ್ಟಿ ಯನ್ನು ರಚಿಸಿ ವಿಸ್ತೃತಗೊಳ್ಳುವಂತೆ ಮಾಡಿದಳು ಈಕೆ ಪರಮಾರ್ಥದ ಆದಿಯಾಗಿ ಸದ್ವಿದ್ಯೆಯಿಂದ ಭರಿತಳು, ಹಾಗು ನಿವಾಂತ ನಿರ್ಮಲ, ನಿಶ್ಚಲ ಸ್ವರೂಪ ಸ್ಥಿತಿಯವಳೂ ಆಗಿರುವಳು

ಈ ಶಾರದೆ ಯೋಗಿಗಳ ಧ್ಯಾನದಲ್ಲಿಯೂ ಸಾಧಕರ ವಿಚಾರದಲ್ಲಿಯೂ ಸಿದ್ಧರ ಅಂತಃಕರಣದಲ್ಲಿಯೂ ಅವ್ಯಕ್ತಳಾಗಿರುವಳು ನಿರ್ಗುಣದ ವ್ಯಕ್ತ ತೆಯೂ, ಅನುಭವದ ಪ್ರಚೀತಿಯೂ, ವ್ಯಾಪಕತ್ವದ ಪೂರ್ಣತೆಯೂ ಇವೆಲ್ಲ ಈಕೆಯಿಂದಲೇ ಒದಗುವವು ಶಾಸ್ತ್ರ, ಪುರಾಣ, ವೇದ-ಶ್ರುತಿ ಇವೆಲ್ಲವು ಶ್ರೀ ಶಾರದೆಯನ್ನು ಬಿಟ್ಟುಬಿಡದೆ ಹೊಗಳುವವು ಪ್ರಾಣಿ ಮಾತ್ರರು ಈಕೆ ಯಲ್ಲಿ ಹಲವು ರೂಪ ಕಲ್ಪಿಸಿ ಭಜಿಸುವರು ವೇದ ಶಾಸ್ತ್ರಗಳಿಗೆ ಮಹಿಮೆ ಯುಂಟಾದುದೂ ಉಪಮೆಯಿಲ್ಲದುದಕ್ಕೆ ಉಪಮೆಯೊದಗುವದೂ ಈಕೆ ಯಿಂದಲೇ ಈಕೆಯಿಂದಲೇ ಪರಮಾತ್ಮನ ಗೌರವ ಎಂದು ಹೇಳಬಹುದು ಈಕೆಯಿಂದಲೇ ಹಲವು ವಿದ್ಯೆಕಲೆಗಳು, ಸಿದ್ಧಿದೆಸೆಗಳು, ಧೃಡನಿಶ್ಚಯವು, ಸೂಕ್ಷ್ಮ(ಪರಮಾತ್ಮ) ವಸ್ತುವಿನ ಬೋಧೆಯು ಇವೆಲ್ಲಕ್ಕೂ ಈಕೆಯೇ, ಮತ್ತೂ ಈಕೆ ಹರಿಭಕ್ತರಲ್ಲಿಯ ನಿಜಭಕ್ತಿಗೂ ಯೋಗಿಗಳ ಅಂತಸ್ಥಿತಿಗೂ ಜೀವನ್ಮುಕ್ತರ ಸಾಯುಜ್ಯ ಮುಕ್ತಿಗೂ ಕಾರಣಗಳು. ಈಕೆಯು ಅಪಾರವಾದ ವೈಷ್ಣವೀಮಾಯೆಗಳೂ, ಅವುಗಳ ನಾಟಕವೂ ಮಹಾನ್ ಮಹಾ ಜನರು ಗಳಿಗೆ ತಿಳಿಯದಂತಹವು

ಇನ್ನು ಈ ಶಾರದೆಯ ರೂಪಗಳೆಷ್ಟೆಂದರೆ- ಕಣ್ಣಿನಿಂದ ಕಂಡ, ಶಬ್ದ ಗಳಿಂದ ಅರಿತ, ಮನಸಿನಿಂದ ವಿಚಾರಿಸಿದ ಇವೆಲ್ಲವೂ ಆಕೆಯ ರೂಪಗಳು.

ಸ್ತೋತ್ರ (ಹೊಗಳಿಕೆ), ಭಜನ (ಸ್ಮರಣೆ), ಭಕ್ತಿ (ನಿಷ್ಠೆ) ಇವು ಮಾಯೆಯ ಹೊರತು ಸಾಧ್ಯವಿಲ್ಲವೆಂಬ ಅಭಿಪ್ರಾಯವು ಅನುಭವದಿಂದ ತಿಳಿಯುವದು ಆದ್ದರಿಂದ ಮಹತ್ತವು ಹಾಗೂ ದೇವಾಧಿದೇವತೆಯಾದ ಶ್ರೀ ಶಾರದೆಗೆ ನನ್ನ ನಮಸ್ಕಾರವು

ಶ್ರೀರಾಮ।।ಸದ್ಗುರುಸ್ತವನ। ಇನ್ನು ಶ್ರೀ ಸದ್ಗುರುವನ್ನು ವರ್ಣಿಸುವೆನು ಮಾಯೆಯುಸ್ಪರ್ಶಿಸಲು ಅಶಕ್ಯವಾದ ಆ ಗುರುವಿನ ಸ್ವರೂಪವು ಜ್ಞಾನರಹಿತನಾದನನಗೆ ತಿಳಿಯುವದೆಂತು ? ಶ್ರುತಿಗಳೂ ಕೂಡ ಏನೊಂದನ್ನರಿಯದೆ 'ನೇತಿ''ನೇತಿ'ಎಂದು ಹೇಳುತ್ತಿರುವಾಗ ಮಂದಮತಿಯಾದ ನನ್ನ ಪಾಡೇನು? ಈವಿಚಾರ ನನಗೆ ತಿಳಿಯದು ಆದ್ದರಿಂದಲೇ ದೂರ ಸರಿದು ನಿಂತುಕೊಂಡೇ ನಾನು ನಮಸ್ಕರಿಸುವೆನು. ಇಂಥ ಗುರುವೇ! ನನ್ನನ್ನು ಉದ್ಧರಿಸು. ಸದ್ಗುರು ಸ್ವಾಮಿಯೆ! ನಿನ್ನನ್ನು ಸ್ತವನ ಮಾಡುವ ಪ್ರಬಲ ಆಶೆಯಿದ್ದಿತು ಅದು ಮಾಯೆಯ ನಿಶ್ಚಿತದಿಂದ ದೂರಾಯಿತು ಈಗ ಇದ್ದಂತೆಯೇ ಸ್ತವನ ಮಾಡುವೆನು ಮಾಯೆಯ ಬಲದಿಂದಲೇ ಸ್ತವನ ಮಾಡಲು ನನ್ನ ಮನಸು ಆತುರಗೊಂಡಿತ್ತು ಈಗ ಆ ಮಾಯೆಯೇ ಲಜ್ಜಾಯಮಾನಳಾದು ಪರಿಂದ ನಾನೇನು ಮಾಡಲಿ? ಮುಖ್ಯ ಪರಮಾತ್ಮನನ್ನು ಬಿಡಬಾರದೆಂದು ಪ್ರತಿಮೆಯನ್ನು ಕಲ್ಪಿಸುವರು ಆದರಂತೆ ನಾನೂ ಮಾಯೆಯ ಯೋಗದಿಂದ ಸದ್ಗುರುವನ್ನು ವರ್ಣಿಸುವೆನು ಭಾವಕ್ಕನುಸರಿಸಿ ದೇವಧ್ಯಾನವಿರಬೇಕು ಅದಕ್ಕನುಸರಿಸಿ ಈಗ ಸದ್ಗುರುವನ್ನು ಸ್ತುತಿಸುವೆನು ಸದ್ಗುರು ಶ್ರೀಪ್ಠನೇ! ನಿನಗೆ ಜಯಜಯಕಾರವು ವಿಂಶ್ವಭರನೆ! ವಿಶ್ವಬೀಜನೆ! ಪರಮ ಪುರುಷನೆ! ಮೋಕ್ಷಧ್ವಜನೆ! ದೀನಬಂಧುವೆ! ನಿನ್ನ ಶಾಂತ ಸ್ವರೂಪದಿಂದ ಸೂರ್ಯನಿಂದ ಕತ್ತಲೆ ಹರಿವಂತೆ ಮಾಯ ದೂರಾಯಿತು ಸೂರ್ಯನಿಂದ ಕತ್ತಲೆ ದೂರಾದರೂ ಅದು ಹಿಂದಿನಿಂದ ಬ್ರಹ್ಮಾಂಡವನ್ನು ವ್ಯಾಪಿಸುವದು ಬೆಳಕು ಕತ್ತಲೆಗಳು ತಪ್ಪುವದಿಲ್ಲ ಆದರೆ ಸದ್ಗುರುರವಿಯ ಮಾತು ಹಾಗಲ್ಲ ಆತನು ಜನನ ಮೃತ್ಯುಗಳನ್ನೂ ಅಜ್ಞಾನವನ್ನೂ ಸಮೂಲ ನಾಶಗೊಳಿಸುವನು ಬಂಗಾರದಿಂದ ಕಬ್ಬಿಣವೆಂದೂ ಆಗದು ಅದರಂತೆ ಗುರುವಿನ ಬಗೆಗೆ ಗುರುಸೇವಕರಲ್ಲಿ ಸಂದೇಹವಿರಕೂಡದು ನದೀ ಪ್ರವಾಹವು ಗಂಗೆಗೆ ಹೋಗಿ ಮಿಲನನಾಗಲು ಅದು ಗಂಗೆ

ಯಲ್ಲಿಯೇ ಲೀನವಾಗುವದು ಯಾವ ಬಗೆಯಿಂದಲೂ ಅದನ್ನು ಬೇರ್ಪಡಿಸಲು ಬರಲಾರದು ಆದರೆ ನದಿಯ ಪ್ರವಾಹವು ಗಂಗೆಗೆ ಕೂಡಿ ಗಂಗೆಯಾದರೂ ಅದರ ಮೂಲವು ನದಿಯಾಗಿಯೇ ಉಳಿಯುವದು ಶಿಷ್ಯನ ಬಗೆಗೆ ಹಾಗಲ್ಲ ಗುರುವಿನಿಂದ ಬೋಧಿತ ಶಿಷ್ಯನು ಮುಂದೆ ಗುರುವೇ ಆಗುವನು ಗುರುವನ್ನು ಪರಿಸಗಲ್ಲಿಗೆ ಹೋಲಿಸಲು ಈ ದೃಷ್ಟಿಯಿಂದ ಸರಿಯಾಗಲಾರದು ಏಕೆಂದರೆ ಪರಿಸಗಲ್ಲು ಬಂಗಾರವನ್ನು ತನ್ನಂತೆ ಮಾಡಿಕೊಳ್ಳಲಾರದು ಗುರುವು ಮಾತ್ರ ಶಿಷ್ಯನನ್ನು ತನ್ನಂತೆ ಮಾಡುವನು ಅಂದರೆ ಶಿಷ್ಯನಿಗೆ ಗುರುತ್ವವೇ ಪ್ರಾಪ್ತವಾಗುವದು ಇನ್ನು ಗುರುವನ್ನು ಸಾಗರಕ್ಕೆ ಹೋಲಿಸುವದೂ ಯೋಗ್ಯವಲ್ಲ ಯಾಕಂದರೆ ಸಮುದ್ರವುಕ್ಷಾರಯುಕ್ತವು ಒಂದು ವೇಳೆ ಕ್ಷೀರಸಾಗರಕ್ಕೆ ಹೋಲಿಸಬಹುದು ಇದೂ ಸರಿಗೂಡದು ಆ ಕ್ಷೀರ ಸಾಗರವು ಕಲ್ಪಾಂತದಲ್ಲಿ ನಾಶವಾಗುವದು ಇದರಂತೆ ಮೇರು ಪರ್ವತವು ತನ್ನಲ್ಲಿಯ ಜಡ ವಸ್ತುಗಳಿಂದ ಕೋಮಲ ಹೃದಯದ ಗುರುವಿಗೆ ಸರಿಯಾಗಲಾರದು ಇನ್ನು ಆಕಾಶದ ಉಪಮೆ ಕೊಟ್ಟರೆ ಆ ಆಕಾಶವು ನಿರ್ಗುಣವಾದುದರಿಂದ ಆ ಉಪಮೆಯೂ ಗುರುವಿಗೆ ಸಲ್ಲುವದಿಲ್ಲ ಧೀರತ್ವದಿಂದ ಜಗತ್ತಿಗೆ ಗುರುವನ್ನು ಹೋಲಿಸಿದ್ದಾದರೆ ಆ ವಸುಂಧರೆಯೂ ಕಲ್ಪಾಂತದಲ್ಲಿ ಲಯವಾಗುವದು ಸೂರ್ಯನಿಗೆ ಹೋಲಿಸಲು ಸೂರ್ಯ ಪ್ರಕಾಶವು ಶಾಸ್ತ್ರಗಳಲ್ಲಿ ಮರ್ಯಾದಿತವೆಂದು ಹೇಳಲ್ಪಡುವದು ಅಮರ್ಯಾದಿತ ಗುರುವಿನ ಪ್ರಭಾವ ಪ್ರಕಾಶವು ರವಿತೇಜಕ್ಕೆ ಮೀರಿದ್ದಾಗಿರುವದು ಇದರಂತೆ ಭೂಭಾರ ಹೊತ್ತ ಶೇಷರಾಜನೂ, ಕಾಲಾಂತರದಲ್ಲಿ ಬತ್ತಿಹೋಗುವ ಜಲವೂ, ಗುರುವಿಗೆ ಸರಿಯಾಗುವದಿಲ್ಲ ಅಮೃತೋಪಮ ಸದ್ಗುರುವೆಂದು ಬಗೆದರೆ ಅಮೃತವು ಸಾಯುವವನನ್ನು ಮಾತ್ರ ಅಮರನನ್ನಾಗಿ ಮಾಡುವದು ಆದರೆ ಸದ್ಗುರು ಬೋಧಾಮೃತವು ಗುರುಕೃಪೆಗೀಡಾದವರನ್ನೆಲ್ಲ ಅಮರರನ್ನಾಗಿ ಮಾಡುವದು

ಇನ್ನು ಶ್ರೀಗುರುವು ' ಕಲ್ಪವೃಕ್ಷ 'ವೆಂದು ಹೇಳುವದು ಮಾನವನ ಕಲ್ಪನೆಗೆ ನಿಲುಕದ ವಿಚಾರ ಸುರಲೋಕದಲ್ಲಿಯ ಆ ಕಲ್ಪವೃಕ್ಷವು ಆದಾರಿಗೆ ಸಾಧ್ಯ? ಸದ್ಗುರುವು ಮಾತ್ರ ಎಲ್ಲರಿಗೂ ಸುಲಭಸಾಧ್ಯನು ಈ ದೃಷ್ಟಿಯಿಂದ ಗುರುವು ಕಲ್ಪವೃಕ್ಷಕ್ಕಿಂತ ಮಿಗಿಲಾದವನು ಇಪ

ರಂತೆ ಚಿಂತಾಮಣಿ, ಕಾಮಧೇನುಗಳೂ ಗುರುವಿನ ಯೋಗ್ಯತೆಗೆ ಕೀಳಾದವು ಲಕ್ಷ್ಮೀವಂತ ಹಾಗು ಸದ್ಗುರು ಇವರಲ್ಲಿ ಸಾದೃಶ್ಯವನ್ನು ಕಲ್ಪಿಸಿದರೆ ಲಕ್ಷ್ಮಿಯು ನಾಶವಾಗುವಂಥವಳು ಗುರುದ್ವಾರದಲ್ಲಿ ಸದಾ ಮೋಕ್ಷಲಕ್ಷ್ಮಿಯ ಆವಾಸವಿದ್ದು ಆಕೆ ಅವಿನಾಶಳು ಸ್ವರ್ಗಲೋಕ ಸುಖವೂ ಇಂದ್ರನ ಸಂಪತ್ತೂ ಕಾಲಾಂತರದಲ್ಲಿ ವ್ಯತ್ಯಸ್ತವಾಗುವಂಥವು ಸದ್ಗುರು ಕೃಪೆಯು ಎಂದೂ ಚಲಿಸುವಂಥದಲ್ಲ ಹರಿಹರಬ್ರಹ್ಮಾದಿಗಳಿಗೆಲ್ಲರಿಗೂ ನಾಶವು ಬಿಟ್ಟಿದ್ದಲ್ಲ ಆದರೆ ಸತತವೂ ಅವಿನಾಶ ವಸ್ತುವೆಂದರೆ ಸದ್ಗುರು ಪದವು ಆದುದರಿಂದ ಗುರುವಿಗೆ ನಾಶವಾಗುವ ಪಂಚ ಭೂತಾತ್ಮಕ ಸೃಷ್ಟಿಯಿಂದಾಯ್ದು ಯಾವದರ ಉಪಮೆಯೂ ಯೋಗ್ಯವಾಗುವದಿಲ್ಲ ಅಂದಮೇಲೆ ' ಸದ್ಗುರುವು ಅನುಪಮೇಯನು ' ಎಂದಿಷ್ಟೇ ವರ್ಣಿಸುವದು ಯುಕ್ತವು. ನಿಜವಾಗಿ ಸದ್ಗುರುವಿನ ಅಂತ-ಸ್ಥಿತಿಯ ಮಹಿಮೆಯನ್ನು ಅಂತರ್ನಿಷ್ಠರೇ ಅರಿಯುವರು

ಶ್ರೀ ರಾಮ॥ |ಅಸಂತಸ್ತವನ| ಇನ್ನು ಪರಮಾರ್ಥಕ್ಕೆ ಆಧಾರವಾದ ಸಜ್ಜನರಿಗೆ ನಮಸ್ಕರಿಸುವೆನು ಜನರಿಗೆ ಗೌಪ್ಯವಾಗಿರುವ ನಿಜವಾದ ಜ್ಞಾನವು ಅವರಿಂದಲೇ ಪ್ರಕಾಶಿತವಾಗುವದು ಇವರ ಹೊರತು ಪರಮಾತ್ಮ ವಸ್ತು ದುರ್ಲಭವು ಅದು ಈ ಸಜ್ಜನರಿಂದಲೇ ಸುಲಭವು. ಆ ಪರಮಾತ್ಮ ವಸ್ತುವಿನ ಅಸ್ತಿತ್ವವು ಸ್ಥೂಲ ದೃಷ್ಟಿಗೆ ಅಗೋಚರವು ಅದರ ಪ್ರಾಪ್ತಿಗಾಗಿ ಹಲವು ಸಾಧನಗಳಿಂದ ಕಷ್ಟ ಪಟ್ಟರೂ ವ್ಯರ್ಥ ಆ ವಸ್ತು-ಪರೀಕ್ಷೆ ಸಾಧ್ಯವಿಲ್ಲ ಅದು ಅಗೋಚರವು ಆ ಪರಮಾತ್ಮವಸ್ತುವನ್ನು ಯಾವ ಪ್ರಕಾಶದಿಂದ ಶೋಧಿಸಿದರೂ ಅದು ಕಾಣುವದಿಲ್ಲ ಕಣ್ಣಿಗೆ ಅಂಜನವನ್ನಿಕ್ಕಿಕೊಂಡರೂ ತೋರುವದಿಲ್ಲ ಪೂರ್ಣಚಂದ್ರನೂ, ಚಂಡ ಪ್ರಕಾಶಸೂರ್ಯನೂ ಸಹ ಆ ವಸ್ತುವನ್ನು ತಮ್ಮ ಪ್ರಕಾಶ ಬೀರಿ ತೋರಿಸಲು ಅಸಮರ್ಥರು ಉಣ್ಣೆಯ ಎಳೆಗಳನ್ನೂ ಸೂಕ್ಷ್ಮ ಪದಾರ್ಥಗಳನ್ನೂ ಅಣು ಕಣಗಳನ್ನೂ ವಿಂಗಡಿತವಾಗುವಂತೆ ದೃಷ್ಟಿಗೆ ಬೀರುವ ರವಿಯು ಅಸ್ತಿತ್ವದಲ್ಲಿದ್ದ ಆ ನಿಜವಸ್ತುವನ್ನು ಕಾಣಲಿಲ್ಲವೆಂದಮೇಲೆ ಅದನ್ನಾರು ತೋರಿಸಬೇಕು? ಆದರೆ ಈ ದಾರ್ಶನಿಕ ಕಾರ್ಯವು ಸಂತಸಜ್ಜನರಿಂದ

ಸುಲಭವಾಗಿ ಕೈಗೂಡುವದು ಅವರು ಸಾಧಕರಿಗೆ ನಿರಾಯಾಸವಾಗಿ ಆ ನಿಜ ವಸ್ತುವನ್ನು ದೊರಕಿಸಿಕೊಡುವರು

ಆ ವಸ್ತುವಿನ ವಿಷಯದಲ್ಲಿ ತರ್ಕ, ಪ್ರಯತ್ನ, ಆಕ್ಷೇಪಗಳೆಲ್ಲ ಕುಂಠಿತವಾಗುವವು ಅಲ್ಲಿ ವಿವೇಕದ ಬಲವು ಸಾಗುವದಿಲ್ಲ ಶಬ್ದಗಳು ಉಚ್ಚರಿತವಾಗುವದಿಲ್ಲ ಮನಸು ಏನೊಂದನ್ನರಿಯದ ಹಾಗಾಗುತ್ತದೆ ಹಲವು ನಾಲಿಗೆಯ ಶೇಷನು ಆ ವಸ್ತುವನ್ನು ವರ್ಣಿಸಲು ಅಸಮರ್ಥ ನಾಗುವನು ಅಲ್ಲದೆ ಆ ವಸ್ತುವನ್ನೂ ಕೂಡಲಾರನು ಅಪ್ರಕಾಶಿತಗಳನ್ನೆಲ್ಲ ಪ್ರಕಾಶ ಪಡಿಸುವ ವೇದಗಳು ಆ ವಸ್ತುವನ್ನು ತೋರಿಸಲು ದುರ್ಬಲವು ಳ್ಳವಾಗುವವು ಆದರೆ ಅಂಥ ಆ ನಿಜವಸ್ತುವು ಸಜ್ಜನ ಸಂಗದಿಂದ ಸ್ವಾನುಭವಕ್ಕೆ ಗೋಚರವಾಗುವದು ಅಂದಮೇಲೆ ಆ ವಸ್ತುವಿನ ಮಹಿ ಮೆಯು ಹೆಚ್ಚಿನದೆಂದು ತಿಳಿಯುವದು ಅನಂತಲೀಲಾತ್ಮಕವಾದ ಮಾಯೆಯೂ ಕೂಡ ಆ ವಸ್ತುವಿನ ಪರಿಚಯ ಮಾಡಿಕೊಡಲಾರದು. ಯಾಕಂದರೆ ಆ ವಸ್ತುವು ಮೂಲತ ಮಾಯಾತೀತವಾದುದು ಇಂಥ ಮಾಯಾತೀತ ಪರಮಾತ್ಮನನ್ನು ಸಂತ ಸಜ್ಜನರುಗುರುತಿಸಿಕೊಡುವರು. ಅವರೇ ಮಾರ್ಗದರ್ಶಕರು ಇದರಿಂದ ಆ ವಸ್ತುವಿನ ಹಾಗು ಅದರ ದಾರ್ಶನಿಕ ಸಜ್ಜನರ ವರ್ಣನೆ ಮಾಡುವದು ಕಠಿಣ ವೆಂದು ತಿಳಿಯುವದು ಆದರೂ ಸಂತರ ಪರಿಚಯದ ಬಗೆಗೆ ಅವರ ಲಕ್ಷಣ ಹೇಳುವೆವು. ಆ ಸಂತ ಸಜ್ಜನರು ಆನಂದದ ಸ್ಥಾನ ವಾಗಿರುವರು ಸುಖಿಗಳಾಗಿರುವರು ಎಲ್ಲ ಪ್ರಕಾರದ ಸಂತೋಷಗಳಿಗೆ ಆ ಸಂತರೇ ಬೊಡ್ಡೆಯಾಗಿರುವರು

ಈ ಸಂತರು ವಿಶ್ರಾಂತಿ, ತೃಪ್ತಿ, ಭಕ್ತಿ ಇವೆಲ್ಲಕ್ಕೂ ಆಧಾರ ಭೂತರಾಗಿರುವರು ಅವರು ಧರ್ಮ ವಿವರ್ಧನೆಯ ಧರ್ಮಕ್ಷೇತ್ರರಾಗಿ ರುವರು ಆತ್ಮಸ್ವರೂಪದ ಪರಿಚಯವು ಆ ಸಂತರಿಂದಲೇ ಆಗುವದು ಪವಿತ್ರ ಪುಣ್ಯ ಭೂಮಿಯೆಂದರೆ ಈ ಸಂತ ಸಜ್ಜನರೇ ಅವರೇ ಶಾಂತಿಯ ಉನ್ನತ ಮಂದಿರದಂತಿರುವರು ಅವರಲ್ಲಿಯೇ ವಿವೇಕವೆಂಬ ಬೊಕ್ಕಸ ವಿರುವದು- ಶ್ರೇಷ್ಠತಮ ಸಾಯುಜ್ಯ ಮುಕ್ತಿಯ ತವರ್ಮನೆಯೆಂದರೆ ಸಂತ ಸಜ್ಜನರೇ ನಿಜವಾಗಿ ಸತ್ಯದ ಮೂರ್ತಿಮಂತ ವ್ಯಕ್ತಿಗಳೆಂದರೆ

ಆ ಸಂತರು ಇವರಿಂದಲೇ ಜನ್ಮ ಸಾರ್ಥಕತೆಯು ಸಂತ ದರ್ಶನ ದಿಂದಲೇ ಆತ್ಮಶುದ್ಧಸಿದ್ಧಿ ಲಭಿಸುವದು ನಮ್ಮ ಲೌಕಿಕ ದೃಷ್ಟಿಗೆ ಆ ಸಂತ ಸಜ್ಜನರು ಸಾಮಾನ್ಯರಂತೆ ತೋರಿದರೂ ದೀನ ದರಿದ್ರರೋ ವಾದಿ ಕಂಡರೂ ಅವರು ಅಸಾಮಾನ್ಯರು ಹಾಗು ಸಂಪದಭಿವೃದ್ಧರು ಹೇಗೆಂದರೆ ಅವರು ಮೋಕ್ಷ ಲಕ್ಷ್ಮಿಯಿಂದೆ ಶೋಭಾಯಮಾನರಾಗಿ ರುವರು ಹಲವು ಜೀವ ದರಿದ್ರ ಕಂಗಾಲರನ್ನು ಸಿರಿವಂತರನ್ನಾಗಿಯೂ ರಾಜ್ಯವಂತರನ್ನಾಗಿಯೂ ಮಾರ್ಪಡುಗೊಳಿಸಿರುವರು ಜಗತ್ತಿನಲ್ಲಿ ಅದೆಷ್ಟೋ ಸಿರಿವಂತರೂ ಉದಾರಿಗಳೂ ಆಗಿ ಹೋದರು ಆಗುವರು ಆದರೆ ಅವರೆಲ್ಲ ನವರತ್ನಸಂಪತ್ತನ್ನೆಲ್ಲ ದಾನಮಾಡಿದ್ದರೆ ಆ ರತ್ನಗಳಿ ಗಿಂತಲೂ ಬೆಲೆಯುಳ್ಳ ವಿಚಾರ ರತ್ನವನ್ನು ಸಂತಸಜ್ಜನರು ನೀಡುವರು ಅದೆಷ್ಟೋ ಮಹಾರಾಜರು, ಸಾರ್ವಭೌಮರು, ಆಗಿಹೋದರು ಆಗುವರು ಅವರಾರಿಗೂ ಸಾಯುಜ್ಯಪದವನ್ನು ಕೊಡುವ ಸಾಮರ್ಥ್ಯವಿಲ್ಲ ಮೂರೂ ಲೋಕದಲ್ಲಿ ಇಲ್ಲದ ದಾನ (ಮುಕ್ತಿದಾನ) ವನ್ನು ನೀಡುವ ಈ ಸಂತ ಸಜ್ಜ ನರನ್ನು ವರ್ಣಿಸುವದು ಅಸಾಧ್ಯವು

ಇಂತು ತ್ರೈಲೋಕ್ಯದ ಆಚೆಯು ಕಡೆಗಿದ್ದ, ಹಾಗೂ ವೇದ ಶ್ರುತಿ ಗಳಿಂದ ತಿಳಿಯಲು ಅಸಾಧ್ಯವಾದ ಪರಮಾತ್ಮನೆಂಬ ನಿಜವಸ್ತುವನ್ನು ಅಥವಾ ಮಹತ್ಸಂಪತ್ತನ್ನು ಹೃದಯದಲ್ಲಿರಿಸಿಕೊಂಡ ಸಂತ ಸಜ್ಜನರ ಮಹಿಮೆಯು ಘನವಾಗಿರುವದು ಅದನ್ನು ಅದೆಷ್ಟು ಉಪಮಾದಿಗ ಳಿಂದ ಅಲಂಕರಿಸಿ ವರ್ಣಿಸಿದರೂ ಕಡಿಮೆಯೇ ಸರಿ ಮುಖ್ಯವಾಗಿ ಪರ ಮಾತ್ಮನು ಸಂತ ಸಜ್ಜನರಿಂದಲೇ ಪ್ರಕಾಶಿತನಾಗುವನೆಂಬ ಮಾತು ತ್ರಿಕಾಲಾಬಾಧಿತವು

ಶ್ರೀ ರಾಮ||೬ಶ್ರೋತೃಸ್ತವನ|ಇನ್ನು ನಾನು ಶ್ರೋತೃವರ್ಗಕ್ಕೆ ವಂದಿಸು ವೆನು ಈ ಶ್ರೋತೃಮಂಡಲದಲ್ಲಿ ಹಲವು ಭಕ್ತರು, ಜ್ಞಾನಿಗಳು,ಸಂತ-ಸಜ್ಜ ನರು, ವಿರಕ್ತರು, ಯೋಗಿಗಳು, ಗುಣವಂತರು, ಸತ್ಯವಾದಿಗಳು ಇತ್ಯಾದಿ ಹಲವು ಶ್ರೋತ್ರಾಧಿಕಾರಿಗಳಿರುವರು ಇವರಲ್ಲಿ ಕೆಲವರು ಸತ್ವ-ಶಾಲಿ ಗಳು, ಕೆಲವರು ಬುದ್ಧಿಪ್ರಗಲ್ಭರು, ಕೆಲವರು ವಿರಾಗಿಗಳು, ಶಬ್ದ ಭಾಂಡಾರಿಗಳು,ಹಲವರ್ಥಗಳ ಅಮೃತ ಸೇವಿಸುವವರು,ಸಮಯಾನುಸಾರ

ವಕ್ತೃತ್ವ ಶೀರಿ ಸಂಶಯು ನಿರಸನ ಮಾಡುವವರು, ಸಿಶ್ಚಿತ ಮತಪ್ರದ ರ್ಶಕರು, ಏಕಗ್ರಾಹಿಗಳು, ಈಶ್ವರಾಂಶಭೂತರು, ಇವರಲ್ಲದೆ ಪ್ರತ್ಯಕ್ಷ ವಾಗಿ ಬಂದು ಮೇಳೈಗೂಡಿದವರು ಈ ಸಭಾಸ್ಥಾನದಲ್ಲಿ ಅಲಂಕೃತ ರಾದ ಇವರೆಲ್ಲರು ಶಾಂತರೂ ಸತ್ವಶಾಲಿಗಳೂ ಆಗಿದ್ದ ಋಷೀಶ್ವರರಂತೆ ಶೋಭಿಸುತ್ತಲಿರುವರು ವೇದಗಳೇ ಹೃದಯಾಲಂಕೃತವಾಗಿದ್ದ, ಸರಸ್ವ ತಿಯೇ ವಾಣಿಯಲ್ಲಿ ಒಪ್ಪುತ್ತಿದ್ದ ಸಾಹಿತ್ಯವನ್ನು ಬೋಧಿಸುವ ದೇವ ಗುರು ಬೃಹಸ್ಪತ್ಯಾಚಾರ್ಯರಂತೆಯೂ, ಪಾವಿತ್ರ್ಯದಲ್ಲಿ ಅಗ್ನಿಯಂತೆಯೂ, ಪ್ರತಿಭೆಯಲ್ಲಿ ರವಿಕಿರಣಗಳಂತೆಯೂ, ಜ್ಞಾನದಲ್ಲಿ ವಿಶಾಲ ಬ್ರಹ್ಮಾಂಡ ದಂತೆಯೂ, ಈ ಸಭಾಲಂಕೃತ ಶ್ರೋತೃಗಳೆಲ್ಲ ಪರಿಶೋಭಿಸುತ್ತಿರು ವರು ಇವರೆಲ್ಲರಲ್ಲಿ ಪೂರ್ಣಾವಧಾನವೂ ತ್ರಿಕಾಲಜ್ಞಾನವೂ ಸತತವೂ ಇದ್ದ ನಿರಭಿಮಾನತೆಯೂ, ಆತ್ಮನ ಬಗೆಗಿರುವ ನಿಜವಾದ ಜ್ಞಾನವೂ- ಮೂರ್ತಿಮತ್ತಾಗಿರುವದರಿಂದ ಇವರಿಗೆ ಕಾಣದ ಕೇಳದ ಸಂಗತಿ ಗಳಿಲ್ಲ ಹಾಗು ವಸ್ತುಗಳಿಲ್ಲ ನಾನು ಹೇಳುವದೆಲ್ಲವೂ ಈ ಶ್ರೋತೃಗ ಳಿಗೆ ಮೊದಲಿಗೇ ತಿಳಿದಿರುವದು, ಅಂದ ಮೇಲೆ ನನ್ನ ಜಾಣತನವನ್ನು ತೋರಿಸುವ ಕುರಿತು ಇಲ್ಲಿ ಆದೆಂತು ಅನುವಾದ ಮಾಡಲಿ! ಆದರೂ ಇವರೆಲ್ಲರೂ ಗುಣಗ್ರಾಹಿಗಳೆಂದೇ ದೃಢವಾಗಿ ನಂಬಿ ಏನೊಂದು ಸಂದೇಹ ಗೊಳ್ಳದೆ ಹೇಳುವೆನು (ಮಾತಾಡುವೆನು) ಭಾಗ್ಯ ಪುರುಷರು (ದೊಡ್ಡವರು) ಒಂದನ್ನೇ ಸಂಗ್ರಹಿಸದೆ ಹಲವನ್ನು ಸೇವಿಸುವರು ಯಾವಾಗಲೂ ಪಂಚಪಕ್ವಾನ್ನವನ್ನು ಭುಂಜಿಸುವವರಿಗೆ ರುಚಿ ಬದಲಾಯಿಸುವದಕ್ಕೆ ಸಾಮಾನ್ಯವಾದ ಊಟವು ಅವಶ್ಯವಾಗುತ್ತದೆ ಅದರಂತೆ ನನ್ನ ನುಡಿ ಗಳು ಸಂಸ್ಕೃತಜ್ಞರಾದ ಶ್ರೋತೃಗಳೆಲ್ಲರ ಮನ್ನಣೆ ಪಡೆಯುವದೆಂಬ ನಂಬುಗೆ ನನಗಿದೆ ತಮ್ಮ ಯೋಗ್ಯತೆಗನುಸರಿಸಿ ಪರಮೇಶ್ವರನನ್ನು ಅರ್ಚಿಸಬೇಕೆಂಬುದು ಪ್ರಸಿದ್ಧವಾದದ್ದು ಆದರೆ ಪೂಜೆಯನ್ನೇ ಮಾಡ ಬಾರದೆಂಬ ವಿಚಾರವು ಆದೆಲ್ಲಿಯೂ ಇರುವದಿಲ್ಲ ಅದರಂತೆ ಮಾತುಗ ಳಿಂದ ದುರ್ಬಲನಾದ ನಾನು ಶ್ರೋತೃಗಳೆಂಬ ಪರಮೇಶ್ವರರನ್ನು ನನ್ನ ಪ್ರಾಕೃತವಚನ ಸಾಹಿತ್ಯಗಳಿಂದ ಸಂತೋಷಗೊಳಿಸುವೆನು ನನ್ನಲ್ಲಿ ಶಬ್ದ ಅರ್ಥಗಳ ವ್ಯುತ್ಪತ್ತಿ, ಲಕ್ಷಣ, ಜಾಣತನ, ವಿಷಯವಿವರಣೆ, ಭಕ್ತಿ—

ಜ್ಞಾನ-ವೈರಾಗ್ಯಗಳು, ಮಾಜ್ಮಾರ್ಧುರ್ಯ ಇವಾವವೂ-ಇರುವದಿಲ್ಲ ಇಂತು ನನ್ನ ಮಾತಿನ ವಿಲಾಸವುಂಟು ಆದರೂ ನಾನು ನನಗೆ ತಿಳಿದ ಮಟ್ಟಿಗೆ ಸಾವಕಾಶವಾಗಿ ಮಾತಾಡುವೆನು ಜಗದೀಶನು ಭಾವರಸವನ್ನು ಗ್ರಹಿಸುವನು ಎಂಬ ಭಾವನೆಯೇ ಈ ಶ್ರೋತೃಗಳಲ್ಲಿ ನನ್ನದಿರುವದು

ಶ್ರೋತೃಗಳೇ! ನೀವೆಲ್ಲರು ಜಗದೀಶ ಸ್ವರೂಪರೆಂದೇ ನನ್ನ ನಿಶ್ಚಿತ ಭಾವನೆಯಿದೆ- ಅಂದಮೇಲೆ ನಿಮ್ಮೆದುರಿಗೆ ನನ್ನಲ್ಲಿಯು ವ್ಯುತ್ಪತ್ತಿ ಜ್ಞಾನವು ಹೀನವೇ ಆಗಿರುವದು ಬುದ್ಧಿಹೀನನೂ ಅಲ್ಪವಿಚಾರಿಯೂ ಆದ ನಾನು ನಿಮ್ಮೊಡನೆ ಕೇವಲ ಸಲಿಗೆಯಿಂದ ವರ್ತಿಸುವೆನು ಸಮರ್ಥರ ಮಗನು ಜಗತ್ತಿನಲ್ಲಿ ಮೂರ್ಖನೆನಿಸಿದ್ದರೂ ತಂದೆಯ ಯೋಗ್ಯತೆಯಿಂದ ಅವನಲ್ಲಿ ಸಾಮರ್ಥ್ಯವನ್ನೆಣಿಸುವರು ಅದರಂತೆ ಭಾವಿಸಿ ನಾನು ಸಂತರಾದ ನಿಮ್ಮೊಡನೆ ಸಲಿಗೆ ಬಳಿಸುವೆನು ಹುಲಿ-ಸಿಂಹಗಳು ಸ್ವರೂಪ-ಕ್ರಿಯೆಗಳಿಂದ ಭಯಂಕರವಾದುದರಿಂದ ಜನರು ಅವಕ್ಕೆ ಬೆದರುವರು- ಆದರೆ ಅವುಗಳ ಕುನ್ನಿ-ಮರಿಗಳು ಸಣ್ಣವಾಗಿದ್ದರೂ ಅವು ನಿರ್ಭಯದಿಂದ ತಮ್ಮ ತಾಯಿಗಳೊಡನೆ ಚಿನ್ನಾಟ--ಚೆಲ್ಲಾಟವಾಡುವವು ಅದರಂತೆ ನಾನು ಸಂತರಾದ ನಿಮ್ಮಲ್ಲಿ ಮಾತೃಭಾವನೆ ತಂದುಕೊಂಡು ನಿಮ್ಮೊಡನೆ ಮಾತಾಡುವೆನು ನಿಮ್ಮ ಚಿತ್ತವು ನನ್ನ ಬಗೆಗೆ ಚಿಂತೆಯನ್ನು ವಹಿಸುವದೆಂದು ನನ್ನ ತಿಳಿವಳಿಕೆ ನನ್ನ ನಿರರ್ಥಕ ಮಾತುಗಳನ್ನು ನೀವು ಸ್ವೀಕರಿಸಬೇಕಾಗುವದು ಆದರೆ ಆ ಬಗೆಗೆ ನಾನೇನೂ ಹೇಳಲಾರೆ ನೀವು ಮಾತ್ರ ನನ್ನ ಮಾತುಗಳಲ್ಲಿಯ ಕುಂದು ಕೊರತೆಗಳನ್ನು ನೀಗುವದಾಗಬೇಕು ಇದು ಪ್ರೀತಿಯ ಲಕ್ಷಣವು ನನ್ನ ಬೇಡಿಕೆಯಿರದಿದ್ದರೂ ನೀವು ಹಾಗೆ ಮಾಡುವಿರಿ ಸಂತ ಸಜ್ಜನರಾದ ನೀವು ಇಡೀ ವಿಶ್ವಕ್ಕೇ ತಾಯ್ತಂದೆಗಳಾಗಿರುವಿರಿ ನನ್ನ ಹೃದಯದ ಆಶೆಗಳನ್ನು ಅರಿತುಕೊಂಡು ನಿಮಗೆ ಯುಕ್ತ ತೋರಿದುದನ್ನು ಮಾಡಬೇಕು

ಸಂತ ದಾಸಾನುದಾಸ ನಾನು ಇನ್ನು ಮುಂದಿನ ಕಥೆ ಹೇಳುವದನ್ನು ಶ್ರೋತೃಗಳು ಅವಧರಿಸುವದು

ಶ್ರೀರಾಮ! |ಕವೀಶ್ವರಸ್ತವನ| ಇನ್ನು ಕವೀಶ್ವರರನ್ನು ಸಮಸ್ಕರಿಸುವೆನು ಕವಿಯುಶಬ್ದವೆಂಬ ಒಡೆಯನು ಅಥವಾ ವೇದಗಳನ್ನು ಉದ್ಭೂತಮಾಡಿದ

ಸೃಷ್ಟಿಯು ಪರಮೇಶ್ವರನು ಮತ್ತು ಆ ಕವಿಯು ಸರಸ್ವತೀ ದೇವಿಯು ಸ್ವಸ್ಥಾನವೂ ಸಕಲ ಕಲೆಗಳಿಗೆ ಜೀವನವೂ ಶಬ್ದಗಳ ಆಗರವೂ ಆಗಿರುವ ನೆಂಬುದು ಯೋಗ್ಯವು ಚತುರ್ವಿಧ ಪುರುಷಾರ್ಥಗಳ ಸಂಪತ್ತೂ ಜಗದೀಶ್ವರನ ಮಹತ್ವವೂ ಮತ್ತು ನಾನಾ ಬಗೆಯ ಚಾತುರ್ಯಗಳೂ ದೊಡ್ಡವರ ಕೀರ್ತಿಯ ಬೆಳಗೆಗಾಗಿ ಈ ಕವಿಗಳ ನಿರ್ಮಾಣವು ಶಾಬ್ದಿಕರಿಗೆ ಶಬ್ದ ರತ್ನೋದಧಿಯಾಗಿಯೂ ಮುಕ್ತರಿಗೂ ಮುಕ್ತಿನ ಸರೋವರವಾಗಿಯೂ ಅಥವಾ ಹಲವು ಬುದ್ಧಿಗಳಿಗೆ ಕಣಿಯಾಗಿಯೂ ಇವರು ಶೋಭಿಸುವರು. ಕವಿಗಳೆಂದರೆ ಅಧ್ಯಾತ್ಮ ಗ್ರಂಥಗಳ ಕಣಿಯು ಅಥವಾ ಮಾತಾಡುವ ಚಿಂತಾ ರತ್ನವು ಅವರ ಶಬ್ದಗಳೆಂದರೆ ಕಾಮಧೇನುವಿನ ಅಮೃತ ಧಾರೆಗಳು ಇವರು ಕಲ್ಪನಾಸ್ವರೂಪದ ಕಲ್ಪತರು, ಮೋಕ್ಷದ ಸಿರಿಯು, ಅಥವಾ ವಿಶಾಲತೆಯುಳ್ಳ ಸಾಯುಜ್ಯವು ಆಗಿರುವರು ಇವರಲ್ಲಿ ಪರಲೋಕದ ಬಗೆಗೆ ಆತ್ಮಹಿತಸಾಧಿಸಿಕೊಳ್ಳುವ ಬುದ್ಧಿಯಿದ್ದುದರಿಂದ ಯೋಗೀಜನರ ಗುಪ್ತಪಂಥದ ಅನುಯಾಯಿಗಳಾಗಿರುವರು ಹಲವು ಜ್ಞಾನಿಗಳಲ್ಲಿಯ ಪರಮಾರ್ಥವು ಒಟ್ಟಾಗಿ ಕವಿಯ ಸ್ವರೂಪವುಂಟಾಗಿರುವದು ಈ ಕವಿಗಳು ಮೋಕ್ಷೇಚ್ಛುಗಳ ಜ್ಞಾನ ದೃಷ್ಟಿಯನ್ನು ತೆರೆಯಿಸುವ ಅಂಜನದಂತಾಗಿ ಸಾಧಕರಿಗೆ ಸಾಧನಮಾರ್ಗ ತೋರಿಸುವರು ಮತ್ತು ಇವರು ವಿಲಕ್ಷಣಮಾಯೆಯ ಲಾಕ್ಷಣಿಕರಾಗಿರುವರು. ಈ ಕವಿಗಳು ತಮ್ಮ ಕವಿತ್ವೆಯಿಂದ ಶ್ರುತಿಯ ಗರ್ಭಿತಾರ್ಥವನ್ನು ಲಭಿಸಿಕೊಡುವ ಪರಮೇಶ್ವರನಂತಿರುವರು ಕವಿಸ್ವರೂಪದಿಂದ ನಿಜಾತ್ಮ ಬೋಧೆಯನ್ನು ಸುಲಭವಾಗಿ ತಿಳಿಸುವರು. ಇವರು ಮೋಕ್ಷೇಚ್ಛುಗಳ ಜ್ಞಾನದೃಷ್ಟಿಯನ್ನು ತೆರೆಯಿಸುವ ಅಂಜನವೂ, ಸಾಧಕರ ಸಾಧನವೂ, ಸಿದ್ಧರ ನಿಶ್ಚಿತವಾದ ಶಾಂತಿಯೂ ಆಗಿರುವರು ಸ್ವಧರ್ಮದ ಆಶ್ರಯ ವೆಂದರೆ ಕವಿಗಳು ಆತ್ಮಸಂಯಮನದ ಮಾರ್ಗ ತೋರಿಸುವವರೆಂದರೆ ಕವಿಗಳು ಧಾರ್ಮಿಕರಲ್ಲಿ ನಮ್ರತೆಯನ್ನೂರುವವರೆಂದರೆ 'ಕವಿಗಳು ವೈರಾಗ್ಯದ ಸಂರಕ್ಷಕರೂ, ಭಕ್ತರ ಅಲಂಕಾರಿಕರೂ, ಸ್ವಧರ್ಮ ರಕ್ಷಕರೂ ಈ ಕವಿಗಳೇ- ಪ್ರೇಮಪೂರಿತರಲ್ಲಿ ಪ್ರೇಮ ವೃತ್ತಿಯನ್ನೂ ಧ್ಯಾನಸ್ಥರಲ್ಲಿ ಧ್ಯಾನ್ಯಮೂರ್ತಿಯನ್ನೂ ಉಪಾಸಕರಲ್ಲಿ ಹೆಚ್ಚಿನ ಕೀರ್ತಿ

ಯನ್ನೂ ವಿಶಾಲವಾಗಿ ತಂದುಕೊಡುವ ಯೋಗ್ಯತೆಯು ಕವಿಗಳಲ್ಲಿರುವದು ಅಲ್ಲದ ಇವರು ಹಲವು ಸಾಧನಗಳಿಗೆ ಮೂಲರಾಗಿಯೂ ಹಲವು ಪ್ರಯತ್ನ ಕರ್ತರಿಗೆ ದೊರಕುವ ಫಲವಾಗಿಯೂ, ಆಗಿರುವರಲ್ಲದೆ ಇವರ ಮಹತ್ತತೆಯಿಂದಲೇ ಕಾರ್ಯಸಿದ್ಧಿಗಳಾಗುವವು ಕವಿಗಳ ವಾಙ್ಮಾಧುರ್ಯವೇ ಶ್ರೋತೃಗಳ ಕರ್ಣರಸಾಯನವು ಕವಿಗಳ ಪ್ರತಿಭೆಯಿಂದ ಕವಿತ್ವಕ್ಕೆ ಜಾಗ್ರತ ಸಾಮರ್ಥ್ಯವು ಕವಿಗಳು ಪಂಡಿತರಲ್ಲಿ ಯೋಗ್ಯತೆಯನ್ನೂ ಸಮರ್ಥರಲ್ಲಿ ಗೌರವವನ್ನೂ, ವಿಮರ್ಶಕರಲ್ಲಿ ಕೌಶಲ್ಯವನ್ನೂ ಹಲವುಬಗೆಯಿಂದ ಉಂಟುಮಾಡುವರು

ಕವಿಗಳು ಜಗತ್ತಿಗೆ ತಮ್ಮ ಕವಿತ್ವದ ಹಲವು ವಿಧಗಳನ್ನು ಅಂದರೆ ಪ್ರಬಂಧ, ಗದ್ಯಪದ್ಯಗಳ ಭೇದಾಭೇದ, ಪದವ್ಯಾಸ, ಛಂದಸ್ಸು ಮುಂತಾದವುಗಳನ್ನು ಶಿಕ್ಷಿಸುವರು ಇದರಿಂದಲೇ ಕವಿಗಳು ಸೃಷ್ಟಿಗೆ ಅಲಂಕಾರದಂತೆ ಭೂಷಿತರಾಗಿರುವರು ಲಕ್ಷ್ಮಿಯ ಸೊಬಗಿನ ಶೃಂಗಾರವೆಂದರೆ ಕವಿಗಳು ಇವರೇ ಸರ್ವಸಿದ್ಧಿಗಳಿಗೆ ನಿರ್ಧಾರರು ಕವಿಗಳು ಸಭೆಗೆ ಭೂಷಣಪ್ರಾಯರು ವಾಙ್ಮಯವೆಂಬ ಐಶ್ವರ್ಯಕ್ಕೆ ಇವರಿಂದಲೇ ಶೋಭೆಯು ಕಾವ್ಯವಾಚನದಿಂದುಂಟಾಗುವ ಸುಖಕ್ಕೆ ಸಂರಕ್ಷಕರೆಂದರೆ ಕವಿಗಳು ದೇವನ ಸಾಕ್ಷಾತ್ಕಾರ ವೃತ್ತಿಯ ಹೊಗಳಿಕೆಯೂ ಋಷಿಗಳ ಮಹತ್ತತೆಯ ವರ್ಣನೆಯೂ ಶಾಸ್ತ್ರಗಳ ಸಾಮರ್ಥ್ಯ ವಿವೇಚನೆಯೂ ಕವಿಗಳಿಂದಲೇ ಒಳ್ಳಿತ್ತಾಗುವದು ಇಂತು ಕವಿಗಳ ಪ್ರಾದುರ್ಭಾವವಿರದಿದ್ದರೆ ಲೋಕಕಲ್ಯಾಣವೆಂತಾಗುವದು? ಸಾಧ್ಯವಿಲ್ಲ ಆದ್ದರಿಂದಲೇ ಕವಿಗಳು ಸಕಲ ಸೃಷ್ಟಿಗೆ ಆಧಾರವೆಂಬ ಮಾತು ನಿರ್ವಿವಾದವು ಹಲವು ವಿದ್ಯೆಗಳ ಸಂಗ್ರಹವು ಕವಿಗಳಿಲ್ಲದೆ ಉಂಟಾಗಲು ಸಾಧ್ಯವಿಲ್ಲ ಸರ್ವಜ್ಞತ್ವವು ಮಾನವನಲ್ಲಿ ಪ್ರಾಪ್ತವಾಗಬೇಕಾದರೆ ನಿಶ್ಚಯವಾಗಿಯೂ ಕವಿಯಿಂದಲೇ ಪೂರ್ವದಲ್ಲಿ ವ್ಯಾಸ-ವಾಲ್ಮೀಕಿ ಮೊದಲಾದ ಕವಿವರ್ಯರು ಅದೆಷ್ಟೋ ಜನರು ಆಗಿ ಹೋದರು ಅವರೆಲ್ಲರಿಂದ ಅವರ ಕಾವ್ಯರೂಪ ಶರೀರ—ವಾಣಿಯಿಂದ ಸಕಲ ಜನರಿಗೆ ವಿವೇಕಬೋಧೆಯಾಯಿತು, ಆಗಹತ್ತಿದೆ ಇನ್ನು ಮುಂದಾದರೂ ಆಗುವದು ಮೊದಲಿನವರು ಮಾಡಿದ ಕಾವ್ಯಗಳಿಂದ ಶ್ರೋತೃಗಳಿಗೆ ಚೆನ್ನಾದ ವ್ಯುತ್ಪತ್ತಿ ಪ್ರಾಪ್ತವಾಗಿ ಅವರೆಲ್ಲರು ವಿದ್ವಾಂಸರಾದರು ಹೆಚ್ಚಿನ ಯೋಗ್ಯತೆ ಹೊಂದಿದರು.

ಈ ಪ್ರಕಾರ ಪೂರ್ವದಲ್ಲಿ ಮಹಾನ್ ಮಹಾನ್ ಕವೀಶ್ವರರು ಅಸಂಖ್ಯಾತರಾಗಿ ಆಗಿಹೋದರು ಈಗಲೂ ಅಂಥವರಿರುವರು. ಮುಂದೆಯೂ ಆಗುವರು ಈ ಎಲ್ಲರಿಗೂ ನನ್ನ ವಂದನೆಗಳು ಕವಿಗಳು ಚಾತುರ್ಯದ ಮೂರ್ತಿಗಳು ಬಹಳೇಕೆ ? ಅವರು ಸಾಕ್ಷಾತ್ ದೇವಗುರು ಬ್ರಹಸ್ಪತಿಯೇ ಆಗಿರುವರು ವೇದಶ್ರುತಿಗಳು ಸಹ ಇವರ ಮುಖದಿಂದಲೇ ಪ್ರಕಟವಾಗಬೇಕೆನ್ನುವವು ಇವರು ಕೇವಲ ಪರೋಪಕಾರ ಬುದ್ಧಿಯಿಂದ ಅನೇಕ ಪ್ರಕಾರದ ನಿಶ್ಚಿತ ಹಾಗೂ ನಿಸ್ಸಂದಿಗ್ಧ ಸಿದ್ಧಾಂತಗಳನ್ನು ಪ್ರಕಟಿಸಿರುವರು ಅಮೃತಪರಿಪೂರ್ಣ ಮೋಡವು ಕವಿಗಳ ರೂಪದಿಂದ ಭೂಮಿಗೆ ಮಳೆ ಸುರಿಸಿತೋ ಅಥವಾ ನವರಸಗಳ ಪ್ರವಾಹಗಳು ಕವಿಗಳ ರೂಪದಿಂದ ಹರಿದು ಬಂದವೋ ಮತ್ತು ಸುಖವೆಂಬ ಸರೋವರವು ಕವಿಗಳೆಂಬ ಅಮೃತ ಜಲದಿಂದ ತುಂಬಿ ಕೋಡಿ ಒಡೆದಿದೆಯೋ ಅಥವಾ ವಿವೇಕ ಭಾಂಡಾರಗಳು ಕವಿಗಳೆಂಬ ಮಾನವ ರೂಪದಿಂದ ಪ್ರಕಟಿಸಿದವೋ ಎನ್ನುವಂತೆ ಈ ಕವಿಗಳು ಬ್ರಹ್ಮವಿಚಾರಭರಿತರಾಗಿ ಉಳಿದ ವಸ್ತುಗಳನ್ನು ಕಡೆಗಣಿಸುವ ಮಹಾಲಕ್ಷ್ಮಿಯ ಭಾಂಡಾರವನ್ನು ಪೂರ್ವಪುಣ್ಯದ ಬಲದಿಂದ ಜಗತ್ತಿನ ಹಿತಕ್ಕಾಗಿ ನೀಡಲು ಈ ಭೂಮಿಗೆ ಬಂದಂತಾಗಿದೆ, ಎಂದು ತೋರುವದು ಅಥವಾ ಈ ಕವಿಗಳೆಂದರೆ "ಆನಂದದಾಯಕ ವಸ್ತುಗಳಿಂದ ತುಂಬಿ ಹರಿಯುತ್ತಿರುವ ಸುಖದ ಪ್ರವಾಹಗಳು ಹಲವು ಪ್ರಕಾರಗಳಿಂದ ಜಗತ್ತಿನ ಉಪಯೋಗಕ್ಕಾಗಿ ಬಂದಿವೆ" ಎಂದೆನ್ನಬಹುದು ಇಲ್ಲವೆ ಪರಬ್ರಹ್ಮನ ಐಶ್ವರ್ಯವೂ, ವಿರಾಟಪುರುಷನ ಯೋಗಸ್ಥಿತಿಯೂ, ಭಕ್ತಿಯ ಫಲಶ್ರುತಿಯೂ ಇವೆಲ್ಲ ಕವಿಗಳ ಸ್ವರೂಪ ಹೊಂದಿ ಬಂದಿರುವವು, ಎಂದೂ ಹೇಳಬಹುದು

ಪರಮೇಶ್ವರನು ಗಗನಕ್ಕಿಂತಲೂ ವ್ಯಾಪಕವಾದ ಈ ಕವಿರೂಪವೆಂಬ ನಿಧಿಯನ್ನು ಜಗತ್ತಿಗೆ ಒದಗಿಸಿಕೊಟ್ಟು ತನ್ನ ಗೌರವತ್ವವನ್ನು ಪ್ರಕಟಗೊಳಿಸಿರುವನು ಕವೀಶ್ವರರ ಕಾವ್ಯರಚನೆಯು ಈಶ್ವರನ ಬ್ರಹ್ಮಾಂಡರಚನೆಗಿಂತಲೂ ಶ್ರೇಷ್ಠವಾದುದು ಆದುದರಿಂದ ಈ ಜಗತ್ತಿಗೆ ಆಧಾರಭೂತರಾದ ಕವಿಗಳಿಗೆ ನಾನು ಸಾಷ್ಟಾಂಗ ನಮಸ್ಕಾರ ಮಾಡುವೆನು

ಶ್ರೀರಾಮ॥೮ ಸಭಾಸ್ತವನ॥ ಇನ್ನು ನಾನು ಈ ಸಭೆಯನ್ನು ವಂದಿಸುವೆನು ಈಸಭೆಯಿಂದಲೇ ಮುಕ್ತಿಯು ಸುಲಭವಾಗಿ ದೊರೆಯುವದು. ಈಸಭೆಯಲ್ಲಿ ಜಗದೀಶನು ತಾನೆ ಸ್ವಯಂಪೂರ್ಣನಾಗಿ ನಿಂತು 'ನಾರದ! ನಾನು ವೈಕುಂಠದಲ್ಲಿ ಇರುವದಿಲ್ಲ ಯೋಗಿಗಳ ಹೃದಯದಲ್ಲಿಯೂ ರವಿಪ್ರಕಾಶ ದಲ್ಲಿಯೂ ಇರುವದಿಲ್ಲ ಕೇವಲ ನನ್ನ ಭಕ್ತರು ನನ್ನನ್ನು ಕೀರ್ತಿಸಿ ಗಾಯನ ಮಾಡುವಸ್ಥಳಗಳಲ್ಲೆಲ್ಲ ನಾನು ನಿಶ್ಚಯವಾಗಿ ವಾಸಮಾಡಿಕೊಂಡಿರುವೆನು"

ಹೀಗೆ ಜಗದೀಶನ ಉಕ್ತಿಯದೆ ಆದುದರಿಂದ ಈ ಸಭೆಯಲ್ಲಿಯ ಶ್ರೇಷ್ಠ ಭಕ್ತರು ಉಚ್ಚರಿಸುವ ನಾಮ-ಘೋಷಗಳಿಂದಲೂ ಜಯ ಜಯಕಾರ ಗರ್ಜನೆಯಿಂದಲೂ ಇದು ವೈಕುಂಠವೇ ಆಗಿರುವದು ಆದ್ದರಿಂದ ಇಲ್ಲಿಯೇ ಭಗವಂತನು ವಾಸವಾಗಿರುವನು. ಈ ಸಭೆಯಲ್ಲಿ ಭಗವದ್ಭಕ್ತರ ಗಾಯನಗಳೂ, ಭಗವಂತನ ಸಂಬಂಧದ ಹರಿಕೀರ್ತನೆಗಳೂ ವೇದವಿವರಣೆ, ಪುರಾಣಶ್ರವಣಗಳೂ ಸತತವೂ ನಡೆದಿವೆ. ಪರಮೇಶ್ವರನ ಗುಣಾನುವಾದಗಳೂ, ಹಲವು ವಿಷಯಗಳ ಬಗೆಗೆ ಸಂವಾದ ನಿರೂಪಣೆ ನಿಶ್ಚಯಗಳೂ ಆಧ್ಯಾತ್ಮಿಕ ವಿದ್ಯೆಯ ಭೇದಾಭೇದಗಳ ಬಗೆಗೆ ಚರ್ವಿತ ಚರ್ವಣಗಳೂ ಇಲ್ಲಿ ನಾಗಿವೆ ಇಲ್ಲಿ ಆಕ್ಷೇಪಕರ ಸಂಶಯಗಳು ದೂರಾಗಿ ಸಮಾಧಾನಸುಖವು ಲಭಿಸುವದು. ಭಕ್ತರ ವಾಗ್ವಿಲಾಸದಿಂದೆ ಅವರ ಚಿತ್ತದಲ್ಲಿ ಧ್ಯಾನಮೂರ್ತಿಯು ಸ್ಥಿರ ತಿಷ್ಠವಾಗುವದು ಈ ಸಭೆಯಿಂದ ಹಲವು ಗುಣಯುತ ಸಜ್ಜನರ ದರ್ಶನವೂ ಸಂಭಾಷಣಸುಖವೂ ದೊರಕು ವವು ಭಕ್ತರು, ಭಾವಿಕರು, ಸಾತ್ವಿಕರು, ಕುಶಾಗ್ರಬುದ್ಧಿಯ ನಿಷ್ಠಾ ವಂತರು, ಗಾಯಕರು, ಕರ್ಮನಿರತರು, ಆಚಾರವಂತರು, ದಾತೃಗಳು, ಪುಣ್ಯಾತ್ಮರು, ನಿರ್ಮಲಾಂತಕರಣಿಗಳು, ಯೋಗಿಗಳು, ವಿರಾಗಿಗಳು, ಸಂಸಾರದಿಂದ ಉದಾಸೀನ ವೃತ್ತಿ ತಳೆದವರು, ಮೋಕ್ಷಗುರಿಸಾಧಕರು, ಮಾಯಾನಿಗ್ರಹಿಗಳು, ತಾಪಸರು, ವಿರಕ್ತರು, ನಿಸ್ಪೃಹರು, ಬಹುತರ ವಾಗಿ ಅರಣ್ಯವಾಸಮಾಡುವವರು, ಸಂನ್ಯಾಸಿಗಳು, ನಾಥಸಾಂಪ್ರದಾಯಿ ಗಳು, ಬಾಲಬ್ರಹ್ಮಚಾರಿಗಳು, ಯೋಗೀಶ್ವರರು, ಮಂತ್ರಪುರಶ್ಚರಣ ಕರ್ತರು, ತಪಸ್ವಿಗಳು, ಆತ್ಮಸಂಯಮಿಗಳು, ತೀರ್ಥಾಟನ ಮಾಡುವವರು ಮಹಾಯೋಗಿಗಳು, ಜನಸಮುದಾಯವನ್ನನುಸರಿಸುವವರು, ಸಿದ್ಧರು,

ಸಾಧುಗಳು, ಸಾಧಕರು, ಮಾಂತ್ರಿಕರು, ಯಾಂತ್ರಿಕರು, ಬೋಧಕರು, ನೈಷ್ಠಿಕರು, ಉಪಾಸಕರು, ಗುಣಗ್ರಹಣಶಕ್ತಿಯುಳ್ಳವರು, ಸಂತಸಜ್ಜನರು ವಿದ್ವಾಂಸರು, ವೈದಿಕರು, ಶಾಸ್ತ್ರಿಗಳು, ಮಹಾಜನರು, ಪ್ರಬುದ್ಧರು, ಸರ್ವಜ್ಞರು, ನಿರ್ಮಲರು, ಶಾಂತರು, ಯೋಗಾಭ್ಯಾಸದಲ್ಲಿ ವ್ಯುತ್ಪನ್ನ ಮತಿಯುಳ್ಳ ಋಷೀಶ್ವರರು, ಧೋರಣೆಗಳು, ತರ್ಕಜ್ಞಾನಿಗಳು ಕವೀಶ್ವರರು, ಮನಸನ್ನು ಗದ್ದ ಮುನೀಶ್ವರರು, ದಿಗ್ವಸನಿಗಳು ಅಂದರೆ ದಿಗಂಬರರು, ಬ್ರಹ್ಮಜ್ಞಾನಿಗಳು, ಆತ್ಮಜ್ಞಾನಿಗಳು, ತತ್ವಜ್ಞಾನಿಗಳು, ಶಾರೀರಕ ಶಾಸ್ತ್ರಬಲ್ಲವರು, ಯೋಗದ ಅಭ್ಯಾಸದಲ್ಲಿ ನಿರತರು, ಯೋಗಗಳನ್ನೆಲ್ಲ ಬಲ್ಲವರು, ದೇಹಮಮತೆಯಿಲ್ಲದವರು, ಪಂಡಿತರು, ವಿದ್ವಾಂಸಕರಾದ ಪುರಾಣಿಕರು, ವೈದಿಕಮತಾನುಯಾಯಿಗಳು, ಭಟರು, ವೇದಪಾರಕರು, ಯಜುರ್ವೇದಿಗಳು, ಅತಿಬಲರು, ಮಹಾಶ್ರೋತ್ರಿಯರು, ಅಗ್ನಿಹೋತ್ರಿಗಳು, ಯಾಜ್ಞಿಕರು, ವೈದ್ಯರು, ಪರೋಪಕಾರನಿರತರು, ಪಂಚಾಕ್ಷರಿಗಳು, ತ್ರಿಕಾಲಜ್ಞಾನಿಗಳು, ಬಹುಶ್ರುತರು, ನಿರಭಿಮಾನಿಗಳು, ನಿರಾಪೇಕ್ಷಿಗಳು, ಶಾಂತರು, ದಯಾನ್ವಿತರು, ಶುದ್ಧಸತ್ವಶಾಲಿಗಳು, ಶುದ್ಧಜ್ಞಾನಾನ್ವಿತರು, ದೈವಿಕರು,

ಇಂತು ಇವರೆಲ್ಲರಿಂದ ಸುಶೋಭಿತವಾದ ಮಹಾಸಭೆಯ ಅಧ್ಯಕ್ಷನಲ್ಲಿಯ ನಿತ್ಯಾನಿತ್ಯವಿವೇಕವೂ ಅವನ ಅಲೌಕಿಕ ಮಹಿಮೆಯೂ ವರ್ಣಿಸುವದಕ್ಕೆ ಅಸಾಧ್ಯವು. ಶ್ರವಣಗಳೂ, ಪಾರಮಾರ್ಥಿಕ ವಿಚಾರಗಳೂ ಮಾನವನನ್ನು ಭವಸಾಗರದಿಂದ ಪಾರುಮಾಡುವ ಸುಲಭ ಉಪಾಯಗಳು ಇವು ಈ ಸಭೆಯಲ್ಲಿ ನಿತ್ಯವೂ ಸಾಗುತ್ತಲಿವೆ ಸದ್ಗುಣಿಗಳೂ ಶಾಂತರೂ, ಸತ್ವಶೀಲರೂ ಈ ಸಭೆಯಲ್ಲಿ ಕಂಡುಬರುವರು ನಿತ್ಯವೂ ಹೊಸ ಹೊಸ ಸ್ವಸುಖ ಭೋಗಿಸುವ ಅನುಕೂಲತೆಗಳು, ಈ ಸಭೆಯಲ್ಲಿವೆ ವಿದ್ಯಾ—ಕಲಾಕೌಶಲ್ಯ ನಿಪುಣರು, ಯೋಗ್ಯ ಹಾಗು ಸದ್ಗುಣಾನ್ವಿತರು, ಭಗವಂತನ ಪ್ರೀತಿಪಾತ್ರ ಭಗವದ್ಭಕ್ತರು, ಪ್ರವೃತ್ತಿ ಹಾಗು ನಿವೃತ್ತಿ ಮಾರ್ಗಾವಲಂಬಿಗಳು, ಪ್ರಾಪಂಚಿಕರು ಮತ್ತು ಪಾರಮಾರ್ಥಿಗಳು, ಚತುರ್ಥಾಶ್ರಮಿಗಳು ಮುದುಕರು, ಹರೆಯದವರು, ಬಾಲಕರು, ಗಂಡಸರು, ಹೆಂಗಸರು ಈ ಮೊದಲಾಗಿ ಸ್ಮರಿಸುವ ಅಂತರ್ಯಾಮಿ ಪರಮಾತ್ಮನನ್ನು ನಾನೂ ಅಖಂಡ ಧ್ಯಾನದಿಂದ ಸ್ಮರಿಸುವೆನು

ಇಂಥ ಭಗವದ್ಭಕ್ತ ಜನರುಗಳಿಗೆ ನನ್ನ ನಮಸ್ಕಾರವು, ಆದರಿಂದಲೇ ನನ್ನಲ್ಲಿ ಶಾಂತಿಯು, ಭಗವಂತನ ಕೀರ್ತನೆಗಳು ನಿತ್ಯ ನಿರಂತರ ನಡೆಯು ವಲ್ಲಿ, ಭಗವಂತನ ಮೂರ್ತಿಯಿರುವಲ್ಲಿ ಅಲ್ಲಿಯೇ ಸದ್ಗತಿಯುಲಭಿಸುವದೆಂದ ಹಲವು ಗ್ರಂಥಗಳು ಹೇಳುವವು ಹಾಗೂ ಮಹಂತರ ವಾಕ್ಯವಾದರೂ ಕಲಿಯುಗದಲ್ಲಿ ಭಗವತ್ಕೀರ್ತನೆಯು ಹೆಚ್ಚಿನದು ಆ ಸಭೆಯಲ್ಲಿ ನಡೆ ಯುವ ಕಥಾಶ್ರವಣದಿಂದ ಹಲವು ಸಂದೇಹಾನುಮಾನಗಳು ನಷ್ಟವಾಗ ವವು' ಎಂದಿರುವರು

ಶ್ರೀ ರಾಮ ||~ ಪರಮಾರ್ಥ ಸ್ತವನ | ಇನ್ನು ಪರಮಾರ್ಥ ವನ್ನು ಸ್ತವನ ಮಾಡುವೆನು ಪರಮಾರ್ಥವು ಸಾಧಕರ ಸಾಧ್ಯವು ಇದು ಯೋಗದಲ್ಲಿ ಅತ್ಯಂತ ಶ್ರೇಷ್ಠಯೋಗವಾಗಿರುವದು ಇದು ಬಲು ಸುಗಮವಾ ಗಿದ್ದರೂ ಸತ್ಸಮಾಗಮವಿಲ್ಲದವರಿಗೆ ದುರ್ಗಮವಾಗಿರುವದು ಇದನ್ನುಳಿದು ಬೇರ ಯಾವ ಸಾಧನಗಳಿಂದ ಬ್ರಹ್ಮ ಸಾಕ್ಷಾತ್ಕಾರವು ಕೂಡಲೇ ಉಂಟಾಗ ಲಾರದು ಈ ಪರಮಾರ್ಥದಿಂದಲೇ ತತ್ಕಾಲಕ್ಕೆ ಅದು ಲಭಿಸುವದೆಂದು ವೇದ, ಶಾಸ್ತ್ರಗಳಿಂದ ಅನುಭವಕ್ಕೆ ಬರುವದು ಪರಬ್ರಹ್ಮನು ಎಲ್ಲೆಡೆಯ ಲ್ಲಿಯೂ ತುಂಬಿರುವನು ಆದರೂ ಅವನ ಅಣುಮಾತ್ರವೂ ಕೂಡ ಚರ್ಮಚಕ್ಷುಗಳಿಗೆ ಗೋಚರವಾಗನು ಆಕಾಶಮಾರ್ಗದ ಗುಪ್ತ ಪಂಥವನ್ನರಿತ ಸಮರ್ಥ ಯೋಗಿಗಳು ಮಾತ್ರ ಆ ಪರಬ್ರಹ್ಮನನ್ನು ಕಾಣು ವರಲ್ಲದೆ ಇನ್ನಿತರರಿಗೆ ಇದರ ಗುಟ್ಟು ಎಂದೂ ತಿಳಿಯಲಾರದು ಪರಮಾತ್ಮ ತತ್ವವು ಸತ್ಯವುಳ್ಳದ್ದೂ, ಎಂದೂ ನಾಶವಾಗದಂತಹದೂ ಆಗಿ ರುವದು ಅದಕ್ಕೆ ಚೋರಭಯ, ರಾಜಭಯ, ಅಗ್ನಿಭಯ ಹಾಗು ಕ್ರೂರ ಶ್ವಾಪದಗಳ ಭಯ ಇವಾವವೂ ಇರುವದಿಲ್ಲ ಪರಬ್ರಹ್ಮನು ಅದೆತ್ತಲೂ ಅಲುಗಾಡುವದಿಲ್ಲ ಸ್ಥಾನ ಬಿಟ್ಟು ಕದಲುವದಿಲ್ಲ ಕಾಲಕ್ರಮಿಸಿದರೂ ಇದ್ದಲ್ಲಿಯೇ ಇರುವನು

ಇಂತು ಇರುವ ಪರಬ್ರಹ್ಮನ ಸ್ಥಿತಿ-ಗತಿಯು ಎಂದೂ ಬದಲಿಸುವ ದಿಲ್ಲ ಹೆಚ್ಚು ಆಗುವದಿಲ್ಲ ಕಡಿಮೆಯೂ ಆಗುವದಿಲ್ಲ ಅದಕ್ಕೆ ಸೊರಗು ಕೊರಗುಗಳಿಲ್ಲ. ಅದು ಅದೃಶ್ಯವಾಗುವದಿಲ್ಲವಾದರೂ ಗುರುಕೃಪೆಯೆಂಬ ಅಂಜನವನ್ನು ಕಣ್ಣಿಗಿಕ್ಕಿಕೊಳ್ಳದವರಿಗೆ ಕಾಣುವದಿಲ್ಲ ಶೋಧಿಸಿ

ನೋಡುವವರಿಗೆ ಮಾತ್ರ ಆ ಪರಮಾರ್ಥ ದೊರಕುವದು. ಉಳಿದವರಿಗೆ ಅವರ ಸನ್ನಿಹದಲ್ಲಿದ್ದರೂ ಜನ್ಮಜನ್ಮಾಂತರಕ್ಕೂ ಸಿಗದು. ಹಿಂದಿನ ಕಾಲದಲ್ಲಿ ಹಲವು ಯೋಗಿಗಳು ಆಗಿ ಹೋದರು. ಅವರಿಗೆ ಮಾತ್ರ ಪರಮಾರ್ಥವು ಸಾಧ್ಯವಿದ್ದಿತು. ಆದರೂ ಕೂಡ ಪರಮಾರ್ಥವು ಪರಮಗುಹ್ಯವೆಂಬುದನ್ನು ಅರಿತಿದ್ದರ. ಆದರೂ ಅವರು ಪ್ರಯತ್ನದಿಂದ ಶೋಧಿಸಲು ಅದರ ಅರ್ಥವು ಅವರಿಗೆ ದೊರೆಯಿತು. ಅದರಿಂದ ಅವರು ಜನ್ಮಜನ್ಮಾಂತರದಲ್ಲಿ ದೊರೆಯುದ ಲಾಭವನ್ನು ಹೊಂದಿದರು. ಪರಮಾರ್ಥವು ಅಪೂರ್ವವಾದುದು. ಜನನ ಮರಣಗಳ ಜಂಜಡವನ್ನು ತಪ್ಪಿಸುವಂತಹದು. ಸಾಯುಜ್ಯತೆಯನ್ನು ಸಮೀಪದಲ್ಲಿ ತಂದಿಳಿಸುವಂತಹದು. ವಿವೇಕದಿಂದ ಮಾಯೆಯು ನಿರಸನವಾಗುವದು, ಸಾರಾಸಾರ ವಿಚಾರಗಳು ಸ್ಫುರಿಸುವವು, ಆಗ ಪರಬ್ರಹ್ಮನು ಅಂತರ್ಯಾಮಿಯಾಗಿ ಒಪ್ಪುವನು. ಬ್ರಹ್ಮನು ಎಲ್ಲೆಡೆಯಲ್ಲಿ ತೋರುವನು. ಆ ಬ್ರಹ್ಮದರ್ಶನದಲ್ಲಿಯೇ ಬ್ರಹ್ಮಾಂಡ ಲೀನವಾಗುವದು. ಆಗ ಪಂಚಭೂತಗಳ ಕ್ರಿಯೆಯು ಹೇಯವೆನ್ನಿಸುವದು. ಪ್ರಪಂಚವು ಅಸತ್ಯವೆಂಬುದೂ, ಮಾಯೆಯು ಮೋಹಕವೆಂಬುದೂ ಗೊತ್ತಾಗುವದು. ಈ ವಿಚಾರದಲ್ಲಿಯೇ ಆಗ ಪರಮಾತ್ಮನು ಅಂತಸ್ಫುರಿತನಾಗುವನು.

ಇಂತು ಮಾನವನಲ್ಲಿ ಬ್ರಹ್ಮಸ್ಥಿತಿಯುಂಟಾಗಲು ಎಲ್ಲ ಸಂಶಯಗಳು ಬ್ರಹ್ಮಾಂಡದ ಆಚೆಗೆ ಓಡುವವು. ದೃಶ್ಯವಸ್ತುಗಳ ನಿತತ್ವದ ಬಗೆಗಿದ್ದ ಹಳೆಯ ವಿಚಾರವು ಇಲ್ಲದಾಗುತ್ತಿದೆ. ಹೀಗೆ ಈ ಪರಮಾರ್ಥವನ್ನರಿತವರಿಗೆ ನಿಜಸ್ವಾರ್ಥವೆಂದರೆ ಅಧ್ಯಾತ್ಮಯೋಗವು ಸಹಜವಾಗಿ ಲಭಿಸುವದು. ಈ ಶ್ರೇಷ್ಠವಾದ ಅಧ್ಯಾತ್ಮಯೋಗವು ಸಮರ್ಥವಾದುದೆಂದು ಹೇಳಬೇಕಾಗಿಲ್ಲ. ಈ ಪರಮಾರ್ಥದಿಂದಲೇ ಬ್ರಹ್ಮಾದಿಕರಿಗೆ ವಿಶ್ರಾಂತಿ ಸಿಗುವದು. ಯೋಗಿಗಳು ಬ್ರಹ್ಮ ಸ್ವರೂಪದಲ್ಲಿ ತನ್ಮಯರಾಗುವರು. ಈ ಪರಮಾರ್ಥವು ಸಿದ್ಧ, ಸಾಧು, ಸಂತ ಮಹಂತರಿಗೆಲ್ಲ ಆರಾಮ ಸ್ಥಾನವಾಗಿದೆ. ಸಾತ್ವಿಕ ಜಡಜೀವಿಗಳಿಗೆ ಸತ್ಸಂಗದಿಂದ ಕೊನೆಗೆ ಇದು ಪ್ರಾಪ್ತವಾಗುವದು. ಈ ಪರಮಾರ್ಥವು ಜನ್ಮಕ್ಕೆ ಸಾರ್ಥಕವಾಗಿಯೂ ಸಂಸಾರದಿಂದ ಉದ್ಧರಿಸುವಂತಹದಾಗಿಯೂ, ಧಾರ್ಮಿಕರಿಗೆ ಪರಲೋಕದ ದಾಶ-ನಿಕವಾಗಿಯೂ, ತಪಸ್ವಿಗಳಿಗೆ ಆಶ್ರಯವಾಗಿಯೂ, ಸಾಧಕರಿಗೆ

ಆಧಾರವಾಗಿಯೂ ಇರುವದು ಅಲ್ಲದೆ ಭವಸಾಗರದಿಂದ ಜೀವನವನ್ನು ಪಾರುಗೊಳಿಸುವದು ಪರಮಾರ್ಥ ಪಡೆದವನೇ ಪೊಡವಿಪನು ಪರಮಾರ್ಥವು ಕೈಗೂಡದವನೇ ಬಡವನು ಪರಮಾರ್ಥಕ್ಕೆ ಸಮಾನವಾವದೂ ಇರುವದಿಲ್ಲ ಅನಂತ ಜನ್ಮಗಳ ಪುಣ್ಯ ಸಂಚಿತವಿದ್ದವರಿಗೇ ಮಾತ್ರ ಪರಮಾರ್ಥ ಲಭಿಸುವದು ಅವರಿಗೇ ಮುಖ್ಯ ಪರಮಾತ್ಮನ ಸರಿಯಾದ ಅನುಭವವುಂಟಾಗುವದು ಇಂತು ಪರಮಾತ್ಮನನ್ನು ತಿಳಿದವನಿಗೆ ಅವನ ಜನ್ಮ ಸಾರ್ಥಕವಾಗುವದು ಅದನ್ನರಿಯದ ಪಾಪಿಯು ಕುಲಕ್ಷಯಕ್ಕೆ ಕಾರಣನಾಗುವನು

ಅದಿರಲಿ, ಭಗವಂತನು ದೊರಕೊಳ್ಳದೆ ಸಂಸಾರ ಸಾಗಿಸುವವನ ಜನ್ಮವ್ಯರ್ಥವು ಆ ಮೂರ್ಖನ ಮುಖದರ್ಶನವನ್ನು ಸಹ ಯಾರೂ ತೆಗೆದುಕೊಳ್ಳಬಾರದು ಚನ್ನಾಗಿ ಪಾರಮಾರ್ಥಿಕ ವಿಚಾರವನ್ನು ಮಾಡಬೇಕು ಪರಮಾರ್ಥವನ್ನು ದೊರಕಿಸಿಕೊಂಡು ಸಾರ್ಥಕಮಾಡಿಕೊಳ್ಳಬೇಕು ಹಾಗು ಹರಿಭಕ್ತಿಯಲ್ಲಿ ಅಂತರಿಸದೆ ತನ್ನ ಪೂರ್ವಜರನ್ನು ಉದ್ಧರಿಸಬೇಕು

ಶ್ರೀ ರಾಮ || ೧೦ ನರದೇಹಸ್ತವನ || ಈ ಮಾನವ ಶರೀರವು ಧನ್ಯತರವಾದುದು ಇದರ ಶ್ರೇಷ್ಠತೆಯು ಎಷ್ಟೆಂಬುದನ್ನು ನೋಡಿರಿ ಈ ಮನುಷ್ಯದೇಹದಿಂದಲೇ ಪಾರಮಾರ್ಥಿಕ ಬಯಕೆಗಳನ್ನೆಲ್ಲ ಈಡೇರಿಸಿಕೊಳ್ಳಲು ಬರುವದು ಈ ನರದೇಹದ ಸಂಬಂಧದಿಂದಲೇ ಎಷ್ಟೋ ಜನರು ಭಕ್ತಿಮಾರ್ಗ ನಿರತರಾಗಿರುವರು ಕೆಲವರು ಬೈರಾಗಿಗಳಾಗಿ ಅಡವಡವಿ ಸೇರಿಕೊಂಡಿರುವರು, ಕೆಲವರು ಸತತವೂ ತೀರ್ಥಾಟನದಲ್ಲಿ ಕೆಲವರು— ಪುರಶ್ಚರಣದಲ್ಲಿ ಇನ್ನೂ ಹಲವರು ನಿಷ್ಠೆಯಿಂದ ಅಖಂಡವಾದ ನಾಮಸ್ಮರಣೆಯಲ್ಲಿ ತಮ್ಮ ತಮ್ಮ ಕಾಲ ನೂಕುವರು ಇವರಲ್ಲದೆ ತಪಸ್ಸು ಮಾಡುವವರು, ಯೋಗಾಭ್ಯಾಸ ಮಾಡುವವರು, ವೇದ ಶಾಸ್ತ್ರಗಳಲ್ಲಿ ವ್ಯುತ್ಪನ್ನಮತಿಯುಳ್ಳವರು, ಹಠಯೋಗದಿಂದ ದೇಹಸವೆಯಿಸುವವರು ಹಾಗು ಭಾವನೆಯ ಬಲದಿಂದ ದೇವನನ್ನು ಕಾಣಲು ಪ್ರಯತ್ನಿಸುವವರು ಇವರೆಲ್ಲರು ತಮ್ಮ ಶರೀರದಿಂದಲೇ ಸಾಧ್ಯವನ್ನು ದೊರಕಿಸಲು ಯತ್ನಿಸುವರು ಇವರಲ್ಲದೆ ಇನ್ನೂ ಕೆಲವು ಸಿದ್ಧರು, ಕೆಲವು ಭಕ್ತರು, ಕೆಲವರು ತಮ್ಮ ಸಿದ್ಧಿಬಲದಿಂದ ಆಕಾಶಗಾಮಿಗಳು, ತೇಜೋರೂಪದಿಂದ ತೇಜ

ದಲ್ಲಿ ವಿಲೀನವಾಗುವವರು, ಜಲದಲ್ಲಿ ಲೀನವಾಗುವವರು - ವಾಯು ಸ್ವರೂಪದಿಂದ ಅದೃಶ್ಯರಾಗುವವರು, ಒಂದೇ ರೂಪದಿಂದ ಹಲವು ರೂಪ ಹೊಂದುವವರು, ನೋಡನೋಡುತ್ತಿರುವಲ್ಲಿ ಗುಪ್ತರಾಗುವವರು, ಒಂದೇ ಸ್ಥಾನದಲ್ಲಿದ್ದು ಹಲವು ಕಡೆ ಸಂಚರಿಸುವವರು

ಹಿಂಸ್ರಕ ಪ್ರಾಣಿಗಳ ಬೆನ್ನ ಮೇಲೇರಿ ಕೂಡ್ರುವವರು, ನಿರ್ಜೀವ ಪದಾರ್ಥಗಳಲ್ಲಿ ಚೇತನೆ ಹುಟ್ಟಿಸುವವರು ತಮ್ಮ ತಪೋಬಲದಿಂದ ಸತ್ತವರನ್ನು ಬದುಕಿಸುವವರು, ಪ್ರಕಾಶವನ್ನು ಮಂದಪ್ರಕಾಶವನ್ನಾಗಿ ಮಾಡುವವರು, ನೀರನ್ನು ಬತ್ತಿಸುವವರು, ಜಗತ್ತಿನ ಜನರ ಶ್ವಾಸವಾಯುವನ್ನು ನಿರೋಧಿಸುವವರು ಇವರೆಲ್ಲರೂ ಹಟಯೋಗಿಗಳು ಇವರು ತಮ್ಮ ಅಲೌಕಿಕ ಕ್ರಿಯೆಗಳನ್ನು ಉಪಯೋಗಿಸಿ ಕೃತಾರ್ಥರಾಗಿರುವರು ಸಿದ್ಧಿದೆಸೆಗಳು ಪ್ರಾಪ್ತವಾದ ಇಂಥ ಸಿದ್ಧರು ಲಕ್ಷೋಪಲಕ್ಷರಾಗಿ ಆಗಿ ಹೋದರು ಅವರಾರೆಂದರೆ—ಮನೋಸಿದ್ಧ, ವಾಚಾಸಿದ್ಧ, ಅಲ್ಪಸಿದ್ಧ, ಸರ್ವಸಿದ್ಧ ಹೀಗೆ ಹಲವು ಪ್ರಕಾರದ ಸಿದ್ಧರು ಪ್ರಸಿದ್ಧರಾದರು ಇವರಲ್ಲದೆ ಪರಲೋಕ ಸುಖ ಸ್ವಾರ್ಥಕ್ಕಾಗಿ ಕೆಲವರು ನವ ವಿಧ ಭಕ್ತಿಗಳುಳ್ಳ ರಾಜಪಂಥದಲ್ಲಿ ಸಾಗಿ ಹೋದರು ಕೆಲವರು ಯೊಗಿಗಳಾಗಿ ಗುಪ್ತ ಮಾರ್ಗದಿಂದ ಬ್ರಹ್ಮ ಭುವನಕ್ಕೆ ಹೋದರು ಕೆಲವರು ವೈಕುಂಠಕ್ಕೆ ಹೋದರೆ ಕೆಲವರು ಸತ್ಯ ಲೋಕಕ್ಕೆ ಹೋಗಿ ವಾಸಿಸಿದರು ಇನ್ನೂ ಕೆಲವರು ಶಿವ ಸ್ವರೂಪಹೊಂದಿ ಕೈಲಾಸದಲ್ಲಿ ಕುಳಿತರು ಕೆಲವರು ಇಂದ್ರ ಪದವಿ ಹೊಂದಿದರು ಕೆಲವರು ಪಿತೃಲೋಕ ಪಡೆದರು ಇವರಲ್ಲದೆ ನಕ್ಷತ್ರಗಳಲ್ಲಿ, ಕ್ಷೀರಸಾಗರದಲ್ಲಿ ಸೇರಿದವರುಂಟು ಚತುರ್ವಿಧ ಮುಕ್ತಿಗಳಲ್ಲಿ ಸೇರಿಕೊಂಡು ಅಭೀಪ್ಸಿತ ಹೊಂದಿ ಅದೆಷ್ಟೋ ಸಿದ್ಧರು ಇರಹತ್ತಿದರು

ಇಂತು– ಎಷ್ಟೋ ಸಿದ್ಧರು ಸಾಧುಗಳು, ಸಂತರು ಇವರೆಲ್ಲ ಕೇವಲ ಸ್ವಂತ ಹಿತಕ್ಕಾಗಿ ಬಯಸಿ ಮನೋ ಬಯಕೆಗಳನ್ನು ಸಿದ್ಧಿಸಿಕೊಂಡರು ಇವರೆಲ್ಲರೂ ನರದೇಹ ಧಾರಿಗಳೇ! ಅಂದಮೇಲೆ ನರದೇಹ ಪ್ರಸಿದ್ಧಿಯನ್ನು ಅದೆಷ್ಟು ವರ್ಣಿಸಿದರೂ ಕಡಿಮೆಯೇ ಸರಿ ಈ ನರ ದೇಹದ ಆಧಾರದಿಂದಲೂ ಹಲವು ಸಾಧನಗಳ ಸಹಾಯದಿಂದಲೂ

ಮುಖ್ಯವಾಗಿ ಸಾರಾಸಾರ ವಿಚಾರಗಳನ್ನು ಮಾಡಿ ಬಹು ಜನರು ಮುಕ್ತ ರಾದರು

ಈ ನರದೇಹ ಹೊಂದಿಯೇ ಅವರು ಉತ್ತಮ ಗತಿ ಪಡೆದರು. ಅಹಂಕಾರ ಬಿಟ್ಟು ಸ್ವಾನಂದದಲ್ಲಿ ಸುಖವನ್ನು ಅನುಭವಿಸಿದರು ಅವರ ಮಾರ್ಗದಲ್ಲಿ ಉಂಟಾದ ಸಂಶಯದ ಮೂಲೋತ್ಪಾಟನವಾಗಿ ಅವರು ಉದ್ಧೃತರಾದರು ನರದೇಹವೇ ಗತಿದಾಯಕವು ಪಶು ದೇಹದಲ್ಲಿ ಗತಿ ಯಿರುವದಿಲ್ಲೆಂಬುದನ್ನು ಎಲ್ಲರೂ ಹೇಳುವರು ಸಂತರೂ, ಮಹಂತರೂ, ಋಷಿಗಳೂ— ಮುನಿಗಳೂ, ಸಿದ್ಧರೂ, ಸಾಧುಗಳೂ, ಶಾಂತರೂ ಭಕ್ತರೂ ಮುಕ್ತರೂ, ಬ್ರಹ್ಮಜ್ಞಾನಿಗಳೂ, ವಿರಕ್ತ ಯೋಗಿ ತಪಸ್ವಿಗಳೂ, ತತ್ವ ಜ್ಞಾನಿ, ಯೋಗಾಭ್ಯಾಸಿ—ಬ್ರಹ್ಮಚಾರಿ— ದಿಗಂಬರರೂ, ಸನ್ಯಾಸಿಗಳೂ, ಷಡ್ದರ್ಶನಿಗಳೂ ಹಾಗು ತಾಪಸರೂ ಇವರೆಲ್ಲ ನರದೇಹಿಗಳೇ ಆಗಿದ್ದರು ಆದ್ದರಿಂದ ನರದೇಹವು ಶ್ರೇಷ್ಠವೂ ಇನ್ನಿತರ ಪ್ರಾಣಿದೇಹಗಳಿಂದ ಹೆಚ್ಚಿನ ಯೋಗ್ಯತೆಯದೂ ಆಗಿರುವದು ಈ ದೇಹದಿಂದಲೇ ಯಮ ಯಾತನೆಯ ಘೋರಾರಿಷ್ಟವನ್ನು ತಪ್ಪಿಸಲಿಕ್ಕೆ ಬರುವದು

ಮಾನವನಿಗೆ ಅವನ ದೇಹವು ಅವನ ಸ್ವಾಧೀನದಲ್ಲಿಯೇ ಇರು ವದು. ಅವನು ಅದನ್ನು ಎಂದೂ ಅನ್ಯರ ನಿಯಂತ್ರಣಕ್ಕಿರಿಸಲು ಒಪ್ಪ ಲಾರನು ಇಂತು ತನ್ನದೇ ಆದ ನರದೇಹವನ್ನು ಕೇವಲ ಪರೋಪ ಕಾರಕ್ಕಾಗಿ ಕಷ್ಟ ಬಿಡಿಸಿ (ಸವೆಯಿಸಿ) ಕೀರ್ತಿ ರೂಪದ ದೇಹದಿಂದ ಚಿರ ಕಾಲ ಉಳಿಯಬೇಕು

ನಮ್ಮವೇ ಆಗಿದ್ದ ಕುದುರೆ, ಆಕಳು, ಎಮ್ಮೆ, ಬೇರೆ ಬೇರೆ ಪಶು ಗಳು, ಸ್ತ್ರೀಯು, ದಾಸಿ ಇವರೆಲ್ಲರನ್ನು ದಯೆಯಿಂದ ನಾವು ತ್ಯಾಗ ಮಾಡಿದರೆ ಅವು ಅನ್ಯರ ವಶವಾಗುವವು ಯಾಕಂದರೆ ಅವುಗಳ ದೇಹದ ಸ್ವಾತಂತ್ರ್ಯವು ನರದೇಹದಂತೆ ಅವಕ್ಕಿರುವದಿಲ್ಲ ನರದೇಹದ ಮಾತು ಹಾಗಲ್ಲ ಅದು ತನ್ನ ಮನಬಂದಲ್ಲಿ ಹೋಗಲಿ ಅಥವಾ ಇರಲಿ ಅದನ್ನು ಬಂಧಿಸುವದಿಲ್ಲ. ಇನ್ನು ನರದೇಹವು ಗಟ್ಟಿಮುಟ್ಟಾಗಿರಬೇಕು- ಅದು ವಿಕೃತವಾಗಿದ್ದರೆ ಅಥವಾ ಕುರುಡತನ, ಕಿವುಡುತನ, ಮೂಕ, ಅಶಕ್ತ, ರೋಗಯುಕ್ತ, ಮೂರ್ಖತೆಯುಳ್ಳದಾಗಿದ್ದರೆ ಅದು ತನ್ನನ್ನು

ಧಾರಣ ಮಾಡಿದ ಜೀವಸಿಗ^, ಅನ್ಯರಿಗೂ ನಿರುಪಯೋಗವು ಒಂದು ವೇಳೆ ದೇಹವು ಏನೊಂದು ವ್ಯಂಗವಿಲ್ಲದೆ ಇದ್ದರೆ ಆ ದೇಹಧಾರಿಯು ಕೂಡಲೇ ಪಾರಮಾರ್ಥಿಕ ಮಾರ್ಗವನ್ನು ಹಿಡಿಯಬೇಕು

ಗಟ್ಟಿಮುಟ್ಟಾದ ನರದೇಹವಿದ್ದು ಪರಮಾರ್ಥ ವಿರಹಿತನಾದವನು ಮಾಯೆಯ ಬಲೆಯಲ್ಲಿ ಸಿಕ್ಕುಬಿದ್ದ ಮೂರ್ಖನೆಂದೇ ಹೇಳಬಹುದು ಮಣ್ಣನ್ನು ತೋಡಿ ತೆಗದು ಆದರಿಂದ ಮನೆ ಮಂದಿರ ಕಟ್ಟಿಕೊಂಡ ಮಾನವನು– ' ಈ ಮನೆಯು ನನ್ನದೇ ' ಎಂದು ಎದೆ ತಟ್ಟಿಕೊಂಡು ಹೇಳುವನು ಆದರೆ ಆ ಮನಯ ಒಡೆತನವು ಅವನದೊಬ್ಬನದಾಗಿರದೆ ಹಲವರ ಅಧಿಕಾರವು ಅದರ ಮೇಲಿರುವದೆಂಬುದು ಆ ಮೂರ್ಖನಿಗೆ ತಿಳಿಯುವದಿಲ್ಲ ಆ ಮನೆಯಲ್ಲಿ ಹೋರು ಮಾಡಿಕೊಂಡಿದ್ದ ಇಲಿಯು ಈ ಮನೆಯು ನನ್ನದೇ ಎಂದೆಂದುಕೊಳ್ಳುವದು, ಗೋಡೆಯನ್ನಾಶ್ರಯಿಸಿದ ಹಲ್ಲಿಯೂ ಕೂಡ ಹಾಗೇ ಅನ್ನುವದು ಆದರಂತೆ ನೊಣವು, ಇರಿವೆ, ಹಾವು, ಚೇಳು, ಜಿರಲಿ, ಗುಂಗೀಹುಳ, ಜೇಡಹುಳ, ಜೊಂಡಿಗ, ಬೆಕ್ಕು, ನಾಯಿ, ಮುಂಗುಲಿ, ಗೆದ್ದಲಿ–ಹುಳು, ತಗಣಿ–ಚಿಕ್ಕಾಡು, ಗುಂಗಾಡು, ಕಣ್ಣುಪ್ಪಡಿ, ಇನ್ನೂ ಹಲವ್ಹಲವು ಪ್ರಾಣಿಗಳೂ–ಕ್ರಿಮಿಕೀಟಕಗಳೂ ಈ ಮನೆಯು ನನ್ನದೇ ಎಂದು ಪ್ರತಿಯೊಂದೂ ನುಡಿಯುವವು

ಇವೆಲ್ಲವುಗಳಂತೆ ಪಶುವು, ದಾಸಿಯು, ಬೀಗನು, ಗೆಳೆಯನು, ಗ್ರಾಮಸ್ಥನು ಇವರೂ ' ಇದು ನನ್ನ ಮನೆ ' ಎನ್ನುವರು ಇವರಲ್ಲದೆ ತುಡುಗನು, ಸರಕಾರವು, ತನ್ನ ಮನೆಯೆಂದು ತಿಳಿಯುವವು ಅಗ್ನಿಯು ' ಈ ಮನೆ ನನ್ನದೇ ನಾನು ಇದನ್ನು ಸುಟ್ಟು ಬಿಡುವೆ ' ಎಂದೆನ್ನುವದು ಹೀಗೆ ಎಲ್ಲರೂ ' ಈ ಮನೆ ನನ್ನದು ' ಎಂದೇ ಅನ್ನುವರು ಮೂಲ ಮನೆ ಕಟ್ಟಿಸಿದ ಮೂರ್ಖನಂತೂ ' ಈ ಮನೆ ನನ್ನದು, ನನ್ನದು' ಎಂದು ಆಧ್ಯತೆಯಿಂದ ಹೇಳಿಕೊಳ್ಳುವನು, ಹೀಗೆ ಅವನು ಹೇಳುತ್ತ ಇರಲು ಪ್ರಾಪಂಚಿಕ ಭಾರವನ್ನು ಆತನು ' ಸಹಿಸಲಾರದೆ ದೇಶತ್ಯಾಗ ಮಾಡಬೇಕಾಯಿತು ಅವನು ಮನೆ ಬಿಟ್ಟು ಹೋದ ನಂತರ ಮನೆ ಹಾಳು ಬಿದ್ದಿತು ಊರಿಗೆ ಊರೇ ಹೊಟ್ಟೆಗಾಗಿ ತಮ್ಮ ತಮ್ಮ ಮನೆ ಬಿಟ್ಟು

ಹೋಗಲು ಇಡಿಯ ಊರೇ ಹಾಳು ಬಿದ್ದಿತು ಆ ಬಳಿಕ ಆ ಮನೆಯಲ್ಲಿ ಅಡವೀ ಮೃಗಗಳು ಬಂದು ಸೇರಿಕೊಂಡವು

ಕ್ರಿಮಿ ಕೀಟಕಾದಿಗಳು ಹೇಳಿಕೊಂಡಂತ ಆ ಮನೆಯು ಅವುಗಳದೇ ಆಯಿತು ಮನೆ ಕಟ್ಟಿಸಿ ಮೂಲ ಮಾಲಕನು ಅರ್ಥಾತ್ ಮೂರ್ಖನು ಗ್ರಾಮತ್ಯಾಗ ಗೃಹತ್ಯಾಗ ಮಾಡಿ ಹೋದನು

ಈ ಪ್ರಕಾರ ಮಣ್ಣಿನ ಮನೆಯೊಂದಕ್ಕೆ ಇದು ನನ್ನದು-ನನ್ನದು ಎಂದು ಮಮತ್ವದಿಂದ ಹೇಳಿಕೊಳ್ಳುವದು ಇದೆಷ್ಟು ಮಿಥ್ಯತ್ವವು ? ಇದು ಅನುಭವದಿಂದ ಕಂಡು ಬರುವದು ಸಾರಾಂಶ ಜನ್ಮದ ಅವಧಿಯು ತೀರ ಸ್ವಲ್ಪ ಕೇವಲ ೨ ದಿನಗಳದ್ದಾಗಿದೆ ಅಷ್ಟು ಕಾಲ ಎಲ್ಲಿಯಾದರೂ ವಾಸ್ತವ್ಯ ಮಾಡಿಕೊಂಡಿರಬೇಕು ಈ ಮನೆಯ ವಿಚಾರದಂತೆಯೇ ದೇಹದ ಸ್ಥಿತಿಯಿರುವದು ಈ ದೇಹವು ನನ್ನದೆಂದು ಅನ್ನುವದು ಸರಿಯಲ್ಲ ಮನೆಯಂತೆ ಇದೂ ಹಲವು ಪ್ರಾಣಿಗಳ ಉಪಯೋಗಕ್ಕಾಗಿ ಘಟಿತವಾಗಿದೆ ಹೇನುಗಳು ತಲೆಯಲ್ಲಿ ಮನೆಮಾಡಿಕೊಂಡಿದ್ದು ತಲೆಯನ್ನೇ ಕೊರೆಯುವವು ಕೂದಲಿನ ಬೊಡ್ಡೆಯಲ್ಲಿ ಹುಳುಗಳು ಸೇರಿ ತಮ್ಮ ನಿರ್ವಾಹ ಸಾಗಿಸಿ ಕೊಳ್ಳುವವು ಹುರುಕು ಕಜ್ಜಿಗಳಾಗಿಯೂ ನಾರಾಗಿಯೂ ಹುಳ ಸೇರವವು, ಹೊಟ್ಟೆಯಲ್ಲಿ ಜಂತುಗಳಾಗಿ ಕಡಿಯುವವು ಇವೆಲ್ಲ ಪ್ರತ್ಯಕ್ಷ ತೋರುವ ಪ್ರಾಣಿಗಳು ಹಲ್ಲುಗಳ ವಸಡಿಯಲ್ಲಿ ಹುಳ, ಕಣ್ಣಿನ ರಪ್ಪೆಗೆ ಹುಳ, ಕಿವಿಯಲ್ಲಿ ಹುಳ ಹಾಗು ತೊನಸಿ ಇವೆಲ್ಲವು ಒಂದು ಶರೀರದ ಮೇಲೆ ಪ್ರತಾಪ ಬೀರುವ ಹುಳುಗಳು ರಕ್ತ ಹೀರುವ ಪ್ರಾಣಿ ಮಾಂಸದಲ್ಲಿ ಸೇರುವ ಪ್ರಾಣಿ, ಇವೂ ಶರೀರಕ್ಕೆ ಅಧಿಕಾರ ತೋರಿಸುವವು ಆಕಸ್ಮಾತ ಹುಚ್ಚು ನಾಯಿ ಕಡಿಯುವದು ಹಾವು ಚೇಳು ಕಡಿಯುವದುಂಟು ಜನ್ಮದಿಂದ ರಕ್ಷಿಸಿದ ಶರೀರವನ್ನು ಆಕಸ್ಮಾತ ಹುಲಿಯು ಕಚ್ಚಿಕೊಂಡು ಹೋಗುವದುಂಟು, ಅಥವಾ ತೋಳವು ಬಲಾತ್ಕಾರದಿಂದ ತಿನ್ನುವದುಂಟು

ಇಲಿ, ಬೆಕ್ಕುಗಳು ದಂಶ ಮಾಡುವವು, ಕುದುರೆ ನಾಯಿಗಳು ಕಡಿಯುವವು ಕರಡಿ ಮಂಗಗಳು ತೊಂದರೆ ಕೊಟ್ಟು ಹೊಡೆಯುವವು ಒಂಟೆ ಹಲ್ಲಿನಿಂದ ಹಿಡಿದು ಮೇಲಕ್ಕೆತ್ತುವದು, ಆನೆ ಮದವೇರಿ ಸೀಳಿ

ಹಾಕುವದು, ಎತ್ತು ಕೋಡಿನಿಂದ ಹಾಯುವದು, ತುಡುಗನು ಕಳಿಸ್ರವನ್ನು, ದೆವ್ವಗಳು ಪೀಡಿಸುವವು ಈ ಪ್ರಕಾರ ದೇಹಕ್ಕೆ ದುಃಸ್ಥಿತಿಗಳು ಒದಗುವವು ಇಂಥ ಶರೀರವು ಒಬ್ಬನದಾಗಿರದೆ ಹಲವು ಪ್ರಾಣಿಗಳ ನಿಯಂತ್ರಣಕ್ಕೆ ಗುರಿಯಾದದು ಆದರೆ ಮೂರ್ಖನು 'ತನ್ನದೇ ದೇಹ' ಎಂದು ಹೇಳಿಕೊಳ್ಳುವನು ಆದರೆ ಈ ದೇಹವು ಜೀವನ ಖಾದ್ಯವಸ್ತುವಾಗಿರುವದೆಂಬುದು ಗೊತ್ತಾಗುವದು

ದೇಹವನ್ನು ಪರಮಾರ್ಥಕ್ಕೆ ಉಪಯೋಗಿಸಿದರೆ ಮಾತ್ರ ಅದು ಸಾರ್ಥಕತೆ ಪಡೆಯುವದು ಇಲ್ಲದಿದ್ದರೆ ಆ ದೇಹವು ಹುಟ್ಟಿ ಬೆಳೆದುದು ವ್ಯರ್ಥ ಆದಕ್ಕೆ ಹಲವು ಆಘಾತ ಅಪಘಾತಗಳೊದಗಿ ಕೊನೆಗೆ ಅದು ಮೃತ್ಯುವಿನ ಹಾದಿಗೆ ಹೋಗ್ಗುವದು, ಇರಲಿ

ಪ್ರಾಪಂಚಿಕ ಮೂರ್ಖನು ಪರಮಾರ್ಥ ಸುಖವನ್ನು ಅರಿಯಲಾರನು ಅಂಥ ಮೂರ್ಖನ ಲಕ್ಷಣಗಳಲ್ಲಿ ಕೆಲವನ್ನು ಮುಂದೆ ಹೇಳಿದೆ

ಶ್ರೀ ದಾಸಬೋಧೆಯ ೧ ನೆಯ ದಶಕಂ ಸಂಪೂರ್ಣ





।ಜಯ ಜಯ ರಘುವೀರಸಮರ್ಥ।

## ೨ ನೆಯ ದಶಕ

ಶ್ರೀ ರಾಮ ॥ ೧ ಮೂರ್ಖ ಲಕ್ಷಣ॥ಓಂಕಾರ ಸ್ವರೂಪ ಗಜಾನನನೇ! ಏಕದಂತನೆ! ಭಕ್ತ ಜನರನ್ನು ಕಲ್ಯಾಣ ದೃಷ್ಟಿಯಿಂದ ಕಾಣು ಶ್ರೀ ವೇದ ಜನನೀ! ಬ್ರಹ್ಮತನಯೆ! ಸ್ಫೂರ್ತಿರೂಪದಿಂದ ನನ್ನ ಹೃದಯದಲ್ಲಿ ವಾಸಿಸುವ ಕೃಪೆ ಮಾಡು ನಾನು ಗುರುಗಳನ್ನು ಸ್ಮರಿಸಿಯೂ ಶ್ರೀ ರಾಮ ನನ್ನು ಸ್ತುತಿಸಿಯೂ, ಜಗತ್ಕಲ್ಯಾಣಕ್ಕಾಗಿ ಮಂದಮತಿಗಳ ಲಕ್ಷಣ ಹೇಳುವೆ ಮೂರ್ಖರಲ್ಲಿ ಕೆಲವರು ಸ್ವಾಭಾವಿಕ ಮೂರ್ಖರೂ, ಕೆಲವರು ತಿಳಿದೂ ತಿಳಿಯದಂತೆ ವರ್ತಿಸುವ ಮೂರ್ಖರೂ ಇರುವರು ಈ ಎರಡೂ ಬಗೆಯ ಮೂರ್ಖರ ಲಕ್ಷಣಗಳನ್ನು ಅವಧರಿಸಬೇಕು ಎರಡನೆಯ ವರ್ಗದ ಮೂರ್ಖರ ಲಕ್ಷಣ ಮುಂದೆ ಹೇಳುವೆವು ಈಗ ಸ್ವಾಭಾವಿಕ ಮೂರ್ಖರ ಬಗೆಗೆ ಹೇಳುವುದಾದರೆ--ಸಂಸಾರದಲ್ಲಿದ್ದುಕೊಂಡು ಆತ್ಮ ಜ್ಞಾನವಿಲ್ಲದ ಮಂದಮತಿಯು ಈ ವರ್ಗದಲ್ಲಿ ಬರುವನು ತನಗ ಜನ್ಮ ಕೊಟ್ಟ ತಾಯಿ–ತಂದೆಗಳೊಡನೆ ವಿರೋಧ ಬೆಳಿಸುವವನೂ, ತನ್ನ ಹೆಂಡತಿಯೊಡನೆ ಗುಪ್ತ ವಿಚಾರವಾಕ್ಯಗಳ ವಿನಿಮಯ ಮಾಡುವವನೂ ಈ ತರಹದ ಮೂರ್ಖನು ತನ್ನ ಬಂಧು ಬಳಗದದರನ್ನು ಅಲಕ್ಷಿಸಿದ ಸ್ತ್ರೈಣನೂ, ಪರನಾರಿಯ ಪ್ರೇಮಕ್ಕಾಗಿ ಹಾತೊರೆಯುವವನೂ, ಮಾವನ ಮನೆಯಲ್ಲಿ ವಾಸಿಸುವವನೂ ಮತ್ತು ವಿಜಾತೀಯ ವಧುವನ್ನು ಅಂಗೀಕರಿಸುವವನೂ, ಈ ವರ್ಗದವರು ತನಗಿಂತಲೂ ಬಲ್ಲಿದರೊಡನೆ ಗರ್ವದಿಂದ ನಡೆದು ಸರಿಗಟ್ಟಿಕೊಳ್ಳಲು ಬಯಸುವವನೂ, ಯೋಗ್ಯತೆಯಿಲ್ಲದೆ ಅಧಿಕಾರ ನಡೆಯಿಸುವವನೂ, ಆತ್ಮಸ್ತುತಿ ಮಾಡಿಕೊಳ್ಳುವವನೂ, ಅನ್ಯತ್ರಗಮನಿಸಿ ಹಿತಮಾಡಿಕೊಳ್ಳದೆ ತನ್ನ ದೇಶದಲ್ಲಿಯೇ ವಿಪತ್ತನ್ನು ಅನುಭವಿಸುವವನೂ, ತನ್ನ ಹಿರಿಯರ ಕೀರ್ತಿಯನ್ನು ಹೇಳಿಕೊಳ್ಳುವವನೂ, ಇವರೆಲ್ಲರೂ ಮೂರ್ಖರು ನಿಮಿತ್ತವಿಲ್ಲದೆ ನಗುವದು, ವಿವೇಕೋಪದೇಶವನ್ನು ಅಲಕ್ಷಿಸುವದು, ಹಲವು ಜನರೊಡನೆ

ವೈಷಮ್ಯ ಬೆಳಿಸುವದು, ದೂರಿನ ಹಾಗೂ ಗುರುತಿಲ್ಲದವರ ಕೂಡ ಸ್ನೇಹ ಕೈಕೊಳ್ಳುವದು ಇವೆಲ್ಲ ಮೂರ್ಖರ ಲಕ್ಷಣಗಳು ರಾತ್ರಿಯಲ್ಲಿ ಇನ್ನೊಬ್ಬರನ್ನು ಕುರಿತು ಆಡಿಕೊಳ್ಳುವದ, ಜನಜಂಗುಳಿಯ ಮಧ್ಯದಲ್ಲಿ ಮಲಗಿ ನಿದ್ರಿಸುವದು, ಪರಸ್ಥಳದಲ್ಲಿ ಓರಿದುಂಬುವದು, ತನ್ನ ಹಾಗು ಅನ್ಯರ ಮಾನಾಪಮಾನಗಳನ್ನು ಆಡಿ ತೋರಿಸುವದು, ಇವೂ ಮೂರ್ಖತ್ವದ ಲಕ್ಷಣಗಳು ಜಾರಣ-ಮಾರಣಾದಿ ದುರ್ವ್ಯಸನದಲ್ಲಿರುವವನೂ, ಪರರ ಆಶ್ರಯದಲ್ಲಿ ರಮಿಸುವವನೂ, ಪರಾವಲಂಬಿಯೂ, ಸೋಮಾರಿಯೂ ಇವರೆಲ್ಲರು ಮೂರ್ಖರು ತನಗೆ ಮನೆಯಲ್ಲಿ ಹೊಳೆದ ಬುದ್ಧಿ ವಿಚಾರಗಳನ್ನು ಸಭೆಯಲ್ಲಿ ಪ್ರಕಟಿಸಲು ನಾಚಿಕೆ ಪಡುವವನೂ, ತನಗಿಂತಲೂ ಮಿಗಿಲಾದವರನ್ನು ಸರಿಗಟ್ಟಿಕೊಳ್ಳುವವನೂ, ಬುದ್ಧಿವಂತರ ಉಪದೇಶ ಕೊಳ್ಳದವನೂ, ಕಲಿಯಲೊಲ್ಲದವನಿಗೆ ಕಲಿಸಬಯಸುವವನೂ ಬಲ್ಲ ವಿದ್ವಾಂಸರಿಗೆ ಬೋಧೆ ಮಾಡುವವನೂ ಹಿರಿಯರನ್ನು ಸಂಕಟಕ್ಕೆ ನೂಕುವವನೂ- ಇವರೆಲ್ಲರು ಮೂರ್ಖರು ವಿಷಯೋಪಭೋಗಗಳಲ್ಲಿ ನಿರ್ಲಜ್ಜತನದ ಮೇರೆದಪ್ಪಿದವನು

ರೋಗಪೀಡಿತನಾಗಿ ಔಷಧ ಸೇವಿಸದವನು ಔಷಧಸ್ವೀಕರಿಸಿದರೂ ಪಥ್ಯಪಳಿಗೆಮಾಡದವನು ಇವರೆಲ್ಲರು ಮೂರ್ಖರು ಜೊತೆಗಾರರಿಲ್ಲದ ಮಾರ್ಗಕ್ರಮಿಸುವವನು, ಗುರುತಿಲ್ಲದವರ ಗೆಳೆತನ ಮಾಡುವವನು, ತುಂಬಿ ಹರಿಯುವ ನದಿಯಲ್ಲಿ ಈಜುವದಕ್ಕಾಗಿ ಹಾರುವವನು, ಇವರು ಮೂರ್ಖರು ತನಗೆ ಮಾನ ದೊರೆಯುವಲ್ಲಿ ಮತ್ತೆ ಮತ್ತೆ ಹೋಗುವದು, ತನ್ನ ಯೋಗ್ಯತೆಯನ್ನು ಕಾಯ್ದುಕೊಳ್ಳದಿರುವದು ಜಾಣತನವಲ್ಲ ಸಂಪತ್ತು ಪಡೆದ ಕೀಳು ಮನುಷ್ಯನ ಆಳಾಗುವವನು ಮೂರ್ಖನು ಯಾವಾಗಲೂ ಕ್ಷುದ್ರ ಮನಸ್ಸಿನಲ್ಲಿರುವವನು ಮೂರ್ಖನು ವಿಚಾರ, ಕಾರಣ ಹಾಗು ಅಪರಾಧಗಳಿಲ್ಲದೆ ದಂಡ ಪ್ರೋಹಗೈಯುವವನು ಮೂರ್ಖನು ಸ್ವಲ್ಪ ಮಾತ್ರಕ್ಕಾಗಿ ಜೀನತನ ಮಾಡುವವನೂ, ಹವ್ಯಕವ್ಯ ಕರ್ಮಗಳನ್ನು ಮಾಡದವನೂ, ತನ್ನಲ್ಲಿ ಪ್ರತೀಕಾರ ಶಕ್ತಿಯಿಲ್ಲದೆ ಅನ್ಯರ ಮೇಲ ಬಾಯಿ ಬಿಟ್ಟು ಬೊಗಳುವವನೂ ಮೂರ್ಖರು ತನ್ನ ಮನೆಯವರ ಮೇಲೆ ಹರಿಹಾಯುವವನೂ, ಹೊರಗಿನ ಜನರನ್ನು ಕಂಡು ದೀನತೆಯನ್ನು ವ್ಯಕ್ತ

ನಡಿಸುವ ಹುಚ್ಚುತನವುಳ್ಳವನೂ ಮೂರ್ಖರು ಕೀಳು ಕುಲದವರೊಡನೆ ಬಳಕೆ ಮಾಡುವವನೂ, ಪರಸ್ತ್ರೀಯರಲ್ಲಿ ಏಕಾಂತ ಮಾಡುವವನೂ ಹಾದಿಗುಂಟ ತಿನ್ನುತ್ತ ಹೋಗುವವನೂ ಇವರೆಲ್ಲರೂ ಮೂರ್ಖರು

ನರರು ತನಗೆ ಮಾಡಿದ ಉಪಕಾರ ಸ್ಮರಿಸದವನೂ, ಕೃತಘ್ನನೂ, ಬಹಳ ಮಾತಾಡಿ ಸ್ವಲ್ಪ ಮಾಡುವವನೂ, ಸಂತಸ್ತನೂ, ತಿನಸುಬಕ್ಕನೂ, ಆಲಸಿಯೂ, ದುರ್ಜನತೆಯುಳ್ಳವನೂ, ಕುಟಿಲನೂ, ಹಾಗೂ ಹೇಡಿಯೂ ಇವರೆಲ್ಲರೂ ಮೂರ್ಖರು

ವಿದ್ಯೆ, ಸಂಪತ್ತು, ದ್ರವ್ಯ, ಪರಾಕ್ರಮ, ಬಲ, ಮರ್ಯಾದೆ ಇವುಗಳಲ್ಲಿ ಯಾವದೊಂದೂ ತನ್ನಲ್ಲಿರದೆ ವ್ಯರ್ಥ ಅಭಿಮಾನ ತಾಳುವವನೂ ಲಂಡತನವುಳ್ಳವನೂ, ಅಸತ್ಯನೂ ಅಪ್ರಾಮಾಣಿಕನೂ, ದುಷ್ಕರ್ಮಿಯೂ ವಂಚಕನೂ, ಉದ್ಧಟನೂ, ನಿದ್ದೆಬಡಕನೂ, ಇವರೆಲ್ಲರೂ ಮೂರ್ಖರು, ಎತ್ತರ ಸ್ಥಳದಲ್ಲಿ ನಿಂತು ವಸ್ತ್ರ ಧರಿಸುವವನು, ಪಟ್ಟಸಾಲೆಯಲ್ಲಿ ಮಲಮೂತ್ರ ವಿಸರ್ಜಿಸುವವನು, ಸತತವೂ ಬತ್ತಲೆಯಾಗಿರುವವನು, ಹಲ್ಲು-ಕಣ್ಣು-ಮೂಗು-ಕೈಕಾಲುಗಳು ಹೊಲಸಾಗಿರುವವನು ಇವರೆಲ್ಲ ಮೂರ್ಖರು ವೈಧೃತಿ, ವ್ಯತೀಪಾತ ಮುಂತಾದ ದುಷ್ಟ ಮುಹೂರ್ತಗಳನ್ನೂ ಅಪಶಕುನಗಳನ್ನೂ ನೋಡದೆ ಪ್ರಯಾಣ ಬೆಳಸಿ ತನ್ನ ಮೇಲೆ ಗಂಡಾಂತರ ತಂದುಕೊಳ್ಳುವವನು, ಸಿಟ್ಟು, ಅಪಮಾನ, ಕ್ಷುದ್ರಬುದ್ಧಿ ಇವುಗಳಿಂದ ಆತ್ಮನಾಶಮಾಡಿಕೊಳ್ಳುವವನು, ಚಂಚಲಮತಿಯುಳ್ಳವನು, ಇವರೆಲ್ಲರು ಮೂರ್ಖರು

ತನ್ನ ಜೀವನಮಿತ್ರರಿಗೆ ಖೇದವನ್ನುಂಟು ಮಾಡುವವನು ಸುಖವನ್ನು ಬಯಸದವನು, ಕೀಳು ಜನರನ್ನು ಮರ್ಯಾದಿಸುವವನು ತನ್ನನ್ನು ಹಲವು ಬಗೆಯಿಂದ ರಕ್ಷಿಸುವವರನ್ನು ಹಾಗು ತನಗೆ ಶರಣು ಬಂದವರನ್ನು ಹೀಯಾಳಿಸುವಂಥವನೂ ಇವರು ಮೂರ್ಖರು ಲಕ್ಷ್ಮಿಯು ಸ್ಥಿರವೆಂದು ನಂಬಿ ಸತಿ-ಸುತ, ಮನೆ ಮಾರುಗಳನ್ನು ಮೆಚ್ಚಿ ದೇವನನ್ನು ಮರೆತು ಬಿಡುವವನು ಮೂರ್ಖನು ಕರ್ಮಕ್ಕೆ ತಕ್ಕ ಫಲವೆಂಬುದನ್ನರಿಯದವನೂ ಮೂರ್ಖನು

ದೇವರು ಸ್ತ್ರೀಯರಲ್ಲಿ ಕಾಮ-ವಿಕಾರವನ್ನು ಪುರುಷನ ಎಂಟು ಪಟ್ಟು ಇಟ್ಟಿರುವನೆಂದರಿತು ಹಲವು ನಾರಿಯರನ್ನು ಬೆರೆಯುವವನು ಮೂರ್ಖನು ದುರ್ಜನರಿಂದ ತನ್ನ ಮರ್ಯಾದೆಗೆ ಭಂಗವುಂಟಾದೀತೆಂಬ ಭಯದಿಂದ ಪ್ರತೀಕಾರ ಮಾಡದಿರುವವನೊಬ್ಬನು ಮೂರ್ಖನು ದೇವ–ಗುರು–ವಿಪ್ರರೂ ತಾಯಿ ತಂದೆಗಳೂ ಒಡೆಯನೂ ಇವರಲ್ಲಿ ದ್ರೋಹವನ್ನು ಮಾಡುವವನು ಮೂರ್ಖನು ಅನ್ಯರನ್ನು ತೊಂದರೆಗೊಳಿಸುವದರಲ್ಲಿ ತನ್ನ ಸುಖವನ್ನು ವ್ಯಕ್ತಪಡಿಸುವವನೂ, ಪರರ ಉತ್ಕರ್ಷಗೆ ದುಃಖಿಸುವವನೂ, ಕಳೆದುಹೋದುದಕ್ಕಾಗಿ ಹಳಹಳಿಸಿ ಶೋಕಿಸುವವನೂ ಇವರೆಲ್ಲರೂ ಮೂರ್ಖರು

ತನ್ನನ್ನು ಆದರಿಸುವವರೊಡನೆ ಮಾತು ಬಳಿಸುವವನೂ, ಕೇಳದೆ ಸಾಕ್ಷಿಯಾಗಿ ನುಡಿಯುವವನೂ, ತಿರಸ್ಕೃತ ಪದಾರ್ಥಗಳನ್ನು ಸ್ವೀಕರಿಸುವವನೂ, ಮೂರ್ಖರು ಪರರ ಕಿಮ್ಮತ್ತನ್ನು ಕುಂದಿಸಿ ನುಡಿಯುವವನೂ, ಹಾದಿ ತಪ್ಪಿ ವರ್ತಿಸುವವನೂ, ನಿಂದ್ಯ ಕರ್ಮ ಮಾಡುವವನ ಸ್ನೇಹ ಕೈಕೊಂಡವನೂ ಇವರೆಲ್ಲರು ಮೂರ್ಖರು ಹೆರವರ ವಿಶ್ವಾಸ ಕಾಯ್ದುಕೊಳ್ಳದೆ ಹಾಸ್ಯ–ವಿನೋದಗಳನ್ನು ಮಾಡುವವನೂ, ಮಿತಿಮೀರಿದ ಜೂದುಗಾರನೂ, ಕೃತಿಯಿಲ್ಲದೆ ಬರಿಯ ಮಾತು ಬಳಿಸುವವನೂ ಮಾತಾಡುವ ಸಮಯವೊದಗಿದಾಗ ಮೌನತ್ವ ಧರಿಸಿದವನೂ ಇವರೆಲ್ಲರೂ ಮೂರ್ಖರು ಐಶ್ವರ್ಯ ಹಾಗು ವಿದ್ಯೆಗಳಲ್ಲಿ ಒಂದೂ ಇಲ್ಲದೆ ಮನ್ನಣೆಯ ಸ್ಥಾನದಲ್ಲಿ ಅಲಂಕೃತನಾದವನೂ, ದಾಯಾದಿಗಳಲ್ಲಿ ವಿಶ್ವಾಸವುಳ್ಳವನೂ, ಕಳ್ಳನಿಗೆ ನಿಜವೃತ್ತಿ ತಿಳಿಸುವವನೂ, ಕಂಡ ಪದಾರ್ಥಗಳನ್ನು ಆಶಿಸಿ ಬೇಡುವವನೂ, ಸಿಟ್ಟಿನಲ್ಲಿ ತನ್ನ ಅಕಲ್ಯಾಣವನ್ನು ಮಾಡಿಕೊಳ್ಳುವವನೂ, ಬೆಳಿ ಬೆಳಿಸಿ ವಾಗ್ಜಾಲವನ್ನು ಹರಡುವವವನೂ ಪೇಯ ಪದಾರ್ಥಗಳನ್ನು ಎಡಕೈಯಿಂದ ಕುಡಿಯುವವನೂ ಇವರೆಲ್ಲ ಮೂರ್ಖರು.

ಗೌರವಸ್ಥರೊಡನೆ ಮಾತ್ಸರ್ಯ ತಾಳುವವನು, ದುರ್ಮಿಳ ವಸ್ತುವಿಗಾಗಿ ಆಶಿಸುವವನು, ಮನೆ ಮನೆಯಲ್ಲಿಯೇ ತುಡುಗು ಮಾಡುವವನು

ಜಗದೀಶನನ್ನು ತಿಳಿಯದೆ ಮಾನವನೊಬ್ಬನಲ್ಲಿ ದೇವತ್ವ

ವನ್ನೊಪ್ಪುವವನು ವ್ಯರ್ಥವಾಗಿ ಆಯುಷ್ಯವನ್ನು ನೂಕುವವನು, ದುಃಖಮಯ ಸಂಸಾರದ ಗಾಢದಿಂದ ಜೀವನದಲ್ಲಿ ಮಿಥ್ಯತ್ವವನ್ನೆಣಿಸುವವನು, ಗೆಳೆಯನ ನುಡಿಗಳನ್ನು ಅನಾದರಿಸುವವನು, ಕ್ಷುದ್ರ ಅಪರಾಧಕ್ಕೆ ದಯೆ ದೋರದವನು, ಯಾವಾಗಲೂ ಕತ್ತಿಯನ್ನು ಹಿರಿದುಕೊಂಡಿರುವವನು, ಪರರಿಗೆ ವಿಶ್ವಾಸಘಾತ ಮಾಡುವವನು, ಇವರೆಲ್ಲರು ಮೂರ್ಖರು, ಶ್ರೇಷ್ಠರಾದವರ ಮನಕ್ಕೆ ಹೇಯನಾದವನೂ, ಸಭೆಯಿಂದ ತಿರಸ್ಕೃತನಾದವನೂ, ಪುನಃ ಪುನ ತನ್ನ ವೃತ್ತಿಯನ್ನು ಬದಲಾಯಿಸುವವನೂ ಇವರೆಲ್ಲರೂ ಮೂರ್ಖರು ಬಹು ಕಾಲದಿಂದ ಸೇವೆ ಮಾಡಿದ ಸೇವಕನನ್ನು ಬಿಟ್ಟು ಬೇರೊಬ್ಬನನ್ನು ನೇಮಿಸಿಕೊಳ್ಳುವವನೂ, ಸಭೆಯ ಅಧಿಪತಿಯಿಲ್ಲದೆ ಸಭೆಗೂಡಿಸುವವನೂ ಮೂರ್ಖರು ಅನ್ಯಾಯದಿಂದ ಸಂಪತ್ತು ಸಂಗ್ರಹಿಸಿ ಧರ್ಮ-ನ್ಯಾಯ-ನೀತಿಗಳನ್ನು ಬಿಟ್ಟು ನಡೆಯುವವನೂ ತನ್ನ ಸಂಗಡ ಇರುವ ಸೇವಕನನ್ನು ಕೆಲಸದಿಂದ ದೂರ ಮಾಡುವವನೂ ಮೂರ್ಖರು ಮನೆಯಲ್ಲಿ ಚೆಲುವೆಯಾದ ಹೆಂಡತಿ ಇರಲು ಯಾವಾಗಲೂ ಪರಸ್ತ್ರೀಯಳ ನಾದಿನಲ್ಲಿರುವವನೂ, ಬಹು ಜನರ ಎಂಜಲವನ್ನು ತಿನ್ನುವವನೂ, ತನ್ನ ದ್ರವ್ಯವನ್ನು ಅನ್ಯರ ಕೈಗಿತ್ತು ಹೆರವರ ಬದುಕಿಗೆ ಆಸೆ ಮಾಡುವವನೂ, ನೀಚರೊಡನೆ ಕೊಡಕೊಂಬುವ ವ್ಯವಹಾರ ಮಾಡುವವನೂ, ಇವರು ಮೂರ್ಖರು

ಅತಿಥಿಗಳ ಕುಲ-ಶೀಲ - ವಿದ್ಯೆಗಳನ್ನು ಪರೀಕ್ಷಿಸುವವನೂ, ಸುಧಾರಣೆಯಿಲ್ಲದ ಊರಲ್ಲಿ ಇರುವವನೂ ಯಾವಾಗಲೂ ಒಂದಿಲ್ಲೊಂದು ಚಿಂತೆಯನ್ನು ತಂದುಕೊಂಡು ಕುದಿಯುವವನೂ ಇವರೆಲ್ಲರು ಮೂರ್ಖರು ಇಬ್ಬರು ಮಾತನಾಡುತ್ತಿರುವಾಗ ಅಲ್ಲಿಗೆ ಹೋಗುವವನೂ, ತನ್ನ ಎರಡೂ ಕೈಗಳಿಂದ ತಲೆ ತುರಿಸಿಕೊಳ್ಳುವವನೂ, ನೀರಲ್ಲಿ ಗುಳುಗುಳಿಸಿ ಉಗುಳುವವನೂ, ಕಾಲಿನಿಂದ ಕಾಲನ್ನು ತುರಿಸಿಕೊಳ್ಳುವವನೂ, ಹೀನ ಕುಲದವರ ಸೇವಕತ್ವವನ್ನು ವಹಿಸುವವನೂ ಇವರೆಲ್ಲರೂ ಮೂರ್ಖರು. ಸತಿ-ಸುತರಿಗೆ ಸಲಿಗೆಯನ್ನು ಕೊಡುವವನು, ದೆವ್ವ ಬಡೆದವರ ಹತ್ತಿರ ಕುಳಿತುಕೊಳ್ಳುವವನು, ನಾಯಿಯನ್ನು ಬಂಧಿಸದೆ ಸಾಕುವವನು, ಪರಸ್ತ್ರೀಯರೊಡನೆ ಜಗಳಾಡುವವನು, ಮೂಕ ಪ್ರಾಣಿಗಳ ವಧೆ ಮಾಡುವವನು,

ಪುರುಷನ ಗಳಿತನ ಮಾಡುವವನು ಇವರೂ ಮೂರ್ಖರು ಇಬ್ಬರ ಕಲಿ ಹವನ್ನು ಶಾಂತಗೊಳಿಸದೆ ಕೌತುಕದಿಂದ ನಿರೀಕ್ಷಿಸುತ್ತ ನಿಲ್ಲುವ, ಬಿಟ್ಟ ವಿದ್ದುದನ್ನು ಸಟೆಯನ್ನಾಗಿ ಪರಿವರ್ತಿಸಿದ್ದನ್ನು ಸಹಿಸುವ, ಮಾನವಳಾ ಮೂರ್ಖರು ಸಂಪತ್ತು ಪ್ರಾಪ್ತವಾಗಲು ತನ್ನ ಪೂರ್ವದ ಸ್ಥಿತಿಯನ್ನು ಮರೆತು ಬಿಡುವವನೂ, ದೇವತ್ವ, ಬ್ರಾಹ್ಮಣತ್ವವನ್ನು ಹೀಯಾಳಿಸಿ ಅಧಿಕಾರ ನಡಿಸುವವನೂ, ತನ್ನ ಕಾರ್ಯ ಸಾಧಿಸಿಕೊಳ್ಳುವವರೆಗೆ ವಿನಯ ದಿಂದ ವರ್ತಿಸುವವನೂ, ಪ್ರತ್ಯುಪಕಾರದ ಸಮಯವನ್ನು ಕಳೆದುಕೊಳ್ಳು ವವನೂ ಲೇಖನದಲ್ಲಿಯ ಅಕ್ಷರ-ಶಬ್ದಗಳನ್ನು ಬುದ್ಧಿಪೂರ್ವಕವಾಗಿ ಬಿಟ್ಟು ಅಥವಾ ಹೆಚ್ಚಿಗೆ ಸೇರಿಸಿ ಓದುವವನೂ, ಗ್ರಂಥ ಪುಸ್ತಕಗಳನ್ನು ಕಾಯ್ದಿ ಟ್ಟುಕೊಳ್ಳದವನೂ ಇವರೆಲ್ಲರು ಮೂರ್ಖರು ತನ್ನ ಬಳಿಯಲ್ಲಿಯ ಗ್ರಂಥ–ಪುಸ್ತಕಗಳನ್ನು ಓದುವ ಹಂಬಲವುಳ್ಳವರಿಗೆ ಓದಲಿಕ್ಕೆ ಕೊಡದೆ ಗಂಟು ಕಟ್ಟಿ ಇಡುವವನು ಮೂರ್ಖನು

ಇವೆಲ್ಲವು ಮೂರ್ಖತ್ವದ ಲಕ್ಷಣಗಳು ಇವನ್ನು ಚಿತ್ತಗೊಟ್ಟು ಶ್ರವಣ ಮಾಡುವದರಿಂದ ಮಾನವನು ತನ್ನ ವೃತ್ತಿಯನ್ನು ಸುಧಾರಿಸಿ ಕೊಂಡು ಚತುರನಾಗುವನು ಮೂರ್ಖ ಲಕ್ಷಣಗಳು ಇನ್ನೂ ಹಲವು ಉಂಟು. ಆದರೆ ಕೇವಲ ಮಾನವನು ಅವನ್ನು ದೂರೀಕರಿಸಲಿ ಎಂಬ ಉದ್ದೇಶದಿಂದ ಇವಿಷ್ಟನ್ನೇ ಇಲ್ಲಿ ಹೇಳಿದೆ ಇನ್ನು ಉತ್ತಮ ಲಕ್ಷಣ ಗಳನ್ನು ಕುರಿತು ಮುಂದಿನ ಸಮಾಸದಲ್ಲಿ ವಿಶದಪಡಿಸಿದೆ

ಈ ಪ್ರಕಾರ ಶ್ರೀ ದಾಸಬೋಧೆ ಎಂಬ ಗ್ರಂಥದಲ್ಲಿ ಗುರುಶಿಷ್ಯ ಸಂವಾದ ರೂಪದಲ್ಲಿ ಹೇಳಿದ 'ಮೂರ್ಖಲಕ್ಷಣ' ಎಂಬ ಹೆಸರಿನ ಮೊದಲನೆಯ ಸಮಾಸವು ಇಲ್ಲಿಗೆ ಮುಗಿದುದು

ಶ್ರೀ ರಾಮ ॥ ೩ ಉತ್ತಮ ಲಕ್ಷಣ ॥

ಮಾರ್ಗವನ್ನು ವಿಚಾರಿಸದೆ ಗಮನಿಸಬಾರದು ಹಣ್ಣಿನ ಬಗೆಯ ನ್ನರಿಯದೆ ತಿನ್ನಬಾರದು ಹಾದಿಯಲ್ಲಿ ಬಿದ್ದ ಹೆರವರ ಪದಾರ್ಥ ವಿಚಾರ ವಿಲ್ಲದೆ ಒಮ್ಮೆಲೇ ತೆಗೆದು ಕೊಳ್ಳಬಾರದು ಪರರೊಡನೆ ವಾದಿಸಬಾ ರದು ವಂಚಕತನವು ಇರಕೂಡದು ಕುಲಹೀನ ಸ್ತ್ರೀಯಳನ್ನು ಶುದ್ಧೀ ಕರಿಸದೆ ವರಿಸಬಾರದು ವಿಚಾರವಿಲ್ಲದೆ ನುಡಿಯಬಾರದು. ಎಚ್ಚರಿಕೆಇಲ್ಲದೆ ನಡೆಯಬಾರದು ಏನೊಂದನ್ನು ಅದಕ್ಕೆ ತಕ್ಕಷ್ಟಕ್ಕಿಂತ ಹೆಚ್ಚು ಪ್ರಿಯ

ತ್ತಿಸಬಾರದು ಪ್ರೀತಿಯಿಲ್ಲದೆ ಕೋಪಿಸಬಾರದು ಕಳ್ಳನನ್ನು ಹಾದಿ ಕೇಳ ಬಾರದು ಇರುಳು ಒಮ್ಮೆಲೇ ಮಾರ್ಗ ಕ್ರಮಿಸಕೂಡದು. ಜನರಲ್ಲಿ ಆರ್ಜವ ವೃತ್ತಿಯನ್ನು ಕಾಯ್ದುಕೊಳ್ಳಬೇಕು ಅನ್ಯಾಯದ ಗಳಿಕೆ ಟೇಲ, ಸತತವೂ ಪುಣ್ಯ ಮಾರ್ಗ ಬಿಡಬಾರದು ಅನ್ಯರ ನಿಂದೆಗೂ ದ್ವೇಷ ಕ್ಕೂ ಆಸ್ಪದ ವಿರಕೂಡದು ಕೆಟ್ಟವರ ಗೆಳೆತನ ಬೇಡ, ಒತ್ತಾಯ ಬಲ್ಮೆ ಗಳಿಂದ ಪರರ ಸ್ತ್ರೀ-ವಿತ್ತಗಳನ್ನು ಅಪಹರಿಸಕೂಡದು, ಮಾತುಗಾರನನ್ನು ಮೂದಲಿಸಬಾರದು, ವಿದ್ಯಾಭ್ಯಾಸ ಮಾಡುವದನ್ನು ಬಿಡಬಾರದು

ಬಾಯ್ಬಡಕರೊಡನೆ ಜಗಳಾಡಬೇಡ, ವಾದಿಗೆ ಪ್ರತಿ ವಾದಿಸಬೇಡ, ಮನಸ್ಸಿನಿಂದ ಒಳ್ಳೆಯವರ ಸಂಗ ಬಿಡಬಾರದು, ಬಹಳ ಕೋಪಿಷ್ಟನಾಗ ಬಾರದು, ಹಿತವಂತರ ಮನಸು ನೋಯಿಸಬಾರದು, ಅಧ್ಯಯನಕ್ಕಾಗಿ ಬೇಸರಿಯಕೂಡದು, ಮಾತು ಮಾತಿಗೆ ಸಿಟ್ಟಿಗೇಳಬಾರದು, ಜೊಳ್ಳು ಪೌರುಷ ತೋರಿಸಬಾರದು, ಕರ್ತವ್ಯ ಮಾಡದೆ ತನ್ನ ಶೂರತನವನ್ನು ಹೇಳಿಕೊಳ್ಳಬಾರದು, ಮಾತಾಡಿದ ಮಾತುಗಳನ್ನು ಮರೆಯಬಾರದು, ಹೊತ್ತು ಬಂದಾಗ ಅಂಜರಿಯಕೂಡದು ಮಾಡುವದನ್ನು ಮಾಡಿ ಮುಂದ ಡಿಯಿಡತಕ್ಕದ್ದು, ಸೋಮಾರಿತನದಲ್ಲಿ ಸುಖವನ್ನೆಣಿಸಬಾರದು, ಮನ ಸ್ವೇಚ್ಛೆಯಾಗಿ ವರ್ತಿಸಕೂಡದು, ಯಾವದೊಂದು ಕೆಲಸವನ್ನು ವಿಚಾರ ವಿಲ್ಲದೆ ಕೈಕೊಳ್ಳಬಾರದು, ಶರೀರ ಸುಖಕ್ಕೆ ಮೆಚ್ಚಬಾರದು, ಪ್ರಯತ್ನ ದಿಂದ ಪೌರುಷವನ್ನು ತಿಳಿಯಬೇಕು ಯಾವಾಗಲೂ ಶ್ರಮ ಸಹಿಷ್ಣು ವಾಗಿರತಕ್ಕದ್ದು, ನಾಲ್ವರ್ಲ್ಲಿ ಕುಳಿತಾಗ ನಾಚಿಕೊಳ್ಳಬಾರದು, ಹುರುಳಿ ಲ್ಲದ ಮಾತುಗಳನ್ನಾಡಬಾರದು ಪಂಥ ಜಿದ್ದು ಹಾಕಬಾರದು, ಬಹಳ ಚಿಂತೆಗೆ ಆಸ್ಪದಕೊಡಕೂಡದು, ಏಕಾಕಿಯಾಗಿರಕೂಡದು, ಪಾಪ ದೃಷ್ಟಿ ಯಿಂದ ಪರಸ್ತ್ರೀಯರನ್ನು ನೋಡಬಾರದು

ಇನ್ನೊಬ್ಬರಿಂದ ಉಪಕಾರ ಬಯಸಬೇಡ, ಒಂದು ವೇಳೆ ಉಪಕೃತನಾದರೆ ಪ್ರತ್ಯುಪಕಾರ ಮಾಡದಿರಬೇಡ. ನಂಬಿದವರಲ್ಲಿ ಮೋಸತನ ಬೇಡ. ಸ್ವಚ್ಛತೆಗೆ ಯಾವಾಗಲೂ ಮೆಚ್ಚಬೇಕು ಹೊಲ ಸಾದ ಅರಿವೆ ಧರಿಸಬಾರದು, ಎಲ್ಲಿಯಾದರೂ ಹೋಗುವವನನ್ನು ಎಲ್ಲಿಗೆ ಎಂದು ಕೇಳಬಾರದು ಸಮಾಜವನ್ನು ಬಿಡಕೂಡದು ಇನ್ನೊಬ್ಬರ

ಅಧೀನನಾಗಬಾರದು, ತನ್ನ ಭಾರವನ್ನು ಇನ್ನೊಬ್ಬರ ಮೇಲೆ ಚೆಲ್ಲ ಕೂಡದು ಕಾಗದ ಪತ್ರಗಳಿಲ್ಲದೆ ಕೊಡಕೊಳ್ಳುವ ವ್ಯವಹಾರ ಮಾಡ ಬೇಡ, ನೀಚರಲ್ಲಿ ಸಾಲ ತೆಗೆಯಬೇಡ, ಸಾಕ್ಷಿದಾರರಿಲ್ಲದೆ ಕಚೇರಿಯ ಕಟ್ಟೆಗಳನ್ನೇರಬೇಡ,

ಸತ್ಪಕ್ಷದ ವಿರುದ್ಧ ನಿಲ್ಲಬೇಡ, ರಾಜದ್ವಾರದಲ್ಲಿ ಎಮರಾಳಿಯಾಗ ಬೇಡ ಸುಳ್ಳನ್ನು ಸಾಧಿಸಬೇಡ, ನಿಜವಾದ ಪ್ರೀತಿಯಿಲ್ಲದೆ, ಮಾತಾಡ ಬೇಡ, ಅಮಂಗಲತನ ಮಾಡಬೇಡ ಅನ್ಯಾಯವಿಲ್ಲದವರಿಗೆ ದೋಷ ವಿಡಬೇಡ ನೀತಿ ಮಾರ್ಗದಿಂದ ನಡೆ, ಕೂಳಬಕ್ಕನಾಗಬೇಡ, ನಿದ್ದೆಗೆ ಬಹಳ ಮೆಚ್ಚಬೇಡ ನೀಚರ ಬಳಿಯಲ್ಲಿ ಬಹಳ ಹೊತ್ತುಗಳೆಯಬೇಡ ಸುಳ್ಳು ಸಾಕ್ಷಿ ಹೇಳಬೇಡ, ನಿನ್ನ ಕೀರ್ತಿಯನ್ನು ನೀನೇ ಹೊಗಳಿ ಕೊಳ್ಳಬೇಡ, ನಿನ್ನಷ್ಟಕ್ಕೆ ನೀನೇ ಮಾತಾಡಿ ನಗಬೇಡ

ಹೊಗೆಯನ್ನು ಸೇವನೆ ಮಾಡಬೇಡ ಹುಚ್ಚನಂತೆ ದ್ರವ್ಯವನ್ನು ನಂಬಬೇಡ, ಗೆಳೆಯರಲ್ಲಿ ವಿಶೇಷ ರಸಕಸಿ ಮಾಡಬೇಡ, ಕೆಲಸವಿಲ್ಲದೆ ಒತ್ತಟ್ಟಿಗೆ ನಿಲ್ಲಬೇಡ, ಅನ್ಯರಿಂದ ನಿನಗೆ ದೊರೆತ ಅಯೋಗ್ಯ ಉತ್ತ ರಕ್ಕೆ ಒಪ್ಪಬೇಡ, ಹಿರಿಯರುಂಬುವ ಅನ್ನವನ್ನು ಸೇವಿಸಬೇಡ ಕೆಟ್ಟ ಬೈಗುಳಗಳನ್ನುಚ್ಚರಿಸಬೇಡ, ಇನ್ನೊಬ್ಬನನ್ನು ಕಂಡು ಸುಮ್ಮ ಸುಮ್ಮನೆ ನಗಬೇಡ, ಕುಲೀನರ ನ್ಯೂನತೆಯನ್ನು ಮನಸಿನಲ್ಲಿ ತರಬೇಡ, ಕಂಡ ಪದಾರ್ಥಗಳನ್ನು ಕದಿಯಬಾರದು ಬಹು ಜೀನತನವಿರಬಾರದು ಜೀವ ನ್ಮಿತ್ರರೊಡನೆ ಎಂದೂ ವಾದಿಸಬಾರದು ಇನ್ನೊಬ್ಬರ ನಾಶ ಮಾಡಬಾ ರದು ಕೊಟ ಸಾಕ್ಷ್ಯವನ್ನು ನುಡಿಯಬಾರದು ಎಂದೂ ಅಪ್ರಾಮಾಣಿಕ ವರ್ತನ ವಿರಕೂಡದು- ತನಗ ಸಂಬಂಧವಿಲ್ಲದ ಚಾಡಿಖೋರರನ್ನೂ ತುಡುಗರನ್ನೂ ನಿಯಂತ್ರಿಸಲು ಹೋಗ ಕೂಡದು, ಅನ್ಯರ ಮನೆಯನ್ನು ಕೆಲಸವಿಲ್ಲದೆ ಪ್ರವೇಶಿಸಕೂಡದು ಇನ್ನೊಬ್ಬನ ಕುಂದು ಕೊರತೆಗಳನ್ನೆತ್ತಿ ಮಾತಾಡಬಾರದು ಒದಗಿದ ಒಳ್ಳೇ ಪ್ರಸಂಗವನ್ನು ತಪ್ಪಿಸಕೂಡದು ಸತ್ವಗುಣಬಿಡಕೂಡದು, ಶರಣುಬಂದ ವೈರಿಯನ್ನು ದಂಡಿಸಬಾರದು ಸ್ವಲ್ಪ ಬದಕನ್ನು ಮುಚ್ಚಿಡಬಾರದು, ದೇವ ಭಕ್ತಿ ಕೈಕೊಳ್ಳುವಲ್ಲಿ ನಾಚಿಕೆ ಪಡಬಾರದು ಒಳ್ಳೆಯವರೊಡನೆ ಮರ್ಯಾದೆಗೆ ತಕ್ಕಂತೆ ನಡೆಯ

ರಿಸುವದು ಇಷ್ಟೇ ಅವಲಕ್ಷಣಗಳಲ್ಲದೆ ವಂದ ಬದ್ಧಿಯಾಗಿ ಮಾತಿಗೆ ಮಾತು ಒಳಿಸುವದು, ದೈನ್ಯತ ತೋರಿ ಅನ್ಯರಲ್ಲಿ ಒಡಕನ್ನುಂಟು ಮಾಡುವದು, ಕ್ಷುದ್ರಸ್ವರೂಪ ಹೊಂದಿ ನೀಚನುಡಿಗಳಿಂದ ಉಪದ್ರವಕೊಡು ವದು ಬಿರು ನುಡಿಗಳನ್ನಾಡುವದು, ಕಿವಿಕೊರೆಯುವಂತೆ ಮಾತಾಡುವದು, ಮೋಸದ ಮಾತು, ಅನುಮಾನಯುಕ್ತ ಮಾತು, ದುಃಖಾನ್ವಿತ ವಚನ ಅತಿ ವೇಗದಿಂದ ಮಾತಾಡುವ ಮಾತು, ಕ್ರೂರ ನುಡಿ, ನೈಷ್ಠುರ್ಯಯುಕ್ತ ಮಾತು, ಪಾಪಯುಕ್ತ ವಾಕ್ಯ, ಅಪೂರ್ಣ ಹಾಗು ಚಾಡಿಯ ನುಡಿಗಳು, ಅಮಂಗಲ ವಾಕ್ಯಗಳು, ಅಸ್ಥಿರ ಶಬ್ದಗಳು, ವೈರತ್ವದ, ಅಸತ್ಯದ ಹಾಗು ಹುರುಳಿಲ್ಲದ ಈ ಎಲ್ಲ ಮಾತುಗಳು ಧಿಕ್ಕರಿಸಬಹುದಾದವುಗಳು ಮೋಸ ಗಾರ, ನೀಚ, ಸ್ವಾರ್ಥಸಾಧಕ, ಕ್ಷುದ್ರ, ವೈಗಳ್ಳ, ದುರಾಚಾರಿ, ಸಂತಾಪಿ ಅನ್ಯಾಯದಿಂದ ಸಂಪತ್ತು ಪಡೆದವನು, ಅನ್ಯರ ಬಗೆಗೆ ಕೂಗೆಬ್ಬಿಸುವವನು ಸಂತಪ್ತನು, ತಮೋಗುಣಿಯು, ವಿಚಾರ ರಹಿತನು, ಪಾಪಿಯು, ನರರನ್ನು ಹಾಳು ಮಾಡುವವನು, ಮಲರೋಗಿಯು, ಶರೀರಕ್ಕೆ ಭೂತ ಬಾಧೆಯಾದವನು, ಆತ್ಮನಾಶಕ, ಸ್ತ್ರೀಘಾತುಕ, ಗೋವಧೆಗೈವ ಕಟುಕ, ಬ್ರಾಹ್ಮಣಹಿಂಸ್ರಕ, ಮಾತಾ-ಪಿತೃಗಳ ಹತ ಮಾಡುವ ಪಾಪಿ, ಪತಿತ, ನ್ಯೂನತೆಯುಕ್ತನು, ಅಯೋಗ್ಯನು, ದುಸ್ತರ್ಕನು, ಗೆಳೆಯರಲ್ಲಿ ಹಗೆತನ ಒಳಿಸುವವನು, ನಂಬಿದವರನ್ನು ಘಾತಗೊಳಿಸುವವನು, ಅನ್ಯರು ಮಾಡಿದ ಉಪಕಾರ ಮರೆಯುವವನು ಜಾರನು, ಚೋರನು, ತಾನಾಗಿ ಸಂಕಟಕ್ಕೆ ಗುರಿಯಾದವನು, ವೃಥಾ ಬೊಗಳುವವನು, ಕಾರಣವಿಲ್ಲದೆ ಜಗಳಾಡು ವವನು, ಮದಿರಾಸಕ್ತನು, ಅಧರ್ಮಿಯು, ಸದಾ ಶೋಕಗೈಯುವವನು, ಚಾಡಿಖೋರನು, ಮೂರ್ತಿಭಂಜಕನು, ಇಬ್ಬರ ನ್ಯಾಯದಲ್ಲಿ ಸೇರುವವನು ಕಾರ್ಯಫಲರಹಿತನು, ನಿರುಪಯೋಗನು, ಚೇಷ್ಟೆ ಮಾಡುವವನು, ಆಪ ಬುರುಕನು, ಸ್ವಾರ್ಥಿಯು, ಹಿರಿದಾಸೆಯುಳ್ಳವನು, ಅಪಹಾರಿಯು ಶಠನು, ದಂಭನು, ಮೋಸಗಾರನು, ಮನ ಬಂದಂತೆ ವರ್ತಿಸುವವನು, ಜಗಳ ಗಂಟನು, ವಾಖಂಡಿಯು, ತುಡುಗನು, ಕಳ್ಳನು, ಗುಮ್ಮನಗುಸುಕನು, ಬಡಬಡಿಸುವವನು, ಉದ್ಧಟನು, ವಿಷಯವಿಕಾರಿಯು, ಭ್ರಷ್ಟನು, ನೀಚ ಬುದ್ಧಿಯುಳ್ಳವನು, ಹಾದಿಬಡಿಕನು, ಸುಲಿಗೆಗಾರನು, ಪರನಿಂದೆ ಮಾಡು

ವವನು, ಪ್ರಾಣಹಾರಕನು, ಕಪಟ ಸ್ವರೂಪನು, ಮಾಟದ ವಿದ್ಯೆಯಲ್ಲಿ ಬಲ್ಲಿದನು ಇವರಲ್ಲದೆ

ಸಂಶಯಯುತನು, ನಿರ್ಲಜ್ಜನು, ಕಲಹಕಾರಿಯು, ಟೊಣಪನು, ಪ್ರಸಂಗತಪ್ಪಿಸುವವನು, ಧೈರ್ಯವಿಲ್ಲದವನು, ಆಚಾರವಿಹೀನನು, ದೇಹ ವಿಕೃತನು, ಕಿವುಡನು, ವಿದ್ಯೆ ವೈಭವವಿಲ್ಲದವನು, ಜಾತಿಹೀನನು ಬಲಹೀನನು, ದೈವಗೇಡಿಯು, ತಿರುಕನು, ಕಲಾರಹಿತನು, ಧರ್ಮಾಚರಣೆಯಿಲ್ಲದವನು ಸಂಸ್ಕಾರ ರಹಿತನು, ಅವಲಕ್ಷಣಿಯು, ಕುರೂಪಿಯು, ಊನನು, ಬುದ್ಧಿ ಯುಕ್ತಿಗಳಿಲ್ಲದವನು, ಆಚಾರ-ವಿಚಾರಶೂನ್ಯನು, ವಿವೇಕ ಕ್ರಿಯಾ ರಹಿತನು, ಸಂಶಯಾತ್ಮಕನು, ಭಕ್ತಿ ವಿಶ್ವಾಸ ಭಾವನೆಯಿಲ್ಲದವನು ಜ್ಞಾನ-ವೈರಾಗ್ಯ–ಶಾಂತಿ–ಕ್ಷಮೆಗಳಿಲ್ಲದ ಹೀನನು, ಪ್ರಸಂಗಾವಧಾನವಿಲ್ಲದವನು, ಪ್ರಯತ್ನವಿಲ್ಲದವನು, ಅಭ್ಯಾಸ ತಿಳಿಯದವನು, ಗೆಳೆತನ ಆರ್ಜವ ವೃತ್ತಿಗಳನ್ನರಿಯದವನು, ದುರ್ಭಾಗ್ಯನು, ಏನನ್ನೂ ಅರಿಯುದವನು ಇವರೆಲ್ಲರೂ ಕುವಿದ್ಯೆಯ ಈ ಲಕ್ಷಣಗಳಿಂದ ಕೂಡಿದವರು

ಇಂಥ ಅನೇಕ ತರಹದ ವಿಕಾರಗಳು ಕುಲಕ್ಷಣದ ನಿಧಿಯಾಗಿರುವವು ಅವನ್ನು ತ್ಯಾಗಮಾಡಿ ವೃತ್ತಿಯನ್ನು ಸುಧಾರಿಸಕೊಳ್ಳತಕ್ಕದ್ದು ಇದರಲ್ಲಿ ಅಭಿಮಾನವೆಣಿಸತಕ್ಕದ್ದಲ್ಲ

|| ಶ್ರೀ ರಾಮ || ೪. ಭಕ್ತಿ ನಿರೂಪಣ || ಈ ನರದೇಹವು ಹಲವು ಜನ್ಮಗಳಲ್ಲಿ ಕೂಡಿ ಬಿದ್ದ ಪುಣ್ಯ ಕರ್ಮಗಳ ಫಲವಾಗಿರುವದು ಅದಕ್ಕೆ ಸನ್ಮಾರ್ಗ ನಡೆವಳಿಯು ಜೋಡಾದರೆ ಅದೊಂದು ಮಹದ್ಭಾಗ್ಯವೆಂದು ತಿಳಿಯಬೇಕು ಮಾನವ ಶರೀರಧಾರಿಗಳಲ್ಲಿ ಬ್ರಾಹ್ಮಣರು ಹೆಚ್ಚು ಪುಣ್ಯವಂತರು ಅವರಿಗೂ ಸ್ನಾನ-ಸಂಧ್ಯೆಗಳು, ಸದ್ವಾಸನೆಯು, ದೇವಭಕ್ತಿಯು ಇವು ಸಂಗತವಾದರೆ ಹೆಚ್ಚಿನ ಪುಣ್ಯವು ಭಗವದ್ಭಕ್ತಿಯು ಶ್ರೇಷ್ಠವಾದುದು ಅದಕ್ಕೂ ಸತ್ಸಹವಾಸದ ಮಿಲನವಾಗಲು ಆ ದೇಹಧಾರಿಯ ಆಯುಷ್ಯವು ಪರಮಸಾರ್ಥಕವೂ ಲಾಭವೂ ಎಂದು ಅರಿಯಬೇಕು, ದೈವೀ ವಿಷಯದಲ್ಲಿ ಸದ್ಭಾವನೆಯ ಪ್ರೇಮ-ಪ್ರೀತಿಗಳು ಅಂತಸ್ಥಿತವಾಗಿದ್ದರೆ ಮತ್ತು ಅದಕ್ಕೆ ಭಕ್ತ ಸಮಾಗಮದ ಸಂಗತವಾದರೆ ಹರಿಕಥೆಯ ಮಹೋತ್ಸವಗಳಂಥ ಒಳ್ಳೇ ಪ್ರಸಂಗಗಳು ಅನಾಯಾಸ ಲಭಿಸುವವು ನರ

ದೇಹ ಪ್ರಾಪ್ತವಾದ ಮೇಲ ಪರಮ ದುರ್ಲಭವಾದ ಪರಲೋಕಹೊಂದಿದರೆ ಜನ್ಮಸಾರ್ಥಕವಾಗುವದು ವಿಧಾನ ಪೂರ್ವಕ ಬ್ರಹ್ಮಕರ್ಮಗಳೂ, ದಯಾ ದಾನಧರ್ಮಗಳೂ, ಭಗವದ್ಭಜನೆಯೂ ಇವುಗಳನ್ನು ಈ ನರದೇಹದಿಂದಲೇ ನೆರವೇರಿಸಲು ಸುಲಭವಾಗುವದು ನರದೇಹವಿದ್ದಾಗಲೇ ವೈರಾಗ್ಯ ಪಡೆಯಬಹುದು ಅಥವಾ ಭಕ್ತಿ ಮಾರ್ಗವನ್ನನುಸರಿಸಬಹುದು ಇಲ್ಲವೆ ಸಾಧು ಸಂತರ ಸಹವಾಸಿಯಾಗಬಹುದು ಹಲವು ಶಾಸ್ತ್ರಾಧ್ಯಯನವೂ ತೀರ್ಥಾಟನವೂ, ಮಂತ್ರ ಪುರಶ್ಚರಣೆಗಳೂ ಇವುಗಳನ್ನು ಈ ಮಾನವ ದೇಹವಿದ್ದಾಗಲೇ ಮಾಡಿಕೊಳ್ಳಲು ಅನುಕೂಲವಾಗುವದಲ್ಲದೆ ಪಾಪಗಳ ನಿರಸನವಾಗುವದು

ಮತ್ತು ಈ ನರಜನ್ಮದಲ್ಲಿ ಪರೋಪಕಾರ, ಜ್ಞಾನಬೋಧೆ, ಸಾರಾಸಾರ ವಿಚಾರ ಇವನ್ನು ಗಳಿಸಿಕೊಳ್ಳಲು ಬರುವದು ವೇದೋಕ್ತದಂತ ತಮ್ಮ ಅಧಿಕಾರಕ್ಕನುಸರಿಸಿ ಕರ್ಮ, ಉಪಾಸನೆಗಳ ಬಲದಿಂದ ಜ್ಞಾನ ಪಡೆಯಲು ಅನುಕೂಲವಾಗುವದು ಮತ್ತೂ

ನರದೇಹದಲ್ಲಿಯೇ ತ್ರಿಕರಣಪೂರ್ವಕವಾಗಿ ಪತ್ರ-ಪುಷ್ಪ-ಫಲ-ಜಲಗಳಿಂದ ದೇವಪೂಜ ಭಜನೆಗಳನ್ನು ಮಾಡಿ ಸಾರ್ಥಕ ಮಾಡಿಕೊಳ್ಳಬೇಕು ಅಂದರೇ ಜನ್ಮ ಸಾಫಲ್ಯವು ಇಲ್ಲದೆ ಹೋದರೆ ಈ ದೇಹಧಾರಿಯು ಕೇವಲ ಭೂಮಿಗೆ ಭಾರವೆಂದೇ ತಿಳಿಯತಕ್ಕದ್ದು ಮಾನವ ದೇಹವು ಯೋಗ್ಯವಾದದ್ದು ಏನೊಂದು ಸತ್ಕ್ರಿಯೆಯಿಂದ ಆತ್ಮಹಿತ ಸಾಧಿಸಿಕೊಳ್ಳಲು ಬರುವದು ಪರಮಾತ್ಮನಲ್ಲಿ ಲಕ್ಷ್ಯವನ್ನಿರಿಸಿ ಧನ ಸಂಪತ್ತು ದಾನ ಮಾಡಬೇಕು ಇವಾವುಗಳನ್ನು ಕೈಕೊಳ್ಳದ ಮಾನವನು ಜನರಲ್ಲಿ ಮೃತಪ್ರಾಯನೆಂದು ಹೇಳಬಹುದು ಹಾಗು ಅಂಥವನನ್ನು ೯ ತಿಂಗಳ ಹೊತ್ತು ಹಡೆದ ತಾಯಿಯು ವ್ಯರ್ಥ ಕಷ್ಟ ಪಟ್ಟಳೆಂದು ತಿಳಿಯಬಹುದು ಸಂಧ್ಯಾ-ಸ್ನಾನಗಳಿಲ್ಲದ, ಭಜನ ಪೂಜನಗಳನ್ನು ಮಾಡದ ಜಪ-ಧ್ಯಾನವನ್ನೆಸಗದ, ಮಾನಸ ಪೂಜ ಕೈಕೊಳ್ಳದ ಭಕ್ತಿ, ಪ್ರೇಮ ನಿಷ್ಠೆರಹಿತವಾದ, ವ್ರತಗಳನ್ನೆಂದಿಗೂ ಅನುಸರಿಸದ, ದೇವಧರ್ಮಗಳಲ್ಲಿ ವಿಭಾವನೆಯುಳ್ಳ, ಅತಿಥಿ ಅಭ್ಯಾಗತರನ್ನು ಸತ್ಕರಿಸಿದ ಸದ್ಬುದ್ಧಿಯಿಲ್ಲದ, ಸದ್ಗುಣರಹಿತನಾದ, ಹರಿಕಥೆಗಳನ್ನು ಶ್ರವಣ ಮಾಡದ, ಅಧ್ಯಾತ್ಮ ವಿಚಾರ ನಿರೂಪಣೆ

ಯಿಲ್ಲದ, ಸಂತಸಜ್ಜನರ ಸಹವಾಸ ರಹಿತವಾದ, ಶುದ್ಧವಾದ ವೃತ್ತಿಯಿಲ್ಲದ, ಮಾನವರಿಗೆ ಕೈವಲ್ಯ ಪ್ರಾಪ್ತಿಯು ಎಂದೂ ದೊರಕಲಾರದು ಇವರಲ್ಲದೆ-

ನ್ಯಾಯ-ನೀತಿ ವರ್ಜಿತರೂ, ಪುಣ್ಯದ ಉಪಾಯಗಾಣದವರೂ, ಯೋಗ್ಯಾಯೋಗ್ಯ ಕ್ರಿಯೆಗಳನ್ನರಿಯದೆ ಕೈವಲ್ಯಕ್ಕಾಗಿ ಆಶಿಸುವವರೂ, ವಿದ್ಯೆ-ವೈಭವ ರಹಿತರೂ, ಚತುರರಲ್ಲದವರೂ ಕಲಾ-ಕೌಶಲ್ಯ ಹೀನರೂ ಇವರೆಲ್ಲರಿಗೂ ಸರಸ್ವತಿಯ ಕೃಪೆ ದೊರಕದವರಿಗೂ ನರದೇಹ ಉಂಟಾಗಿದ್ದರೂ ಅವರ ಜನ್ಮ ನಿರುಪಯುಕ್ತವು ಮತ್ತು
ಶಾಂತಿ, ಕ್ಷಮೆ, ದೀಕ್ಷೆ, ಮಿತ್ರ, ಇವೆಲ್ಲವು ಇಲ್ಲದವರು, ಶುಭಾಶುಭಗಳನ್ನೆಸದವರು, ಅಪವಿತ್ರರು, ಸ್ವಧರ್ಮ ವಿಮುಖರು, ಆಚಾರಹೀನರು, ಅವಿಚಾರಿಗಳು, ಇಹ ಪರಗಳಲ್ಲಿ ಇಚ್ಛೆಯಿಲ್ಲದವರು, ಕರ್ಮರಹಿತರು, ಉಪಾಸನೆಗೈಯದವರು, ಜ್ಞಾನ ವೈರಾಗ್ಯ ಯೋಗಗಳಿಲ್ಲದವರು, ಧೈರ್ಯವಿಲ್ಲದವರು, ಸಂಸಾರಕ್ಕೆ ಹೇಯವನ್ನೆಣಿಸದವರು, ಔದಾರ್ಯರಲ್ಲದವರು, ಸಮತಾಭಾವರಹಿತರು, ಪ್ರೀತ್ಯಾದರಗಳಿಲ್ಲದವರು, ಸದ್ಗುಣಗಳನ್ನು ಕಂಡು ಸಂತೋಷಬಡದವರು ಪರೋಪಕಾರದ ಸುಖ ಅನುಭವಿಸದವರು, ಅಂತರ್ಯಾಮಿ ದೇವನಲ್ಲಿ ಸ್ವಲ್ಪವೂ ಸಹ ಭಕ್ತಿಯನ್ನಿಡದವರು

ಇಂತು ಈ ವರೆಗೆ ಹೇಳಿದ ಲಕ್ಷಣದ ಜನರು ಜೀವದಿಂದಇದ್ದರೂ ಸತ್ತಂತೆಯೇ ಸರಿ ಅಂಥವರೊಂದಿಗೆ ಪವಿತ್ರರು ಮಾತಾಡಕೂಡದು ದೇವತಾರ್ಜನೆಗಾಗಿ ಪುಣ್ಯಕರ ವಸ್ತು ಉಪಕರಣಗಳನ್ನು ಪೂರೈಸುವವರಿಗೇ ಭಕಿವದ್ಭಕ್ತಿಯು ಪ್ರಾಪ್ತವಾಗುವದು 'ಯಾರು ಹೇಗೆ ಹೇಗೆ ಕ್ರಿಯೆಗಳನ್ನನುಸರಿಸುವರೋ ಅವರು ಆ ಕ್ರಿಯೆಗೆ ತಕ್ಕ ಕರ್ಮಫಲ ಹೊಂದುವರು

ಶ್ರೀ ರಾಮ ॥ ೫ ರಜೋಗುಣಲಕ್ಷಣ ॥ ಈ ಶರೀರವು ಸತ್ವ, ರಜ, ತಮ ಈ ಮೂರು ಗುಣಾತ್ಮಕವಾದುದು ಈ ಗುಣಗಳಲ್ಲಿ ಸತ್ವಗುಣವೇ ಶ್ರೇಷ್ಠ ಈ ಗುಣದಿಂದ ಮಾನವನು ಭಗವದ್ಭಕ್ತಿಯುಳ್ಳವನಾಗುವನು ರಜೋ ಗುಣದಿಂದ ಜನನಮರಣಗಳ ಜಂಜಡವು, ತಮೋ ಗುಣಧಿಂದ ಅಧೋಗತಿಯು ಉಂಟಾಗುವವು ಹೀಗೆ ಭಗವದ್ಭಕ್ತಿಯಿರುವೆನು ಈ ಮೂರು ಗುಣಗಳೇ ಕ್ರಮವಾಗಿ ಶುದ್ಧ, ನಿರ್ಮಲ, ಸಬಲ

ವೆಂದರೆ ಬಾಧಕ ಹೀಗ ಹೇಳಲ್ಪಡುವವು ಇವುಗಳ ಲಕ್ಷಣಗಳು —
ಪರಮಾರ್ಥಸಾಧಕರಲ್ಲಿ ಶುದ್ಧ ಸಾತ್ವಿಕ ವೃತ್ತಿಯು, ಸಾಂಸಾರಿಕ ರಲ್ಲಿ ಈ ಮೂರೂ ಗುಣಗಳು ಈ ಮೂರು ಗುಣಗಳಲ್ಲಿ ಯಾವ ದೊಂದರ ಪ್ರಾಬಲ್ಯವಾಗಲು ಉಳಿದೆರಡು ಹಿಮ್ಮೆಟ್ಟುಪವು ಹೀಗೆ ಈ ಮೂರೂ ಗುಣಗಳಿಂದಲೇ ಜೀವಿತ್ವ ಸಾಗುತ್ತದೆ ಇನ್ನು ರಜೋಗುಣದ ಕರ್ತೃತ್ವವೇನೆಂಬುದನ್ನು ನೋಡೋಣ ರಜೋಗುಣದಿಂದ ಯುಕ್ತನಾದವನ ಸ್ಥಿತಿ ಗತಿಯೆಂತಿರುವದೆಂಬದನ್ನು ಜಾಣತನದಿಂದ ಅವಧರಿಸಬೇಕು ಈ ಗುಣ ವಿಶಿಷ್ಟ ಮಾನವನು 'ನನ್ನ ಮನೆ, ನನ್ನ ಸಂಸಾರ, ನನ್ನ ದೈವ ದಿಂದಲೇ ದೊಡ್ಡಿಸ್ತಿಕೆ ಪಡೆದೆನು' ಈ ಪ್ರಕಾರದ ತನ್ನ ನಿಶ್ಚಿತ ನುಡಿಗಳನ್ನಾಡುವನು ಇಂಥವನಲ್ಲಿಯು ಈ ಗುಣವೇ ರಜೋಗುಣವು. ತಾಯ್ತಂದೆಗಳು, ಮಕ್ಕಳು, ಸೊಸೆಂದಿರು, ಮೊಮ್ಮಕ್ಕಳು ಇವರೆಲ್ಲರ ಬಗೆಗೆ ಚಿಂತೆಯನ್ನು ವಹಿಸುವವನಲ್ಲಿ ಈ ಗುಣವೃತ್ತಿಯಿರುವದು, ರುಚಿಕರವಾದ ತಿಂಡಿ ತಿನಸುಗಳು, ಚೆನ್ನಾಗಿರುವ ಊಟ-ಉಡಿಗೆಗಳು, ಇವೆಲ್ಲವನ್ನು ಈ ವೃತ್ತಿಯುವನು ಬಯಸುವನು ಮತ್ತು ಅನ್ಯರೂ ಸಹ ತನ್ನನ್ನು ಒಲ್ಮೆಸಬೇಕೆಂದು ಆಶಿಸುವನು ಮತ್ತು ದಾನಧರ್ಮ, ಜಪ-ತಪ, ಪಾಪ-ಪುಣ್ಯಗಳ ವಿಚಾರಗಳು ಈ ಗುಣ ವಿಶಿಷ್ಟರಲ್ಲಿ ಇರುವದಿಲ್ಲ. ಅದರಂತೆ, ತೀರ್ಥ, ವ್ರತ, ಅತಿಥಿ-ಅಭ್ಯಾಗತರು, ಆಚಾರತೆ ಇವಾವುಗಳ್ಲಿ ಮನಸು ಸೇರುವದಿಲ್ಲ ಸದಾ ಧನ-ಧಾನ್ಯ ಸಂಗ್ರಹಿಸುವ ಹವ್ಯಾಸವುಳ್ಳವರೂ ದ್ರವ್ಯಾಸಕ್ತರೂ ಲೋಭಿಗಳೂ ರಜೋಗುಣಾನ್ವಿತರು ನಾನು ತರುಣನು, ನಾನು ಚೆಲುವನು, ಬಲ್ಲಿದನೂ ಒಲಾಢ್ಯನೂ ನಾನು ಎಲ್ಲರಲ್ಲಿ ಗೌರವವು ನನಗಿದೆ ಮುಂತಾಗಿ ಮಮಕಾರ-ಅಹಂಕಾರಗಳು ಈ ರಜೋ ಗುಣದವನಲ್ಲಿರುವವು

ನನ್ನ ದೇಶ, ನನ್ನ ಊರು, ನನ್ನ ನನ್ನ ಮನೆ, ಮಂದಿರ ಇತ್ಯಾದಿಯಾಗಿ ಹೇಳಿಕೊಳ್ಳುವವನು ರಜೋಗುಣಿಯು ಅನ್ನಿಗರದೆಲ್ಲ ಹಾಳಾದರೂ ತನ್ನದು ಮಾತ್ರ ಒಳಿತಾಗಿರಬೇಕೆಂಬ ಭಾವನೆಯು ರಜೋಗುಣವು ಮೋಸ ಮಾಡುವದು, ಹೊಟ್ಟೆಕಿಚ್ಚು ತಾಳುವದು, ಒಮ್ಮೊಮ್ಮೆ ತನ್ನ ಶರೀರವನ್ನು ತಿರಸ್ಕರಿಸುವದು ಮತ್ತು ಕಾಮ ವಿಕಾರಯುಕ್ತನಾಗುವದು,

ಇಲ್ಲಿ ರಜೋಗುಣದವನು ಪ್ರವೃತ್ತಿಗಳು ಮಕ್ಕಳ ಮೇಲೆ ಮಮತೆ, ಹೆಂಡತಿಯ ಮೇಲೆ ಪ್ರೀತಿ, ಆವಶ್ಯಕ ವಸ್ತುಗಳ ಮೇಲಿನ ಹಿರಿಯಾಸೆ ಇವೆಲ್ಲವು ರಜೋಗುಣದವನಲ್ಲಿರುವವು ಸ್ನೇಹಿತರ ಬಗೆಗೆ ಮನಸಿನಲ್ಲಿ-ಕೆಲವೊಮ್ಮೆ ತಿರಸ್ಕಾರ ಬುದ್ಧಿಯನ್ನು ತಂದುಕೊಂಡು ತೀವ್ರವೇ ಅದನ್ನು ಮರೆಯುವವನು ರಜೋಗುಣಿಯು ಪ್ರಪಂಚದ ಭಾರವನ್ನು ಸಹಿಸುವದು ಅಸಾಧ್ಯವಾದಾಗ ತನ್ನಲ್ಲಿ ತಳಮಳಿಸುವವನು ರಜೋಗುಣದವನು. ಮತ್ತು ತಾನು ಹಿಂದೆ ಅನುಭವಿಸಿದ ಕಷ್ಟಗಳನ್ನು ನೆನಪಿಗೆ ತಂದುಕೊಂಡು ದುಃಖಿಸುವವನು ಈ ರಜೋಗುಣದವನು ಐಶ್ವರ್ಯವನ್ನು ಕಂಡು ತಾನು ಇನ್ನಿಷ್ಟು ಸಂಪಾದಿಸಬೇಕೆಂಬ ಆಶೆ ಬಡುವವನು ರಜೋಗುಣಿಯು ಮತ್ತು

ತಾನು ಕಂಡದ್ದನ್ನು ಬೇಡುವ ಹಾಗು ಅದು ದೊರಕದೆ ಇದ್ದಲ್ಲಿ ದುಃಖಪಡುವ ಮಾನವರು ರಜೋವೃತ್ತಿಯವರು ಸದಾ ವಿನೋದಿಯು, ಪದಗಳನ್ನು ತಾಳಮೇಳವಾಗಿ ಹಾಡುವ ಗಾಯಕನು, ಈ ವೃತ್ತಿಯವರು ಜನರಾಡುವ ನಿಂದೆಯ ನುಡಿಗಳನ್ನು ಲಕ್ಷಿಸದೆ ವಿವಾದ, ಹಾಸ್ಯ, ವಿನೋದಗಳಲ್ಲಿ ಜಾಣತನ ತೋರಿಸಲು ಬಯಸುವವನಲ್ಲಿ ರಜೋಗುಣವಿರುವದು ಆಲಸ್ಯತನ, ಆಟ ಮುಂತಾದವುಗಳಿಂದ ಮನರಂಜನ, ವಿಷಯೋಪಭೋಗ ಆಶೆ ಇವೆಲ್ಲವೂ ರಜೋಗುಣಿಯಲ್ಲಿ ಸೇರುವವು ಕಲೆಗಾರರು ಪ್ರದರ್ಶಿಸುವ ಹಲವು ಸೋಗುಗಳನ್ನು, ನೃತ್ಯ ನಾಟಕಗಳನ್ನು ಕಂಡು ಮೆಚ್ಚುಗೆ ಕೊಡುವವನು ರಜೋಗುಣ ಪ್ರವರ್ತಕನು ತಾನು ಸಂಪತ್ತಿನ ಮದದಿಂದ ಊರಿನಲ್ಲಿ ಶ್ರೇಷ್ಠತೆ ಪಡೆಯುವ ಆಶೆಯಿಂದ ನೀಚರನ್ನು ಕೂಡಿಕೊಂಡು ಯತ್ನಿಸುವವನು ರಜೋಗುಣದವನು ಜನರು ವಿದ್ಯೆ ಕಲಿಯುವ ಸಾಧನಗಳನ್ನು ಅವಹರಿಸುವವನು, ಪರರ ಕುಂದು ಕೊರತೆಗಳನ್ನೆತ್ತಿ, ತೋರಿಸಲು ಹವಣಿಸುವವನು, ನಿತ್ಯನೇಮಗಳಲ್ಲಿ ಮನಸ್ಸು ಹಾಕದವನು ಇವರೆಲ್ಲರಲ್ಲಿ ರಜೋಗುಣವು ಪ್ರಾಧಾನ್ಯವಾಗಿರುವದು ದೇವತಾ ಕಾರ್ಯ ಕೈಕೊಂಬುವಲ್ಲಿ ನಾಚಿಕೆಗೊಳ್ಳುವವನೂ ಹೊಟ್ಟೆಗಾಗಿ ಕಷ್ಟ ಪಡುವವನೂ ಪ್ರಪಂಚಕ್ಕೆ ತೀರಾ ಹೊಂದಿಕೊಂಡವನೂ ರಜೋಗುಣಿಗಳು

ಮಧುರ ಪಕ್ವಾನ್ನ ಸೇವಿಸುತ್ತ ಆಲಸ್ಯತನದಿಂದ ಬೊಜ್ಜು ಬೆಳೆಯಿಸಿಕೊಂಡು ಅದರ ಪರಿಹಾರಕ್ಕಾಗಿ ಧಾರ್ಮಿಕ ಉಪವಾಸ ಕೈಕೊಳ್ಳುವವನು

ರಜೋಗುಣಿಯು ಶೃಂಗಾರ ವಿಷಯಗಳಲ್ಲಿ ಪ್ರೀತಿ, ಭಕ್ತಿ-ವೈರಾಗ್ಯಗಳಲ್ಲಿ ಅಪ್ರೀತಿ, ಕ್ಷೈಚಳಕ ಚಮತ್ಕಾರ ತೋರಿಸುವಲ್ಲಿ ಪ್ರವೃತ್ತಿ ಇವೆಲ್ಲವು ರಜೋಗುಣಿಗಳಲ್ಲಿ ಕಂಡು ಬರುವವು ಪರಮಾತ್ಮನನ್ನು ತಿಳಿಯದೆ ಎಲ್ಲ ಪದಾರ್ಥಗಳಲ್ಲಿ ಪ್ರೇಮವನ್ನಿಟ್ಟು ಜನ್ಮ ನೂಕುವವನು ರಜೋಗುಣಿಯು ಇಂತು ರಜೋಗುಣಿಗಳ ಧರ್ಮ-ಕರ್ಮಗಳಿರುವವು ಇವುಗಳಲ್ಲಿ ಲೋಭ ವುಳ್ಳವರಿಗೆ ಜನನ ಮರಣಗಳು ಬಿಡುವದಿಲ್ಲ ಪ್ರಪಂಚದಲ್ಲಿ ಇವರು ಸಬಲರು ಕಷ್ಟತಮ ದು ಖಗಳನ್ನು ಅನುಭೋಗಿಸುವರು ಇವನ್ನು ನೀಗಲು ಭಗವದ್ಭಕ್ತಿ ವಿರಕ್ತಿ, ಭಜನ ಪ್ರೀತಿ, ಇವು ಮುಖ್ಯವಾಗಿರು ವವು ಮತ್ತು ತ್ರಿಕರಣಪೂರ್ವಕವಾಗಿ ದೇವಪೂಜ ಮಾಡಿ ಸಾರ್ಥಕ ರಾಗತಕ್ಕದ್ದು

ಕೊನೆ ಮೊದಲಲ್ಲಿ ಒಬ್ಬನೇ ದೇವನೆಂಬದನ್ನರಿತು ಭಗವಂತನಲ್ಲಿ ಪೂರ್ಣ ಭಾವವನ್ನಿರಿಸಿ ವರ್ತಿಸತಕ್ಕದ್ದು ಈ ಪ್ರಕಾರ ಇಲ್ಲಿ ಸಬಲ ರಜೋಗುಣವನ್ನು ಸಂಕ್ಷೇಪವಾಗಿ ಹೇಳಿದೆ ಇದು ಕೇವಲ ಪ್ರಪಂಚ ರೂಪವಾಗಿರುವದು ಇದರಲ್ಲಿಯೂ ಶುದ್ಧ ರಜೋಗುಣವು ಪಾರಮಾ ರ್ಥಿಕವಾಗಿರುವದೆಂಬುದನ್ನು ಸತ್ವಗುಣದ ವಿವರಣೆಯಲ್ಲಿ ಕಾಣಬಹುದು ಆ ಶುದ್ಧ ರಜೋಗುಣವು ಭಜನಕ್ಕೆ ಆಧಾರವಾಗಿದೆ ಇಂತು ರಜೋ ಗುಣದ ವರ್ಣನೆಯಾಯಿತು ಇನ್ನು ಮುಂದೆ ತಮೋಗುಣದ ಬಗೆಗೆ ಮುಂದೆ ಹೇಳಿದೆ

ಶ್ರೀ ರಾಮ || ೬ ತಮೋಗುಣದ ಲಕ್ಷಣ || ಈ ಮೊದಲು ರಜೋ ಗುಣದ ವಿಷಯಕ್ಕೆ ಹೇಳಿದೆವು ಅದರ ಕ್ರಿಯೆಯನ್ನೂ ಲಕ್ಷಣವನ್ನೂ ವಿವರಿ ಸಿದೆವು ಪ್ರಪಂಚದಲ್ಲಿ ದುಃಖದಾಯಕ ಪ್ರಸಂಗಗಳು ಉದ್ಭವಿಸಲು ಆಗ ಬಹಳ ಖೇದ ಉತ್ಪನ್ನವಾಗಿ ಭಯಂಕರ ಸಿಟ್ಟು ಪ್ರಾಪ್ತವಾಗುವದು ಇದೇ ತಮೋಗುಣ ವೃತ್ತಿಯು ಸಿಟ್ಟು ಬಂದ ಮಾನವನು ತಾಯಿ ತಂದೆಗಳನ್ನು ಸಹ ನೋಡುವದಿಲ್ಲ ಅಣ್ಣ ತಮ್ಮಂದಿರು, ಅಕ್ಕತಂಗಿಯರು ಹೆಂಡತಿ, ಇವರೆ ಲ್ಲರನ್ನು ಹೊಡೆಯ ಹೋಗುವನು ಅವನಲ್ಲಿಯ ಈ ವೃತ್ತಿಯೇ ತಮೋಗು ಣವು ಬೇರೊಬ್ಬನ ಪ್ರಾಣ ತೆಗೆದುಕೊಳ್ಳುವದು, ತಾನೇ ತನ್ನ ಪ್ರಾಣ ಕಳೆದುಕೊಳ್ಳುವದು, ಇಂತು ಜೀವನ ನಿಃಕಾರವನ್ನು ಮರೆತು ಕ್ರಿಯೆಮಾಡು

ವದು ತಮೋಗುಣವು ಕೋಪಿಷ್ಠನು ಪಿಶಾಚಿಯಂತಾಗುವನು. ಹಲವು ಹಂಚಿಕೆಗಳನ್ನು ಮಾಡಿದರೂ ಅವನ ತಮೋವೃತ್ತಿ ದೂರಾಗುವದಿಲ್ಲ, ತಾನೇ ಶಸ್ತ್ರವನ್ನು ಪ್ರಯೋಗಿಸಿಕೊಳ್ಳುವದು, ಪರರನ್ನು ಶಸ್ತ್ರದಿಂದ ಹಣಿಯುವದು ಇಂಥ ಸಮಯದಲ್ಲಿ ಉಂಟಾದ ಮನಸ್ಥಿತಿಯು ತಮೋಗುಣವು. ಯುದ್ಧಗಳನ್ನು ನೋಡಬಯಸುವದು, ಯುದ್ಧ ನಡೆದಲ್ಲಿಗೆ ಹೋಗುವದು, ಅಂಥಲ್ಲಿ ಶತ್ರುವಿನ ಹತಮಾಡುವದು ಇವೆಲ್ಲ ತಮೋಗುಣಕ್ಕೆ ಅನ್ವಯಿಸುವವು ತನ್ನ ನಿರ್ಧಾರವನ್ನು ಭ್ರಾಂತಿಯಿಂದ ಬಿಟ್ಟುಬಿಡುವದೂ, ನಿದ್ದೆಗಾಗಿ ಬಹಳ ಆತುರಗೊಳ್ಳುವದೂ ತಮೋಗುಣವು ಹಸಿವೆ ಹೆಚ್ಚಿದಾಗ ಸೀ-ಕಹಿಗಳನ್ನದೆ ಸಿಕ್ಕದ್ದನ್ನು ಭಕ್ಷಿಸುವ ಮೂಢನಲ್ಲಿಯ ವೃತ್ತಿಯು ತಮೋಗುಣವು ತನ್ನ ಅತ್ಯಂತ ಪ್ರೀತಿಯ ಪ್ರಾಣಿಯ ಮರಣದಿಂದ ನೊಂದು ತನ್ನ ಪ್ರಾಣ ನೀಗುವದು ತಮೋಗುಣವು ತನ್ನ ಜೀವಕ್ಕೆ ಬೇಸತ್ತು ಆತ್ಮಹತ್ಯ ಮಾಡಿಕೊಳ್ಳುವದೂ, ತಮೋಗುಣವು ಹುಳು-ಹುಪ್ಪಡಿ, ಇರುವೆ, ಶ್ವಾಪದ ಮುಂತಾದ ಪ್ರಾಣಿಗಳನ್ನು ಕೊಲ್ಲುವ ನಿರ್ದಯರ ಹಾಗು ಕೊಲ್ಲಲು ಹವಣಿಸುವ ಜನರ ವೃತ್ತಿಯು ತಮೋಗುಣವು ಸ್ತ್ರೀಯರನ್ನೂ, ಬಾಲಕರನ್ನೂ, ಹಣದಾಸೆಗಾಗಿ ಬ್ರಾಹ್ಮಣರನ್ನೂ, ಆಕಳುಗಳನ್ನೂ ಕೊಲ್ಲಲು ಬಯಸುವ ವೃತ್ತಿಯು ತಮೋವೃತ್ತಿಯು ಪರರಿಗೆ ವಿಷಪ್ರಯೋಗ ಮಾಡುವದು ಹಾಗು ಅದರಂತೆ ಮನಸಿನಲ್ಲಿ ಇಚ್ಛಿಸುವದು ಅನ್ಯರನ್ನು ಕೊಲ್ಲಲು ಹವಣಿಕೆ ತಂದುಕೊಳ್ಳುವದು ತಮೋಗುಣವು ಮನಸಿನಲ್ಲಿ ಕಪಟವನ್ನಿಟ್ಟುಕೊಂಡು ಅನ್ಯರನ್ನು ತಳಮಳಗೊಳಿಸುವದೂ ಸೊಕ್ಕಿನ ವರ್ತನೆಯಿಂದ ನಡೆಯುವದೂ ಉದ್ಧತನಾಗುವದೂ ತಮೋಗುಣವು ಇಬ್ಬಣಗಳಲ್ಲಿ ಕಲಹವನ್ನೆಬ್ಬಿಸಿ ತನ್ನ ಮನಸಿನ ದ್ವೇಷದ ತನ್ನ ಸೇಡು ತೀರಿಸಿಕೊಳ್ಳಲು ಬಯಸುವ ಮಾನವನಲ್ಲಿ ತಮೋಗುಣವಿರುವದು. ಯುದ್ಧವಾರ್ತೆ ಕೇಳುವ ಕುತೂಹಲವೂ ನೋಡುವ ಬಯಕೆಯೂ ಮಾಡುವ ಉತ್ಸಾಹವೂ 'ಕೊಲ್ಲು ಇಲ್ಲವೆ ಸಾಯಿ' ಎಂಬ ನಿರ್ಣಯಕ್ಕೆ ಬರುವದೂ ತಮೋಗುಣದ ವೃತ್ತಿಗಳು ಭಾವಿಕರಲ್ಲಿಯ ಭಕ್ತಿಗೆ ಆತಂಕವನ್ನುಂಟು ಮಾಡುವದು, ಗುಡಿ ಗುಂಡಾರ ಕೆಡಿಸುವದು, ಫಲ ವೃಕ್ಷಗಳನ್ನು ಕಡಿಸುವದು, ಇವೆಲ್ಲ ತಮೋಗುಣದಿಂದ ಒದಗುವವು ಸತ್ಕರ್ಮಗಳಿಂದ ವಿಮುಖ

ನಾಗುವದೂ, ಹಲವು ಪಾಪ ಕರ್ಮಗಳಿಗೆ ಮನಸ್ಸು ಮಾಡುವದೂ ಪಾಪದ ಅಂಜಿಕೆಯನ್ನು ತಾರದಿರುವದೂ ಇನ್ನಿವು ತಮೋಗುಣಗಳು. ಬ್ರಹ್ಮಸ್ವ ವನ್ನು ಹರಣ ಮಾಡುವದು, ಪ್ರಾಣಿಗಳಿಗ ಖೇದವನ್ನುಂಟು ಮಾಡುವದು, ಅಪರಾಧಗಳನ್ನು ಮಾಡಲು ಹಿಂಜರಿಯದಿರುವದು ತಮೋಗುಣಪ್ರಭಾವವು. ಅಗ್ನಿ, ಶಸ್ತ್ರ, ಭೂತ, ವಿಷ ಇವುಗಳಿಂದ ಪ್ರಲಯಸ್ಥಿತಿಯುಂಟಾದಾಗ ಮಾತ್ಸರ್ಯದಿಂದ ಜೀವನಗಳನ್ನು ನಾಶಕ್ಕೆ ಗುರಿಮಾಡುವ ಪ್ರವೃತ್ತಿಯು ತಮೋಗುಣವು. ಪರಪೀಡೆಯಿಂದ ಸಂತೋಷ ಪಡುವವನೂ ನಿಷ್ಠುರ ಭಾವದಿಂದ ವರ್ತಿಸುವವನೂ ಪ್ರಪಂಚದ ತೊಂದರೆಗಳಿಗೆ ಸಿಕ್ಕವನೂ ತಮೋಗುಣದವರು. ಅನ್ಯರಲ್ಲಿ ಜಗಳ ಹಚ್ಚಿ ಕೌತಕ ನೋಡುತ್ತ ನಿಲ್ಲು ವವನೂ, ಕೆಟ್ಟ ಬುದ್ಧಿಯಿಂದ ಪರರ ಪ್ರಾಣ ಕೊಳ್ಳುವವನೂ ತಮೋವೃತ್ತಿ ಯುವರು. ಐಶ್ವರ್ಯ ಬಂದಾಗ ತನ್ನ ಜೀವಕ್ಕೆ ಕಷ್ಟ ಕೊಡುವವನು ಮನ ಸಿನಲ್ಲಿ ಕಳವಳನ್ನೆಣಿಸುವವನು ಇವರು ತಮೋವೃತ್ತಿಯುವರು. ಭಕ್ತಿ,ಭಾವ ತೀರ್ಥ, ದೇವ, ವೇದ, ಶಾಸ್ತ್ರ ಮುಂತಾದವೆಲ್ಲವುಗಳಲ್ಲಿ ಮನಸುಕೊಳ್ಳದಿ ದ್ದರೆ ಅದು ತಮೋವೃತ್ತಿಯು. ಸ್ನಾನ, ಸಂಧ್ಯಾ ನಿತ್ಯ ನೇಮಗಳನ್ನು ಬಿಟ್ಟು ಸ್ವಧರ್ಮದಿಂದ ಭ್ರಷ್ಟನಾದವನು ಹಾಗೂ ಮಾಡತಕ್ಕ ಕರ್ತವ್ಯಕ್ಕೆ ಮನಸು ಮಾಡದವನು ಇವರಲ್ಲಿ ತಮೋವೃತ್ತಿಯು. ಹಿರಿಯ ಅಣ್ಣ, ತಾಯಿ, ತಂದೆ, ಇವರ ವಚನಗಳನ್ನು ಉಲ್ಲಂಘಿಸಿ, ತೀವ್ರವೇ ಸಿಟ್ಟಿ ಗೆದ್ದು ಮನೆ ಬಿಟ್ಟು ಹೋಗುವವನಲ್ಲಿ ತಮೋಗುಣವಿರುವದು. ದುಡಿ ಯದೆ ತಿನ್ನುವದು, ದುಡಿಯದೆ ಸ್ವಸ್ಥ ಕೂಡ್ರುವದು, ಮನಸಿನಲ್ಲಿ ಏನೊಂ ದನ್ನು ತನ್ನ ವೃತ್ತಿಯು ಬಗೆಗೆ ತಾರದಿರುವದು ತಮೋವೃತ್ತಿಯು. ಬೇಟ ಕ ಮಾಟಕವಿದ್ಯೆಗಳನ್ನು, ಆಯುಧ ವಿದ್ಯೆಯನ್ನೂ, ಮಲ್ಲವಿದ್ಯೆಯನ್ನೂ ಕಲಿ ಯುವ ಹವಣಿಕೆಯುಳ್ಳವರಲ್ಲಿ ತಮೋಗುಣ ಪ್ರಾಧಾನ್ಯವಿರುವದು. ಕಾರ್ಯ ಸಿದ್ಧಿಗಾಗಿ ದೇವರ ಎದುರಿನಲ್ಲಿ ಶಿರಸ್ಸನ್ನು ಬಲಿಯಾಗಿ ಕೊಡುವ ಬೇಡಿಕೆ ಮಾಡಿಕೊಳ್ಳುವದೂ, ಕಾಷ್ಠಯಂತ್ರದಿಂದ ಜಿಹ್ವಾ ಬಂಧನ ಮಾಡಿಕೊಳ್ಳು ವದೂ, ತಲೆಯ ಮೇಲೆ ಕೆಂಡ ಸುರಿಸಿಕೊಳ್ಳುವದೂ' ಚೀಲದಲ್ಲಿ ಸೇರಿ ಕೊಂಡು ಅದಕ್ಕೇ ಬೆಂಕೀ ಕೊಟ್ಟು ಶರೀರ ಸುಟ್ಟುಕೊಳ್ಳುವದೂ ಇವೆಲ್ಲ ತಮೋಗುಣಗಳು. ಅಂಗಾಂಗಗಳಲ್ಲಿ ತಾನಾಗಿ ಶಸ್ತ್ರಗಳನ್ನು ಚುಚ್ಚಿಕೊಳ್ಳುವದು

ದೇವರೆದುರು ಅಂಗಾಂಗಗಳನ್ನು ಕೊಯ್ದುಕೊಯ್ದು ಅರ್ಪಿಸುವದು ಇವೆಲ್ಲ ತಾಮಸೀ ವೃತ್ತಿಯು ವರ್ಧನೆಗಳು ಸಾಧ್ಯತೆಗಾಗಿ ಶರೀರ ನಿಗ್ರಹಿಸಿ ಕುಳಿತು ಕೊಳ್ಳುವದು, ಗಜವು ನಿಲ್ಲುವದು, ದೇವಾಲಯದೆದುರಿನಲ್ಲಿ ಜೀವಕೊಡು ವದು ತಮೋಗುಣವು ಆಹಾರ ಸ್ವೀಕರಿಸದೆ ಉಪವಾಸ ಕಷ್ಟವನ್ನು ಸಹಿ ಸಿಕೊಳ್ಳುವದೂ, ಪಂಚಾಗ್ನಿ ಸಾಧನ ಮಾಡಿಕೊಳ್ಳುವದೂ, ಹೊಗೆಯನ್ನು ನುಂಗುವದೂ, ತನ್ನನ್ನು ನೆಲದಲ್ಲಿ ಹೂಳಿಸಿಕೊಂಡು ಜನರಿಗೆ ಚಮತ್ಕಾರ ತೋರಿಸುವದೂ ತಮೋವೃತ್ತಿಯು ಪರವಾವಧಿಗಳು ಫಲೇಚ್ಛೆಯಿಂದ ಜಪಾನುಷ್ಠಾನ ಮಾಡುವವನೂ, ಇಲ್ಲವೆ ಪ್ರಾಣಯಾಮದಿಂದ ವಾಯು ವನ್ನು ನಿರೋಧಿಸುವವನೂ ಅಥವಾ ಚಲನವಲನವಿಲ್ಲದೆ ಸ್ವಸ್ಥ ಬಿದ್ದುಕೊ ಳ್ಳುವವನೂ ಇವರೆಲ್ಲರೂ ತಮೋಗುಣಿಗಳು

ಉಗುರು ಕೂದಲುಗಳನ್ನು ಬಳೆಯಿಸಿಕೊಂಡು ಕೈಕಟ್ಟಿಕೊಂಡು ಮಾತುಗಳನ್ನಾಡದೆ ಒಂದು ಸ್ಥಿತಿಯನ್ನು ಅನುಸರಿಸುವವನಲ್ಲಿ ತಮೋಗು ಣವು ಮುಖ್ಯವು ಈ ಪ್ರಕಾರ ಹಲವು ಪ್ರಕಾರಗಳಿಂದ ದೇಹವನ್ನು ದಂಡಿಸಿ ಉಂಟಾದ ದುಃಖವನ್ನು ತಡೆಯುವದೂ, ಕ್ರಿಯಾಫಲಸಾಧ್ಯ ವಾಗದ್ದಕ್ಕೆ ಅತ್ಯುಗ್ರ ಸಿಟ್ಟಿನಿಂದ ದೇವಮೂರ್ತಿಯನ್ನು ಭಂಜಿಸುವದೂ ತಮೋಗುಣದವರ ಕರ್ತವ್ಯಗಳು

ಮನಸ್ಸಿನಲ್ಲಿ ಆಶೆಯಿಟ್ಟುಕೊಂಡು ದೇವನಿಂದೆ ಮಾಡುವವನೂ, ಸಂತ ಸಂಗರಹಿತನೂ ತಮೋಗುಣದವರು ಈ ಪ್ರಕಾರ ತಮೋಗುಣವು ಅಸಾಧಾರಣವಾಗಿದೆ, ಇದನ್ನು ದೂರೀಕರಿಸಲು ಮಾತ್ರ ಇಲ್ಲಿ ಬೋಧಿಸಿದೆ ಈ ಗುಣದಿಂದ ಮಾನವನ ಜನನ ಮರಣ ದುಃಖಗಳು ದೂರಾಗುವದಿಲ್ಲ ಈ ದೇಹ ಜನ್ಮ ದೂರಾಗುವದಕ್ಕಾಗಿ ಸತ್ವಗುಣಗಳು ಅವಶ್ಯ. ಅವನ್ನೇ ಮುಂದೆ ಹೇಳಿದೆ

ಶ್ರೀ ರಾಮ || ೭ ಸತ್ವಗುಣಲಕ್ಷಣ || ಹಿಂದೆ ದುಃಖದಾಯಕವೂ ಕಷ್ಟಕರವೂ ಆದ ತಮೋಗುಣದ ವಿವರಣೆ ಮಾಡಿದೆ ಈಗ ಪರಮ ದುರ್ಲಭವಾದ ಸತ್ವಗುಣಗಳ ಪ್ರಭಾವವನ್ನು ಹೇಳಲಾಗುತ್ತಿದೆ ಈ ಸತ್ವಗುಣವು ದೇವಭಕ್ತಿಗೆ ಆಧಾರವಾಗಿಯೂ ಯೋಗಿಗಳಿಗೆ ಬಲವಾ ಗಿಯೂ ದುಃಖರೂಪ ಸಂಸಾರವನ್ನು ದೂರೀಕರಿಸುವದಾಗಿಯೂ ಆಗಿ

ಸಂಮಾರ್ಜನೆ ಉದ್ವಾರ್ಜನೆಗಳನ್ನು ಮಾಡಿ ರಂಗವಲ್ಲಿಗಳನ್ನು ಲೇಖಿಸು ಸುವದು ಸತ್ವಗುಣದರ್ಶಕವು

ಸುಂದರವಾದ ಹಲವು ದೇವತಾ ಉಪಕರಣಗಳನ್ನೂ ಪ್ರಭಾವಳಿ, ಬೆಳ್ಳಿಯ ಆಸನ ಇವನ್ನೂ ದೇವರಿಗೆ ಅರ್ಪಿಸ ವವರು ಸಾತ್ವಿಕ ಗುಣದವರು ದೇವರಿಗಾಗಿ ಖಾದ್ಯ, ನೈವೇದ್ಯ, ಅಪರೂಪ ಫಲ-ಕಾಯಿಗಳು ಇವನ್ನು ತಂದು ಅರ್ಪಿಸುವವರು ಸತ್ವಗುಣಿಗಳು

ಸದ್ಮನದಿಂದ ಭಕ್ತರು ಕೀಳು ಕೆಲಸವೆಂದು ತಿಳಿಯದೆ ಸ್ವತಃ ದೇವಾಲಯದ ದ್ವಾರದ ಕಸಗೂಡಿಸುವವನು ಸಾತ್ವಿಕನು ಪುಣ್ಯ ತಿಥಿಗಳಲ್ಲಿ ಹಬ್ಬಹುಣ್ಣಿವೆಗಳಲ್ಲಿ ಮಹೋತ್ಸವ ಪ್ರಸಂಗಗಳಲ್ಲಿ ದೇವ-ದೇವಸ್ಥಾನಗಳಲ್ಲಿ ಅಂತರ್ಭಾವನ್ನು ತ್ರಿಕರಣಪೂರ್ವಕ ಸಮರ್ಪಿಸುವನೇ ಸತ್ವಗುಣವುಳ್ಳವನು ಮತ್ತು ಹರಿಕಥೆಯಲ್ಲಿತತ್ಪರವಾಗಿ ಗಂಧಾದಿಗಳನ್ನು ತಕ್ಕೊಂಡು ನಿಲ್ಲುವವನೂ ಸತ್ವಗುಣಿಯು ಹೆಂಗಸರೇ ಆಗಲಿ, ಗಂಡಸರೇ ಆಗಲಿ ಯಾರಾದರೂ ತಮ್ಮ ಶಕ್ತಿಗನುಸಾರವಾಗಿ ಸಾಹಿತ್ಯ ಹಿಡಿದುಕೊಂಡು ದೇವನೆದುರು ನಿಲ್ಲುವವರಲ್ಲಿ ಸಾತ್ವಿಕಗುಣವಿರುವದು ಎಂಥ ಮಹತ್ವದ ಕೆಲಸಗಳಿದ್ದರೂ ಅವನ್ನು ಬಿಟ್ಟು ಮೊದಲು ದೇವತಾ ಕೆಲಸ ಕೈಕೊಳ್ಳುವದು ಸಾತ್ವಿಕರ ಲಕ್ಷಣವು ತನ್ನ ದೊಡ್ಡಸ್ಥಿಕೆಯನ್ನೆಣಿಸದೆ ದೇವ ಸಂಬಂಧವಾದ ಕೀಳು ತರಗತಿಯ ಕೆಲಸಗಳನ್ನು ಕೈಕೊಂಡು ದೇವದ್ವಾರದಲ್ಲಿ ನಿಲ್ಲುವವನು ಸತ್ವಶೀಲನು ದೇವನಸಂಬಂಧವಾಗಿ ಉಪವಾಸ ಮಾಡುವದೂ, ತಾಂಬೂಲ, ಭೋಜನಗಳನ್ನು ಬಿಡುವದೂ, ನಿತ್ಯವೂ ನೇಮದಿಂದ ಜಪಧ್ಯಾನ ಮಾಡುವದೂ ಸತ್ವಗುಣದರ್ಶಕವು ಇನ್ನೊಬ್ಬರಿಗೆ ಬಿರುನುಡಿಗಳನ್ನಾಡದೆ ಇರುವದು, ನಿಯಮಿತತನದಿಂದ ವರ್ತಿಸುವದು, ಯೋಗಿಗಳನ್ನು ತುಷ್ಟಗೊಳಿಸುವದು, ನಿರಭಿಮಾನದಿಂದ ಹರಿಕೀರ್ತನ ಮಾಡಿ ಶ್ರೋತೃಗಳನ್ನು ದಂಗುಗೊಳಿಸುವದು ಇವೆಲ್ಲವುಗಳಲ್ಲಿ ಸತ್ವಗುಣ ಪ್ರಭಾವವು ಇದ್ದೇ ಇರುವದು ಹೃದಯದಲ್ಲಿ ಪರಮಾತ್ಮನ ಧ್ಯಾನದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಬಾಹ್ಯಸ್ಮರಣೆಯಿಲ್ಲದೆ ಕುಳಿತವನಲ್ಲಿ ಸತ್ವಗುಣವು ತುಂಬಿರುವದು ಹರಿಕಥೆಯನ್ನು ಕೇಳುವ ಕಾಲಕ್ಕೆ ಮನಸ್ಸನ್ನು ಚಂಚಲಗೊಳಿಸದೆ ಮೊದಲಿನಿಂದಲೂ ಕಡೆತನಕ ಒಂದೇ ಸ್ಥಿತಿ

ಯಲ್ಲಿ ಕುಳಿತವನಲ್ಲಿ ಸತ್ವಗುಣವಿರುವದು. ಮುಖದಿಂದ ಹರಿನಾಮ ಸ್ಮರಿಸುತ್ತ, ಕೈಯಿಂದ ತಾಳ ಬಾರಿಸುತ್ತ, ಕುಣಿಕುಣಿದು ದೇವವನ್ನು ಕೊಂಡಾಡುತ್ತ, ಸಂತರ ನಾದಧೂಳಿಯನ್ನು ಹಣೆಗೆ ಧರಿಸಿಕೊಳ್ಳುವವನಲ್ಲಿ ಸತ್ವಗುಣವುಂಟು. ದೇಹಾಭಿಮಾನ ತೊರೆದು ವೈರಾಗ್ಯದಿಂದ ಕೂಡಿ ಮಾಯೆಯ ಮಿಥ್ಯತ್ವವನ್ನು ಅರಿತವನಲ್ಲಿ ಸತ್ವಗುಣವಿರುವದು. ಏನೊಂದು ಉಪಾಯ ಮಾಡಿದರೂ ಸಂಸಾರ ನಿವೃತ್ತಿಯಾಗದೆಂದರಿತು ಹೃದಯದಲ್ಲಿ ಮಿಡುಕುವವನಲ್ಲಿ ಸತ್ವಗುಣವಿರುವದು. ಪ್ರಪಂಚಕ್ಕೆ ಬೇಸತ್ತು 'ಇನ್ನು ದೇವ ಭಜನೆಯನ್ನು ಮಾಡುವೆನು' ಎಂಬುದಾಗಿ ಮನಸ್ಸಿನಲ್ಲಿ ತರುವ ಮಾನವನಲ್ಲಿ ಸಾತ್ವಿಕ ಬೀಜ ನೆಲಿಸಿತೆಂದು ಹೇಳಬಹುದು. ತನ್ನ ಸ್ಥಾನದಲ್ಲಿಯೇ ಇದ್ದುಕೊಂಡು ನಿತ್ಯ ನೈಮಿತ್ತಿಕ ಕರ್ಮ ಸಾಗಿಸುತ್ತ ಪ್ರೀತಿಯಿಂದ ಕಾಲ ನೂಕುವದರಲ್ಲಿ ಸಾತ್ವಿಕತನವಿರುವದು. ಪ್ರಪಂಚದ ಎಲ್ಲ ವಿಷಯಗಳಿಗೆ ಹೇಸಿಕೊಂಡು ಪರಮಾರ್ಥವನ್ನು ಹೊಂದಿದವನು ಧೀರನೆಂದು ಹೇಳಬಹುದು. ಅವನಲ್ಲಿಯೂ ಸತ್ವಗುಣವಿರುವದು. ಯಾವಾಗಲೂ ಉದಾಸವೃತ್ತಿಯಿಂದ ಹಲವು ಭೋಗಗಳನ್ನು ತಿರಸ್ಕರಿಸಿ ಭಗವದ್ಭಜನ ಮಾಡುವವನು ಸತ್ವಗುಣಿಯು. ಪ್ರಾಪಂಚಿಕ ವಸ್ತುಗಳಲ್ಲಿ ಮನಸ್ಸು ಹಾಕದೆ ಮನಸಿನಲ್ಲಿ ಭಗವಂತನನ್ನು ಸ್ಮರಿಸುವ ದೃಢ ನಿಶ್ಚಯ ಮಾಡಿದವನಲ್ಲಿ ಸತ್ವಗುಣವುಂಟು. ಸತ್ಕರ್ಮ ಮಾಡುವಲ್ಲಿ ಜನರು ತನಗೆ ಹೆಸರಿಟ್ಟರೂ ಹಿಂಜರಿಯದೆ ಕರ್ಮ ಮಾಡುವದನ್ನೇ ನಿಶ್ಚಿತ ಮಾಡುವವನಲ್ಲಿ ಸತ್ವಗುಣವಿರುವದು. ತನ್ನ ಅಂತಸ್ಫೂರ್ತಿಯಿಂದ ಸಂದೇಹ ದೂರ ಮಾಡಿಕೊಳ್ಳುವವನಲ್ಲಿ ಸತ್ವಗುಣವಿರುವದು. ಈ ಗುಣವು ಶರೀರಕ್ಕೆ ಸಂಬಂಧಿಸಲು ಅಂತಃಕರಣವು ಸಾಕ್ಷೇಪವುಳ್ಳದ್ದಾಗುವದು. ಇಂತು ಸತ್ವಗುಣದ್ದಾಗಿರುವದು. ಶಾಂತಿ ಕ್ಷಮೆ, ದಯೆಗಳು ನಿಶ್ಚಿತವಾಗಿ ಸತ್ವಗುಣದಿಂದ ಜನಿಸಿ ಅಂತಕರಣದಲ್ಲಿ ಭರಿತವಾಗುವವು. ಮನೆಗೆ ಬಂದ ಅತಿಥಿ ಅಭ್ಯಾಗತರು ವಿಮುಖರಾಗದಂತೆ ನೋಡಿಕೊಳ್ಳುವದೂ ಹಸಿದವರಿಗೆ ಯೋಗ್ಯತೆಗನುಸರಿಸಿ ಅನ್ನ ನೀಡುವದೂ ಇವು ಸತ್ವಗುಣವನ್ನು ವ್ಯಕ್ತಪಡಿಸುವವು. ಗೋಸಾವಿ-ಬೈರಾಗಿ ಮೊದಲಾದವರು ಮನೆಗೆ ಬಂದರೆ ಮತ್ತು ಅವರಿಗೆ ಅನ್ನದ ಹಾಗು

ಸಂಮಾರ್ಜನೆ ಉದ್ವಾರ್ಜನೆಗಳನ್ನು ಮಾಡಿ ರಂಗವಲ್ಲಿಗಳನ್ನು ಲೇಖಿಸು ಸುವದು ಸತ್ವಗುಣದರ್ಶಕವು

ಸುಂದರವಾದ ಹಲವು ದೇವತಾ ಉಪಕರಣಗಳನ್ನೂ ಪ್ರಭಾವಳಿ, ಬೆಳ್ಳಿಯ ಆಸನ ಇವನ್ನೂ ದೇವರಿಗೆ ಅರ್ಪಿಸ ವವರು ಸಾತ್ವಿಕ ಗುಣದವರು ದೇವರಿಗಾಗಿ ಖಾದ್ಯ, ನೈವೇದ್ಯ, ಅಪರೂಪ ಫಲ-ಕಾಯಿಗಳು ಇವನ್ನು ತಂದು ಅರ್ಪಿಸುವವರು ಸತ್ವಗ ಣಿಗಳು

ಸದ್ಮನದಿಂದ ಭಕ್ತರು ಕೀಳು ಕೆಲಸವೆಂದು ತಿಳಿಯದೆ ಸ್ವತಃ ದೇವಾಲಯದ ದ್ವಾರದ ಕಸಗೂಡಿಸುವವನು ಸಾತ್ವಿಕನು ಪುಣ್ಯ ತಿಥಿಗಳಲ್ಲಿ ಹಬ್ಬಹುಣ್ಣಿವೆಗಳಲ್ಲಿ ಮಹೋತ್ಸವ ಪ್ರಸಂಗಗಳಲ್ಲಿ ದೇವ-ದೇವಸ್ಥಾನಗಳಲ್ಲಿ ಅಂತರ್ಭಾವ ನ್ನು ತ್ರಿಕರಣಪೂರ್ವಕ ಸಮರ್ಪಿಸುವನೇ ಸತ್ವಗುಣವುಳ್ಳವನು ಮತ್ತು ಹರಿಕಥೆಯಲ್ಲಿತತ್ಪರವಾಗಿ ಗಂಧಾದಿಗಳನ್ನು ತಕ್ಕೊಂಡು ನಿಲ್ಲುವವನೂ ಸತ್ವಗುಣಿಯು ಹೆಂಗಸರೇ ಆಗಲಿ, ಗಂಡಸರೇ ಆಗಲಿ ಯಾರಾದರೂ ತಮ್ಮ ಶಕ್ತಿಗನುಸಾರವಾಗಿ ಸಾಹಿತ್ಯ ಹಿಡಿದುಕೊಂಡು ದೇವನೆದುರು ನಿಲ್ಲುವವರಲ್ಲಿ ಸಾತ್ವಿಕಗುಣವಿರುವದು ಎಂಥ ಮಹತ್ವದ ಕೆಲಸಗಳಿದ್ದರೂ ಅವನ್ನು ಬಿಟ್ಟು ಮೊದಲು ದೇವತಾ ಕೆಲಸ ಕೈಕೊಳ್ಳುವದು ಸಾತ್ವಿಕರ ಲಕ್ಷಣವು ತನ್ನ ದೊಡ್ಡಸ್ಥಿತಿಯನ್ನೆಣಿಸದೆ ದೇವ ಸಂಬಂಧವಾದ ಕೀಳ ತರಗತಿಯ ಕೆಲಸಗಳನ್ನು ಕೈಕೊಂಡು ದೇವದ್ವಾರದಲ್ಲಿ ನಿಲ್ಲುವವನು ಸತ್ವಶೀಲನು ದೇವನಸಂಬಂಧವಾಗಿ ಉಪವಾಸ ಮಾಡುವದೂ, ತಾಂಬೂಲ, ಭೋಜನಗಳನ್ನು ಬಿಡುವದೂ, ನಿತ್ಯವೂ ನೇಮದಿಂದ ಜಪಧ್ಯಾನ ಮಾಡುವದೂ ಸತ್ವಗ ಣದರ್ಶಕವು ಇನ್ನೊಬ್ಬರಿಗೆ ಬಿರುನುಡಿಗಳನ್ನಾಡದೆ ಇರುವದು, ನಿಯಮಿತತನದಿಂದ ವರ್ತಿಸುವದು, ಯೋಗಿಗಳನ್ನು ತುಷ್ಟತೆಗೊಳಿಸುವದು, ನಿರಭಿಮಾನದಿಂದ ಹರಿಕೀರ್ತನ ಮಾಡಿ ಶ್ರೋತೃಗಳನ್ನು ದಂಗುಗೊಳಿಸುವದು ಇವಲ್ಲವುಗಳಲ್ಲಿ ಸತ್ವಗುಣ ಪ್ರಭಾವವು ಇದ್ದೇ ಇರುವದು ಹೃದಯದಲ್ಲಿ ಪರಮಾತ್ಮನ ಧ್ಯಾನದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಬಾಹ್ಯಸ್ಮರಣೆಯಿಲ್ಲದೆ ಕುಳಿತವನಲ್ಲಿ ಸತ್ವಗುಣವು ತುಂಬಿರುವದು ಹರಿಕಥೆಯನ್ನು ಕೇಳುವ ಕಾಲಕ್ಕೆ ಮನಸ್ಸನ್ನು ಚಂಚಲಗೊಳಿಸದೆ ಮೊದಲಿನಿಂದಲೂ ಕಡೆತನಕ ಒಂದೇ ಸ್ಥಿತಿ

ಯಲ್ಲಿ ಕುಳಿತವನಲ್ಲಿ ಸತ್ವಗುಣವಿರುವದು. ಸುಖದಿಂದ ಹರಿನಾಮ ಸ್ಮರಿಸುತ್ತ, ಕೈಯಿಂದ ತಾಳ ಬಾರಿಸುತ್ತ ಕುಣಿಕುಣಿದು ದೇವವನ್ನು ಕೊಂಡಾಡುತ್ತ, ಸಂತರ ಪಾದಧೂಳಿಯನ್ನು ಹಣೆಗೆ ಧರಿಸಿಕೊಳ್ಳುವವ ನಲ್ಲಿ ಸತ್ವಗುಣವುಂಟು ದೇಹಾಭಿಮಾನ ತೊರೆದು ವೈರಾಗ್ಯದಿಂದ ಕೂಡಿ ಮಾಯೆಯ ಮಿಥ್ಯತ್ವವನ್ನು ಅರಿತವನಲ್ಲಿ ಸತ್ವಗುಣವಿರುವದು ಏನೊಂದು ಉಪಾಯ ಮಾಡಿದರೂ ಸಂಸಾರ ನಿವೃತ್ತಿಯಾಗದೆಂದರಿತು ಹೃದಯದಲ್ಲಿ ಮಿಡುಕುವವನಲ್ಲಿ ಸತ್ವಗುಣವಿರುವದು ಪ್ರಪಂಚಕ್ಕೆ ಬೇಸತ್ತು 'ಇನ್ನು ದೇವ ಭಜನೆಯನ್ನು ಮಾಡುವೆನು' ಎಂಬುದಾಗಿ ಮನ ಸ್ಸಿನಲ್ಲಿ ತರುವ ಮಾನವನಲ್ಲಿ ಸಾತ್ವಿಕ ಬೀಜ ನೆಲಿಸಿತೆಂದು ಹೇಳಬಹುದು ತನ್ನ ಸ್ಥಾನದಲ್ಲಿಯೇ ಇದ್ದುಕೊಂಡು ನಿತ್ಯ ನೈಮಿತ್ತಿಕ ಕರ್ಮ ಸಾಗಿ ಸುತ್ತ ಪ್ರೀತಿಯಿಂದ ಕಾಲ ನೂಕುವದರಲ್ಲಿ ಸಾತ್ವಿಕತನವಿರುವದು ಪ್ರಪಂಚದ ಎಲ್ಲ ವಿಷಯಗಳಿಗೆ ಹೇಸಿಕೊಂಡು ಪರಮಾರ್ಥವನ್ನು ಹೊಂದಿ ದವನು ಧೀರನೆಂದು ಹೇಳಬಹುದು ಅವನಲ್ಲಿಯೂ ಸತ್ವಗುಣವಿರುವದು ಯಾವಾಗಲೂ ಉದಾಸ ವೃತ್ತಿಯಿಂದ ಹಲವು ಭೋಗಗಳನ್ನು ತಿರಸ್ಕರಿಸಿ ಭಗವದ್ಭಜನ ಮಾಡುವವನು ಸತ್ವಗುಣಿಯು ಪ್ರಾಪಂಚಿಕ ವಸ್ತುಗಳಲ್ಲಿ ಮನಸ್ಸು ಹಾಕದೆ ಮನಸಿನಲ್ಲಿ ಭಗವಂತನನ್ನು ಸ್ಮರಿಸುವ ದೃಢ ನಿಶ್ಚಯ ಮಾಡಿದವನಲ್ಲಿ ಸತ್ವಗುಣವುಂಟು ಸತ್ಕರ್ಮ ಮಾಡುವಲ್ಲಿ ಜನರು ತನಗೆ ಹೆಸರಿಟ್ಟರೂ ಹಿಂಜರಿಯದೆ ಕರ್ಮ ಮಾಡುವದನ್ನೇ ನಿಶ್ಚಿತ ಮಾಡುವವನಲ್ಲಿ ಸತ್ವಗುಣವಿರುವದು ತನ್ನ ಅಂತಸ್ಫೂರ್ತಿಯಿಂದ ಸಂದೇಹ ದೂರ ಮಾಡಿಕೊಳ್ಳುವವನಲ್ಲಿ ಸತ್ವಗುಣವಿರುವದು ಈ ಗುಣವು ಶರೀರಕ್ಕೆ ಸಂಬಂಧಿಸಲು ಅಂತಃಕರಣವು ಸಾಕ್ಷೇಪವುಳ್ಳದ್ದಾ ಗುವದು ಇಂತು ಸತ್ವಗುಣದ್ದಾಗಿರುವದು ಶಾಂತಿ ಕ್ಷಮೆ, ದಯೆ ಗಳು ನಿಶ್ಚಿತವಾಗಿ ಸತ್ವಗುಣದಿಂದ ಜನಿಸಿ ಅಂತಕರಣದಲ್ಲಿ ಭರಿತ ವಾಗುವವು ಮನೆಗೆ ಬಂದ ಅತಿಥಿ ಅಭ್ಯಾಗತರು ವಿಮುಖರಾಗದಂತೆ ನೋಡಿಕೊಳ್ಳುವದೂ ಹಸಿದವರಿಗೆ ಯೋಗ್ಯತೆಗನುಸರಿಸಿ ಅನ್ನ ನೀಡು ವದೂ ಇವು ಸತ್ವಗುಣವನ್ನು ವ್ಯಕ್ತಪಡಿಸುವವು ಗೋಸಾವಿ – ಬೈರಾಗಿ ಮೊದಲಾದವರು ಮನೆಗೆ ಬಂದರೆ ಮತ್ತು ಅವರಿಗೆ ಅನ್ನದ ಹಾಗು

ಸ್ಥಳದ ಅಭಾವವಾಗಿದ್ದರೆ ಅನ್ನ ನೀಡುವದೂ, ಸ್ಥಳ ಕೊಡುವವೂ ಸತ್ವ ಗುಣದರ್ಶಕವಾಗಿದೆ ನಾಲಿಗೆ ರುಚಿಯನ್ನು-ಅಳಿದವನೂ, ತೃಪ್ತನೂ, ನಿರಿಚ್ಛನೂ ಇವರೆಲ್ಲರೂ ಸತ್ವಗುಣಿಗಳು

ಸಂಸಾರದಲ್ಲಿ ಬರುವ ಅನ ವು ಆಪತ್ತುಗಳು ಬರತಕ್ಕವೆಲ್ಲವು ಬಂದೇ ತೀರುವವು ಆದಕ್ಕಾಗಿ ಭಯಪಡದವನು ಸತ್ವಗುಣಿಯು ಭಗವತ್ಪ್ರಾಪ್ತಿಗಾಗಿ ಸರ್ವಸುಖಗಳಿಂದ ಎರವಾಗುವವನೂ ಇಲ್ಲವ ದೇಹತ್ಯಾಗ ಮಾಡುವವನೂ ಸತ್ವಗುಣದವರೆಂದು ಹೇಳಬಹುದು ವಿಷಯಗಳತ್ತ ಮನಸ್ಸು ಹರಿದರೂ ಅದಕ್ಕೆ ಹೆದರದೆ ಆತ್ಮ ಸಂಯಮನದಿಂದ ಧೀರತೆಯನ್ನು ಕಳೆದುಕೊಳ್ಳದವನು ಸತ್ವಗುಣಿಯು ಶರೀರವು ಆಪತ್ತಿನಿಂದ ಬಾಧೆ ಹೊಂದಿದರೂ, ಹಸಿವ ನೀರಡಿಕೆಗಳಿಂದ ಪೀಡಿತವಾದರೂ ತನ್ನ ನಿಶ್ಚಯದಿಂದ ಹೊರತಾ ದವನು ಸತ್ವಗುಣಿಯು ಶ್ರವಣ, ಮನನ, ನಿಜಧ್ಯಾಸಗಳಿಂದ ಶಾಂತಿಯನ್ನು ಪಡೆದು ಶುದ್ಧ ಆತ್ಮಜ್ಞಾನಿಯಾದವನಲ್ಲಿ ಸತ್ವಗುಣವಿರುವದು ಅಹಂಕಾರ ರಹಿತನೂ, ನಿರಾಶೆಯಿಂದ ಒಪ್ಪುವವನೂ, ಭೂತ ದಯಾನ್ವಿತನೂ, ಇವರು ಸತ್ವಗುಣಿಗಳು ಎಲ್ಲರೊಡನೆ ವಿನಯ ವಾಕ್ಯಗಳನ್ನು ಬಳಸುವವನು, ತನ್ನ ಮರ್ಯಾದೆಗನುಸರಿಸಿ ನಡೆಯುವವನು, ಸರ್ವ ಜನರನ್ನು ಸಂತೋಷಗೊಳಿಸುವವನು ಇವರೆಲ್ಲರು ಸತ್ವಗುಣಿಗಳು ಎಲ್ಲ ಜನರೊಡನೆ ಆರ್ಜವ ವೃತ್ತಿಯಿಂದ ನಡೆಯುವವನೂ, ಹಗತನ ಕಟ್ಟಿಕೊಳ್ಳದವನೂ ಪರಹಿತಕ್ಕಾಗಿ ದೇಹವನ್ನು ಸವೆಸುವವನೂ ಸತ್ವಗುಣಿಗಳು ತನ್ನ ಕೆಲಸವನ್ನು ಬಿಟ್ಟಾದರೂ ಅನ್ಯರ ಕಾರ್ಯವನ್ನು ಮಾಡಿ ಕೊಡುವವರಲ್ಲಿಯೂ, ಮೃತಿಹೊಂದಿದರೂ ಸಹ ಕೀರ್ತಿಗಳಿಸಿಕೊಂಡವರಲ್ಲಿಯೂ ಸತ್ವ ಗುಣವು ಇರುವದು, ಅನ್ಯರ ದ್ವೇಷಗಳನ್ನು ಪ್ರತ್ಯಕ್ಷ ಕಂಡರೂ ಸಮುದ್ರವು ತನ್ನಲ್ಲಿ ಬಂದವುಗಳನ್ನೆಲ್ಲ ತನ್ನಲ್ಲಿಯೇ ಇಟ್ಟುಕೊಳ್ಳುವಂತೆ ಆ ದೋಷಗಳನ್ನು ಹೊರಗೆಡಹದವನಲ್ಲಿ ಸತ್ವಗುಣವಿರುವದು ತನ್ನ ಕೇಳಿಕೆಗೆ ಸರಿಯಾದ ಹೇಳಿಕೆ ಬಾರದಿದ್ದಾಗ ಉಂಟಾಗುವ ಸಿಟ್ಟನ್ನು ತಡೆ ಹಿಡಿಯುವ ಸಾಮರ್ಥ್ಯವು ಸತ್ವಶಾಲಿಗಳಲ್ಲಿ ಮಾತ್ರ ಇರುವದು ಅಪರಾಧವಿಲ್ಲದೆ ದೊರೆತ ಶಿಕ್ಷ, ಅನೇಕ ಬಗೆಯಿಂದ ಉಂಟಾಗುವ ಪೀಡೆ ಇವನ್ನೆಲ್ಲ ಸಹನ ಮಾಡಿಕೊಳ್ಳುವವನು

ಸತ್ವಶಾಲಿಯು ಶರೀರಕ್ಕಾಗುವ ತೊಂದರೆ ಸಹಿಸುವವನೂ, ತನ್ನ ನೀತಿ ಕಾಯ್ದುಕೊಂಡು ದುರ್ಜನರೊಡನೆ ಕೂಡಿ ನಡೆಯುವವನೂ ನಿಂದಕರಿಗೆ ಉಪಕಾರ ಮಾಡುವವನೂ ಸತ್ವ ಗುಣಿಗಳು ಎತ್ತ ಬೇಕಾದತ್ತ ಹರಿ ದಾಡುತ್ತಿದ್ದ ಮನಸ್ಸನ್ನು ವಿವೇಕದಿಂದ ತಡೆಯುವದೂ, ಇಂದ್ರಿಯಗಳ ಆಶೆಗೆ ಅಡ್ಡ ತಂದೊಡ್ಡುವವನೂ, ಸತ್ವಗುಣಿಗಳು ಒಳ್ಳೆಯ ಕಾರ್ಯ ಮಾಡತಕ್ಕದ್ದು ಹೊಲ್ಲದ ಕೆಲಸ ಮಾಡತಕ್ಕದ್ದಲ್ಲ ಎಂದು ಅರಿಯುವವನೂ, ಭಕ್ತಿ ಮಾರ್ಗ ಹಿಡಿಯುವವನೂ, ಸತ್ವಗುಣಿಗಳು ನಿತ್ಯವೂ ಪ್ರಾತಸ್ನಾನ, ಪುರಾಣಶ್ರವಣ, ಮಂತ್ರಪಠಣ, ದೇವತಾರ್ಚನ ಇವುಗಳನ್ನು ಬಿಟ್ಟೊ ಬಿಡದೆ ಆಚರಿಸುವವರು ಸತ್ವಗುಣಾನ್ವಿತರು

ಆದರದಿಂದ ಪರ್ವಕಾಲ ಆಚರಿಸುವವರು, ವನಂತ ಪೂಜೆ ಮಾಡುವವರು, ಜಯಂತಿಗಳನ್ನು ಪ್ರೀತಿಯಿಂದ ನೆರವೇರಿಸುವವರು, ಇವರೆಲ್ಲರು ಸತ್ವಗುಣಿಗಳು ಪರಸ್ಥಳಕ್ಕೆ ಬಂದು ಮೃತಪಟ್ಟವರಿಗೆ ಅಗ್ನಿಸಂಸ್ಕಾರ ಕೊಡುವದು ಇವೆಲ್ಲ ಸ್ಮಶಾನಯಾತ್ರೆಗೆ ಹೋಗುವದು ಇವು ಸತ್ವಗುಣಾಚರಣೆಗಳು ಒಬ್ಬನು ಬೇರೊಬ್ಬನನ್ನು ಹೊಡೆಯುವ ಸಮಯದಲ್ಲಿ ತನಗೆ ಸಾಧ್ಯವಿದ್ದರೆ ಹೋಗಿ ಆ ಇಬ್ಬರ ಹೊಡೆದಾಟ ನಿಲ್ಲಿಸಿದ ಮಾನವನು ಸತ್ವಗುಣಿಯು ಶಿವಲಿಂಗಕ್ಕೆ ಲಕ್ಷ ಪತ್ರಿಯದಳಗಳನ್ನೇರಿಸಿ ಅಭಿಷೇಕ ಮಾಡುವವರು, ದೇವನಾಮ ಸ್ಮರಣೆಯಲ್ಲಿ ವಿಶ್ವಾಸವಿದ್ದವರು ಹಾಗೂ ಅನ್ಯರಿಗೆ ದೇವರ ದರ್ಶನಕ್ಕಾಗಿ ಅವಕಾಶ ಕಲ್ಪಿಸಿ ಕೊಡುವವರು ಸತ್ವಶಾಲಿಗಳು ಸಂತರನ್ನು ಕಂಡು ಅವರ ಸನ್ನಿಧಿಗೆ ಹೋಗಿ ಅವರಿಗೆ ಸದ್ಭಾವನೆಯಿಂದ ನಮಸ್ಕರಿಸಿ ಸುಖ ಪಡೆಯುವವರಲ್ಲಿ ಸತ್ವಗುಣವಿರುವದು ಸಂತರ ಕೃಪೆ ದೊರಕಿಸಿಕೊಂಡು ತನ್ನ ವಂಶೋದ್ಧಾರ ಮಾಡಿಕೊಂಡವನು ಕೇವಲ ಈಶ್ವರಾಂಶನೂ ಸತ್ವಗುಣಶಾಲಿಯೂ ಆಗಿರುವನು ಜನರಿಗೆ ಸನ್ಮಾರ್ಗತೋರಿಸಿ ಅವರನ್ನು ಹರಿಭಜನೆಗೆ ಒಲಿಸುವವನೂ, ಅಜ್ಞಾನಿಗಳಿಗೆ ಜ್ಞಾನ ಬೋಧೆ ಮಾಡುವವನೂ, ಪುಣ್ಯ ಸಂಸ್ಕಾರಗಳಿಗೆ ಮೆಚ್ಚುವವನೂ, ದೇವರಿಗೆ ಪ್ರದಕ್ಷಿಣೆ ನಮಸ್ಕಾರ ಹಾಕುವವನೂ, ದೃಢ ಪಾರಾಂತರ ಮಾಡುವವನೂ ಇವರೆಲ್ಲರಲ್ಲಿ ಸತ್ವಗುಣವುಂಟು ಭಕ್ತಿಯ ಉದ್ರೇಕದಿಂದ ಉತ್ತಮ ಗ್ರಂಥ ಸಾಮಗ್ರಿಯನ್ನು ಸಂಗ್ರಹಿಸುವವನೂ,

ಧಾತುಗಳಿಂದ ದೇವ ಪ್ರತಿಮ ಮಾಡಿಸಿ ಹಲವು ಬಗೆಯಿಂದ ಪೂಜಿಸು ವವನೂ, ಇವರು ಸತ್ವಗುಣಿಗಳು ದೇವಪೂಜೆಯ ಉಪಕರಣಗಳು, ಮಾಲೆಗಳು, ಪಂಚಾಮೃತ ಸಾಮಾನುಗಳು, ಆಸನಗಳು ಇವೆಲ್ಲ ಶುದ್ಧ ಹಾಗು ಸ್ವಚ್ಛವಾಗಿರಿಸಿಕೊಳ್ಳುವವನು ಸಾತ್ವಿಕನು ಅನ್ಯರಿಗಾಗುವ ಪೀಡೆಯಿಂದ ನೊಂದುಕೊಳ್ಳುವವನೂ ಇವರ ಸಂತೋಷವೃತ್ತಿಯನ್ನು ಕಂಡು ಆನಂದ ಪಡುವವನೂ, ವೈರಾಗ್ಯಯುಕ್ತನನ್ನು ಕಂಡು ಹರುಷ ಹೊಂದುವವನೂ ಇವರೆಲ್ಲರಲ್ಲಿ ಸತ್ವಗುಣ ಪ್ರಧಾನವಾಗಿರುವದು

ಪರರ ಶೋಭೆಯೇ ತನ್ನ ಶೋಭೆಯು, ಪರ ನಿಂದೆಯೇ ತನ್ನ ತನ್ನ ನಿಂದೆಯು, ಪರರ ದುಃಖವೇ ತನಗೆ ತಿರಸ್ಕೃತವು ಈ ಭಾವನೆ ಯುಳ್ಳವನಲ್ಲಿ ಸಾತ್ವಿಕ ಗುಣವಿರುವದು ಇನ್ನೂ ಇಂಥ ಉದಾಹರಣೆ ಗಳೆಷ್ಟೋ ಇರುವವು ದೇವ-ಧರ್ಮಗಳಲ್ಲಿ ಮನಸ್ಸನ್ನಿರಿಸಿ ನಿರಿಚ್ಛೆ ಯಿಂದ ದೇವನನ್ನು ಸ್ಮರಿಸುವವನೇ ಸತ್ವಗುಣವರಿಷ್ಠನು.

ಇಂಥ ಸಾತ್ವಿಕವಾದ ಸತ್ವಗುಣವು ಭವಸಾಗರೋದ್ಧಾರಕವಾ ಗಿರುವದು ಈ ಸತ್ವಗುಣದಿಂದಲೇ ಶ್ರೇಷ್ಠ ಸಾಯುಜ್ಯಮುಕ್ತಿ ಇಂಥ ಸತ್ವಗುಣದ ಮಹತಿಯನ್ನು ನನಗೆ ತಿಳಿದಷ್ಟು ಸ್ವಲ್ಪವಾಗಿ ಹೇಳಿದೆನು, ಶ್ರೋತೃಗಳು ಇನ್ನು ಮುಂದೆ ಚಿತ್ತವನ್ನು ಅವಧರಿಸಬೇಕು.

ಶ್ರೀ ರಾಮ || ೮ ಸದ್ವಿದ್ಯಾಲಕ್ಷಣ || ಇನ್ನು ಸದ್ವಿದ್ಯೆಯ ಲಕ್ಷಣ ಕೇಳು ಸದ್ವಿದ್ಯೆಯು ಪರಮ ಶುದ್ಧ ಹಾಗು ಸಲ್ಲಕ್ಷಣಯುಕ್ತವಾದದ್ದು ವಿಚಾರ ಮಾಡಲು ಸದ್ವಿದ್ಯೆಯು ಮಾನವನಲ್ಲಿ ಒಂದು ಹೆಚ್ಚಿನ ಸಾಮ ರ್ಥ್ಯವೆಂಬುವದು ಗೊತ್ತಾಗುವದು

ವಿದ್ಯಾವಂತನು ಶ್ರೇಷ್ಠನು ಅವನಲ್ಲಿಯ ಗುಣಗಳಿಂದ ಸಂತೋ ಷವೆನ್ನಿಸುವದು ಆ ವಿದ್ವಾಂಸನು--ಭಾವಿಕನು, ಪ್ರೇಮಪೂರಿತನು, ಶಾಂತನು, ಕ್ಷಮಾಶೀಲನು, ದಯಾವಂತನು, ನಮ್ರನು, ದಕ್ಷನು, ವಿನಯ ವಾಕ್ಯನು, ಪರಮಸುಂದರನು, ಚತುರನು, ಬಲವಂತನು, ಧೀರನು, ಪರಮ ಸಂಪನ್ನನು, ಉದಾರನು, ಜ್ಞಾನವಂತನು, ಭಕ್ತನು, ಮಹಾ ಪಂಡಿತನು, ವಿರಕ್ತನು, ದೊಡ್ಡ ತಪಸ್ವಿಯು, ಸಮಾಧಾನಿಯು, ವಕ್ತಾ ರನು, ನಿರಿಚ್ಛನು, ಸರ್ವಜ್ಞನು, ಆದರಯುಕ್ತನು, ಶ್ರೇಷ್ಠನು, ನಮ್ರ

ಶೀಲನು, ವಿದ್ವದ್ರಾಜನು, ಧಾರ್ಮಿಕನು, ಶೂರನು, ವಿವೇಕಿಯು, ತರುಣನು, ನಿಯಮಿತವೃತ್ತಿಯವನು, ಹಿರಿಯರ ನಡೆವಳಿಯನ್ನು ಅನುಸರಿಸುವವನು, ವಂಶದ ಆಚಾರ ಬಿಡದವನು, ಯೋಗ್ಯ ಆಹಾರ ಸೇವಿಸುವವನು, ವಿಕಾರ ರಹಿತನು, ವೈದ್ಯಕದಲ್ಲಿ ಧನ್ವಂತರಿಯು, ಪರೋಪಕಾರಿಯು, ಅಮೃತಹಸ್ತನು, ಮತ್ತೂ ಆ ಸದ್ವಿದ್ಯಾಯುತನು, ನಿರಭಿಮಾನಿಯು, ಗಾಯಕನು, ದೇವಭಕ್ತನು, ವೈಭವಯುತನು, ಭಗವದ್ಭಕ್ತನು, ತತ್ವಜ್ಞನು, ಉದಾಸೀನನು, ಬಹುಶ್ರುತನು, ಸಜ್ಜನನು, ಮಂತ್ರಾಲೋಚಕನು, ಸಗುಣನು, ನೀತಿವಂತನು, ಸಾಧುವು, ಪುಣ್ಯಪವಿತ್ರನು, ಅಂತಃಶುದ್ಧನು ಧರ್ಮಾತ್ಮನು, ದಯಾಳು, ಕರ್ಮನಿಷ್ಠ, ಸ್ವಧರ್ಮರತನು, ನಿರ್ಲೋಭಿಯು, ಅನುತಾಪಿಯು ರುಚಿವಂತನು, ಪರಮಾರ್ಥ ಪ್ರೀತಿಸುವವನು, ಸನ್ಮಾರ್ಗನಿರತನು, ಸತ್ಕ್ರಿಯಾಕೃತನು, ಧೈರ್ಯಾವಲಂಬಿ ಶ್ರೌತನು, ಸ್ಮಾರ್ತನು, ಯುಕ್ತಿವಂತನು, ಸ್ತುತ್ಯನು, ಮತಿಪರೀಕ್ಷನು, ಕರ್ತವ್ಯದಕ್ಷನು ಧೂರ್ತನು, ಯುಕ್ತನು, ತಾರ್ಕಿಕನು, ಸತ್ಯವಂತನು, ಸಾಹಿತಿಯು, ನಿಯಾಮಕನು, ಭೇದಕನು, ಕುಶಲನು, ಚಪಲನು, ಚಮತ್ಕೃತಿಕರ್ತನು ಮತ್ತೂ ಸದ್ವಿದ್ಯಾಮಣಿಯು-- ಆದರ, ಸನ್ಮಾನಗಳ ತಾರತಮ್ಯ ತಿಳಿಯುವವನು, ಪ್ರಯೋಗಗಳನ್ನೂ, ಸಮಯಗಳನ್ನೂ ವಾದ ಪ್ರಸಂಗಗಳನ್ನೂ ತಿಳಿದವನು, ಕಾರ್ಯಕಾರಣಗಳ ಗುರುತನ್ನು ಅರಿತವನು, ಅರಿತು ಮಾತಾಡುವವನು, ಸಾವಧಾನಿಯು, ಸಾಕ್ಷೇಪನು, ಸಾಧಕನು, ಆಗಮ-ನಿಗಮಗಳ ಶೋಧಕನು, ಜ್ಞಾನ ವಿಜ್ಞಾನ ಬೋಧಕನು, ನಿಶ್ಚಿತ ಮತಾಭಿಪ್ರಾಯಿಯು, ಮಂತ್ರಪುರಶ್ಚರಣಕರ್ತನು, ತೀರ್ಥವಾಸಿಯು, ವ್ರತಸ್ಥನು, ದೇಹಕಷ್ಟಿಯು, ಉಪಾಸಕನು, ನಿಗ್ರಹಕರ್ತನು

ಮತ್ತೂ ಸದ್ವಿದ್ಯಾಶೋಭಿತನು:— ಸತ್ಯವಚನಿಯು, ಮಂಗಲವಾಕ್ಯನು, ಮೃದುಮಾತಿನವನು, ಒಂದೇ ಮಾತಿನವನು, ನಿಶ್ಚಿತ ನುಡಿಯವನು, ಹಿತವಚನನು ಹಾಗು—

ವಾಸನಾತೃಪ್ತನು, ಆಳವಾಗಿ ವಿಚಾರಿಸುವ ಯೋಗಿಯು, ಭವ್ಯನು, ಸುಪ್ರಸನ್ನನು, ವೈರಾಗಿಯು, ಸೌಮ್ಯನು, ಸಾತ್ವಿಕನು, ಶುದ್ಧ ಮಾರ್ಗಾವಲಂಬಿಯು, ಕಪಟ ವಿಲ್ಲದವನು, ವ್ಯಸನ ವಿಲ್ಲದವನು, ಜಾಣತನದ

ಕೆಲಸ ಮಾಡುವವನು, ಸಂಗೀತದ ಗುಣ ಸ್ವೀಕೃತನು, ಅಪೇಕ್ಷರಹಿತನು, ಆವಶ್ಯಕ ಸಂಗ್ರಹಿತನು, ಆರ್ಜವ ವೃತ್ತಿಯವನು, ಎಲ್ಲರ ಸ್ನೇಹಿಯು, ದ್ರವ್ಯ–ಹೆಂಡತಿ–ನ್ಯಾಯ–ಅಂತರ–ಪ್ರವೃತ್ತಿ–ನಿವೃತ್ತಿ ಇವುಗಳಲ್ಲೆಲ್ಲ ಪವಿತ್ರತೆಯಿಂದ ನಿಸ್ಸಂಗವಾಗಿಯೂ, ನಿರ್ಮಳವಾಗಿಯೂ, ಆಚರಿಸುವವನು, ಮತ್ತೂ ಆತನು–

ಸ್ನೇಹಿತ್ವದಿಂದ ಪರಹಿತ ಮಾಡುವವನು, ಸವಿ ನುಡಿಗಳಿಂದ ಪರರ ಶೋಕ ಪರಿಹರಿಸುವವನು, ತನ್ನಲ್ಲಿ ಸಾಮರ್ಥ್ಯವಿದ್ದರೂ ಸೇವಕನಾಗುವವನು, ಪರಾಕ್ರಮದಿಂದ ಜಗತ್ತಿಗೆ ಮಿತ್ರನು, ಸಂಶಯ ನಿರಸಕರ್ತನು, ವಿಶಾಲ ವಕ್ತಾರನು, ಎಲ್ಲವನ್ನು ಅರಿತವನಾಗಿದ್ದರೂ ಎಲ್ಲರ ಹೇಳಿಕೆ ಕೇಳಿ ಕೊಳ್ಳುವವನು, ಕಥೆಯನ್ನು ಹೇಳುವಲ್ಲಿ ಶಬ್ದಾರ್ಥವನ್ನು ಹೋಗ ಗೊಡದವನು, ಒಳ್ಳೇ ಸಂವಾದ ಕರ್ತನಾದರೂ ವಾದಕ್ಕೆ ಆಸ್ಪದ ಕೊಡದವನು, ನಿಸ್ಸಂಗನು, ಉಪಾಧಿರಹಿತನು, ದುರಾಶಾರಹಿತನು, ಸಿಟ್ಟಿಲ್ಲದವನು, ದೋಷರಹಿತನು, ಮಾತ್ಸರ್ಯ ವಿಲ್ಲದವನು, ನಿಶ್ಚಯಾತ್ಮಕವಾದ ನಿರ್ಮಲ ಜ್ಞಾನವುಳ್ಳವನು, ಶಾಂತ ಭಕ್ತನು ಸಿದ್ಧನು ಸಾಧಕನು ಹಾಗೂ, ಸಾಧನ ಮಾರ್ಗ ರಕ್ಷಕನು

ಆ ಸದ್ವಿದ್ಯೆಯ ಮೂರ್ತಿಯು — ಸುಖ ಸ್ವರೂಪಿಯು, ಆನಂದ ರೂಪಿಯು, ಹಾಸ್ಯ ರೂಪಿಯು, ಮತ್ತು ಎಲ್ಲರಿಗೂ ಐಕ್ಯ ಹಾಗು ಆತ್ಮ ರೂಪಿಯು, ಸದ್ವಿದ್ಯಾವಂತನು—

ಐಶ್ವರ್ಯವಂತನು, ಜಯವಂತನು, ರೂಪ-ಗುಣ-ಕ್ರಿಯ-ಆಚಾರ-ವಿಚಾರಗಳಲ್ಲಿ ಮಿಗಿಲಾದವನು ಆಗಿರುವನು ಅವನಲ್ಲಿ ಯಶ, ಕೀರ್ತಿ, ಶಕ್ತಿ, ಸಾಮರ್ಥ್ಯ, ವೀರ್ಯಗಳು ಮನೆ ಮಾಡಿರುವವು ವರದಾತನೂ, ಸತ್ಯವಂತನೂ, ಪುಣ್ಯವಂತನೂ ಆತನಾಗಿರುವನು ವಿದ್ಯೆ—ಕಲೆಗಳಲ್ಲಿ ಶ್ರೇಷ್ಠನು, ಲಕ್ಷ್ಮಿಯಿಂದ ಕೂಡಿದವನು, ಕುಲದಲ್ಲಿ ಪವಿತ್ರನು,ದಯಾಳುವಾದ ಬಲವಂತನು ಮತ್ತೂ ಆತನು–

ಯುಕ್ತಿವಂತನು, ಗುಣವಂತನು, ಶ್ರೇಷ್ಠನು, ಬುದ್ಧಿಯುತನು, ಧೀರನು ದೀಕ್ಷಾವಂತನು, ಸದಾ ಸಂತುಷ್ಟನು, ನಿಸ್ಪ್ರಹಿಯು, ವೀತರಾಗಿಯು

ಇವೆಲ್ಲವು ಸದ್ವಿದ್ಯೆಯ ಲಕ್ಷಣಗಳು ಎಲ್ಲರ ಅಭ್ಯಾಸಕ್ಕಾಗಿ ಇಲ್ಲಿ ಸ್ವಲ್ಪ ಮಾತ್ರ ಹೇಳಿದೆ ರೂಪ ಲಾವಣ್ಯಗಳಿಗೆ ಮಹತ್ವವಿಲ್ಲ ಮಾನವನಲ್ಲಿಯು ಸ್ವಾಭಾವಿಕ ಗುಣಗಳಿಗೆ ಏನೊಂದೂ ಉಪಾಯ ನಡೆಯುವದಿಲ್ಲ ಆದ್ದರಿಂದ ಕೆಲವಾರು ಆಗಂತುಕ ಗುಣಗಳ ಅಭ್ಯಾಸದಿಂದ ಮಾನವನು ವೃತ್ತಿಯನ್ನು ಸುಸಂಸ್ಕೃತ ಮಾಡಿಕೊಳ್ಳಬೇಕು ಈಗ ಹೇಳಿದ ಸದ್ವಿದ್ಯೆಯ ಲಕ್ಷಣಗಳು ಎಲ್ಲರಲ್ಲಿಯೂ ಇರಲಿಕ್ಕೆಬೇಕು ವಿರಕ್ತರೆನ್ನಿಸುವವರು ಸಹ ಜಗಹಿತ ದೃಷ್ಟಿಯಿಂದ ಇವನ್ನು ಅಭ್ಯಾಸ ಮಾಡುವದು ಅವಶ್ಯವು

ಶ್ರೀ ರಾಮ||ಅ ವಿರಕ್ತಲಕ್ಷಣ|| ಗುರುಗಳು ಶಿಷ್ಯರನ್ನು ಕುರಿತು —

ಇನ್ನು ವಿರಕ್ತರ ಲಕ್ಷಣವನ್ನು ಕೇಳಿರಿ ವಿರಕ್ತರಲ್ಲಿ ಯಾವ ಗುಣಗಳಿರಬೇಕು? ಯೋಗ ಸಾಮರ್ಥ್ಯವು ಅವರ ಶರೀರದಲ್ಲಿ ಎಂತು ಬರುವದು? ಯಾವುದರಿಂದ ವಿರಕ್ತರ ಒಳ್ಳೇ ಕೀರ್ತಿ ಬೆಳೆಯುವದು? ಅವರ ವಿರಕ್ತಿಯ ಮಹಿಮೆ ಅದೆಂತು ವರ್ಧಿಸುವದು? ಅವರಿಗೆ ಪರಮಾರ್ಥ ಹೇಗೆ ದೊರಕುವದು? ಆನಂದ ಹೇಗೆ ಉಂಟಾಗುವದು? ವಿವೇಕದಿಂದ ವಿರಕ್ತಿ ಹೇಗೆ ಹೆಚ್ಚುವದು? ಯಾವುದರಿಂದ ಸುಖವು ಲಭಿಸುವದು? ಅವರಲ್ಲಿ ಸದ್ವಿದ್ಯೆಯು ಆಶ್ರಯಿಸಿ ಅವರಿಗೆ ಮೋಕ್ಷ ಸಂಪತ್ತು ಹೇಗೆ ಪ್ರಬಲವಾಗುವದು? ಇವೆಲ್ಲವುಗಳ ಬಗೆಗೆ ಹೇಳಿದೆ ವಿರಕ್ತಿಯಿಂದ ಮನೋರಥ ಪೂರ್ಣವಾಗುವದು ಎಲ್ಲ ಬಯಕೆಗಳು ಈಡೇರುವವು ವಿದ್ಯಾದೇವತೆ ಶಾರದೆಯು ಅವರ ಮುಖದಲ್ಲಿ ನೆಲಿಸುವಳು, ಅದರಿಂದ ಅವರು ಮಧುರ ನುಡಿಗಳನ್ನಾಡುವರು,

ಈ ವಿರಕ್ತಿ ಲಕ್ಷಣಗಳನ್ನು ಕೇಳಿರಿ ಗಟ್ಟಿ ಮುಟ್ಟಾದ ದೇಹಧಾರಿಗಳು ವಿರಕ್ತಿಯನ್ನು ಧರಿಸಬೇಕು ಅಂದರೆ ಜಗತ್ತಿನಲ್ಲಿ ಅವರ ಪ್ರಸಿದ್ಧಿಯಾಗುವದು ವಿರಕ್ತರಲ್ಲಿ ವಿವೇಕ ವಿರಬೇಕು ವಿರಕ್ತರು ವೇದಾಂತವನ್ನು ಬೆಳಸಿಕೊಳ್ಳಬೇಕು- ವಿರಕ್ತರಲ್ಲಿ ಇಂದ್ರಿಯ ನಿಗ್ರಹದಲ್ಲಿ ಧೈರ್ಯವಿರಬೇಕು ವಿರಕ್ತರು ಸಾಧನವನ್ನು ಕಾಯ್ದುಕೊಳ್ಳಬೇಕು ಭಜನ ಕೈಕೊಳ್ಳಬೇಕು- ಅವರು ವಿಶೇಷವಾಗಿ ಬ್ರಹ್ಮಜ್ಞಾನವನ್ನು ಪ್ರಕಟಿಸಬೇಕು

ವಿರಕ್ತರಲ್ಲಿ ಭಕ್ತಿಯು ಹೆಚ್ಚಬೇಕು, ಶಾಂತಿಯು ಅವರಲ್ಲಿ ತೋರಬೇಕು ವಿರಕ್ತಿಯು ತಮ್ಮದೇ ಧರ್ಮವೆಂದು ಅವರು ಯತ್ನಿಸ ಬೇಕು ವಿರಕ್ತಿಯಲ್ಲಿ ಸತ್ಕರ್ಮಗಳನ್ನು ಮಾಡಬೇಕು. ಪರಮಾರ್ಥ ವನ್ನು ಬೆಳೆಯಿಸಬೇಕು ನಿರಿಚ್ಛೆಯಿಂದ ವರ್ತಿಸಬೇಕು

ವಿರಕ್ತಿಯಲ್ಲಿಯೇ ಧರ್ಮ ಸ್ಥಾಪನೆ ಮಾಡಬೇಕು ಒಳ್ಳೆ ನೀತಿಗ ಳನ್ನು ಅವಲಂಬಿಸಬೇಕು ಕ್ಷಮಾ ಗುಣವನ್ನು ರಕ್ಷಿಸಿಕೊಳ್ಳುವದು ಆದರ ಣೀಯವು

ವಿರಕ್ತಿಯಲ್ಲಿ ಪರಮಾರ್ಥವನ್ನು ಪ್ರಕಾಶಿಸಬೇಕು ವಿಚಾರವನ್ನು ಶೋಧಿಸಬೇಕು

ಸನ್ಮಾರ್ಗ, ಸತ್ವಗುಣಗಳಿಗೆ ಅವರು ಅಂಟಿಕೊಂಡಿರಬೇಕು

ವಿರಕ್ತರು ಭಾವಿತರಾಗಿಯೂ ಪ್ರೇಮ ಯುಕ್ತರಾಗಿಯೂ ಶರಣು ಬಂದ ಸಭ್ಯರನ್ನು ರಕ್ಷಿಸುವವರಾಗಿಯೂ ಆಗಿ ಸುಖ ಪಡೆಯತಕ್ಕದ್ದು ವಿರ ಕ್ತರು ಸರ್ವ ಕಾರ್ಯಗಳಲ್ಲಿ ದಕ್ಷರಾಗಿರಬೇಕು ಅನ್ಯರ ಅಂತರ್ಗತಗ ಳನ್ನು ಅರಿಯಬೇಕು ಹಾಗು ಪರಮಾರ್ಥದ ಮಾರ್ಗದ ಪುರಸ್ಕರ್ತ ರಾಗಬೇಕು

ವಿರಕ್ತರು ಸ್ವತ ಅಭ್ಯಾಸ ಮಾಡಬೇಕು. ತಾವೇ ಸಾಕ್ಷೇಪಿಗಳಾಗ ಬೇಕು ತಮ್ಮ ಮಾತಿನ ಕಲೆಯಿಂದ ಮುರಕಳಿಗೆ ಬಂದ ಪರಮಾರ್ಥ ವನ್ನು ಎತ್ತಿ ಹಿಡಿಯಬೇಕು ಅವರು ಜ್ಞಾನ—ವೈರಾಗ್ಯಗಳನ್ನು ಬೋಧಿಸಬೇಕು ವೈರಾಗ್ಯವನ್ನು ವರ್ಣಿಸಬೇಕು ಎಲ್ಲರಿಗೂ ತಮ್ಮ ನಿಶ್ಚಿತ ಅಭಿಪ್ರಾಯದಿಂದ ಸಮಾಧಾನವನ್ನುಂಟು ಮಾಡಬೇಕು.

ವಿರಕ್ತರು ಕಾಲಕಾಲಕ್ಕೆ ಮಹೋತ್ಸವ ಮಾಡಬೇಕು ಭಕ್ತ ಮಂಡಲ ವನ್ನು ಸ್ಥಾಪಿಸಬೇಕು. ವಿಶ್ವ ಪ್ರಯತ್ನದಿಂದ ಉಪಾಸನಾ ಮಾರ್ಗವನ್ನು ಮುಂದೆ ಸಾಗಿಸಬೇಕು

ಹರಿ ಕೀರ್ತನ ಮಾಡಬೇಕು, ಕಥೆಗಳನ್ನು ನಿರೂಪಿಸಬೇಕು ನಿಂದ ಕರೂ ದುರ್ಜನರೂ ಭಕ್ತಿ ಮಾರ್ಗಕ್ಕೆ ತಲೆವಾಗುವಂತೆ ಮಾಡಬೇಕು

ಬಹುಜನರಿಗೆ ಪರೋಪಕಾರ ಮಾಡಬೇಕು ಸತ್ಕರ್ಮಗಳ ಜೀರ್ಣೋದ್ಧಾರ ಮಾಡಬೇಕು ಆತ್ಮ ಬಲದಿಂದ ಪುಣ್ಯ ಮಾರ್ಗವನ್ನು ವಿಸ್ತರಿಸಬೇಕು

ಸ್ನಾನ ಸಂಧ್ಯಾದಿಗಳು ಜಪಧ್ಯಾನಗಳು ತೀರ್ಥಯಾತ್ರೆ, ಭಗವದ್ಭಜನ, ನಿತ್ಯ ನೇಮಗಳ ಪಾವಿತ್ರ್ಯತೆ ಇವುಗಳಿಂದ ವಿರಕ್ತರು ತಾವು ಪರಿಶುದ್ಧವಾಗಿರಬೇಕು

ದೃಢ ನಿಶ್ಚಯವು ಅವರಲ್ಲಿ ಇರಬೇಕು ಸಂಸಾರವನ್ನು ಸುಖಕ್ಕೆ ಪರಿವರ್ತಿಸಬೇಕು ತಮ್ಮ ಸಂಸರ್ಗ ಮಾತ್ರದಿಂದ ವಿಶ್ವ ಜನವು ಉದ್ಧರಿಸುವಂತೆ ಯತ್ನಮಾಡಬೇಕು ಅಲ್ಲದೆ ವಿರಕ್ತರು–ಧೀರರೂ,ಉದಾರರೂ ವಿಷಯ ನಿರೂಪಣೆಯಲ್ಲಿ ತತ್ಪರರೂ ಆಗಿರಬೇಕು ವಿರಕ್ತಿಯಲ್ಲಿ ಬಹಳ ಎಚ್ಚರದಿಂದ ವರ್ತಿಸಬೇಕು ವಿರಕ್ತಿಯು ಶುದ್ಧ ಮಾರ್ಗದಿಂದ ಗಮನಿಸಬೇಕು ವಿರಕ್ತಿಯಲ್ಲಿ ದೇಹ ನವಿಸಿ ಕೀರ್ತಿ ರೂಪದ ಶರೀರ ಉಳಿಯುವಂತೆ ಪ್ರಯತ್ನಿಸಬೇಕು ವಿರಕ್ತಿಯಲ್ಲಿ ವಿರಕ್ತರನ್ನು ಶೋಧಿಸಬೇಕು ಸಾಧುಗಳನ್ನು ಗುರುತಿಸಬೇಕು ಸಂತ ಸಜ್ಜನ ಯೋಗಿ ಜನರನ್ನು ಮಿತ್ರರನ್ನಾಗಿ ಮಾಡಿಕೊಳ್ಳಬೇಕು

ಮತ್ತೂ ವಿರಕ್ತರು – ಗಾಯತ್ರೀ ಪುರಶ್ಚರಣ, ತೀರ್ಥಾಟನ, ಪರಮ ರಮಣೀಯ ಸ್ಥಾನ ದರ್ಶನ ಇವೆಲ್ಲವನ್ನು ಮಾಡಬೇಕು ವಿರಕ್ತಿಯಲ್ಲಿ ಉಪಾಧಿಯನ್ನು ಮಾಡಿದರೂ ಉದಾಸ ವೃತ್ತಿಯನ್ನು ಬಿಡಕೂಡದು ಯಾವ ದುರಾಶೆಗೂ ಬಲಿ ಬೀಳಬಾರದು ವಿರಕ್ತರು ಅಂತರ್ನಿಷ್ಠರಾಗಿರಬೇಕು ಕ್ರಿಯಾ ಭ್ರಷ್ಟರಾಗಬಾರದು ಪರ ತಂತ್ರಕ್ಕೆ ಸಿಕ್ಕು ಕನಿಷ್ಠ ತರಗತಿಗ್ಇಳಿಯಬಾರದು

ವಿರಕ್ತರು ಕಾಲವರಿತು ಕೆಲಸ ಮಾಡಬೇಕು, ಪ್ರಸಂಗಾವಧಾನಿಯಾಗಿರಬೇಕು ಚಾತುರ್ಯವು ಅವರಲ್ಲಿ ಎಲ್ಲ ಪ್ರಕಾರದಿಂದ ಇರಬೇಕು ವಿರಕ್ತರು ಒಂದೆಡೆಯಲ್ಲಿ ಇರಕೂಡದು ಅಭ್ಯಾಸ ಬಿಟ್ಟಿರಬಾರದು, ಪ್ರತಿಯೊಬ್ಬರ ಸ್ವಭಾವವನ್ನರಿತು ಅದಕ್ಕನುರಿಸಿ ವರ್ತಿಸಬೇಕು ಹರಿಕಥೆ ಹೇಳುವದರಲ್ಲಿಯೂ, ಸಗುಣ ಭಜನದಲ್ಲಿಯೂ, ಬ್ರಹ್ಮಜ್ಞಾನ, ಶರೀರ ಜ್ಞಾನ, ತತ್ವಜ್ಞಾನ ಮುಂತಾದವುಗಳಲ್ಲಿಯೂ ಅವರಿಗೆ ಮತಿಯಿರಬೇಕು

ಕರ್ಮಮಾರ್ಗ, ಉಪಾಸನಾಮಾರ್ಗ, ಜ್ಞಾನಮಾರ್ಗ, ಸಿದ್ಧಾಂತಮಾರ್ಗ ಪ್ರಪಂಚ ಪರಮಾರ್ಥ ಮಾರ್ಗಗಳು ಇವೆಲ್ಲವು ಅವಗತವಿರಬೇಕು ಪ್ರೇಮಮಯ ಸ್ಥಿತಿ, ಉದಾಸೀನ ಸ್ಥಿತಿ, ಯೋಗ- ಧ್ಯಾನ ಸ್ಥಿತಿಗಳು ವಿದೇಹ ಹಾಗು ಸಹಜ ಸ್ಥಿತಿಗಳು ಇವೆಲ್ಲವು ವಿರಕ್ತರಿಗೆ ಗೊತ್ತಿರ ಬೇಕಾದವು .

ಧ್ಯಾನ, ಲಕ್ಷ್ಯ, ಆಸನ, ಮುದ್ರಾ, ಮಂತ್ರ, ತಂತ್ರಗಳ ವಿಧಿ ವಿಧಾನಗಳನ್ನು ಅನೇಕ ಮತಗಳ ಮರ್ಮವನ್ನೂ ವಿರಕ್ತನು ನೋಡಿ ತಿಳಿದಿರಬೇಕು ವಿರಕ್ತನು ಜಗನ್ಮಿತ್ರನೂ ಸ್ವತಂತ್ರನೂ, ಬಹುಗುಣಿಯೂ ಆಗಿರಬೇಕು ಅಲ್ಲದೆ ಅವನು ಹರಿ ಭಕ್ತನಾಗಿರಬೇಕು ಸರ್ವ ಸಂಗ ಪರಿತ್ಯಾಗವುಳ್ಳವನಾಗಿ ನಿತ್ಯ ಮುಕ್ತನಾಗಿರಬೇಕು ಹಲವು ಶಾಸ್ತ್ರಗಳನ್ನು ಅವಲೋಕಿಸಬೇಕು ಪಾಖಂಡಿಗಳ ಮತವನ್ನು ಖಂಡಿಸಬೇಕು ಮುಮುಕ್ಷುಗಳನ್ನು ಶುದ್ಧ ಪರಮಾರ್ಥ ಮಾರ್ಗಕ್ಕೆ ಹಚ್ಚಬೇಕು ಎಲ್ಲ ಜನರ ಸಂಶಯಗಳನ್ನು ದೂರ ಮಾಡಬೇಕು ವಿಶ್ವ ಜನವೆಲ್ಲವೂ ತನ್ನದೇ ಎಂಬ ಭಾವನೆ ವಿರಕ್ತನಲ್ಲಿರಬೇಕು ಮತ್ತು ವಿರಕ್ತನು ನಿಂದಕರಿಗೆ ವಂದಿಸಬೇಕು ಸಾಧಕರಿಗೆ ಬೋಧಿಸಬೇಕು ಬದ್ಧರಾದವರಿಗೆ ಮುಮುಕ್ಷುವಿನ ಗುಣಗಳನ್ನು ಹೇಳಿ ಅವರನ್ನು ಪರಮಾರ್ಥದ ಕಡೆಗೆ ಎಳೆಯಬೇಕು ವಿರಕ್ತನು ಉತ್ತಮ ಗುಣಗಳನ್ನು ಸ್ವೀಕರಿಸಿ ಅವಗುಣಗಳನ್ನು ತ್ಯಾಗ ಮಾಡಬೇಕು ವಿವೇಕ ಬಲದಿಂದ ತನಗೊದಗುವ ಅಪಾಯಗಳನ್ನು ನಾಶಗೊಳಿಸಬೇಕು

ಇದರಂತೆಯೇ ಉತ್ತಮ ಲಕ್ಷಣಗಳುಂಟು ವಿರಕ್ತಿಯಿಂದ ಅವುಗಳನ್ನು ಏಕಾಗ್ರ ಮನಸಿನಿಂದ ಶ್ರವಣಮಾಡಬೇಕು ತಿರಸ್ಕಾರ ಮಾಡಕೂಡದು -

ಇಷ್ಟೆಲ್ಲ ಸ್ವಭಾವಗಳನ್ನು ಹೇಳಿದ್ದಾಯಿತು ಅವುಗಳಲ್ಲಿ ಆವಶ್ಯಕವಾದವುಗಳನ್ನು ಸ್ವೀಕರಿಸಬೇಕು ನಾನು ಬಹಳ ಹೇಳಿದೆನೆಂದು ಶ್ರೋತೃಗಳು ಉದಾಸೀನತೆ ಹೊಂದಬಾರದು ಆದರೆ-

ನಾನು ಹೇಳಿದ್ದರಲ್ಲಿ ಒಳಿತಾದವುಗಳನ್ನು ಸ್ವೀಕರಿಸದೆ ಅವುಗಳಲ್ಲಿಯ ಅವಲಕ್ಷಣಗಳನ್ನೆತ್ತಿ ತೋರಿಸುವವನಿಗೆ ಓದಿ ಕಲಿತ ಮೂರ್ಖನೆ

ನ್ನುಬಿಕ್ಕುವು ಆ ಕಲಿತ ಮೂರ್ಖನ ಲಕ್ಷಣಗಳನ್ನು ಮುಂದಿನ ಸಮಾಸದಲ್ಲಿ ವಿವರಿಸಿದೆ ಅದರಲ್ಲಿ ನಾನು ಹೇಳಿದುದನ್ನು ಚಿತ್ತಗೊಟ್ಟು ಕೇಳ ಬೇಕು.

ಶ್ರೀ ರಾಮೋ ಗಂ ಕಲಿತ ಮೂರ್ಖನು ॥ ಈ ಮೊದಲು ಸದ್ವಿದ್ಯೆಯ ಹಾಗು ವಿರಕ್ತನ ಲಕ್ಷಣಗಳನ್ನು ಹೇಳಿದೆ ಅವುಗಳನ್ನು ಶ್ರವಣ ಮಾಡಲು ಮೂರ್ಖನಲ್ಲಿ ಚತುರತೆಯುಂಟಾಗುವದು ಇನ್ನು ಕಲಿತ ಹಾಗು ಓದಿಕೊಂಡವರು ಆಗಿದ್ದರೂ ಅವರು ಮೂರ್ಖರು ಹೇಗಾಗುವರೆಂಬ ದನ್ನು ಹೇಳುವದು ಕಲಿತು ಓದಿಕೊಂಡ ಮೂರ್ಖನು ಪಢತ ಮೂರ್ಖನು ಅಂದರೆ ಕಲಿತಮೂರ್ಖನು ಈ ಹೆಸರು ಕೇಳಿದ ಮಾತ್ರಕ್ಕೆ ಶ್ರೋತೃಗಳು ತಳಮಳಿಸಕೂಡದು. ಮಾನವನು ತನ್ನಲ್ಲಿಯ ದುರ್ಗುಣಗಳನ್ನು ತ್ಯಾಗ ಮಾಡಿದರೆ ಅವನು ಸುಖಿಯಾಗುವನು. ಬಹು ಶ್ರುತನೂ ವ್ಯುತ್ಪನ್ನ ಮತಿಯೂ ಆದವನು ಸರಸವಾಗಿ ಬ್ರಹ್ಮಜ್ಞಾನ ಬೋಧಿಸುವನು ಆದರೆ ಅಂಥವನು ದುರಾಶೆ ದುರಭಿಮಾನ ಯುಕ್ತನಾಗಿದ್ದರೆ ಮಾತ್ರ ಆವನು ಕಲಿತ ಮೂರ್ಖನೆನ್ನಿಸುವನು

ಎಲ್ಲ ನಿರ್ಬಂಧ ನಿಯಂತ್ರಗಳನ್ನು ಹರಿದೊಗೆದು ಸ್ವಚ್ಛಂದದಿಂದ ವರ್ತಿಸಲು ಬೋಧೆ ಮಾಡುವವನೂ ಸಗುಣ ಭಕ್ತಿಯನ್ನು ಹಿಮ್ಮೆಟ್ಟಿಸುವವನೂ, ಸ್ವಧರ್ಮ ಹಾಗು ಸಾಧನಗಳನ್ನು ತಿರಸ್ಕರಿಸುವವನೂ ಇವರೆಲ್ಲರು ಕಲಿತ ಮೂರ್ಖರು

ಶಿಷ್ಯನನ್ನು ಹೀಯಾಳಿಸಿ ಅವನು ಸಂಕಟಕ್ಕೆ ಗುರಿಯಾಗುವಂತೆ ಮಾಡುವವನೂ, ತನ್ನ ಮಾತುಗಳಿಂದ ಪರರ ಮನಸ್ಸನ್ನು ನೋಯಿಸುವವನೂ ಕಲಿತ ಮೂರ್ಖರು

ರಾಜಸ ತಾಮಸ ವೃತ್ತಿಯ ವಿದ್ವಾಂಸನು, ಕಾಪಟ್ಯ ಭಾವದ, ಕುಟಿಲ ಹೃದಯದ ಪಂಡಿತನು, ಹಿರಿಯರ ಸಿರಿಯ ಕೊಂಡಾಡುವ ಜಾಣನೂ ಇವರೆಲ್ಲರೂ ಕಲಿತ ಮೂರ್ಖರು

ಇಡೀ ಗ್ರಂಥ ವಿಮರ್ಶೆ ಮಾಡದೆ ದೋಷವಿಡುವ ಹಾಗು ಅಪರೊಳಗಿನ ದೋಷಗಳನ್ನೇ ಎತ್ತಿ ತೋರಿಸುವವನು ಕಲಿತ ಮೂರ್ಖನು.

ಸದ್ಗುಣಗಳನ್ನು ತಿರಸ್ಕರಿಸುವದು ಮತ್ಸರದಿಂದ ನೀತಿವಂತರನ್ನು ಕೀಳ್ದೃಸೆಗೆಳೆಯಲು ಹಂಚಿಕೆ ಮಾಡುವದು, ನ್ಯಾಯ-ನೀತಿಗಳನ್ನು ಅಲಕ್ಷಿಸುವದು, ಇವೆಲ್ಲ ಕಲಿತ ಮೂರ್ಖರ ಲಕ್ಷಣಗಳು ಜ್ಞಾನವಂತನೆಂಬ ಸೊಕ್ಕಿನಿಂದ ಈರ್ಷೆಗೆ ಬೀಳುವವನೂ, ಸಿಟ್ಟನ್ನು ತಡೆಯದವನೂ, ನುಡಿಯಂತೆ ನಡೆಯದವನೂ, ಇವರು ಕಲಿತ ಮೂರ್ಖರು ಯೋಗ್ಯತೆಯಿಲ್ಲದೆ ಮಾತಾಡುವವನೂ, ವಕ್ತೃತ್ವವನ್ನು ಹೀಯಾಳಿಸುವವನೂ, ಬಿರುನುಡಿಗಳನ್ನಾಡುವವನೂ ಕಲಿತ ಮೂರ್ಖರು ವಿದ್ಯಾವಂತನು ಬಹುಶ್ರುತಿಯೂ, ಮಾತಿನಲ್ಲಿ ಚತುರನೂ ತಾನಾಗಿ ಸಭೆಯಲ್ಲಿ ವಕ್ತಾರನಿಗೆ ಅಡೆತಡೆ ಮಾಡುವವನು ಕಲಿತ ಮೂರ್ಖರು, ತನ್ನಲ್ಲಿ ದೋಷವನ್ನಿಟ್ಟುಕೊಂಡು, ಮುಂದಿನವರಿಗೆ ದೋಷವನ್ನು ಹಚ್ಚುವವನು, ಕಲಿತ ಮೂರ್ಖನು ತನ್ನ ಅಭ್ಯಾಸದಿಂದ ಸಕಲ ವಿದ್ಯೆಗಳನ್ನರಿತು ಜನರಿಗೆ ಕಲಿಸಲಿಕ್ಕೆ ಬಾರದವನು ಕಲಿತ ಮೂರ್ಖನು ಆನೆಯು ಜೇಡಹುಳದ ಬಲೆಯಲ್ಲಿ ಸಿಕ್ಕಂತೆ ಭ್ರಮರವು ಕಮಲದಲ್ಲಿ ಸೇರಿದಂತೆ ಪ್ರಪಂಚದಲ್ಲಿ ಸಿಕ್ಕು ಬೀಳುವ ಮಾನವನು ಕಲಿತ ಮೂರ್ಖನು ಸ್ತ್ರೀಯರ ಸಹವಾಸ ಮಾಡಿ ಅವಳಿಗೇ ನೀತಿಬೋಧೆ ಮಾಡುವವನೂ, ನಿಂದ್ಯವಾದ ಪದಾರ್ಥಗಳನ್ನು ಸ್ವೀಕಾರ ಸೇವನೆ ಮಾಡುವವನೂ ಕಲಿತ ಮೂರ್ಖರು

ಶರೀರಕ್ಕೆ ಯಾವುದರಿಂದ ನ್ಯೂನತೆ ಬರುವದೋ ಅದನ್ನೇ ದೃಢವಾಗಿ ಮನಸಿನಲ್ಲಿ ಹಿಡಿಯುವವನೂ, ದೇಹ ಬುದ್ಧಿಯುಳ್ಳವನೂ ಕಲಿತ ಮೂರ್ಖರು ಸ್ತ್ರೀಯರ ಅಂಗಾಂಗಗಳನ್ನು ವರ್ಣಿಸುವವನೂ, ನಾಟಕಗಳಲ್ಲಿಯ ಹಾವಭಾವಗಳನ್ನು ಸಿಕ್ಕಲ್ಲಿ ಮಾಡಿ ತೋರಿಸುವವನೂ, ದೇವನನ್ನು ಮರೆತ ಮಾನವನೂ ಇವರು ಕಲಿತ ಮೂರ್ಖರು ಸಂಪತ್ತಿನ ಮದದಿಂದ ಉಳಿದ ಜನರನ್ನು ಹೀಯಮೆಂದೆಣಿಸುವವನೂ, ಪಾಖಂಡ ಮತವನ್ನು ಎತ್ತಿ ಹಿಡಿಯುವವನೂ ಕಲಿತ ಮೂರ್ಖರು ತಾನು ಪಂಡಿತ ವೈರಾಗಿ, ಬ್ರಹ್ಮಜ್ಞಾನಿ ಮಹಾಯೋಗಿ ಇವುಗಳ ಪದದಲ್ಲಿದ್ದು ಜನರಿಗೆ ಭವಿಷ್ಯ ಸಂಗತಿಗಳನ್ನು ಹೇಳುವವನು ಕಲಿತ ಮೂರ್ಖನು ಪುರಾಣ ಇಲ್ಲವೆ ಕಥಾಶ್ರವಣ ನಡೆದಿರುವಾಗ ಹೇಳುವವನ ಗುಣದೋಷಗಳನ್ನು ಶೋಧ ಮಾಡುವವನೂ, ಪರರ ವೈಭವ ಕಂಡು ಹೊಟ್ಟೆಕಿಚ್ಚು ಪಡುವ

ವನೂ ಇವರು ಕಲಿತ ಮೂರ್ಖರು, ತನ್ನಲ್ಲಿ ಭಕ್ತಿಯ ಸಾಧನಗಳೂ, ವೈರಾಗ್ಯವೂ, ಭಜನವೂ ಇವಾವವೂ ಇಲ್ಲದೆ ಹಾಗು ಏನೊಂದು ಕ್ರಿಯೆ ಮಾಡದೆ ಪರರಿಗೆ ಬ್ರಹ್ಮೋಪದೇಶ ಮಾಡುವವನು ಕಲಿತ ಮೂರ್ಖನು ತಾನು ಪವಿತ್ರ ವಂಶದಲ್ಲಿ ಜನಿಸಿ ತೀರ್ಥ, ಕ್ಷೇತ್ರ, ವೇದ, ಶಾಸ್ತ್ರ ಇವುಗಳ ಸಂಪರ್ಕವಿಲ್ಲದ ಮಾನವನು ಕಲಿತ ಮೂರ್ಖನು

ತನಗೆ ಸತ್ಕಾರವಾಗುವಲ್ಲಿಯೇ ಮನಸ್ಸನ್ನು ಇಡುವವನೂ, ಕೀರ್ತಿಯನ್ನು ಹೊಂತು ಪಡಿಸಿ ಸ್ತುತಿ ಮಾಡುವವನೂ, ಕೂಡಲೆ ಅವರನ್ನು ನಿಂದಿಸಿ ಅನಾದರ ಮಾಡುವವನೂ ಇವರು ಕಲಿತ ಮೂರ್ಖರು ಹಿಂದೊಂದು ಮುಂದೊಂದು ಮಾತಾಡುವವನೂ, ಆಡುವದೊಂದು ಮಾಡುವದೊಂದು ಈ ಪ್ರಕಾರದ ವರ್ತನೆಯುವನೂ ಕಲಿತ ಮೂರ್ಖರು. ಪ್ರಪಂಚಕ್ಕೆ ಮೆಚ್ಚಿ ಪರಮಾರ್ಥವನ್ನು ಪ್ರೀತಿಸದವನೂ, ತಿಳಿದೂ ತಿಳಿಯದವನಂತೆ ನಟಿಸುವವನೂ ಇವರು ಕಲಿತ ಮೂರ್ಖರು ನಿಜವಾದುದನ್ನು ಮರೆಮಾಡಿ ಮನ ಬಂದಂತೆ ಅಸತ್ಯ ನುಡಿಯುವವನೂ, ಯಾವಾಗಲೂ ಪರರ ಆಧೀನವಾಗಿ ಜೀವಿಸುವವನೂ ಕಲಿತ ಮೂರ್ಖರು ತನ್ನ ಹಟವನ್ನು ಸಾಧಿಸಿಕೊಳ್ಳುವದಕ್ಕೆ ಬೇಕಾದ ಹಾಗೆ ತನ್ನ ವೃತ್ತಿಯನ್ನು ಮತ್ತೆ ಮತ್ತೆ ಬದಲಿಸಿಕೊಳ್ಳುವವನೂ ಮಾರ್ಗ ತಪ್ಪಿ ಪುನ ತನ್ನ ಹಟ ಸಾಧಿಸಿಕೊಳ್ಳಲು ಹವಣಿಸುವವನೂ, ಹಗಲು-ರಾತ್ರಿಗಳೆನ್ನದೆ ಶ್ರವಣ ಮಾಡಿದರೂ ತನ್ನ ದುಷ್ಟ ಗುಣಗಳನ್ನು ಬಿಡದವನೂ, ತನ್ನ ಹಿತವನ್ನು ತ-ನೇ ಅರಿಯದವನೂ, ಶ್ರವಣಕ್ಕಾಗಿ ಕೂಡಿದ ಯೋಗ್ಯತೆಯ ಶ್ರೋತೃಗಳೆದುರು ಕ್ಷುದ್ರ ಸಂಗತಿಗಳನ್ನು ಹುಡುಕಿ ನಿರೂಪಣ ಮಾಡುವವನೂ ಶಿಷ್ಯನು ಅನಧಿಕಾರಿಯೆಂದು ಅವನನ್ನು ತಿರಸ್ಕರಿಸಿ ಮತ್ತೆ ಆ ಶಿಷ್ಯನನ್ನು ಯೋಗ್ಯನೆಂದು ಬಯಸುವವನೂ ಇವರೆಲ್ಲರು ಕಲಿತ ಮೂರ್ಖರು

ಶ್ರವಣ ನಡೆದಿರುವಾಗ ಶರೀರಕ್ಕೆ ಏನೊಂದು ನ್ಯೂನತೆಯುಂಟಾಗಲು ಅತಿ ಕೋಪಿಷ್ಠನಾಗುವವನೂ, ಸಂಪತ್ತು ಪ್ರಾಪ್ತವಾಗಲು ಸದ್ಗುರುವನ್ನು ತಿರಸ್ಕರಿಸುವವನೂ, ಗುರುಗುರುಗಳಿಂದ ಸಾಗಿ ಬಂದ ಗುರುತ್ವದ ಅಧಿಕಾರ-ಸಂಪತ್ತು ಮುಂತಾದವನ್ನು ಸೆಳೆಯುವವನೂ, ಅನ್ಯರಿಗೆ ಜ್ಞಾನವನ್ನು ಬೋಧಿಸುತ್ತಿರುವ ತಾನು ಸ್ವಾರ್ಥಕ್ಕಾಗಿ ಹೆಣಗವವನೂ

ಜೀವಿತನದಿಂದ ದ್ರವ್ಯ ಸಂಪಾದನೆ ಮಾಡುವವನೂ, ದ್ರವ್ಯಸಂಪಾದನೆಗಾಗಿ ಪಾರಮಾರ್ಥಿಕ ವೃತ್ತಿಯನ್ನು ತಾಳುವವನೂ, ತಾನು ಆಚರಿಸದೆ ಇನ್ನೊಬ್ಬರಿಗೆ ಆಚರಣೆ ಕಲಿಸುವವನೂ ತಾನು ಗೋಸಾವಿಯೆನ್ನಿಸಿ ಪರಾಧೀನನಾಗಿ ಬ್ರಹ್ಮಜ್ಞಾನ ಬೋಧಿಸುವವನೂ ಇವರೆಲ್ಲರೂ ಕಲಿತ ಮೂರ್ಖರು ಮತ್ತೂ — ಭಕ್ತಿ ಮಾರ್ಗವನ್ನು ಕುಂದಿಸುವ ಹಾಗು ತನ್ನ ಜೊಳ್ಳು ಪ್ರತಿಷ್ಠೆಯನ್ನು ಬೆಳೆಯಿಸುವ ಇಂಥ ಕೆಲಸಗಳನ್ನು ವಹಿಸಿಕೊಳ್ಳುವವನೂ, ಪರಮಾರ್ಥ ಸಾಧನೆಗೆಂದು ಪ್ರಪಂಚ ತ್ಯಾಗ ಮಾಡುವವನೂ, ಪರಮಾರ್ಥಸಾಧಿಸದಿರಲು ದೇವ–ಬ್ರಾಹ್ಮಣರನ್ನು ದ್ವೇಷಿಸುವವನೂ ಇವರೆಲ್ಲರೂ ಕಲಿತ ಮೂರ್ಖರು

ಈ ಪ್ರಕಾರವಾಗಿ ಕಲಿತ ಮೂರ್ಖರ ಲಕ್ಷಣಗಳನ್ನು ಅವನ್ನು ಕೇವಲ ಬಿಡುವದಕ್ಕೇ ಹೇಳಿದೆ ಶ್ರೋತೃಗಳು ಲಕ್ಷಿಸಿ ಕ್ಷಮಿಸಬೇಕು ಈ ಸಂಸಾರದಲ್ಲಿ ಸುಖವನ್ನೆಣಿಸುವಂಥ ಮೂರ್ಖನು ಮಹಾಮೂರ್ಖನು ಸಂಸಾರ ಸುಖದಂಥ ದು ಖವೇ ಇನ್ನೊಂದಿಲ್ಲ ಅದನ್ನೇ ಅಂದರೆ ಜನ್ಮ ದು ಖದ ಲಕ್ಷಣ ಹಾಗು ಗರ್ಭವಾಸದ ಕಷ್ಟ ಇವುಗಳನ್ನು ಮುಂದೆ ಹೇಳಿರುವೆವು

— ೨ನೆಯ ದಶಕ, ಸಂಪೂರ್ಣ—





ಜಯ ಜಯ ರಘುವೀರ ಸಮರ್ಥ

## ೩ ನೆಯ ದಶಕ ( ಸಗುಣಪರೀಕ್ಷೆ )

ಶ್ರೀ ರಾಮ ॥ ಜನ್ಮ ದುಃಖ ನಿರೂಪಣೆ ॥

'ಜನ್ಮ'ವೆಂದರೆ ದೇಹೋತ್ಪತ್ತಿಯು, ದುಃಖದ ಮೊಳಕೆಯು, ಶೋಕ ಸಾಗರವು, ಭಯಾನಕವೂ ಅಚಲವೂ ಆದಂಥ ಪರ್ವತ ಪ್ರದೇಶವು ಕರ್ಮದ ನೆಲವು, ಪಾತಕ ಕಶೆಯು, ನಿತ್ಯವೂ ಕಾಲನ ಹೊಸ ವಿಚಿತ್ರ ದರ್ಶಕವು, ಕುವಿದ್ಯೆಯ ಫಲವು, ಲೋಭದ ಕಮಲವು, ಜ್ಞಾನರಹಿತ ಭ್ರಾಂತಿಯ ಪಟಲವು ಆಗಿರುವದಲ್ಲದೆ ಆ ಜನ್ಮವು ಜೀವನ ಜನನ ಮರಣಗಳಿಗೆ ಕಾರಣ, ಹಾಗು ನಿಮಿತ್ತವಿಲ್ಲದೆ ಜೀವನನ್ನು ತೊಂದರೆಗೊಳಿಸುವದು, ಜೀವನ ಸುಖವನ್ನು ಮರೆಯಿಸಿ ಚಿಂತೆಯ ಮನೆಗೆ ನೂಕುವದು ಹಾಗು ಪ್ರಬಲ ವಾಸನೆಯನ್ನು ಜೀವನಲ್ಲಿ ಮತ್ತಿಷ್ಟು ಹೆಚ್ಚಿಸುವದು. ಮತ್ತು ಜನ್ಮವು ಜೀವನನ್ನು ಕೀಳ್ದಿನೆಗೆಳೆಯುವದು ಅದು ಕಲ್ಪನೆಯ ಅಚ್ಚಾಗಿ ಮಮತ್ವವೆಂಬದರ ದೀರ್ಘವಾದ ಸುತ್ತುವಲಯವಾಗಿರುವದು ಅದು ಮಾಯೆಯ ಕಪಟ ತಂತ್ರವೂ, ಕ್ರೋಧದ ಆರಾಮ ಸ್ಥಳವೂ, ಮೋಕ್ಷವನ್ನು ತಡೆಯುವ ಗಂಡಾಂತರವೂ ಆಗಿರುವದು ಜೀವನಲ್ಲಿ- ಅಹಂಕಾರ ಮಮಕಾರಗಳನ್ನು ಹುಟ್ಟಿಸಿ ಈಶ್ವರನನ್ನು ಮರೆಯಿಸುವದು ವಿಷಯಾಸೆಯುಳ್ಳದ್ದೂ, ದುರಾಶೆಯ ಸಂಕೋಲೆಯೂ ತಾನಾಗಿರುವದು ಕಾಲನ ಕೈಯಲ್ಲಿಯ ಭಕ್ಷಣವೂ ಆಗಿರುವದು ಆ ಜನ್ಮವೇ ವಿಷಮ ಕಾಲವೂ ಗಂಡಾಂತರವೂ ಘೋರ ನರಕ ಪತನವೂ ಆಗಿರುವದು ಶರೀರದಂಥ ಅಮಂಗಲವಿನ್ನಾವದೂ ಇಲ್ಲ ಇದು ಹುಟ್ಟಿದ ರಜಸ್ವಲೆಯು ಅತಿ ದೋಷಯುಕ್ತವು ಇಂಥದರಲ್ಲಿ ಜನಿಸಿದ ಶರೀರವು ನಿರ್ಮಲವುಳ್ಳದ್ದಾಗುವದೇ ? ರಜಸ್ವಲೆಯೆಂಬ ಮೀಂಗುಲಿಯ ಬಲೆಯಲ್ಲಿ ಸಿಕ್ಕು ಬಿದ್ದುದಾವದೆಂದರೆ ಈ ಶರೀರವು

(ಈ ದೇಹವು) ತೋರಿಕೆಯಲ್ಲಿ ವೈಭವಯುತ ಕಂಡರೂ ಒಳಗೆ ಹೊಲಸಿನಿಂದ ಕೂಡಿದೆ ಅದರ ಮೇಲಿನ ಹೊದಿಕೆಯಾದ ಚರ್ಮವು ತೆಗೆಯಲುಬಾರದು ಈ ಹೊದಿಕೆಯನ್ನು ತೊಳೆದು ಶುದ್ಧಮಾಡಿದರೂ ಒಳಗಿನ ದುರ್ಗಂಧವು ನಾಶವಾಗುವದಿಲ್ಲ ಅಸ್ಥಿಪಂಜರದಲ್ಲಿ ರಕ್ತ-ಮಾಂಸ

ನರ-ನಾಡಿಗಳು ಸೇರಿ ಘಟಿತವಾದ ಶರೀರವಿದು ಅಶುದ್ಧ ಎಂಬ ಹೆಸರಿನ ಅರ್ಥವು ರಕ್ತವೆಂದಾಗುವದು ಆ ರಕ್ತಭರಿತ ದೇಹವು ಹಲವು ವ್ಯಾಧಿವಿಡ್ದ್ವಾರಗಳಿಂದ ಯುಕ್ತವಾದುದು ಮಲಮೂತ್ರ ಮುಂತಾದ ಹೊಲಸು ದೇಹದ ನವರಂಧ್ರಗಳಿಂದ ಒಸರುವದು ಆ ದುರ್ಗಂಧವು ಅಸಹನೀಯವು ಕಣ್ಣಿನ ಪಿಚ್ಚು, ಮೂಗಿನ ಸುಂಬಳವೂ ಹೊರ ಬಂದು ಬೆಳಗಿನಲ್ಲಿ ಮುಖವು ಹೊಲಸಾಗುವದು.

ಈ ದೇಹವು ಜೊಲ್ಲು, ಉಗುಳು, ಪಿತ್ತ, ಶ್ಲೇಷ್ಮ ಮುಂತಾದ ಹೊಲಸುಗೂಡಿದ ಮುಖವು ಕಮಲ ಅಥವಾ ಚಂದ್ರವೆಂದು ವರ್ಣಿಸಲ್ಪಡುತ್ತದೆ ಮುಖದಂತೆಯೇ ಹೊಟ್ಟೆಯು ಅದರಲ್ಲಿ ವಿಷ್ಟೆಯೇ(ಮಲವೇ) ತುಂಬಿರುವದೆಂಬುದನ್ನು ಹೇಳಬೇಕಾಗಿಲ್ಲ ಆ ಹೊಟ್ಟೆಯಲ್ಲಿ ಸೇರಿದ ದಿವ್ಯಾನ್ನವು ಮಲ ಹಾಗು ಕಾರಿಕೆಯಾಗುವವು- ಪ್ರಾಶನ ಮಾಡಿದ ಪುಣ್ಯೋದಕವು ಮೂತ್ರವಾಗುವದು ಇಂಥ ಹೊಲಸಿನಿಂದಲೇ ದೇಹದ ಬೆಳಗೆ ಹಾಗೂ ಜೀವನ ಯಾರದೇ ಆಗಲಿ ಅವರ ಹೊಟ್ಟೆಯಲ್ಲಿ ಈ ಮಲಮೂತ್ರಾದಿಗಳಿದ್ದರೇ ಶರೀರದ ಚಲನವಲನ ಇಲ್ಲದಿದ್ದರೆ ಶರೀರ ನಾಶ ಒಂದು ವೇಳೆ ದೇಹ ನಿರ್ಮಲಕ್ಕಾಗಿ ಅಂತರ್ಗತ ಮಲವನ್ನು ತೆಗೆಯಲು ಸಹ ಶರೀರನಾಶ ಈ ಪ್ರಕಾರ ದೇಹದ ಸ್ಥಿತಿಯು ಒಳ್ಳೆಯ ಸ್ಥಿತಿಯಲ್ಲಿದ್ದ ಶರೀರವು ವ್ಯತ್ಯಸ್ತಹೊಂದಲು ಉಂಟಾಗುವ ದುರ್ದೆಸೆಯನ್ನು ಹೇಳುವದಕ್ಕೆ ಕಠಿಣವು ಇಂಥ ಕಾರಾಗೃಹದಂತಿರುವ ದೇಹದಲ್ಲಿ ಜೀವನು ಅತ್ಯಂತ ಕಷ್ಟಪಡುವನು ಅಲ್ಲಿ ದ್ವಾರಗಳೆಲ್ಲ ತೆರೆಯದೆ ಶ್ವಾಸಕ್ಕೆ ಸಹ ವಾಯು ಇರುವದಿಲ್ಲ

ಅಲ್ಲಿ ಜೀವನು ಓಕರಿಕೆ ನರಕಗಳ ರಸ ಕುಡಿಯುವನು ಜಠರಾಗ್ನಿಯಿಂದ ಗರ್ಭದಲ್ಲಿ ಅಸ್ಥಿ-ಮಾಂಸಗಳೆಲ್ಲ ಕುದಿಯುವವು ತ್ವಚೆಯಿಲ್ಲದೆ ಚಲಿಸುವ ಗರ್ಭದಿಂದ ತಾಯಿಗೆ ಬಯಕೆ ಹುಟ್ಟುವವು ಆಗ ಆಕೆ ಹುಳಿ, ಕಹಿ ಪದಾರ್ಥ ತಿನ್ನುವಳು, ಅದರಿಂದಾದ ರಸದಿಂದ ಕೂಸಿನ ಸರ್ವಾಂಗಬೇಯುವದು ಚರ್ಮದ ಹೊದಿಕೆ ಮೇಲ ಮಲದ ಲೇಪನ, ಅದಕ್ಕೆ ನಾಡಿಗಳಿಂದ ರಸದ ಪೂರೈಕೆ ಹೀಗಾಗಿ ಸರ್ವ ಮಲದಿಂದ ಹುಟ್ಟಿದ ಕ್ರಿಮಿಗಳಿಂದ ಗರ್ಭಸ್ಥ ಶಿಶುವು ಬೆದರುವದು ಈ ಬಂಧನದಿಂದ

ನೊಂದ ಆ ಪ್ರಾಣಿಯು ಕಳವಳಿಸಿ-'ದೇವಾ!' ನನ್ನನ್ನು ಈ ಬಂಧನದಿಂದ ಮುಕ್ತನನ್ನಾಗಿ ಮಾಡು ಅಂದರೆ ನನಗೆ ಹಿತವಾಗುವದು ಇನ್ನು ಮುಂದೆ ಎಂದೂ ನಾನು ಇಲ್ಲಿಗೆ ಬರಲಾರೆನು' ಎಂದು ಪ್ರತಿಜ್ಞೆ ಮಾಡಿ ಪ್ರಾರ್ಥಿಸುತ್ತಿರಲು ಮುಂದೆ ಅದರ ಜನ್ಮಕಾಲ ಬಂದಿತು ತಾಯಿ ಅಳಹತ್ತಿದಳು ಕೂಸಿನ ಮೂಗು ಬಾಯಿಗಳಲ್ಲಿ ಮಾಂಸ ತುಂಬಿ ಶ್ವಾಸ ಬಂದಾಯಿತು ಇನ್ನು ಮಸ್ತಕ ದ್ವಾರದಿಂದ ಶ್ವಾಸಬಿಡುವಷ್ಟರಲ್ಲಿಯೇ ಅದು ಹೊರಬಂದಿತು

ಮಸ್ತಕ ದ್ವಾರವು ಹೊರ ಮುಖವಾದ ಕೂಡಲೇ ಪ್ರಾಣಿಯ ಚಿತ್ತವು ತಳಮಳಿಸಿತು ಅದರಿಂದ ಅದು ಮಾರ್ಗ ದೊರೆಯದೆ ಕಸವಿಸಿಪಡಹತ್ತಿತು. ಚಿತ್ತವು ಬೆದರಿದ್ದರಿಂದ ಪ್ರಾಣಿಯು ಸ್ಥಳದಿಂದ ಅಡ್ಡಾಯಿತು ಕೂಸು ಅಡ್ಡ ಸಿಕ್ಕಿತೆಂದು ಅದರ ಕೈಗೆ ಸಿಕ್ಕ ಅವಯವಗಳು ಕೊಚ್ಚಲ್ಪಟ್ಟವು ಅಂಗಾಂಗಗಳೆಲ್ಲ ಬೇರ್ಪಟ್ಟವು ಕೂಸು ಸತ್ತಿತು. ತಾಯಿಯೂ ದೇಹ ಬಿಟ್ಟು ಹೋದಳು ಕೂಸು ಗರ್ಭವಾಸ ದುಃಖವನ್ನನುಭವಿಸಿ ತಾನು ಸಾಯುವದಲ್ಲದೆ ತಾಯಿಯನ್ನೂ ಮರಣಕ್ಕೆ ಗುರಿ ಮಾಡಿತು, ಈ ಪ್ರಕಾರ ಅದೆಷ್ಟೋ ಪ್ರಾಣಿಗಳು ಗರ್ಭದಲ್ಲಿರುವಾಗಲೇ ಸತ್ತು ಹೋಗುವವು ಇದರಲ್ಲಿ ಪುಣ್ಯಬಲದಿಂದ ಯೋನಿಯಲ್ಲಿಂದ ಮಾರ್ಗ ದೊರಕಿಸಿದ ಗರ್ಭವು ರುಂಡ ಇಲ್ಲವೆ ಮುಂಡ ಸಿಕ್ಕು ಹೊರಬಾರದಾಗುತ್ತದೆ ಬಳಿಕ ಅದನ್ನು ಸಂಕುಚಿತ ಮಾರ್ಗದಿಂದ ಕಸುವಿನಿಂದ ಜಗ್ಗಿ ಹೊರ ತೆಗೆಯುವರು, ಈ ಪ್ರಸಂಗದಲ್ಲಿಯೇ ಆ ಕೂಸು ಪ್ರಾಣ ನೀಗುವದು

ಕೂಸು ಪ್ರಾಣ ಬಿಡುವ ಕೊನೆಯಲ್ಲಿ ಅದಕ್ಕೆ ಪೂರ್ವ ಜನ್ಮ ಸ್ಮರಣೆಯಿದ್ದುದೆಲ್ಲ ಮರೆಯಾಗುವದು ಗರ್ಭದಲ್ಲಿದ್ದಾಗ ಅದು 'ಸೋಹಂ' 'ಸೋಹಂ' ಎಂದೂ ಹೊರಬಂದಾಗ 'ಕೋಹಂ ಕೋಹಂ' ಎಂದೂ ಅನ್ನಹತ್ತಿತು ಇಂತು ಗರ್ಭವಾಸದಲ್ಲಿ ನಿಸ್ಸೀಮ ಕಷ್ಟ ಅನುಭವಿಸಿದ್ದನ್ನು ಅದು ಕಷ್ಟದಿಂದ ಹೊರ ಬಂದ ಕೂಡಲೇ ಮರೆತು ಬಿಟ್ಟಿತು ಏನೊಂದನ್ನು ಅರಿಯದ ವೃತ್ತಿಯದಾಯಿತು ಅಜ್ಞಾನದಲ್ಲಿ ಬಿದ್ದುದರಿಂದಲೇ ಸುಖವೆಂದು ಭ್ರಾಂತಿಗೊಂಡಿತು ದೇಹದಿಂದ ವಿಕೃತಿಗೊಂಡಿತು ಸುಖದುಃಖಗಳ ಮಾಯಾ ಜಾಲದಲ್ಲಿ ಸಿಕ್ಕು ಬಿದ್ದಿತು ಪ್ರಾಣಿ ಮಾತ್ರಕ್ಕೆಲ್ಲ ಈ ಗರ್ಭವಾಸ ಕಷ್ಟ ತಪ್ಪಿದ್ದಲ್ಲ ಅದರ ನಿವಾರಣೆ ಭಗವಂತನಿಂದ;

ಜೀವನಿರ್ಧೀ ಮೊರೆ ಹೋಗಬೇಕು ಭಗವದ್ಭಕ್ತನೇ ಮುಕ್ತನಾಗುವನು, ಜ್ಞಾನಬಲದಿಂದ ಯಾವಾಗಲೂ ಆವನೇ ವಿರಕ್ತನಾಗುವನು

ಇಂತು ಗರ್ಭವಾಸ ವಿಪತ್ತಿಯನ್ನು ವರ್ಣಿಸಿದೆ ಶ್ರೋತೃಗಳು ಇದರ ಮುಂದಿನ ಭಾಗವನ್ನು ಅವಧರಿಸುವದು

ಶ್ರೀ ರಾಮ ॥ ೨ ಸಗುಣ ಪರೀಕ್ಷೆ ॥ ಈ ಮೊದಲು ಗರ್ಭವಾಸದ ತಳಮಳಿಕೆಯನ್ನು ಹೇಳಿದೆ, ಸಂಸಾರವು ದು ಖದ ಬೊಡ್ಡೆ ಅದರ ಕೆಂಡ ದಿಂದ ಜೀವನು ಸುಡಲ್ಪಡುವನು ಗರ್ಭದಿಂದ ಹೊರಬಂದ ಕೂಸು ಬೆಳೆ ಯಿತು ದಿನಗಳೆದಂತೆ ಬಾಲಕನಾದನು ತೀರ ಬಾಲಕನಾಗಿದ್ದಾಗ ಅದರ ಮೃದುವಾದ ಚರ್ಮಕ್ಕೆ ವೇದನೆಯಾಗಲು ತನಗಾಗುವ ಆಗ ಸುಖ ದುಃಖ ಹೇಳಲು ಅದಕ್ಕೆವಾಚಾಶಕ್ತಿಯಿರುವದಿಲ್ಲ ಶರೀರವ್ಯಥೆ ಹಸಿವೆ ಗಳಿಂದ ಅದು ಅಳುವದರ ಕಾರಣವು ತಿಳಿಯುವದಿಲ್ಲ ತಾಯಿಯು ಕೂಸನ್ನು ಎಷ್ಟು ರಮ್ಮಿಸಿದರೂ ಅದರ ದು ಖ ಶಮನವಿಲ್ಲ ಮತ್ತೆ ಮತ್ತೆ ಅಳುವದು ತಾಯಿ ಎತ್ತಿ ಮತ್ತೆ ರಮ್ಮಿಸುವಳು ಏನಾದರೂ ಅದರ ವ್ಯಥೆ ತಾಯಿಗೆ ತಿಳಿಯದು. ಅದಕ್ಕೆ ತಾನು ಬೀಳುವದು, ಅಳುವದು, ಬೇನೆ ಯಿಂದ ಬಳಲುವದು, ತಾಪದಿಂದ ಒದರುವದು ಇತ್ಯಾದಿ ತನ್ನ ದೇಹದ ಬಗೆಗೆ ಏನೂ ಅರಿವು ಇರುವದಿಲ್ಲ ಹೀಗಾಗಿ ಅದು ಹಲವು ಅಪಾಯಕ್ಕೆ ಬೀಳುವದು

ಇಷ್ಟೆಲ್ಲ ಕಷ್ಟಗಳನ್ನು ಅನುಭವಿಸಿ ಕೂಸು ದಿನ ದಿನಕ್ಕೆ ತಾಯಿ ಯನ್ನು ತಿಳಿಯಹತ್ತಿತು ನೋಡಹತ್ತಿತು, ಅಳಹತ್ತಿತು, ದು ಖಿಸಹ ತ್ತಿತು, ಇದರಂತೆ ದಿನಗಳೆಯುತ್ತ ತಾಯಿಯ ಆಶ್ರಯವನ್ನೇ ಬಯಸ ಹತ್ತಿತು ಅದಕ್ಕೆ ಸ್ಮೃತಿಯುಂಟಾದ ಮೇಲೆ ಆರಕ್ಷಣ ಸಹ ತಾಯಿಯ ಹೊರತು ಇರದಾಯಿತು ತಾಯಿಯ ಮುಂದೆ ಬ್ರಹ್ಮ, ಲಕ್ಷ್ಮಿ ಮುಂತಾ ದವರೆಲ್ಲ ಕಡಿಮೆಯವರೇ ಎಂದರಿಯ ಹತ್ತಿತು. ತಾಯಿಯು ಕುರೂಪಿ, ಕುಲಕ್ಷಣಿ, ಹಾಗು ಎಲ್ಲರಿಗಿಂತ ಹೀನಳಿದ್ದರೂ ಜಗತ್ತಿನಲ್ಲಿ ಆಕೆಗೆ ಸವ ಯಾರೂ ಇಲ್ಲೆಂದು ತಿಳಿಯಿತು ಒಂದು ವೇಳೆ ತಾಯಿ ಸಿಟ್ಟಾಗಿ ತನ್ನ ನ್ನು ದೂಡಿ ದೂರೀಕರಿಸಿದರೂ ಅಳುತ್ತ ಓಡಿ ಬಂದು ತಾಯಿಯ ಕೊರ ಳಿಗೆ ಅಟ್ಟೆ ಮಿಟ್ಟೆ ಹಾಕುವದು, ತಾಯಿಯ ಹತ್ತಿರವೇ ಸುಖ ಬಡುವ

ದು. ಆಕೆ ತಿರಸ್ಕರಿಸಿದರೆ ದುಃಖಿಸುವದು, ತಾಯಿಯನ್ನು ಕಂಡೊಡ ನೆಯೇ ಅತಿ ಪ್ರೀತಿ ಬಡುವದು ತಾಯಿ ಸತ್ತರೆ ತಾನು ಪರದೇಶಿ ಯಾಗುವದು ಶೋಕ ಸಂತಾಪದಿಂದ ಅವ್ವಾ! ಅವ್ವಾ! ಎಂದೊಂದರಿ ಅಳುವದು

ತಾಯಿಯು ಅಗಲಿದಾಗ ಮಗುವು ದೀನನಂತಾಗುವದು. ಮನಸ್ಸು ತಲ್ಲಣಿಸುವದು ತಾಯಿ ಈಗ ಬರುವಳೆಂದು ನಂಬುವದು ತಾಯಿಯಂತಿರುವ ಇನ್ನೊಬ್ಬರನ್ನು ಕಂಡರೆ ' ಈಕೆ ನನ್ನ ತಾಯಿಯಲ್ಲ ನನ್ನ ತಾಯಿ ಎಲ್ಲಿರುವಳು '' ಎಂದು ದೀನತೆಯಿಂದ ಕೇಳುವದು ಮಾತೃ ವಿಯೋಗದಿಂದ ಮಗುವಿನ ಕಷ್ಟ, ದುಃಖ, ಕ್ಷೀಣತೆ ಹೆಚ್ಚುವವು ಯಾವದೊಂದು ರೋಗದಿಂದ ತಾಯಿ ಪಾರಾದರೆ, ಅಗಲಿದ ತಾಯಿಯು ಮಗುವಿನ ಬಳಿಗೆ ಬಂದರೆ ದಿನ ದಿನವೂ ಮಾತೃಪ್ರೇಮವರ್ಧಿಸುವದು ಇಂತು ಮಗುವಾಗಿದ್ದ ಕಾಲವು ಹಿಂದೆಗೆಯಲು ಬರುಬರುತ್ತ ಮಗನು ಬುದ್ಧಿವಂತನಾಗುವನು. ಆಗ ತಾಯಿ ಮಗುಗಳಲ್ಲಿ ಅತ್ಯಂತ ಮಮತೆ. ಮಗನ ಆಟ ಪಾಟಗಳಿಂದ ತಾಯಿಗೆ ಬಲು ಹರುಷ, ಅವನಲ್ಲಿ ಆಟದ ಚಟವು ಪ್ರಬಲವಾಗುವದು ಆಟದ ಭರದಲ್ಲಿ ಅವನು ಎಷ್ಟೋ ನೋವು ವ್ಯಥೆಗೆ ಗುರಿಯಾಗುವನು

ಹಲ್ಲು ಬೀಳುವದುಂಟು, ಕಣ್ಣು ಕಳಕೊಳ್ಳುವದುಂಟು ಇನ್ನುಳಿದ ಅವಯವಗಳಿಗೂ ಧಕ್ಕೆಯಾಗುವದುಂಟು. ಹೀಗಾಗಿ ಬಾಲಕನು ಕಳೆಗೆಡುವನು ವೈಲಿ, ಗೊಬ್ಬರ, ತಲೆನೋವು ಮುಂತಾದ ರೋಗಗಳ ಬಾಧೆ ಹಾಗೂ ಭೂತ, ವೇತಾಳ ಮುಂತಾದವುಗಳ ಬಾಧೆಗಳಲ್ಲಿ ಸಿಕ್ಕು ಬೀಳುವನು. ಭೂತ ಮೊದಲಾದವುಗಳ ಬಾಧೆಯಾದಾಗ ಹಲವರು ಹಲವು ಬಗೆಯಿಂದ ಹೆಸರಿಡುವರು ಕೆಲವರು ವೀರದೇವ, ಖಂಡೇರಾವ ಈ ಮುಂತಾದವರ ಸಂಬಂಧ ಜೋಡಿಸುವರು ಕೆಲವರು ಇವನಿಗೆ ಯಾರೋ ಏನೋ ಮಾಡಿಸಿರುವರೆಂದು ನುಡಿಯುವರು ಬೇರೆ ಕೆಲವರು ಪೈಪೀ ಸಂಚಾರವೆಂದೂ ಬೇರೆ ಕೆಲವರು ವಿಧಿಯಲೀಲೆ, ಕರ್ಮಭೋಗವೆಂದು ಇತ್ಯಾದಿಯಾಗಿ ಹೇಳುವರು ಹಲವರು ರೋಗ ನಿದಾನವೇದ್ಯ ವೈದ್ಯರಿಂದ ಔಷಧ ಕೊಡಿಸಿ ಉಪಚಾರ ಮಾಡುವ ಕುರಿತು ಹೇಳಿ

ವರು ಇವನು ಸಾಯುವನೆಂದು ಕೆಲವರು ನುಡಿದರೆ ಕೆಲವರು ಉಳಿಯುವನೆನ್ನುವರು ಇನ್ನೊಂದು ವರ್ಗದವರು ಇವನು ಪಾಪದ ಫಲ ಅನುಭೋಗಿಸುವನೆನ್ನುವರು

ಇಷ್ಟೆಲ್ಲ ಕಷ್ಟಗಳಿಂದ ಪಾರಾದರೂ ಮುಂದ ಆ ಪ್ರಾಣಿಯು ಸಂಸಾರ ದುಃಖದಿಂದ ಅತ್ಯಂತ ಕಷ್ಟ ಬಡುವದು ತಾಯಿ—ತಂದೆಗಳು ವಿದ್ಯಾವಂತನನ್ನಾಗಿ ಮಾಡಿದರು ನಾಲ್ವರಲ್ಲಿ ನಾಮಾಂಕಿತನಾದನು ವಿವಾಹವಾಯಿತು ಲಗ್ನದ ಸಡಗರದಿಂದ ಬಹಳೇ ಸುಖವೆನ್ನಿಸಿತು ಮುಂದೆ ಮಾವನ ಮನೆಗೆ ಹೋಗುವ ಇಚ್ಛೆಯಾಯಿತು. ತನ್ನ ಮನೆಯಲ್ಲಿ ಹೇಗೇ ಇದ್ದರೂ ಮಾವನ ಮನೆಗೆ ಹೋಗುವ ಕಾಲಕ್ಕೆ ಸಾಲ. ಕೈಗಡದಿಂದ ಹಣ ತೆಗೆದು ಡೌಲಿನಿಂದ ಹೋಗುವನು ಮನಸ್ಸೆಲ್ಲ ಮಾವನ ಮನೆಗೆಳೆಯಹತ್ತಿತು ತಾಯಿ ತಂದೆಗಳ ಹೀನಾವಸ್ಥೆ ಅವನಿಗೆ ಕಾಣದಾಯಿತು ಮಡದಿ ಮನೆಗೆ ಬಂದ ಮೇಲಂತೂ ಕೇಳುವದೇನು? ಅವನಲ್ಲಿಯ ಆತ್ಮ ಗೌರವವು ಹೆಚ್ಚುವದು ತನ್ನ ಸಂಸಾರದ ನೊಬಗನ್ನು ಬೆಳಿಸುವ ಹಂಬಲವು ಆತನಲ್ಲಿ ಹಿರಿದಾಯಿತು, ತಾಯಿ—ತಂದೆ ಅಣ್ಣ-ತಮ್ಮ ಮೊದಲಾದವರನ್ನೆಲ್ಲ ಕಡೆಗಣಿಸುತ್ತ ಆ ಪಾಪಿ ಮಾನವನು ಮಾಯಾ ಜಾಲದಲ್ಲಿ ಬಿದ್ದನು

ಹೆಂಡತಿಯ ಸಂಪರ್ಕವಾಗದ ಮೊದಲೇ ಇಷ್ಟು ಪ್ರೇಮವೆಂದ ಮೇಲೆ ಅವರು ಮೈಗೂಡಿದ ಮೇಲೆ ಕೇಳುವದೇನು? ಮೇರೆದಪ್ಪಿ ಪ್ರೇಮ ಪ್ರವಾಹ ಹರಿಯಹತ್ತಿತು ಸತಿಯು ಸದಾ ಕಣ್ಮುಂದೆ ಇರದಿದ್ದರೆ ಅವನ ಜೀವಕ್ಕೆ ಸೊಗಸು ಇರುತ್ತಿರಲಿಲ್ಲ ಆಕೆ ಇವನ ಚಿತ್ತವನ್ನೇ ಹರಣ ಮಾಡಿಬಿಟ್ಟಳು ಆಕೆಯ ಸವಿನುಡಿಗಳು, ಮರ್ಯಾದೆ, ಲಜ್ಜೆಗಳು, ಚೆಲುವಿನ ಮುಖವು, ಅಂದವಾದ ಅಂಗಾಂಗಗಳು ಇವೆಲ್ಲವು ಆತನಲ್ಲಿ ಕಾಮವಾಸನೆಯನ್ನು ಹೆಚ್ಚಿಸಿದವು ಆಕೆಯ ಪ್ರೇಮಕ್ಕೆ ಸಿಕ್ಕು ಶರೀರ ಕ್ಷೀಣವಾಗಹತ್ತಿತು ಅವನ ಚಿತ್ತವು ಯಾವ ಉದ್ಯೋಗಕ್ಕೆ ಮೆಚ್ಚದಾಯಿತು, ಸದಾ ಸ್ತ್ರೀಯಳ ಸ್ಮರಣೆ. ಇಂತು ಆತನು ಕಾಮುಕನಾದನು ಆಕೆಯ ಆರ್ಜವ ವೃತ್ತಿಯ ಮಾತುಗಳಿಂದ ಇಷ್ಟನ್ನು ಆಕೆಯ ಕೈಗೊಂಬೆಯಾದನು. ಹಣ ದಾಸೆಯಿಂದ ಕಕ್ಕಶ ಮಾರ್ಗಸ್ಥ

ರನ್ನು ಉಲ್ಲಂಘಿಸಿ ಹಾಕಿಕೊಳ್ಳುವಂತೆ ಸ್ತ್ರೀಯು ತನ್ನ ಗಂಡನ ಚಿತ್ತವನ್ನು ಹರಣ ಮಾಡಿದಳು ಆಕೆಗೆ ಯಾರೂ ಏನನ್ನೂ ಆಡಕೂಡದು ಹಾಗಾದರೆ ಅವನು ಬಹಳೇ ನೊಂದುಕೊಳ್ಳುವನು

ಇಂತು ಆತನು ಹೆಂಡತಿಯ ವಶವರ್ತಿಯಾದನು ತಂದೆ ತಾಯಿಗಳನ್ನು ಹೀಯಾಳಿಸಿ ನುಡಿಯುವನು ಅವರನ್ನು ಬಿಟ್ಟು ಬೇರೆ ಇರುವನು. ಕೇವಲ ಹೆಂಡತಿಗಾಗಿ ಆತನು ಲಜ್ಜೆ ತೊರೆದನು ಜೀವನ್ಮಿತ್ರರಿಂದ ದೂರಾದನು ಅವಳಿಗಾಗಿ ದಾಸ್ಯತ್ವ ಕೈಕೊಂಡನು ವಿವೇಕ ಶೂನ್ಯನಾದನು ವಿಷಯ ವ್ಯಾಮೋಹಿತೆಯೂ, ಅತಿ ನಮ್ರತೆಯೂ, ಪರಾಧೀತೆಯೂ ಅವನಲ್ಲಿ ಸೇರಿದವು ಲೋಭ, ಅಧರ್ಮ, ತೀರ್ಥ ಯಾತ್ರೆಗಳಲ್ಲಿ ಹೇಯತೆ, ಧರ್ಮಲಂಡತನ, ಇವುಗಳಲ್ಲಿ ಅವನ ಮನಸ್ಸು ಹನಿಗೆಟ್ಟಿತು ಅವನಲ್ಲಿ ಶುಭಾ ಶುಭ ವಿಚಾರಗಳ ಅಭಾವವಾಯಿತು. ಸ್ತ್ರೀಯಳಿಗೆ ತನು ಮನ ಧನಗಳೆಲ್ಲವನ್ನು ಅರ್ಪಿಸಿದನು ಪರಮಾರ್ಥವನ್ನು ಕಾಣದಾದನು ಆತ್ಮಹಿತ ಮರೆತನು ದೇವಬುದ್ಧಿ ನಷ್ಟವಾಗಿ ಕಾಮಬುದ್ಧಿ ವರ್ಧಿಸಿತು ಆ ಸ್ತ್ರೀಯಳಿಗಾಗಿಯೇ ಭಕ್ತಿ–ಮುಕ್ತಿ–ವಿರಕ್ತಿಗಳನ್ನು ತುಚ್ಛೀಕರಿಸಿದನು.

ತನ್ನ ಸ್ತ್ರೀಯ ಗುಣಗಳಿಂದ ಲುಬ್ಧನಾದ ಆತನು ಬ್ರಹ್ಮಾಂಡವನ್ನು ಮರೆತನು, ಸ್ನೇಹಿತರಲ್ಲಿ ನೀಚತ್ವವನ್ನೆಣಿಸಿದನು ಈ ಪ್ರಕಾರ ಅವನು ತನ್ನ ಹೃದಯ ವಾತ್ಸಲ್ಯವನ್ನೆಲ್ಲ ಸ್ತ್ರೀಯಳಿಗೊಪ್ಪಿಸಿ ಇರುತ್ತಿರಲು ಅಕಸ್ಮಾತ್ ಆಕೆ ಮೃತಪಟ್ಟಳು ಅವನಿಗೆ ಅನಿವಾರ ಶೋಕವುಂಟಾಯಿತು ತನ್ನ ಸಂಸಾರವೇ ಮುಳುಗಿತೆಂದು ವ್ಯಥೆ ಪಡಹತ್ತಿದನು. ನನ್ನ ಮನೋಹಾರಿಯು ಮೃತಳಾಗಿ ಮನೆ ಮುರಿಯಿತಲ್ಲ! ಎಂದು ಆಕೆಯ ಶವವನ್ನು ತೊಡೆಯ ಮೇಲೆ ಹಾಕಿಕೊಂಡು ಎದೆ ಎದೆ ಬಡಕೊಂಡು ಅಳಹತ್ತಿದನು. ಆಗ ಆತನಿಗೆ ಏನೊಂದು ನಾಚಿಕೆಯೆನಿಸಲಿಲ್ಲ ತನ್ನ ಗೌರವಕ್ಕೆ ಕುಂದು ಬರುವದೆಂದೂ ತಿಳಿಯಲಿಲ್ಲ ಇನ್ನು ನನಗೆ ಸಂಸಾರವೇ ಬೇಡ ಎಂಬು ದೊಡ್ಡ ದನಿ ತೆಗೆದು ಅಳಹತ್ತಿದನು. ಕೊನೆಗೆ ಆತನಲ್ಲಿ ವಿರಹ ದುಃಖ ಹೆಚ್ಚಾಗಿ ವಾಯು ಚಕ್ರದಂತೆ ಭ್ರಮಣ ಮಾಡುವ ಜೀವವು ಅವನನ್ನು ವೈರಾಗ್ಯದತ್ತ ಹೊರಳಿಸಿತು ವೈರಾಗಿಯಾಗಿ ಹೊರಟವನು

ಪುನಃ ಸಂಸಾರದಲ್ಲಿ ಬಿದ್ದು ದ್ವಿತೀಯ ಲಗ್ನ ಮಾಡಿಕೊಂಡು ಆನಂದ ದಲ್ಲಿ ನೇರಿದನು ಇದನ್ನೇ ಶ್ರೋತೃಗಳು ಅವಧಾನ ಪೂರ್ವಕವಾಗಿ ಮುಂದಿನ ಸಮಾಸದಲ್ಲಿ ಕೇಳತಕ್ಕದ್ದು '' ಎಂದು ಗುರುಗಳು ಹೇಳಿದರು

ಶ್ರೀ ರಾಮ|| ೩ ಸಗುಣ ಪರೀಕ್ಷ|| ಇಂತು ಜೀವಿಸುವ ಆ ಪ್ರಾಣಿಗೆ ದ್ವಿತೀಯ ಸಂಬಂಧ ವಿಧಿಯಾಯಿತು ಹಿಂದಿನ ದುಃಖ ಶೋಕಗಳು ಮರೆಯಾದವು ಸಂಸಾರದಲ್ಲಿ ಸುಖವನ್ನೆಣಿಸಿ ಇರಹತ್ತಿದನು. ಈಗ ಆತನು ಬಲು ಲೋಭಿಯು ಹೊಟ್ಟೆಗೆ ಸಹ ಪೂರಾ ತಿನ್ನನು ಪೈಗಾಗಿ ಪ್ರಾಣ ಕೊಡುವನು ಖರ್ಚು ವೆಚ್ಚಗಳೆಂದಿಗೂ ಇದ್ದಿರಲಿಲ್ಲ ಕೂಡಿ ಬಿದ್ದುದಕ್ಕೆ ಇನ್ನಿಷ್ಟು ಹಾಕಿ ಸಂಗ್ರಹಿಸುವನು. ಇಂಥವನಲ್ಲಿ ಒಳ್ಳೆಯ ವಾಸನೆಗಳು ಇರುವ ಬಗೆ ಹೇಗೆ ? ಸ್ವತ ದಾನ-ಧರ್ಮರಹಿತನು ಮತ್ತು ಹಾಗೆ ನಡೆಯುವವರಿಗೆ ಸೇರನು ಸತತವೂ ಸಜ್ಜನರ ನಿಂದೆ ಮಾಡುವನು ತೀರ್ಥ, ವ್ರತ, ಅತಿಥಿ ಸತ್ಕಾರ ಇವೆಲ್ಲವೂ ಆತನಿಂದ ಸಾಗುತ್ತಿರಲಿಲ್ಲ ಇರುವೆ ಒಂದು ಅಗಳನ್ನು ಕಚ್ಚಿಕೊಂಡು ಹೋಗುವದನ್ನು ಸಹಿಸದೆ ಅದನ್ನು ಕಸಿದು ಕೊಳ್ಳುವನು ಅವನು ಪುಣ್ಯ ಕರ್ಮ ರಹಿತನು ಅಂಥ ವರಿಗೆ ಚೇಷ್ಟೆ ಮಾಡುವವನು ದೇವ ಭಕ್ತರನ್ನು ಪೀಡಿಸುವನು ಅವರಿಗೆ ಬಿರು ನುಡಿಯಾಡುವನು ನೀತಿ ಮಾರ್ಗದಿಂದ ಚ್ಯುತನಾದನ ಸತತವೂ ಸೊಕ್ಕಿನ ವರ್ತನವುಳ್ಳವನಾಗಿದ್ದನು

ಮತ್ತೂ ಆತನು ತನ್ನ ಹಿರಿಯರಿಂದ ದೂರಾದನು, ಗತ ಪೂರ್ವ ಜರ ಶ್ರಾದ್ಧ ಪಕ್ಷ ತೊರೆದನು ಕುಲ ದೇವತೆಯನ್ನು ಸಹ ಪೂಜಿಸು ಸುವದನ್ನು ಬಿಟ್ಟನು ಅನ್ಯರನ್ನು ಆಮಂತ್ರಿಸದೆ ಅಕ್ಕ ತಂಗಿಯರಲ್ಲಿ ಒಬ್ಬರಿಗೆ ಮುತ್ತೈದೆಯೆಂದೂ ಬೀಗನಿಗೆ ಬ್ರಾಹ್ಮಣನೆಂದೂ ಆಮಂತ್ರಣ ನೀಡುವನು ಹರಿ ಕಥೆಗೆ ಮನಸು ಹಾಕನು ದೇವ ಪೂಜೆಯಿಲ್ಲ. ಸ್ನಾನ-ಸಂಧ್ಯೆಗಳು ನಿರರ್ಥಕ ವಾದವೆಂದು ಹೇಳುವನು ದುಡ್ಡು ಗಳಿಸುವ ಆಶೆಯಾತನಿಗಿತ್ತು. ಅನ್ಯರಿಗೆ ವಿಶ್ವಾಸ ಘಾತವೆಸಗುವನು ಪ್ರಾಯಪವ ನಾಗಿ ಮದೋನ್ಮತ್ತನಾಗಿದ್ದನು. ತನ್ನ ತಾರುಣ್ಯ ಮದದಿಂದ ಮಾಡ

ಬಾರದ ಕೆಲಸ ಮಾಡಿದ ಪಾಪಿಷ್ಠನವನು. ಹೆಂಡತಿ ಚಿಕ್ಕವಳೆಂದು ಪರಸ್ತ್ರೀಯರಲ್ಲಿ ಸೇರುವನು. ತಾಯಿ ಅಕ್ಕ ತಂಗೆಯರನ್ನು ಮರೆತನು ವಿಷಯ ಕರ್ದಮದಲ್ಲಿ ಹೊರಳಾಡುವನು. ರಾಜದ್ವಾರದಿಂದ ಆತನಿಗೆ ಶಾಸನಗಳಾದರೂ ಅವನ ವೃತ್ತಿ ಬದಲಿಸಲಿಲ್ಲ ಪರನಾರಿಯರ ದರ್ಶನ ವಾದ ಕೂಡಲೆ ಅವನು ದುರಾಚಾರ ಪ್ರವೃತ್ತನಾಗುವನು ದುಷ್ಕರ್ಮ ಮಾಡುವನು. ಅದಕ್ಕಾಗಿ ಬಹಳ ಕಷ್ಟ ಅನುಭವಿಸಿ ದಂಡಕ್ಕೊಳಗಾಗುವನು.

ಇಂತು ಆತನು ಹಲವು ಪಾಪ ಕರ್ಮ ಮಾಡಿದನು ಅವನಲ್ಲಿ ಶುಭಾಶುಭಗಳ ವಿಚಾರವಿರಲಿಲ್ಲ. ಆ ಪಾಪಗಳ ಫಲವಾಗಿ ಅವನ ಶರೀರವು ಕ್ಷಯ ಬೇನೆಗೀಡಾಯಿತು ತನ್ನ ಪಾಪ ಫಲವನ್ನು ತಾನೇ ತೀವ್ರ ಅನುಭೋಗಿಸುವನು ದುಃಖದ ಒತ್ತಡದಿಂದ ಅವನ ಶರೀರವೆಲ್ಲ ಒಡೆಯಿತು. ಮೂಗು ಕೂತಿತು ಅವನು ಕೆಟ್ಟ ಲಕ್ಷಣವುಳ್ಳವನಾದನು. ದೇಹದ ಕ್ಷೀಣತೆಯಿಂದ ಹಲವು ವ್ಯಥೆಗಳುದಿಸಿದವು. ಪ್ರಾಯದ ಶಕ್ತಿಯು ಕುಂದಿತು. ಮೈಯಲ್ಲೆಲ್ಲ ಶೂಲೆಹುಟ್ಟಿ ದೇಹವೆಲ್ಲ ಅವಲಕ್ಷಣವುಳ್ಳದ್ದಾಯಿತು. ಬಲವಿಲ್ಲದೆ ಶರೀರವು ನಡುಗಹತ್ತಿತು. ಕೈಕಾಲುಗಳು ಮೊದಲಾಗಿ ಅವಯವಗಳು ಬಲಗುಂದಿದವು ಶರೀರದ ತುಂಬೆಲ್ಲ ಹುಳುಗಳು ಬುಚುಗುಡ ಹತ್ತಿದವು ಆ ಸ್ಥಿತಿಯನ್ನು ಕಂಡವರೆಲ್ಲ ಹೇಸಿಕೊಳ್ಳುವಂತಾಯಿತು ಅವನ ಸುತ್ತೆಲ್ಲ ಮಲ— ಮೂತ್ರ ಅದರ ದುರ್ವಾಸನೆಯಿಂದ ಪ್ರಾಣಿಯು ಕೆಂಗೆಟ್ಟು—'ದೇವಾ' ಇನ್ನು ನನಗೆ ಮರಣವನ್ನು ಕೊಡು, ನನ್ನ ಜೀವ ಬಲು ಕಷ್ಟ ಪಡಹತ್ತಿದೆ - ನನ್ನ ಪಾಪಗಳು ನನಗೆ ತಿಳಿಯವು

ಎಂದು ಬಾಯ್ದೆರೆದು ನುಡಿದು ದುಃಖದಿಂದ ಬಿಕ್ಕಿ ಬಿಕ್ಕಿ ಅಳಹತ್ತಿದನು. ತನ್ನ ಅಂಗಾಂಗಗಳ ದುಃಸ್ಥಿತಿಯನ್ನು ತಾನೇ ಕಂಡು ತಳಮಳಿಸುವನು - ಇಂಥ ದುಃಸ್ಥಿತಿಯುಳ್ಳಿದ್ದ ಅವನನ್ನು 'ಎಲ್ಲರೂ ಬಿಟ್ಟು ಹೋದರು. ಅಂದಿನ ರಾತ್ರಿ ಅವನ ಮನೆಯನ್ನು 'ಕಳ್ಳರು ಹೊಕ್ಕರು- ಅವನ ಬದುಕನ್ನೆಲ್ಲ ದೋಚಿದರು- ಅವನ ಸಂಪತ್ತು ಇಹ - ಪರಕ್ಕೆ ಉಪಯೋಗಕ್ಕೆ ಬೀಳಲಿಲ್ಲ ದೈವಗತಿಯು ವಿಚಿತ್ರವಾದುದು! ಆತನು ತನ್ನ-

ಮಲಮೂತ್ರ ಸೇವಿಸುತ್ತಲೇ ಬಿದ್ದು ಬಿಟ್ಟನು. ಮುಂದೆ ಆತನ ಸಂಗ್ರಹಿತ ಪಾಪವೆಲ್ಲ ಕಡಿಮೆಯಾಯಿತು. ಔಷಧೋಪಚಾರದಿಂದ ಅವನಿಗಾದ ವ್ಯಥೆಗಳು ದೂರಾದವು ಸಾವಿಗೀಡಾದವನು ಬದುಕಿದನು 'ಇವನು ಮತ್ತೆ ಮನುಷ್ಯರನ್ನು ಕೂಡಿದನು.' ಎಂದು ಜನರಾಡ ಹತ್ತಿದರು. ಮತ್ತೆ ಬೇರೆ ಸ್ತ್ರೀಯನ್ನು ತಂದು ಮನೆತನ ಮಾಡಿಕೊಂಡಿರಹತ್ತಿದನು ಈಗ ಆತನಲ್ಲಿ ಅತ್ಯಂತ ಸ್ವಾರ್ಥಬುದ್ಧಿ. ಮತ್ತೆ ಸಂಪತ್ತು ಗಳಿಸಿದನು ಆದರೆ ಮಕ್ಕಳಾಗಲಿಲ್ಲ ಅವನಿಗೆ ವಂಶವಳಿಯಿತೆಂಬ ಚಿಂತೆ. ಜನರು ಬಂಜೆಯೆಂದು ಕರೆಯಹತ್ತಿದರು

ಆದರಿಂದ ಆತನು ಬಂಜೆತನ ಹಿಂಗುವದಕ್ಕಾಗಿ ಪ್ರಯಾಸಬಟ್ಟು ದೇವರಿಗೆ ಬೇಡಿಕೊಂಡನು ವ್ರತ ಉಪವಾಸಾದಿಗಳನ್ನು ಕೈಕೊಂಡನು ಅವನ ವಿಷಯ ಸುಖವು ಒತ್ತಟ್ಟಿಗುಳಿದು ಬಂಜೆತನವು ಅವನಲ್ಲಿದೇವಬುದ್ಧಿಯನ್ನು ಹುಟ್ಟಿಸಿತು ಮಕ್ಕಳ ಪ್ರಾಪ್ತಿಗಾಗಿ ಕ್ಷಣ ಸಹ ಕಳೆಯದೆ ವರ್ತಿಸಹತ್ತಿದನು ಮಕ್ಕಳಾಗದ್ದಕ್ಕೆ ದೊಡ್ಡ ದನಿ ತೆಗೆದು ಅಳುವನು ಸಂಚಿತ ಪಾಪದ ಮೂಲಕವಾಗಿಯೇ ನಾನು ಬಂಜೆಯಾಗಿರುವೆನೆಂದು ವ್ಯಥೆಪಟ್ಟು:- 'ದೇವಾ' ನನ್ನನ್ನು ಬಂಜೆಯನ್ನಾಗಿ ಏಕೆ ಇರಿಸಿರುವಿ? ಈ ದ್ರವ್ಯ ಸಂಪತ್ತಿನ ಉಪಯೋಗವೇನು? ಇದೆಲ್ಲ ಹೋದರೂ ಅಡ್ಡಿಯಿಲ್ಲ ನನಗೆ ಮಾತ್ರ ಮಕ್ಕಳಾಗಬೇಕು ಜನರಲ್ಲ ನನಗೆ ಆಜನ್ಮ ಬಂಜೆಯೆಂದೆನ್ನುವರು ಇದು ನನಗೆ ತಪ್ಪುವದಿಲ್ಲ ನನ್ನ ವೃತ್ತಿ ನಿಂತಿತು ವಂಶ ಮುಗ್ಗಿತು. ಕುಲದೀಪವು ನಂದಿತು' ಎಂದು ಆಕ್ರೋಶಿಸುತ್ತ ನುಡಿದನು.

' ದೇವಾ! ನನಗೆ ಸಂತತಿಯಾದರೆ ಆನಂದದಿಂದ ಕೆಂಡದಲ್ಲಿ ಹಾಯುವೆನು ಕುಲದೇವತೆಯೇ! ನಿನ್ನ ಮುಂದೆ ಶಿರಸ್ಸು ಕೊಡುವೆನು ನನ್ನ ಮಗನನ್ನು ನಿನ್ನ ಭೂತ್ಯಾ ಎಂಬ ಹೆಸರಿನ ಸೇವಕನನ್ನಾಗಿ ಮಾಡುವೆನು. ಅವನಿಗೆ ಕೇರಪುಂಜ ಎಂದು ಹೆಸರಿಡುವೆನು. ಅವನ ಮೂಗಿನಲ್ಲಿ ಮೂಗತಿ ಹಾಕುವೆನು । ಆದರೆ ನನಗೆ ಪುತ್ರ ಸಂತಾನ ನೀಡು' ಎಂದು ಬೇಡಿಕೊಂಡನು, ಬೈರಾಗಿಗಳನ್ನು ಹುಡುಕಿದನು ಚೇಳನ್ನು ನುಂಗಿದನು. ಯಂತ್ರ, ಮಂತ್ರ-ತಾಯಿತ ಧರಿಸಿದನು ಬ್ರಾಹ್ಮಣರನ್ನು ಸಂತುಷ್ಟಗೊಳಿಸಿದನು. ಇಂತು ಪುತ್ರಪ್ರಾಪ್ತಿಗೆ ಹಲವು ಕ್ರಿಯೆಗಳನ್ನನುಸರಿಸಿದನು ಆದರೆ ದುರ್ದೈ

ವದಿಂದ ಮಕ್ಕಳಾಗಲಿಲ್ಲ ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಗಿಡದ
ಬುಡದಲ್ಲಿ ಬತ್ತಲೆಯಿಂದ ಸ್ನಾನ ಮಾಡಿದನು ಫಲವೃಕ್ಷ ಕಡಿದನು
ಪುತ್ರಲೋಭದಿಂದ ಇವೆಲ್ಲ ಪಾಪ ಮಾಡಿದನು ವೈಭವದಲ್ಲಿ ಉದಾಸೀನ
ನಾದನು ಅವನ ಜೀವವು ಹವೆಯಲ್ಲಿ ನೇತಾಡುವಂತಾಯಿತು ಕೊನೆ
ಗೊಮ್ಮೆ ಖಂಡೇರಾವನೂ ಕುಲದೇವತೆಯೂ ಪ್ರತ್ಯಕ್ಷವಾಗಿ ಅವನ ಆಶೆ
ಪೂರೈಸಿದರು ಸತಿಪತಿಯರಿಗೆ ಒಳ್ಳೆ ಆನಂದ! ಶ್ರೋತೃಗಳು ಇದನ್ನು
ಮುಂದೆ ಅವಧರಿಸುವದು

ಶ್ರೀ ರಾಮ || ೪ ಸಗುಣಪರೀಕ್ಷೆ || ಅವನ ಬೇಡಿಕೆಯಂತೆ
ಮಕ್ಕಳು ಹುಟ್ಟಿದವು ಆದರೆ ಅವನ ಸಂಪತ್ತು ಹಾಳಾಯಿತು ಹೊಟ್ಟೆ
ಗಿಲ್ಲದೆ ಅವನು ಭಿಕ್ಷೆಗೆ ಗುರಿಯಾದನು ಆಟ, ನೋಟ, ಊಟಗಳಿಗಾಗಿ
ತೊಂದರೆ ಪಡಿಸುವ ಗಂಡು ಹೆಣ್ಣು ಮಕ್ಕಳು ಹುಟ್ಟಿಮನೆ ತುಂಬಿದರು. ದಿನದ
ವೆಚ್ಚ ಹೆಚ್ಚಿತು, ಬರತಕ್ಕದ್ದು ಬಾರದಾಯಿತು ಹೆಣ್ಣು ಮಕ್ಕಳು ಲಗ್ನ
ವಯಸ್ಸಿಗೆ ಬಂದರು ಈ ಮೊದಲು ಇವನ ಉಳಿದ ಎಲ್ಲ ಸಂಪ
ತ್ತುಳ್ಳವನಾಗಿದ್ದನೆಂದು ಜನರಲ್ಲಿ ಭ್ರಮೆಯಿತ್ತು ಮೊದಲಿನ ಸ್ಥಿತಿ ಈಗ
ಮನೆಯಲ್ಲಿಲ್ಲ ದಾರಿದ್ರ್ಯವು ಪ್ರಾಪ್ತವಾಗಿದೆ ಖರ್ಚು-ವೆಚ್ಚ ಮಿತಿ
ಮೀರಿ ಅವನಿಗೆ ಬಲು ಚಿಂತೆಯಾಗಿದೆ ಮಕ್ಕಳ ಮದುವೆ ಮಾಡುವದು
ಉಳಿದುದರಿಂದ ಲೋಕ ನಿಂದೆಗೆ ಗುರಿಯಾದನು. ಜನ್ಮದರಿದ್ರ ಸಂತತಿಗ
ಳಾದುದಕ್ಕೆ ತಳಮಳಿಸುವನು

ಕಡೆಗೆ ಅವನು ಜನಲಜ್ಜೆಗೆ ಬೆದರಿದನು ತನ್ನ ಹಿರಿಯರ ಪರಂಪರೆ
ಕಾಯ್ದುಕೊಳ್ಳಲು ಮಕ್ಕಳ ಲಗ್ನ ಹೂಡಿದನು ಕಾರ್ಯಕ್ಕಾಗಿ ಅವಶ್ಯವಿದ್ದ
ಹಣ ಸಾಲ ತೆಗೆಯಲು ಸಿದ್ಧನಾದನು ಹಿಂದೆ ತೆಗೆದ ಸಾಲ ಮುಟ್ಟಿಸಿರ
ಲಿಲ್ಲವಾದ್ದರಿಂದ ಈಗ ಸಾಲ ಹುಟ್ಟುವದು ಕಷ್ಟವಾಯಿತು ನಾವು ಅನ್ನ
ತಿಂದರೆ ಅನ್ನವೇ ನಮ್ಮನ್ನು ತಿನ್ನುವದೆಂಬ ಉದ್ವೇಗವು ಅವನಲ್ಲಿ ಮೂರ್ತಿ
ಮತ್ತಾಯಿತು ಕೊನೆಗೆ ನಿರ್ವಾಹವಿಲ್ಲದೆ ವಸ್ತ್ರ ಒಡವೆಗಳನ್ನು ಒತ್ತೆ
ಚೆಲ್ಲಿದನು. ಇದೊಂದು ದಿವಾಳಿಯೆಂದು ಮನೆಯ ಪದಾರ್ಥಗಳನ್ನು
ಗೊತ್ತಿಗೆ ಹಚ್ಚಿದನು, ಎತ್ತು-ಕ್ಷೋಣಗಳನ್ನು ಮಾರಿಬಿಟ್ಟನು. ಮತ್ತೆ
ಸಾಲದ್ದಕ್ಕೆ ರೋಖು ಹಣ ಸಾಲ ತೆಗೆದನು ಇಷ್ಟೆಲ್ಲ ವ್ಯವಸ್ಥೆ ಮಾಡಿ

ಕೊಂಡು ಕಾರ್ಯಭಾಗ ತೀರಿಸಿದನು ಎಲ್ಲರೂ ಇವನು ಹಿರಿಯರ ಹೆಸರು ಕಾಯ್ದುಕೊಂಡನೆಂದು ಹೊಗಳಹತ್ತಿದರು ದಿನಗಳೆದಂತೆ ಸಾಲದರಕಮು ದೊಡ್ಡದಾಯಿತು ಸಾಲ ಕೊಟ್ಟವರು ತೊಂದರೆ ಕೊಡಹತ್ತಿದರು ಸಾಲ ಮುಟ್ಟಿಸುವದಾಗದ್ದಕ್ಕೆ ಆತನು ದೇಶತ್ಯಾಗ ಮಾಡಿ ಎರಡು ವರ್ಷ ಅಜ್ಞಾತನಾಗಿದ್ದನು ಈ ಅವಧಿಯಲ್ಲಿ ಅವನು ದಾಸ್ಯತ್ವವನ್ನು ವಹಿಸಿ ದೇಹದಿಂದ ಕಷ್ಟವನ್ನನುಭವಿಸಿದನು

ವಿದೇಶದಲ್ಲಿದ್ದು ಸ್ನೇಹಿತರಿಂದ ದ್ರವ್ಯ ಗಳಿಸಿಕೊಂಡು ತನ್ನ ಒಡೆಯನ ಅಪ್ಪಣೆ ಪಡೆದು ಸ್ವದೇಶಕ್ಕೆ ತಿರುಗಿದನು ಮನೆಗೆ ಒಂದನು ನೋಡುತ್ತಾನೆ ಹೆಂಡಿರು ಮಕ್ಕಳೆಲ್ಲ ಇದು ವರೆಗೆ ಕಷ್ಟ ಸೋಸಿ ಇವನ ಮಾರ್ಗ ಪ್ರತೀಕ್ಷೆ ಮಾಡುತ್ತಿದ್ದರು ಸತಿಯು ದೇವನನ್ನು ಕುರಿತು 'ದೇವಾ ನನ್ನ ಪತಿಯು ಎಷ್ಟು ದಿವಸ ಹೋಗುವದು ಉಪವಾಸದಿಂದ ಸಾಯುವ ಸ್ಥಿತಿಯನ್ನು ಹೊಂದಿದೆವು ಇಂಥ ನಿರ್ದಯನ ಜೊತೆ ನಮಗೇಕೆ ನೀಡಿದಿ ಎಂದು ನುಡಿಯುತ್ತಿದ್ದಳು ಅವರು ತಮ್ಮ ಸುಖಕ್ಕಾಗಿ ತಳಮಳಿಸುತ್ತಿದ್ದರೇ ಹೊರತು ಇವನ ಕಷ್ಟವನ್ನೆಣಿಸಿದ್ದಿಲ್ಲ ಅಂತೂ ಒಂದು ಸಾರೆ ಮನೆ ಸೇರಿದ ಗಂಡನನ್ನು ಕಂಡು ಹೆಂಡತಿಗೆ ಆನಂದವಾವಾಯಿತು ಮಕ್ಕಳೆಲ್ಲ ಅವನನ್ನು ತಾತಾ ಎಂದು ಸುತ್ತರಿಯಹತ್ತಿದವು ಆತನು ತಾನು ತಂದಿದ್ದ ಗಂಟನ್ನು ಹೆಂಡತಿಯ ಕೈಗೆ ಕೊಟ್ಟನು ಆಕೆ ನಮ್ಮ ಬಡತನ ಹಿಂಗಿತೆಂದು ಉಬ್ಬಿದಳು, ಹುಡುಗರಿಗೆ ಹಿಡಿಸಲಾರದ ಸಂತೋಷ ನಮ್ಮ ಅಪ್ಪ ನಮಗೆ ಅಂಗಿ, ಟೊಪ್ಪಿಗೆ ತಂದಿರುವನೆಂದು ಹೇಳುತ್ತ ಕುಣಿದಾಡಹತ್ತಿದವು, ಎಲ್ಲರಿಗೂ ಉಂಟಾದ ಈ ಆನಂದದಲ್ಲಿ ನಾಲ್ಕು ದಿನಗಳು ಕಳೆದವು, ಮತ್ತೆ ಆ ಸತಿಪತಿಯರಲ್ಲಿ ಮನಸ್ತಾಪವುಂಟಾಯಿತು, ಆಗ ಹೆಂಡತಿಯ ಮನಸ್ಸಿನಲ್ಲಿ 'ಈತನು ಪುನಃ ವಿದೇಶಕ್ಕೆ ಹೋದರೆ ನಮಗೆ ಮತ್ತೆ ಆಪತ್ತು ಬರುವದು,

'ವಿದೇಶದಿಂದ ತಂದ ದ್ರವ್ಯದಿಂದ ಸುಖಪಡೆಯಲಿಕ್ಕಾಗುವದು,' ಬಿಟ್ಟರಿಂದ ಇವನು ಹೋಗುವದೇ ಒಳಿತು ಎಂಬುದು ಅವಳ ಬಯಕೆ. ಇದರಂತೆ ಉಳಿದವರ ವಾಸನೆಯೂ ಇದ್ದಿತು, ವಿದೇಶದಲ್ಲಿ ಕಷ್ಟವನ್ನನುಭವಿಸಿ

ವಿಶ್ರಾಂತಿಗಾಗಿ ಮನೆಗೆ ಬಂದ ಅವನಿಗೆ ಮತ್ತೆ ವಿದೇಶ ಗಮನವು ಎದುರಾಯಿತು. ಅದಕ್ಕಾಗಿ ಪ್ರಯಾಣ ಮುಹೂರ್ತ ಕೇಳಿದನು ಇಷ್ಟಾದರೂ ಅವನ ಮನಸ್ಸು ಮನೆ ಬಿಟ್ಟು ಹೊರಡದಾಯಿತು ಎಲ್ಲ ಸಾಮಾನು ಹಾಕಿದ ಗಂಟು ಸಿದ್ಧವಾಯಿತು ಬಳಿಕ ಆತನು ತನ್ನ ಮಕ್ಕಳನ್ನು ವಾತ್ಸಲ್ಯದಿಂದ ಕಂಡು, ಮಾರ್ಗ ಕ್ರಮಣ ಕೈಕೊಂಡನು ಹೊರಳಿ ಹೊರಳಿ ಹೆಂಡತಿಯನ್ನು ದೃಷ್ಟಿಸಿದನು, ಆಕೆಯ ಆಗಿನ ವಿಯೋಗ ದುಃಖವು ಅವನಿಗೆ ಅಸಹನೀಯವಾಯಿತು ಆತನು ತುಂಬಿದ ಕಂಠದಿಂದ ಹೆಂಡಿರು ಮಕ್ಕಳನ್ನು ಕುರಿತು 'ಇಂದಿಗೆ ನಮ್ಮ ನಿಮ್ಮ ಋಣಾನುಬಂಧನ ಮುಗಿದಂತಾಯಿತು' ಎಂದನು ತಂದೆ ಮಕ್ಕಳ ಅನ್ಯೋನ್ಯ ವಿಯೋಗತಾಪವು ಕ್ತ ಮಾತುಗಳಾದ ನಂತರ ಅವನು ಮತ್ತೆ- 'ಋಣಾನುಬಂಧವಿದ್ದರೆ ಪುನರ್ಮಿಲನ, ಇಲ್ಲವಾದರೆ ಇದೇ ಕೊನೆಯ ದರ್ಶನ' ಎಂದು ನುಡಿದು ಹೊರಟನು

ಕುದುರೆಯನ್ನೇರಿ ಹೊರಟ ಆತನು ಪುನಃ ಹಿಂದಿರುಗಿ ತನ್ನ ಮನೆಯ ಕಡೆಗೆ ನೋಡುವನು, ಹೆಂಡಿರು-ಮಕ್ಕಳ ವಿಯೋಗ ದುಃಖವು ಅವನಿಗೆ ಸಹಿಸದಂತಾಯಿತು ಕೆಲವು ದಾರಿ ನಡೆದನಂತರ ಅವನ ಚಿತ್ತವು ಸಂಸಾರದ ಉದ್ವೇಗದಿಂದ ಹುಚ್ಚಾಯಿತು ಅಭಿಮಾನಕ್ಕಾಗಿ ಸಂಸಾರ ಸಂಗದಿಂದ ದುಃಖಕ್ಕೆ ಗುರಿಯಾಯಿತು ಈ ಸಮಯದಲ್ಲಿ ಅವನಿಗೆ ತನ್ನ ತಾಯಿಯ ನೆನವಾಯಿತು ತನ್ನ ಸಲುವಾಗಿ ಆಕೆ ಅನುಭವಿಸಿದ ಕಷ್ಟಗಳನ್ನು ತಿಳಿಯುವ ತನ್ನ ಮೂರ್ಖತನಕ್ಕೆ ನೊಂದುಕೊಂಡನು ಅದರಂತೆ ತನ್ನ ಅಜ್ಜಿ [ಅಮ್ಮ]ಯನ್ನು ನೆನಿಸಿದನು ಎಂಥ ದರಿದ್ರ ಮಗನಿದ್ದರೂ ತಾಯಿಗೆ ಆತನು ಪ್ರೀತಿಯ ಮಗನಿಗಾಡ ಕಷ್ಟವು ಅವಳಿಗೆ ಅಸಹನೀಯವು ಜಗತ್ತಿನಲ್ಲಿ ಎಲ್ಲವೂ ಸಿಗುವದು ಆದರೆ ಜನ್ಮದಾತೆಯಾದ ತಾಯಿಯು ಮಾತ್ರ ಸಿಗಲಾರಳು ಆಕೆ ದುಷ್ಟೆಯಾದರೂ ತನ್ನ ತಾಯಿಯೇ ಅಹುದು ಸಾವಿರಾರು ಹೆಂಡಿರಿದ್ದರೂ ಅವರಲ್ಲಿ ತಾಯಿಯ ಮಮತೆ ಎಳ್ಳಷ್ಟೂ ಇರುವದಿಲ್ಲ ಇದನ್ನರಿಯದೆ ನಾನು ವಿಷಯಲಂಪಟನಾದೆನು. ನನ್ನ ಜನ್ಮವು ವ್ಯರ್ಥವಾಯಿತು. ಈ ಲಾಂಪಟ್ಯದ ಮೂಲಕವೇ ನಾನು ನನ್ನ ಜೀವನ್ಮಿತ್ರರ ಶತ್ರುವಾದೆನು ಅವರನ್ನು ನೀಚರೆಂದು ಭಾವಿಸಿದೆನು.

ಇಂತು ಆತನು ತನ್ನ ಸ್ಥಿತಿಯನ್ನು ಅರಿತು— 'ಜಗತ್ತಿನಲ್ಲಿ ತಾಯಿ ತಂದೆಗಳನ್ನು ಸ್ಮರಿಸುವವನು ಧನ್ಯನು ಸ್ನೇಹಿತರೊಡನೆ ಪ್ರೇಮದಿಂದ ನಡೆವವನು ಧನ್ಯನು ಹೆಂಡಿರು-ಮಕ್ಕಳು ಜನ್ಮದ ಸಂಗಡಿಗರಾದರೂ ತಾಯಿ ತಂದೆಗಳು ಮಾತ್ರ ಮತ್ತೆ ಸಿಗಲಾರರು ಇವೆಲ್ಲವುಗಳನ್ನು ನಾನು ಮೊದಲಿನಿಂದ ಕೇಳಿದ್ದರೂ ಆ ವಿಚಾರಗಳು ನನ್ನಲ್ಲಿ ಬರಬೇಕಾಗಿದ್ದವು ಬರಲಿಲ್ಲ ರತಿ ಸುಖದ ಮಡುವಿನಲ್ಲಿ ನನ್ನ ಮನಸ್ಸನ್ನು ಮಗ್ನವಾಗಿಸಿ ಕುರುಡನಾದೆನು ಪುತ್ರಕಲತ್ರಾದಿಗಳು ಜೀವ ಸಂಬಂಧಿಕರೆಂಬುವದು ಕೇವಲ ಮಾಯೆಯ ನುಡಿಯು ಅವರು ಕೇವಲ ಸಂಪತ್ತಿನ ಭೋಗಕ್ಕಾಗಿ ಒಟ್ಟುಗೂಡಿದರು ಏನಾದರೊಂದು ಇಲ್ಲವೆ ಹಲವು ಬಗೆಯಿಂದ ದ್ರವ್ಯ ಸಂಪಾದಿಸಿ ತಾರದೆ ಬರಿಗೈಯಿಂದ ಮನೆ ಸೇರುವದು ನನಗೆ ಲಜ್ಜೆಯೆನ್ನಿಸಿ ಅದು ದುಃಖವನ್ನುಂಟು ಮಾಡುವದು' ಇಷ್ಟೆಲ್ಲ ತನ್ನ ಸ್ಥಿತಿಯನ್ನು ನೆನಿಸಿ ಆತನು ದುಃಖಕ್ಕೊಳಗಾಗಿ ಚಿಂತಾಸಾಗರದಲ್ಲಿ ಮುಳುಗಿದನು ಆತನ ಶರೀರವು ಸ್ವಾತಂತ್ರ್ಯವಿಲ್ಲದೆ ಈಶ್ವರನನ್ನು ಸ್ಮರಿಸದೆ ಕುಟುಂಬದ ವಶವಾಯಿತು ಕೇವಲ ಕಾಮುಕ್ಕಾಗಿ ಆತನ ಜನ್ಮ ಕಷ್ಟಕ್ಕೆ ಸಿಕ್ಕಿತು ಆಯುಷ್ಯ ತೀರಲು ದೇಹಬಿಟ್ಟು ಜೀವನೊಬ್ಬನೇ ಹೋಗುವನು

ಈ ಪ್ರಕಾರವಾಗಿ ಆತನು ಮನಸಿನಲ್ಲಿ ಆಳವಾಗಿ ಆಲೋಚಿಸಿ ಕ್ಷಣಹೊತ್ತು ಉದಾಸೀನಗೊಂಡನು ಆದರೆ ಮತ್ತೆ ಆತನು ಮಾಯಾಜಾಲದಲ್ಲಿ ಸಿಕ್ಕು ಒದ್ದಾಡಹತ್ತಿದನು ಆಗ ಅವನಿಗೆ ಮಕ್ಕಳ ನೆನಪುಂಟಾಯಿತು ಅವರನ್ನು ತೊರೆದುದರಿಂದ ಮನಸಿನಲ್ಲಿ ದು'ಖ ಹೆಚ್ಚಾಯಿತು ಹಿಂದೆ ಅನುಭವಿಸಿದದು ಖಗಳೆಲ್ಲ ಒಂದರಿಂದೊಂದು ನೆನಪಾಗಿ ಆತನು ದೊಡ್ಡ ದನಿಯಿಂದ ಅಳಹತ್ತಿದನು ಬಳಿಕ ಅವನು ತಾನೇ ವಿಚಾರಿಸಿ– 'ಈ ನನ್ನ ಅಳುವಿಕೆಯು ಅರಣ್ಯರೋದನವು ಇಲ್ಲಿ ಯಾರೂ ನನ್ನನ್ನು ಸಾಂತ್ವನಗೊಳಿಸುವವರಿಲ್ಲ ಇನ್ನು ಮೇಲೆ ಅಳುವದು ವ್ಯರ್ಥ ಬಂದದ್ದನ್ನು ಭೋಗಿಸಲೇಬೇಕು" ಈ ಪ್ರಕಾರ ತನ್ನ ಜೀವಕ್ಕೆ ಬೋಧಿಸಿ ತನ್ನಲ್ಲಿ ಧೀರತೆ ತಂದುಕೊಂಡನು

ಆ ಪ್ರಾಣಿಯು ಇಂಥ ದುಃಖದಿಂದ ದಗದಗಿಸಿ ಒಳಿಕ ವಿದೇಶಕ್ಕೆ ಹೋದುದನ್ನೂ ಅಲ್ಲಿಂದ ಮುಂದೆ ವರ್ತಿಸಿದ ಪ್ರಸಂಗವನ್ನೂ ಶ್ರೋತೃಗಳು ಅವಧರಿಸಬೇಕು

ಶ್ರೀ ರಾಮ॥ ೫ ಸಗುಣ ಪರೀಕ್ಷೆ ॥ ಗುರುಗಳು ಶಿಷ್ಯನನ್ನು ಕುರಿತ ಮುಂದೆ ಹೇಳಿದ್ದೇನೆಂದರೆ —

ಆ ಬಳಿಕ ಆತನು ಪರದೇಶಕ್ಕೆ ಹೋಗಿ ಅಲ್ಲಿ ಉದ್ಯೋಗ ಕೈಕೊಂಡನ ಹಲವು ಬಗೆಯ ಕಷ್ಟಗಳನ್ನು ಅನುಭವಿಸಿ ನಾಲ್ಕೈರಡು ವರುಷಗಳಲ್ಲಿ ಉದ್ಯೋಗದಿಂದ ಸಫಲತೆ ಹೊಂದಿದನು ಅಂದರೆ ಅದೆಷ್ಟೋ ದ್ರವ್ಯ ಸಂಪಾದಿಸಿದನು. ಕೂಡಲೇ ಸ್ವದೇಶಕ್ಕೆ ಮರಳಿದನು ಆ ವರುಷ ಅವನ ನಾಡಿನಲ್ಲಿ ಮಳೆಯಾಗದೆ ಬರಗಾಲ ಬಿದ್ದಿತ್ತು. ಜನತೆಯೆಲ್ಲ ಕೂಳು ನೀರು ನೀರು ಸಿಗದೆ ಬಹಳ ಕಷ್ಟಕ್ಕೆ ಗುರಿಯಾಗಿತ್ತು ಅದ ರಂತೆ ಇವನ ಊರಿನ ಹಾಗು ಇವನ ಮನೆಯ ಜನರೂ ಅನ್ನಾನ್ನ ಗತಿಕರಾಗಿದ್ದರು ಬರಗಾಲ ಪೀಡಿತರಲ್ಲಿ ಅದೆಷ್ಟೋ ಜನರ ಗಲ್ಲುಗಳು ಪಚ್ಚುಗೊಂಡಿದ್ದವು ಕೆಲವರ ಕಣ್ಣುಗಳು ಒಳ ಸೇದಿದ್ದವು ಹಲ ವರು ಕಂಗಾಲ ಸ್ಥಿತಿಯಿಂದೆ ದೈನ್ಯವೃತ್ತಿಯುವರಾಗಿದ್ದರು ಕೂಳು ಸಿಗ ದ್ದಕ್ಕೆ ಬಹು ಜನರು ಮೇಲೆ ಮೇಲೆ ಬವಳಿಕೆಯಿಂದ ಬಳಲುತ್ತಿದ್ದರು ಅಂಗಾಂಗಗಳ ಸಾಮರ್ಥ್ಯ ಕುಂದಿ ಅವರ ಕೈಕಾಲುಗಳು ನಡಗುತ್ತಿ ದ್ದವು ಇದೆಲ್ಲ ಸ್ಥಿತಿಯನ್ನು ನೋಡುತ್ತ ಆತನು ತನ್ನ ಮನೆ ಸೇರಿ ನೋಡುತ್ತಾನೆ ಮನೆಯ ಹೆಂಡಿರ ಮಕ್ಕಳ ಗತಿಯೂ ಅಂತೆಯೇ ಉಂಟಾಗಿತ್ತು ಅವನ ಮಕ್ಕಳಲ್ಲಿ ಒಂದು ಸತ್ತು ಹೋಗಿತ್ತು ಇನ್ನು ಳಿದವು ಸಾಯುವ ಸ್ಥಿತಿಯಲ್ಲಿತ್ತು ಈ ಎಲ್ಲ ಭಯಾನಕ ಸ್ಥಿತಿಯನ್ನು ಆತನು ಕಂಡು ಬಹು ದುಃಖಿತನಾದನು ಶೋಕವು ಉದ್ವೇಗಗೊಂಡು ದೊಡ್ಡ ದನಿ ತೆಗೆದು ಅಳಹತ್ತಿದನು ಕೆಲಹೊತ್ತು ಆತನು ತನಗಾದ ಕಷ್ಟವನ್ನು ನೆನಿಸಿ ಬಿಕ್ಕಿ ಬಿಕ್ಕಿ ಅತ್ತನಂತರ ಕೂಳಿಲ್ಲದೆ ಬವಳಿಕೆ ಬಂದು ಬಿದ್ದಿದ್ದ ಅವನ ಮಕ್ಕಳು ಮೂರ್ಛೆ ತಿಳಿದೆದ್ದು ತಂದೆಯ ಮುಖವನ್ನು ಕಂಡು ಇಲ್ಲದ ಉಲ್ಹಾಸ ತಂದುಕೊಂಡವು ಕ್ಷಣಕಾಲ ಹಸಿವಿನ ಬಾಧೆ ಯನ್ನು ಅವು ಮರೆತಿದ್ದರೂ ಕೂಡಲೆ ಅವೆಲ್ಲವು 'ಅಪ್ಪಾ' ನನಗೆ ಊಟ

ಕ್ಕೆ ಹಾಕ್ಯು ನವುಗೆ ತಿನಿಸುಕೊಡು, ನುಂತಹಾಗ ದೈನ್ಯದಿಂದ ಬಾಯ್ತೆರೆದು ಬೇಡಹತ್ತಿದವು. ಅದೇ ಊರಿಂದ ಬಂದ ಅವನ ಗಂಟನ್ನು ಬಿಚ್ಚಿ ದವು ಅವನು ಕಟ್ಟಿ ತಂದಿದ್ದ ತಿನಿಸು ಉಣಿಸುಗಳನ್ನೆಲ್ಲ ಆ ಮಕ್ಕಳು ಕೇಳು ಅವಸರ ಪಡ ಹತ್ತಿದವು ಆತನು ಆ ಮಕ್ಕಳ ಹಸಿವೆಯು ಆತುರತೆ ನೋಡಿ ಲಗು ಒಗೆಯಿಂದ ಅವಕ್ಕೆ ಊಟಕ್ಕೆ ನೀಡಿದನು ಹಲವು ದಿನ ಕೂಳಿಲ್ಲದೆ ಬಳಲುತ್ತಿದ್ದ ಆ ಹುಡುಗರು ಒಮ್ಮೆಲೇ ಊಟ ಮಾಡು ತ್ತಿರುವಾಗ ಕರಳಿಗೆ ಕೂಳು ಹತ್ತಿ ಒಂದೆರಡು ಮಕ್ಕಳ ಹೊರತು ಉಳಿದವೆಲ್ಲ ಸತ್ತು ಬಿದ್ದವು ಉಳಿದ ಮಕ್ಕಳೂ ಕೂಡ ಮುಂದೆ ಕೆಲ ದಿನಗಳಲ್ಲಿ ತಾಯಿಯನ್ನು ಕಳೆದುಕೊಂಡು ಮಾತೃ ಹೀನವಾದವು ಇಂತು ಆತನ ಮನೆತನವೇ ಕ್ಷಾಮಕ್ಕೆ ಗುರಿಯಾಗಿ ಮುಳುಗಿದಂತಾ ಯಿತು ಮರು ವರ್ಷ ಆ ನಾಡಿನಲ್ಲಿ ಸುಭಿಕ್ಷವು ಪ್ರಾಪ್ತವಾಯಿತು, ಆತ ನು ಮಕ್ಕಳ ಪೋಷಣೆಗಾಗಿ ತಾನೇ ಅಡಿಗೆ ಮಾಡದ ಹೊರತು ಗತ್ಯಂತರ ವಿಲ್ಲದಾಯಿತು ಕೆಲ ದಿವಸ ಅವನ ಕಷ್ಟಕ್ಕೆ ಮಿತಿಯಿಲ್ಲದಾಯಿತು, ಎಷ್ಟೋ ಜನರು ಆತನಿಗೆ ಎರಡನೆಯ ಲಗ್ನ ಮಾಡಿಕೊಳ್ಳಲು ಮನ ಸೊಪ್ಪುವಂತೆ ಹೇಳಿದರು ಅದು ಅವನಿಗೆ ಸರಿದೋರಿ ಆಗಲೇ ಎರಡ ನೆಯ ಲಗ್ನ ಮಾಡಿಕೊಂಡನು ಲಗ್ನಕ್ಕಾಗಿ ಇದ್ದ ಹಣವನ್ನೆಲ್ಲ ಖರ್ಚು ಮಾಡಿದನು ಕೈ ಬರಿದಾಗಲು ಪುನಃ ದ್ರವ್ಯ ಸಂಪಾದನೆಗಾಗಿ ಮತ್ತೆ ಪರದೇಶ ಪ್ರಯಾಣ ಬಳಿಸಿದನು ಕೆಲದಿನ ವಿದೇಶದಲ್ಲಿ ಉದ್ಯೋಗ ದಿಂದ ದ್ರವ್ಯಾರ್ಜನೆ ಮಾಡಿಕೊಂಡು ಮನೆಗೆ ಬಂದನು

ಈಗ ಮನೆಯಲ್ಲಿಯ ಮಕ್ಕಳಲ್ಲಿ ಮತ್ತು ಹೆಂಡತಿಯಲ್ಲಿ ಮಲತಾಯಿ ಮಲ ಮಕ್ಕಳೆಂಬ ವಿರೋಧ ಭಾವನೆ ಹುಟ್ಟಿ ಪರಸ್ಪರ ಕಲಹಗಳು ಹುಟ್ಟಿ ಬೆಳದಿದ್ದವು ಹೆಂಡತಿಯು ಮೊದಲ ಪ್ರಾಯದವಳು ಗಂಡನು ವೃದ್ಧ ನಾಗಿ ಶಕ್ತಿಗುಂದಿದವನು ಅಂದಮೇಲೆ ಕೇಳುವದೇನು ? ಹುಡುಗ ಹುಡುಗರಲ್ಲಿ ಮಲತಾಯಿ ಮಲ ಮಕ್ಕಳಲ್ಲಿ ಕಲಹವು ನಿತ್ಯ ಬಳಕೆ ಯದಾಗಿ ಬಿಟ್ಟಿತು. ಮುದುಕನಾದ ಈ ಪ್ರಾಣಿಯು ಹೆಂಡತಿಯ ಮೋಹಕ್ಕೆ ಸಿಕ್ಕು ಗೃಹ ಕಲಹದಲ್ಲಿ ಆಧಾರಿಗೂ ಬುದ್ಧಿ ಹೇಳುವದಕ್ಕೆ ಅವನ ಮನಸು ಒಪ್ಪುತ್ತಿರಲಿಲ್ಲ

ಎವರೆಲ್ಲರಿಗೂ ಕೂಡಿ ನಡೆಯುದಂತಾಯಿತು. ಊರೊಳಗಿನ ಹಿರಿಯರು ಕೂಡಿದರು ಆ ಪಂಚರು ಆತನ ಆಸ್ತಿಯನ್ನು ಪಾಲು ಮಾಡಿ ಕೊಟ್ಟರು ಈ ಪಂಚರ ಹಂಚಿಕೆಯು ಆ ಎರಡೂ ಪಂಗಡದ ಅವನ ಮಕ್ಕಳಿಗೆ ಸರಿಯೆನಿಸಲಿಲ್ಲ ಹೀಗಾಗಿ ಗೃಹ ಕಲಹ ಶಾಂತವಾ ಲಿಲ್ಲ ಕೊನೆಗ ತಂದೆ– ಮಕ್ಕಳಲ್ಲಿ ಕೈಗೆ ಕೈಹತ್ತಿ ಬಡಿದಾಟವಾಯಿತು ಮುದುಕನಾದ ಈ ಪ್ರಾಣಿಗೆ ಮಕ್ಕಳಿಂದ ಒಳಿತಾಗಿ ತಾಡನ ದೊರೆತವು ಅದನ್ನು ಕಂಡು ಹೆಂಡತಿಯು ಬೊಬ್ಬೆ ಕುಟಿದಳು ಓಣಿಯ ಜನರು ಆವರ ಈ ಬಡಿದಾಟವನ್ನು ಬಹಳ ಕೌತುಕದಿಂದ ನೋಡುತ್ತ ನಿಂತಿದ್ದರೇ ಹೊರತು ಬಿಡಿಸಲು ಮುಂದೆ ಬರಲಿಲ್ಲ ಕೊನೆಗೆ ಮಕ್ಕಳು ತಂದೆಯನ್ನು ಕೆಲಸಕ್ಕೆ ಬಾರದಂತೆ ಮಾಡಿ ಕೆಡವಿದರು ಮಕ್ಕಳ ಪ್ರಾಪ್ತಿಗಾಗಿ ದೇವರಲ್ಲಿ ಮೊರೆಯಿಟ್ಟ ಕಷ್ಟಪಟ್ಟ ತಂದೆಯು ಮಕ್ಕಳಿಂದ ಇಂತು ದುರ್ದೆಸೆ ಗೀಡಾದುದನ್ನು ಕಂಡು ಊರ ಜನರೆಲ್ಲ ಕಳವಳಿಸಿದರು, ಆದಕ್ಕಾಗಿ ಪತ್ತೆ ಊರ ಹಿರಿಯರು ಈ ನ್ಯಾಯ ಬಗೆಹರಿಸಲು ಸೇರಿದರು ತಂದೆಯು ಮಕ್ಕಳನ್ನು ಬಿಟ್ಟು ಬೇರೆಯಿರಬೇಕೆಂದು ಪಂಚರ ನಿರ್ಣಯವಾಯಿತು ಇದರಲ್ಲಿ ಆ ಪಂಚರು ಸ್ವಾರ್ಥ ಸಾಧಿಸಿ ಕೊಂಡರು

ಆ ಬಳಿಕ ಈ ವೃದ್ಧನು ಮನೆ ಬಿಟ್ಟು ಬೇರೆ ಯಿರಹತ್ತಿದನು ಈಗಂತೂ ಆವನ ಕಷ್ಟವು ಅನಿವಾರವಾಯಿತು ಆದರೆ ತನ್ನ ದ್ವಿತೀಯ ಸಂಬಂಧಿಕ ಪತ್ನಿಯೇ ತನ್ನ ಐಶ್ವರ್ಯವೆಂಬ ಭಾವನೆಯಿಂದ ಸಮಾಧಾನ ತಿಳಿಯಹತ್ತಿದನು ಚೆಲುವೆಯೂ ಗುಣವತಿಯೂ ಆದ ತನ್ನ ಹೆಂಡತಿಯನ್ನೇ ನಂಬಿ ಆನಂದ ಪಡ ಹತ್ತಿದನು ಹೀಗೆ ಎಲ್ಲ ದುಃಖಗಳನ್ನು ಮರೆತು ಇರುವಷ್ಟರಲ್ಲಿ ಆ ಊರಿಗೆ ಒಮ್ಮಿಂದೊಮ್ಮೆ ದಾಳಿಗಾರರು ಬಂದು ದಂಗೆ ನಡಿಸಿದರು ಜನರ ವಿತ್ತಾದಿಗಳ ಹರಣ ನಡೆಯಿತು ಆಗಲೇ ಈ ಮುದುಕನ ಸಂಪತ್ತೆಲ್ಲ ಆ ಪುಂಡರ ಕೈಸೇರಿತು. ಅವರು ಇಷ್ಟಕ್ಕೇ ಬಿಡದೆ ಅವನ ಮೋಹದ ಹೆಂಡತಿಯನ್ನು ಅಪಹರಿಸಿದರು.

ಸತಿಯು ಕಣ್ಮರೆಯಾದುದರಿಂದ ಆ ಮುದುಕನ ಹೃದಯಕ್ಕೆ ಒಳ್ಳೆ ಆಘಾತವಾಯಿತು ಮತ್ತೆ ಮತ್ತೆ ಹೆಂಡತಿಯನ್ನು ನೆನಿಸಿ ಅಳ ಹತ್ತಿದನು ಇಂತು ಅವನ ಕಷ್ಟಕ್ಕೆ ಮಿತಿಯಿಲ್ಲದಾಯ್ತು ಮುಂದೆ ಸ್ವಲ್ಪ ದಿವಸಗಳಲ್ಲಿ ಅವನ ಹೆಂಡತಿಯನ್ನು ಪುಂಡರು ಭೃಷ್ಟಗೊಳಿಸಿ ದರೆಂಬ ವಾರ್ತೆಯು ಆತನಿಗೆ ತಿಳಿಯಿತು ಈಗಂತೂ ಆತನು ಗತ ಪ್ರಾಣನಾದನು ನೆಲಕ್ಕೆ ಬಿದ್ದು ಒದ್ದಾಡ ಹತ್ತಿದನು ಬಿಕ್ಕಿ ಬಿಕ್ಕಿ ಅಳಹತ್ತಿದನು, ಶೋಕಾಗ್ನಿಯಿಂದ ಅವನ ಚಿತ್ತವು ಹುರುಪುಳಿ ಸಿತು ತನ್ನ ದ್ರವ್ಯವೆಲ್ಲ ಲಗ್ನಕ್ಕಾಗಿ ವೆಚ್ಚವಾಯಿತು ಉಳಿದಷ್ಟು ಪುಂಡರ ಪಾಲಾಯಿತು ಹೆಂಡತಿಯೂ ಕಣ್ಮರೆಯಾಗಿ ಜಾತಿ ಭ್ರಷ್ಟ ಳಾದಳು, ನಾನಂತೂ ಮುದಕನಾದೆ ಮಕ್ಕಳು ಹೊರತಳ್ಳಿದರು ದೇವಾ! ನಾನೆಂಥ ದುರ್ಭಾಗ್ಯನು? ಎಂದು ಆತನು ದೇವನನ್ನು ಕುರಿತು —

'ದೇವಾ! ನಾನು ಎಲ್ಲದರಿಂದ ನಿರ್ಗತಿಕನಾದೆನು ನೀನೊಬ್ಬನೇ ನನಗೆ ಗತಿ! ಮೊದಲು ನಾನು ನಿನ್ನನ್ನು ಸ್ಮರಿಸಲಿಲ್ಲ ಸಿರಿ ಸಂಪತ್ತಿನ ಮದದಲ್ಲಿ ಮಗ್ನನಾಗಿದ್ದೆನು ಇತ್ಯಾದಿಯಾಗಿ ತನ್ನ ಗತಕಾಲವನ್ನು ತೋಡಿಕೊಂಡು ಅಳಹತ್ತಿದನು ಆದರೆ ಆಗುವದೇನು? ಮುಪ್ಪಿನಿಂದ ಆತನ ಶರೀರವೆಲ್ಲ ಹಣ್ಣಾಗಿ ಹೋಗಿದೆ ಅಂಗಾಂಗಗಳೆಲ್ಲ ಉಡುಗಿರು ವವು, ವಾತ ಪಿತ್ತಗಳು ವರ್ಧಿಸಿರುವವು, ಕಫವು ಆತನ ಕಂಠದಲ್ಲಿ ಪೂರ್ಣವಾಗಿ ತುಂಬಿದೆ ನಾಲಿಗೆಯು ತೊದಲಿನ ಹತ್ತಿದೆ ಕಫಾದಿಗ ಳಿಂದ ಹುಟ್ಟಿದ ದುರ್ಗಂಧವು ಮುಖ ದ್ವಾರದಿಂದ ಹೊರಬೀಳಹತ್ತಿದೆ ಜೊಲ್ಲು ಸುರಿಯುತ್ತಿದೆ ಮೂಗಿನಿಂದ ಶ್ಲೇಷ್ಮವು ಒಸರುತ್ತಿದೆ ತಲೆ ತೂಗಾಡ ಹತ್ತಿದೆ ಕಣ್ಣುಗಳಿಂದ ಬಳಬಳನೆ ಕಣ್ಣೀರು ಸೋರಹತ್ತಿದೆ ಹಲ್ಲುಗಳ ಸಾಲುಗಳು ಕಿತ್ತು ಹೋಗಿವೆ ಅದರಿಂದ ಅವನ ಬಾಯಿ ಯು ಬೊಚ್ಚಾಗಿ ಬಿಟ್ಟಿದೆ ಇದೂ ಅಲ್ಲದೆ ಅವನ ಕರ್ಮೇಂದ್ರಿಯ ಗಳ ವ್ಯಾಪಾರ ಕುಂದಿ ಹೋಗಿದೆ ಕಣ್ಣುಗಳು ಕಾಣಲೊಲ್ಲವು, ಕಿವಿ ಗಳು ಕಿವುಡಾದವು, ಗಂಟಲಿನಿಂದ ದೀರ್ಘ ಸ್ವರ ಹೊರಡದಾಗಿದೆ ಕಾಲುಗಳಲ್ಲಿ ಬಲವಿಲ್ಲ, ಕುಳಿತುಕೊಳ್ಳಲು ಬರಲೊಲ್ಲದು, ಬಾಯಿಯು ಒಂದೇ ಸವನೆ ವಟವಟ ಒದಿಯ ಹತ್ತಿದೆ ಮತ್ತೂ ಆತನಲ್ಲಿ—

ಹಸಿವೆ ತಡೆಯುವ ಸಾಮರ್ಥ್ಯವಿಲ್ಲ, ಆಹಾರವು ಸಮಯಕ್ಕೆ ಸಿಗದಂತಾಗಿದೆ ಒಂದು ವೇಳೆ ದೊರೆತರೂ ಅದನ್ನು ಅಗಿದು ತಿನ್ನಲು ಹಲ್ಲುಗಳಿಲ್ಲ ಆ ಅನ್ನವನ್ನು ಜೀರ್ಣ ಮಾಡುವ ಪಿತ್ತವು ಅವನ ದೇಹದಲ್ಲಿಲ್ಲ ಇಷ್ಟಾದರೂ ಅವನು ಅನ್ನ ಸ್ವೀಕರಿಸಿದರೆ ಆಗಲೇ ವಾಂತಿಯಾಗುವದು ಇಲ್ಲವೆ ಅಪಾನ ದ್ವಾರದಿಂದ ಹೋಗುವದು. ಅವನ ಹೊಲಸಿನ ದುರ್ಗಂಧವು ಸುತ್ತೆಲ್ಲ ಇಡಗಿ ಅದು ತಾಗಿದ ಜನರ ಶ್ವಾಸ ನಿರೋಧವಮಾಡಿ ಬಿಡುವಂತಿತ್ತು ಇಂತು ಆ ಮುದುಕನಿಗೆ ಹಲವು ದು ಖಗಳೂ, ಬೇನೆಗಳೂ, ಮುಪ್ಪೂ ಕೂಡಿ ಅವನ ಬುದ್ಧಿಯು ಹಿಂಜಾಳಿಸಿತು ಇಷ್ಟಾದರೂ ಅವನ ಆಯುರ್ಮರ್ಯಾದೆಯೂ ಇನ್ನೂ ಮುಗಿಯಲಿಲ್ಲ ದೇಹ ಪರಾಧೀನತೆಯುಳ್ಳದಾದರೂ ಅದು ನಾಶವಾಗಲಿಲ್ಲ. ಆತನ ಜನ್ಮದಿಂದ ರಕ್ಷಿತವಾದವೆಲ್ಲವೂ ಅವನ ಉಪಯೋಗಕ್ಕೆ ಬಾರದಂತಾದವು, ಹೇಗಾಗಿ ಆ ಪ್ರಾಣಿಗೆ ಕೊನೆಗೆ ವಿಷಮ ಸ್ಥಿತಿಯುಂಟಾಯಿತು.

ಅವನ ತಾರುಣ್ಯವೂ ಬಲವೂ ಲಯವಾದವು ಅವನ ಪ್ರಪಂಚವು ಕಷ್ಟವೆಂಬ ಗಾಳಿಯು ಹೊಡೆತಕ್ಕೆ ಸಿಕ್ಕು ಅವನ ಶರೀರವೂ ಸಿರಿವಂತಿಕೆಯೂ ಹಾಳಾದವು ಸಾಯುವ ವರೆಗೆ ಸ್ವಾರ್ಥತೆಯಿಂದ ಸಂಪಾದಿಸಿದ್ದೆಲ್ಲವೂ ವ್ಯರ್ಥವಾಯಿತು ಮಾನವನಿಗೆ ಅಂತ್ಯ ಕಾಲವು ಹೇಗೆ ವಿಷಯ ಕಾಲಕ್ಕೆ ಪರಿವರ್ತಿಸುವದೆಂಬುದು ಇದರಿಂದ ಗೊತ್ತಾಗುವದು ಆ ಮಾನವನು ಸುಖ ಪಡೆಯುವ ನಿಮಿತ್ತವಾಗಿಯೇ ಯತ್ನಿಸಿದನು, ದುಃಖಾಗ್ನಿಯಿಂದ ಬೆಂದು ತಳಮಳಗೊಂಡಳು, ಇಷ್ಟಾದರೂ ಮುಂದೆ ಅವನ ಮರಣೋತ್ತರ ಸುಖವೇ ಸಿಗಲಿಲ್ಲ ಯಮ ಯಾತನೆಯ ಘೋರ ಕಷ್ಟವನ್ನು ಅನುಭವಿಸಬೇಕಾಯಿತು

ಜನ್ಮವು ಕೇವಲ ದುಃಖದ ಮೂಲವು ಅದಕ್ಕೆ ದುಃಖದ ಬೆಂಕಿಯೇ ಹತ್ತಿರುವದು ಅದಕ್ಕಾಗಿ ಪ್ರತಿಯೊಬ್ಬರು ಕೂಡಲೆ ಸ್ವಹಿತವನ್ನು ಸಾಧಿಸಿಕೊಳ್ಳತಕ್ಕದ್ದು ಅದರಲಿ ಮಾನವನಿಗೆ ಮುಪ್ಪಿನ ಅವಸ್ಥೆಯು ಅತಿ ಭಯಂಕರವಾದುದು ಅಂತೆಯೇ ಭಗವಂತನಿಗೆ ಮೊರೆಹೋಗ

ಬೇಕು. ಮುಂದೊದಗುವ ಮುಪ್ಪಿಗಾಗಿ ಗರ್ಭಾವಸ್ಥೆಯು ಪ್ರಸ್ತಾವನೆ ಯಾಗುವದ ಹಾಗು ಅದ ಅಂತ್ಯ ಕಾಲದವರೆಗೆ ಬೇರೆ ಬೇರೆ ಅವಸ್ಥೆ ಯಾಗಿ ನಾಗುವದು ಅದ್ದರಿಂದಲೇ ಜೀವನು ಪೂರ್ವ ಜನ್ಮವನ್ನು ಬಿಟ್ಟು ತಾಯಿಯು ಉದರವನ್ನು ಹೊಂದಿ ಬೇರೊಂದು ಜನ್ಮ ಹೊಂದು ವದು ತನ್ಮೂಲಕನಾಗಿಯೇ ಈ ಸಂಸಾರವು ಅತಿ ಕಠಿಣತರವೆಂಬುದರ ಅರಿವು ಉಂಟಾಯಿತು

ಕೊನೆಗೆ ಹೇಳುವದೇನೆಂದರೆ ಈ ಜನ್ಮಯೋನಿಯು ಭ ವದ್ಭಜನೆಯು ಹೊರತು ದೂತರಾಗುವದಿಲ್ಲ ಇನ್ನು ಆ ತಾಪಗಳ ಮೂಲಕ ತೋರುವ ಕಷ್ಟ ವಿವರಣೆಯನ್ನು ಮುಂದೆ ಹೇಳಿದೆ

ಶ್ರೀ ರಾಮ || ೬ ಆಧ್ಯಾತ್ಮಿಕ ತಾಪ || ಇನ್ನು ತಾಪತ್ರಯುಗಳ ಲಕ್ಷ ಣವನ್ನು ಚಿತ್ತಗೊಟ್ಟು ಅವಧರಿಸಬೇಕು ಯಾವದೊಂದು ವಸ್ತುವಿನ ಆಶೆಯುಳ್ಳ ಮಾನ ನಿಗೆ ಅದು ಪ್ರಾಪ್ತವಾದ ನಂತರ ಅವನಿಗ ಬಹು ಸಂತೋಷವಾಗುವದು ಅದರಂತೆಯೇ ಸಂಸಾರ ತಾಪಯುಕ್ತ ಮಾನ ವನು ಸತ್ಸಂಗತಿಯ ಸಹವಾಸದಿಂದ ತೋಷ ಹೊಂದುವನು ಹಸಿದವನಿಗೆ ಅನ್ನವೂ ನೀರಡಿಸಿದವನಿಗ ನೀರೂ, ಬಂಧಿತನಾದವನಿಗೆ ಮುಕ್ತತೆಯೂ, ನೀರಲ್ಲಿ ಮುಳುಗಿದವನಿಗೆ ತೀರ ಸಂಪರ್ಕವೂ, ಕನಸಿನಲ್ಲಿ ಭಯಗೊಂಡವ ನಿಗೆ ಎಚ್ಚರಿಕೆಯೂ, ಮರಣೋನ್ಮುಖನಿಗೆ ಜೀವದಾನವೂ, ಸಂಕಟಗ್ರಸ್ತ ನಿಗೆ ಗಂಡಾಂತರ ನಿವಾರಣೆಯೂ, ಬಹು ಕಾಲ ನರಳುವ ರೋಗಿಗ ಅನು ಭವಿಕ ಹಾಗೂ ಶುದ್ಧ ಔಷಧವೂ ಇವೆಲ್ಲವು ಅಕಸ್ಮಾತ ಪ್ರಾಪ್ತವಾಗಿ ಉಂಟಾಗುವ ಆನಂದವು ಪರಮಶ್ರೇಷ್ಠವು ಅದರಂತೆ ತಾಪತ್ರಯುಗಳಿಂದ ಸಂತಪ್ತನಾದವನಿಗೆ ಸತ್ಸಹವಾಸದಿಂದ ಪರಮಾನಂದವಾಗುವದು. ಸಂಸಾರ ದು ಖ ಹಾಗು ತಾಪತ್ರಯುಗಳಿಂದ ಬೆಂದ ಮಾನವನೇ ಪರಮಾರ್ಥ ಗಳಿ ಸಲು ಯೋಗ್ಯತೆಯುವನಾಗುವನು

ಇನ್ನು ತಾಪತ್ರಯುಗಳ ಲಕ್ಷಣಗಳನ್ನು ವಾಕ್ಯಾಧಾರದಿಂದ ಹೇಳು ನೆವು ಈ ತಾಪಗಳಲ್ಲಿ ಆಧ್ಯಾತ್ಮಿಕ, ಆಧಿಭೌತಿಕ ಹಾಗು ಆಧಿದೈವಿಕ ವೆಂದು ಮೂರು ಪ್ರಕಾರಗಳಿರುವವು ಇವೆಲ್ಲವುಗಳ ವಿಸ್ತೃತವಾದ

ವಿಚಾರವನ್ನು ಇಲ್ಲಿ ಹೇಳಿದೆ ಅವುಗಳಲ್ಲಿ ಆಧ್ಯಾತ್ಮಿಕ ತಾಪದ ಲಕ್ಷಣ ಇಂತಿರುವದು, ಅವಧರಿಸಬೇಕು.

ದೇಹ, ಇಂದ್ರಿಯ ಹಾಗು ಪ್ರಾಣ ಇವುಗಳ ಯೋಗದಿಂದ ಸುಖ-ದುಃಖ ಮುಂತಾದ ಯಾತನೆಗಳುಂಟಾದವಕ್ಕೆ ಆಧ್ಯಾತ್ಮಿಕ ತಾಪ ಎಂದೆನ್ನುವರು ಶರೀರ ಹಾಗು ಮನಸು ಇವುಗಳಿಗಾಗುವ ವ್ಯಾಧಿ ವೇದನೆಗಳು ಕೂಡಿ ಆಧ್ಯಾತ್ಮಿಕತಾಪವೆನ್ನಿಸುವವು ಶರೀರವ್ಯಾಧಿಗಳು-

ಹುರುಕು ಕಜ್ಜಿಗಳು, ತಲೆಯಲ್ಲಾದ ಹುಣ್ಣು, ನಾರು, ಉಗರಸುತ್ತು ಬಗಲಲ್ಲಾಗುವ ಮಂಜರಿ, ಮೈಲಿಬೇನೆ, ಗೊಬ್ಬರು, ದೇಹದ ವಿಕಾರಗಳು, ಕೂದಲು ಉದುರುವದು. ಮೈಮೇಲಿನ ಕಟ್ಟ ಕಲೆಗಳು, ಕರೆಯ ಚುಕ್ಕೆಗಳು, ಮೂಲವ್ಯಾಧಿ, ಗಣಲಿನ ಹುಣ್ಣು, ಕಪಾಳಬಾವು, ಮೈತಿಂಡಿ, ಕಲ್ಲೊತ್ತು, ಹಲ್ಲಿನಲ್ಲಿ ಹಳದೀ ಕಿಟ್ಟ, ಶೂಲೆ, ಬೊಕ್ಕೆ, ಮೈನೋವು, ವಾತ, ಇಸಬು, ಗಜಕರ್ಣ, ಪ್ಲೀಹ, ಉದರ ರೋಗ, ಕಿವಿಸೋರುವದು, ಚುಕ್ಕೆಚುಕ್ಕೆಯಾದ ಬಿಳುವು, ವ್ಯಾಪಕ ಬಿಳುಪು, ಪಾಂಡುರೋಗ, ಕ್ಷಯ ರೋಗ, ಮೂಂಡೆ, ಮೋಲೆಹಾಲಿನ ದೋಷದಿಂದಾದ ರೋಗ, ಕೈಕಾಲು ಹರಿಯುವಿಕೆ, ಮೆ ಲೆ ಮೇಲೆ ಮೂರ್ಛೆ ಬರುವದು, ಹೊಟ್ಟೆ ಶೂಲೆ, ಅರೆತಲೆ ಶೂಲಿ, ನಡನೋವು. ಮಂಗನಬಾವು, ಶಿರೋವೇದನೆ, ಬಾಯಿ ಬೇನೆ, ಸಂದು ತಪ್ಪುವದು, ಹೊರಕಡಿಗೆ, ಹೆ ಟ್ಟೆ ಚಾಚಿಸುವದು, ಕಾಮಣೀ ರೋಗ, ದಾಟಬೊಕ್ಕೆ, ಮೂಗು ಸೋರುವದು, ನೀರು ಹತ್ತುವದು, ಚಳಿಜ್ವರ, ತಲೆ ತಿರುಗಿ ಕಣ್ಣಿಗೆ ಕತ್ತಲೆಗೂಡಿಸುವದು, ಜ್ವರ, ಮರುಕಳಿಸಿದ ಜ್ವರ, ಹೊಟ್ಟೆ ಮುಳ್ಳ ಹಿಡಿಯುವದು, ಚಳಿ, ಕಾವು, ನೀರಡಿಕೆ, ಹಸಿವು ನಿದ್ದೆ, ಆಮಾಂಶ, ಕಾಮೇಚ್ಛೆ, ಆಲಸ್ಯತನ, ಮೂರ್ಖತನ, ಹೇಡಿತನ, ಹೆದರಿಕೆ, ಮರವು, ಕೆಟ್ಟಮನಸು ಮೂತ್ರ ಬಂದಾಗುವದು, ಪರಮಾ ರಕ್ತಪಿತ್ತ, ರಕ್ತ ಹರಿಯುವದು, ಮಲಬದ್ಧತೆ ಹೊಟ್ಟೆ ಮುರಿಯುವದು, ಕಸವೊಡೆಯುವದು, ಆಮಬದ್ಧದಿಂದ ತಲೆ ತಿರುಗುವದು, ನೋವು ಇದ್ದರೂ ತಿಳಿಯದ ಸ್ಥಿತಿ, ಹೊಟ್ಟೆಯಲ್ಲಿ ಗಂಟು, ಕ್ರಿಮಿ (ಜಂತು,) ಸಂಗ್ರಹಣಿ, ಉಂಡದ್ದು ಪಚನವಾಗದೆ ಬೀಳುವದು, ಹೊಟ್ಟೆ ಉಬ್ಬುವಿಕೆ ಕುತ್ತಿಗೆ ಸಿಗುವದು, ಬಿಕ್ಕು ಹತ್ತಿ

ಉಸಿರು ಬಂದಾಗುವದು,- ಪಿತ್ತ ಹೆಚ್ಚಾಗಿ ವಿಕಾರವುಂಟಾಗುವದು, ದನಿ ಕುಗ್ಗುವದು, ಹುಗುಳು, ನೆಗಡಿ, ಕೆಮ್ಮು, ಕಾಸ-ಶ್ವಾಸಗಳು, ಕಿರು ನಾಲಿಗೆ, ರಸಕೀ ಕೆಮ್ಮು, ಕಫ ವಿಕಾರ, ಕಟ್ಟಿನ ಜ್ವರ, ದೋಷೀ ಜ್ವರ, ವಿಷಪ್ರಾಶನ, ಗಂಟಲಿನಲ್ಲಿ ಬೊಕ್ಕೆ ಒಡೆಯುವದು, ಘಟಸರ್ಪ, ನಾಲಿಗೆ ಸೀಳುವದು, ಮುಖದುರ್ಗಂಧಿ, ಹಲ್ಲು ಹುಳಿಯುವದು, ನೀರಗಂಟು, ಗಂಡಮಾಲೆ, ಕಣ್ಣಿಗೆ ಅಪಘಾತ, ಬೆರಳು ಕತ್ತರಿಸಿಕೊಳ್ಳುವದು, ಹಲ್ಲಿನ ನೋವು, ತುಟಿ ನಾಲಿಗೆಗಳು ಬಿರಿಯುವದು, ಕಿವಿಶೂಲೆ, ಕಣ್ಣಿನಬೇನೆ, ಹುಟ್ಟುಗುರುಡತನ, ನಪುಂಸಕತ್ವ, ಕಣ್ಣು ಹೂವು ಬೀಳುವದು, ಗುಡ್ಡೆ ಬೆಳೆಯುವದು ಹುಳ ಬೀಳುವದು, ಇರುಳಗಣ್ಣು ಹೋಗುವದು, ದುಷ್ಟ ಮನಸ್ಸು, ಭ್ರಮಿಷ್ಟನಾಗುವದು, ನೀಚತ್ವ, ಮೂಕತನ, ಕಿವುಡತನ, ತುಟಿ ಹರಿಯುವದು, ಊನವಾಗುವದು, ಕಾಲು ಒಡೆಯುವದು, ದೇಹ ಸೊರಗುವದು, ಮುಖ ತಗ್ಗಿಸಿ ನಡೆಯುವದು, ಅಡ್ಡಡ್ಡ ನಡೆಯುವದು, ಹದ್ದಿನಂತೆ ಕಣ್ಣಿನಂತೆ ಕಣ್ಣಾಗುವದು ದೇಹವುಡುಗುವದು, ಗತಿಯಲ್ಲಿ ಚಲ-ವಿಚಲವುಂಟಾಗುವದು, ಬೆರಳು ಡೊಂಕಾಗಿ ಕುರೂಪತೆಯುಂಟಾಗುವದು, ಹಲ್ಲು ಹಾಯುವದು, ಬಗ್ಗಡನಾಗುವದು, ಮೂಗು ಕೂಡ್ರುವದು, ಕಿವಿ ಮೂಗು ಕತ್ತರಿಸಿ ಹೋಗುವದು ಮತ್ತು ಬಹಳ ಸ್ಥೂಲ ಶರೀರವಾಗುವದು, ತೊದಲ್ನುಡಿಯಾಡುವದು, ಉಗ್ಗು ಮಾತಾಡುವದು, ನಿರ್ಬಲತೆ, ರೋಗಿಷ್ಠತೆ, ಕುಟೀಲ-ಕುರೂಪತೆ, ಮಾತ್ಸರ್ಯಭಾವ, ಕಾಮುಕ ಭಾವನೆ ಅಭಿಮಾನ ರಹಿತತೆ, ಪಾಪಿಷ್ಠತನ, ಅವಗುಣತ್ವ, ಪಿರಿದುಂಬುವದು, ಸಿಟ್ಟಿಗೇಳುವದು, ಸಂತಾಪ ಬಡುವದು, ಹಳಹಳಿಸುವದು ಇವೆಲ್ಲವು ಆಧ್ಯಾತ್ಮಿಕ ತಾಪದ ಲಕ್ಷಣಗಳು ಇವಲ್ಲದೆ ಇನ್ನೂ ಕೆಲವು-

ಗರ್ಭದ ಪಿಂಡ ಬೆಳೆಯದಿರುವದು, ಕುಸು ಅಡ್ಡ ಸಿಗುವದು, ಮೊಲೆಗಳು ಬತ್ತುವದು, ಸಂಸಾರ ಕಷ್ಟಕ್ಕೆ ಹುಚ್ಚು ಹಿಡಿಯುವದು ಹಾಗು ಅಪಮೃತ್ಯುವಿಗೀಡಾಗುವದು, ಕದನ್ನ ಭಕ್ಷಣದಿಂದ ರೋಗಪೀಡಿತನಾಗುವದು ಕಾರಣವಿಲ್ಲದೆ ಹಲ್ಲುಗಳಲ್ಲಿ ನಂದು ಬೀಳುವದು, ಕಣ್ಣು ರೆಪ್ಪೆ ಹುಬ್ಬುಗಳ ಕೂದಲು ಉದರುವದು, ಕಣ್ಣಿನ ಹಲವು ರೋಗಗಳಾಗುವದು, ಕಣ್ಣು ಮಂದವಾಗುವದು, ಮೈಮೇಲೆ ಕೆರೇ ಬೊಕ್ಕೆ [ನರೂಲಿ]ಗಳು ಏಳು

ವದು, ಇವೂ ಅಲ್ಲದೆ ಇನ್ನೂ ಹಲವು ಶರೀರ ಹಾಗು ಮನೋವೇದನೆಗಳು ಆಧ್ಯಾತ್ಮಿಕ ತಾಪದ ಲಕ್ಷಣಗಳಾಗಿವೆ ಹಲವು ಚಿಂತೆಗಳಿಂದ ಕೊರಗಿ ಹಲವು ದು ಖಗಳಿಂದ ಹೃದಯ ಬೆಂದು ಬೇನೆಯಿಲ್ಲದೆ ತಳಮಳಿಸುವ ಸ್ಥಿತಿಯು ಆಧ್ಯಾತ್ಮಿಕ ತಾಪದ ಲಕ್ಷಣಗಳು ವಾರ್ಧಿಕ್ಯದಲ್ಲಿ ವಿಪತ್ತುಗಳಿಂದ ಶರೀರ ಕ್ಷೀಣವಾಗುವದರಿಂದಲೂ ಹಲವು ಭೋಗಗಳ ಮೂಲಕವಾಗಿಯೂ ಮಾನವನು ತಳಮಳಿಸಿ ಶೋಕ ಪಡುವದೂ ಆಧ್ಯಾತ್ಮಿಕ ತಾಪವು

ಈ ಪ್ರಕಾರದ ಆಧ್ಯಾತ್ಮಿಕ ತಾಪವು ಪೂರ್ವ ಪಾಪಗಳ ಮೂಲಕ ಸಂತಾಪಯುಕ್ತವಾದುದು ಅದು ಹೇಳ ಕೂಡದಷ್ಟು ದು ಖಮಯವಾಗಿದೆ ಇದನ್ನು ಶ್ರೋತೃಗಳು ಸಂಕೇತುಗಳಿಂದಲೇ ತಿಳಿಯಬೇಕು ಇನ್ನು ಮುಂದೆ ಆಧಿಭೌತಿಕ ತಾಪದ ಸ್ವಭಾವ ಹೇಳುವೆವು–

ಶ್ರೀ ರಾಮ ॥ ೭, ಆಧಿಭೌತಿಕ ತಾಪ ॥ ಈ ಮೊದಲು ಆಧ್ಯಾತ್ಮಿಕ ತಾಪದ ಲಕ್ಷಣಗಳನ್ನು ಹೇಳಿದೆ ಈಗ ಆದಿಭೌತಿಕದ ಬಗೆಗೆ ಹೇಳುವೆವು

ದೇಹವು ಸರ್ವ ಭೂತಗಳಳ್ಳೊಳಗೊಂಡು ರಚಿತವಾಗಿದೆ ಆ ಭೂತಗಳ ಯೋಗದಿಂದಲೇ ಸುಖದು ಖಗಳ ಪ್ರಾದುರ್ಭಾವವಾಗುವದು ಮನಸ್ಸಿಗೆ ಭಂಗವನ್ನುಂಟು ಮಾಡುವ ತಾಪವೇ ಆಧಿಭೌತಿಕವೆನ್ನಿಸುವದು ತ್ರಿವಿಧ ತಾಪಗಳನ್ನು ಅವುಗಳ ಲಕ್ಷಣಗಳೊಂದಿಗೆ ಅರಿತುಕೊಳ್ಳುವದರಿಂದ ಅವುಗಳ ಬಗೆಗೆ ಪೂರ್ಣ ಅನುಭವವು ಉಂಟಾಗುವವು

ಶರೀರದ ಯಾವದೊಂದು ಭಾಗಕ್ಕೆ ಮುಳ್ಳು ನಡಲು ಅಥವಾ ಅದು ಮುರಿಯಲು ಆಗ ಮನಸಿಗಾಗುವ ತಾಪದಿಂದ ಈ ಆಧಿಭೌತಿಕ ತಾಪವನ್ನು ಎಣಿಸತಕ್ಕದ್ದು ಅಥವಾ ಹಲವು ಬಗೆಯ ಶಸ್ತ್ರಗಳ ಪ್ರಯೋಗವು ದೇಹದ ಮೇಲೆ ಆಗಿ ಉಂಟಾಗುವ ತಾಪವನ್ನು ಆಧಿಭೌತಿಕವೆಂದರಿಯಬೇಕು ಆಕಸ್ಮಾತ್ತಾಗಿ ಕಾಜಿನ ಚೂರಿನಿಂದ ಶರೀರಕ್ಕೆ ಕ್ಷತವಾಗಿ ಆದರಿಂದುಂಟಾಗುವ ವ್ಯಥೆಯು ಅಥವಾ ತಾಪವು ಆಧಿಭೌತಿಕವೆನ್ನಿಸುವದು ನೊಳ್ಳೆಯು ತಾನಾಗಿ ಬಂದು ಶರೀರವನ್ನು ಕಚ್ಚಲು ಅದರಿಂದಾಗುವ ವ್ಯಥೆಯೂ ಅದಾಗಿರುವದು, ನೊಣ, ಕಡಜೀರಿಗೆ, ಜೇನ್ನೊಣ, ಇರಿವೆ, ಕಟ್ಟಿರಿವೆ, ಕೆಂಜುಗ ಮುಂತಾದವು ಕಚ್ಚಿದಾಗ ಆಗುವ ತಾಪವೂ ಆದಿಭೌತಿಕವು. ಇದರಂತೆ ಹಲವು ಪ್ರಾಣಿಗಳ ಮೂಲಕ ಉಂಟಾದ ತಾಪಗಳು

ಇದೇ ಆಧಿಭೌತಿಕವೆನ್ನಿಸುವದು. ಹುಚ್ಚು ನಾಯಿ ಕಚ್ಚುವದರಿಂದ ತಗಣಿ, ಚಿಕ್ಕಾಡುಗಳ ಕಡಿಯುವಿಕೆಯಿಂದ, ವಿಷಾರಿ ಪ್ರಾಣಿಗಳ ದರ್ಶನದಿಂದ ಮನಸ್ಸಾಗುವ ವ್ಯಥೆಯು ಆಧಿಭೌತಿಕವೆನ್ನಿಸುವದು ಹುಲಿ, ತೋಳ, ಕಾಡಹಂದಿ ಕಾಡಾಕಳು, ಕಾಡ್ಕೋಣ, ಕರಡಿ, ಮದ್ದಾನೆ, ಇತ್ಯಾದಿಅಡವೀಶ್ವಾಪದಗಳಿಂದಾಗುವ ತಾಪಗಳು ಆಧಿಭೌತಿಕ ತಾಪಗಳೆನ್ನಿಸುವವು ಮೊಸಳೆಯು ಎಳೆಯುವದು, ಅಥವಾ ಜಲದಲ್ಲಿ ಮುಳುಗಿಸುವದು ಇದರಿಂದಾದ ತಾಪವು ಆಧಿಭೌತಿಕವು, ಇವಲ್ಲದೆ–

ವಿಷಯುಕ್ತ ಹಾವು-ಹೆಬ್ಬಾವು, ಮೊಸಳೆ ಮೊದಲಾದ ಹಲವು ಜಂತುಗಳು, ಹಲವು ವನ್ಯಕ್ರೂರ ಪ್ರಾಣಿಗಳು ಕುದುರೆ, ಎತ್ತು, ಕತ್ತೆ, ನಾಯಿ, ಹಂದಿ, ನರಿ, ಬೆಕ್ಕು ಇತ್ಯಾದಿ ಪ್ರಾಣಿಗಳು ಇವೆಲ್ಲವುಗಳ ಮೂಲಕ ಉಂಟಾಗುವ ದುಃಖದಾಯಕ ತಾಪಗಳು ಆಧಿಭೌತಿಕ ತಾಪಗಳೆನ್ನಿಸುವವು

ಗೋಡೆ ಕುಸಿಬಿದ್ದು ಮರಣವೊದಗುವದು, ನೆಲ ಬಿರಿತು ಅದರಲ್ಲಿ ಹೂತು ಹೋಗುವದು ಗಿಡ-ಮರಗಳು ಮೈಮೇಲೆ ಬೀಳುವದು, ಪುಣ್ಯವಂತನ ಶಾಪಕ್ಕೊಳಗಾಗುವದು, ಅನ್ಯರು ತನ್ನ ಮೇಲೆ ಚಾಟಕ–ಮಾಟಕ ಪ್ರಯೋಗಿಸುವದು, ಬೇರೊಬ್ಬನ ಕೃತಿಯಿಂದ ಭ್ರಾಂತಿಷ್ಟನಾಗುವನು, ಯಾವನೊಬ್ಬನಿಂದ ಧರ್ಮಭ್ರಷ್ಟತೆ ಹೊಂದುವದು ಇನ್ನೊಬ್ಬನಿಂದ ತಾನು ಅಪಹೃತನಾಗುವದು, ತನ್ನ ಮೇಲೆ ಬೇರೊಬ್ಬನು ವಿಷಪ್ರಯೋಗ ಮಾಡುವದು ವೃಥಾ ಅನ್ಯರಿಂದ ಅಪದೋಷಕ್ಕೆ ಗುರಿಯಾಗುವದು, ಇನ್ನೊಬ್ಬನು ತನ್ನನ್ನು ಗಂಡಾಂತರಕ್ಕೆ ಗುರಿ ಮಾಡುವದು, ತಿಳಿಯದೆ ಬೆಂಕಿ ನೀರು, ಹೊಗೆಗಳಿಂದ ಪ್ರಾಣಾಪಾಯಕ್ಕೆ ಗುರಿಯಾಗುವದು, ನೋಡದೆ ಕೆಂಡವನ್ನು ಮೆಟ್ಟುವದು, ಕಲ್ಲಿನ ಬುಡಕ್ಕೆ ಕೈ ಸಿಕ್ಕುವದು, ಓಡಿ ಬರುವಾಗ ಎಡವಿ ಬೀಳುವದು, ಅಕಸ್ಮಾತ್ತಾಗಿ ಭಾವಿ-ಕೆರೆ-ನೀರ್ಮಡು, ನದಿ ಮುಂತಾದ ಜಲಾಶಯಗಳಲ್ಲಿ ದೇಹ ಬೀಳುವದು, ಮೈಮೇಲೆ ಕೋಟೆ ಕೊತ್ತರಿಸಿ ಬೀಳುವದು, ಗಿಡದ ಮೇಲಿನಿಂದ ಕಾಲು ತಪ್ಪಿ ಬೀಳುವದು, ಚಳಿಯಿಂದ ತುಟಿಗಳು ಬಿರಿಯುವದು, ಕಾವಿನ ಪದಾರ್ಥದಿಂದ ನಾಲಿಗೆ ಸುಡುವದು, ಹರಳನ್ನು ತಿಳಿಯದೆ ಹಲ್ಲಿನಿಂದ ಕಚ್ಚುವದು ಈ ಎಲ್ಲ ಬಗೆಗಳಿಂದ ಉಂಟಾದ ತಾಪಗಳು ಆಧಿಭೌತಿಕ ತಾಪವೆಂದು ಹೇಳುವದು

ಮತ್ತು ಚಿಕ್ಕಂದು ಮೊದಲಾಗಿ ಪರಾಧೀನತೆ ವಹಿಸುವದು ದುರ್ನುಡಿಗಳ ಹೊಡೆತ ಸಹಿಸುವದು, ಅನ್ನ ವಸ್ತ್ರಗಳಿಲ್ಲದೆ ತೊಂದರೆ ಪಡುವದು, ಅತ್ತೆಯು ಮನೆಯವರಿಂದೊದಗುವ ಕಷ್ಟಗಳಿಂದ ತಳಮಳಗೊಳ್ಳುವದೂ, ಅಳುವದೂ, ತಪ್ಪಿಗಾಗಿ ಕಿವಿ ಹಿಂಡಿಸಿಕೊಳ್ಳುವದೂ,ಕಣ್ಣಲ್ಲಿ ಇಂಗು ಹಾಕಿದ್ದರಿಂದ ವ್ಯಥೆ ಪಡುವದೂ ಯಾವಾಗಲೂ ಖಡ್ಗದ ಆಧೀನವಾಗಿರುವದು, ದುರ್ಜನರಿಂದ ಹಲವು ಬಗೆಯ ತಾಡನಗಳಿಗೆ ಗುರಿಯಾಗುವದು, ತೌರಮನೆಯು ತಾನಿದ್ದಲ್ಲಿಂದ ದೂರವಾಗಿರುವದು, ಕಿವಿ-ಮೂಗುಗಳನ್ನು ಕಳೆದುಕೊಳ್ಳುವದು, ಇನ್ನೊಬ್ಬರ ಬಲುಮೆಗೆ ಸಿಕ್ಕು ಬೀಳುವದು, ವೈರಿ ಸೈನಿಕರಿಂದ ಬಂಧಿತನಾಗಿ ಹೋಗುವದು, ಅವರಿಂದ ನೀಚ ಜಾತಿಯನ್ನು ಹೊಂದುವದು, ಹಾಗು ಕೀಳ್ದೆಸೆ ಹೊಂದಿ ಸಾಯುವದು ಇವೆಲ್ಲ ತಾಪಗಳು ಆಧಿಭೌತಿಕಗಳೆನ್ನಿಸುವವು ಮತ್ತು ಹೇಳುವದಾದರೆ—

ವೇದಾಂತವನ್ನು ಹೇಳುವವನಿಗೆ ರೋಗಗಳು ಹುಟ್ಟಲು ವೈದ್ಯ-ಮಾಂತ್ರಿಕರನ್ನು ಬರಮಾಡಿಕೊಳ್ಳುವದು, ಹಾಗು ಅನೇಕ ವ್ಯಥೆಗಳ ನಿವಾರಣೆಗೆ ಉಗ್ರ ಔಷಧವನ್ನು ಒತ್ತಾಯದಿಂದ ಹಾಕುವದು, ಕಹಿ-ಕಾಢೆಗಳನ್ನು ಸ್ವೀಕರಿಸಿ ಕಸಿವಿಸಿಗೊಳ್ಳುವದು, ವಾಂತಿ-ವಮನಕ್ಕಾಗಿ ಔಷಧ ಕೊಡುವದು, ಕಠಿಣ ಪಥ್ಯಡಿಂದ ಕಷ್ಟಬಡುವದು, ಅನುಪಾನದಲ್ಲಿ ಹೆಚ್ಚುಕಡಿಮೆಯಾಗಲು ವಿಪತ್ತು ಪ್ರಾಪ್ತವಾಗುವದು ಇವೆಲ್ಲವು ಆದಿಭೌತಿಕ ತಾಪಗಳು,

ಮತ್ತೂ ಕೆಲವು ರೋಗಿಗಳಿಗೆ ಶಸ್ತ್ರದಿಂದ ಮೈಮೇಲೆ ಅಥವಾ ಹೊಟ್ಟೆಯ ಗಂಟಿನ ಮೇಲೆ ಗೆರೆ ಕೊರೆಯುವದು, ಹಣೆ ಕಪಾಳಗಳನ್ನು ಸುಡುವದು, ಎಕ್ಕೆಯ ಹಾಲಿನಿಂದ ಬರೆ ಕೊಡುವದು, ನರಗಳನ್ನು ಕೊಯ್ಯುವದು, ಕಾಸಿ ಬರೆ ಕೊಡುವದು, ಭೂತ ಬಿಡುವ ಕುರಿತು ಹಲವು ಕ್ಷರಿಯು ಹಲವು ಪದಾರ್ಥ ಸುಟ್ಟು ಹೊಗೆ ಕಾಟಗಳನ್ನೆಬ್ಬಿಸುವದು, ದರವಡೆಗಾಗಿ ಬಂದ ಡುಡುಗರು ಮನೆಯವರಿಗೆ ಹಲವುಬಗೆಯಲ್ಲಿ ಪೀಡಿಸುವದು ಕೊಳ್ಳೆಗಾರರು ಬೆಂಕಿಯನ್ನು ಹಚ್ಚಿ ಊರಿನ ಸುಂದರ ಮಂದಿರಗಳನ್ನು ರತ್ನಕೋಶ, ವಸ್ತ್ರಾಲಂಕಾರಗಳನ್ನು ದಹಿಸುವದರಿಂದ ಉಂಟಾಗುವ ತಾಪವು, ಧಾನ್ಯಾದಿ ಪದಾರ್ಥಗಳ ನಾಶವು, ಪ್ರಾಣಹಾನಿಯು, ಬೆಳೆಯು

ನಿಂತ ಪೈರು-ಮುಂತಾದವುಗಳ ನಾಶವು ಇವಲ್ಲವುಗಳಿಗಾಗಿ ಪಡುವ ತಾಪವು ಆಧಿಭೌತಿಕವು ಈ ಪ್ರಕಾರ ಅಗ್ನಿಗಾಹುತಿಯಾದವನ್ನೆಲ್ಲ ನೆನೆದು ದುಃಖದಿಂದ ತಾಪ ಬಡುವದು ಆಧಿಭೌತಿಕ ತಾಪವು ಇವೂ ಅಲ್ಲದೆ-ಪದಾರ್ಥಗಳು ಕಳೆದು ಹೋಗುವದು, ಅವನ್ನು ಮರೆತು ಬಿಡುವದು ಅವು ನಾಶವಾಗುವದು, ಅವು ಪರರಿಂದ ತಿರುಗಿ ಸಿಗುವದು ಅಸಾಧ್ಯವೆನಿಸುವದು ಮುಂತಾದ ಸಂದರ್ಭಗಳಲ್ಲಿ ಉಂಟಾಗುವ ತಾಪವು ಆಧಿಭೌತಿಕ ತಾಪವೆನ್ನಿಸುವದು

ತನ್ನ ಸ್ಥಾನ ಕಳೆದುಕೊಳ್ಳುವದು, ದನಗಳು ತಪ್ಪಿಸಿಕೊಂಡು ಹೋಗುವದು, ಹೊಟ್ಟೆಯ ಮಕ್ಕಳು ಕಣ್ಮರೆಯಾಗುವದು, ಕಳ್ಳರು ಮೊದಲಾದವರಿಂದ ಧನ ಹಾಗು ಪ್ರಾಣಗಳ ಅಪಹರಣವಾಗುವದು, ದ್ವೇಷಿಕರು ಪೈರು ಹಾಗು ಬಾಳೆಯುವನ ಕೊಯ್ದು ಹಾಳು ಮಾಡುವದು, ಎಲೆದೋಟಕ್ಕೆ ಉಪ್ಪು ಹಾಕುವದು, ಊಟಕ್ಕಾಗಿ ಸಿದ್ಧಗಡಿಸಿದ ಬುತ್ತೀಗಂಟನ್ನು ತಿನನಬಕ್ಕರು ಅಪಹರಿಸುವದು, ಕಿಮಿಯಾ ವಿದ್ಯೆಯುವರ ಮೋಸಕ್ಕೆ ಗುರಿಯಾಗುವದು, ರಕ್ಕರಿಂದ ಸುಲಗೆಗೊಳಗಾಗುವದು, ಗಂಟೇಚೋರರಿಂದ ಆಭರಣಗಳ ಹರಣವಾಗುವದು, ಇಲಿಗಳು ಹಲವು ವಸ್ತುಗಳನ್ನು ಹಾಳು ಮಾಡುವದು. ಇವೆಲ್ಲ ಬಗೆಗಳಿಂದ ಉಂಟಾದ ತಾಪವು ಆಧಿಭೌತಿಕವೆನಿಸುವದು.

ಸಿಡಿಲು ಬಡೆಯುವದು, ಬರ್ಫದ ಬಂಡೆ ಮೈಮೇಲೆ ಬೀಳುವದು, ಘೋರವಾಧ ಬಿರುಗಾಳಿಯ ಹೊಡೆತಕ್ಕೆ ಸಿಗುವದು, ಮಹಾಪೂರಿನಲ್ಲಿ ಮುಳುಗುವದು, ನೀರಿನ ಸುಳಿಯಲ್ಲಿ ಸಿಕ್ಕು ಸುತ್ತಾಡುವದು, ಪ್ರವಾಹದಲ್ಲಿ ಹರಿದು ಬರುವ ಕಟ್ಟಿಗೆ, ಹೊಲಸು, ಹಾವು ಚೇಳುಗಳ ನಡುವೆ ಸಿಗುವದು, ದ್ವೀಪದ ದಂಡೆಯಲ್ಲಿಯ ಕಲ್ಲು ಬಂಡೆಗೆ ಹೋಗಿ ಅಪ್ಪಳಿಸುವದು, ನೀರಲ್ಲಿ ತೇಲುತ್ತ ಮುಳುಗುತ್ತ ದಂಡೆಗೆ ಬಂದು ಹತ್ತುದದು ಇವೆಲ್ಲ ಅನವಸ್ಥೆಗಳಿಂದ ಅನಿವಾರ ದುಃಖವುಂಟಾದ ತಾಪವು ಆಧಿಭೌತಿಕವು ಮನಸ್ಸಿಗೆ ಒಪ್ಪದಂಥ ಸಂಸಾರವು, ಕುರೂಪೆ, ಕರ್ಕಶ, ಕ್ರೂರಳಾದ ಹೆಂಡತಿ, ಗತಭರ್ತೃಕಳಾದ ಸುತೆಯು, ಮೂರ್ಖನಾದ ಮಗನು, ಇಂಥ ಪ್ರಾಪಂಚಿಕನೆಲ್ಲಾಗುವ ಹೃದಯದ ತಳಮಳವು ಆಧಿಭೌತಿಕ ತಾಪವು

ಭೂತಬಾಧೆಯಾಗಿದೆ, ಪಿಶಾಚವು ಪೀಡಿಸಹತ್ತಿದೆ, ದುಷ್ಟಗಾಳಿಯು ಸೋಂಕಿದೆ, ಇವೆಲ್ಲವುಗಳ ನಿವಾರಣೆಗಾಗಿ ಬಳಸಿದ ಮಂತ್ರವು ಅಬದ್ಧವಾಗಿ ಮಾನವನು ಹುಚ್ಚಾಗುವದು, ಬ್ರಹ್ಮ ಸಂಬಂಧವು ದೇಹಕ್ಕೆ ಹಲವು ದಿನಗಳಿಂದ ಪೀಡಿಸುವದು, ಶನಿಯ ಕಾಟವು ತಪ್ಪಿಸಲಿಕ್ಕಾಗದು ಹಲವು ಗ್ರಹಗಳ ಪೀಡೆಯಾಗುವದು, ದುಷ್ಟವಾರ–ತಿಥಿ–ಘಾತಚಂದ್ರ-ವೇಳೆ.ನಕ್ಷತ್ರ ಇವೆಲ್ಲವುಗಳ ಪರಿಣಾಮದಿಂದ ಪೀಡೆಯೊದಗುವದು ಇವೆಲ್ಲವು ಆದಿಭೌತಿಕ ತಾಪವೆನ್ನಿನುವದು ಸೀನುವದು, ಹಂಗು ಕಾಗೆಗಳು ಹಾರುವದು, ಹಲ್ಲಿ ನುಡಿಯುವದು ಮುಂತಾದ ಶಕುನಗಳಲ್ಲಿ ಅಪಶಕುನಗಳನ್ನೆಣಿಸಿ ಚಿಂತೆಗೊಳಗಾಗ ವದು ಆಧಿಭೌತಿಕವು ಜ್ಯೋತಿಷ್ಯ, ಭವಿಷ್ಯ, ಸ್ವಪ್ನ ಫಲಗಳಲ್ಲಿ ಅಶುಭವನ್ನೆಣಿಸಿ ಚಿಂತೆಗೊಳಗಾಗುವದೂ, ನಾಯಿ–ನರಿಗಳ ಕೂಗು ಹಾಗು ಮೈಮೇಲೆ ಹಲ್ಲಿ ಬೀಳುವಿಕೆ ಇವುಗಳ ಹಾಗು ಇನ್ನಿತರ ಹಲವು ಸಂಗತಿಗಳ ಅನರ್ಥಕ ವಿಚಾರಗಳನ್ನು ಕಲ್ಪಿಸಿ ದು ಖಪಡುವದೂ ಇವೆಲ್ಲ ಆಧಿಭೌತಿಕ ತಾಪಕ್ಕೆ ಅನ್ವಯಿಸುವವು ಮನೆಯಿಂದ ಹೊರಬೀಳುವಾಗ ಉಂಟಾದ ಅವಶಕುನಗಳಿಂದ ಮನಸ್ಸನ್ನು ಭಂಗಮಾಡಿಕೊಳ್ಳುವದು ಆಧಿಭೌತಿಕ ತಾಪವು

ಮಾನವನು ಸೆರೆಯಾಳಾಗಿ ಅನುಭವಿಸುವ ಕಷ್ಟಗಳು ಆಧಿಭೌತಿಕವು ರಾಜನ ಶಿಕ್ಷೆಗೊಳಗಾದವನು ಅನುಭವಿಸುವ ದೇಹದಂಡನೆಗಳಿಂದ ಉಂಟಾದ ತಾಪವು ಆಧಿಭೌತಿಕವು ಬಾರುಗೋಲು, ಪಾರಂಭಿ ಮುಂತಾದವುಗಳ ಹೊಡೆತದಿಂದ ಯಾತನೆ ಹೊಂದುವದು ಆಧಿಭೌತಿಕವು - ಗುದದ್ವಾರದಲ್ಲಿ ಮೇಖವನ್ನು ಬಡೆದುದರಿಂದ ಉಂಟಾಗುವ ದು ಖವೂ,ಮದ್ದಿನ ಚೀಲವನ್ನು ಬೆನ್ನಿಗೆ ಕಟ್ಟಿ ಮದ್ದಿಗೆ ಬೆಂಕಿ ಹಚ್ಚುವದರಿಂದಾಗುವ ತಾಪವೂ ಕಂಬಕ್ಕೆ ಬಗಿದು ಕಟ್ಟಿ ಬಡಿಗೆಯಿಂದ ಹೊಡೆಯುವದೂ, ಮೋರೆಗೆ ಮುಸಕು ಹಾಕಿ, ಇಲ್ಲವೆ ಕೋಳವನ್ನು ತೊಡಿಸಿ ಹೊಡೆಯುವದೂ ಇವಲ್ಲದೆ ಇನ್ನೂ ಹಲವು ರೀತಿಯಿಂದ ದೇಹ ದಂಡನೆಗೈಯುವದೂ ಇವುಗಳಿಂದಾಗುವ ಅತ್ಯಂತ ತಾಪವೂಆಧಿಭೌತಿಕ ತಾಪವೆನ್ನಿಸುವದು ತೂಗುಗಳುಗಟ್ಟುವದು, ಹಿಂದೆ ಕೈ ಕಟ್ಟುವದು, ಗಿಡದ ಕೊಂಬೆಗೆ ಏರಿಸುವದು ಇವೆಲ್ಲ ಪ್ರಕಾರಗಳನ್ನು ದಂಡನೆಯಲ್ಲಿ · ಉಪಯೋ

ಗಿಸಲ್ಪಟ್ಟು ದುಃಖವನ್ನುಂಟು ಮಾಡುವದು ಆಧಿಭೌತಿಕವು. ಇವಲ್ಲದೆ ಮೂಗಿನಲ್ಲಿ ಸುಣ್ಣದ ನೀರು, ಉಪ್ಪಿನ ನೀರು, ಸಾಸಿವೆಯನ್ನರೆದು ಹಾಕಿದ ನೀರು ಮುಂತಾದವುಗಳನ್ನು ಹಾಕಿ ವ್ಯಥೆ ಕೊಡುವದು, ನೀರ್ಮಡುವಿನಲ್ಲಿ ಮುಳುಗಿಸುವದು, ಆನೆಯ ಮುಂದೆ ಕೈಕಾಲು ಕಟ್ಟಿ ಚೆಲ್ಲಿ ಬಿಡುವದು, ಕಿವಿ-ಮೂಗು ಕೊಯ್ಯುವದು, ಕೈಕಾಲು ಕಡಿಯುವದು, ನಾಲಿಗೆ ತುಟಿಗಳನ್ನು ಕಿತ್ತಿ ಹರಿಯುವದು, ಇವೆಲ್ಲವುಗಳಿಂದ ಆದ ತಾಪವು ಆಧಿ ಭೌತಿಕವು ತೀಕ್ಷ್ಣ ಶೂಲದಿಂದ ಚುಚ್ಚುವದು, ಕಣ್ಣು, ವೃಷಣಗಳನ್ನು ತೆಗೆಯುವದು, ಉಗುರ ಸಂದಿನಲ್ಲಿ ಸೂಜೆ ಚುಚ್ಚುವದು, ಇವೆಲ್ಲ ತಾಪಗಳು ಆಧಿಭೌತಿಕಗಳು.

ದಿನದಿನವೂ ಒಂದೊಂದು ಅಂಗಾಂಗ ಕತ್ತರಿಸಿ ದೇಹಭಾರ ಕಡಿಮೆ ಮಾಡುವದು, ಕಡಿಮೆಯಾದುದನ್ನು ತಿಳಿದುಕೊಳ್ಳಲು ಆ ದೇಹವನ್ನು ತೂಕ ಮಾಡುವದು, ತೋಫಿನ ಬಾಯಿಗೆ ನಿಲ್ಲಿಸಿ ಹಾರಿಸುವದು ಕಿವಿಯಲ್ಲಿ ಗೂಟ ಬಡಿಯುವದು, ಅಪಾನ ದ್ವಾರದಲ್ಲಿ ಮೊಳೆ ಬಡಿಯುವದು, ಮೈದೊಗಲು ಸುಲಿಸುವದು, ಮೈಗೆಲ್ಲ ಭಲ್ಲೆಯಿಂದ ಚುಚ್ಚಿ ಹಾಗು ನೇಣು ಹಾಕಿ ಕೊಡುವದು ಕರಗಿದ ಸೀಸನ್ನೂ, ವಿಷವನ್ನೂ ಕುಡಿಸುವದು, ಶಿರಚ್ಛೇದ ಮಾಡುವದು, ಕಾಲ ಕೆಳಗೆ ಹಾಕಿ ತುಳಿಯುವದು, ಮೈಮೇಲಿನ ಅರಿವೆಗಳಲ್ಲಿ ಓಲೇಕಾಟ ಸೇರಿಸಿ ಅದಕ್ಕೆ ಹೊರಹೋಗದಂತೆ ಮಾಡುವದು, ಪಂಜರದಲ್ಲಿ ಬೆಕ್ಕಿನ ಜೊತೆಗೆ ಇರಿಸಿ ಅದರಿಂದ ಮೈಯೆಲ್ಲ ಚಿವುರಿಸುವದು, ಗಲ್ಲಿಗೇರಿಸುವದು, ನಾಯಿ, ಹುಲಿ, ಭೂತ, ಮೊಸಳೆ, ಶಸ್ತ್ರ, ವಿದ್ಯುತ್ತು ಇವುಗಳಿಂದ ಜೀವ ತೆಗೆಯಿಸುವದು, ಮೈಯಲ್ಲಿಯ ನರಗಳನ್ನು ಹಿರಿದು ದೀವಟಿಗೆಗೆ ಸುಡುವದು, ಇಂಥ ಹಲವು ವಿಪತ್ತುಗಳೆಲ್ಲ ಆಧಿಭೌತಿಕ ತಾಪಗಳು

ಮನುಷ್ಯಹಾನಿ, ವಿತ್ತಹಾನಿ, ವೈಭವ ಹಾನಿ, ಪಶು-ಪದಾರ್ಥಗಳ ಹಾನಿ ಇವೆಲ್ಲವು ಆದಿಭೌತಿಕಗಳು ಬಾಲ್ಯದಲ್ಲಿ ತಾಯಿ, ತಾರುಣ್ಯದಲ್ಲಿ ಹೆಂಡತಿ ಮುಪ್ಪಿನಲ್ಲಿ ಮಕ್ಕಳು ಸಾಯುವದರಿಂದ ಉಂಟಾಗುವ ತಾಪವು ಆಧಿಭೌತಿಕವು ದುಃಖ, ದಾರಿದ್ರ್ಯ, ಸಾಲ, ಒತ್ತಲೆಯಿಂದ ವಿದೇಶಕ್ಕೆ ಹೋಗುವದು, ಆಪತ್ತು-ವಿಪತ್ತುಗಳು, ಕೆಟ್ಟ ಕೂಳು ಇವುಗಳಿಂದಾಗುವ

ತಾಪವು ಆಧಿಭೌತಿಕವು ಪ್ರಳಯದಲ್ಲಿ ಮುಳುಗುವದ, ಯುದ್ಧದಲ್ಲಿ ಸೋಲುವದು ಪ್ರೀತಿಯ ವಸ್ತುಗಳ ಹಾಗು ಸ್ನೇಹಿತರ ನಾಶವಾಗುವದು, ಇವೆಲ್ಲ ಆಧಿಭೌತಿಕ ತಾಪಗಳು ಕಠಿಣ ಕಾಲ, ಬರಗಾಲ, ದುಷ್ಟಕಾಲ, ಸಂಶಯಿತ ಕಾಲ, ಚಿಂತೆ, ಉದ್ವೇಗ, ಪಶ್ಚಾತ್ತಾಪ, ಇವೆಲ್ಲ ಆಧಿಭೌತಿಕ ತಾಪಗಳು ಯಂತ್ರ ಗಾಣಗಳಲ್ಲಿ ಸಿಕ್ಕಿಕೊಳ್ಳುವದು, ಬಂಡಿಯ ಗಾಲಿ ಹಾಯ್ದು ಸಾಯುವದು, ಬೆಂಕಿಗಳಲ್ಲಿ ಹಾರುವದು, ಶಸ್ತ್ರದಿಂದ ಇರಿದು ಕೊಳ್ಳುವದು, ಶ್ವಾಪದಗಳ ಬಾಯಿಗೆ ಬಲಿಯಾಗಿ ಬೀಳುವದು, ಸೆರೆಮನೆ ವಾಸವಾಗುವದು, ಇವೆಲ್ಲ ಆಧಿಭೌತಿಕಗಳು ಹಲವು ಕೆಟ್ಟ ವಾಸನೆಗಳನ್ನು ಆಘ್ರಾಣಿಸುವದು, ಅಪಮಾನಗಳಿಂದ ನಾಚಿಕೆಗೊಳ್ಳುವದು ಹಲವು ಶೋಕಗಳಿಂದ ತೊಂದರೆಗೊಳ್ಳುವದು ಇವೆಲ್ಲವು ಆಧಿಭೌತಿಕತಾಪಗಳು

ಇವೆಲ್ಲವಲ್ಲದೆ ಇನ್ನೂ ಹೇಳಬಹುದು ಈ ದುಃಖಗಳದ್ದೊಂದು ದೊಡ್ಡ ಪರ್ವತವೇ ಹಬ್ಬಿದೆ ಇಂತು ಶ್ರೋತೃಗಳು ಆಧಿಭೌತಿಕ ತಾಪ ಬಗೆಗೆ ವಿಚಾರವನ್ನು ಅರಿತುಕೊಳ್ಳಬೇಕು

ಶ್ರೀ ರಾಮ|| ೮ ಆಧಿ ದೈವಿಕತಾಪ || ಗುರುಗಳು ಶಿಷ್ಯರಿಗೆ —

" ಈ ಮೊದಲು ಆಧ್ಯಾತ್ಮಿಕ ತಾಪ ಹಾಗೂ ಆಧಿಭೌತಿಕ ತಾಪ ಇವುಗಳ ಬಗಗೆ ಹೇಳಿದೆ ಇನ್ನು ಆಧಿದೈವಿಕ ತಾಪದ ಬಗೆಗೆ ಹೇಳುವೆನು ಶ್ರೋತೃಗಳು ಸಾವಧರಾಗಿ ಆಲಿಸತಕ್ಕದ್ದು

ಜನರು ತಾವು ಕೈಕೊಳ್ಳುವ ಕರ್ಮಗಳಿಗನುಸರಿಸಿ ಶರೀರ ಗತಿಸಿದ ನಂತರ ಕರ್ಮ ಫಲಗಳನ್ನು ಅನುಭವಿಸುವರು ಅಂದರೆ ಶುಭ ಕರ್ಮಗಳು ಸ್ವರ್ಗವನ್ನೂ ಅಶುಭ ಕರ್ಮಗಳು ನರಕವನ್ನೂ ಪಡೆಯುವರು ಈ ಬಗೆಯಾಗಿ ಕೃತ ಕರ್ಮಗಳಿಗನುಸರಿಸಿ ಫಲ ಪಡೆಯುವದೇ ಆಧಿ ದೈವಿಕವು ಬಹುಜನರು ಮದಾಂಧರಾಗಿ ವಿವೇಕವಿಲ್ಲದೆ ಹಲವು ದೋಷಗಳನ್ನೂ ಹಲವು ಪಾಪಗಳನ್ನೂ ಮಾಡಿ ದುಃಖ ಪ್ರದವಾದ ಯಮ-ಯಾತನೆಗಳನ್ನು ಅನುಭವಿಸುವರು ಕೆಲವರು ತಮ್ಮ ವೈಸೊಕ್ಕಿನಿಂದ, ಕೆಲವರು ಧನ—ಜನ ಬಲದಿಂದ ಇನ್ನೂ ಕೆಲವರು ಅಧಿಕಾರ—ಸಾಮರ್ಥ್ಯ ಬಲದಿಂದ ಅಲ್ಲದ ಕೆಲಸಗಳನ್ನು ಮಾಡುವರು ಕಡೆಗೆ

ಅವುಗಳ ದುಷ್ಫಲಕ್ಕೆ ಗುರಿಯಾಗುವರು ನೀತಿಯನ್ನು ತೊರೆದು ಕರ್ಮ ಮಾಡಬಾರದು ಹಾಗೆ ಮಾಡಿದ್ದಾದರೆ ಆ ಪ್ರಾಣಿಯು ಯಮ ಯಾತನೆಯನ್ನೇ ಭೋಗಿಸುವದಕ್ಕೆ ನರಕಕ್ಕೆ ಹೋಗುವದು ಸ್ವಾರ್ಥ ಸಾಧಕರು ಹೆರವರ ಭೂಮಿ-ಸೀಮೆ, ದ್ರವ್ಯ-ಸಂಪತ್ತು ಮುಂತಾದವುಗ ಳನ್ನು ಸೆಳೆಯುವದಕ್ಕೆ ಹಲವು ಬಗೆಯಿಂದ ಯತ್ನಿಸುವರು ಇದಕ್ಕಾಗಿ ಅವರು ಹಲವು ಆಶೆಗಳನ್ನು ನಂಬಿ ಹೀನವೃತ್ತಿಯನ್ನು ಅನುಸರಿಸು ವರು ಅಂಥವರು ಮಹೋನ್ಮತ್ತರಾಗಿ ಇನ್ನೊಬ್ಬರ ಪ್ರಾಣ ತೆಗೆದು ಕೊಳ್ಳುವರು ಇಲ್ಲವೆ ಅವರ ಕುಟುಂಬವನ್ನೇ ನಾಶ ಪಡಿಸುವರು ಈ ಕ್ರಿಯೆಗಳಲ್ಲಿ ಅವರಿಗೆ ಏನೂ ಪಾಪದ ಭಯವೆನ್ನಿಸುವದಿಲ್ಲ ಕೊನೆಗೆ ಅವರು ತಮ್ಮ ದುಷ್ಕೃತಿಗಳ ಫಲವಾಗಿ ಯಮ ಯಾತನೆಗಳನ್ನು ಅನು ಭವಿಸುವರು ನೀತಿ ನಿಯಮಗಳನ್ನು ಬಿಟ್ಟು ಆಚರಿಸುವ ಗ್ರಾಮ ವನ್ನು ಗ್ರಾಮಾಧಿಕಾರಿಯೂ ದೇಶವನ್ನು ದೇಶಾಧಿಪತಿಯೂ ದಂಡಿಸು ವರು ಒಂದು ವೇಳೆ ಅವರು ನೀತಿ ತಪ್ಪಿದರೆ ರಾಜನು ಅವರನ್ನು ಶಿಕ್ಷಿಸುವನು ಇನ್ನು ಆ ರಾಜನೇ ಅನೀತಿಯನ್ನನುಸರಿಸಿದಲ್ಲಿ ಅವನಿಗೆ ಯಮ ಯಾತನೆಯು ಮಾತ್ರ ತಪ್ಪಿದ್ದಲ್ಲ ಇದಕ್ಕಾಗಿಯೇ ಪಾಪಿಷ್ಠ ರಾಜನಿಗೆ ಅಂತಿಮದಲ್ಲಿ ನರಕವು ಎಂಬುದು ಸಾಮಾನ್ಯ ಮಾತಾಗಿ ಬಿಟ್ಟಿದೆ ರಾಜ ನೀತಿಯನ್ನು ತೊರೆದ ರಾಜನನ್ನು ಯಮರಾಯನು ಶಿಕ್ಷಿಸುವನು ಒಂದು ವೇಳೆ ಯಮನೂ ತನ್ನ ನೀತಿಯಿಂದ ಹೊರತಾ ದರೆ ಅವನು ದೇವ ಗಣಗಳಿಂದ ಶಿಕ್ಷಿಸಲ್ಪಡುವನು ಈ ಬಗೆಯ ನಿಯ ಮವನ್ನು ದೇವತೆಗಳೇ ಹಾಕಿ ಬಿಟ್ಟಿರುವರು ಆದ್ದರಿಂದ ಪ್ರತಿಯೊಬ್ಬ ರೂ ನೀತಿಯಿಂದಲೇ ವರ್ತಿಸತಕ್ಕದ್ದು. ಅನೀತಿಯಿಂದ ನಡೆಯಕೂಡ ದು ಹಾಗೆ ನಡೆದದ್ದಾದರೆ ಅವರಿಗೆ ಯಾವ ಯಾತನೆ ತಪ್ಪುವದಿಲ್ಲ ಯಮನು ದೇವತೆಗಳಿಂದಲೇ ಪ್ರೇರಿತವಾದವನು. ಆದ್ದರಿಂದಲೇ ಆಧಿ ದೈವಿಕ ಎಂಬ ಹೆಸರಿನ ಮೂರನೆಯ ತಾಪವು ಅತಿ ದುರ್ಗಮವಾಗಿ ರುವದು ಹಾಗು ಅದು ಯಮ ಯಾತನೆಯ ಸಂಬಂಧಿಕವಾಗಿ ರುವದು

ಶಾಸ್ತ್ರಗಳಲ್ಲಿ ಯಮದಂಡ, ಯಮಯಾತನೆ ಮುಂತಾಗಿ ಹಲವು ಪ್ರಕಾರಗಳು ವರ್ಣಿಸಲ್ಪಟ್ಟಿರುವವು ಕರ್ಮ ಭೋಗಿಗಳಿಗೆ ಅವು ಎಂದೂ ತಪ್ಪಲಾರವು ಈ ವಿಚಾರವೇ ಅಧಿ ದೈವಕವು ಈ ಯಮಯಾತನೆಯ ಕಷ್ಟಗಳು ಶಾಸ್ತ್ರಗಳಲ್ಲಿ ವಿಸ್ತ್ಯತವಾಗಿ ಹೇಳಲ್ಪಟ್ಟಿರುವವು.

ಪಾಪ ಪುಣ್ಯಾತ್ಮಕ ಶರೀರಗಳಲ್ಲಿ ಹಲವು ಪ್ರಕಾರದ ಅಪ್ರಮಾದ ಗಳನ್ನು ನೇರಿಸಿ ಸ್ವರ್ಗ ನರಕಗಳಲ್ಲಿಯ ಹಲವು ಪಾಪ ಪುಣ್ಯಗಳ ಸುಖ—ದುಃಖಗಳನ್ನು ಭೋಗಿಸಲು ಹಚ್ಚುವರು, ಪುಣ್ಯ ಕರ್ಮಗಳಿಂದ ವಿಲಾಸ ಭೋಗವನ್ನೂ ಪಾಪಕರ್ಮಗಳಿಂದ ಕಷ್ಟ ಭೋಗವನ್ನೂ ಭೋಗಿಸಲು ಹಚ್ಚುವರು ಇವೆಲ್ಲವು ಶಾಸ್ತ್ರ ಲಿಖಿತವಾಗಿವೆ. ಅವುಗಳಲ್ಲಿ ನಂಬುಗೆಯನ್ನಿಟ್ಟು ವರ್ತಿಸತಕ್ಕದ್ದು ವೇದಗಳ ಆಜ್ಞೆಗಳನ್ನು ಉಲ್ಲಂಘಿ ಸಿದವನೂ, ಹರಿಭಕ್ತಿ ರಹಿತನೂ ಆದವನು ಯಮಯಾತನೆ ಭೋಗಿಸಲೇ ಬೇಕಾಗುವದು ಇದಕ್ಕೇ ಆಧಿ ದೈವಿಕ ತಾಪವೆನ್ನುವರು ಆ ಯಮಯಾತ ನೆಯ ಹಲವು ಪ್ರಕಾರಗಳು—

'ಅಕ್ಷೋಭ' ಎಂಬ ನರಕದಲ್ಲಿ ಪಾಪಿಷ್ಟನನ್ನು ಕೈಕಾಲು ಕಟ್ಟಿ ಚೆಲ್ಲುವರು ಆ ನರಕದಲ್ಲಿಯ ಅತ್ಯನಂತ ಹುಳುಗಳು ಆ ಪಾಪಿಯನ್ನು ರವರವನನ್ನಾಗಿ ಗೊಳಿಸುವವು.

'ಕುಂಭೀ ಪಾಕ' ಎಂಬ ನರಕವು ನೀರಿನ ಕೊಡದ ಆಕಾರ ದ್ದಾಗಿರುವದು ಅದರಲ್ಲಿಯ ಅಸಹ್ಯ ದುರ್ಗಂಧದಿಂದ ಪಾಪಿಯು ತಳ ಮಳ ಗೊಳ್ಳುತ್ತ ಬೀಳುವನು.

ಈ ನರಕಗಳಲ್ಲದೆ ಪಾಪಿಗಳನ್ನು ಕಾದ ನೆಲದ ಮೇಲೆ ಉರುಳಾ ಡಿಸುವರು, ತಪ್ತವಾಗಿದ್ದ ಕಂಬಕ್ಕೆ ಬಿಗಿಯುವರು, ಕಾಯ್ದ ಹಲವು ಚಿಮ್ಮಟಿಗೆಗಳನ್ನು ಮೈಗೆ ಚುಚ್ಚುವರು ಇವೆಲ್ಲವು ಆಧಿ ದೈವಿಕ ತಾಪಗಳು.

ಈ ಪ್ರಕಾರಗಳಲ್ಲದೆ ಇನ್ನೂ ಹಲವು ಬಗೆಯಿಂದ ತಾಪಗಳನ್ನು ಕೊಡುವ ಸಾಹಿತ್ಯಗಳು ಯಮರಾಜನಲ್ಲಿರುವವು ಅವೆಲ್ಲವನ್ನು ಪಾಪಿ ಗಳು ಅನುಭವಿಸಬೇಕಾಗುವದು. ಮಾನವ ಲೋಕದಲ್ಲಿಯಕ್ಕಿಂತಲೂ ಉಗ್ರವಾದ ತಾಡನ — ದಂಡನೆಗಳು ಆ ಯಮ ಲೋಕದಲ್ಲಿರುವವು

ಅಲ್ಲಿಯ ಯಮ ದೂತರಿಗೆ ಎಷ್ಟೊಂದೂ ಬಿಡುವು ಇರುವದಿಲ್ಲ ಅವರು ಸತತವೂ ಪಾಪಿಗಳ ಸಮಾಚಾರ ಕೊಳ್ಳುತ್ತಿರುವರು. ನಾಲ್ವರು ಯಮ ದೂತರು ಕೂಡಿ ಒಬ್ಬ ಪಾಪಿಯನ್ನು ಸಿಕ್ಕ ಸಿಕ್ಕತ್ತ ಎಳೆದು ಚೆಲ್ಲುವರು ಮುಸುಕಿಕ್ಕಿ ಹೊಡೆಯುವರು, ಹೊಡೆ-ಬಡೆಯುವದರಲ್ಲಿ ಕಡಿಮೆ ಮಾಡರು ಏಳಗೊಡರು, ಕೂಡ್ರಗೊಡರು, ಬೀಳಗೊಡರು, ಅಳಗೊಡರು, ಇಂತು ಹಲವು ಯಾತನೆಗಳನ್ನು ಪಾಪಿಯು ನಿರಂತರವಾಗಿ ಅನುಭವಿಸಬೇಕಾಗುವದು.

ಆ ಪಾಪಿಯು ಗೋಳಿಟ್ಟು ಅಳುವನು ಕರೆಯುವನು, ಕೇಳುವವರಾರು? ಯಮ ದೂತರು ಧಕ್ಕೆ ಮುಕ್ಕೆಯಿಂದ ಅವನನ್ನು ನಿರ್ಬಲ ಸ್ಥಿತಿಗೆ ಮುಟ್ಟಿಸುವರು

ಎಳೆದಾಟದಿಂದ ಪಾಪಿಯ ಕೇವಲ ಅಸ್ಥಿಪಂಜರ ಮಾತ್ರ ಉಳಿಯುವದು ಆ ಯಮ ದೂತರ ಕರ್ಕಶ ವಚನಗಳೂ ಕಠೋರ ಹೊಡೆತಗಳೂ ಅಸಹನೀಯವಾದವು. ಇಷ್ಟೆಲ್ಲ ಯಾತನೆಯು ಹಲವು ಪ್ರಕಾರಗಳು ಪಾಪಿಗಳ ಮೇಲೆ ಪ್ರಯೋಗಿಸಲ್ಪಡುವವು ಅದರಿಂದ ಪಾಪಿಗಳ ಪ್ರಾಯಶ್ಚಿತ್ತವಾಗಿ ಹೋಗುವದು ಇಂಥ ಎಲ್ಲ ತಾಪಗಳು ಆಧಿ ದೈವಿಕ ತಾಪಗಳೆನ್ನಿಸುವವು

ಹಿಂದೆ ರಾಜದಂಡದ ಬಗೆಗೆ ಹೇಳಿದೆ ಈ ಯಮದಂಡವು ಅದಕ್ಕಿಂತ ಎಷ್ಟೋ ಪಟ್ಟು ಉದ್ದಂಡವಾಗಿಯೂ ಪ್ರಚಂಡವಾಗಿಯೂ ಭಯಂಕರ ದಾರುಣ ಸ್ವರೂಪವಾಗಿಯೂ ಆಗಿರುವದು

ಈ ಪ್ರಕಾರ ಆಧ್ಯಾತ್ಮಿಕ, ಆಧಿ ಭೌತಿಕ ತಾಪಗಳನ್ನೂ ಅವಕ್ಕಿಂತಲೂ ವಿಶಿಷ್ಟತೆಯುಳ್ಳ ಆಧಿ ದೈವಿಕ ತಾಪವನ್ನೂ ಹೇಳಿದೆವು ಇವನ್ನು ತಿಳಿದು ಕೊಳ್ಳುವದಕ್ಕಾಗಿ ಸ್ವಲ್ಪ ಮಟ್ಟಿಗೆ ಕೆಲವನ್ನು ಮಾತ್ರ ಹೇಳಿದೆ

ಶ್ರೀ ರಾಮ!! ೯ ಮೃತ್ಯು ನಿರೂಪಣ!! ಗುರುಗಳು ಶಿಷ್ಯರನ್ನು ಕುರಿತು —

“ ಸಂಸಾರವೆಂಬುವದು ಪ್ರಾಣಿಗಳ ಜನ್ಮದಿಂದ ಬೆಂಬಳಿಸಿದ ಮೃತ್ಯುವಿನ ದೂತ ವಾಗಿರುವದು ಆ ಮೃತ್ಯುವು ಲೋಕು ವ್ಯವಹಾರ

ಸ್ಥನಿದ್ದಂತೆ ಆ ವ್ಯಾಪಾರಿಯು ಶರೀರವನ್ನು ಕಾಲವೂಪಿನಿಂದ ಅಳೆಯಹತ್ತಲು ಉಪಕ್ರಮಿಸಿದೆ ಅದರ ಅಳತೆಗೆ ಒಳಗಾದ ಶರೀರವು ಪ್ರತಿ ಕ್ಷಣದಲ್ಲಿ ಕುಂದುತ್ತ ನಡೆದಿದೆ

ಈ ಶರೀರವು ನಿತ್ಯವೂ ಕಾಲನ ಸಹವಾಸದಲ್ಲಿದೆ ಮುಂದಾಗುವದು ಯಾರಿಗೂ ತಿಳಿಯದು ಪ್ರಾಣಿಗಳು ತಮ್ಮ ತಮ್ಮ ಕರ್ಮಗಳಿಗನುಸರಿಸಿ ದೇಶ ವಿದೇಶಗಳಲ್ಲಿ ಹೋಗಿ ಬೀಳುವವು. ಸಂಚಿತ ಕರ್ಮ ಶೇಷವು ಮುಗಿದ ಕೂಡಲೆ ನಿಮಿಷಾರ್ಧದಲ್ಲಿ ಕಾಲನ ವಶವರ್ತಿಯಾಗುವವು ಯಮನಾಳುಗಳು ಯಮನ ಅಪ್ಪಣೆಯಾದ ಕೂಡಲೆ ಪ್ರಾಣಿಯನ್ನು ಮರಣೋನ್ಮುಖವಾಗಿ ಮಾಡಿ ಅದನ್ನು ಬೆಂಬಳಿಸಿ ಹೊಡೆಯುತ್ತ ಬಡೆಯುತ್ತ ಮೃತ್ಯು ಮಾರ್ಗದಲ್ಲಿ ಎಳೆಯುತ್ತ ತೆಗೆದುಕೊಂಡು ಹೋಗುವರು. ಮೃತ್ಯುವಿಗೆ ಒಪ್ಪಿಸುವರು ಆಗ ಯಾರೂ ಈ ಪ್ರಾಣಿಯ ಬೆನ್ನು ಕಟ್ಟಿ ಸಹಾಯಕ್ಕೆ ಬರುವದಿಲ್ಲ. ಎಲ್ಲರಿಗೂ ಈ ಮೃತ್ಯುವಿನ ಅನುಭವವು ಬಂದೇ ಬರುವದು ಮೃತ್ಯುದಂಡಕವು ರಾಜ ಮಹಾರಾಜನಿದ್ದರೂ ಅವನ ತಲೆಯ ಮೇಲೆ ಅಪ್ಪಳಿಸದೆ ಬಿಡುವದಿಲ್ಲ ಆ ಮೃತ್ಯುವು ಎಲ್ಲರನ್ನು ಬೆಂಬಳಿಸಿಯೇ ಇರುವದು ಅದು ಕ್ರೂರನನ್ನು ಲೆಕ್ಕಿಸುವದಿಲ್ಲ ಯೋಧನನ್ನು ಮನ್ನಿಸುವದಿಲ್ಲ ರಣಶೂರನನ್ನು ಕಣ್ದೆರೆದು ನೋಡುವದಿಲ್ಲ ಎಲ್ಲರಿಗೂ ತನ್ನ ಪ್ರಭಾವ ತೋರಿಸುವದು ಮತ್ತೂ ಆ ಮೃತ್ಯುವು—

ಮಾನವನು ಸಿಟ್ಟಿನವನಿರಲಿ, ಪ್ರತಾಪಿಯಿರಲಿ, ಉಗ್ರನಾಗಿರಲಿ, ನೀಚನಾಗಿರಲಿ, ಬಲಾಢ್ಯ ಧನಾಢ್ಯನಿರಲಿ, ಸರ್ವ ಗುಣಸಂಪನ್ನನಿರಲಿ, ವಿಖ್ಯಾತನಾಗಿರಲಿ, ಶ್ರೀಮಂತನಾಗಿರಲಿ, ಅದ್ಭುತ ಪರಾಕ್ರಮಿಯೆನಿಸಿರಲಿ, ರಾಜನಾಗಿರಲಿ, ಚಕ್ರವರ್ತಿಯಾಗಿರಲಿ, ಕರ್ತೃತ್ವ ಶಾಲಿಯಾಗಿರಲಿ, ಇವರಾರೇ ಆಗಿದ್ದರೂ ಅವರಿಗೆ ಆ ಮೃತ್ಯುವು ದಯೆ ತೋರುವದಿಲ್ಲ ಹಾಗು ಅದು ತನ್ನ ಕ್ರಿಯೆಯನ್ನು ಸಾಧಿಸದೆ ಬಿಡುವದಿಲ್ಲ

ಇದರಂತೆ ಆ ಮೃತ್ಯುವು —

ಅದನ್ನು ಅಶ್ವಪತಿ, ಗಜಪತಿ, ನರಪತಿ, ವರಿಷ್ಠ, ರಾಜಕಾರಣಿ, ಪರ ಸೇವಕ ಪುಂಡ, ದೇಸಾಯಿ, ಉದ್ಯೋಗಸ್ಥ, ಮುದ್ರಾಧಾರಿ, ವ್ಯಾಪಾರಿ, ರಾಜ ಹಾಗು ರಾಜಪುತ್ರಿ ಇವರಾರೂ ಮೀರಲು ಸಾಧ್ಯವಿಲ್ಲ ಆ ಮೃತ್ಯುವಿಗೆ ಕಾರ್ಯ ಕಾರಣಗಳು, ವರ್ಣಾವರ್ಣಗಳು, ಬ್ರಾಹ್ಮಣತ್ವವು, ಕರ್ಮನಿಷ್ಠತೆಯು ಇವಾವವೂ ಲಕ್ಷಕ್ಕೆ ಬರುವದಿಲ್ಲ ವಿದ್ವಾಂಸ, ಪಂಡಿತ, ಪುರಾಣಿಕ, ವೈದಿಕ ಯಾಜ್ಞಿಕ, ಜೋಯಿಸ, ಅಗ್ನಿಹೋತ್ರಿ, ಶ್ರುತಿಗಳನ್ನರಿತವ, ಮಾಂತ್ರಿಕ, ಯಾಂತ್ರಿಕ, ವೇದಬಲ್ಲವ, ಶಾಸ್ತ್ರಜ್ಞ, ಸರ್ವಜ್ಞ ಇವರಾರನ್ನೂ ಆ ಮೃತ್ಯುವು ಬಿಡುವದಿಲ್ಲ ಮತ್ತು ಅದು ಬ್ರಹ್ಮಹತ್ಯೆ, ಗೋಹತ್ಯೆ, ಬಾಲಹತ್ಯೆ ಸ್ತ್ರೀಹತ್ಯೆ ಮುಂತಾದ ಹಲವು ಹತ್ಯೆಗಳನ್ನು ಅದು ಎಂದೂ ಅರಿಯದು ಮಾನವನಲ್ಲಿ ರಾಗಜ್ಞಾನ, ತಾಳಜ್ಞಾನ, ತತ್ವಜ್ಞಾನ ಮುಂತಾದ ಹಲವು ಜ್ಞಾನಗಳಿದ್ದರೂ ಅದು ಕೇಳುವದಿಲ್ಲ ಯೋಗಿ, ಸಂನ್ಯಾಸಿಗಳನ್ನು ಮ ರ್ಯಾದಿಸುವದಿಲ್ಲ ಸಿದ್ಧ-ವೈದ್ಯ— ಪಂಚಾಕ್ಷರಿಗಳನ್ನೂ ಗೋಸಾವಿ, ತಪಸ್ವಿ, ಆತ್ಮ ಸಂಯಮಿಗಳನ್ನೂ ಋಷಿವರ್ಯ, ಕವಿವರ್ಯ, ದಿಗಂಬರರನ್ನೂ ಸಮಾಧಿ ಸುಖ ನಿರತರನ್ನೂ ಹಠಯೋಗಿ, ರಾಜಯೋಗಿ, ವೈರಾಗಿ, ವಟು, ಜಟಾಧಾರಿ, ನಿರಾಹಾರಿ ಯೋಗೀಶ್ವರರನ್ನೂ, ಸಂತ-ಮಹಾತ್ಮರನ್ನೂ ಬಿಡಲಾರದಂಥ ಮೃತ್ಯುವಾಗಿರುವದು ಅಡಗಿ ಕುಳಿತವನನ್ನೂ ತನ್ನ ಸ್ವಾಧೀನನಾದವನನ್ನೂ ಅನ್ಯರ ಆಧೀನದಲ್ಲಿರುವವನನ್ನೂ ಆ ಮೃತ್ಯುವು ಬಿಡದೆ ಅವರ ಜೀವವನ್ನು ಸೆಳೆದು ಬಿಡುವದು

ಸಾವಿನ ದ್ವಾರದಲ್ಲಿ ಹೋಗಿ ಕುಳಿತ, ಇಲ್ಲವೆ ಆ ಮೃತ್ಯು ಮಾರ್ಗ ದಲ್ಲಿ ನಡೆದು ಬರುತ್ತಿದ್ದ ಮುದುಕರಿಗೂ ಕೂಡ ಆ ಮೃತ್ಯು ದಯೆ ತೋರುವದಿಲ್ಲ ಅಂಡಮೇಲೆ ಅದು ಬಾಲಕರನ್ನೂ ಪ್ರಾಯದವರನ್ನೂ ಒಳ್ಳೆ ಲಕ್ಷಣಯುಕ್ತರನ್ನೂ, ತೀಕ್ಷ್ಣ ಬುದ್ಧಿಯವರನ್ನೂ ಹೇಗೆ ಬಿಡು ವದು? ಸಾಧ್ಯವಿಲ್ಲ ಅದು ಆಧಾರಿ ನಿರಾಧಾರಿಗಳನ್ನೂ, ಉದಾರರನ್ನೂ, ಚೆಲುವ ಚೆನ್ನಿಗರನ್ನೂ ಚತುರರನ್ನು, ಪುಣ್ಯಾತ್ಮರನ್ನು, ಹರಿದಾಸರನ್ನು, ವಿಶಿಷ್ಟ ಪುಣ್ಯವಂತರನ್ನು, ಯಾರನ್ನೂ ಬಿಡದೆ ತನ್ನ ಪಾಶದಿಂದ ಬಂಧಿಸಿ ಸೆಳೆದೊಯ್ಯುವನು

ಇನ್ನು ಈ ಹೇಳಿಕೆ ಅದಂತಿರಲಿ, ಮೃತ್ಯುವಿನಿಂದ ತಪ್ಪಿಸಿಕೊಂಡ ವರಾರೂ ಇಲ್ಲ ಸ್ವೇದಜಾದಿ ಪ್ರಾಣಿಗಳೆಲ್ಲವೂ, ನಾಲ್ಕು ವರ್ಗದವರೂ

ಎಂಬತ್ನಾಲ್ಕು ಲಕ್ಷ ಜೀವ ರಾಶಿಗಳೂ, ಒಟ್ಟಿನ ಮೇಲೆ ಹುಟ್ಟಿದ ಪ್ರಾಣಿಗಳೆಲ್ಲವೂ ಮೃತ್ಯುವಿಗೆ ತುತ್ತಾಗಿಯೇ ಬಿಡುವವು ಆ ಮೃತ್ಯುವಿಗೆ ಸ್ವದೇಶೀಯ— ವಿದೇಶೀಯ ಜನರ ಅರಿವು ಇಲ್ಲ ಮೃತ್ಯುವಿಗೆ ಹೆದರಿ ಎಲ್ಲಿ ಹೋದರೂ ಅದು ಬಿಡುವದಿಲ್ಲ ಆ ಮೃತ್ಯುವಿಗೆ ಸಣ್ಣ ದೊಡ್ಡ ವುಗಳೆಂಬದರ ತಾರತಮ್ಯವಿಲ್ಲ ಅದಕ್ಕೆ ಹರಿ—ಹರ ಭೇದವಿಲ್ಲ, ಅದು ಭಗವಂತನ ಅವತಾರಗಳನ್ನು ಲೆಕ್ಕಿಸುವದಿಲ್ಲ

ಶ್ರೋತೃಗಳೇ! ಸಿಟ್ಟಾಗಬೇಡಿರಿ, ಈ ಮೃತ್ಯು ಲೋಕವು ಎಲ್ಲರಿಗೂ ಜನ್ಮಸ್ಥಾನವಾಗಿದೆ ಇಲ್ಲಿ ಹುಟ್ಟಿದ ಪ್ರಾಣಿಗಳೆಲ್ಲ ಮೃತ್ಯುವಿನ ಮಾರ್ಗವನ್ನು ಅನುಸರಿಸುವದು ಒಳ್ಳೇದು ಇದರಲ್ಲಿ ಸಂಶಯಬೇಡ ಹಾಗೆ ತಿಳಿಯದಿದ್ದರೆ ಇದು ಮೃತ್ಯುಲೋಕವಾಗದು, ಆದ್ದರಿಂದ ಹುಟ್ಟಿದವರೆಲ್ಲ ಈ ಮೃತ್ಯು ಲೋಕದ ಮಹಿಮೆಯನ್ನರಿತು ಮೃತ್ಯುವನ್ನು ಹೊಂದಿ ಜನ್ಮ ಸಫಲ ಮಾಡಿಕೊಳ್ಳಬೇಕು- ಒಟ್ಟಿಗೆ ಹೇಳುವದೇನೆಂದರೆ– ' ಸಾಯಬೇಕು ಸತ್ತು ಕೀರ್ತಿ ರೂಪನಾಗಿ ಜನರಲ್ಲಿ ಇರಬೇಕು ' ಈ ಜಗತ್ತಿಗೆ ಜನಿಸಿ ಬಂದವರೆಲ್ಲ ಹೋಗಿರುವರು ಭವ್ಯವಾದ ವೈಭವ ಭೋಗಿಸುವವರು ಹೋದರು. ಶತಾಯುಷಿ–ದೀರ್ಘಾಯುಷಿಗಳು ಹೋದರು ಆ ಮೃತ್ಯು ಪಂಥವು ಮಹತ್ವವಾದುದರಿಂದಲೇ ಇವರೆಲ್ಲ ಗತಿಸಿದರು ಎಷ್ಟೋ ಶೂರರೂ, ಮೋನಗಾರರೂ, ರಣಶೂರರೂ, ಬಲವಂತರೂ, ಸುಶೀಲರೂ, ಕುಲೀನರೂ, ಶ್ರೇಷ್ಠ ರಾಜರೂ, ಬುದ್ಧಿವಂತರೂ, ಯುಕ್ತಿವಂತರೂ, ತರ್ಕವಾದಿಗಳೂ, ವಿದ್ಯಾಸಾಗರರೂ, ಕುಬೇರನಂಥ ಸಿರಿವಂತರೂ, ಪುರುಷಾರ್ಥಿಗಳೂ, ವಿಕ್ರಮಶಾಲಿಗಳೂ, ಕಾರ್ಯಕರ್ತರೂ, ಶಸ್ತ್ರಧಾರಿಗಳೂ, ಪರೋಕಾರಿಗಳೂ, ನೀತಿಮತ್ತೆಯುಳ್ಳವರೂ, ಪ್ರತಾಪಿಗಳೂ, ಅನೇಕ ಮತವಾದಿಗಳೂ, ವಿವಾದ ಬಳೆಸುವವರೂ, ಇವರೆಲ್ಲರು ಮೃತ್ಯು ಮಾರ್ಗವನ್ನು ಹಿಡಿದು ಹೋದರು ಪಂಡಿತರ ಸಮುದಾಯವು ನಷ್ಟವಾಯಿತು ವೈಯ್ಯಾಕರಣಿಗಳು ಹೋದರು ಹಲವು ಪ್ರಕಾರದ ಹಲವು ಜನರು ಉದಿಸಿದರು, ಗತಿಸಿದರು ಅಂದರೆ ತಪಸ್ವಿಗಳು, ಸಂನ್ಯಾಸಿಗಳು, ವಿಚಾರ ಕರ್ತರು, ಸಾಂಸಾರಿಕರು, ವೇಷಧಾರಿಗಳು, ಬ್ರಾಹ್ಮಣರು, ಆಚಾರ್ಯರು, ಇವರೆಲ್ಲರೂ ಮೃತ್ಯುಪಥದಲ್ಲಿ ಸಾಗಿ ಹೋದರು.

ಇನ್ನು ಬಹಳ ಹೇಳುವದೇನು ? ಹೋದವರು ಎಷ್ಟೆಂದು ಹೇಳಲಿ ? ಹೀಗೆ ಎಲ್ಲರೂ ಹೋದರು ಆದರೆ ಒಬ್ಬನು ಮಾತ್ರ ಉಳಿದಿರುವನು ಅವನಾರೆಂದರೆ ಸ್ವರೂಪಾಕಾರ ಹೊಂದಿದ ಬ್ರಹ್ಮಜ್ಞಾನಿಯು

ಶ್ರೀ ರಾಮ ॥ ೧೦ ವೈರಾಗ್ಯ ನಿರೂಪಣ ॥ ಗುರುಗಳು ಶಿಷ್ಯರಿಗೆ ಹೇಳಿದ್ದೇನೆಂದರೆ –

" ಸಂಸಾರ ಸಾಗರದಲ್ಲಿ ಇಂದ್ರಿಯ ವಿಕಾರಗಳೆಂಬ ಅಸಂಖ್ಯ ಜಲಚರಗಳು ವಾಸವಾಗಿರುವವು ವಿಷಯುಕ್ತ ಕೃಷ್ಣ-ಸರ್ಪವು ದಂಶ ಮಾಡಲು ಓಡಿ ಬರುವದು ಆಶೆ, ಮಮತೆಗಳಿಂದ ಡೊಗರುಗಳಲ್ಲಿ ನೇರಿಕೊಂಡಿರುವ ಬಂಧನವೆಂಬ ಮೊಸಳೆಯು ಪ್ರಿಯ ಪದಾರ್ಥಗಳ ವಿಯೋಗವನ್ನು ಸಹಿಸುವದಕ್ಕೆ ಹಚ್ಚಿ ದುಃಖ ಶೋಕಗಳೆಂಬ ಸ್ಥಳಕ್ಕೆ ತೆಗೆದೊಯ್ಯುತ್ತದೆ ಅಹಂಕಾರರೂಪವೆಂಬ ಮೊಸಳೆಯು ಪ್ರಾಣಿಯನ್ನು ಮೇಲಕ್ಕೇರಿಸಿ ಒಮ್ಮೆಲೇ ರಸಾತಳಕ್ಕೆ ಒಯ್ದು ಮುಳುಗಿಸುತ್ತದೆ ಮುಂದೆ ಅಲ್ಲಿಂದ ಆ ಪ್ರಾಣಿಯು ಮುಕ್ತತೆಯಾಗುವದಿಲ್ಲ ಕಾಮವೆಂಬ ಜಲಚರವು ಅದನ್ನು ತನ್ನ ಹಿಡಿತದಿಂದ ಬಿಡುವದಿಲ್ಲ ತಿರಸ್ಕಾರವೆಂಬ ದ್ವೇಷಭಾವವು ಅದರಿಂದ ದೂರಾಗುವದಿಲ್ಲ ಆ ಪ್ರಾಣಿಯು ಭ್ರಮೆಯೆಂಬ ಸುಳಿಯಲ್ಲಿ ಸಿಕ್ಕು ಒದ್ದಾಡಿದರೂ ಅದರ ಮದ-ಮತ್ಸರಗಳು ಹಿಂಜರಿಯುವದಿಲ್ಲ ವಾಸನೆಯೆಂಬ ಹಗ್ಗವು ಆ ಪ್ರಾಣಿಯ ಕುತ್ತಿಗೆಯನ್ನು ಬಿಗಿದಿದ್ದರೂ, ಅದು ಆದರ ಹಿಡಿತದಲ್ಲಿದ್ದರೂ ತನ್ನ ಭಯಂಕರ ನಾಲಿಗೆಯನ್ನು ಮುಂದೆ ಚಾಚಿ ವಿಷ ಕಾರುತ್ತಿದ್ದರೂ ಈ ಪ್ರಪಂಚವನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ನಾನು ನನ್ನದು ಎಂದು ನುಡಿಯುವದು ಹಾಗು ತಾನು ಮುಳುಗುತ್ತಿದ್ದರೂ ಹೊತ್ತ ಭಾರವನ್ನು ಚೆಲ್ಲದೆ ಕುಲಾಭಿಮಾನದಿಂದ ಉಬ್ಬುತ್ತಲೇ ಇರುವದು ಭ್ರಾಂತಿಯೆಂಬ ಇಡಿಗಿದ ಭಯಂಕರ ಕತ್ತಲೆಯಲ್ಲಿ ಅಭಿಮಾ-ನಕಳ್ಳನಿಂದ ಸುಲಿಸಿಕೊಂಡರೂ ಅಹಂಕಾರವೆಂಬ ಪಿಶಾಚ-ಪೀಡಿತನಾದರೂ ಆ ಪ್ರಾಣಿಯು ಆ ಭ್ರಮೆಯೆಂಬ ಮಡುವಿನಲ್ಲಿಯೇ ಮುಳುಗುತ್ತಿರುವದು ಆ ಪ್ರಾಣಿಯು ಬಹುತರವಾಗಿ ಸುಳಿಯಲ್ಲಿ ಸುತ್ತಿರಿಗಿ ಪ್ರವಾಹದ ಗುಂಟ ಹರಿಯುತ್ತ ಹರಿಯುತ್ತ ಮುಳುಗುವದು ಇದು ಎಲ್ಲ ಪ್ರಾಣಿ

ಗಳ ಮಾತಾಯಿತು ಅದರೊಳಗೂ ತೀರ ಸ್ವಲ್ಪ ಭಾಗ್ಯವಂತ ಪ್ರಾಣಿಗಳು ಭಕ್ತಿ ಭಾವದಿಂದ ದೇವನನ್ನು ಸ್ಮರಿಸಲು ಆ ಜೀವಿಗಳಿಗಾಗಿ ಭಗವಂತನು ಭಕ್ತ-ವಾತ್ಸಲ್ಯ ಪೂರ್ಣನಾಗಿ ತಾನೇ ಆ ಭವಸಾಗರದಲ್ಲಿ ಹಾರಿ ತನ್ನ ಆ ಭಕ್ತರನ್ನು ಉದ್ಧರಿಸಿರುವನು ಭಕ್ತರಲ್ಲದ ಉಳಿದ ಪ್ರಾಣಿಗಳು ಹಾಗೇ ಪ್ರವಾಹದ ಗುಂಟ ಹರಿದು ಹೋದವು

ಭಗವಂತನು ಭಾವನೆಗೆ ಹಸಿದವನು ಆದುದರಿಂದಲೇ ಅವನು ಭಕ್ತನ ಭಾವನೆಗೆ ಮರುಳಾದನು ಭಕ್ತನು ಸಂಕಟದಲ್ಲಿರುವಾಗಲೇ ಬರುವನು ಅವನನ್ನು ರಕ್ಷಿಸುವನು

ಭಗವಂತನ ಪ್ರೀತಿಗೆ ಪಾತ್ರನಾದವನಿಗೇ ಆತನ ಸಾನ್ನಿಧ್ಯವು ಲಭಿಸುವದು ಮತ್ತು ಅವನ ಸಂಸಾರ ತಾಪವೆಲ್ಲ ಹಾರಿ ಹೋಗುವದು ಈಶ್ವರನ ದಾಸನೇ ನಿಜಸುಖ ಪಡೆಯುವನು ಭಾವಿಕರ ಜೀವನವು ಧನ್ಯತರವಾದುದು

ಭಾವವಿದ್ದಂತೆಯೇ ದೇವನಿರುವನು ಅಂತಃ ಸಾಕ್ಷಿಯಾದ ದೇವನು ಪ್ರಾಣಿ ಮಾತ್ರಗಳ ಭಾವನೆಯನ್ನು ತಿಳಿಯುವನು ಮಾನವನ ಭಾವನೆಯು ಮೋಸಯುಕ್ತವಾಗಿದ್ದರೆ ದೇವನು ಆತನ ಬಗೆಗೆ ಮೋಸಗಾರನಾಗುವನು ಯಾವನು ಹೇಗೆ ಇರುವನೋ ಅವನ ಬಗೆಗೆ ದೇವನು ಹಾಗೆಯೇ ಇರುವನು ಇದೊಂದು ಆತನ ಕೌತುಕವು ನಮ್ಮ ಭಜನಕ್ಕೆ ಸರಿಯಾಗಿ ಆತನು ಸಮಾಧಾನ ಕೊಡುವನು- ಆ ಭಜನದಲ್ಲಿ ಸ್ವಲ್ಪ ನ್ಯೂನತೆಯಾದರೆ ನಮ್ಮಿಂದ ಆತನು ದೂರಾಗುವನು ದೇವನು ಕನ್ನಡಿಯಲ್ಲಿ ನಮ್ಮ ಮುಖದರ್ಶನವಾದಂತಿರುವನು ನಾವು ಹೇಗಿರುವೆವೋ ಆತನು ಹಾಗೇ ತಾನಾಗಿರುವನು, ಇದೊಂದು ಆತನ ಸೂತ್ರ ಅಥವಾ ನಿಯಮವು. ನಮ್ಮ ಬಳಿಯಲ್ಲಿ ಇರುವದು ಕನ್ನಡಿಯಲ್ಲಿ ನಮ್ಮ ಹಾವ-ಭಾವಗಳು, ನೋಟ—ಮಾಟಗಳು ಉಂಟಾದಂತೆಯೇ ಉಂಟಾಗುವವು ಅಂತೆಯೇ ನಮ್ಮ ಅಂತಃಕರಣವು ಒಂದು ಕನ್ನಡಿಯಾಗಿದೆ- ನಮ್ಮ ಭಾವನೆಗೆ ಸಾದೃಶ್ಯವಾದ ದೇವನ ಸ್ವರೂಪವು ಅದರಲ್ಲಿ ಒಡಮೂಡುವದು, ಪರಮಾರ್ಥದಲ್ಲಿ ಭಾವನೆಯು ಪ್ರಾಧಾನ್ಯವು ಸದ್ಭಾವದಿಂದ ಪರಮಾರ್ಥ ಮಾರ್ಗವನ್ನು ನಾವು ಕಂಡು ಕೊಂಡದ್ದಾದರೆ

ಉಳಿದ ಎಲ್ಲ ಮಾರ್ಗಗಳು ಭಕ್ತಿಯ ವೇಟೆಗೆ ಒಯ್ದು ಮುಟ್ಟಿಸು ವವು ಹಾಗು ಸಂತ ಸಜ್ಜನ ಸಹವಾಸದಿಂದ ನಾವು ನೇರವಾಗಿ ಮುಕ್ತಿಯ ಸ್ಥಾನ್ನವನ್ನು ಮುಟ್ಟುವೆವು ಭಾವನೆಯಿಂದ ಭಕ್ತಿ ಮಾರ್ಗ ವನ್ನು ಕೈಕೊಳ್ಳಲು ಅದು ದೇವ ಸ್ವರೂಪಕ್ಕೆ ಒಯ್ದು ಮುಟ್ಟಿಸು ವದು ಹಾಗೂ ಪವಿತ್ರತೆಯನ್ನು ಉಂಟು ಮಾಡುವದು ಇಷ್ಟೇ ಅಲ್ಲ ಈ ಭಾವಾರ್ಥ ಬಲದಿಂದಲೇ ಪೂರ್ವಜರ ಉದ್ಧಾರವಾಗುವದು ಇಂಥ ಭಕ್ತರು ಸ್ವತ ಉದ್ಧಾರರಾಗುವರಲ್ಲದೆ ಅನ್ಯರಿಗೂ ಅವರ ಉಪಯೋ ಗವಾಗುವದು ಅವರ ಕೀರ್ತಿಯು ಹಬ್ಬಿ ಅದನ್ನು ಕೇಳಿದ ಭಕ್ತರಲ್ಲ ದವರೂ ಕೂಡ ಭಾವಿಕವೃತ್ತಿಯವರಾಗುತ್ತಾರೆ.

ಹರಿ ಭಜನೆಯನ್ನೂ ಭಾವದಿಂದಕೈಕೊಂಡ ಮಾನವನನ್ನು ಹೆತ್ತ ತಾಯಿ ಧನ್ಯಳು! ಅವನ ಜನ್ಮವು ಇದೊಂದೇ ಜನ್ಮದಲ್ಲಿ ಸಾರ್ಥಕತೆ ಹೊಂದುವದು, ಭಗವಂತನು ಆತನ ನಿಯಂತ್ರಣಕ್ಕೊಳಗಾಗುವನು, ಆ ದೇವನು ನಡಕಟ್ಟಿಕೊಂಡು ಆ ತನ್ನ ಭಕ್ತನನ್ನು ಭವಸಾಗರದಿಂದ ಪಾರುಮಾಡುವನು ಅಂದಮೇಲೆ ಆ ಭಕ್ತನ ಶ್ರೇಷ್ಠತೆಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ ಸರಿ ಆತನು ಹಲವು ಜನ್ಮಗಳ ಕೊನೆ ಯಲ್ಲಿ ಸಂಸಾರ ತಾಪಗಳನ್ನು ತಪ್ಪಿಸಿಕೊಂಡು ನರದೇಹದಿಂದಲೇ ಭಗವದ್ದರ್ಶನ ಪಡೆಯುವನು ಅಂತೆಯೇ ಆತನು ಧನ್ಯನು- ಅವನು ಹರಿ ಸನ್ನಿಧಿಗೇ ಹೊಂದುವನು ಅಂದ ಮೇಲೆ ಅವನ ಅನಂತ ಜನ್ಮಗಳ ಪುಣ್ಯ ಕರ್ಮಗಳ ಫಲವು ಲಭಿಸಿತೆಂದು ಹೇಳಬಹುದು ಹರಿ-ಭಕ್ತನು ಸಿರಿ ಸಂಪತ್ತುಗಳಿಂದ ಕೀಳ್ತರನಾಗಿ ತೋರುವನು, ಆದರೂ ಬ್ರಹ್ಮಾದಿ ಕರಿಗಿಂತ ಆತನು ಶ್ರೇಷ್ಠನು ಅವನಿಗೆ ನಿರಾಶವೃತ್ತಿಯ ಬೋಧೆಯಾ ಗಿರುವದರಿಂದ ಓವನು ಸದಾವ ಕಾಲವೂ ಸಂತುಷ್ಟ ವೃತ್ತಿಯಲ್ಲಿರು ವನು ಈಶ್ವರನನ್ನು ನಂಬಿ ಸಂಸಾರದಲ್ಲಿ ಹೇಯತೆಯನ್ನೆಣಿಸಿದ ಭಾವಿ ಕನನ್ನು ದೇವನು ಸರ್ವತ್ರದಲ್ಲಿಯೂ ರಕ್ಷಿಸುವನು, ಸಂಸಾರ ದುಃಖ ವನ್ನು ತನ್ನ ವಿವೇಕದಿಂದ ಸುಖವೆಂದು ಭಾವಿಸುವವನು ' ಕಲಿತ ಮೂರ್ಖನು ' ಅವನು ಸಂಸಾರದಲ್ಲಿಯೇ ಲುಬ್ಧನಾಗಿ ಹೋಗುವನು ಈಶ್ವರನ ಪ್ರೇಮಕ್ಕೆ ಪಾತ್ರನಾದವನು ಸ್ವಾನಂದ ಸುಖ ಹೊಂದುವನು.

ಮತ್ತು ದೇವನು ಆತನನ್ನು ಸಾಮಾನ್ಯ ಜನರಿಂದ ಹೊರತು ಪಡಿಸಿ ಅಕ್ಷಯ ಸುಖಶಾಂತಿಗಳಲ್ಲಿರಿಸುವನು ಆ ಅಕ್ಷಯ ಸುಖದಲ್ಲಿಯೇ ಅವನು ಸಂಸಾರ ಸುಖವನ್ನು ಮರೆಯುವನು, ಶ್ರೀರಂಗನ ಸನ್ನಿಧಿ ಯನ್ನು ನೇರಿಕೊಂಡು ವಿಷಯ ಸುಖಗಳನ್ನೆಲ್ಲ ಮರೆತು ಬಿಡುವನು ಇಂತು ಆತನು ತನಗೆ ದೊರೆತ ನರದೇಹವೆಂಬ ಪೆಟ್ಟಿಗೆಯನ್ನು ಸ್ವಾನಂದ ಸುಖಕ್ಕಾಗಿ ಈಶ್ವರನ ಕೂಡ ವಿನಿಮಯ ಮಾಡಿಕೊಳ್ಳುವನು ಉಳಿದ ಅಭಾವಿಕರು ಬಹು ಬೆಲೆಯುಳ್ಳ ಈ ನರದೇಹವನ್ನು ವ್ಯರ್ಥವಾಗಿ ಕಳೆದು ಕೊಳ್ಳುವರು ಅವರು ರತ್ನದಂಥ ನರದೇಹದ ಬೆಲೆಯನ್ನು ಕವಡಿಯ ಬೆಲೆಗಿಂತಲೂ ಕಡಿಮೆಯಾಗಿ ತಿಳಿಯುವರು ಘೋರವಾದ ತಪಶ್ಚರ್ಯ ದಿಂದ ಪ್ರಾಪ್ತಮಾಡಿಕೊಂಡ ಪರಿಸಗಲ್ಲನ್ನು ಮೊದಲಿನ ಅಜ್ಞಾನದಿಂದ ಉಪಯೋಗಿಸಿಕೊಳ್ಳಲು ಬಾರದಂಥವರ ಹಾಡೇ ಈ ಅಭಾವಿಕರದಾಗಿ ರುವದು ಅವರು ದುರ್ಲಭವಾದ ನರದೇಹವನ್ನು ವ್ಯರ್ಥವಾಗಿ ಕಳೆದು ಕೊಳ್ಳುವರು ಹಾಗು ಮಾಯಾಜಾಲದಲ್ಲಿ ಬೀಳುವರು ಮತ್ತು ಕೊನೆ ಗೆ ಅವರು ಬಂದಂತೆಯೇ ಮರಳುವರು ಈ ನರದೇಹದ ಸಹವಾಸ ದಿಂದಲೇ ಹಲವರು ಉದ್ಧೃತರಾಗಿರುವರು ಹಲವರು ಜನನ ಮರಣ ಚಕ್ರದಲ್ಲಿ ಸಿಕ್ಕು ತೊಳಲಾಡುವರು ಇದನ್ನರಿತು ನರದೇಹಿಗಳು ಕೂಡಲೇ ಸತ್ಸಂಗ ಧರಿಸಿ ಇದರ ಉಪಯೋಗ ಮಾಡಿಕೊಳ್ಳಬೇಕು, ಹಿಂದೆ ಹಲವು ನೀಚ ಯೋನಿಗಳಲ್ಲಿ ಜನಿಸಿ ಅನಿವಾರ ದುಃಖ ಭೋಗಿ ಸಿದವರು ಈ ನರಜನ್ಮದಲ್ಲಿ ಯಾವ ಕಾಲಕ್ಕೆ ಎಂಥ ಪ್ರಸಂಗಗಳೊದ ಗುವವೆಂಬದನ್ನು ಅರಿಯರು, ಇದನ್ನು ತಿಳಿದು ಸಾವಧರಾಗಿ ವರ್ತಿಸ ತಕ್ಕದ್ದು, ಅಂಗಳದಲ್ಲಿ ಒಟ್ಟು ಗೂಡಿದ ಪಕ್ಷಿಗಳು ಕೂಡಲೆ ದಶ ದಿಕ್ಕು ಗಳಿಗೆ ಹಾರಿ ಹೋಗುವಂತೆ ಈ ಲೋಕದ ಸಿರಿ ಸಂಪತ್ತುಗಳೂ,ಬಂಧು- ಮಿತ್ರ ಕಲತ್ರರೂ ಯಾವ ಕಾಲಕ್ಕೆ ಅಗಲುವರೆಂಬ ನೇಮವಿಲ್ಲ ಕ್ಷಣ ಕ್ಷಣಕ್ಕೆ ಆಯುಷ್ಯವು ಕ್ಷೀಣವಾಗುತ್ತ ಹೋಗಿ ಕಡೆಗೆ ದೇಹವು ಪತ ನವಾಗುವದು ದೇಹ ಬಿದ್ದ ಕೂಡಲೇ ನೀಚ ಯೋನಿಯನ್ನು ಹೊಂದಿ ಅಲ್ಲಿಯ ಕಷ್ಟ ಯಾತನೆಗಳನ್ನು ಅನುಭವಿಸುವ ಸಂಭವವುಂಟು ಆ ಯೋನಿಗಳಲ್ಲಿ ಮೋಕ್ಷೋಪಾಯಗಳೇನೂ ದೊರಕುವದಿಲ್ಲೆಂಬದನ್ನೂ

ಮನಸಿನಲ್ಲಿ ತರತಕ್ಕದ್ದು ಗರ್ಭವಾಸದ ಕಷ್ಟವು ಎಂತಿರುವದನ್ನು ವಿಚಾರಿಸಿ ನೋಡಿರಿ ಹಿಂದಿನ ಜನ್ಮಗಳೆಲ್ಲೆಲ್ಲ ಎಷ್ಟೋ ಆಪ್ತರು ತನ್ನವ ರಾದರು ಅವರನ್ನು ಬಿಟ್ಟು ಒಬ್ಬನೇ ಹೋಗಬೇಕಾಯಿತು ಅದ ರಂತೆ ಮುಂದೆಯೂ ಹೋಕಬೇಕಾಗುವದು ಈ ಸಂಸಾರದಲ್ಲಿ ಯಾರು ತನ್ನವರು ? ತಾಯ್ತಂದೆ, ಸಹೋದರರು, ಇಷ್ಟಮಿತ್ರರು ಹಾಗು ಸತಿ ಸುತರು ಇವರೆಲ್ಲರು ಮಾಯೆಯ ಸಂಬಂಧಿಕರು ಆದ್ದರಿಂದ ಅವರು ಸುಖಕ್ಕೆ ಸಹಾಯಕರೇನು? ಧನ ಧಾನ್ಯಗಳೆಲ್ಲವೂ ಅಶಾಶ್ವತವು ಅಂದ ಮೇಲೆ ನನ್ನ ಮನೆ, ನನ್ನ ಸಂಸಾರ ಇತ್ಯಾದಿಯಾಗಿ ಮಮಕಾರ ವಹಿ ಸುವದು ಏಕೆ? ನಾವು ನಂಬಿದವರು ನಮ್ಮ ದುಃಖದಲ್ಲಿ ಎಂದೂ ಪಾಲಗಾರರಾಗರು ಎಲ್ಲಿಯ ಪ್ರಪಂಚ? ಎಲ್ಲಿಯ ವಂಶ? ಇವುಗಳಿಗಾಗಿ ವ್ಯಾಕುಲಗೊಳ್ಳುವದು ವಿಹಿತವಲ್ಲ ಕಡೆಗೆ ಎಲ್ಲವನ್ನು ಬಿಟ್ಟು ಹೋಗು ವದಲ್ಲವೇ? ಪ್ರಾಯ, ಸಂಪತ್ತು, ಸುಖವಿಲಾಸ ಇವೆಲ್ಲವೂ ಮಾಯೆಯ ಸಂಬಂಧಿಕವು ಈ ಕೂಡಲೇ ಮೃತನಾದರೆ ನಿನ್ನ ಮಮಕಾರವೆಲ್ಲಿ ಉಳಿಯುವದು ? ಆದರಿಂದ ನೀನು ಕೇವಲ ಈಶ್ವರನನ್ನು ಮಾತ್ರ ಬಿಟ್ಟುಕೊಟ್ಟಂತಾಗುವದು ಇದನ್ನು ವಿಚಾರಿಸು ಹಿಂದಿನ ಪ್ರತಿಯೊಂದು ಜನ್ಮದಲ್ಲಿ ನಿನಗೆ ತಾಯ್ತಂದೆಗಳೂ ಸತಿ-ಸುತರೂ ಅದೆಷ್ಟೋ ಜನರು ಆಗಿ ಹೋದರು ಅವರೆಲ್ಲರು ಕರ್ಮಯೋಗದಿಂದ ಜನ್ಮತಾಳಿಕೊಂಡಿದ್ದ ರೆಂದೇ ನೀನು ಅವರನ್ನು ನನ್ನವರೆಂದು ಭಾವಿಸಿದಿ ಆದರೆ ಈ ಶರೀರವು ನಿನ್ನದಲ್ಲ ಅಂದಮೇಲೆ ಇದಕ್ಕ ಉಳಿದವರ ಸಂಬಂಧ ಹೇಗೆ? ಇನ್ನಾ ದರೂ ನೀನು ಸಾವಧನಾಗು. ಆ ಭಗವಂತನೊಬ್ಬನನ್ನು ಸದ್ಭಾವ ದಿಂದ ನಿನ್ನವನನ್ನಾಗಿ ಮಾಡಿಕೊಳ್ಳು ಹೊಟ್ಟೆಯ ಪಾಡಿಗಾಗಿ ಹಲವು ನೀಚರ ಮನವೊಲಿಸಿ ಸೇವಿಸುವದು, ಅವರನ್ನು ಹೊಗಳುವದು, ಅವರ ಮಾನ ರಕ್ಷಣೆ ಮಾಡುವದು, ಇವೆಲ್ಲವು ಕೇವಲ ತುತ್ತಿನ ಆಶೆಗಾಗಿಯ ಲ್ಲವೇ? ಇದರಿಂದ ಇಡೀ ಶರೀರವನ್ನೇ ಅವರಿಗೆ ಮಾರಿದಂತಾಗುವದಿ ಲ್ಲವೇ? ಅಂದಮೇಲೆ ಇಡೀ ಜನ್ಮ ನೀಡಿದ ಪರಮೇಶ್ವರನಿಗಾಗಿ ನಿನ್ನ ದೇಹ ಸವಿಸಬಾರದೇಕೆ? ಅವನನ್ನು ಮರೆಯುವದು ಯೋಗ್ಯವೇ ? ಆತನು ನಿನ್ನೊಬ್ಬನ ಬಗೆಗಲ್ಲ, ಎಲ್ಲ ಪ್ರಾಣಿಗಳ ದೆಸೆಯಿಂದ ಹಗಲಿ

ರುಳೂ ಚಿಂತಿಸುವನು ಮೋಡಗಳು ಮಳೆ ಸುರಿಸುವವು, ಸಮುದ್ರವು ಮೇರೆ ಮೀರದು, ಶೇಷನು ಪೃಥ್ವಿಯನ್ನು ಹೊತ್ತು ಅದರ ಭಾರ ಸಹಿಸುವನು, ಸೂರ್ಯನು ನಿತ್ಯವೂ ಪ್ರಕಾಶಿಸುವನು, ಇವೆಲ್ಲವು ತಪ್ಪದೆ ಆತನ ನಿಯಂತ್ರದಿಂದಲೇ ಸಾಗುವವು ಇಡೀ ಬ್ರಹ್ಮಾಂಡವೆಲ್ಲ ದೇವಾಧಿದೇವನಾತನಿಂದಲೇ ನಾಗಿದೆ ಇದಕ್ಕೆ ಇನ್ನೊಬ್ಬರ ಸಹಾಯವು ಅವನಿಗಿಲ್ಲ ಕೇವಲ ಸಕಲಜೀವಿಗಳ ರಕ್ಷಣೆಗಾಗಿಯೇ ಆತನ ಕೃತಿಗಳು ಇವಾಗಿರುವವು

ಮಾನವಾ ! ಇಂಥ ಸರ್ವಾತ್ಮ ಶ್ರೀ ರಾಮನನ್ನು ಮರೆತುಬಿಟ್ಟು ಚಿತ್ತದಲ್ಲಿ ವಿಷಯಗಳ ಧ್ಯಾನ ಮಾಡುವನು, ದುರಾತ್ಮನು ಹಾಗೂ ಕೀಳ್ತರಗತಿಯುವನು ರಾಮನನ್ನು ಸ್ಮರಿಸದೆ ಮನಸಿನಲ್ಲಿ ಬಯಸಿದ ಆಶೆಗಳೆಲ್ಲ ನಿರಾಶೆಯಾಗುವವು ಅಂದರೆ ಅವೆಲ್ಲ ನಿಷ್ಫಲವಾಗುವವು ನನ್ನ ನನ್ನದು ಎಂದು ಕುಳಿತರೇ ಕ್ಲೇಶವೇ ಒದಗುವದು. ಕ್ಲೇಶವನ್ನೇ ಬಯುಸುವವನು ವಿಷಯುಗಳನ್ನು ಚಿಂತಿಸಲಿ ಅಂದರೆ ಆ ವಿಷಯು ದೊರೆಯದಿದ್ದರೆ ಆ ಪ್ರಾಣಿಯು ತಳಮಳಗೊಳ್ಳುವನು ಆನಂದ ಘನನಾದ ರಾಮನನ್ನು ಬಿಟ್ಟು ಮನಸಿನಲ್ಲಿ ವಿಷಯುಗಳನ್ನು ಅಪೇಕ್ಷಿಸುವವನಿಗೆ ಸಮಾಧಾನವೆಲ್ಲಿ? ಸುಖವನ್ನು ಅಪೇಕ್ಷಿಸುವವನು ರಘುನಾಥನನ್ನು ಭಜಿಸಬೇಕು ಮತ್ತು ದುಃಖವಾದ ಸ್ವಜನ ಮುಂತಾದವೆಲ್ಲವನ್ನು ತ್ಯಾಗ ಮಾಡಬೇಕು ವಿಷಯುವಾಸನೆ ಮುಸುಕು ಹಾಕಿದಲ್ಲಿಯೇ ಅಪಾಯ ದುಃಖಗಳು ನೇರಿಕೊಳ್ಳುವವು ಆದ್ದರಿಂದ ಆ ವಾಸನೆಯುನ್ನು ಬಿಟ್ಟವನೇ ಸುಖಿಯು ವಿಷಯುಜನಿತ ಸುಖವು ಮೊದಲು ಸವಿಯೆನಿಸಿ ಕೊನೆಗೆ ಶೋಕದಾಯಕವಾಗಿರುವದು ಆದ್ದರಿಂದ ಅದು ಪರಮ ದುಃಖದಾಯುಕವು ಹೇಗೆಂದರೆ ಆಮಿಷವನ್ನು ನುಂಗುವದಕ್ಕಾಗಿ ಬಂದ ಮೀನವು ಅದನ್ನು ಬಾಯಲ್ಲಿ ತೆಗೆದುಕೊಂಡು ನುಂಗುವ ಮೊದಲು ಅದಕ್ಕೆ ಬಹು ರುಚಿಯೆನ್ನಿಸುವದು ಮುಂದೆ ಅದು ನುಂಗುವಾಗ ಅದರ ಗಂಟಲವೇ ಕೊರೆದು ಅದು ಸಾವಿಗೀಡಾಗುವದು ಅದರಂತೆ ಚಿಗರೆಯು ಹುಲ್ಲಿನ ಆಶೆಗಾಗಿ ಹೋಗಿ ಬೇಟೆಗಾರನ ಬಲಿಯೊಳಗೆ ಸಿಕ್ಕುವದು ಇವುಗಳಂತೆ ವಿಷಯ ಸುಖಗಳು ರುಚಿಯೆನ್ನಿಸಿ ಕೊನೆಗೆ ನಾಶಕರವಾಗುವವು ಆದ್ದರಿಂದಲೇ ಶ್ರೀ ರಘುನಾಥನನ್ನು ಪ್ರೀತಿಸಿ ಆತನನ್ನೇ ಸ್ಮರಿಸಬೇಕು

ಈ ಪ್ರಕಾರವಾಗಿ ಗುರುಗಳು ಬೋಧಿಸಿದರು ಆ ಬಳಿಕ ಶ್ರೋತೃ ಭಾವಿಕರು, "ಸ್ವಾಮಿಾ! ಜನ್ಮ ಸಾರ್ಥಕವು ಯಾವುದರಿಂದಾಗುವದು? ಯಮ ಲೋಕವು ಎಂತು ತಪ್ಪುವದು ಹಾಗು ದೇವನು ಎಲ್ಲಿರುವನು? ಆತನು ಯಾವ ಬಗೆಯಿಂದ ದರ್ಶನ ಕೊಡುವನು ? ಮತ್ತು ಈ ದುಃಖ ಮೂಲ ಸಂಸಾರ ನಿವೃತ್ತಿ ಹೇಗಾಗುವದು? ಕೂಡಲೆ ಭಗವತ್ ಪ್ರಾಪ್ತಿಯಾಗಿ ಅಧೋಗತಿ ಮಾರ್ಗವನ್ನು ತಪ್ಪಿಸಿಕೊಳ್ಳುವ ಉಪಾಯವೇನು ? ಇವೆಲ್ಲ ವನ್ನು ಬೋಧಿಸುವದಾಗಬೇಕು, " ಎಂದರು - ಅದಕ್ಕೆ ವಕ್ತಾರರಾದ ಗುರುಗಳು:-

" ಏಕ ನಿಷ್ಠೆಯಿಂದ ಭಗವದ್ಭಜನ ಮಾಡುವದರಿಂದ ಶಾಂತ ಸ್ವಭಾವವುಂಟಾಗುವದು," ಎಂದು ನುಡಿಯಲು ಮತ್ತೆ ಶಿಷ್ಯನು:-

" ಭಜನೆಯನ್ನು ಹೇಗೆ ಮಾಡಬೇಕು? ಮನಸನ್ನು ಯಾವದರಲ್ಲಿ ಸ್ಥಿರಗೊಳಿಸಬೇಕು? ಭಗವದ್ಭಜನದ ಲಕ್ಷಣಗಳೇನು? ಇವೆಲ್ಲವನ್ನೂ ನನಗೆ ಬೋಧೆಯಾಗುವಂತೆ ನಿರೂಪಿಸಬೇಕು, " ಎಂದು ಆಶಾಮುಖ ಮುದ್ರೆಯಿಂದ ಯುಕ್ತನಾಗಿ ಗದ್ಗದಿತ ಕಂಠದಿಂದ ದುಃಖಾಶ್ರು ಸುರಿ ಸುತ್ತ ಶ್ರೀ ಗುರುಗಳ ಪಾದವನ್ನು ವಂದಿಸಿನು

ಇಂತು ಶಿಷ್ಯನ ಅನನ್ಯ ಭಾವನೆಯನ್ನು ಗುರುಗಳು ತಿಳಿದರು ಆತ ನಿಗೆ ಸ್ವಾನಂದ ಉಂಟಾಗುವಂತೆ ಉಪದೇಶಿಸಿದ ಬೋಧೆಯು ಮುಂದಿನ ಸಮಾಸಗಳಲ್ಲಿ ಬರುವದು

— ೩ ನೇಯ ದಶಕ ಸಂಪೂರ್ಣ —





ಜಯ ಜಯ ರಘುವೀರ ಸಮರ್ಥ

೪ ನೆಯ ದಶಕ (ನವವಿಧ ಭಕ್ತಿ)

ಶ್ರೀ ರಾಮ ||೧ ಶ್ರವಣ ಭಕ್ತಿ || ಶ್ರೀ ಗಣನಾಥನೇ ಜಯ ಜಯವು. ನೀನು ವಿದ್ಯೆಯೆಂಬ ಸಂಪತ್ತಿನ ಒಡೆಯನು ಹಾಗೂ ಅಧ್ಯಾತ್ಮ ವಿದ್ಯೆಯ ರಹಸ್ಯವನ್ನು ನನ್ನ ಮುಖದಿಂದ ಹೊರಗೆಡಹು. ಸರ್ವಸಿದ್ಧಿ ಪ್ರದಾಯಿಕೆಯೂ ವೇದಮಾತೆಯೂ ಆಗಿರುವ ಸರಸ್ವತಿಗೆ ನನ್ನ ನಮಸ್ಕಾರವು ಆ ದೇವತೆ ಸ್ಫೂರ್ತಿ ರೂಪದಿಂದ ನನ್ನ ಮನಸ್ಸನ್ನು ಮನನ ಮಾರ್ಗಕ್ಕೆ ಪ್ರೇರೇಪಿಸಲಿ ಮತ್ತು ನನಗೆ ಜ್ಞಾನವಿಚಾರವನ್ನು ಬೋಧಿಸುವ ಪರಾತ್ಪರನಾದ ಸದ್ಗುರುವನ್ನು ಸ್ಮರಿಸುವೆನು ಇನ್ನು ಭಗವದ್ಭಜನವನ್ನು ಹೇಗೆ ಮಾಡಬೇಕೆಂದು ಪ್ರಶ್ನೆ ಮಾಡಿದ ಶ್ರೋತೃಗಳಿಗೆ ಹಲವು ಗ್ರಂಥಗಳ ಆಧಾರದಿಂದ ಉತ್ತರ ರೂಪವಾಗಿ ತಿಳಿಸುವೆನು ಶಾಸ್ತ್ರಗಳಲ್ಲಿ ವಿವರಿಸಿದಂತೆ ಪವಿತ್ರಕರವಾದ ನವವಿಧ ಭಕ್ತಿಗಳನ್ನು ಶ್ರೋತೃಗಳು ಸಾವಧರಾಗಿ ಕೇಳಬೇಕು ಆ ನವವಿಧ ಭಕ್ತಿಗಳಾವವೆಂದರೆ— ಶ್ರವಣ, ಕೀರ್ತನ, ವಿಷ್ಣುವಿನ ಸ್ಮರಣೆ, ಪಾದಸೇವನೆ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗು ಆತ್ಮ ನಿವೇದನ ಈ ಬಗೆಯಾಗಿ ಒಂಭತ್ತು ಭಕ್ತಿಯ ಪ್ರಕಾರಗಳಿರುವವು ಇವುಗಳಲ್ಲಿ ಶ್ರವಣ ಭಕ್ತಿಯ ವಿಷಯವಾಗಿ ಹೇಳುವದೇನಂದರೆ–

ಹರಿಕಥೆ, ಪುರಾಣಾದಿಗಳನ್ನು ಕೇಳುವದೂ, ಅಧ್ಯಾತ್ಮ ನಿರೂಪಣೆಯ ಬೋಧೆಯನ್ನು ಪಡೆಯುವದೂ ಶ್ರವಣ ಭಕ್ತಿಯು ಕರ್ಮ, ಉಪಾಸನೆ, ಸಿದ್ಧಾಂತ, ಯೋಗ ಹಾಗು ವೈರಾಗ್ಯ ಇವೆಲ್ಲ ಮಾರ್ಗಗಳನ್ನು ಕೇಳಿ ತಿಳಿದುಕೊಳ್ಳುವದು ಶ್ರವಣಭಕ್ತಿಯು. ಅದರಂತೆ ವ್ರತ, ತೀರ್ಥ, ದಾನ ಇವುಗಳ ಮಹಿಮೆಯನ್ನೂ ಸ್ನಾನ ಮಹಾತ್ಮೆಗಳನ್ನು ಮಂತ್ರ ಸಾಧನ ತಪ, ಪುರಶ್ಚರಣಗಳನ್ನು ಕುರಿತು ಬಲ್ಲವರಿಂದ ಅರಿತುಕೊಳ್ಳುವದೂ ಶ್ರವಣ ಭಕ್ತಿಯು

ಇನ್ನು ಶ್ರವಣ ಮಾಡತಕ್ಕ ಸಂಗತಿಗಳು–

ಆಹಾರಗಳ ಬಗೆಗೆ- ದುಗ್ಧಾಹಾರ,[ಹಾಲು], ನಿರಾಹಾರ[ಉಪವಾಸ] ಫಲಾಹಾರ, ಪರ್ಣಾಹಾರ, (ಹಣ್ಣೆಲೆ ತಿನ್ನುವದು), ತೃಣಾಹಾರ (ತರಗೆಲೆ ಭಕ್ಷಿಸುವದು) ಇನ್ನೂ ಹಲವು ಆಹಾರಗಳು ಹೇಗಿರಬೇಕೆಂಬುದನ್ನು ಶ್ರವಣ ಮಾಡುವದು ವಾಸ್ತವ್ಯದ ಬಗೆಗೆ—ಉಷ್ಣವಾಸ, ಜಲವಾಸ, ಶೀತವಾಸ, ಅರಣ್ಯವಾಸ, ಭೂಗರ್ಭವಾಸ ಹಾಗು ಆಕಾಶವಾಸ ಇವುಗಳನ್ನು ಕುರಿತು ಶ್ರವಣ ಮಾಡುವದು. ಸಾಧಕರ ಬಗೆಗೆ—ಜಪ ಮಾಡುವವ, ತಪಸ್ವಿ, ಕಠೋರ ಯೋಗಿ, ಹಠಯೋಗಿ, ಶಕ್ತಿಯ ಉಪಾಸಕ, ಆಗಮ ವಿಶಾರದ, ಮಂತ್ರಯೋಗಿ ಇವರ ಬಗೆಗೆ ಶ್ರವಣ ಮಾಡುವದು ಇವಲ್ಲದೆ ಮುದ್ರಾ, ಆಸನ, ದೃಷ್ಟಿ, ಇವುಗಳ ಬಗೆಗೂ, ಪಿಂಡಜ್ಞಾನ, ತತ್ವಜ್ಞಾನಗಳ ವಿಷಯಕ್ಕೂ ಹಲವು ಪಿಂಡಗಳು, ಭೂಗೋಲುಗಳು, ಸೃಷ್ಟಿಗಳು ಇವುಗಳ ರಚನೆಯ ಬಗೆಗೂ ಶ್ರವಣ ಮಾಡಿ ಜ್ಞಾನ ಪಡೆಯುವದು ಸೂರ್ಯ, ಚಂದ್ರ, ನಕ್ಷತ್ರ-ಗ್ರಹಗಳು, ಮೇಘಗಳು, ಇಪ್ಪತ್ತೊಂದು ಸ್ವರ್ಗಗಳು, ಸಪ್ತ ಪಾತಾಳಗಳು- ಇವುಗಳ ಬಗೆಗೆ ಜ್ಞಾನ ಮಾಡಿಕೊಳ್ಳುವದಕ್ಕೆ ಶ್ರವಣ ಮಾಡುವದು ತ್ರಿಮೂರ್ತಿಗಳ ಸ್ಥಾನಗಳು ಎಲ್ಲೆಲ್ಲಿ? ಇಂದ್ರಾದಿ ದೇವತೆಗಳೂ ಋಷಿಗಳೂ ಯಾವ ಯಾವ ಸ್ಥಾನದಲ್ಲಿರುವರು? ವಾಯು, ಕುಬೇರ, ವರುಣರು ಎಲ್ಲಿ ಇರುವರು? ಈ ಸಂಗತಿಗಳನ್ನು ತಿಳಿದುಕೊಳ್ಳುವದಕ್ಕೆ ಶ್ರವಣ ಮಾಡುವದು ಸೃಷ್ಟಿಯ ಮೇಲಿನ ಒಂಬತ್ತು ಖಂಡಗಳಾವವು? ಹದಿನಾಲ್ಕು ಲೋಕಗಳಾವವು? ಹಾಗು ಅಷ್ಟದಿಕ್ಪಾಲಕರ ಸ್ಥಾನಗಳಾವವು? ಇವೆಲ್ಲವುಗಳ ವಿಚಾರ ಕೇಳುವದು ಜಗತ್ತಿನ ಮೇಲಿನ ಹಲವು ವನೋಪವನಗಳು ಎಂಥವು? ಎಲ್ಲಿವೆ? ಎಂಬುದನ್ನು ಕೇಳಿ ತಿಳಿದುಕೊಳ್ಳುವದು. ಭೂತಗಣಗಳು, ಗಂಧರ್ವರು, ವಿದ್ಯಾಧರರು, ಯಕ್ಷರು, ಕಿನ್ನರರು, ನಾರದ ಮಹರ್ಷಿಯು, ತುಂಬುರನು, ಅಷ್ಟನಾಯಕರು, ಸಂಗೀತಗಾರರು ಇವರೆಲ್ಲರ ಬಗೆಗೆ ತಿಳಿದುಕೊಳ್ಳುವದು,ರಾಗ, ತಾಳ, ನೃತ್ಯ, ವಾದ್ಯ ಇವುಗಳ ಜ್ಞಾನವನ್ನೂ ಜ್ಯೋತಿರ್ವಿಷಯಕ ಜ್ಞಾನವನ್ನೂ ಮಾಡಿಕೊಳ್ಳುವದು ಹದಿನಾಲ್ಕು ವಿದ್ಯೆಗಳು, ಅರವತ್ನಾಲ್ಕು ಕಲೆಗಳು, ಸಾಮುದ್ರಿಕ ಲಕ್ಷಣವು, ಮೂವತ್ತೆರಡು ಲಕ್ಷಣಗಳು ಇವೆಲ್ಲ ಕಲೆಗಳ ಜ್ಞಾನವನ್ನು ಶ್ರವಣದಿಂದ ಮಾಡಿಕೊಳ್ಳುವದು ಮಂತ್ರ, ಯಂತ್ರ ತಾಯಿತಗಳು,

ತ್ರೋಟಕ ಸಿದ್ಧಿಗಳು, ಗಿಡಮೂಲಿಕೆ ಔಷಧಗಳು, ಧಾತು-ಲೋಹಗಳ ಜ್ಞಾನವು, ರಸಾಯನ ಸಿದ್ಧಪಡಿಸುವ ವಿದ್ಯೆಯು, ನಾಡೀಪರೀಕ್ಷೆ ಇವೆಲ್ಲವುಗಳ ಸಂಬಂಧ ಜ್ಞಾನಮಾಡಿಕೊಳ್ಳಲು ಶ್ರವಣಭಕ್ತಿಯಿರಬೇಕು

ರೋಗೋತ್ಪತ್ತಿಜ್ಞಾನ, ರೋಗನಿದಾನ, ರೋಗ ಪ್ರತೀಕಾರಕ ಕಲೆ, ಔಷಧ ಪ್ರಯೋಗ ಇವೆಲ್ಲವನ್ನು ಕೇಳಿ ತಿಳಿದುಕೊಳ್ಳುವದು ರೌರವ, ಕುಂಭೀಪಾಕ ಮುಂತಾದ ನರಕಗಳ ಯಾತನೆಗಳು, ಯಮಲೋಕದಲ್ಲಾಗುವ ದುಃಖಗಳು, ಸ್ವರ್ಗದಲ್ಲಿ ಅನುಭವಿಸುವ ಸುಖಗಳು, ಇವೆಲ್ಲವುಗಳನ್ನು ಶ್ರವಣದಿಂದಲೇ ಕೇಳಿ ತಿಳಿಯುವದು ನವವಿಧ ಭಕ್ತಿಗಳೆಂದರೇನು? ಚತುರ್ವಿಧ ಮುಕ್ತಿಗಳಾವವು? ಮಾನವನು ಉತ್ತಮ ಗತಿಯನ್ನೆಂತು ಹೊಂದುವನು? ಇವೆಲ್ಲವು ಶ್ರವಣದಿಂದ ಗೊತ್ತಾಗುವವು ಪಿಂಡ-ಬ್ರಹ್ಮಾಂಡಗಳ ರಚನೆ, ಹಲವು ತತ್ವಗಳ ವಿವೇಚನೆ, ಹಾಗು ಸಾರಾಸಾರ ವಿಚಾರ ಇವೆಲ್ಲವಕ್ಕೂ ಶ್ರವಣವೇ ಮುಖ್ಯ ಶ್ರೇಷ್ಠವಾದ ಸಾಯುಜ್ಯಪದವೆಂತು ದೊರಕುವದು? ಮೋಕ್ಷ ದೊರಕುವದೆಂತು? ಈ ಬಗ್ಗೆ ಹಲವು ಬಲ್ಲವರ ಅಭಿಪ್ರಾಯ ಶೋಧಿಸುವದಕ್ಕೆ ಶ್ರವಣ ಬೇಕು ವೇದ-ಶಾಸ್ತ್ರ-ಪುರಾಣ ಮಹಾವಾಕ್ಯದ ವಿವರಣ, ನಾಲ್ಕು ಶರೀರಗಳ ನಿರಸನ ಇವು ತಿಳಿಯುವದಕ್ಕೆ ಶ್ರವಣಬಲಬೇಕಾಗುವದು ಇಂತು ಶ್ರವಣಬಲದಿಂದ ಎಲ್ಲ ಜ್ಞಾನ ದೊರಕಿಸಬೇಕು ಮತ್ತು ಪ್ರತಿಯೊಂದು ವಿಷಯದಲ್ಲಿ ಸಾರ(ಸತ್ವ)ವನ್ನು ಸೋಸಿ ಸ್ವೀಕರಿಸಬೇಕು ಸತ್ವಹೀನವಾದುದನ್ನು ತ್ಯಾಗ ಮಾಡಬೇಕು ಇದಕ್ಕೆ ಶ್ರವಣಭಕ್ತಿಯೆನ್ನುವರು

ಸಗುಣಸ್ವರೂಪದ ಇತ್ಥಂಭೂತ ಸಂಗತಿಯನ್ನು ಶ್ರವಣದಿಂದ ಅರಿತುಕೊಳ್ಳುವದು ಹಾಗು ನಿರ್ಗುಣಸ್ವರೂಪದ ಪರಮಾತ್ಮನನ್ನು ಅಧ್ಯಾತ್ಮಗ್ರಂಥಗಳಿಂದ ಶ್ರವಣ ಮಾಡಿ ಕಂಡುಕೊಳ್ಳುವದು ಸಗುಣರೂಪನಾದ ದೇವನ ಚರಿತ್ರೆಯೂ, ನಿರ್ಗುಣತತ್ವವೂ ಇವೆರಡು ಪವಿತ್ರವೆಂಬುದನ್ನು ಶ್ರವಣದಿಂದಲೇ ಅರಿಯತಕ್ಕದ್ದು ಪುಣ್ಯಾತ್ಮರ ಜಯಂತಿಗಳು, ಉಪೋಷಣೆಗಳು, ಪೂಜೆಯ ಕ್ರಮಗಳು, ಮಂತ್ರ-ಯಂತ್ರಗಳು, ಜಪ-ಧ್ಯಾನಗಳು, ಕೀರ್ತಿ-ಸ್ತುತಿಗಳು, ಸ್ತವನ- ಭಜನಗಳು ಇಂತು ಹಲವು ಸಂಗತಿಗಳನ್ನು ಶ್ರವಣದಿಂದಲೇ ಕಂಡುಕೊಳ್ಳುವದು

ಇಂತು ಸಗುಣ–ನಿರ್ಗುಣಗಳ ಐಕ್ಯತ್ವದಲ್ಲಿ ಶ್ರವಣ ಭಕ್ತಿಯ ಮೂಲವನ್ನು ಕಂಡು ಹಿಡಿಯಬೇಕು ಇದುವರೆಗೆ ಶ್ರವಣಭಕ್ತಿಯನ್ನು ವಿವರಿಸಿದೆವು ಮುಂದೆ ಕೀರ್ತನಭಕ್ತಿಯ ಲಕ್ಷಣ ಹೇಳುವೆವು

ಶ್ರೀ ರಾಮ ‖ ೨ ಕೀರ್ತನ ಭಜನ ‖ ಶ್ರೋತೃಗಳೇ ಈ ಮೊದಲು ಭಗವದ್ಭಕ್ತಿಯ ಒಂಭತ್ತು ಪ್ರಕಾರಗಳಲ್ಲಿ ಮೊದಲನೆಯದಾದ ಶ್ರವಣಭಕ್ತಿಯನ್ನು ಕುರಿತು ಹೇಳಿದೆವು ಇನ್ನು ಎರಡನೆಯದಾದ ಕೀರ್ತನಭಕ್ತಿಯನ್ನು ವಿವರಿಸುವೆವು

ಭಜಕನು ಸಗುಣ ಹರಿಕಥೆಯನ್ನು ಹೊಗಳಿ ಭಗವಂತನಕೀರ್ತಿಯನ್ನು ಬೆಳೆಯಿಸಬೇಕು ಹಾಗೂ ಸರಿಯಾದ ಶುದ್ಧ ವಾಣಿಯಿಂದ ಆತನಗುಣಾನುವಾದ ಮಾಡಬೇಕು ಇದಕ್ಕಾಗಿ ಆ ಭಜಕನು ಬಹಳವಾಗಿ ಗ್ರಂಥಗಳನ್ನು ಓದಿ ಕೊಳ್ಳಬೇಕು ಹಾಗು ಓದಿದ್ದನ್ನು ತಿಳಿದುಕೊಂಡು ಕಂಠಪಾಠವಾಗಿ ಇರಿಸಿ ಕೊಳ್ಳಬೇಕು ಈ ಪ್ರಕಾರವಾಗಿ ಸಂಪಾದಿಸಿದ ವಿದ್ಯೆಯನ್ನು ಆತನು ನಿರಂತರವಾಗಿ ಭಗವತ್ಕಥೆಯನ್ನು ಹೇಳುವದರಲ್ಲಿ ಉಪಯೋಗಿಸಬೇಕು ಬಕ್ತಿಯಿಂದ ಇದರಂತೆ ಆಚರಿಸಿದರೆ ಇದೇ ಕೀರ್ತನಭಕ್ತಿಯೆನ್ನಿಸುವದು ಕೇವಲ ಸ್ವಾರ್ಥಕ್ಕಾಗಿ ಹರಿಕಥೆಯನ್ನು ಕೀರ್ತನವೆಂದು ಉಪಯೋಗಿಸ ಬಾರದು ಭಕ್ತಿಯಿಂದ ಮಾಡುವ ಕೀರ್ತನದಲ್ಲಿ ಹರಿಯ ಗುಣಾನುವಾದ ಗಳ ಹೊರತು ಅನ್ಯ ವಿಷಯಗಳನ್ನು ಪ್ರಾಮುಖ್ಯವಾಗಿ ಇಟ್ಟುಕೊಳ್ಳಬಾರದು ಕೀರ್ತನ ಭಜಕನು ನಿತ್ಯವೂ ನವೋತ್ಸಾಹಿಯಾಗಿ ಕಥೆಯನ್ನು ನಿರೂಪಣ ಮಾಡಬೇಕು ಶ್ರೋತೃಗಳಿಗುಂಟಾಗುವ ಸಂದೇಹಗಳನ್ನು ನಿರಸನ ಮಾಡುತ್ತ ಭಕ್ತಿ ಜಾಗ್ರತೆಗಾಗಿ ತಕ್ಕ ಸಂಗತಿಗಳನ್ನು ತನ್ನ ನಿರೂಪಣೆಯಲ್ಲಿ ತುಂಬುತ್ತ ಕೀರ್ತನೆ ಸಾಗಿಸಬೇಕು ಭಕ್ತಿವಿಷಯ ಪ್ರತಿಪಾದನೆಯಲ್ಲಿ ತೊಂದರೆಗಳುಂಟಾಗಿ ಕೀರ್ತನಕ್ಕೆ ವ್ಯತ್ಯಯ ಬರಕೂಡದು ಹರಿ ಕೀರ್ತನೆಯು ಹೃದಯಕ್ಕೆ ರಮ್ಯವಾಗಿರಬೇಕು ಶ್ರೋತೃ ವರ್ಗಕ್ಕೆ ರುಚಿ ಕಟ್ಟಾಗಿರಬೇಕು ಭಗವಂತನು ಕೀರ್ತನ ಪ್ರಿಯನು: ಭಕ್ತನು ಪ್ರೇಮಳ ಹೃದಯದಿಂದ ಆತನ ಗುಣಾನುವಾದ ಹೊಗಳುವದರಿಂದ ಆ ದೇವನು ಸಂತುಷ್ಟನಾಗುವನು ಕಲಿಯುಗದಲ್ಲಿ ಮಾನವನು ಹರಿಕೀರ್ತನ ನಿರೂಪಣ

ಶ್ರವಣಗಳಿಂದ ಆತ್ಮೋದ್ಧಾರ ಮಾಡಿಕೊಳ್ಳುವನು ಎಲ್ಲ ಜನರಿಗೂ ಆತ್ಮೋದ್ಧಾರಕ್ಕೆ ಕೀರ್ತನವೇ ಹೆಚ್ಚಿನ ಉಪಾಯವೆಂದು ಹೇಳಲ್ಪಟ್ಟದೆ ಹರಿಕಥೆಯನ್ನು ನಿರೂಪಿಸುವವನು ಭಗವಂತನನ್ನು ಹಲವು ಬಗೆಯಿಂದ ಸ್ಮರಿಸಬೇಕು ಆತನ ಧ್ಯಾನಮೂರ್ತಿಯನ್ನು ಹೃದಯದಲ್ಲಿ ನಿರೀಕ್ಷಿಸುತ್ತ ಕಥೆಯನ್ನು ಹೇಳಬೇಕು ಭಗವದ್ಭಕ್ತರ ಆತ್ಮಸಂತೃಪ್ತಿಯು ಪರಮಾತ್ಮನಿಗೆ ಇಚ್ಛಿತವಾದ ಅವನ ಯಶ, ಕೀರ್ತಿ, ಪ್ರತಾಪ, ಮಹಿಮೆಗಳನ್ನು ವರ್ಣಿಸುವದರಿಂದುಂಟಾಗುವದು ವರ್ಣನೆಯಲ್ಲಿ ಕೀರ್ತನ ಕಥೆಯ ಅನ್ವಯ ಸಂಬಂಧಗಳಿಗೆ ವ್ಯತ್ಯಯ ಬರಕೂಡದು- ತಾಳ ಕರತಾಳಗಳ ರವದಲ್ಲಿ ನಾಮ ಜಯಘೋಷ ಮಾಡತಕ್ಕದ್ದು ನಡನಡುವೆ ಉದ್ಬೋಧಕವಾಗುವಂತೆ ಕಲ್ಪಿತ ಹಾಗು ಉಪಯುಕ್ತ ಸಂಗತಿಗಳನ್ನು ಸೇರಿಸಿ ಸಂಕ್ಷಿಪ್ತವಾಗಿ ಹೇಳಬೇಕು

ಕೀರ್ತನ ರಂಗಕ್ಕೆ ಸ್ಫೂರ್ತಿಯನ್ನುಂಟು ಮಾಡುವ ತಾಳ, ಮೃದಂಗ, ಸಂಗೀತ, ನೃತ್ಯ ಇವುಗಳ ತಾನ-ಮಾನವನ್ನರಿತು ಕಥಾನಿರೂಪಣೆ ಮಾಡಬೇಕು. ಹಾಗು ಇವುಗಳ ಅತಿಶಯವಾದ ಆಡಂಬರದಲ್ಲಿಯೇ ಕಥಾನುಸಂಧಾನವು ಛೇದಿಸದಂತೆ ನೋಡಿಕೊಳ್ಳಬೇಕು ನವರಸಗಳಲ್ಲೊಂದಾದ ಕರುಣಾರಸವು ತೃಷಿತ ಭಕ್ತರಿಗೆ ಜೀವನದಂತಿದೆ ಆದ್ದರಿಂದ ಕೀರ್ತನ ಕಥೆಯಿಂದ ಕರುಣಾರಸವು ಉದ್ಭವಿಸಬೇಕು ಅದು ಶ್ರೋತೃಗಳ ಶ್ರವಣ ಪುಟಗಳಲ್ಲಿ ಸೇರಿ ಆನಂದವನ್ನುಂಟು ಮಾಡಬೇಕು ಹೀಗೆ ಕೀರ್ತನವು ಒಳ್ಳೇ ಉತ್ಸಾಹದಾಯಕವಾಗಿ ಸಾಗಬೇಕು

ಕೀರ್ತನಕಾರನ ಕಂಠದಲ್ಲಿ ಮಾಧುರ್ಯವಿರಬೇಕು ಅವನು ನಿರೂಪಿಸುವ ನುಡಿಗಳೂ ನಡುನಡುವೆ ಪ್ರೇಮಾಶ್ರು ಸುರಿಸುತ್ತ ಹಾಡುವ ಪದಗಳೂ ಶ್ಲೋಕಾದಿಗಳೂ ಕೇಳುವವರಲ್ಲಿ ಕಂಪನವನ್ನೂ ರೋಮಾಂಚನವನ್ನೂ ಹುಟ್ಟಿಸುವಂತೆ ಸಾಗಬೇಕು ತಾನು ಭಜಿಸುವ ಕೀರ್ತನ ರಂಗಸ್ಥಳವು ದೇವದ್ವಾರವೆಂದೇ ಭಾವಿಸಿ ಅಲ್ಲಿಯೇ ದಂಡವತ್ ನಮಸ್ಕಾರ ಹಾಕಬೇಕು

ಕೀರ್ತನಗಳಲ್ಲಿ ಹಾಡ-–ಗೀತೆಗಳು, ಪದ–ಪದ್ಯಗಳು, ಶ್ಲೋಕ ಪ್ರಬಂಧಗಳು, ತಾಳ ಲಯಯುಕ್ತ ಛಂದಗಳು, ಕರುಣಾರಸ ಪ್ರಾಮುಖ್ಯವಲ್ಲದೆ ಇನ್ನಿತರ ರಸಗಳ ಒಸರುವಿಕೆಯು ಕಾಲ ಪ್ರಸಂಗಕ್ಕನುಸರಿಸಿ ಬಳಿ

ಸಲ್ಪಡಬೇಕು ನವರಸಿಕ ಶೃಂಗಾರದ ವಿಷಯಗಳನ್ನೂ, ಗದ್ಯ-ಪದ್ಯ ವಚನಗಳನ್ನೂ ಪ್ರಸ್ತಾಪಿಸುವಲ್ಲಿ ಶಾಸ್ತ್ರಾಧಾರಗಳನ್ನು ಮೀರಿ ವಿವರಿಸ ಕೂಡದು

ಕೀರ್ತನದಲ್ಲಿ ಮುಖ್ಯವಾಗಿ ನಿರ್ದೇಶಿಸುವ ಸಂಗತಿಗಳೆಂದರೆ—

ಭಕ್ತಿ, ಜ್ಞಾನ, ವೈರಾಗ್ಯ, ನ್ಯಾಯ ನೀತಿಗಳು, ಸ್ವಧರ್ಮ ರಕ್ಷಣೆಯ ಉಪಾಯಗಳು, ಸಾಧನ ಮಾರ್ಗಗಳು, ವೇದಾಂತ ಬೋಧೆ ಇವೆಲ್ಲವನ್ನು ಸುಗಮವಾಗಿ ಸಾಕಷ್ಟು ಅತಿ ನಮ್ರತೆಯಿಂದ ಹೇಳತಕ್ಕದ್ದು ಶ್ರೋತೃ ವರ್ಗಗಳನ್ನನುಲಕ್ಷಿಸಿ ಪ್ರಾಸಂಗಿಕವಾಗಿ ತಕ್ಕ ನಿರೂಪಣೆಯನ್ನು ಮಾಡಬೇಕಾಗುವದು ಒಮ್ಮೆ ಸಗುಣ ಕೀರ್ತಿಯನ್ನೇ ಹೊಗಳಬೇಕಾಗುವದು, ಮುಮುಕ್ಷುಗಳಾಶೆಗೆ ತಕ್ಕ ನಿರೂಪಣೆ ಮಾಡುವಲ್ಲಿ ವೇದಾಂತ ವಿಷಯುವನ್ನೆತ್ತಿ ಹೇಳಬೇಕಾಗುವದು ಕೀರ್ತನ ನಿರೂಪಣೆಯಲ್ಲಿ ಬರತಕ್ಕ ಅನುಮಾನ-ಸಂದೇಹಾದಿಗಳನ್ನು ನಿವಾರಿಸಿ ತನ್ನ ನಿಶ್ಚಿತ ಮತವನ್ನು ಪ್ರದರ್ಶಿಸಬೇಕಲ್ಲದೆ ಅವನ್ನು ತಿರಸ್ಕರಿಸಿ ತನ್ನ ಸಿದ್ಧಾಂತವನ್ನೇ ಮಂಡಿಸಕೂಡದು ಶ್ರೋತೃಗಳಿಗೆ ವೇದವರಣ ಮಾಡಲು ಹೇಳಬಹುದು. ಪುರಾಣಪಾರಾಯಣಕ್ಕೆ ತಿಳಿಸಬಹುದು ಮತ್ತು ಮಾಯೆಯ ಹಾಗು ಬ್ರಹ್ಮನ ಸ್ವರೂಪವನ್ನು ವಿವರಿಸಬಹುದು, ಆದರೆ ಸ್ವಾರ್ಥಾಂತಸ್ಥ ಯಾವದನ್ನೂ ಹೇಳಕೂಡದು

ಕೀರ್ತನಕಾರನು ನಿರೂಪಿಸತಕ್ಕ ಇನ್ನೂ ಕೆಲವು ಉಪದೇಶಗಳು—

ಬ್ರಾಹ್ಮಣತ್ವವು ಮುಗ್ಗುತ್ತಲಿರುವದು ಕಳಕಳಿಯಿಂದ ಅದನ್ನು ಕಾಯ್ದುಕೊಳ್ಳಬೇಕು ಉಪಾಸನೆ ಕೈಕೊಳ್ಳಿರಿ ಭಕ್ತಿ ಮಾರ್ಗ ಅನುಸರಿಸಿರಿ. ಗುರು ಪರಂಪರೆಯನ್ನು ಬಿಡದೆ ರಕ್ಷಿಸಿರಿ, ವೈರಾಗ್ಯಸಂಪತ್ತನ್ನು ಕಾಪಾಡಿರಿ, ಬಹು ದಕ್ಷತೆಯಿಂದ ಹಾಗು ವಿಚಾರದಿಂದ ಆತ್ಮಜ್ಞಾನದ ಲಕ್ಷಣಗಳನ್ನು ಎಲ್ಲರೂ ಕಂಡು ಕಾಯ್ದುಕೊಳ್ಳಿರಿ

ಇನ್ನು ಕೀರ್ತನ ಪ್ರಸಂಗದಲ್ಲಿ ಕೇಳುವವನಿಗೆ ಸಂಶಯವುಂಟಾಗಿ ಆತನು ಸತ್ಯ–ಸಮಾಧಾನ ವಿರಹಿತನಾದರೆ ಕೀರ್ತನಕಾರನು ನೀತಿ ನ್ಯಾಯಗಳನ್ನು ಬಿಟ್ಟು ಮಾತಾಡಬಾರದು ಹಾಗು ನಿರೂಪಣ ಮಾಡಬಾರದು

ಸಗುಣ ಕಥೆಯನ್ನು ಹೇಳುವದೇ ಕೀರ್ತನವು, ಅದ್ವೈತ ವಿಷಯಕ ವಿಚಾರ ಮಾಡುವದೇ ನಿರೂಪಣವು ಕೀರ್ತನಕಾರನು ಇವೆರಡರ ಐಕ್ಯ ಸಾಧಿಸಿರಬೇಕು ಅಂದರೆ ಸಗುಣ ರಕ್ಷಣೆಯೂ ಅದ್ವೈತ ನಿರೂಪಣೆಯೂ ಅವನ ಹೇಳಿಕೆಯಲ್ಲಿರಬೇಕು ಇನ್ನು ವಕ್ತಾರನು ಅನುಭವಿಯೂ, ನಡೆವಳಿಯುಳ್ಳವನೂ ಆಗಿರಬೇಕು ಇಂಥ ಅಧಿಕಾರವುಳ್ಳ ವಕ್ತಾರನಿಂದ ಕ್ಷುಲ್ಲಕ ಪ್ರತ್ಯುತ್ತರಗಳು ಹೊರಡುವದಿಲ್ಲ ಅವನು ಎಲ್ಲರಿಗೂ ಜ್ಞಾನ ಬೋಧಿಸಿ ಸಮಾಧಾನ ಪಡಿಸುವನು, ವೇದಗಳನ್ನೂ ವೇದದ ಆಜ್ಞೆಗಳನ್ನೂ ಆತನು ಉಲ್ಲಂಘಿಸಿ ವರ್ತಿಸುವದಿಲ್ಲ, ಪ್ರಾಣಿಮಾತ್ರರಿಗೆಲ್ಲ ಸನ್ಮಾರ್ಗ ಬೋಧಿಸುವನು

ಇಂತು ಎಲ್ಲ ಲಕ್ಷಣಯುತನಾಗಿ ಹರಿಯ ಗುಣಾನುವಾದವನ್ನು ಮಾಡುವದೇ ಭಗವದ್ಭಕ್ತಿಯ ಎರಡನೆಯ ಭಕ್ತಿಯು ಇದೇ ಕೀರ್ತನವೆನ್ನಿಸುವದು

ಕೀರ್ತನ ಶ್ರವಣದಿಂದ ಪಾಪ ದೂರಾಗಿ ಸದ್ಗತಿಯೊದಗುವದು ಭಗವತ್ಪ್ರಾಪ್ತಿಯಾಗುವದು ಇದರಲ್ಲಿ ಎಷ್ಟೂ ಸಂಶಯವಿಲ್ಲ ಕೀರ್ತನೆಯಿಂದ ವಾಣಿಯು ಶುದ್ಧವಾಗುವದು, ಯೋಗ್ಯತೆ ಹೆಚ್ಚುವದು, ಮನುಷ್ಯ ಪ್ರಾಣಿಯು ಸುಶೀಲನಾಗುವನು ಕೀರ್ತನದಿಂದ ಮನಸಿನ ವ್ಯಗ್ರತೆ(ಚಿಂತೆ) ದೂರಾಗುವದು, ನಿಶ್ಚಿತ ಮತಿಯುಂಟಾಗುವದು, ಹೇಳುವವರ ಹಾಗು ಕೇಳುವವರ ಅನುಮಾನಗಳು ಹಾರಿ ಹೋಗುವವು

ಬ್ರಹ್ಮನ ಮಗನಾದ ನಾರದನು ಸತತವೂ ಹರಿಕೀರ್ತನ ಮಾಡಿದನು ಅದರಿಂದಲೇ ಆ ನಾರದನು ನಾರಾಯಣನೆಂದು ತಿಳಿಯಲ್ಪಡಹತ್ತಿದನು ಅಂದ ಮೇಲೆ ಕೀರ್ತನೆಯ ಮಹಿಮೆ ಅಗಾಧವಾದುದೆಂದು ಹೇಳಬಹುದು ಕೀರ್ತನೆಯಿಂದ ಪರಮಾತ್ಮನು ಸಂತುಷ್ಟನಾಗುವನು, ಕೀರ್ತನದಲ್ಲಿಯೇ ಎಲ್ಲ ತೀರ್ಥಗಳೂ ಜಗದಾತ್ಮನೂ ಇರುವರೆಂದು ಹೇಳುವದು

ಶ್ರೀ ರಾಮ || ೩. ನಾಮಸ್ಮರಣ ಭಕ್ತಿ || ಈ ಮೊದಲು ಪುಣ್ಯಪ್ರದವಾದ ಕೀರ್ತನ ಭಕ್ತಿಯನ್ನು ಕುರಿತು ನಿವೇದಿಸಿತು ಇನ್ನು 'ವಿಷ್ಣುವಿನ ಸ್ಮರಣೆ' ಎಂಬ ಮೂರನೆಯ ಭಕ್ತಿಯ ಬಗೆಗೆ ಕೇಳಬೇಕು ದೇವಸ್ಮರಣೆಯನ್ನು ಮಾಡಬೇಕು ಬಿಟ್ಟು ಬಿಡದೆ ಆ ದೇವನ ನಾಮವನ್ನೇ ಜಪಿಸುತ್ತ ಹೋಗಬೇಕು ಆ ನಾಮಜಪದಿಂದಲೇ ಸಮಾಧಾನವುಂಟಾಗುವದು.

ಪ್ರಾತಃಕಾಲದಲ್ಲಿಯೂ ಮಧ್ಯಾಹ್ನ ಸಾಯಂಕಾಲಗಳಲ್ಲಿಯೂ ನಿತ್ಯ ನೈಮಿತ್ತಿಕ ಕ್ರಿಯೆಗಳನ್ನು ಮಾಡಬೇಕು ಆದರೆ ನಾಮಸ್ಮರಣೆಯನ್ನು ಸರ್ವಕಾಲದಲ್ಲಿ ಮಾಡುತ್ತಿರಬೇಕು ಸುಖ, ದುಃಖ, ಶೋಕ, ಚಿಂತೆ ಮತ್ತು ಆನಂದ ಈ ಎಲ್ಲ ಪ್ರಸಂಗಗಳಲ್ಲಿ ನಾಮಸ್ಮರಣೆಯನ್ನು ಬಿಟ್ಟಿರಬಾರದು ಇದಲ್ಲದೆ ಮಾನವನು ಹರ್ಷ ಕಾಲದಲ್ಲಿ ವಿಷಮ ಪರಿಸ್ಥಿತಿಯಲ್ಲಿ, ಹಬ್ಬ ಮುಂತಾದ ಉತ್ಸಹಪ್ರಸಂಗದಲ್ಲಿ, ನಿದ್ದೆ-ವಿಶ್ರಾಂತಿಗಳಲ್ಲಿ, ನಾಮ-ಜಪವನ್ನು ಬಿಡಬಾರದು ಆಯಕಟ್ಟು ಬಿಕ್ಕಟ್ಟಿನಲ್ಲಿ, ಗಂಡಾಂತರ ವೊದಗುವ ಸಂದರ್ಭದಲ್ಲಿ ಸಂಸಾರದ ತೊಂದರೆಯೊದಗಿದಲ್ಲಿ ನಾಮವನ್ನೇ ಸ್ಮರಿಸುತ್ತಿರಬೇಕು. ನಡೆಯುವಾಗ, ನುಡಿಯುವಾಗ, ದುಡಿಯುವಾಗ, ಉಣ್ಣು-ತಿನ್ನುವಾಗ, ಸುಖೋಪಭೋಗಗಳನ್ನು ಅನುಭವಿಸುವಾಗ ದೇವ ನಾಮೋಚ್ಚಾರಣೆಯನ್ನು ಬಿಡಬಾರದು ಆಪತ್ತು-ಸಂಪತ್ತುಗಳು ಪ್ರಾಪ್ತವಾದಾಗ ಎಂಥ ದುರ್ಧರ ಕಾಲವೂ ಉಂಟಾದಾಗ ನಾಮಸ್ಮರಣೆಯಿಂದ ಅಂತರಿಸಕೂಡದು

ಮತ್ತು ಕೆಲವು ಪ್ರಸಂಗಗಳಲ್ಲಿ ಅಂದರೆ—

ವೈಭವ, ಬಲ, ಅಧಿಕಾರ, ಮೇಲ್ತರದ ಐಶ್ವರ್ಯ, ಉಂಟಾದ ಕಾಲದಲ್ಲಿ, ತನಗೆ ಸುಸ್ಥಿತಿಯು ಕಳೆದು ದುಸ್ಥಿತಿಯು ಪ್ರಾಪ್ತವಾದಲ್ಲಿ ಅಥವಾ ದುಸ್ಥಿತಿ ಕಳೆದು ಒಳ್ಳೆ ಸ್ಥಿತಿಯು ಉಂಟಾದಲ್ಲಿ, ನಾಮಸ್ಮರಣೆಯನ್ನೆಂದಿಗೂ ಬಿಡಕೂಡದು ದೇವನ ನಾಮಜಪದಿಂದ ಸಂಕಟ ನಾಶವು, ವಿಘ್ನನಿವಾರಣೆಯು ನಿಶ್ಚಿತವು ಹಾಗು ನಾಮ ಜಪದ ಮಹಿಮೆಯಿಂದ ಮಾನವನಿಗೆ ಉತ್ತಮ ಗತಿಯು ನಿಶ್ಚಿತವು ಭೂತ-ವೇತಾಳ ಪಿಶಾಚ ಬಾಧೆಗಳೂ ಬ್ರಹ್ಮರಾಕ್ಷಸ ಪೀಡೆಯೂ, ಬ್ರಾಹ್ಮಣನಿಂದೊದಗಿದ ಶಾಪವೂ ದುಷ್ಟ ಮಂತ್ರಗಳಿಂದೊದಗುವ ವಿಷಮ ಸ್ಥಿತಿಯೂ, ಖೇದವೂ ಇವೆಲ್ಲವು ನಿಷ್ಠೆಯಿಂದ ಮಾಡುವ ನಾಮಸ್ಮರಣೆಯಿಂದ ದೂರಾಗುವವು ಇದಲ್ಲದೆ ತನ್ನ ಮೇಲೆ ಅನ್ಯರಿಂದ ಪ್ರಯೋಗಿಸಲ್ಪಟ್ಟ ವಿಷ ಪ್ರಯೋಗವೂ ವಿಷಕಾರಕ ಜಂತುದಂಶನಗಳಿಂದಾಗುವ ವಿಷಬಾಧೆಯೂ, ಪ್ರಾಣಾಪಾಯಕ್ಕಾಗಿ ತನ್ನ ಮೇಲೆ ಪ್ರಯೋಗಿಸಿದ ಚಾಟಕ-ನಾಟಕ ಕೃತಿಗಳೂ ಇವೆಲ್ಲ ನಾಶವಾಗಿ ಕೊನೆಗೆ ಉತ್ತಮ ಗತಿಯು ಲಭಿಸುವದು

ಬಾಲ್ಯ ಪ್ರಾಯಗಳಲ್ಲಿ ವೃದ್ಧಾಪ್ಯದ ಕಠಿಣ ಕಾಲದಲ್ಲಿ ಅಂತ್ಯ ಕಾಲದಲ್ಲಿ ಒಟ್ಟಿನ ಮೇಲೆ ಪ್ರತಿಯೊಂದು ಕಾಲದಲ್ಲಿ ನಾಮಸ್ಮರಣ ಇರಲೇಬೇಕು.

ನಾಮಸ್ಮರಣೆಯ ಮಹತ್ವವು ಶ್ರೀ ಶಂಕರನಿಗೆ ತಿಳಿದಿತ್ತು ಆ ಕಾಶೀ ವಿಶ್ವೇಶ್ವರನು ಜನರಿಗೆ ನಾಮಜಪವನ್ನು ಉಪದೇಶ ಮಾಡಿರುವನು ಆತನ ಸ್ಥಾನವಾದ ಕಾಶೀ ಕ್ಷೇತ್ರವು ವಿಶ್ವೇಶ್ವರನು ಬೋಧಿಸಿದ ರಾಮನಾಮ ಮಹಿಮೆಯಿಂದ ಮುಕ್ತಿಕ್ಷೇತ್ರವಾಗಿ ಬಿಟ್ಟಿದೆ

ವಾಲ್ಮೀಕಿಯು ರಾಮನಾಮದ ಅಕ್ಷರಗಳನ್ನು ವಿಲೋಮವಾಗಿ ಉಚ್ಚರಿಸಿದರೂ ಕೂಡ ಅವನು ಆ ಕೂಡಲೇ ಉದ್ಧೃತನಾದನು. ಮುಂದೆ ಆತನಲ್ಲಿ ನಾಮ ಮಹಿಮೆಯಿಂದ ಭವಿಷ್ಯದಲ್ಲಿ ವರ್ತಿಸುವ ಶತಕೋಟಿ ರಾಮಾಯಣವನ್ನು ಬರೆಯುವ ಸಾಮರ್ಥ್ಯವುಂಟಾಗಿ ಅದರಂತೆ ಬರೆದು ಮಹರ್ಷಿಯೆನ್ನಿಸಿದನು

ವಾಲ್ಮೀಕಿಯಂತೆ ಹರಿನಾಮದಿಂದ ಪ್ರಲ್ಹಾದನು ಹಲವು ಜೀವ ಗಂಡಾಂತರಗಳನ್ನು ನೀಗಿ ನೃಸಿಂಹ ಕೃಪೆಗೆ ಪಾತ್ರನಾದನು, ಅಜಾಮಿಳ ನೆಂಬ ಭ್ರಷ್ಟ ಬ್ರಾಹ್ಮಣನು ಅಂತ್ಯ ಕಾಲದಲ್ಲಿ ದೇವಸ್ಮರಣೆಯನ್ನು ಬುದ್ಧಿಪೂರ್ವಕವಾಗಿ ಮಾಡದೆ ಇದ್ದರೂ "ನಾರಾಯಣ" ಎಂಬ ಹೆಸರಿನ ತನ್ನ ಮಗನನ್ನು 'ನಾರಾಯಣಾ' ಎಂದು ಕೂಗಿದನು ಇಷ್ಟೇ ಕೂಗು ನಾಮಸ್ಮರಣೆಯ ಮಹತ್ವವನ್ನು ಹೊಂದಿ ಆ ಪಾಪಿಯ ಉದ್ಧಾರಕ್ಕೆ ಕಾರಣವಾಯಿತು ನಾಮಸ್ಮರಣೆಯ ಮಹತಿಯನ್ನು ಮತ್ತೂ ಉದಹರಿಸುವ ದಾದರೆ —

ಶಿಲೆಯಾಗಿ ಬಿದ್ದ ಅಹಲ್ಯೆಯು ರಾಮನಾಮದಿಂದ ಉದ್ಧೃತಳಾ ದಳು ಅದೆಷ್ಟೋ ಭಕ್ತರು ರಾಮನಾಮ ಜಪಿಸಿ ಇಹಜನ್ಮದಿಂದ ಉದ್ಧಾರ ಹೊಂದಿದರು ಬಹು ಜನ ಪಾಪಿಗಳು ಪುನೀತರಾದರು ಭಗವಂತನ ಅನಂತ ನಾಮಗಳನ್ನು ದಿನಾಲು ನಿಯಮದಿಂದ ಸ್ಮರಿಸಹತ್ತಲು ಯಮಬಾಧೆ ಯಾಗದು ದೇವನಿಗಿರುವ ಸಾವಿರಾರು ನಾಮಗಳಲ್ಲಿ ಒಂದೇ ನಾಮ ವನ್ನು ಸ್ಮರಿಸಿದ ಮಾತ್ರಕ್ಕೂ ಆ ಮಾನವನ ಜನ್ಮ ಸಫಲವಾಗುವದು. ಇಷ್ಟೇ ಅಲ್ಲ ಸ್ಮರಣಕರ್ತ ಸ್ವತಃ ತಾನೂ ಪುಣ್ಯಶ್ಲೋಕಿಗಳಲ್ಲಿ ಒಬ್ಬನಾಗಿ ಜೀವಿಸುವನು ತಾನು ಏನೊಂದು ಕಷ್ಟ ಪಡದೆ ಕೇವಲ ಮುಖದಿಂದ

ರಾಮನಾಮ ಉಚ್ಚರಿಸಿದವನೂ ಜಪಿಸಿದವನೂ ಚಕ್ರಪಾಣಿ ವಿಷ್ಣುವಿನ ಸಂತುಷ್ಟತೆಗೆ ಈಡಾಗಿ ಸುಖಪಡುವರು ಯಾಕಂದರೆ ಆ ಹರಿಯು ಸದಾವ ಕಾಲವೂ ಭಕ್ತರನ್ನು ರಕ್ಷಿಸುವ ದಕ್ಷನು

ನಾಮಸ್ಮರಣೆಯನ್ನು ನಿರಂತರವಾಗಿ ಆಚರಿಸುವ ಮಾನವನ ಶರೀರವು ಪುಣ್ಯಶರೀರವೆನ್ನಿಸುವದು ಅಂಥವನ ಪಾಪ ಸಂಗ್ರಹವು ಪರ್ವತ ದೋಷಾದಿಯಾಗಿದ್ದರೂ ಅವೆಲ್ಲ ಪಾಪಗಳು ರಾಮನಾಮ ಮಹಿಮೆಯಿಂದ ಭಸ್ಮವಾಗಿ ಹೋಗುವವು

ನಾಮ ಮಹಿಮೆಯು ಹೇಳಲಸಾಧ್ಯವೂ ಅಗಾಧವಾದುದೂ ಆಗಿರುವದು ಕೇವಲ ನಾಮದಿಂದ ಬಹು ಜನ ಉದ್ಧರಿತರಾದರು ಸಾಕ್ಷಾತ್ ಚಂದ್ರಶೇಖರನುತನ್ನ ಮನಸಿಗಾದ ದುಗುಡವನ್ನು ನಾಮ ಬಲದಿಂದಲೇ ನೀಗಿದನು ಈ ನಾಮಸ್ಮರಣೆಯ ಬಗೆಗೆ ಕೊನೆಯಲ್ಲಿ ಹೇಳುವದೇನಂದರೆ—

ಹರಿ ನಾಮೋಚ್ಚಾರಣೆಯ ಅಧಿಕಾರವು ನಾಲ್ಕೂ ವರ್ಣದ ಮಾನವರಿಗಿರುವದು ನಾಮ ಸ್ಮರಿಸುವಲ್ಲಿ ಸಣ್ಣವರು, ದೊಡ್ಡವರು, ಗಂಡಸರು ಹೆಂಗಸರು, ಉಚ್ಚರು, ನೀಚರು ಮುಂತಾಗಿ ಇದಾವ ಭಿನ್ನತೆಗಳಿರುವದಿಲ್ಲ ಮಂದಮತಿಗಳೂ ಕೂಡ ನಾಮ ಮಹಿಮೆಯಿಂದ ಭವಸಾಗರ ದಾಟುವವರು

ಅಂತೆಯೇ ಅಖಂಡ ನಾಮ ಸ್ಮರಿಸಬೇಕು ಹೃದಯದಲ್ಲಿ ದೇವನ ಸ್ವರೂಪವನ್ನು ಸ್ಥಾಪಿಸಿಕೊಳ್ಳಬೇಕು ಇಂತು ಮೂರನೆಯ ಭಕ್ತಿಯಾದ ವಿಷ್ಣೋಃ ಸ್ಮರಣೆಯನ್ನು ನಿವೇದಿಸಿದೆವು

ಶ್ರೀ ರಾಮ || ೪ ಪಾದಸೇವನ ಭಕ್ತಿ || ಈ ಮೊದಲು ನಾಮ ಸ್ಮರಣೆಯ ಲಕ್ಷಣಗಳನ್ನು ಹೇಳುವದಾಯಿತು ಇದೀಗ ನವಭಕ್ತಿಯಲ್ಲಿ ನಾಲ್ಕನೆಯದರ 'ಪಾದಸೇವನ' ಭಕ್ತಿಯನ್ನು ಹೇಳುವೆವು ಪಾದಸೇವನೆಯೆಂದರೆ ತ್ರಿಕರಣಪೂರ್ವಕವಾಗಿ ಸದ್ಗುರುವಿನ ಪಾದವನ್ನು ಸೇವಿಸುವದು ಈ ಭಕ್ತಿಯೇ ಸದ್ಗತಿಗೆ ಕಾರಣವು ಸದ್ಗುರು ಪಾದದಲ್ಲಿ ಅನನ್ಯ ಭಕ್ತಿಯನ್ನಿರಿಸುವದರಿಂದ ಜನನ–ಮರಣಗಳ ಪುನರಾವೃತ್ತಿಯು ತಪ್ಪಿ ಹೋಗುಹೋಗುವದು ಭವಸಾಗರದಿಂದ ಪಾರಾಗಬಯಸುವವರು ಸದ್ಗುರುವಿನ ಕೃಪೆಯನ್ನು ಪಡೆಯಬೇಕಾಗುವದು ಅದಕ್ಕಾಗಿಯೇ ಸದ್ಗುರುವಿನ

ಪಾದವನ್ನು ಸೇವಿಸಬೇಕು ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ ಸದ್ಗುರುವು ನಿಜ ವಸ್ತುವನ್ನು ತೋರಿಸುವನು ಆ ಗುರುವಿನಲ್ಲಿ ಸಾರಾಸಾರ ವಿಚಾರವೂ, ಪರಬ್ರಹ್ಮನ ನಿಶ್ಚಿತವೂ ಆಶ್ರಯಗೊಂಡಿರುವವು ನಮಗೆ ಕಣ್ಣಿಗೆ ಕಾಣದ ವಸ್ತುವು ಮನಸಿಗೂ ಅದರ ಸ್ವರೂಪ ತಿಳಿಯುವದಿಲ್ಲ. ಹಾಗು ಆ ವಸ್ತುವಿನ ಅನುಭವವು ಸಂಗರಹಿತವಾಗದೆ ಬರುವದಿಲ್ಲ ಅನುಭವ ಪಡೆಯುವಲ್ಲಿ ಸಂಗತ್ಯಾಗವಿರುವದಿಲ್ಲ, ಸಂಗ ತ್ಯಾಗ ಮಾಡಿದರೆ ಅನುಭವವು ಸಂಗರಹಿತವಾಗದೆ ಬರುವದಿಲ್ಲ ಸಂಗ ತ್ಯಾಗ ಮಾಡಿದರೆ ಅನುಭವವು ಕಂಡು ಬರುವದಿಲ್ಲ ಇದು ಅನುಭವಿಗೇ ತೋರುವದೇ ಹೊರತು ಉಳಿದವರಿಗೆ ಇಲ್ಲ,

ಸಂಗತ್ಯಾಗ, ನಿವೇದನೆ, ವಿದೇಹ ಸ್ಥಿತಿಯು, ನಿರ್ಲಿಪ್ತತೆ, ಸಹಜಸ್ಥಿತಿ ಉನ್ಮನೀ ಹಾಗು ವಿಜ್ಞಾನ ಈ ಏಳೂ ಒಂದೇ ರೂಪ ಸ್ಥಿತಿಯಾದವು ಇವೆಲ್ಲವು ಸಮಾಧಾನವನ್ನು ಅಂದರೆ ಸಮಾಧಿ ಸುಖ ಇಲ್ಲವೆ ಸ್ವರೂಪ ಸ್ಥಿತಿಯನ್ನು ತೋರಿಸುವ ಸಂಕೇತ ಚಿಹ್ನಗಳು ಸಮಾಧಾನವೊಂದಕ್ಕೇ ಈ ಏಳು ಹೆಸರುಗಳು ಇಷ್ಟೇ ಅಲ್ಲದೆ ವೇದ, ವೇದಗರ್ಭ, ವೇದಾಂತ, ಸಿದ್ಧಭಾವ, ರಹಸ್ಯ, ಅನುಭವದ, ಅನಿರ್ವಚನೀಯುತೆ, ಪ್ರತ್ಯಕ್ಷಾನುಭವ ಇವೆಲ್ಲ ಹೆಸರುಗಳು ಸದ್ವಸ್ತುವನ್ನು ಗುರುತಿಸುವವು ಬಹುತರವಾಗಿ ಅನುಭವದ ಈ ಅಂಗಗಳೆಲ್ಲ ಚತುರ್ಭಕ್ತಿಯಾದ ಪಾದಸೇವನೆಯಲ್ಲಿ ತಲೆದೋರುವದು ಈ ಮಾರ್ಗವು ಗೌಪ್ಯವಾಗಿದ್ದರೂ ಸಂತಸಂಗದಿಂದ ಪಾದಸೇವನೆ ಭಕ್ತಿಯಲ್ಲಿ ಪ್ರಕಟವಾಗುವದು ಈ ಮಾರ್ಗವು ಪ್ರತ್ಯಕ್ಷವಿದ್ದರೂ ತೋರದು, ಅಪ್ರತ್ಯಕ್ಷವಿದ್ದರೂ ತೋರದು, ಇದ್ದಂತೆ ಭಾಸವಾಗುವದು ಇಂತು ಭಾಸಾ-ಭಾಸಗಳೆರಡರಿಂದಲೂ ಹೊರತಾದದ್ದು ಅಂತೆಯೇ ಇದು ಗುರುಗಮ್ಯ ಮಾರ್ಗವು ಈ ಮಾರ್ಗವು ಒಳ ನೋಟದಿಂದ ತೋರುವಂಥದು ಈ ಮಾರ್ಗದಿಂದ ನಿರೀಕ್ಷಿಸಲು ಶಾಸ್ತ್ರಗಳು, ಸಾಧನಗಳು ಪೂರ್ವ ಪಕ್ಷೀಯುಗಳಾಗುವವು ಸಾಕ್ಷಿಯಾಗಿ ಅವನ್ನು ನಿರೀಕ್ಷಿಸಲು ಅಲಕ್ಷವಾಗುವದು ಲಕ್ಷ, ಧ್ಯಾನ, ಅನುಭವಗಳಿಂದ ಮಾತ್ರ ತಿಳಿಯಬಹುದು ಅನುಭವದಿಂದ ಸಾರಾಸಾರ ವಿಚಾರಗಳೂ. ಸತ್ಸಂಗದಿಂದ ನಿಜವಾದ ಉತ್ತರಗಳೂ ಅನುಭವಕ್ಕೆ ಬರುವವು ಬ್ರಹ್ಮನು ಸತ್ಯನು ಮಾಯೆಯು ಅಸತ್ಯವು ಆ

ಸದ್ವಸ್ತುವಿನ ದರ್ಶನವಾದರೆ ಅಸತ್ಯ ಮಾಯೆಯು ಕಾಣುವದಿಲ್ಲ ಹಾಗು ಅಸತ್ಯವಾದ ಮಾಯೆಯನ್ನು ಕಂಡವನಿಗೆ ಬ್ರಹ್ಮನ ಪ್ರಾಪ್ತಿಯಿಲ್ಲ ಈ ಸತ್ಯಾಸತ್ಯತೆಗಳನ್ನು ಕಾಣುವದು ನೋಡುವವನ ಕೃತಿಯು ಅಂದರೆ ಅವುಗಳಲ್ಲಿ ಯಾವದನ್ನು ಅದರ ಸ್ವರೂಪವನ್ನೇ ಹೊಂದಿ ಇನ್ನೊಂದನ್ನು ಮರೆಯುವನು ಆ ತಾದ್ರೂಪ್ಯದಲ್ಲಿಯೇ ಸಮಾಧಾನ ಹೊಂದುವನು ಸದ್ವಸ್ತುವಿನ ಪ್ರಾಪ್ತಿಗಾಗಿ ಹಲವು ಸಾಧನಗಳಿದ್ದರೂ ಅವುಗಳಲ್ಲಿ ಸದ್ಗುರುವಿನಂತಹ ಸನ್ಮಾರ್ಗವಿನ್ನೊಂದಿಲ್ಲ ಆ ಸದ್ಗುರುವನ್ನು ದೊರಕಿಸುವದಕ್ಕೆ ಬೇರೆ ಕೃತಿಗಳು ಬೇಕಾಗಿಲ್ಲ, ಕಷ್ಟಸಾಧ್ಯಸಾಧನಗಳನ್ನು ಉಪಯೋಗಿಸ ಬೇಕಾಗಿಲ್ಲ ಇನ್ನು ಹಲವು ಆವಶ್ಯಕ ವಿದ್ಯಾಭ್ಯಾಸಗಳ ಆವಶ್ಯಕತೆಯಿಲ್ಲ ಅಂದ ಮೇಲೆ ಸಾಧನ ಹಾಗು ಅಭ್ಯಾಸಗಳಿಂದ ದೊರಕಲು ಅಸಾಧ್ಯವಾದದ್ದು ಸದ್ಗುರು ಸಮಾಗಮವಿಲ್ಲದೆ ಪ್ರಾಪ್ತವಾಗುವದೇ ? ಸಾಧ್ಯವಿಲ್ಲ ಆದ್ದರಿಂದಲೇ ಜ್ಞಾನಮಾರ್ಗವನ್ನು ಅರಿತುಕೊಳ್ಳುವದಕ್ಕಾಗಿ ಸತ್ಸಂಗವನ್ನು ಹಿಡಿಯಬೇಕು ಆ ಸತ್ಸಂಗವಿಲ್ಲದೆ ಏನೊಂದೂ ಸಾಧ್ಯವಿಲ್ಲ, ಕಾರಣ ಸದ್ಗುರುವಿನ ಪಾದಸೇವಕನಾಗಬೇಕು ಆ ಸೇವಕನಲ್ಲಿಯ ಭಕ್ತಿಯೇ 'ಪಾದಸೇವನ' ಭಕ್ತಿಯೆನ್ನಿಸುವದು ಇದೇ ನವಭಕ್ತಿಗಳಲ್ಲಿ ೪ ನೆಯದು ಈ ಭಕ್ತಿಯು ಎಲ್ಲ ಲೋಕಗಳಲ್ಲಿ ಪವಿತ್ರವೆನ್ನಿಸಿದೆ ಮೋಕ್ಷಸಾಧಕರು ಈ ಪಾದಸೇವನ ಭಕ್ತಿಯ ಸಾಧನದಿಂದ ಸಾಯುಜ್ಯಪದ ಪಡೆಯುವರು ಅಂತೆಯೇ ಅದೆಷ್ಟೋ ಜನರು ಈ ಪಾದಸೇವನ ಭಕ್ತಿಯನ್ನು ಅತಿ ಮಹತ್ವದ್ದೆಂದು ತಿಳಿದು ಅದನ್ನು ಆಚರಿಸಿ ಭವಸಾಗರದಿಂದ ಪಾರಾಗಿರುವರು

ಶ್ರೀ ರಾಮ || ೫ ಅರ್ಚನ ಭಕ್ತಿ ।। ಈ ಮೊದಲು ನವವಿಧ ಭಕ್ತಿಗಳಲ್ಲಿ ಮೊದಲಿನ ನಾಲ್ಕು ಭಕ್ತಿಯ ಪ್ರಕಾರಗಳನ್ನು ವಿವರಿಸಿದ್ದಾಯಿತು, ಇನ್ನು ಐದನೆಯ ಭಕ್ತಿಯಾದ ಅರ್ಚನ ಅಂದರೆ ಪೂಜೆ ಇದರ ಬಗೆಗೆ ಚಿತ್ತಗೊಟ್ಟು ಶ್ರವಣ ಮಾಡತಕ್ಕದ್ದು

ಈ ಅರ್ಚನ ಅಂದರೆ ಮುಖ್ಯವಾಗಿ ದೇವತಾರ್ಚನವನ್ನು ಶಾಸ್ತ್ರದಲ್ಲಿ ಹೇಳಿದ ಪೂಜೆಯ ವಿಧಿಕ್ರಮಗಳೊಂದಿಗೆ ಮಾಡತಕ್ಕದ್ದು ಪೂಜೆಯ ಕ್ರಿಯೆಗಾಗಿ ಹಲವು ಆಸನಗಳು, ಉಪಕರಣಗಳು, ವಸ್ತ್ರಾಲಂಕಾರಗಳು ಇವೆಲ್ಲವು ಅವಶ್ಯ ಇವುಗಳನ್ನು ಉಪಯೋಗಿಸಿ ಪೂಜಿಸುವದು, ಮನಸ್ಸಿ

ನಲ್ಲಿಯೇ ಪೂಜಿಸುವದು, ಹಾಗು ಮೂರ್ತಿಯ ಆಕೃತಿಯನ್ನು ಹೃದಯ ದಲ್ಲಿ ತಂದುಕೊಂಡು ಅರ್ಚಿಸುವದು ಇವೆಲ್ಲವು ಐದನೆಯ ಭಕ್ತಿಯ ಪ್ರಕಾರಗಳು ಇನ್ನು ಪೂಜಾರ್ಹರು ದೇವರು, ಬ್ರಾಹ್ಮಣರು, ಅಗ್ನಿ, ಸಾಧುಸಂತರು, ಅತಿಥಿಗಳು, ಯತಿಗಳು, ಮಹಾನುಭಾವರು, ಗಾಯಿತ್ರಿಯು ಇವೆಲ್ಲವನ್ನು ಅರ್ಚಿಸಬೇಕು ಮತ್ತು ಲೋಹ-ಶಿಲೆ-ಮಣ್ಣಿನ ವಿಗ್ರಹ-ಮೂರ್ತಿಗಳು, ಯಾವದೊಂದು ವಸ್ತುವಿನ ಮೇಲೆ ಲೇಖಿಸಿದ ಚಿತ್ರಗಳು, ಯೋಗ್ಯತೆವಂತರು, ಮನೆಯಲ್ಲಿರುವ ದೇವ-ಮೂರ್ತಿಗಳು ಬೇರೆ ಬೇರೆ ಆಕೃತಿ ಸ್ವರೂಪದ ಶಾಲಿಗ್ರಾಮ ಶಿಲೆಗಳು, ಅದರಲ್ಲಿಯೂ ಮಹತ್ವವಾದ ಚಕ್ರಾಂಕಿತ ಸುದರ್ಶನವು, ಲಿಂಗಗಳು, ಸೂರ್ಯಕಾಂತ, ಚಂದ್ರಕಾಂತ, ಮಣಿಗಳು, ನರ್ಮದೆಯಲ್ಲಿ ದೊರೆಯುವ ಈಶ್ವರನಬಾಣಶಿಲೆಗಳು, ಭೈರವ ಭಗವತಿ, ಮಲ್ಹಾರಿ ಮೂರ್ತಿಗಳು, ಹನುಮಂತಾದಿ ವಟುಗಳು, ನೃಸಿಂಹ ಮೂರ್ತಿಯು, ಬನಶಂಕರಿ ಮುಂತಾದ ದೇವಿಯರು, ಸರ್ವನಾಗಗಳು, ಹಲ ಬಗೆಯ ನಾಣ್ಯಗಳು, ಬೇರೆ ಬೇರೆ ಪಂಚಾಯತನಗಳು, ಅಲ್ಲದೆ--

ಗಣಪತಿ,ಸರಸ್ವತಿ, ವಿಠ್ಠಲ, ರಂಗನಾಥ, ಜಗನ್ನಾಥ, ಶಿವನ ತಾಂಡವ ಮೂರ್ತಿ, ಶ್ರೀರಂಗ, ಮಾರುತಿ, ಗರುಡ ಈ ಎಲ್ಲ ದೇವತೆಗಳ ಮೂರ್ತಿಗಳಲ್ಲದೆ ಭಗವಂತನು ಹತ್ತು ಅವತಾರಗಳನ್ನು ತಾಳಿದ ಮತ್ಸ್ಯಾದಿಯಾದ ಹತ್ತು ಮೂರ್ತಿಗಳು, ಕೇಶವಾದಿ ಇಪ್ಪತ್ನಾಲ್ಕು ಪವಿತ್ರ ನಾಮಗಳ ಹರಿ-ಮೂರ್ತಿಗಳು, ಅನಂತ, ಭಗವಂತ, ಜಗದಾತ್ಮ, ಜಗದೀಶರು, ಶಿವ ಶಕ್ತಿ, ಹರಿಹರರ ಹಲವು ಮೂರ್ತಿಗಳು ಇವೆಲ್ಲವನ್ನು ದೇವತಾರ್ಚನೆಯಲ್ಲಿ ಪೂಜಿಸತಕ್ಕದ್ದು ಇನ್ನು ಪತ್ತಿ ಅಶ್ವತ್ಥನಾರಾಯಣ, ಆದಿನಾರಾಯಣ ಪರಮಾತ್ಮನಾದ ಶೇಷಶಾಯಿ ಇದರಂತೆಯೇ ಪರಮೇಶ್ವರನ ಹಲವು ಮೂರ್ತಿಗಳು ಇವೆಲ್ಲವುಗಳನ್ನು ಅರ್ಚಿಸುವದು ಈ ಐದನೆಯ ಭಕ್ತಿಯೆನ್ನಿಸುವದು ಈ ಮೂರ್ತಿ ಪೂಜೆಗಳಲ್ಲದೆ—

ವಂಶ ಪರಂಪರೆಯಾಗಿ ನಾಗುತ್ತ ಬಂದಿರುವ ಕುಲಧರ್ಮ ಬಿಡದೆ ಪೂಜೆ ಪುನಸ್ಕಾರಗಳನ್ನು ಶಕ್ತಿಗನುಸಾರವಾಗಿ ಮಾಡುತ್ತ ಹೋಗುವದು ಅರ್ಚನಭಕ್ತಿಯು ಅದಲ್ಲದೆ ರೂಢಿ ಸಮಾಜಗಳಿಗನುಸರಿಸಿ ಶಾಕಿನಿ,ಡಾಕಿನಿ ಜೋಗಿಣೀ ಮುಂತಾದ ಶಕ್ತಿ ಸ್ವರೂಪವನ್ನು ಪೂಜೆ ಮಾಡಬೇಕು, ಹಲವು

ತೀರ್ಥ ಕ್ಷೇತ್ರಗಳನ್ನು ಕಂಡು ಅಲ್ಲಲ್ಲಿಯ ದೇವತೆಗಳನ್ನು ಪೂಜಿಸುವದು, ಪರಮೇಶ್ವರನನ್ನು ಹಲವು ಉಪಚಾರಗಳಿಂದ ಅರ್ಚಿಸುವದು, ಪಂಚಾಮೃತಾಭಿಷೇಕ, ಗಂಧಾಕ್ಷತೆ, ಪುಷ್ಪ, ಸುಗಂಧಯುಕ್ತ ಪದಾರ್ಥ ಧೂಪ-ದೀಪಗಳು, ನೀರಾಜನ ಕರ್ಪೂರದ ಆರತಿಗಳು, ಹಲವುಬಗೆಯ ಖಾದ್ಯ, ನೈವೇದ್ಯ ಉತ್ತಮ ಫಲಗಳು, ತಾಂಬೂಲು, ದಕ್ಷಿಣೆ, ಹಲವು ಅಲಂಕಾರ, ದಿವ್ಯ ವಸ್ತ್ರ, ಹಾಗು ವನಮಾಲೆಗಳು, ಪಲ್ಲಕ್ಕಿ, ಛತ್ರ, ಸುಖಾಸನ, ಆಪತಾಗಿರಿ ಮುಂತಾದವು, ದಿಂಡೀ-ಪತಾಕೆ-ನಿಶಾನೆಗಳು, ತಾಳ-ಗೆಜ್ಜೆ ಮೃದಂಗಗಳು, ಇಂತು ಹಲವು ವಾದ್ಯಗಳು, ಹಲವು ಉತ್ಸವಗಳು ಕೂಡಿದ ಭಕ್ತರುಗಳು ಈ ಎಲ್ಲ ಸಡಗರುಗಳಿಂದ ಯುಕ್ತನಾಗಿ ದೇವನಲ್ಲಿ ಭಕ್ತಿಯನ್ನಿಟ್ಟು ಹಾಡುವ ಹರಿದಾಸರಲ್ಲಿಯ ಭಕ್ತಿಯು ಈ ಐದನೆಯ ಭಕ್ತಿಯಾಗಿದೆ

ಬಾವಿ-ಕೆರೆ ಜಲಾಶಯುಗಳನ್ನೂ, ದೇವಾಲಯ-ಶಿಖರಗಳನ್ನೂ, ದೇವ ದ್ವಾರದೆದುರಿನಲ್ಲಿ ಪ್ರಶಸ್ತ ಹಾಗು ಮನಹರ ರಾಜಾಂಗಣದಲ್ಲಿ ವೃಂದಾವನ, ಭೂಗರ್ಭಾಲಯಗಳನ್ನೂ ಮಠ-ಮಂದಿರ-ಧರ್ಮಶಾಲೆಯನ್ನೂ, ದೇವ ದ್ವಾರದಲ್ಲಿ ಪಡಸಾಲೆಯನ್ನೂ ಕಟ್ಟಿಸ ವದು ಈ ಐದನೆಯ ಭಕ್ತಿಯನ್ನು ವ್ಯಕ್ತಪಡಿಸುವದು ಇದರ ಹೊರತು ದೇವರಿಗಾಗಿ ಹಲವು ಉಪಕರಣೆಗಳು ಮುತ್ತಿನ ನಕ್ಷತ್ರ ಮಾಲೆಗಳು, ಹಲವು ವಸ್ತ್ರಾಲಂಕಾರಗಳು, ದೇವಾಲಯದ ಶೋಭೆಯನ್ನು ಹೆಚ್ಚಿಸುವದಕ್ಕಾಗಿ ಪರದೆಗಳು, ಮಂಟಪವು, ಚಂದ್ರ-ಮಹಲು, ಇವೆಲ್ಲವನ್ನು ಹಲವು ರತ್ನಗಳಿಂದ ರಂಜಿತವಾಗುವಂತೆ ಮಾಡಬೇಕು ಆನೆ, ಕುದುರೆ, ಮತ್ತು ಗಾಲಿಗಳುಳ್ಳ ವಾಹನಗಳನ್ನು ದೇವಾಲಲಯಕ್ಕೆ ಸಮರ್ಪಿಸಬೇಕು ಅಲಂಕಾರ, ದ್ರವ್ಯ, ಅನ್ನ ಮತ್ತು ನೀರು ಇವುಗಳನ್ನು ಅವುಗಳನ್ನಿಟ್ಟ ಪಾತ್ರೆ ಸಹಿತವಾಗಿ ಅರ್ಪಿಸಬೇಕು ವನೋಪವನಗಳು, ಹೂದೋಟಗಳು, ತಪಸ್ವಿಗಳ ಪರ್ಣಕುಟಿಗಳು, ಜಗನ್ನಾಥನ ಪೂಜೆಯಲ್ಲಿ ಇವನ್ನು ನೀಡತಕ್ಕದ್ದು ಗಿಳಿ, ಹಂಸಗಳು ನವಿಲು, ನಿರ್ಪಕ್ಕಿಗಳು, ಚಕ್ರವಾಕ-ಚಕೋರಗಳು, ಕೋಗಿಲೆಗಳು, ಸಾರಂಗ ಹುಲಿಗಳು ಪುನುಗು-ಕಸ್ತೂರೀ ಮೃಗಗಳು, ' ಬೆಕ್ಕು, ಆಕಳು, ಎಮ್ಮೆ, ಎತ್ತು, ಮಂಗ ಹಾಗು ಹಲವು ಪದಾರ್ಥಗಳು ಇವನ್ನು ದೇವಾಲಯಕ್ಕೆ ನೀಡಿ ಬಿಡಬೇಕು

ತ್ರಿಕರಣಪೂರ್ವಕವಾಗಿ ಭಗವಂತನಲ್ಲಿ ಚಿತ್ತವನ್ನಿರಿಸಿ ಪೂಜಿಸುವದು ಅರ್ಚನ ಭಕ್ತಿಯು ಈ ಪ್ರಕಾರವಾಗಿ ಸದ್ಗುರು ಭಜನವನ್ನು ಅನನ್ಯ ಭಾವದಿಂದ ಮಾಡಬೇಕು ಇದೇ ಐದನೆಯ ಭಕ್ತಿಯೆನ್ನಿಸಿದ ಭಗವದ್ಭ-ಜನವು.

ಒಂದು ವೇಳೆ ಪ್ರತ್ಯಕ್ಷ ಪೂಜೆಯು ಅಸಾಧ್ಯವಾಗಿದ್ದರೆ ಮನಸಿನಲ್ಲಿ ಸದ್ಭಾವವನ್ನು ತುಂಬಿಕೊಂಡು ಪೂಜಯ ಕಲ್ಪನೆ ತಂದುಕೊಳ್ಳಬೇಕು ಇದಕ್ಕೆ ಮಾನಸಪೂಜಯೆನ್ನುವರು ಪ್ರತ್ಯಕ್ಷ ಪೂಜೆಯಂತೆ ಮಾನಸ ಪೂಜೆ ಯಲ್ಲಿಯೂ ಎಲ್ಲವನ್ನು ಕಲ್ಪಿಸಿ ಭಗವಂತನನ್ನು ಅರ್ಚಿಸಬೇಕು ತಮಗೆ ಇಷ್ಟವೂ ಇಚ್ಛಿತವೂ ಆದವುಗಳನ್ನೆಲ್ಲ ಮನಸಿನಿಂದಲೇ ಊಹಿಸಿಕೊಂಡು ಅರ್ಚನೆಯನ್ನು ಮುಗಿಸಬೇಕು, ಇಂತು ಮಾಡುವದರಿಂದ ಮಾನಸಪೂಜೆ ಯಾದಂತಾಗುವದು

ಶ್ರೀ ರಾಮ || ೬ ವಂದನ ಭಕ್ತಿ || ಈ ವೊದಲು ಐದನೆಯ ಭಕ್ತಿ ಯನ್ನು ಕುರಿತು ವಿವರಿಸಿತು ಈಗ ಆರನೆಯ ಭಕ್ತಿಯ ವಿಷಯಕ್ಕೆ ಚಿತ್ತಗೊಟ್ಟು ಕೇಳಬೇಕು 'ವಂದನ' [ನಮಸ್ಕಾರ]ವು ನವವಿಧ ಭಕ್ತಿಗ ಳಲ್ಲಿ ಆರನೆಯದಾಗಿದೆ ದೇವರಿಗೂ, ಸಾಧು–ಸಂತ ಸಜ್ಜನರಿಗೂ ನಮ ಸ್ಕರಿಸುತ್ತಿರಬೇಕು ಸೂರ್ಯನಮಸ್ಕಾರವನ್ನು ಹಾಕಬೇಕು ಕುಲದೇವತೆಗೆ ನಮಸ್ಕರಿಸಬೇಕು ಸದ್ಗುರುವಿಗೆ ಸಾಷ್ಟಾಂಗ ಪ್ರಣಿಪಾತ ಮಾಡಬೇಕು

ಇನ್ನು ಸಾಷ್ಟಾಂಗ ನಮಸ್ಕಾರ ಮಾಡಿಕೊಳ್ಳಲು ಯೋಗ್ಯರಾರೆಂದರೆ-

ದೇವನ ಹಲವು ಮೂರ್ತಿಗಳು, ದೇವಸು, ಗುರುಗಳು, ಇವರಿಗೆ ಇನ್ನೊಂದು ವಿಚಾರವಿಲ್ಲದೆ ನಮಸ್ಕಾರಕ್ಕೆ ಅಧಿಕಾರಿಗಳೆಂದು ತಿಳಿದು ಸಾಷ್ಟಾಂಗ ನಮಸ್ಕಾರ ಮಾಡತಕ್ಕದ್ದು

ಐವತ್ತಾರು ಕೋಟಿ ಯೋಜನ ವಿಸ್ತೀರ್ಣ ಪೃಥ್ವಿಯಲ್ಲಿ ಮಧ್ಯ ಪ್ರದೇಶದಲ್ಲಿ ವಿಷ್ಣುವು ಇರುವನು ಅವನಿಗೆ ಪ್ರೀತಿಯಿಂದ ಸಾಷ್ಟಾಂಗ ನಮಸ್ಕರಿಸಬೇಕು ಪಶುಪತಿಯಾದ ಶಿವನು, ಶ್ರೀಪತಿಯು, ಸೂರ್ಯನು ಇವರನ್ನು ವಂದಿಸಬೇಕು ಇವರ ದರ್ಶನದಿಂದ ಪಾಪಗಳು ಲೋಪವಾ ಗುವವು ಅದರಂತೆ ಶ್ರೀ ಮಾರುತಿಯನ್ನು ನಿತ್ಯವೂ ನಿಯಮಪೂರ್ವಕ ವಂದಿಸಬೇಕು ಈ ಬಗೆಗಿರುವ ಶ್ಲೋಕಾರ್ಥವು, "ಶಂಕರನು,

ಶೇಷಶಾಯಿ ಶ್ರೀಮನ್ನಾರಾಯಣನು, ಸೂರ್ಯನು ಇವರಂತೆ ಮಾರುತಿಯು ಇವರೆಲ್ಲರ ದರ್ಶನವು ಪುಣ್ಯಕರವು ಅದರಲ್ಲಿಯೂ ನಿತ್ಯನೇಮದಿಂದ ವಂದಿಸಲು ಹೆಚ್ಚಿನ ಫಲವು," ಹೀಗಿರುವದು

ಭಕ್ತರು, ಜ್ಞಾನಿಗಳು, ವೈರಾಗಿಗಳು, ಮಹಾನುಭಾವರು, ತಪಸ್ವಿಗಳು, ಯೋಗಿಗಳು, ಯೋಗ್ಯತೆಯುವರು ಇವರನ್ನು ಕಂಡು ತಡಮಾಡದೆ ನಮಸ್ಕರಿಸಬೇಕು ವೇದಗಳನ್ನರಿತವರು ಶಾಸ್ತ್ರಿಗಳು, ಎಲ್ಲಬಲ್ಲವರು, ಪಂಡಿತರು, ಪುರಾಣಿಕರು, ವಿದ್ವಾಂಸರು, ಅಧ್ವರ್ಯುಗಳು, ವೈದಿಕರು, ಶುದ್ಧಾಚರಣೆಯುಳ್ಳವರು ಇವರೆಲ್ಲರಿಗೆ ನಮಸ್ಕಾರ ಮಾಡಬೇಕು

ಶ್ರೀ ಸದ್ಗುರುವಿನಲ್ಲಿ ಉಳಿದವರಿಗಿಂತ ವಿಶಿಷ್ಟ ಮಹತ್ವವಿರುವದರಿಂದ ಆ ಗುರುವಿಗೆ ಆದರಪೂರ್ವಕ ನಮಸ್ಕರಿಸಬೇಕು

ಗಣಪತಿ, ಸರಸ್ವತಿ, ಶಕ್ತಿ ವಿಶಿಷ್ಟ ದೇವತೆಗಳು, ಹರಿಯ ಮತ್ತು ಹರನ ಅವತಾರ ಮೂರ್ತಿಗಳು ಇವರಲ್ಲದೆ ಇನ್ನೂ ಹಲವು ದೇವತೆಗಳು ಇವರನ್ನು ಕುರಿತು ಬೇರೆ ಬೇರೆ ವಂದನೆಗಳನ್ನು ಸಲ್ಲಿಸಬೇಕು ಇನ್ನು ಎಲ್ಲ ದೇವತೆಗಳಿಗೆ ಶುದ್ಧ ಭಾವನೆಯಿಂದ ನಮಸ್ಕಾರ ಮಾಡಲು ಆ ನಮಸ್ಕಾರಗಳೆಲ್ಲವೂ ಒಬ್ಬ ಭಗವಂತನಿಗೆ ಮುಟ್ಟುವವು ಇದನ್ನು ವ್ಯಕ್ತಪಡಿಸುವ ಒಂದು ವಚನವಿದೆ ಅದರ ಅರ್ಥವು—

ಆಕಾಶದಿಂದ ಭೂಮಿ ಮೇಲೆ ಉದುರಿದ ನೀರೆಲ್ಲವೂ ಏನೊಂದು ಬಗೆಯಿಂದ ನೆಲದ ಮೇಲೆ ನಿಲ್ಲದೆ ಸಮುದ್ರಕ್ಕೆ ಹೋಗಿ ಬೆರೆತುಕೊಳ್ಳುವದು ಈ ದೃಷ್ಟಾಂತದಂತೆಯೇ ಎಲ್ಲ ದೇವತೆಗಳಿಗೆ ಮಾಡಿದ ನಮಸ್ಕಾರಗಳೆಲ್ಲವೂ ದೇವಾಧಿದೇವ ಭಗವಂತನಿಗೇ ಹೋಗಿ ತಲುಪುವವು ಇಂತಿರುವದು ಆದುದರಿಂದ ಸರ್ವ ದೇವರಿಂದ ಅಧಿಷ್ಠಿತ ಮೂರ್ತಿಯನ್ನು ಕುರಿತು ಅರ್ಥಾತ್ ಸದ್ಗುರುವಿನ ಪಾದವನ್ನು ನಮಸ್ಕರಿಸಿದಲ್ಲಿ ದೇವ-ಗುರುಗಳಿಗೀರ್ವರಿಗೂ ನಮಸ್ಕಾರ ಮಾಡಿದ ಪುಣ್ಯ ಲಭಿಸುವದು

ನಮಸ್ಕಾರ ಮಾಡುವದರಿಂದ ಮಾಡುವವನಲ್ಲಿ ನಮ್ರತೆಯುಂಟಾಗುವದು ಮನಸ್ಸಿನ ವಿಕಲ್ಪನೆಗಳು ನಾಶವಾಗುವವು, ನಮಸ್ಕಾರದಿಂದ ಪ್ರೇಮವೂ ಸ್ನೇಹವೂ ಲಭಿಸುವವು ಹಲವು ದೋಷ-ಪಾಪಗಳು ಗತಿ

ಸುವವು ನಮಸ್ಕಾರ ಕರ್ತೃವಿಗಾದ ಅನ್ಯಾಯಗಳು ಕ್ಷಮಿಸಲ್ಪಡುವವು ನಮಸ್ಕಾರದಿಂದ ದೂರಾದ ಸಂಬಂಧವು ಮತ್ತೆ ಕೂಡಿಕೊಳ್ಳುವದು

ಮಾನವನಿಗೆ ಶಿಕ್ಷೆಯೆಂದರೆ ಅವನ ತಲೆ ತಗ್ಗಿಸುವದು ಇದು ಹೆಚ್ಚಿನದು ಎಂದು ಹೇಳುವರು ಆದ್ದರಿಂದ ದೇವರನ್ನೂ, ಭಕ್ತರನ್ನೂ ವಂದಿಸಿದರೆ ಆತನ ಅಪರಾಧದ ಪರಿಮಾರ್ಜನೆಯಾದಂತಾಗುವದು ವಂದನೆ ಮಾಡುವದರಿಂದ ವಂದ್ಯನಲ್ಲಿ ದಯೆಯು ಹುಟ್ಟಿ ಆತನು ವಂದಕನಿಗೆ ಪ್ರಸನ್ನನಾಗುವನು ಸಾಧಕರು ಗುರುವನ್ನು ವಂದಿಸುವದರಿಂದ ಸಂಪೂರ್ಣವಾಗಿ ಗುರುಕೃಪೆ ದೊರಕಿಸುವರು ಹಾಗು ಸಾಧ್ಯವನ್ನು ಹೊಂದುವರು ದೇವರಿಗೆ ಸಾಷ್ಟಾಂಗ ನಮಸ್ಕಾರ ಮಾಡುವದರಿಂದ ಪರ್ವತ ಪರಿಮಿತಿಯ ಪಾಪಗಳು ನಷ್ಟವಾಗುವವು ಹಾಗು ಕೈಲಾಸಪತಿ ಶಂಕರನ ದಯೆ ಲಭಿಸುವದು- ನಮಸ್ಕಾರ ಮಾಡುವ ಪಾಪಿಯು ಪುನೀತನಾಗುವನು ನಮಸ್ಕಾರದಿಂದ ಸಂತರಿಗೆ ಶರಣು ಹೋಗುವವನ ಜನನ-ಮರಣಗಳ ಬಾಧೆ ದೂರಾಗುವದು ಸಜ್ಜನರಿಗೆ ಬಹಳವಾಗಿ ಅನ್ಯಾಯ ಮಾಡಿದ ಮಾನವನು ಪಶ್ಚಾತ್ತಾಪದಿಂದ ಬೆಂದು ತಾನು ಅನ್ಯಾಯ ಮಾಡಿದವರನ್ನು ಸಾಷ್ಟಾಂಗವಾಗಿ ನಮಸ್ಕರಿಸಿದರೆ ಅವರು ಆತನ ಅಪರಾಧವನ್ನು ಕ್ಷಮಿಸಿ ಬಿಡುವರು

ಈ ಮೂಲಕವಾಗಿ ನಮಸ್ಕಾರದಂಥ ಶ್ರೇಷ್ಠಕ್ರಿಯೆಯು ಇನ್ನೊಂದಿಲ್ಲ ಉಳಿದ ಯಾವ ಸಾಧನಗಳೂ ಇದನ್ನು ಸರಿಗಟ್ಟುವದಿಲ್ಲ ನಮಸ್ಕಾರಮಾಡುವವನಲ್ಲಿ ಸದ್ಬುದ್ಧಿಯು ಜಾಗ್ರತಗೊಳ್ಳುವದು ನಮಸ್ಕಾರ ಭಕ್ತಿಯನ್ನು ಕೈಕೊಳ್ಳಲು ಏನೊಂದನ್ನು ವೆಚ್ಚ ಮಾಡಬೇಕಾಗಿಲ್ಲ ವಂದಕನಿಗೆ ಯಾವ ಕಷ್ಟವೂ ಉಂಟಾಗುವದಿಲ್ಲ ನಮಸ್ಕಾರ ಮಾಡಲು ಬೇರೆ ಯಾವ ಸಾಹಿತ್ಯಗಳೂ ಬೇಕಾಗುವದಿಲ್ಲ

ನಮಸ್ಕಾರದಂಥ ಸುಲಭಭಕ್ತಿಯಿನ್ನೊಂದಿಲ್ಲ ಅನನ್ಯ ರೂಪದಿಂದ ನಮಸ್ಕಾರ ಮಾಡಬೇಕು ಅಂದರೆ ಕಪಟ ಹೃದಯದಿಂದ ನಮಸ್ಕಾರ ಮಾಡಬಾರದು ನಮಸ್ಕಾರದಿಂದ ಈಪ್ಸಿತ ಸಾಧನಗಳು ದೊರಕುವವು ಸಾಧು-ಸಂತರನ್ನು ಸದ್ಭಾವದಿಂದ ನಮಸ್ಕರಿಸಲು ಚಿಂತೆಯೆಲ್ಲವನ್ನೂ ಪರಿಹಾರ ಮಾಡಿ ಅವರು ಆ ವಂದಕನನ್ನು ಸನ್ಮಾ

ರ್ಗದತ್ತ ಕರೆದೊಯ್ಯುವರು ಈ ಎಲ್ಲ ಕಾರಣಗಳಿಂದ ನಮಸ್ಕಾರ ಭಕ್ತಿಯು ಶ್ರೇಷ್ಠವಾದದ್ದು ಹಾಗು ಅದು ಗೌರವವುಳ್ಳದ್ದು, ಇದನ್ನೇ ಇಲ್ಲಿ ಆರನೆಯ ಭಕ್ತಿಯನ್ನಾಗಿ ವಿವರಿಸಿತು

ಶ್ರೀ ರಾಮ ‖ ೭ ದಾಸ್ಯ ಭಕ್ತಿ ‖ ಈ ಮೊದಲು ಆರನೆಯ ಭಕ್ತಿಯ ಲಕ್ಷಣವನ್ನು ಹೇಳಿದೆವು ಈಗ ೭ನೆಯ ಭಕ್ತಿಯ ವಿವರವನ್ನು ಸಾವಧಾನರಾಗಿ ಶ್ರವಣ ಮಾಡತಕ್ಕದ್ದು

ಈ ೭ನೆಯ ಭಕ್ತಿಯೇ ದಾಸ್ಯ ವೃತ್ತಿಯು ಮಾಡಲೇಬೇಕಾದ ಆವಶ್ಯಕ ಕಾರ್ಯಗಳನ್ನು ಮಾಡುವದು ಹಾಗು ಸತತವೂ ದೇವ ಸನ್ನಿಧಿಯಲ್ಲಿರುವದು ದಾಸನ ಕ್ರಿಯೆಗಳು ದೇವನ ಸಂಪತ್ತನ್ನು ಸಂರಕ್ಷಿಸುವದು, ಕೊರತೆಯಾದವುಗಳನ್ನೆಲ್ಲ ಪೂರೈಸುವದು ದೇವನ ಭಜನೆಯನ್ನು ಮತ್ತಿಷ್ಟು ಇನ್ನಿಷ್ಟು ಹೆಚ್ಚಿಸುವದು ದೇವಾಲಯದ ಮುರುಕು ಹರಕುಗಳನ್ನು ಸರಿ ಪಡಿಸುವದು ಇವೆಲ್ಲವು ದಾಸ್ಯತ್ವ ದರ್ಶಕ ಕ್ರಿಯೆಗಳು

ಹಾಳುಬಿದ್ದ ಕೆರೆ ಬಾವಿಗಳನ್ನು ದುರಸ್ತು ಗೊಳಿಸಿ ಉಪಯೋಗವಾಗುವಂತೆ ಮಾಡುವದು, ಧರ್ಮ ಶಾಲೆಯ ವ್ಯವಸ್ಥೆ ನೋಡುವದು ಇತ್ಯಾದಿ ಹೊಸ ಹೊಸ ಕಾರ್ಯ ಕೈಕೊಳ್ಳುವದು ದ್ಯಾಸ ಭಕ್ತಿಯನ್ನು ವ್ಯಕ್ತಗೊಳಿಸುವವು ದಾಸ್ಯ ಭಕ್ತಿಯುಳ್ಳವರು ಜೀರ್ಣ ಜರ್ಜರಿತವಾದವುಗಳ ಉದ್ಧಾರ ಕ್ರಿಯೆಗಾಗಿ ಆವಶ್ಯಕ ಕಾರ್ಯಗಳನ್ನು ಲಗುಬಗೆಯಿಂದ ಸಾಗಿಸತಕ್ಕದ್ದು

ದೇವನ ವೈಭವಗಳೆಂದು ಗಜ, ರಥ, ಕುದುರೆ, ಸಿಂಹಾಸನ, ಚೌಕಿ, ಪಲ್ಲಕ್ಕಿ, ಸುಖಾಸನಗಳು, ಪಲಂಗು, ಡೋಲಿ, ವಿಮಾನ ಇವೆಲ್ಲವುಗಳ ಏರ್ಪಾಡು ನವೀನ ತರವಾಗಿ ನಡೆಯತಕ್ಕದ್ದು, ಅದರಂತೆ ಆಪ್ತಾಗಿರಿ, ಛತ್ರ, ಚಾಮರ, ಸೂರ್ಯಪಾನ, ನಿಶಾನೆ ಮುಂತಾದ ದೇವನ ವೈಭವದ ಚಿಹ್ನಗಳನ್ನು ಕಾಯುತ್ತಿರಬೇಕು ಹಲವು ಬಗೆಯ ವಾಹನಗಳು, ಕುಳಿತುಕೊಳ್ಳುವ ಉತ್ತಮ ಸ್ಥಾನಗಳು, ಸುವರ್ಣಾಸನಗಳು ಇವನ್ನು ಪ್ರಯತ್ನದಿಂದ ಏರ್ಪಡಿಸಬೇಕು ದೇವಾಲಯಕ್ಕಾಗಿ ದೇವಮಂದಿರದ ಬೇರೆ ಬೇರೆ ಭಾಗಗಳು, ನೀರಿನ ಹೌದು, ಕೊಡ ಮುಂತಾದವುಗಳ

ಯೋಜನೆಗಾಗಿ ಪ್ರಯತ್ನದಿಂದ ದ್ರವ್ಯ ಸಂಪಾದಿಸಿ ಕಲೆ ಹಾಕುವದು ನೆಲಮನೆ, ತಳಮನೆ, ಗುಹೆ, ಗುಪ್ತ ಮಾರ್ಗಗಳು, ಅಮೂಲ್ಯ ವಸ್ತುಗಳ ಭಾಂಡಾರಗಳು, ಇವೆಲ್ಲವುಗಳ ಯೋಜನೆಗೆ ಪ್ರಯತ್ನಿಸುವದು ದೇವರಿಗೆ ಆಭರಣ ಅಲಂಕಾರಗಳು, ರತ್ನಗಳು, ಬಂಗಾರ ವಸ್ತು ಹಾಗು ಧಾತುಗಳ ಪಾತ್ರೆಗಳು ಇವೆಲ್ಲವನ್ನು ಅರ್ಪಿಸಬೇಕು ಇವಲ್ಲದೆ ಹೂದೋಟಗಳಿಗೆ, ವನಗಳಿಗೆ, ಗಿಡ ಮರಗಳಿಗೆ ನೀರೆರೆಯುವ ವ್ಯವಸ್ಥೆ ಮಾಡಬೇಕು ದನಗಳ ಕೊಟ್ಟಿಗೆ, ಅನೇಕ ಪಕ್ಷಿಗಳು, ಚಿತ್ರಶಾಲೆ, ವಾದ್ಯಗಳು, ನಾಟ್ಯಶಾಲೆ, ವಿದ್ವಾನರಾದ ಗಾಯಕರು, ಅಡಿಗೆಯ ಮನೆ, ಭೋಜನ ಶಾಲೆ, ಉಗ್ರಾಣ, ಧರ್ಮಸಾಲೆ, ನಿದ್ದೆ ಹೋಗುವವರಿಗಾಗಿ ವಿಶಾಲವಾದ ಪಡಸಾಲೆ, ಸುಗಂಧ ವಸ್ತುಗಳನ್ನಿಡುವ ಕೋಣೆ, ಖಾದ್ಯ ಹಾಗು ಹಣ್ಣು ಹಂಪಲಗಳನ್ನಿರಿಸುವ ಕೋಣೆ, ರಸ ಪದಾರ್ಥಗಳನ್ನಿರಿಸುವ ಸ್ಥಳ, ಇವಲ್ಲವುಗಳನ್ನು ಪ್ರಯತ್ನ ಪೂರ್ವಕ ಒದಗಿಸಬೇಕು

ವಿದ್ರೂಪವಾದ ಪದಾರ್ಥ ಹಾಗು ಪ್ರದೇಶಗಳನ್ನು ದುರಸ್ತು ಮಾಡಿಸಬೇಕು ಇನ್ನು ದೇವನ ಹಾಗು ದೇವಾಲಯದ ವೈಭವ ವರ್ಧನೆಯಾಗುವಂತೆ ಯತ್ನಿಸುವ ಕ್ರಿಯೆಗಳು ಎಷ್ಟೋ ಇರುವವು ಅವೆಲ್ಲವನ್ನು ದಾಸ್ಯ ಭಕ್ತನು ಮನಸಿನಿಂದ ಕೈಕೊಂಡು ಪೂರ್ಣ ಮಾಡಬೇಕು ಯಾವದೊಂದನ್ನು ಮರೆಯದೆ ಪ್ರೀತಿಯಿಂದ ತನ್ನ ಭಕ್ತಿಯನ್ನು ದೇವನಲ್ಲಿ ಪ್ರಕಾಶಗೊಳಿಸಬೇಕು

ಜಯಂತಿ ಕಾಲದಲ್ಲಿ, ಹಬ್ಬ-ಉತ್ಸವ ಪ್ರಸಂಗದಲ್ಲಿ ದೇವನ ಹಾಗು ದೇವಾಲಯದ ಸೊಬಗನ್ನು ಹೆಚ್ಚೆಚ್ಚಾಗಿಸಬೇಕು ಇಂತು ದಾಸ್ಯ ಭಕ್ತನು ಕೈಕೊಂಡು ಕ್ರಿಯೆಗಳನ್ನು ದೇವನ ವೈಭವವನ್ನೂ ಸ್ವರ್ಲೋಕದ ದೇವತೆಗಳು ಕಂಡು ಬಹಳೇ ಮೆಚ್ಚಿ ತಮ್ಮ ದಿವ್ಯ ದೃಷ್ಟಿಯಿಂದ ತಟಸ್ಥರಾಗಿ ನಿರೀಕ್ಷಿಸುವರು.

ಇಂತು ದೇವನ ವೈಭವ ವರ್ಧನೆಯ ಕಾರ್ಯಗಳನ್ನು ಮಾಡುವದಲ್ಲದೆ ದಾಸ್ಯ ಭಕ್ತನು ಕೀಳ್ತರವೆಂದು ಸಾಮಾನ್ಯರು ಭಾವಿಸುವ ಕೆಲಸಗಳನ್ನೂ ಕೈಕೊಂಡು ಮುಗಿಸಬೇಕಾಗುವದು ಅವು ಯಾವವೆಂದರೆ —

ಸಣ್ಣ ದೊಡ್ಡ ಕಾರ್ಯ ನೆರವೇರಿಸುವ ಪ್ರತಿಯೊಂದು ಕೆಲಸದಲ್ಲಿ ದಾಸ್ಯ ಭಕ್ತನು ಸದಾವ ಕಾಲವೂ ನಿರತನಾಗಿರತಕ್ಕದ್ದು ತನಗೆ ಮನಸಿಗೆ ರುಚಿಸುವ ಯಾವತ್ತು ಸೇವೆಗಳನ್ನು ದೇವನಿಗೆ ಪ್ರೀತಿಯಿಂದ ಅರ್ಪಿಸಬೇಕು

ದೇವನ ಪಾದ-ಪ್ರಕ್ಷಾಲನೆಗಾಗಿ, ಸ್ನಾನ- ಆಚಮನೀಯಗಳಿಗಾಗಿ ಪವಿತ್ರ ಜಲವನ್ನು ತಂದಿಡಬೇಕು, ಗಂಧಾಕ್ಷತೆಗಳನ್ನು ತೆಯ್ದಿಡಬೇಕು, ದೇವರ ವಸ್ತ್ರ-ಭೂಷಣಗಳನ್ನು ಸರಿಗೊಳಿಸಿಡಬೇಕು, ಹೂಗಳನ್ನು ಸಂಗ್ರಹಿಸಿ ತಂದಿಡಬೇಕು ಧೂಪ–ದೀಪ–ನೈವೇದ್ಯಗಳನ್ನು ವ್ಯವಸ್ಥೆ ಮಾಡಬೇಕು. ದೇವನ ಶಯನಾಗಾರವನ್ನು ಸ್ವಚ್ಛವಾಗಿರಿಸಿ ಅಲ್ಲಿ ಒಳ್ಳೇ ತಂಪಾದ ಹಾಗು ಸುಗಂಧ ಮಿಶ್ರಿತ ಜಲಪೂರ್ಣ ಕುಡಿಯುವ ನೀರಿನ ಕಲಶ ತಾಂಬೂಲಗಳನ್ನು ಇಡಬೇಕು ಆ ದೇವನ ಶಯನೋತ್ಸವದಲ್ಲಿ ರಸಭರಿತ ರಾಗಯುಕ್ತ ಗಾಯನ ಮಾಡಬೇಕು ಹಣ್ಣು ಹಂಪಲ ಹಾಗು ಇನ್ನಿತರ ಖಾದ್ಯ ವಸ್ತುಗಳನ್ನು ದೇವನು ಶಯನ ಮಾಡುವಲ್ಲಿ ಇಡಬೇಕು ಆ ಮಂದಿರದ ಸಮ್ಮಾರ್ಜನಾದಿಗಳನ್ನು ನಿರಭಿಮಾನದಿಂದ ಕೈಕೊಳ್ಳಬೇಕು, ನೀರು ತುಂಬಿಡುವದು, ದೇವ-ವಸ್ತ್ರಗಳನ್ನು ಪ್ರಕ್ಷಾಲನ ಮಾಡುವದು, ದೇವ ದರ್ಶನಕ್ಕೆ ಬಂದವರ ಮರ್ಯಾದೆ ಕೊಳ್ಳುವದು, ಇವೆಲ್ಲ ಕೆಲಸಗಳನ್ನು ದಕ್ಷತೆಯಿಂದಲೂ ಭಕ್ತಿಯಿಂದಲೂ ವಹಿಸಿಕೊಳ್ಳುವ ಭಜಕನಲ್ಲಿಯ ಭಕ್ತಿಯೇ ದಾಸ್ಯ ಭಕ್ತಿಯು ಇದನ್ನು ನಿಜವಾಗಿ ನಂಬಬೇಕು ಇದಲ್ಲದೆ ದಾಸ್ಯ ಭಕ್ತನ ಮಾತುಗಳು ಕರುಣಾನ್ವಿತವಾಗಿರಬೇಕು ಹಾಗು ಸ್ತುತಿ ಸ್ತೋತ್ರ ಯುಕ್ತವಾಗಿರಬೇಕು ಅವನು ಎಲ್ಲರಿಗೆ ಒಪ್ಪುವಂಥ ಮಾತುಗಳನ್ನಾಡುತ್ತಿರಬೇಕು

ಈ ಪ್ರಕಾರ ನವವಿಧ ಭಕ್ತಿಗಳಲ್ಲಿ ಏಳನೆಯದಾದ ದಾಸ್ಯ ಭಕ್ತಿಯ ಲಕ್ಷಣವನ್ನು ತಿಳಿದಷ್ಟು ಹೇಳಿದ್ದಾಯಿತು ಪ್ರತ್ಯಕ್ಷ ದಾಸ್ಯ ಕ್ರಿಯೆಗಳನ್ನು ಕೈಕೊಳ್ಳಲು ಸಮಯ ಸಿಗದೆ ಇದ್ದರೆ ಮನಸ್ಸಿನಿಂದ ನೆರವೇರಿಸಿಕೊಳ್ಳಬೇಕು ಈ ಬಗೆಯಿಂದ ದೇವನ ಹಾಗು ಸದ್ಗುರುವಿನ ದಾಸ್ಯತ್ವವನ್ನು ಕೈಕೊಂಡು ಉದ್ಧಾರನಾಗಬೇಕು

ಶ್ರೀ ರಾಮ || ೮ ಸಖ್ಯ ಭಕ್ತಿ || ಈ ಮೊದಲು ದಾಸ್ಯ ಭಕ್ತಿಯನ್ನು ಕುರಿತು ಹೇಳುವದಾಯಿತು ಇನ್ನು ನವವಿಧ ಭಕ್ತಿಗಳಲ್ಲಿ ೮ನೆಯದಾದ ಸಖ್ಯ ಭಕ್ತಿಯ ಲಕ್ಷಣಗಳನ್ನು ಕೇಳಬೇಕು

ಭಕ್ತನು ದೇವನಲ್ಲಿ ಬಹು ಪ್ರೀತಿಯನ್ನಿಟ್ಟು ಆತನ ಸಖ್ಯ ಅಂದರೆ ಸ್ನೇಹತ್ವವನ್ನು ಮಾಡಬೇಕು ಇದೇ ಎಂಟನೆಯ ಭಕ್ತಿಯು

ಇದರ ಲಕ್ಷಣಗಳು–

ದೇವನಿಗೆ ಅತಿ ಪ್ರೀತಿಯಾಗುವಂತೆ ಭಕ್ತನ ನಡವಳಿಯಿರಬೇಕು ಇದಕ್ಕಾಗಿಯೇ ಭಕ್ತನು ಆ ಭಗವಂತನ ಸಖ್ಯತ್ವ ಸಂಪಾದಿಸಬೇಕು

ದೇವನಿಗೆ ರುಚಿಕಟ್ಟಾಗುವ ವಿಷಯಗಳೆಂದರೆ— ಸದ್ಭಕ್ತಿಯು, ಭಜನೆಯು, ಕೀರ್ತನ—ಕಥೆಗಳು, ಹಾಗು ತನ್ನ ಭಕ್ತನು ಹೃದಯ ತುಂಬಿ ಹಾಡುವ ಗೀತೆಗಳು ಇವೆಲ್ಲವು ದೇವನಿಗೆ ಪ್ರಿಯವಾದ ವಿಷಯಗಳು ಆ ದೇವನ ಪ್ರೀತಿಯಾಗುವಂತೆ ಭಕ್ತನು ತನ್ನ ವರ್ತನೆಯನ್ನಿಟ್ಟುಕೊಂಡು ಮನ ಪೂರ್ವಕ ಭಕ್ತಿಯನ್ನಾಚರಿಸಲು ಕೂಡಲೇ ಭಕ್ತನಲ್ಲಿ ಸಖ್ಯ ಭಕ್ತಿಯುದಿಸುವದು ಈ ಸಖ್ಯ ಭಕ್ತಿ ಪ್ರಾಪ್ತಿಗಾಗಿ ಭಕ್ತನು ತನ್ನ ಸೌಖ್ಯವನ್ನು ಬಿಟ್ಟು ಬಿಡಬೇಕಾಗುವದು ದೇವನಲ್ಲಿ ಅನನ್ಯ ಭಾವನೆಯನ್ನಿಟ್ಟು ಆತನಿಗಾಗಿ ತನು—ಮನಗಳನ್ನು ಸವೆಯಿಸಬೇಕು. ಭಕ್ತನು ತನ್ನ ಪ್ರಾಪಂಚಿಕ ತೊಂದರೆಗಳನ್ನು ಲೆಕ್ಕಿಸದೆ ಸದಾ ಸ ಕಾಲವೂ ದೇವಚಿಂತನೆಯಲ್ಲಿಯೇ ಕಾಲ ನೂಕಬೇಕು ತನ್ನ ದೇವನ ಸಂಬಂಧವಾದ ಕಥೆ-ಕೀರ್ತನೆಗಳನ್ನೂ ಸುದ್ದಿ-ಸಮಾಚಾರವನ್ನೂ ಆತನೆದುರು ಹೇಳಿಕೊಳ್ಳಬೇಕು ಆ ದೇವನ ಸಖ್ಯತ್ವ ಸಂಪಾದನೆಗಾಗಿ ತನ್ನ ಜೀವ ಭಾವವನ್ನು ದೇವನೊಂದಿಗೆ ಸೇರಿಸಬೇಕು 'ದೇವನೆಂದರೆ ತನ್ನ ಜೀವ' ಎಂದು ದೃಢ ಭಾವನೆಯಿಂದ ತನ್ನ ಪ್ರಾಣವನ್ನು ಗಣನೆಗೆ ತಾರದೆ ಸಖ್ಯಭಕ್ತಿಯನ್ನು ಸಮರ್ಪಿಸಬೇಕು ಇಂಥ ಸಖ್ಯಭಕ್ತಿಯನ್ನು ಗಳಿಸಿದ ಭಕ್ತನ ಉದ್ಧಾರಕ್ಕೆ ಆ ಪರಮಾತ್ಮನು ಬದ್ಧನಾಗುವನು

ಶ್ರೀ ಕೃಷ್ಣ ಪರಮಾತ್ಮನು ಅರಗಿನ ಮನೆಯಲ್ಲಿ ಸುಟ್ಟು ನಾಶವಾಗುತ್ತಿದ್ದ ತನ್ನ ಸಖ್ಯ ಭಕ್ತಿಯುತ ಪಾಂಡವರನ್ನು ಅದಾವ ಬಗೆ

ಯಿಂದ ಪಾರು ಮಾಡಿದನೆಂಬದನ್ನು ತಿಳಿಯಿರಿ ಆ ದೇವನು ತಾನು ಅದೆಲ್ಲಿಯೋ ಇದ್ದುಕೊಂಡು ಆ ಅರಗಿನ ಮನೆಯಿಂದ ತನ್ನ ಭಕ್ತ ಪಾಂಡವರು ಪಾರಾಗಿ ಹೋಗುವದಕ್ಕೆ ನೆಲದಲ್ಲಿಂದಲೇ ಗುಪ್ತ ಮಾರ್ಗ ವನ್ನು ರಚಿಸಿಕೊಟ್ಟನು. ಅಂದಮೇಲೆ ಸಖ್ಯ-ಭಕ್ತಿಯ ಮಹಿಮೆ ಎಂಥ ಮಹತ್ವದ್ದೆಂಬದನ್ನು ತಿಳಿಯಿರಿ ನಾವು ದೇವನೊಡನೆ ಸಖ್ಯತ್ವವನ್ನಾಚ ರಿಸಿದಲ್ಲಿ ಆತನ ಮರ್ಮವು ಗೊತ್ತಾಗುವದು ಅದನ್ನರಿತು ನಾವು ಅವ ನೊಡನೆ ಅವನಿಗೆ ರುಚಿಸುವ ವಚನಗಳನ್ನಾಡುವೆವು,

ನಾವು ಅನನ್ಯ ಭಾವದಿಂದ ಆತನೊಡನೆ ಸಖ್ಯತ್ವ ಭಕ್ತಿಯಿಂದ ಆಚರಿಸಿದರೆ- ಆತನು ಕೂಡಲೇ ನಮ್ಮನ್ನು ಉದ್ಧರಿಸುವನು ನಮಗೆ ಅತ್ಯಂತ ತೊಂದರೆಗಳುಂಟಾಗಿ ನಮ್ಮ ಹೃದಯ ತಲ್ಲಣಿಸಲು ಆತನೂ ವ್ಯಥೆ ಪಡುವನು ಮತ್ತು ಕೂಡಲೆ ನಮ್ಮ ತೊಂದರೆಗಳನ್ನೆಲ್ಲ ನಿವಾರಿ ಸುವನು ಈ ವಿಷಯವಾಗಿ ಭಗವಂತನ ಮಾತು ಇಂತಿರುವದು

'' ಯಾವನು ನನ್ನನ್ನು ಅದಾವ ಬಗೆಯಿಂದ ತಿಳಿಯುವನೋ
ಅದೆ ಬಗೆಯಿಂದ ನಾನೂ ಅವನನ್ನು ಭಜಿಸುವೆನು ''

ಇನ್ನು ದೇವನ ಮೇಲೆ ಭಕ್ತಿಯನ್ನಿಟ್ಟು ನಡೆಯುವ ಮನುಷ್ಯನ ಯಾವದೊಂದು ಬಯಕೆಯನ್ನಿಟ್ಟುಕೊಂಡಿರಕೂಡದು ಒಂದು ವೇಳೆ ತಮ್ಮ ಮನೋಬಯಕೆ ಕೈಗೂಡದೆ ಹೋಗಲು ತಮ್ಮಲ್ಲಿಯ ನಿಷ್ಠೆಯನ್ನು ಮುರಿದು ಬಿಡುವವರುಂಟು ಆದರೆ ಸಹಜವಾಗಿ ದೋಷವು ಆ ಭಜಕ ರಿಗೇ ಹೊರತು ದೇವನಿಗಲ್ಲ ಮೋಡವು ಚಾತಕಕ್ಕೆ ಮಳೆ ಸುರಿಸದಿ ದ್ದರೂ ಚಾತಕವು ತನ್ನ ಸ್ಥಿತಿಯಿಂದ ಬದಲಾಗುವದಿಲ್ಲ ಆದರೆ ಚಂದ್ರ ನ ಬರುವಿಕೆ ತಡವಾದರೆ ಮಾತ್ರ ಅದು ಅನನ್ಯವಾಗುವದು ಈ ಪ್ರಕಾರ ಚಂದ್ರಚಕೋರರಂತೆ ಸಖ್ಯತ್ವ ವಿರಬೇಕು

ವಿವೇಕದಿಂದ ಸತ್ವವನ್ನು ಹಿಡಿಯಬೇಕು ಭಗವಂತನ ಮೇಲಿನ ಮಮತ್ವವನ್ನು ಬಿಟ್ಟಿರಕೂಡದು ಆ ಭಗವಂತನನ್ನು ಮಿತ್ರನೆಂದು ತಿಳಿದುಕೊಳ್ಳಬೇಕು ತಾಯಿ—ತಂದೆಗಳೂ ಆ ಭಗವಂತನೇ ಎಂದು ನಂಬಬೇಕು ಇದಲ್ಲದೆ ತನ್ನ ವಂಶಾಪ್ತರು, ತನ್ನ ವಿದ್ಯೆ, ಲಕ್ಷ್ಮಿ, ದ್ರವ್ಯ ಬದಕು ಇವೆಲ್ಲವೂ ಪರಮಾತ್ಮನೆಂದು ತಿಳಿಯಬೇಕು ದೇವನ

ಹೊರತು ಗತಿದಾಯಕರಾರೂ ಇಲ್ಲೆಂದು ಸಕಲರೂ ನುಡಿಯುವರು ಆದರೆ ಆ ದೇವನ ಬಗೆಗೆ ನಿಷ್ಠೆ ಭಕ್ತಿಗಳು ಮಾತ್ರ ಅವರು ನುಡಿದಂತೆ ಇರುವದಿಲ್ಲ ಆದರೆ ಹೀಗಾಗಬಾರದು ನಿಜವಾದ ಸಖ್ಯ ಭಕ್ತಿಯನ್ನು ದೇವನಲ್ಲಿರಿಸಬೇಕು- ಮತ್ತು ಆ ಪರಮೇಶ್ವರನನ್ನು ಹೃದಯದಲ್ಲಿ ದೃಢವಾಗಿರಿಸಬೇಕು ತನ್ನ ಆಶೆ ಕೈಗೂಡಲಿಲ್ಲೆಂದು ದೇವನ ಮೇಲೆ ರೋಷ ಪಡುವದು ಮೂರ್ಖತನವು ಇದು ಸಖ್ಯ ಭಕ್ತಿಯ ಲಕ್ಷಣವಾಗುವದಿಲ್ಲ ದೇವನ ಇಚ್ಛೆಗನುಸರಿಸಿ ನಮ್ಮ ಇರುವಿಕೆಯಿರಬೇಕು ಆದರೆ ನಮ್ಮ ಇಚ್ಛೆಗೆ ಆತನನ್ನು ಅಡವು ಚಲ್ಲಿ ಅವನಿಂದ ಅಂತರಿಸ ತಕ್ಕದ್ದಲ್ಲ

ದೇವನ ಇಚ್ಛೆಯಂತೆ ನಡೆಯಬೇಕು ಆ ದೇವನ ಕೃತಿಗಳನ್ನು ನಾವು ಒಪ್ಪಿಕೊಳ್ಳಬೇಕು ಹೀಗಾದರೆ ಮಾತ್ರ ದೇವನು ನಮ್ಮ ಬಗೆಗೆ ಸಹಜವಾಗಿ ದಯೆದೋರುವನು ದೇವನ ದಯೆಯು ತಾಯಿಯ ಕೃಪೆಗಿಂತಲೂ ಹೆಚ್ಚಿನದು ಹೇಗೆಂದರೆ ತಾಯಿಗೆ ಒಂದು ವೇಳೆ ವಿಪತ್ಕಾಲ ಬರಲು ಅವಳು ತನ್ನ ಹೊಟ್ಟೆಯ ಕರುಳನ್ನು ವಧೆ ಮಾಡಲು ಸಹ ಹಿಂಜರಿಯಳು, ಆದರೆ ದೇವನು ತನ್ನ ಯಾವ ಭಕ್ತನನ್ನು ಇದು ವರೆಗೂ ವಧೆ ಮಾಡಿಲ್ಲ ಹಾಗೆ ಮಾಡಿದ್ದನ್ನು ಯಾರೂ ಹೇಳುವದಿಲ್ಲ ಮತ್ತು ಯಾರ ಕೇಳಿಕೆಯಲ್ಲಿಯೂ ಇಲ್ಲ

ತನ್ನನ್ನು ಮೊರೆ ಹೊಕ್ಕವರನ್ನು ದೇವನು ಬಲು ಭದ್ರವಾಗಿಟ್ಟುಕೊಂಡು ಕಾಯುವನು ಈ ದೇವನು ಭಕ್ತೋದ್ಧಾರಕನು ಪತಿತರನ್ನು ಪಾವನಗೊಳಿಸುವನು ಅವನು ಅನಾಥರಿಗೆ ಸಹಾಯಕಾರಿಯು

ಮತ್ತು ಆ ದೇವನು ಭಕ್ತರನ್ನು ಸಂಕಟದಿಂದ ಸಲಹುವನು ಶ್ರೀಹರಿಯು ಗಜೇಂದ್ರನನ್ನು ಮುಕ್ತಿಗೊಳಿಸಲಿಲ್ಲವೇ ?

ದೇವನು ದಯಾಸಾಗರನು- ಅವನು ದಯೆಯೆಂಬ ಮೋಡವು ಅಂದರೆ ದಯಾಘನನು. ಭಕ್ತರ ಸ್ಮರಣೆಯಲ್ಲಿರುವವನು

ದೇವಪ್ರೀತಿಗಾಗಿ ಬಯಸುವವರು ದೇವನಿಗೆ ಸರಿ ಬೀಳುವಂಥ ಕಾರ್ಯ ಮಾಡಬೇಕು ನೀಚತನ ಮುಂತಾದವುಗಳೇನೂ ಅವರಲ್ಲಿರಬಾರದು

ದೇವನ ಗೆಳೆತನವು ಎಂದೂ ದೂರಾಗುವದಿಲ್ಲ ಅವನು ನಮ್ಮ ಪ್ರೀತಿಗಾಗಿ ಎಂದು ಹೇಸಿಕೊಳ್ಳಲಾರನು. ಶರಣಾಗತರನ್ನು ಎಂದು ಬಿಟ್ಟಿರಲಾರನು

ಆದ್ದರಿಂದ ದೇವನಲ್ಲಿ ಸಖ್ಯ ಭಕ್ತಿಯನ್ನಿಡಬೇಕು ತನ್ನ ಅನುವು ತನುವಿನ ಮಾತುಗಳನ್ನು ಅವನಿಗೆ ಹೇಳಿಕೊಳ್ಳಬೇಕು

ಇಂತು ನವವಿಧ ಭಕ್ತಿಗಳಲ್ಲಿ ಈ ಸಖ್ಯ ಭಕ್ತಿಯು ಎಂಟನೆಯ ಭಕ್ತಿಯೇ ಆಗಿರುವದು ಇದೇ ಆ ಭಕ್ತಿಯ ಲಕ್ಷಣವು

ಶಾಸ್ತ್ರಗಳಲ್ಲಿ 'ದೇವನಂತೆ ಗುರು' ಎಂಬದಾಗಿ ಉಲ್ಲೇಖವಿದೆ ಈ ವಿಚಾರವನ್ನೂ ಸಖ್ಯತ್ವದ ಪ್ರಕಾರವನ್ನೂ ಸದ್ಗುರವಿನಿಂದ ತಿಳಿಯಬೇಕು

ಶ್ರೀ ರಾಮ || ೯ ಆತ್ಮನಿವೇದನೆ || ಹಿಂದೆ ಭಕ್ತಿಯಲ್ಲಿ ಎಂಟನೆಯದಾದ ಸಖ್ಯ ಭಕ್ತಿಯನ್ನು ಕುರಿತು ಹೇಳಲಾಯಿತು ಇದೀಗ ೯ನೆಯದಾದ ಕೊನೆಯ ಭಕ್ತಿಯ ವಿಷಯಕ್ಕೆ ಹೇಳುವದನ್ನು ಚಿತ್ತಗೊಟ್ಟು ಶ್ರವಣ ಮಾಡಬೇಕು. ಈ ಒಂತಭ್ತನೆಯ ಭಕ್ತಿಯೇ ಆತ್ಮನಿವೇದನೆಯು

ಆತ್ಮ ನಿವೇದನೆಯೆಂದರೆ ದೇವನಿಗೆ ತನ್ನನ್ನೇ ಆತನ ವಶಕ್ಕೊಪ್ಪಿಸುವದು ದೇವನೆಂದರೆ ಯಾರು? ತಾನು ಯಾರು? ತನ್ನನ್ನು ಅವನಿಗೆ ಅರ್ಪಿಸುವದು ಹೇಗೆ? ತನಗೆ ಇವೆಲ್ಲವು ತತ್ವ ವಿವೇಚನೆಯಿಂದಲೇ ತಿಳಿಯುವವು ಆದ್ದರಿಂದ ತಾನು 'ನಾನು ನಿನ್ನ ಭಕ್ತನು' ಎಂದು ದೇವ ಸನ್ನಿಧಿಯಲ್ಲಿ ಉಚ್ಚರಿಸಬೇಕು ಆತನನ್ನು ತಾನು ಭಕ್ತನೆಂಬ ಭಾವನೆಯಿಲ್ಲದೆ ಸ್ಮರಿಸಬೇಕು ಹೀಗೆ ಸ್ಮರಿಸುವದು ಮಾತ್ರ ವಿಲಕ್ಷಣವೆಂದು ಹೇಳಬೇಕಾಗಿಲ್ಲ ಯಾಕೆಂದರೆ ಲಕ್ಷಣವಿದ್ದೂ ವಿಪರೀತ ಲಕ್ಷಣವು, ಜ್ಞಾನವಿದ್ದೂ ಅಜ್ಞಾನವು, ಭಕ್ತನಾಗಿದ್ದರೂ ವಿಭಕ್ತನು ಈ ಸ್ಥಿತಿಯು ಆ ವೇಳಗೆ ಉಂಟಾಗಿರುವದು ಭಕ್ತನೆಂದರೆ ವಿಭಕ್ತನಲ್ಲ, ವಿಭಕ್ತನೆಂದರೆ ಭಕ್ತನಲ್ಲ ಈ ಬಗೆಗೆ ವಿಚಾರ ಮಾಡಲು ಮಾತ್ರ ಸಮಾಧಾನವುಂಟಾಗುವದು. ಆದ್ದರಿಂದ ದೇವನೆಂದರೆ ಯಾರೆಂಬುವದನ್ನು ತಿಳಿಯುವದಕ್ಕಾಗಿ ವಿಚಾರ ಮಾಡಬೇಕು, ಹಾಗು ಅಂತರ್ಯಾ

ಮುದಲ್ಲಿ ತನ್ನನ್ನು ತಾನು ಅರಿತುಕೊಳ್ಳಬೇಕು ' ನಾನು ಯಾರು ' ಎಂಬುವದನ್ನು ಗೊತ್ತು ಮಾಡಿಕೊಳ್ಳುವದಕ್ಕಾಗಿ ಪಿಂಡ ಬ್ರಹ್ಮಾಂಡ ವಿಸ್ತಾರ ತತ್ವದ ಬಗೆಗೆ ವಿಚಾರ ಮಾಡಬೇಕು. ಅಂದರೆ ವಿಚಾರಾಂತ್ಯ ದಲ್ಲಿ ' ನಾನು ಇಲ್ಲ ' ಎಂಬುದು ಸ್ಪಷ್ಟವಾಗುವದು. ತತ್ವದಲ್ಲಿ ತತ್ವ ಲೀನವಾಗಲು ತತ್ವದಲ್ಲಿ 'ನಾನು' ಎಲ್ಲಿ ಉಳಿಯುವದು? ಈ ಬಗೆಯಿಂದ ಆತ್ಮ ನಿವೇದನೆಯು ಸಹಜವಾಗಿ ಉಂಟಾಗುವದು ಕಾಣುವದೆಲ್ಲವೂ ತತ್ವರೂಪ ತೋರಿದರೂ ವಿವೇಕದಿಂದ ಅದೆಲ್ಲವೂ ನಿರಸನವಾಗುವದು ಇಂತು ಪ್ರಕೃತಿಯು ನಿರಸವಾಗಿ ಹೋದರೂ ಆತ್ಮನು ಮಾತ್ರ ಉಳಿ ಯುವನು ಅಂದಮೇಲೆ ನಾನೆಲ್ಲಿ? ಪರಮೇಶ್ವರನೊಬ್ಬನು ಮುಖ್ಯನು ಅವನಲ್ಲದೆ ಜಗದಾಕಾರ ಪ್ರಕೃತಿಯು ಇನ್ನೊಂದು, ಇಂತಿರುವ ಎರಡರ ನಡುವೆ 'ನಾನು' ಎಂಬ ಕಳ್ಳನು ( ಮೂರನೆಯವನು) ಇರುವದೆಂತು? ಇದು ಸತ್ಯ ಸಿದ್ಧವಿದ್ದರೂ ಅಹಂವೇಷ್ಟಿತ ಶರೀರವನ್ನು ಸತ್ಯವೆಂದೆಣಿ ಸುವದು ತಪ್ಪು ವಿಚಾರದಿಂದ ತಿಳಿದಲ್ಲಿ ಶರೀರ ಮಿಥ್ಯತ್ವವು ಕಂಡು ಬರುವದು. ಪಿಂಡ ಬ್ರಹ್ಮಾಂಡ ರಚನೆ ಹಾಗು ತತ್ವವಿಚಾರ ಇವುಗಳ ಬಗೆಗೆ ಶೋಧ ಮಾಡಲು ವ್ಯಕ್ತಿಯು ತತ್ವಗಳಿಂದಲೇ ಎಂಬುವದು ಸಿದ್ಧ ವಾಗುತ್ತಿದೆ ' ನಾನು ' ಕೇವಲ ತತ್ವಗಳ ಸಾಕ್ಷಿಯು ಅಂದರೆ ಅವುಗ ಳಿಂದ ಬೇರೆಯಾಗಿರುವೆನು ಈ ಸಾಕ್ಷಿತ್ವವೂ ಕೂಡ ತತ್ವರೂಪವಾಗಿ ರುವದರಿಂದ ಅದು ಆತ್ಮಾನುಭವದಲ್ಲಿ ಉಳಿಯಲಾರದು ಅಂದಮೇಲೆ ಆದ್ಯಂತಗಳಲ್ಲಿ ಆತ್ಮನೇ ಇರುವದರಿಂದ 'ನಾನು' ಅಲ್ಲಿ ಇಲ್ಲ ಎಂಬುದು ಸ್ಪಷ್ಟವು

ಆತ್ಮನು ' ಏಕಮೇವಾದ್ವಿತೀಯ 'ನು ಮತ್ತು ' ಅಹಮಾತ್ಮ' ನು ಇವು ಶ್ರುತಿಯ ಅಭೇಧ ವಚನಗಳು ಅಂದಮೇಲೆ ಆತ್ಮನಿಂದ ವಿಭಕ್ತ ನೆಂತಾಗುವೆನು? ಸಾಧ್ಯವಿಲ್ಲ

' ಸೋಽಹಂ ಹಂಸಾ ' (ಸ ಅಹಂ ಅಹಂಸಃ) ಅವನೇ ನಾನು ನಾನೇ ಅವನು ಈ ಅರ್ಥದಿಂದ ಆತ್ಮನ ಬಗೆಗೆ ವಿಚಾರ ಮಾಡಲು 'ನಾನು' ಎಂಬದು ಉಳಿಯುವದೇ ಇಲ್ಲ ಆತ್ಮನು ನಿರ್ಗುಣನೂ ನಿರಂಜನನೂ ಆಗಿರುವನು ಅವನೇ ಅನನ್ಯನು ಅವರ ಹೊರತು ಅನ್ಯರಿಲ್ಲ ಎಂದ

ಮೇಲೆ 'ನಾನು' ಎಲ್ಲಿ? ಆತ್ಮನೆಂದರೆ ಅದ್ವೈತನು ಅವನಲ್ಲಿ ದ್ವೈತ ಭಾವನೆಯೂ ಅದ್ವೈತ ಭಾವನೆಯೂ ಇರುವದಿಲ್ಲ ಅಂದಮೇಲೆ 'ನಾನು' ಎಂಬುವದು ಉಳಿಯುವದೆಂತು? ಆತ್ಮನುಪರಿಪೂರ್ಣನು ಅವನಿಗೆ ಗುಣಾವ ಗುಣಗಳ ಸಂಪರ್ಕವಿಲ್ಲ ಇಂಥ ನಿರ್ಗುಣ ಆತ್ಮನಲ್ಲಿ 'ನಾನು' ಎಂಬುದು ಕೂಡಲಾರದು ತತ್, ತ್ವಂ, ಅಸಿ ಹೀಗೆ ಮೂರು ಪದಗಳು ಇವುಗಳಲ್ಲಿಯ ಭೇದಾ ಭೇದಗಳನ್ನು ಕುರಿತು ವಿಚಾರ ಮಾಡಲು ಮೂಲ ವಸ್ತುವಿನಲ್ಲಿ ಅಬೇಧವೇ ಕಂಡು ಬರುವದು ಹಾಗು ಆ ಮೂಲ ವಸ್ತುವೇ ಉಳಿಯುವದು ಅಂದಮೇಲೆ 'ನಾನು' ಎಲ್ಲಿ ಉಳಿಯುವದು? ಇದರಂತೆ ಜೀವ-ಶಿವರ ಐಕ್ಯತೆಯಾದ ನಂತರ ಅಂದರೆ ಅವರಲ್ಲಿಯ ಉಪಾಧಿಯು ದೂರಾದನಂತರ ಅಲ್ಲಿ 'ನಾನು' ಎಂಬುದನ್ನು ಪ್ರತ್ಯೇಕಿಸುವದೆಂತು? 'ನಾನು' ಎಂಬುದು ಮಿಥ್ಯಾವಾದವು 'ದೇವ'ನು ಸತ್ಯನು, ಮತ್ತು ದೇವ—ಭಕ್ತರಲ್ಲಿ ಅಬೇಧವು ಈ ಮಾತುಗಳ ಅರ್ಥವು ಅನುಭವಿಯಾದವನಿಗೇ ಗೊತ್ತು ಅನುಭವದಿಂದಲೇ ತಿಳಿಯುವದು ಇದಕ್ಕೇ ಆತ್ಮ ನಿವೇದನೆ ಎನ್ನುವರು ಇದರಿಂದಲೇ ಜ್ಞಾನಿಗಳಿಗೆ ಸಮಾಧಾನವು ಇಂತು ಒಂಭತ್ತನೆಯ ಭಕ್ತಿಯಾದ ಆತ್ಮ ನಿವೇದನೆಯ ಲಕ್ಷಣ ವಿರುವದು

ಈ ಒಂಭತ್ತನೆಯ ಭಕ್ತಿಯು ಪಂಚ ಭೂತಗಳಲ್ಲಿಯ ಶ್ರೇಷ್ಠವಾದ ಆಕಾಶದ ಹಾಗೆಯೂ, ಸಕಲ ದೇವತೆಗಳಲ್ಲಿ ಹೆಚ್ಚಿನ ಜಗದೀಶನಂತೆಯೂ ಶ್ರೇಷ್ಠವಾದುದು ಇದು ನವವಿಧ ಭಕ್ತಿಗಳಲ್ಲಿ ಒಂಭತ್ತನೆಯದು ಈ ಭಕ್ತಿಯು ಲಭಿಸದೆ ಹೋದಲ್ಲಿ ಜನನ ಮರಣಗಳ ಯಾತನೆಯು ಎಂದೂ ತಪ್ಪುವದಿಲ್ಲ ಈ ವಚನವು ಸತ್ಯವೂ ಪ್ರಮಾಣ ಭೂತವೂ ಆಗಿರುವವು

ಇಂತು ನವವಿಧ ಭಕ್ತಿಗಳನ್ನು ಆಚರಿಸಿದವನು ಸಾಯುಜ್ಯ ಮುಕ್ತಿ ಪಡೆಯುವನು ಕಲ್ಪಾಂತ್ಯದಲ್ಲಿಯೂ ಕೂಡ ಸಾಯುಜ್ಯ ಮುಕ್ತಿಗೆ ಬಾಧಕವಿಲ್ಲ ಇಂಥ ಅಚಲಮುಕ್ತಿಯಾಗಿರುವದು ಒಂದು ವೇಳೆ ಮೂರೂ ಲೋಕಗಳು ಗತಿಸಿದರೂ ಈ ಮುಕ್ತಿಗೆ ಹೊಯ್ದಾಟವಿಲ್ಲ ವೇದ ಶಾಸ್ತ್ರಗಳಲ್ಲಿ ಸಲೋಕತಾ, ಸಮಿಪತಾ, ಸರೂಪತಾ ಹಾಗು

ಸಾಯುಜ್ಯತಾ ಹೀಗೆ ನಾಲ್ಕು ಪ್ರಕಾರದ ಮುಕ್ತಿಗಳೆಂದು ಹೇಳಲ್ಪಟ್ಟಿದೆ ಅವುಗಳಲ್ಲಿ ಮೂರು ಮುಕ್ತಿಗಳು ನಾಶತ್ವ ಹೊಂದುವವು ನಾಲ್ಕನೆಯದಾದ ಸಾಯುಜ್ಯ ಮುಕ್ತಿಗೆ ಎಂದೂ ನಾಶವಿಲ್ಲ

ಭಗವದ್ಭಜನೆಯಲ್ಲಿ ನಿರತರಾದವರಿಗೆ ಈ ಮೇಲಿನ ಮುಕ್ತಿಗಳು ಲಭಿಸುವವು ಇದನ್ನೇ ಶ್ರೋತೃಗಳು ಚಿತ್ತಗೊಟ್ಟು ಮುಂದೆ ಶ್ರವಣ ಮಾಡಬೇಕು

ಶ್ರೀ ರಾಮ ||೧೦ ಚತುರ್ಮುಕ್ತಿ ನಿರೂಪಣ || ಮೂಲತ ಬ್ರಹ್ಮನು ನಿರಾಕಾರನಾಗಿರುವನು ಆತನು ಒಬ್ಬನೇ ಆಗಿದ್ದರೂ ಅವನಿಂದ ಅಹಂಕಾರವು ಸ್ಫುರಣಗೊಂಡು ಉದ್ಭವಿಸಿತು ಇದರ ಬಗ್ಗೆಯೂ ಪಂಚಭೂತಗಳ ಬಗ್ಗೆಯೂ ಈ ಹತ್ತನೆಯ ಸಮಾಸದಲ್ಲಿ ವಿಚಾರ ಮಾಡಲಾಗಿದೆ

ಆ ಅಹಂಕಾರವು ವಾಯು-ರೂಪವಾಗಿರುವದು ಬಳಿಕ ತೇಜೋರೂಪಹೊಂದುವದು ತರುವಾಯ ಆಪರೂಪ (ಜಲರೂಪ)ವಾಗುವದು ಆ ಆವರಣೋದಕದ ಆಧಾರದಿಂದ ಶೇಷನು ಹೆಡೆಯ ಮೇಲೆ ಭೂಮಿಯನ್ನಿರಿಸಿಕೊಂಡಿರುವನು ಆ ಭೂಮಿಯು ಐವತ್ತಾರು ಕೋಟಿ ಯೋಜನ ವಿಸ್ತೀರ್ಣವಾಗಿರುವದು ಇಂಥ ವಿಸ್ತಾರವಾದ ಭೂಮಿಯನ್ನು ಏಳು ಸಮುದ್ರಗಳು ಸುತ್ತುಗಟ್ಟಿವೆ ಮೇರು ಗಿರಿಯು ಆ ಭೂಮಿಯ ಮಧ್ಯದಲ್ಲಿ ಎದ್ದು ನಿಂತಿದೆ ಎಂಟೂ ದಿಕ್ಪಾಲಕರು ಸುತ್ತರಿದು ನಿಂತು ಸೇವೆ ಮಾಡುವರು ಆ ಮೇರುಗಿರಿಯು ಸುವರ್ಣರಂಜಿತವಾಗಿ ಪೃಥ್ವಿಗೆ ಆಧಾರಭೂತವಾಗಿದೆ, ಆ ಪರ್ವತವು ಎಂಭತ್ನಾಲ್ಕು ಸಾವಿರ ಯೋಜನದ ಉದ್ದಗಲಗಳುಳ್ಳದ್ದು ಉನ್ನತದಲ್ಲಿ ಅದು ಮೇರ ಮಿಕ್ಕಿದೆ ಅದನ್ನು ಸುತ್ತುಗಟ್ಟಿದ ಹದಿನಾರು ಸಾವಿರ ಸಣ್ಣ ದೊಡ್ಡ ಗಿರಿಗಳಿವೆ. ಈ ಸ್ವರೂಪದ ಮೇರು ಗಿರಿಯಾಚೆಗೆ ಹಿಮಾಲಯ ಪರ್ವತವುಂಟು ಧರ್ಮಾದಿ ಪಾಂಡವರು ಎಲ್ಲರೂ ಆ ಹಿಮಾಲಯವನ್ನೇ ಸೇರಿ ನಡೆದರು ಹಾಗೆಯೇ ಮುಂದೆ ಸಾಗಿದರು

ಆ ಹಿಮಾಲಯದಲ್ಲಿ ಸಂಚರಿಸಲು ಮಾರ್ಗಗಳಿಲ್ಲ ಹಾದಿಯಲ್ಲಿ ಬಿಳಿಯ ವರ್ಣದ ದೊಡ್ಡದೂ ಸುಖವುಳ್ಳದ್ದೂ ಆಗಿರುವ ಪರ್ವತಾಕಾರದ ಸರ್ಪವೊಂದಿದೆ ಆ ಹಾವಿನಿಂದಾಚೆಗೆ ಕೊನೆಗೆ ಬದರಿಕಾಶ್ರಮವಿದೆ ಅಲ್ಲಿ

ಬದರೀ ನಾರಾಯಣನಿರುವನು ಮಹಾ ತಪಸ್ವಿಗಳು ಅಲ್ಲಿ ದೇಹವನ್ನು ಬಿಟ್ಟು ನಿರ್ವಾಣ ಪದವಿಯನ್ನು ಹೊಂದುವದಕ್ಕಾಗಿ ಹೋಗುವರು ಎಷ್ಟೋ ಸಣ್ಣ ದೊಡ್ಡವರು ಬದರೀಕೇದಾರದಿಂದಾಚೆಗೆ ವಿಸ್ತ್ರತವಾಗಿ ಹಬ್ಬಿದ ಮೇರುಗಿರಿಯ ದರ್ಶನ ಪಡೆಯುವರು

ಆ ಮೇರುಗಿರಿಯ ತಪ್ಪಲಿನಲ್ಲಿ ಮೂರು ಅತ್ಯುನ್ನತ ಶಿಖರಗಳುಂಟು. ಅವೆಲ್ಲ ಒಂದರಿಂದೊಂದು ಭಿನ್ನ ತೋರುವವು ಆ ಗಿರಿಶಿಖರಗಳ ಮೇಲೆ ಒಂದೊಂದರಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರು ತಮ್ಮ ತಮ್ಮ ಪರಿವಾರಗಳೊಂದಿಗೆ ವಾಸವಾಗಿರುವರು ಬ್ರಹ್ಮನಿರುವ ಗಿರಿ ಶಿಖರಕ್ಕೆ ಬ್ರಹ್ಮಶೃಂಗವೆಂಬ ಹೆಸರು. ಅದು ಪರ್ವತವು ವಿಷ್ಣುವಿರುವ ವಿಷ್ಣುಶೃಂಗವು ರತ್ನಖಚಿತವಾದುದು ಶಿವಶೃಂಗವು ಕೇವಲ ಸ್ಫಟಿಕಮಯವು ಅದಕ್ಕೇ ಕೈಲಾಸಶಿಖರವೆನ್ನುವರು ವಿಷ್ಣುಶೃಂಗಕ್ಕೆ ವೈಕುಂಠಭುವನವೆನ್ನುವರು ಬ್ರಹ್ಮಶೃಂಗಕ್ಕೆ ಸತ್ಯಲೋಕ ಎಂಬ ಹೆಸರು ಸುರಮತಿ ಇಂದ್ರನ ಅಮರಾವತಿಯು ಸತ್ಯಲೋಕದ ಕೆಳಗಡೆ ಇರುವದು ಅಲ್ಲಿ ದೇವಗಣ, ಗಂಧರ್ವ, ಲೋಕಪಾಲರು, ಮೂವತ್ತೂರು ಕೋಟಿ ದೇವತೆಗಳು, ಹದಿನಾಲ್ಕು ಲೋಕಗಳು ಹೇಮಗಿರಿಯು ಇವುಗಳೆಲ್ಲ ಆಶ್ರಯ ಪಡೆದಿರುವವು

ಮತ್ತೂ ಆ ಸ್ವರ್ಗಲೋಕದಲ್ಲಿ—

ಕಾಮಧೇನುಗಳ ಹಿಂಡುಗಳು ಗುಂಪುಗಟ್ಟಿ ತಿರುಗುವವು, ಕಲ್ಪವೃಕ್ಷಗಳ ವನಗಳು ದಟ್ಟಾಗಿ ಬೆಳೆದುನಿಂತಿವೆ ಅಲ್ಲಲ್ಲಿಗೆ ಅಮೃತದಿಂದ ತುಂಬಿದ ಸರೋವರಗಳು ಸೂಸಿ ಕೋಡಿ ಹರಿಯುವವು ಅಲ್ಲಿ ಚಿಂತಾಮಣಿಯೆಂಬ ರತ್ನದ ಕಲ್ಲುಗಳು ಎತ್ತೆತ್ತಲೂ ತೋರುವವು ನವರತ್ನಗಳು, ಪರಿಸಗಲ್ಲಿನ ಖಣಿಗಳು ಇವೆಲ್ಲ ಆ ಸುರಲೋಕದಲ್ಲಿ ವಿಪುಲವಾಗಿವೆ ನೆಲವೆಲ್ಲ ಬಂಗಾರದ ನೆಲಗಟ್ಟಿನಿಂದಾಗಿ ಥಳ ಥಳ ಹೊಳೆಯುವದು, ರಮಣೀಯ ದೃಶ್ಯವು ನವರತ್ನಗಲ್ಲುಗಳ ಮೂಲಕ ಹೆಚ್ಚು ಮನೋಹರ ತೋರುವದು ಅಲ್ಲಿಯ ಎಲ್ಲರೂ ಸತತವೂ ಅಮೃತ ಭೋಜನವನ್ನೇ ಭುಂಜಿಸುವರು, ದಿವ್ಯ ಪರಿಮಳ ವಸ್ತುಗಳೂ, ದಿವ್ಯ-ಹೂಪುಷ್ಪಗಳೂ ಇವಕ್ಕೆ ಅಲ್ಲಿ ಕೊರತೆಯಿಲ್ಲ. ಅಲ್ಲಿಯವರಿಗೆ ಪ್ರಾಯವು ಸತತವಾಗಿ ಇರುವದಲ್ಲದೆ ರೋಗ-ರುಜಿನುಗಳ ಬಾಧೆ ಅವರಿಗೆಂದಿಗೂ ಇರುವದಿಲ್ಲ ಮುಪ್ಪು-ಸಾವುಗಳು ಎಂದೂ ಅಲ್ಲಿ

ಯುವರ ಸನಿಹಕ್ಕೆ ಬಾರವು ಮತ್ತು ಆ ಸ್ವರ್ಗೀಯರೆಲ್ಲ ಒಬ್ಬರಿಂದೊಬ್ಬರು ಒಳ್ಳೇ ಸುಂದರರು ಚತುರತೆಯಲ್ಲಿ ಎಲ್ಲರೂ ಮಿಗಿಲಾದವರು ಅವರಲ್ಲಿ ಧೀರತೆ, ಉದಾರತೆ, ಶೂರತ್ವಗಳು ಅವರವರ ಯೋಗ್ಯತೆ ಮೀರಿ ಕಂಡು ಬರುವವು ಅವರು ದಿವ್ಯ ದೇಹಿಗಳು, ಪ್ರಕಾಶಿತ ಸ್ವರೂಪರು, ಮಿಂಚಿನ ಕಾಂತಿಯಂತೆ ಹೊಳಪುಳ್ಳವರು ಯಶ, ಕೀರ್ತಿ, ಪ್ರತಾಪಗಳ ಹೆಚ್ಚಳಿಕೆಯು ಅಲ್ಲಿಯವರಲ್ಲಿ ಮೇರೆ ಮೀರಿದೆ,

ಇಂಥ ಸೊಬಗಿನ ಸ್ವರ್ಗ ಭೂಮಿಯಲ್ಲಿ ಎಲ್ಲ ದೇವತೆಗಳ ವಾಸ್ತವ್ಯ ವಿರುವದು ಆ ಸ್ಥಳದ ಮಹಿಮೆಯನ್ನು ಎಷ್ಟು ಬಣ್ಣಿಸಿದರೂ ಕಡಿಮೆಯೇ ಆಗಿರುವದು

ಇನ್ನು ಅಲ್ಲಿಯ ದೇವತೆಗಳಲ್ಲಿ ಬೇಕಾದ ದೇವತೆಯನ್ನು ಭಜಿಸುವವರು ಆ ದೇವನ ಲೋಕದಲ್ಲಿಯೇ ವಾಸವಾಗಿರುವರು. ಇದು ಸಲೋಕತಾ ಎಂಬ ಮುಕ್ತಿಯ ಲಕ್ಷಣವಾಗಿರುವದು

ಸಲೋಕತೆಯೆಂಬ ಮುಕ್ತಿಯು ಇಷ್ಟ ದೇವತೆಯ ಲೋಕದಲ್ಲಿ ಇರುವದು. ಅದಕ್ಕೆ ಸಮೀಪದಲ್ಲಿಯೇ ವಾಸವಾಗಿರುವದು ಸಮೀಪತಾ ಮುಕ್ತಿಯು ಇಷ್ಟದೇವನ ಸ್ವರೂಪವನ್ನು ಹೊಂದಿ ಮುಕ್ತಿ ಪಡೆಯುವದೇ ಸರೂಪತಾ ಮುಕ್ತಿಯು ಇದು ಮೂರನೆಯ ಮುಕ್ತಿಯು. ಈ ಮುಕ್ತಿ ಪಡೆದವನು ದೇಹದಿಂದ ದೇವ ಸ್ವರೂಪನಾಗುವನೇ ಹೊರತು ಶ್ರೀವತ್ಸ, ಕೌಸ್ತುಭ, ಲಕ್ಷ್ಮಿ ಈ ಚಿಹ್ನಗಳಿಲ್ಲದವನಾಗುವನು. ಇದೇ ಈ ಮುಕ್ತಿ ಲಕ್ಷಣವು ಅವನ ಪುಣ್ಯ ಸಂಚಯ ಮುಗಿವ ವರೆಗೂ ಸುಕೃತ ಫಲ ಭೋಗಿಸುವನು ಪುಣ್ಯ ತೀರಿದ ಕೂಡಲೇ ಆ ಸ್ಥಾನದಿಂದ ಎಸೆಯಲ್ಪಡುವನು ಅಂದರೆ ಮೃತ್ಯು ಲೋಕಕ್ಕೆ ಮರಳುವನು ಆದ್ದರಿಂದ ಈ ಮೊದಲಿನ ಮೂರು ಮುಕ್ತಿಗಳೆಲ್ಲ ಸ್ಥಿರವಾದವಲ್ಲ ಕೊನೆಯದಾದ ಸಾಯುಜ್ಯ ಮುಕ್ತಿಯೇ ಶಾಶ್ವತವಾದದ್ದು ಇದರ ಲಕ್ಷಣ ಶ್ರವಣಮಾಡಿರಿ

ಕಲ್ಪಾಂತ್ಯವೊದಗಿ ಜಗತ್ತೆಲ್ಲ ಪ್ರಳಯ ಹೊಂದಿ ಬ್ರಹ್ಮಾಂಡವು ನಾಶವಾಗುವಂತೆ ತೋರಿ ದೇವತೆಗಳಿಗೆ ನಿಲುಮೆ ದೊರೆಯದಿದ್ದಾಗ ನಾನು ಪಡೆಯುವ ಮುಕ್ತಿ ಅದೆಂತು ಉಳಿಯುವದು? ಆಗ ಇವೆಲ್ಲವನ್ನು ಮೀರಿ

ನಿಲ್ಲುವನೆಂದರೆ ನಿಶ್ಚಲನೂ ನಿರ್ಗುಣನೂ ಆದ ಪರಮಾತ್ಮನೊಬ್ಬನು ಮಾತ್ರ. ಅವನಲ್ಲಿಯ ಮುಕ್ತಿಯೇ ನಿರ್ಗುಣಮುಕ್ತಿಯು. ಅದು ಅಚಲ ವಾದದ್ದು. ಅದುವೇ ಸಾಯುಜ್ಯ ಮುಕ್ತಿಯೆಂದು ತಿಳಿಯತಕ್ಕದ್ದು. ಆ ನಿರ್ಗುಣ ಮುಕ್ತಿಯಲ್ಲಿ ಅದಲ್ಲದೆ ಇನ್ನೊಂದಿಲ್ಲ ಅದೇ ಸಾಯುಜ್ಯತೆ, ನಿರ್ಗುಣ ಭಕ್ತಿಯೆನ್ನಿಸಿದ ಸ್ವರೂಪತೆಯೇ ಸಾಯುಜ್ಯ ಮುಕ್ತಿಯು, ಸಗುಣ ಭಕ್ತಿಯು ಚಲಿತವಾದುದು. ನಿರ್ಗುಣ ಭಕ್ತಿಯು ನಿಶ್ಚಲವಾದುದು.

೪ನೇ ದಶಕ ಮುಗಿದುದು.



## ಜಯ ಜಯ ರಘುವೀರ ಸಮರ್ಥ (ಮಂತ್ರದಶಕ)

## ೫ನೆಯ ದಶಕ

ಶ್ರೀ ರಾಮ || ೧. ಗುರು ನಿಶ್ಚಯ || ಪೂರ್ಣಕಾಮನೆ ! ಪರಮ ಪುರುಷನೇ ! ಆತ್ಮಾರಾಮನೇ! ಸದ್ಗುರುವೇ ಅನಿರ್ವಾಚ್ಯನೇ ! ನಿನ್ನ ಮಹಿಮೆಯನ್ನು ವರ್ಣಿಸುವದಕ್ಕೆ ನಾನು ಅಸಮರ್ಥನು ಯೋಗಿಗಳಿಗೆ ನಿಜಧಾಮನೂ, ಶಂಕರನ ವಿಶ್ರಾಂತಿ ಸ್ಥಾನವೂ, ವೇದ ಶಾಸ್ತ್ರಗಳಿಗೆ ಅಗಮ್ಯವೂ ಆಗಿರುವ ಬ್ರಹ್ಮನೇ ನಿಮ್ಮ ಕೃಪೆಯಾಗಲು ಶಿಷ್ಯನು ಉದ್ಧೃತಗುವನು ಅವನು ಸಂಸಾರ ಜಂಜಡರಲ್ಲಿ ಸಿಕ್ಕು ಬೀಳಲಾರನು ಈಗ ಶ್ರೀ ಸ್ವಾಮೀ ಪ್ರಸಾದದಿಂದ ಗುರು ಶಿಷ್ಯರ ಲಕ್ಷಣ ಹೇಳುವೆನು ಅದಕ್ಕಾಗಿ ಮುಮುಕ್ಷುಗಳು ಶಿಷ್ಯನ ಅಧಿಕಾರವನ್ನು ತಮ್ಮಲ್ಲಿ ತಂದುಕೊಂಡು ಸದ್ಗುರುವಿಗೆ ಶರಣು ಹೋಗಬೇಕು

ಗುರುವು ಬ್ರಾಹ್ಮಣನಾಗಿರಬೇಕು ಒಂದು ವೇಳೆ ಆತನು ಕ್ರಿಯಾಹೀನನಾಗಿದ್ದರೂ ಶಿಷ್ಯರು ಆವನಿಗೆ ಅನನ್ಯ ಭಾವದಿಂದ ಮೊರೆಹೋಗಬೇಕು ಸಾಕ್ಷಾತ್ ನಾರಾಯಣನು ಒಬ್ಬ ಬ್ರಾಹ್ಮಣನ ನಿಮಿತ್ತವಾಗಿ ಅವತಾರ ತಾಳಬೇಕಾಯಿತು ಆ ವಿಷ್ಣುವು ಬ್ರಾಹ್ಮಣನನ್ನು ಮನ್ನಿಸಿ ಶ್ರೀವತ್ಸಾಂಕಿತನಾದನೆಂದ ಮೇಲೆ ಉಳಿದವರ ಹೆಮ್ಮೆಯೇನು?

ಬ್ರಾಹ್ಮಣವಚನಗಳು ಆಧಾರಭೂತವಾದವು ಬ್ರಾಹ್ಮಣನಿಂದಲೇ ಶೂದ್ರನು ಬ್ರಾಹ್ಮಣತ್ವವನ್ನು ಪಡೆಯುವನು, ಆ ಬ್ರಾಹ್ಮಣನ ಮಂತ್ರದಿಂದಲೇ ಕಲ್ಲು-ಲೋಹಗಳಲ್ಲಿ ದೇವತ್ವವುಂಟಾಗುವದು ಉಪನಯನ ಸಂಸ್ಕಾರವಿಲ್ಲದವರೆಗೆ ಬ್ರಾಹ್ಮಣನು ಶೂದ್ರನಂತೆಯೇ ತಿಳಿಯಲ್ಪಡುವನು ಸಂಸ್ಕಾರವಾದ ನಂತರ ದ್ವಿಜನೆಂದೆನ್ನಿಸಿಕೊಳ್ಳುವನು ಬ್ರಾಹ್ಮಣನು ಎಲ್ಲರಲ್ಲಿಯೂ ಪೂಜ್ಯನೆಂದು ವೇದದ ಆಜ್ಞೆಯಿರುವದು ವೇದವಿರಹಿತ ಬ್ರಾಹ್ಮಣನು ಭಗವಂತನಿಗೆ ಅಪ್ರಿಯನು ಯೋಗಯಾಗಗಳೂ, ವ್ರತ-ದಾನಗಳೂ, ತೀರ್ಥಾಚರಣೆಯೂ, ಕರ್ಮ ಮಾರ್ಗಗಳೂ ಇವೆಲ್ಲವುಗಳು ನೆರವೇರಲು ಬ್ರಾಹ್ಮಣನ ಆವಶ್ಯಕತೆಯುಂಟು ವೇದಮೂರ್ತಿಮಂತನೆಂದರೆ ಬ್ರಾಹ್ಮಣನು ಭಗವಂತನೆಂದರೆ ಬ್ರಾಹ್ಮಣನು ಬ್ರಾಹ್ಮಣನ ಪ್ರಿಯ

ವಾಕ್ಯಗಳಿಂದಲೇ ಮನೋರಥವು ಸಿದ್ಧಿಸುವದು ಬ್ರಾಹ್ಮಣ ಪೂಜನದಿಂದ ಶುದ್ಧ ಹಾಗು ಸಾತ್ವಿಕ ವೃತ್ತಿಯುಂಟಾಗಿ ಭಗವಂತನಲ್ಲಿ ನಿಷ್ಠೆಯುಂಟಾಗುವದು, ಪ್ರಾಣಿಗಳಿಗೆ ಬ್ರಾಹ್ಮಣ ತೀರ್ಥದಿಂದಲೇ ಸದ್ಗತಿಯುಂಟು ಲಕ್ಷಭೋಜನ ಮಾಡಿಸುವವರು ಪೂಜ್ಯ ಬ್ರಾಹ್ಮಣರನ್ನೇ ಆಮಂತ್ರಿಸುವರು ಉಳಿದ ಜಾತಿಯವರನ್ನು ಯೋಜನೆ ಮಾಡುವದಿಲ್ಲ ಆದರೂ ದೇವನು ಭಾವನೆಗೆ ಮೆಚ್ಚುವನು ಇನ್ನೊಂದನ್ನು ಆತನು ಇಚ್ಛಿಸಲಾರನು ಇರಲಿ, ಬ್ರಾಹ್ಮಣರನ್ನು ದೇವತೆಗಳೂ ಕೂಡ ವಂದ್ಯರೆಂದೆಣಿಸುವರು ಅಂದ ಮೇಲೆ ಇನ್ನುಳಿದ ಮಾನವರ ಮಾತೇನು? ಒಂದು ವೇಳೆ ಬ್ರಾಹ್ಮಣನು ಮಂದಮತಿಯಾಗಿದ್ದರೂ ಅವನು ಜಗದ್ವಂದ್ಯನು ಅಂತ್ಯಜನೊಬ್ಬನಲ್ಲಿ ಶಬ್ದ ಪಾಂಡಿತ್ಯವಿದ್ದರೂ ಆತನು ಬ್ರಾಹ್ಮಣನ ಜೊತೆಗೆ ಪೂಜೆಕೊಳ್ಳಲು ಅರ್ಹನಲ್ಲ ಇನ್ನು ಪಾಷಂಡರೆಂಬವರಿರುವರು. ಅಂಥವರು ಬ್ರಾಹ್ಮಣ-ಅಂತ್ಯಜರಲ್ಲಿ ಭೇದವೆಣಿಸದೆ ಆ ಅಂತ್ಯಜನನ್ನು ಪೂಜಿಸಿದ್ದಾದರೆ ಅದು ಲೌಕಿಕಕ್ಕೆ ವಿರೋಧವಾಗುವದು ಹಾಗೆ ಮಾಡುವದು ವೇದಬಾಹ್ಯ ಕರ್ಮವೆನ್ನಿಸುವದು ಇದಕ್ಕಾಗಿಯೇ ಅವರನ್ನು ಪಾಖಂಡಿಗಳೆಂದು ಕರೆಯುವರು.

ಹರಿಹರದಾಸರೆಂದೆನ್ನಿಸಿಕೊಳ್ಳುವ ಭಕ್ತರು ಬ್ರಾಹ್ಮಣರಲ್ಲಿ ನಂಬುಗೆಯುಳ್ಳವರು ಬ್ರಾಹ್ಮಣರು ಬಹು ಜನರನ್ನು ಭಜನೆಗೆ ಮೆಚ್ಚಿಸಿ ಪುನೀತರನ್ನಾಗಿ ಮಾಡಿದರು. ಇನ್ನು ಬ್ರಾಹ್ಮಣನಿಂದಲೇ ದೇವಾಧಿದೇವನನ್ನು ಹೊಂದುವಂತಾದರೆ ಸದ್ಗುರುಗಳನ್ನು ಆದೇಕೆ ನಂಬಬೇಕು ? ಎಂಬ ಮಾತಿಗೆ ಹೇಳುವದಾದರೆ 'ಸದ್ಗುರುವಿನ ಹೊರತು ಬ್ರಹ್ಮಜ್ಞಾನ ಸಿಗಲಾರದು' ಎಂಬ ಮಾತನ್ನು ನೆನಪಿಡತಕ್ಕದ್ದು ಬ್ರಾಹ್ಮಣನು ಸ್ವಧರ್ಮದಲ್ಲಿಯೂ ಕರ್ಮದಲ್ಲಿಯೂ ಪೂಜ್ಯನು ಆದರೆ ಜ್ಞಾನ ದೊರಕಿಸಿ ಕೊಡುವವನು ಸದ್ಗುರುವು ಮಾತ್ರ ತಾನಾಗಿರುವನು ಅವನ ಬೋಧೆಯಿಲ್ಲದೆ ಬ್ರಹ್ಮಜ್ಞಾನ ದೊರೆಯಲಾರದು, ಜನನ-ಮರಣಗಳ ಜಾಲವು ದೂರಾಗಲಾರದು ಇನ್ನೊಂದು ಯಾವ ಜ್ಞಾನವೂ ಸದ್ಗುರುವಿನ ಹೊರತು ಪ್ರಾಪ್ತವಾಗಲಾರದು ಗುರುವನಿಂದ ಜ್ಞಾನವನ್ನು ಸಂಪಾದಿಸದ ಮೂಢನು ನೀರಿನ ಪ್ರವಾಹದಲ್ಲಿ ಮುಳುಗಿ ಹೋಗುವವನ ಗತಿಯನ್ನು ಹೊಂದುವನು.

ಇನ್ನು ಜ್ಞಾನವಿಲ್ಲದೆ ಮಾಡಿದ ಕರ್ಮ ಕ್ರಿಯೆಗಳೆಲ್ಲ ಜನನ ಮೃತ್ಯುವಿನ ಪುನರಾವೃತ್ತಿಗೆ ಮೂಲವಾಗುವವು ಆದ್ದರಿಂದ ಸದ್ಗುರು ಪಾದಗಳನ್ನು ದೃಢವಾಗಿ ನಂಬತಕ್ಕದ್ದು. ದೇವನನ್ನು ಕಾಣ ಬಯಸುವವನು ಸತ್ಸಂಗ ವನ್ನು ಹಿಡಿಯಬೇಕು ಸತ್ಸಂಗವಿಲ್ಲದೆ ಆತನಿಗೆ ದೇವನ ಪ್ರಾಪ್ತಿಯಾಗ ಲಾರದು ಅಜ್ಞಾತೆಯಿಂದ ಗುರುವಿನನ್ನು ಬಿಟ್ಟು ಕ್ರಿಯಾ-ಕರ್ಮಗಳನ್ನು ಸಾಧಿಸಿಕೊಳ್ಳಹೋಗಲು ಆತನ ಕ್ರಿಯೆಯ ಫಲಗಳೆಲ್ಲ ನಿರರ್ಥಕವಾಗುವವು

ಇನ್ನು ಸದ್ಗುರುವಿನ ಸಂಬಧದಿಂದ ಪಡೆಯಬಹುದಾದ ಫಲಗಳಿಗೆ ಆವಶ್ಯಕ ಕ್ರಿಯೆಗಳು–

ಕಾರ್ತಿಕ–ಮಾಘ ಸ್ನಾನಗಳು, ವ್ರತ-ಉದ್ಯಾಪನ-ದಾನ ಮುಂತಾದ ವುಗಳು, ಗೋರಾಂಜನ-ಧೂಮ್ರಪಾನಗಳು, ಪಂಚಾಗ್ನಿ ಸಾಧನಕ್ರಿಯೆ, ಹರಿಕಥಾಪುರಾಣಶ್ರವಣಗಳು, ತೀರ್ಥಾಚರಣೆಯು, ದೇವತಾರ್ಚನೆಯು, ಸ್ನಾನ–ಸಂಧ್ಯಾದಿ ಕ್ರಿಯೆಗಳು, ದರ್ಭಾಸನ-ಗಂಧ–ಮಾಲೆ-ಗೋಪೀಚಂದನ ಮುದ್ರಾಧಾರಣ- ಅರ್ಘ್ಯಪಾತ್ರೆ ಮುಂತಾದ ಪೂಜೆಯ ಉಪಕರಣಗಳು, ಭೂಷಣಪ್ರದವಾದ ಇತರ ಸಾಹಿತ್ಯಗಳು, ಗಂಟೆ-ಸ್ತೋತ್ರ-ಸ್ತವನ-ಸ್ತುತಿ ಆಸನ-ಮುದ್ರಾ–ಧ್ಯಾನ-ಪ್ರದಕ್ಷಿಣೆ-ನಮಸ್ಕಾರ ಮುಂತಾದ ಷೋಡಶೋಪ ಚಾರ ಪೂಜೆಯ ವಿಧಿಗಳು ಇವೆಲ್ಲವುಗಳ ಬಳಿಕೆ-ತಿಳುವಳಿಕೆಗಳಿಗಾಗಿ ಸದ್ಗುರುವಿನ ಬೋಧೆಯು ಅಗತ್ಯವಾಗಿದೆ. ಇವೂ ಅಲ್ಲದೆ—

ಪಂಚಾಯತನ ಪೂಜೆ, ಪಾರ್ಥಿವಪೂಜೆ, ಲಕ್ಷದಳಾರ್ಚನೆ, ಬಿಲ್ವ ದಳಫಲಗಳ ಸಮರ್ಪಣೆ, ಮುಂತಾದ ಪ್ರಸಂಗದಲ್ಲೆಲ್ಲ ಗುರುವಿನ ಮಾರ್ಗ ಅವಲಂಬಿಸಬೇಕಾಗುವದು

ಉಪೋಷನೆ, ನೇಮ-ನಿಷ್ಠೆಗಳು, ಪ್ರಯತ್ನಪೂರ್ವಕಮಾಡುವ ಕ್ರಿಯೆ ಕರ್ಮಗಳು, ಇವೆಲ್ಲವುಗಳ ಫಲವು ಸದ್ಗುರುವಿಲ್ಲದೆ ಸಾಧ್ಯವಿಲ್ಲ

ಯಜ್ಞ ಮೊದಲಾದ ಕರ್ಮಗಳನ್ನು ಹೃದಯದಲ್ಲಿ ಬಲವತ್ತರವಾದ ಫಲಾಶೆಯನ್ನಿಟ್ಟುಕೊಂಡು ಸದ್ಗುರುವನ್ನು ಬಿಟ್ಟು ಕೈಕೊಂಡವನು ತಾನಾ ಗಿಯೇ ದಾಸ್ಯ ಜನ್ಮದಲ್ಲಿ ಜನಿಸುವನು

ಬಹು ಪ್ರಯಾಸದಿಂದ ಚತುರ್ದಶ ವಿದ್ಯೆಗಳನ್ನು ಸಂಪಾದಿಸಿಕೊಂಡ ವನೂ, ರಿದ್ಧಿ–ಸಿದ್ಧಿ ದೆಸೆಗಳನ್ನು ಹೊಂದಿದವನೂ ಇವರು ಸದ್ಗುರು

ಕೃಪೆಗೆ ಪಾತ್ರರಾಗದಿದ್ದರೆ ಅವರಿಗೆ ಸ್ವಹಿತವೆಂದಿಗೂ ಸಾಧಿಸಲಾರದು. ಇಷ್ಟೇ ಅಲ್ಲ ಅಂಥವರಿಗೆ ಯಮಪುರಿಯ ಬಾಧೆ ಎಂದಿಗೂ ತಪ್ಪಲಾರದು,

ಜ್ಞಾನ ಪ್ರಾಪ್ತಿಯಿಲ್ಲದ ಮಾನವನಿಗೆ ಜನನ–ಮರಣ–ಚಕ್ರ ತಪ್ಪಲಾರದು. ಗುರು ಕೃಪೆ ಪಡೆಯದವನಿಗೆ ನರಕವೂ ಗರ್ಭವಾಸ ಕಷ್ಟವೂ ಬಿಡಲಾರವು

ಸದ್ಗುರುವಿನ ಕೃಪೆಯಿಲ್ಲದೆ ಧ್ಯಾನ-ಧಾರಣಾದಿಗಳೂ, ಬ್ರಹ್ಮಜ್ಞಾನ ಪಡೆವ ಹಿರಿಯಾನೆಯೂ ನಿಷ್ಫಲವು ಗುರು ಕೃಪೆಯಿಲ್ಲದೆ ಹಲವು ಹಂಬಲಕ್ಕೆ ಆತುರ ಪಡುವವನು ಕುರುಡನು ಆಳವಾದ ತಗ್ಗಿನಲ್ಲಿ ಬೀಳುವಂತೆ ಪತಿತನಾಗುವನು ನಿಧ್ಯುತ್ಪಾಪಕರು ಕಣ್ಣಿಗೆ ಅಂಜನವನ್ನು ಹಚ್ಚಿಕೊಂಡು ಭೂಗತ ಧನವನ್ನು ಕಂಡು ಹಿಡಿಯುವನು. ಅಂತೆಯೇ ಗುರುವಿನ ಕೃಪೆಯೆಂಬ ಅಂಜನ ಪಡೆದವನು ಆ ಕೂಡಲೇ ಜ್ಞಾನ ನಿಧಿಯನ್ನು ಕಂಡುಕೊಳ್ಳುವನು

ಒಟ್ಟಿನ ಮೇಲೆ ಸದ್ಗುರುವಿನ ಹೊರತು ಜೀವಿಸುವವನ ಜನ್ಮವು ನಿಷ್ಫಲವು ಆತನು ದುಃಖಗಳ ಮಡುವುಗಳಲ್ಲಿ ಬಿದ್ದು ತಳಮಳಗೊಳ್ಳುವನು

ಸದ್ಗುರುವಿನ ಅಭಯುಕರದಿಂದ ದೇವಪ್ರಸನ್ನತೆಯಾಗುವದು ಅಪಾರ ಸಂಸಾರ ತಾಪಗಳೆಲ್ಲ ದೂರಾಗುವವು.

ಪೂರ್ವದಲ್ಲಿ ಅದೆಷ್ಟೋ ಮಹಾನ್ ಮಹಾ ಸಾಧು-ಸಂತರು, ಮಹಂತ–ಮುನೀಶ್ವರರು ಜ್ಞಾನ–ವಿಜ್ಞಾನ ವಿಚಾರಗಳಿಂದ ಪ್ರಕಾಶಮಾನರಾಗಿ ಹೋದರು ಅವರೆಲ್ಲ ಸದ್ಗುರು ಕೃಪೆಯ ಪ್ರಭಾವದಿಂದಲೇ ಸದ್ಗತಿ ಪಡೆದರು

ಶ್ರೀ ರಾಮ, ಶ್ರೀ ಕೃಷ್ಣರು ಅವತಾರಿಕರಾದಾಗ್ಯೂ ಅವರು ಗುರು ಸ್ಮರಣೆಯಲ್ಲಿ ತತ್ಪರರಾಗಿದ್ದರು ಸಿದ್ಧರು, ಸಾಧುಗಳು, ಸಂತರು ಇವರೆಲ್ಲ ಗುರುವಿನ ದಾಸ್ಯತ್ವವನ್ನು ಅಂಗೀಕರಿಸಿ ಜನ್ಮಸಾರ್ಥಕಗೊಳಿಸಿಕೊಂಡರು

ಸಕಲ ಚರಾಚರ ಸೃಷ್ಟಿಯ ಚಾಲಕರೆನ್ನಿಸಿದ ತ್ರಿಮೂರ್ತಿಗಳು ಸಹ ಸದ್ಗುರು ಪದ ಪಂಕದ ಮಹತ್ವವನ್ನು ಮನ್ನಿಸಿದರು ಇದೆಲ್ಲವೂ ಅಂತಿರಲಿ

ಮೋಕ್ಷ ಬಯಸುವವರು ಸದ್ಗುರುವಿನ ಹೊರತು ಕಲ್ಪಾಂತ್ಯದಲ್ಲಿಯೂ ಕೂಡ ಮೋಕ್ಷ ಪಡೆಯಲಾರದು

ಇನ್ನು ಸದ್ಗುರುವೆಂದರೆ ಆತನು ಎಂಥವನು? ಆತನು ಉಳಿದ ಹಲವು ಗುರುಗಳಂತೆ ಇರಲಾರನು ಆತನ ಕೃಪೆಯಿಂದ ಸ್ಮರಿಸಿದವರಲ್ಲಿ ಶುದ್ಧ ಜ್ಞಾನವು ಪ್ರಕಾಶಗೊಳ್ಳುವದು

ಇನ್ನು ಮುಂದಿನ ಸಮಾಸದಲ್ಲಿ ಸದ್ಗುರುವಿನ ಲಕ್ಷಣಗಳನ್ನು ನಿರೂಪಿಸಲಾಗುವದು ಶ್ರೋತೃಗಳು ಶ್ರವಣ ಮಾಡುವದು

ಶ್ರೀ ರಾಮ || ೨ ಗುರು ಲಕ್ಷಣ || ತನ್ನ ಕುಶಲತೆಯಿಂದ ಇಂದ್ರಜಾಲ ವಿದ್ಯೆಯನ್ನು ತೋರಿಸಿ ಮನರಂಜನೆಯನ್ನು ಉಂಟು ಮಾಡುವ ಗಾರುಡಿಗನು ಆ ವಿದ್ಯೆಯನ್ನು ಕಲಿಯುವವರಿಗೆ ಗುರುವೆಂದೆನ್ನಿನುವನು. ಆದರೆ ಅವನು ಮೋಕ್ಷ ದೊರಕಿಸಿ ಕೊಡುವ ಸದ್ಗುರುವಾಗಲಾರನು ಅದರಂತೆ ಕೂಡಿದ ಜನರಿಗೆ ಕಣ್ಕಟ್ಟಿನಿಂದ ಭ್ರಾಂತಗೊಳಿಸುವ, ಚಾಟಕ ಮಾಟಕ ವಿದ್ಯೆಯನ್ನು ತೋರಿಸುವ, ಅಸಂಭವನೀಯ ಹಲವು ಚಮತ್ಕೃತಿಗಳನ್ನು ತಿಳಿಸಿ ಹೇಳುವ, ಔಷಧಿಯ ಪ್ರಯೋಗಗಳನ್ನು ಹೇಳುವ, ಕಿಮಿಯಾ ವಿದ್ಯೆಯನ್ನು ವ್ಯಕ್ತ ಗೊಳಿಸುವ, ಕೇವಲ ದೃಷ್ಟಿ ಮಾತ್ರದಿಂದ ಇಚ್ಛಿತ ವಸ್ತುವನ್ನು ಪ್ರಾಪ್ತಮಾಡಿಕೊಡುವ, ಸಾಹಿತ್ಯ–ಸಂಗೀತ-ರಾಗ-ಗೀತ–ನೃತ್ಯ–ವಾದ್ಯ ಮುಂತಾದವುಗಳನ್ನು ಜನರಿಗೆ ಕಲಿಸುವ, ಭೂತ-ಪಿಶಾಚೋಚ್ಚಾಟನ ವಿದ್ಯೆಯನ್ನು ಬೋಧಿಸುವ ಒಟ್ಟಿನ ಮೇಲೆ ಹೊಟ್ಟೆಯಪಾಡಿಗಾಗಿ ಆವಶ್ಯಕವಿರುವ ಹಲವು ವಿದ್ಯೆ ಕಲೆಗಳನ್ನು ಕಲಿಸುವ ಹಲವು ಜನ ಗುರು ವರ್ಗದವರಿರುವರು ಆದರೆ ಮೋಕ್ಷವನ್ನು ದೊರಕಿಸಿ ಕೊಡುವ ಸಾಮರ್ಥ್ಯವು ಇವರಲ್ಲಿ ಯಾರಲ್ಲಿಯೂ ಇರದೆ ಕೇವಲ ಸದ್ಗುರುವೆನ್ನಿಸುವ ಒಬ್ಬನಲ್ಲಿ ಮಾತ್ರ ಇರುವದು ಹೀಗೆ ಮೋಕ್ಷ ದೊರಕಿಸಿ ಕೊಡುವ ನಿಜವಾದ ಗುರುವೇ ಸದ್ಗುರುವು ಇದಲ್ಲದೆ ಇನ್ನೂ ಹೇಳುವದಾದರೆ–

ತನ್ನ ಜಾತಿ ಕುಲಕ್ಕನುಸರಿಸಿ ಹೊಟ್ಟೆ ತುಂಬಿಕೊಳ್ಳುವ ಮಾರ್ಗ ಗಳಾದ ವ್ಯಾಪಾರ ಮುಂತಾದವುಗಳ ಬಗೆಗೆ ತಿಳಿಸಿ ಕೊಡುವವನೂ ಒಬ್ಬ ಗುರುವು, ಜನ್ಮ ನೀಡಿದ ತಾಯಿ–ತಂದೆಗಳೂ ತನ್ನ ಗುರುಗಳು ಅಹುದು ಗಾಯಿತ್ರಿಯ ಮಂತ್ರೋಪದೇಶ ಮಾಡುವವನೂ ಕುಲ ಗುರುವು ಆದರೆ ಈ ಎಲ್ಲ ಗುರುಗಳಿಂದ ಸದ್ಗುರುವು ಬೇರೆ ಇರುವ ನೆಂಬುದು ತಾತ್ವಿಕ ವಿಚಾರದಿಂದ ತಿಳಿಯುವದು ಆ ಸದ್ಗುರುವು ಜ್ಞಾನ ಬೋಧಿಸಿ ಭವಸಾಗರದಿಂದ ಉದ್ಧರಿಸುವನು. ಇದು ಮಾತ್ರ ಈಗ ಹೇಳಿದ ಗುರುಗಳಿಂದ ಸಾಧ್ಯವಿಲ್ಲ ಸದ್ಗುರುವು ಬ್ರಹ್ಮಜ್ಞಾನ ಬೋಧಿ ಸುವನಲ್ಲದೆ ಅಜ್ಞಾನ ತಮವನ್ನು ದೂರೀಕರಿಸುವನು ಜೀವ–ಶಿವಾತ್ಮರು ಗಳಲ್ಲಿ ಐಕ್ಯತೆಯನ್ನುಂಟು ಮಾಡುವನು ಜೀವ-ಶಿವರ ಬಗೆಗೆ ಭಕ್ತನಲ್ಲಿ ದ್ವೈತ ಭಾವವುಂಟಾಗಲು ದೇವ—ಭಕ್ತರುಗಳಲ್ಲಿ ಐಕ್ಯವನ್ನುಂಟು ಮಾಡು ವನು ಭವವೆಂಬ ಹುಲಿಯು ಆಕಳು ಕರುವಿನ ಮೇಲೆ ಹಾರಿ ತುಂಡರಿ ಸುವದನ್ನು ಕಂಡು ಶೀಘ್ರನಾಗಿ ಅದನ್ನು ಮುಕ್ತ ಮಾಡುವವನೇ ಸದ್ಗು ರುವು ಮಾನವ ಪ್ರಾಣಿಯು ಮಾಯಾ ಜಾಲದಲ್ಲಿ ಸಿಕ್ಕುಬಿದ್ದು ಸಂಸಾರ ತಾಪದಿಂದ ದು ಖವನ್ನು ಹೊಂದುವದನ್ನು ದೂರ ಮಾಡಿ ಮುಕ್ತನನ್ನಾಗಿ ಮಾಡುವವನೇ ಸದ್ಗುರುವು ವಾಸನೆಯೆಂಬ ಹೊಳೆಯ ಮಹಾಪೂರಿನಲ್ಲಿ ಮುಳುಗಿ ಜೀವ ಸಂದೇಹಗೊಂಡ ಪ್ರಾಣಿಯನ್ನು ತಾನು ಹಾರಿ ಉತ್ತರಿ ಸುವವನೇ ಸದ್ಗುರುವು ಅತ್ಯಂತ ಕಷ್ಟಮಯ ಗರ್ಭವಾಸವನ್ನೂ, ಇಚ್ಛೆಯೆಂಬ ಬಂಧನವನ್ನೂ ಜ್ಞಾನ ನೀಡಿ ಶೀಘ್ರವೇ ಪರಿಹಾರ ಮಾಡುವವನೇ ಸದ್ಗುರು ಸ್ವಾಮಿಯು

ಶಬ್ದ ಶಬ್ದಗಳಲ್ಲಿಯ ಅಂತರವನ್ನು ಇಲ್ಲದಂತೆ ಮಾಡಿ ಸತ್ವ ಸಾರವಾದ ವಸ್ತು ದರ್ಶನವನ್ನು ಮಾಡಿಸುವ ಅನಾಥರ ಪ್ರೇಮದ ಗುರುವೇ ಸದ್ಗುರುವು.

ತನ್ನ ಸದ್ಬೋಧನೆಯಿಂದ ಜೀವನಿಗೆ ಬ್ರಹ್ಮತ್ವವನ್ನುಂಟು ಮಾಡುವ ಹಾಗು ಸಂಸಾರ ತಾಪವನ್ನು ನಿವಾರಿಸುವ ಗುರುವೇ ಸದ್ಗುರುವು

ವೇದಗಳ ಮಥಿತಾರ್ಥವನ್ನು ತೆಗೆದು ಪ್ರಿಯ ವಾಕ್ಯಗಳಿಂದ ಪುತ್ರ ವಾತ್ಸಲ್ಯ ಬೀರಿ ಶಿಷ್ಯರ ಕಿವಿಗಳಲ್ಲಿ ತುಂಬುವ ಗುರುವೇ ಸದ್ಗುರುವು

ವೇದಗಳಿಂದಲೂ ಶಾಸ್ತ್ರಗಳಿಂದಲೂ ಅನುಭವದಿಂದಲೂ ತಿಳಿದು ಐಕ್ಯ ರೂಪವಾದ ನಿಶ್ಚಿತ ಅನುಭವವನ್ನು ತಂದುಕೊಡುವ ಗುರುರಾಯನೇ ಸದ್ಗುರುವು

ಶ್ರೋತೃಗಳ ಸಂದೇಹವನ್ನೆಲ್ಲ ಸುಟ್ಟು ಬಿಡುವವನೂ, ಸ್ವಧರ್ಮಾಚರಣ ನಿರತನೂ, ವೇದ ವಾಕ್ಯ ವಿಗಹಿತ ವಾದಮಾಡದವನೂ ಸದ್ಗುರುವು

ವೇದ ಶಾಸ್ತ್ರಗಳನ್ನು ಹೊರತು ಪಡಿಸಿ ತನ್ನ ಮನಕ್ಕೊಪ್ಪುವ ಆಚರಣೆಗಳನ್ನು ಆಚರಿಸುವ ಗುರುವು ಗುರುವಲ್ಲ ಆತನು ವಿಷಯ ಲೋಲಂಗತ ಭಿಕ್ಷುಕನು

ಶಿಷ್ಯನಿಗೆ ಸಾಧನವನ್ನು ಬೋಧಿಸದ ಹಾಗು ಅವನಿಗೆ ಇಂದ್ರಿಯ ದ ಮನವನ್ನು ಮಾಡಗೊಡದ ಗುರುಗಳು ವೆಗ್ಗಳಾಗಿ ದೊರೆತರೂ ಅಂಥ ವರನ್ನು ತಿರಸ್ಕರಿಸತಕ್ಕದ್ದು ನಿಜಜ್ಞಾನ ಬೋಧಿಸಿ ಅಜ್ಞಾನವನ್ನು ನಿರ್ಮೂಲ ಮಾಡುವವನೂ, ಇಂದ್ರಿಯ ದಮನವನ್ನು ಪ್ರತಿಪಾದಿಸುವ ವನೂ ಸದ್ಗುರುವು

ಶಿಷ್ಯರಿಂದ ದ್ರವ್ಯ ತೆಗೆದುಕೊಂಡು ಅವರ ಅಂಕಿತನಾಗುವದೂ, ಅವರ ಮನಸ್ಸಿಗೆ ಅವಶ್ಯಕವಾದವನ್ನು ಹೇಳುವದೂ ಹೀಗೆ ಆಶೆಯ ದಾಸನೂ ದಾಕ್ಷಿಣ್ಯ ವೃತ್ತಿಗೊಳಗಾದವನೂ ಆದಂಥ ಗುರುವು ಅತಿ ನೀಚನು, ಕಳ್ಳನು, ಪಾಪಿಯು, ಮತ್ತು ಧನಲೋಭಿಯು ಎಂದು ತಿಳಿಯ ತಕ್ಕದ್ದು ದುರಾಚಾರಿಯೂ ಇನ್ನೊಬ್ಬರ ದಾಕ್ಷಿಣ್ಯಕ್ಕೊಳಗಾದವನೂ ಹಾಗು ಗನ್ನ ಗತಕನೂ ಆಗಿರುವ ವೈದ್ಯನು ರೋಗಿಗಳ ಸರ್ವಸ್ವವನ್ನು ಹಾಳು ಮಾಡುವನು ಅದರಂತೆ ದೇವನನ್ನು ದೂರೀಕರಿಸಿ ಮುರ್ವತ್ತಿನಿಂದ ಶಿಷ್ಯನನ್ನು ಕೀಳ್ತರಕ್ಕೆಳೆಯುವ ಗುರುವು ನಿರುಪಯುಕ್ತನು ನಿರ್ಮಲ ಬ್ರಹ್ಮಜ್ಞಾನಿಯೂ, ಬಾಹ್ಯ ನಡೆವಳಿಯ ನಿರ್ಮಲ ಮಾರ್ಗ ತೋರಿಸುವ ಸಾಧನಯುತನೂ ಆಗಿರುವ ಸದ್ಗುರುವು ನಿಜಸುಖದಾತನು ಅಂಥ ಗುರುವನ್ನೇ ನಿರೀಕ್ಷಿಸತಕ್ಕದ್ದು ಹೊರ ನೋಟವನ್ನು ತೋರಿಸಿ ಕಿವಿಯಲ್ಲಿ ಮಂತ್ರವನ್ನು ಹೇಳುವದು ಇದಕ್ಕಿಂತಲೂ ಹೆಚ್ಚಿನ ತಿಳುವಳಿಕೆಯಿಲ್ಲದ ಪಾಮರ ಗುರುವು ತಾನೇ ದೇವನಿಂದ ಅಂತರಿಸಿ ಹೋಗುವನು.

ಗುರು ಮುಖ, ಶಾಸ್ತ್ರಾಧ್ಯಯನ ಹಾಗು ಸ್ವಾನುಭವ ಈ ಮೂರೂ ಅನುಭವಗಳು ಸದ್ಗುರು ಒಬ್ಬನಲ್ಲಿ ಮಾತ್ರ ಒಟ್ಟಾಗಿರುವವು ಮುಮುಕ್ಷುಗಳು ಅಂಥಲ್ಲಿಯೇ ಮಾತ್ರ ಅತ್ಯಾದರದಿಂದ ಶರಣು ಹೋಗಬೇಕು.

ಅದ್ವೈತ ಬೋಧಿಸುವಂಥವನೂ, ಅನುಪಮ ವಕ್ತೃತ್ವವುಳ್ಳವನೂ, ಆಗಿದ್ದರೂ ವಿಷಯಾಸಕ್ತನಾದ ಗುರುವಿನಿಂದ ಏನೊಂದು ಸಾರ್ಥಕವಾಗಲಾರದು

ನಿರೂಪಣೆಯ ಸಮಯದಲ್ಲಿ ಆ ಪ್ರಸಂಗಕ್ಕನುಸರಿಸಿ ತನ್ನ ಪ್ರೀತಿಯ ವಿಷಯವನ್ನೇ ನಿರೂಪಣ ಮಾಡುವವನೂ ತನ್ನಲ್ಲಿಯೇ ನಿಶ್ಚಿತ ಮತವಿಲ್ಲದವನೂ ಗುರುವಾಗಲಾರನು ಉಪದೇಶ ಮಾಡುವ ಸಾಮರ್ಥ್ಯವಿದೆ, ಮಾತಿನ ಜಾಣ್ಮೆಯಿದೆ ಆದರೆ ತನ್ನಲ್ಲಿ ಹಲವು ಚಮತ್ಕಾರ ಮಾಡುವ ಸಾಮರ್ಥ್ಯಸಿದ್ಧಿ ಎಂದು ಲಭಿಸುವದು? ಈ ಪ್ರಕಾರ ಅಂತರಾಶೆಯಿಂದ ಮನಸನ್ನು ಅಸ್ವಸ್ಥವಾಗಿರಿಸಿಕೊಂಡ ಗುರುವಿನಿಂದ ಏನೊಂದು ಉಪಯೋಗವಿಲ್ಲ ಮೊದಲಿನ ಕಾಲದಲ್ಲಿ ದೊಡ್ಡ ದೊಡ್ಡ ಮತಿವಂತರೂ ವಿರಾಗಿಗಳೂ ಭಕ್ತಿಯಿಂದ ವರ್ತಿಸಿ ದೇವ ಸಾಕ್ಷಾತ್ಕಾರ ಪಡೆದರು. ಅವರಲ್ಲಿ ಸಿದ್ಧಿ ದೆಸೆಯು ಉಂಟಾಗಿ ಆ ಬಲದಿಂದ ಅವರು ಹಲವು ಚಮತ್ಕಾರಿಕ ಪ್ರಸಂಗಗಳನ್ನು ತೋರಿಸುತ್ತಿದ್ದರು ಅಂಥ ಸಾಮರ್ಥ್ಯವು ನಮ್ಮಲ್ಲಿ ಇರುವದಿಲ್ಲ ಹಾಗೆ ಅವರಲ್ಲಿಯಂಥ ಜ್ಞಾನವೂ ನಮ್ಮಲ್ಲಿಲ್ಲ ಸ್ವಾರ್ಥದ ಹಂಬಲದಿಂದ ಅಂಥ ಸಾಮರ್ಥ್ಯ ಪಡೆಯಲು ಹವಣಿಸುವ ಗುರುವು ಗುರುವಲ್ಲ ತನ್ನಲ್ಲಿಯ ದುರಾಶೆಗಳನ್ನು ಸಂಪೂರ್ಣವಾಗಿ ದೂರ ಮಾಡುವವನಿಗೇ ದೇವ ದರ್ಶನವಾಗುವದು ವಿದ್ವಾಂಸನಾದವನು ಆಶೆ ದುರಾಶೆಗಳಿಂದ ಯುಕ್ತನಾದರೆ ಅವನ ಜ್ಞಾನವು ನಿರರ್ಥಕವು ಇಂಥ ಗುರುಗಳಿಂದ ಉಪಯೋಗವಿಲ್ಲ ಎಷ್ಟೋ ಪಂಡಿತರು ಆಶಾನಿಷ್ಠರಾಗಿ ಬಾಳಿ ತಮ್ಮ ಆಶೆ ಪೂರ್ಣವಾಗದೆ ಮೃತಿ ಹೊಂದಿದರು ನಿರಿಚ್ಛವೃತ್ತಿಯ ಸಾಧು–ಸಂತರು ವಿರಳ ವಿಷಯಲೋಲುಪರಾದ ನೀಚರಿಂದ ಆ ನಿರಾಶೆಯ ಸಾಧು ಸಂತರ ವೃತ್ತಿಯೇ ಬೇರೆಯಾಗಿರುವದು ಅವರಲ್ಲಿ ಕೇವಲ ದೇವ ಪ್ರಾಪ್ತಿಯ ಆಶೆಯಲ್ಲದೆ ಇನ್ನೊಂದು ಬಯಕೆಯಿರುವದಿಲ್ಲ ಎಲ್ಲ

ರಿಗೂ ಆತ್ಮರೂಪನೆಂಬುದು ನಿಜವಾದ ಸಂಪತ್ತು ಆಗಿರುವದು ಆದರೆ ದೇಹ ಬುದ್ಧಿಯನ್ನು ತ್ಯಾಗಮಾಡದೆ ಬಹುಜನರು ದೇವಮಾರ್ಗದಿಂದ ತಪ್ಪುವರು ಹಾಗು ಇತರರನ್ನೂ ಬೇರೆ ಮಾರ್ಗ ಹಿಡಿಸುವರು ಇಂಥ ಗುರುಗಳಿಂದ ಪ್ರಯೋಜನವಿಲ್ಲ ಸಿದ್ಧಿಯ ಬಲದಿಂದ ಶರೀರಕ್ಕೆ ಮಹತ್ವ ವುಂಟಾದರೂ ಮುಂದೆ ದೇಹ ಬುದ್ಧಿಯ ದುರಿಚ್ಛೆಯು ಬೆಳೆಯುವದು ಅಂಥವನು ಅಕ್ಷಯ ಸುಖವನ್ನು ಬಿಟ್ಟು ದೇಹ ಸಾಮರ್ಥ್ಯಕ್ಕಾಗಿ ಬಯಸುವ ಮೂರ್ಖನಾಗುವನು ಆಶೆಯಂತಹ ದುಃಖವು ಇನ್ನೊಂದಿಲ್ಲ ದೇವನನ್ನು ಹೊರತು ಪಡಿಸಿದ ಬಯಕೆಗಳು ಈಡೇರಲು ಸಾಧ್ಯವಿಲ್ಲ ಇಂಥ ಆಶೆಯುಳ್ಳ ಮಾನವನು ಹಲವು ಕಷ್ಟಗಳಿಗೆ ಗುರಿಯಾಗಿ ಅಧ ಪತನ ಹೊಂದುವನು ಆಶಾಬದ್ಧ ಮಾನವನ ದೇಹಾಂತವಾಗಲು ಅವನ ಸಾಮರ್ಥ್ಯ ಹೋಗುವದಲ್ಲದೆ ಅವನು ದೇವನಿಂದ ದೂರಾಗುವನು ಆದ್ದರಿಂದ ನಿರಾಶೆಯ ವೃತ್ತಿಯುವನೂ, ದೃಢ ಬುದ್ಧಿಯ ನಿರ್ಧರಣೆ ಯುಳ್ಳವನೂ ಆದವನೇ ಸದ್ಗುರುವೆಂದು ತಿಳಿಯತಕ್ಕದ್ದು- ಅಂಥ ಸದ್ಗುರುವಿನಿಂದಲೇ ಭವಸಾಗರದಿಂದ ಪಾರಾಗಲು ಬರುವದು

ಮುಖ್ಯವಾಗಿ ಸದ್ಗುರುವಿನ ಲಕ್ಷಣಗಳೆಂದರೆ—

ಆತನಲ್ಲಿ ಮೊದಲು ನಿರ್ಮಲಜ್ಞಾನವು ಇರಬೇಕು ಆತ್ಮನಿಶ್ಚ ಯ ಜನ್ಯ ಸಮಾಧಾನ ಸ್ಥಿತಿಯು ಅವನಲ್ಲಿರಬೇಕು, ಹಾಗು ಅಖಂಡ ಸ್ವರೂಪಾಕಾರ ವುಳ್ಳವನಾಗಿರಬೇಕು ಅಲ್ಲದೆ ಅವನಲ್ಲಿ ಪ್ರಬಲ ವೈರಾಗ್ಯವೂ, ಆಶೆಯ ಬಗೆಗೆ ಉದಾಸೀನ ವೃತ್ತಿಯೂ, ನಿರ್ಮಲ ಸ್ವಧರ್ಮಾಚರಣೆಯೂ ಇರಬೇಕು ಮೇಲಾಗಿ ವೇದಾಂತ ಶ್ರವಣ, ಹರಿಕಥಾ ನಿರೂಪಣ, ಪಾರಮಾ ರ್ಥಿಕ ವಿಚಾರ, ಇವೆಲ್ಲವನ್ನು ನಿರಂತರವಾಗಿ ಆಚರಿಸಬೇಕು ಆ ಸದ್ಗು ರುವಿನಲ್ಲಿಯು ಸಾರಾಸಾರ ವಿಚಾರ ಸಾಮರ್ಥ್ಯದಿಂದ ಜಗತ್ತಿನ ಉದ್ಧಾ ರವಾಗಬೇಕು ಆತನಲ್ಲಿಯ ನವವಿಧ ಭಕ್ತಿಗಳು ಬಹುಜನರಿಗೆ ಆಧಾರ ಭೂತಗಳಾಗಬೇಕು. ಈ ಎಲ್ಲ ಪ್ರತಿಷ್ಠಿತ ಸಾಧನ ಸಾಹಿತ್ಯಗಳುಳ್ಳ ಸದ್ಗುರುವಿನ ಲಕ್ಷಣಗಳನ್ನು ಶ್ರೋತೃಗಳು ಚನ್ನಾಗಿ ಅರಿಯತಕ್ಕದ್ದು

ಸದ್ಗುರುವಿನ ಅಂತಸ್ಥ ಶುದ್ಧ ಬ್ರಹ್ಮಜ್ಞಾನವೂ ಬಾಹ್ಯ ನಿಷ್ಠೆಯನ್ನು ವ್ಯಕ್ತಗೊಳಿಸುವ ಭಜನವೂ ಇವುಗಳಿಂದ ಬಹುಜನ ಭಕ್ತರು ವಿಶ್ರಾಂತಿಯನ್ನು ಪಡೆಯುವರು

ಉಪಾಸನೆಯ ಆಧಾರವಿಲ್ಲದವರಿಗೆ ಪರಮಾರ್ಥವು ಆಶ್ರಯಕೊಡಲಾರದು ಸತ್ಕರ್ಮಗಳಿಲ್ಲದ ಆಚರಣೆಗಳಿಂದ ಅನಾಚಾರವುಂಟಾಗಿ ಭ್ರಷ್ಟತೆಯುಂಟಾಗುವದು ಆದ್ದರಿಂದಲೇ ಬ್ರಹ್ಮಜ್ಞಾನ, ವೈರಾಗ್ಯ, ಭಜನ, ಸ್ವಧರ್ಮಾಚರಣೆ, ಸಾಧನ, ಕಥಾ ನಿರೂಪಣೆ, ಶ್ರವಣ-ಮನನಗಳು, ನೀತಿ –ನ್ಯಾಯಗಳು, ಮರ್ಯಾದೆಯ ವರ್ತನೆಯು ಇವೆಲ್ಲವು ಸದ್ಗುರುವಿನಲ್ಲಿ ಮೂರ್ತಿ ಮತ್ತಾಗಿರಬೇಕು- ಇವುಗಳಲ್ಲಿ ನ್ಯೂನತೆಯುಂಟಾಗಲು ಆ ಪ್ರಮಾಣದಿಂದಲೇ ಕುಂದು ಉಂಟಾಗುವದು ಸದ್ಗುರುವಿನಲ್ಲಿ ಇವೆಲ್ಲವು ಪೂರ್ಣಭರಿತವಾಗಿರುವವು ಆ ಸದ್ಗುರುವು ಹಲವು ಸಾಧನಗಳಿಂದ ಸಮರ್ಥವಾಗಿರುವದರಿಂದ ಆತನಿಂದ ಬಹುಜನರ ಪಾಲನ ಕ್ರಿಯೆಯು ಲಭಿಸುವದು ಮತ್ತು ಎಲ್ಲರ ಉದ್ಧರಣೆಯ ಚಿಂತೆಯು ಆತನಿಗಿರುವದು ಶಿಷ್ಯರಿಗೆ ಪಾರಮಾರ್ಥಿಕ ಮಾರ್ಗದರ್ಶಕ ಸಾಧನಗಳೆಲ್ಲವು ಅವನಲ್ಲಿರುವವು ಅಂಥ ಸಾಧನೆಗಳಿಲ್ಲದೆ ಪ್ರಯತ್ನಿಸುವ ಪರಮಾರ್ಥವು ಕುಸಿದು ಬೀಳುವದು ಆದುದರಿಂದಲೇ ಸಂತ ಸಜ್ಜನರು ಮುಂಧೋರಣೆಯಿಂದ ಎಲ್ಲ ಸಾಧನಗಳನ್ನು ಸಂಪ್ರಾಪ್ತಿಸಿಕೊಳ್ಳುವರು ಆಚಾರ ಉಪಾಸನೆಗಳಿಂದ ವಿರಹಿತರಾಗಿ ಪರಮಾರ್ಥದ ಪ್ರತಿಷ್ಠೆ ಬೆಳಿಸುವ ಭ್ರಷ್ಟ ಅಭಕ್ತರೆಷ್ಟೋ ಇರುವರು ಅಂಥವರಿಗೆ ಗೌರವವಿಲ್ಲದ್ದರಿಂದ ಅವರು ನಿಂದ್ಯರೆನಿಸುವರು

ಕರ್ಮ ಉಪಾಸನೆಗಳಿಂದ ಹೊರತು ಪಡಿಸಿದ, ಸಾಂಪ್ರದಾಯವು ತುಚ್ಛವೆಂದು ಎಣಿಸಲ್ಪಡುವದು ಹೀಗಾಗಿ ಆ ಸಾಂಪ್ರದಾಯವು ನಿರುಪಯುಕ್ತವಾಗುವದು ಹೀನ ಜಾತಿಯ ಗುರುವನ್ನು ಮಾಡಿಕೊಳ್ಳುವದು ಈ ಸಾಂಪ್ರದಾಯದ ಪ್ರತೀಕವು ಗುರುವು ಬ್ರಹ್ಮ ಸಭೆಗೆ ವಿದ್ಯಮಾನನಾಗಲು ಬರಲಾರದು ಒಂದು ವೇಳೆ ಆ ಸಭೆಗೆ ಆತನು ಬಂದರೂ ಕಳ್ಳನಂತೆ ಬರುವನು ಆ ಬ್ರಾಹ್ಮಣ ಸಮುದಾಯಲ್ಲಿ ಅವನ ಶಿಷ್ಯರು ತೀರ್ಥ ಪ್ರಸಾದಗಳನ್ನು ಸ್ವೀಕರಿಸಿದರೆ ಪ್ರಾಯಶ್ಚಿತ್ತಕ್ಕೆ ಗುರಿ

ಯಾಗುವರು ಮತ್ತು ತೀರ್ಥ ಪ್ರಸಾದ ಸ್ವೀಕರಿಸದಿದ್ದಲ್ಲಿ ಆ ಶಿಷ್ಯರೇ ತಮ್ಮ ಗುರುವಿನ ಕೀಳ್ತರಗತಿಯನ್ನು ಪ್ರಕಟಿಸುವಂತಾಗುವದಲ್ಲದೆ ಅವರಲ್ಲಿಯ ಗುರುಭಕ್ತಿಯು ಒಮ್ಮೆಲೇ ಕ್ಷಯ ಹೊಂದುವದು ಆ ಶಿಷ್ಯರು ತಮ್ಮ ಗುರುವಿನ ಮರ್ಯಾದೆ ಕಾಯ್ದುಕೊಳ್ಳಲು ಹವಣಿಸಲು ಬ್ರಾಹ್ಮಣ ಕ್ಷೋಭೆಯುಂಟಾಗುವದು ಬ್ರಾಹ್ಮಣತ್ವವನ್ನು ರಕ್ಷಿಸಲು ಬದ್ಧರಾದರೆ ಗುರುವಿನ ಕ್ರೋಧಕ್ಕೆ ಗುರಿಯಾಗುವರು ಇಂತು ಆ ಶಿಷ್ಯರು ಇಕ್ಕಟ್ಟಿನಲ್ಲಿ ಸಿಕ್ಕು ಪೇಚಾಡುವರು ಈ ಕಾರಣಗಳಿಂದಲೇ ನೀಚ ಜಾತಿಯ ಗುರುವು ತ್ಯಾಜ್ಯನೆಂದು ಹೇಳಲ್ಪಡುವದು ಆದರೂ ಯಾವನೊಬ್ಬನು ನೀಚ ಜಾತಿಯ ಗುರುವನ್ನೇ ಪ್ರೀತಿಸುವ ಹಂಬಲವುಳ್ಳವನಾದರೆ ಅವನು ತನ್ನಷ್ಟಕ್ಕೆ ತಾನೇ ಭ್ರಷ್ಟನಾಗಬೇಕು ಉಳಿದವರನ್ನು ಹಸೆಗೆಡಿಸುವ ನೀಚತನವನ್ನು ಮಾಡಬಾರದು.

ಇನ್ನು ಈ ವಿಚಾರವು ಒತ್ತಟ್ಟಿಗೆ ಉಳಿಯಲಿ, ಬ್ರಾಹ್ಮಣನು ತನ್ನ ಜಾತಿಯ ಗುರುವನ್ನೇ ಅವಲಂಬಿಸತಕ್ಕದ್ದು. ಇಲ್ಲದಿದ್ದರೆ ಭ್ರಷ್ಟತೆ ಹೊಂದುವನು ಸದ್ಗುರುವೆಂದರೆ ಎಲ್ಲ ಸದ್ಗುಣಗಳ ತೌರ ಮನೆಯಾಗಿರಬೇಕು ಕೇವಲ ಗುರುಗಳೆಂಬವರು ಅನೇಕಪ್ರಕಾರವಾಗಿರುವರು ಅವರು ಯಾರಾರೆಂದರೆ—

೧] ಗುರು (ಮೊದಲು ಅಕ್ಷರ ಜ್ಞಾನ ಮಾಡಿಕೊಡುವವನು) ೨] ಮಂತ್ರಗುರು, ೩] ಯಂತ್ರ ಗುರು ೪] ತಂತ್ರ ಗುರು ೫] ಮಲ್ಲವಿದ್ಯೆಯ ಗುರು, ೬] ರಾಜ ಗುರು, ೭] ಕುಲ ಗುರು (ಪುರೋಹಿತ) ೮] ಮಾನ್ಯ ಗುರು (ತಾನು ತಿಳಿದ ಗುರು) ೯] ವಿದ್ಯಾಗುರು ೧೦] ನೀಚವಿದ್ಯೆ ಬೋಧಿಸಿದ ಗುರು ೧೧] ಪಾಪ ಕರ್ಮಕ್ಕೊಯ್ಯುವ ಗುರು ೧೨] ಜಾತಿಯ (ಸಮಾಜದ ಹಿರಿಯ) ಗುರು ೧೩] ತಾಯಿ ೧೪] ತಂದೆ ೧೫] ರಾಜ, ೧೬] ದೇವ ೧೭] ಜಗದ್ಗುರು, ಇಂತು ೧೭ ಪ್ರಕಾರದ ಗುರುಗಳು ಪ್ರಸಿದ್ಧರಲ್ಲದೆ ಇನ್ನೂ ಹಲವು ಬಗೆಯ ಗುರುಗಳಿರುವರು ಅವರಾರೆಂದರೆ–

ಸ್ವಪ್ನ ಗುರು, ದೀಕ್ಷಾ ಗುರು, ಪ್ರತಿಮೆ ( ಮೂರ್ತಿಗಳು ) ಗುರು, ಸ್ವಯಂ ಗುರು, (ತನಗೆ ತಾನೇ), ಇವರಲ್ಲದೆ ತಮ್ಮ ತಮ್ಮ ಜಾತಿ ಗುಣ

ಕ್ರಿಯೆಗಳಿಗನುಸಾರವಾಗಿ ಉದ್ಯಮಾದಿಗಳನ್ನು ಕಲಿಸುವವರೆಲ್ಲರೂ ಗುರುಗಳು

ಈ ಪ್ರಕಾರ ಗುರುಗಳ ಬಗೆಗೆ ವಿಚಾರ ಮಾಡುತ್ತ ಹೋಗಲು ಗುರುಗಳ ಪ್ರಕಾರಗಳು ಇನ್ನೂ ಹೆಚ್ಚುತ್ತ ಹೋಗುವವು

ಇನ್ನು ಹಲವು ಮತಗಳಿಂದ ವಿಚಾರಿಸಲು ಎಲ್ಲರಿಗೂ ಸಮ್ಮತವಾದ ಮೋಕ್ಷದಾತೃವಾದ ಸದ್ಗುರುವೊಬ್ಬನು ಉಳಿದೆಲ್ಲ ಗುರುಗಳಿಂದ ಬೇರೆಯಾಗಿಯೇ ಇರುವನು ಆ ಸದ್ಗುರುವು ಹಲವು ಸದ್ವಿದ್ಯೆಗಳ ಗುಣಯುಕ್ತನು ಹಾಗು ದಯಾಳುವು ಆಗಿರುವನು

ಈ ಪ್ರಕಾರವಾಗಿ ಶ್ರೋತೃಗಳು ಸದ್ಗುರುವಿನ ಲಕ್ಷಣಗಳನ್ನು ತಿಳಿದುಕೊಳ್ಳತಕ್ಕದ್ದು

ಶ್ರೀ ರಾಮ || ೩ ಶಿಷ್ಯ ಲಕ್ಷಣ || ಈ ಮೊದಲು ಸದ್ಗುರುವಿನ ಲಕ್ಷಣವನ್ನು ವಿವರಿಸಿತು ಇನ್ನು ಮೇಲೆ ಒಳ್ಳೆಯ ಶಿಷ್ಯನ ಲಕ್ಷಣಗಳನ್ನು ಶ್ರವಣ ಮಾಡಿರಿ

ಒಳ್ಳೆಯ ಶಿಷ್ಯನಿಗೆ ಯೋಗ್ಯ ಗುರುವು ಪ್ರಾಪ್ತವಾಗದಿದ್ದರೆ ಅವನ ಶಿಷ್ಯತ್ವಕ್ಕೆ ಬೆಳಕು ಬೀಳಲಾರದು ಅದರಂತೆ ಒಳ್ಳೆಯ ಗುರುವಿಗೆ ಒಳ್ಳೆಯ ಶಿಷ್ಯರು ದೊರೆಯದಿದ್ದರೂ ಆ ಗುರುವಿಗೂ ಹೇಯತೆಯೇ ಸರಿ ಬಿತ್ತತಕ್ಕ ಭೂಮಿಯು ಒಳಿತಾಗಿದ್ದರೆ ಬೆಳೆ ಫಲಿಸುವದು ಅದೇ ಭೂಮಿ ಬೀಜಗಳು ಸರಿಯಿರದಿದ್ದರೆ ವ್ಯರ್ಥವೇ ಸರಿ ಅದರಂತೆ ಯೋಗ್ಯ ಶಿಷ್ಯನಿಗೆ ಮಂತ್ರಾದಿಗಳನ್ನು ಬೋಧಿಸುವ ಗುರು ದೊರೆತರೆ ಶಿಷ್ಯನು ಸತ್ಪಾತ್ರ ಹೊಂದುವನು ಅನಧಿಕಾರಿ ಶಿಷ್ಯನಿಗೆ ಬೋಧಿಸುವದು ನಿರರ್ಥಕವು ಸದ್ಗುರು ಹಾಗು ಸಚ್ಛಿಷ್ಯ ಇವರ ಮೇಲನದಿಂದಲೇ ಪರಮಾರ್ಥ ಸಿದ್ಧಿಯಾಗುವದು ಇನ್ನು ಬೀಜ ಬಿತ್ತತಕ್ಕ ಬೂಮಿಯು ಫಲದ್ರುಪವಾಗಿಯೂ ಬೀಜಗಳು ಚೆನ್ನಾಗಿಯೂ ಇದ್ದರೂ ಬೆಳೆ ಬಾರಲು ಮಳೆಯ ಆವಶ್ಯಕತೆ ಇದ್ದೇ ಇರುವದು ಇದರಂತೆ ಒಳ್ಳೆಯ ಗುರು ಒಳ್ಳೆಯ ಶಿಷ್ಯ ಇವರ ಮಿಲನವಿದ್ದರೂ ಅವರಿಗೆ ಅಧ್ಯಾತ್ಮ ನಿರೂಪಣೆಯ ಹೊರತು ಉಪಯೋಗವಿಲ್ಲ ಇನ್ನೊಂದು ವಿಚಾರ ಭೂಮಿ–ಬೀಜ–ಮಳೆಗಳೆಲ್ಲ ಚೆನ್ನಾಗಿದ್ದರೂ ಬೆಳೆದ ಪೈರೆಲ್ಲ ಕೈಗೆ ಬಂದರೆ ಒಳಿತು ಇದರಂತೆ ಗುರು-ಶಿಷ್ಯ

ಪ್ರಾಪ್ತಿಗಾಗಿ ಸಾಧನ ಮಾಡಲಿಕ್ಕೆ ಬೇಕಾಗುವದು ಭೂಮಿಯಲ್ಲಿಯ ಅಧ್ಯಾತ್ಮನಿರೂಪಣೆ ಇವುಗಳ ಯೋಗವಾದರೂ ಸಿದ್ಧ ವಸ್ತು ದೊರೆತರೆ ಮಾತ್ರ ಒಳಿತು ಆ ಸಿದ್ಧ ವಸ್ತುವಿನ ಬೆಳೆ ಕೈಗೆ ಬಂದ ನಂತರ ದುರ್ಲಕ್ಷ್ಯ ಮಾಡುವಂತಿರುವದಿಲ್ಲ. ಅದರಂತೆ ಆತ್ಮಜ್ಞಾನ ಪ್ರಾಪ್ತವಾದ ಬಳಿಕ ಸಾಧನಗಳನ್ನು ಬಿಡಲು ಬರುವದಿಲ್ಲ ಒಮ್ಮೆ ತೃಪ್ತಿಯಾಗುವಂತೆ ಭೋಜನ ಮಾಡಿದ ಮೇಲೆ ಭೋಜನ ಸಾಮಗ್ರಿಗಳನ್ನು ತ್ಯಾಗ ಮಾಡುವರೋ ? ಅದರಂತೆ ಈ ಸಾಧನ ವಿಷಯುವನ್ನರಿತುಕೊಳ್ಳತಕ್ಕದ್ದು ಆದ್ದರಿಂದ ಭವದಿಂದ ಉದ್ಧಾರವಾಗುವದಕ್ಕೆ ಸಚ್ಛಿಷ್ಯ, ಸದ್ಗುರು, ಸತ್‌ಶಾಸ್ತ್ರವಿಚಾರ, ಸಾಧನಾಭ್ಯಾಸ ಇವೆಲ್ಲವುಗಳ ಸಮುಚ್ಚಯ ಯೋಗವುಂಟಾಗಲಿಕ್ಕೆ ಬೇಕು ಬ್ರಹ್ಮೋಪಾಸನೆ, ಸ್ವಧರ್ಮಾಚಾರ, ಸದಾಚರಣ, ಸತ್ಸಂಗ ಹಾಗು ನಿತ್ಯನಿಯಮ ಈ ಆರು ಸಂಗತಿಗಳು ಒಂದಾದರೆ ಮಾತ್ರ ಶುದ್ಧಜ್ಞಾನದ ಉದಯವಾಗುವದು ಇಲ್ಲದೆ ಹೋದರೆ ಸಮಾಜದಲ್ಲಿ ಪಾಖಂಡತ್ವವು ಹೆಚ್ಚುವದು ಗುರುವಿನ ಪ್ರಯತ್ನವು ಶಿಷ್ಯನಿಗಿಂತಲೂ ಹೆಚ್ಚಿಗಿರುವದು ಮಂದಮತಿ ಶಿಷ್ಯನನ್ನು ಗುರುವು ಹಲವು ಬಗೆಯಿಂದ ಪ್ರಯತ್ನಿಸಿ ಅವನಲ್ಲಿಯ ಅವಗುಣಗಳನ್ನು ಹೋಗಲಾಡಿಸುವನು ಆದರೆ ಅಪಾತ್ರನಾದ ಗುರುವನ್ನು ಸಚ್ಛಿಷ್ಯನು ಪ್ರಯತ್ನದಿಂದ ಅವನ ವೃತ್ತಿಯನ್ನು ತಿದ್ದಲು ಅಸಮರ್ಥನಾಗುವನು ಒಂದು ವೇಳೆ ತಿದ್ದಲು ಆತನು ಯತ್ನಿಸಿದರೆ ಗುರುವಿನ ಗೌರವಕ್ಕೆ ಕುಂದು ಉಂಟಾಗುವದು ಈ ಮೂಲಕವಾಗಿಯೇ ಗುರುವು ಸದಾ ಸನ್ಮಾರ್ಗನಿರತನಾಗಿರತಕ್ಕದ್ದು ಇಲ್ಲದಿದ್ದರೆ ಅವನು ಪಾಖಂಡಿ ಎನ್ನಿಸುವನು.

ಇನ್ನು ಸಚ್ಛಿಷ್ಯನ ಲಕ್ಷಣಗಳು—

ಶಿಷ್ಯನು ಸದ್ಗುರು ವಚನಗಳಲ್ಲಿ ಸಂಪೂರ್ಣ ವಿಶ್ವಾಸವನ್ನಿಡಬೇಕು ಆ ಗುರುವಿಗೆ ಅನನ್ಯ ಭಾವದಿಂದ ಶರಣು ಹೋಗಬೇಕು ಸ್ವಚ್ಛತೆ, ಆಚಾರಶೀಲತೆ, ವಿರಕ್ತತೆ, ಅನುತಪ್ತತೆ, ನಿಷ್ಠೆ, ಚಿತ್ತಶುದ್ಧತೆ, ಮರ್ಯಾದೆ ವೃತ್ತಿ, ಸಾಕ್ಷೇಪತೆ, ದಕ್ಷತೆ, ಪರಬ್ರಹ್ಮನಲ್ಲಿ ಲಕ್ಷ್ಯತೆ, ಧೀರತ್ವ, ಔದಾರ್ಯ ಪಾರಮಾರ್ಥಿಕ ತತ್ಪರತೆ, ಪರೋಪಕಾರಬುದ್ಧಿ, ಮಾತ್ಸರ್ಯರಾಹಿತ್ಯತೆ, ಬುದ್ಧಿವಂತಿಕೆ, ಪರಮ ಪವಿತ್ರತೆ, ಪರಮದಕ್ಷತೆ, ಶ್ರೇಷ್ಠಗುಣವಂತಿಕೆ, ನಿಪುಣತೆ,

ಭಯಭಕ್ತಿ, ನೀತಿವಂತಿಕೆ, ಯುಕ್ತಿ–ಬುದ್ಧಿವಂತಿಕೆ, ಯುಕ್ತಾಯುಕ್ತ ವಿಚಾರತೆ, ಧೈರ್ಯವಂತಿಕೆ, ದೃಢ ವ್ರತಸ್ಥ, ಕುಲೀನತೆ, ಪುಣ್ಯಶೀಲತೆ ಇವೆಲ್ಲ ಲಕ್ಷಣಯುಕ್ತನಾಗಿರಬೇಕು ಮತ್ತು ಆ ಸಚ್ಛಿಷ್ಯನು—

ಸಾತ್ವಿಕನಾಗಿರತಕ್ಕದ್ದು, ದೇವಭಜಕನಾಗಿರಬೇಕು, ಸಾಧನಕರ್ತನೂ, ಸಾಧಕನೂ ಆಗಿರಬೇಕು ವಿಶ್ವಾಸವಂತನಾಗಿರಬೇಕು, ದೈಹಿಕ ಶ್ರಮವಹಿಸಬೇಕು, ಪರಮಾರ್ಥದ ಹೆಚ್ಚಳ ಬಯಸುತ್ತಿರಬೇಕು ಆ ಶಿಷ್ಯನು ಸ್ವತಂತ್ರನೂ, ಲೋಕಮಿತ್ರನೂ, ಸರ್ವಗುಣ ಸಂಪನ್ನನೂ, ಸದ್ವಿದ್ಯಾಯುತನೂ, ಸದ್ಭಾವಿಕನೂ, ಅಂತ ಶುದ್ಧನೂ, ವಿವೇಕಿಯೂ, ಕಷ್ಟಸಹಿಷ್ಣುವೂ, ಸಂಸಾರ ದು ಖತಾಪದಿಂದ ಬೆಂದವನೂ, ತ್ರಿವಿಧ ತಾಪದಿಂದ ಹುರುಪುಳಿಸಿದವನೂ ಆಗಿರತಕ್ಕದ್ದು ಇಂಥ ಶಿಷ್ಯನೇ ಪರಮಾರ್ಥ ಸಂಪಾದಿಸಲು ಯೋಗ್ಯನಾಗುವನು ಬಹಳ ದು ಖಗಳನ್ನು ಅನುಭವಿಸದೆ ಯಾವನಿಗೂ ಪರಮಾರ್ಥ ತೋರದು. ಸಂಸಾರ ದು ಖಗಳನ್ನು ಅನುಭವಿಸಿದ ನಂತರವೇ ವೈರಾಗ್ಯ ಹುಟ್ಟುವದು ಆಗಲೇ ವಿಶ್ವಾಸವು ಉದಯಿಸುವದು ಹೀಗೆ ದೃಢವಾದ ವಿಶ್ವಾಸವು ನೆಲೆದೋರಲು ಸದ್ಗುರುವಿನ ಪ್ರಾಪ್ತಿಯಾಗುವದು ವಿಶ್ವಾಸವಿಲ್ಲದೆ ಉಸುರ್ಗರೆದು ಎಷ್ಟೋ ಜನರು ಭವಸಾಗರದಲ್ಲಿ ಮುಳುಗಿ ಹೋಗುವರು, ಆ ಭವಸಾಗರದಲ್ಲಿಯ ಹಲವು ಕಷ್ಟಗಳೆಂಬ ಜಲಚರಗಳಿಂದ ಸುಖದುಃಖಗಳ ಮಡುವಿನಲ್ಲಿ ಹರಿಸಿಕೊಂಡು ಹೋಗುವರು ಈ ಕಾರಣದಿಂದ ದೃಢತರವಾದ ವಿಶ್ವಾಸವುಳ್ಳ ಸಚ್ಛಿಷ್ಯನೇ ಮೋಕ್ಷಾಧಿಕಾರಿಯು, ಅವನೇ ಶ್ರೇಷ್ಠನು ಎಂದು ಎಣಿಸಲ್ಪಡುವನು

ಸದ್ಗುರು ವಚನವನ್ನು ಕೊನೆ ಹಾಯಿಸಿದ ಶಿಷ್ಯನೇ ಸಾಯುಜ್ಯ ಮೋಕ್ಷಕ್ಕೆ ಯುಕ್ತನಾಗುವನು, ಅಂಥವನು ಸಂಸಾರ ರೀತಿಯನ್ನು ಮನಸ್ಸಿನಲ್ಲಿ ತರಲಾರನು,

ಇನ್ನು ಸದ್ಗುರುವಿಗಿಂತಲೂ ದೇವನು ದೊಡ್ಡವನೆಂಬ ಭಾವನೆ ಹೊಂದಿದ ಮಾನವನು ಬುದ್ಧಿಯಿಲ್ಲದವನು ಯಾಕಂದರೆ ಆ ಶಿಷ್ಯನು ಹಿಂದಿನಿಂದ ದೇವನ ಸಾಮರ್ಥ್ಯದ ಹುಚ್ಚಿನಲ್ಲಿಯೇ ಆ ದೇವನ ಪ್ರಾಪ್ತಿಗಾಗಿ ಯತ್ನಿಸುತ್ತ ಗುರುಸೇವೆಯಿಂದ ದೂರಾಗುವನು

ಸದ್ಗುರು ಸ್ವರೂಪವು ಶಾಶ್ವತವಾದದ್ದು| ಹರಿಹರಾದಿ ದೇವತೆಗಳೆಲ್ಲ ಕಲ್ಪಾಂತ್ಯದಲ್ಲಿ ಮೂಲ ಮಾಯೆಯೊಡನೆ ಲೀನರಾಗಿ ಹೋಗುವರು ಅಂದ ಮೇಲೆ ಅವರ ಸಾಮರ್ಥ್ಯವು ಸಹ ಅಶಾಶ್ವತವಾಗುವದು. ಇದರಿಂದ ಆ ಹರಿಹರಾದಿಗಳ ಸಾಮರ್ಥ್ಯಕ್ಕಿಂತ ಗುರುವಿನ ಸಾಮರ್ಥ್ಯವು ಮಿಗಿಲಾದುದೆಂದು ವ್ಯಕ್ತವಾಗುವದು ಇದು ಅಲ್ಪಮತಿ ಮಾನವೀ ಬುದ್ಧಿಗೆ ತಿಳಿಯದ ಮಾತು.

ಇನ್ನು ಗುರು–ಹಾಗು ದೇವರಲ್ಲಿ ಸರಿ ಸಮಾನತೆಯನ್ನು ಒಪ್ಪುವ ಶಿಷ್ಯನು ದುರಾಚಾರಿಯು ಅವನಿಗೆ ಸತ್ಯಾರ್ಥವು ಹೊಳೆಯದೆ ಭ್ರಾಂತಿಯುಕ್ತನಾಗುವನು ಮಾನವನೇ ದೇವನನ್ನು ಕಲ್ಪಿಸಿ ಮಂತ್ರಗಳಿಂದ ಅವನಲ್ಲಿ ದೇವತ್ವ ತರುವನು ಸದ್ಗುರು ಸ್ವರೂಪವು ದೇವ ದೇವ ಈಶ್ವರ (ಮೂಲ ಮಾಯೆ)ನಿಗೂ ಕಲ್ಪಿಸಲು ಬರದಂತಹದು ಯಾಕಂದರೆ ಅವನು ನಿರ್ವಿಕಲ್ಪನು ಆದ್ದರಿಂದಲೇ ಸದ್ಗುರುವು ದೇವನಿಗಿಂತಲೂ ಅತ್ಯಧಿಕ ಶ್ರೇಷ್ಠನು ಆವನ ಸ್ವರೂಪವನ್ನು ವೇದ ಶಾಸ್ತ್ರಗಳೂ ಕೂಡ ವರ್ಣಿಸುವದಕ್ಕೆ ಅಸಮರ್ಥವಾದವು ದೇವ ಸಾಮರ್ಥ್ಯವು ಮಾಯೆಯುಕ್ತವಾದದ್ದು ಆ ಸಾಮರ್ಥ್ಯವು ಸದ್ಗುರುವಿನ ಸಾಮರ್ಥ್ಯಕ್ಕೆ ಸರಿಯಾಗಲಾರದು ಸದ್ಗುರು ಕೃಪೆಯಾದವನ ಮುಂದೆ ಯಾವನ ಬಲವೂ ನಿಲ್ಲಲಾರದು ಗುರು ಕೃಪೆ ಹೊಂದಿದ ಸಚ್ಛಿಷ್ಯನು ತನ್ನ ಸ್ವರೂಪ ಜ್ಞಾನದ ಬಲದಿಂದ ಜಗತ್ತಿನ ಎಲ್ಲ ವೈಭವಗಳನ್ನು ತುಚ್ಛೀಕರಿಸುವನು ಸದ್ಗುರು ಕೃಪೆಯ ಬಲದಿಂದ ಹಾಗು ಸ್ವಾನುಭವದ ಉಲ್ಹಾಸದಿಂದ ಸಚ್ಛಿಷ್ಯನ ವೈಭವವು ಉತ್ತರೋತ್ತರ ಬೆಳೆಯುವದು ಆಗ ಅವನ ಮೂಲ ಮಾಯೆ ಸಹಿತ ಬ್ರಹ್ಮಾಂಡವನ್ನೆಲ್ಲ ಲೆಕ್ಕಿಸುವದಿಲ್ಲ ಸದ್ಗುರು ವಚನಗಳಲ್ಲಿ ದೃಢ ಭಾವನೆಯನ್ನಿರಿಸಿದ ಸಚ್ಛಿಷ್ಯನ ವೈಭವವು ಹೆಚ್ಚಿ ಹೆಚ್ಚಿ ಅವನು ಸ್ವತಃ ಸದ್ಗುರು ಸ್ವರೂಪನಾಗಿ ಬಿಡುವನು

ಸಚ್ಛಿಷ್ಯನಿಗೆ ಮೊದಲು ಅನುತಾಪವುಂಟಾಗಿ ಅವನ ಚಿತ್ತಶುದ್ಧಿಯಾಗುವದು, ಬಳಿಕ ಆತನು ಸದ್ಗುರುವಿಗೆ ಶರಣು ಹೋಗುವನು, ಸದ್ಗುರು ವಚನಗಳಿಂದ ಮಾರ್ಗ ಹಿಡಿಯುವನು ಬ್ರಹ್ಮಾಂಡವು ಹೊರಳಿದರೂ ಕೂಡ ಆತನ ವಿಶ್ವಾಸವು ಹೊಯ್ದಾಡುವದಿಲ್ಲ ಇಷ್ಟು ಸದ್ಗುರು

ವಚನಗಳ ಮೇಲೆ ದೃಢ ವಿಶ್ವಾಸವಿಡಲು ಮತ್ತು ಕ್ರಿಯೆಗಳು ಬದಲಾಗಿ ಸ್ವರೂಪಾಕಾರವು ಪಾವನವಾಗುವದು, ಬಳಿಕ ಸಾಯುಜ್ಯತೆಯನ್ನು ಭೋಗಿಸಹತ್ತುವನು ಇಂಥ ಸಚ್ಛಿಷ್ಯರು ಪರಮ ದುರ್ಲಭರಾಗಿರುವರು ಇಂಥವರಲ್ಲದೆ ಕಪಟ ವೇಷಧಾರಿಗಳಾದ ಅಸಚ್ಛಿಷ್ಯರು ಅನೇಕರಿರುವರು ಅವರ ಚಿತ್ತದಲ್ಲಿಯ ವಿಷಯಗಳು ಬಲವತ್ತರವಾಗಿರುವ ಮೂಲಕ ಅವರ ಪರಮಾರ್ಥದ ಬಯಕೆ ಹಾಳಾಗುವದು ಅಂದರೆ ಅವರಲ್ಲಿ ಪರಮಾರ್ಥ ವಿಚಾರವು ದೃಡ ಉಳಿಯದು, ಮತ್ತು ಅವರು ಪ್ರಪಂಚದ ದುಡಿತ ಕರ್ಮ ಗಳಲ್ಲಿಯೇ ಕೊನೆಗೊಂಡು ನತ್ತು ಹೋಗುವರು ಅಂಥವರ ಮನಸ್ಸಿನಲ್ಲಿ ತಡೆಯಲಾರದ ಕಾಮವಾಸನೆಯುಂಟಾಗಿ ಪರಮಾರ್ಥ ವಿಷಯಕ ಊಹಾ ಪೋಹವು ಅವರಿಗೊಂದು ವಿನೋದಪರ ವಿಷಯವಾಗಿ ಬಿಡುವದು- ಹಂದಿ ಯನ್ನು ಗಂಧದಿಂದ, ಎಮ್ಮೆಯನ್ನು ಚಂದನದಿಂದ ಶೋಭಿಗೊಳ್ಳಿನುವಂತೆ ಆ ವಿಷಯಾನ್ವಿತರಿಗೆ ವಿವೇಕದಿಂದ ಬ್ರಹ್ಮಜ್ಞಾನೋಪದೇಶ ಮಾಡಲು ನಿರರ್ಥಕವಾಗುವದು ಬೂದಿಯಲ್ಲಿ ಹೊರಳಾಡುವ ಕತ್ತೆಗೆ ಪರಿಮಳವು ಒಪ್ಪುವದೇ? ಗೂಬೆಯನ್ನು ಹಂಸಗಳ ಹಿಂಡಿನಲ್ಲಿಡಲು ಕತ್ತಲೆಯಲ್ಲಿ ಅದು ಹಾರಿ ಹೋಗದೇ? ಅದರಂತೆ ವಿಷಯ ವ್ಯಾಮೋಹಿತನನ್ನು ಸತ್ಸಂಗ ದಲ್ಲಿ ಜೊತೆಯಾಗಿರಿಸಲು ಅವನು ಅದಕ್ಕೆ ಒಪ್ಪುವನೇ? ಅವನು ತನ್ನ ವ್ಯಾಮೋಹದಲ್ಲಿಯೇ ಹಾರಿ ಅಧಃಪತನ ಹೊಂದುವನಲ್ಲದೆ ಭಗವಂತ ನನ್ನು ಹೊಂದಲಾರನು ನಾಯಿಯು ಎಲುವಿನ ಚೂರನ್ನು ಹಲ್ಲಲ್ಲಿ ಹಿಡಿದು ಮೇಲೆ ಮೋರೆ ಮಾಡಿಕೊಂಡು ಕರಕರನೆ ಕಡಿಯುವಂತೆ ಈ ವಿಷಯಾತುರರು ವಿಷಯ ಸುಖಕ್ಕಾಗಿ ತಳಮಳಿಸುವರು ನಾಯಿಗೆ ಪರ ಮಾನ್ನವೂ ಮಂಗನಿಗೆ ಸಿಂಹಾಸನವೂ ಸೇರದಂತೆ ವಿಷಯಾಸಕ್ತರಿಗೆ ಜ್ಞಾನವು ರುಚಿಸಲಾರದು ಕತ್ತೆಯನ್ನು ಕಾಯುವದರಲ್ಲಿಯೇ ಜನ್ಮ ಕಳೆದ ಮಾನವನು ಪಂಡಿತರ ಸಭೆಯಲ್ಲಿ ಪ್ರತಿಷ್ಠೆ ಪಡೆಯುವನೆಂದು ಹೇಳಲಾಗದು ಅದರಂತೆ ವಿಷಯಾಸಕ್ತನು ಪಾರಮಾರ್ಥಿಕರಲ್ಲಿ ಪ್ರತಿಷ್ಠೆ ಪಡೆಯಲಾರನು ರಾಜಹಂಸವನ್ನು ಕಾಗೆಯು ಎಂದೂ ಸರಿಗಟ್ಟಲಾರದು, ಅಂತೆಯೇ ವಿಷಯಾಸಕ್ತನು ಪಾರಮಾರ್ಥಿಕನನ್ನು ಸರಿಗಟ್ಟಲಾರನು, ಹೆಂಡಿರು ಮಕ್ಕಳನ್ನು ಜೊತೆಗೆ ಕರೆದುಕೊಂಡು ನನಗೆ ಸಂನ್ಯಾಸ ದೀಕ್ಷೆ

ನೀಡಿರಿ ಎಂದು ವಿಷಯಾಸಕ್ತನ ಬಡಬಡಿಕೆಯ ಜ್ಞಾನವು ವ್ಯರ್ಥವು ಇಂಥ ಕಲಿತ ಮೂರ್ಖರು ನರಕ ಕ್ರಿಮಿಗಳೇ ಸರಿ ಅವರಿಗೆ ಅದ್ವೈತ ಸುಖವು ದೊರಕುವದೇ ಸಾಧ್ಯವಿಲ್ಲ, ವಿಷಯಕ್ಕೆ ದಾಸನಾದವನು ದೇವ ದಾಸನು ಅದೆಂತಾಗುವನು? ಶಾಬ್ದಿಕ ಜ್ಞಾನವನ್ನು ಬಡಬಡಿಸುವ ವಿಷ ಯಾಸಕ್ತನು ಎಂದೂ ನಿಜವಾದ ಜ್ಞಾನ ಪಡೆಯಲಾರನು ಗುರೂಪ ದೇಶ ಪಡೆದ ಶಿಷ್ಯನು ಈ ಪ್ರಕಾರ ವಿಷಯಲಂಪಟನೂ, ನಷ್ಟ-ದುಷ್ಟನೂ, ಪಾಪಿಷ್ಠನೂ ಆದದ್ದಾದರೆ ಅವನ ಪಾಪವು ವಜ್ರಲೇಪವೆಂದೇ ಹೇಳ ಬಹುದು ಆದರೆ ಅವನು ಪಶ್ಚಾತ್ತಾಪದಿಂದ ಬೆಂದು ಪುನಃ ಗುರುವಿಗೆ ಶರಣು ಹೋದರೆ, ಗುರುವು ಆತನಿಗೆ ದಯೆದೋರಿದರೆ ಮಾತ್ರ ಅವನ ಉದ್ಧಾರವಾಗಬಹುದು, ಇಲ್ಲದಿದ್ದರೆ ಇಲ್ಲ

ಇನ್ನು ಸ್ವಾಮಿದ್ರೋಹ ಬಗೆದವನು ಆಚಂದ್ರಾರ್ಕವೂ ನರಕವಾಸ ಪಡೆಯುವನು ಅವನು ಸ್ವಾಮಿಯನ್ನು ಸಂತುಷ್ಟಗೊಳಿಸಿಕೊಳ್ಳುವದೇ ಅವನಿಗೆ ತರಣೋಪಾಯವು, ಬೇರೆ ಉಪಾಯವಿಲ್ಲ

ಕ್ಷಣಿಕ ವೈರಾಗ್ಯಉಂಟಾಗಿ ಸ್ವಾಮಿಗೆ ಶರಣು ಹೋಗುವದರಿಂದ ಜ್ಞಾನ ಉಂಟಾಗಲಾರದು ಕೇವಲ ಮಂತ್ರಪ್ರಾಪ್ತಿಗಾಗಿ ಗುರುವಿನಲ್ಲಿ ಗುರುತ್ವಭಾವವನ್ನು ತಂದುಕೊಂಡು ಮಂತ್ರ ಪಡೆದುಕೊಳ್ಳುವವನ ಶಿಷ್ಯ ತ್ವವು ಎರಡು ದಿನದ್ದೆಂದು ಹೇಳಬಹುದು ಆತನು ಮತ್ತೆ ಬೇರೆ ಗುರುವಿನಲ್ಲಿ ಹೋಗಿ ಮೊದಲಿಗಿಂತಲೂ ಹೆಚ್ಚು ಕಲಿತು ಪಾಖಂಡಿ ಯಾಗಿ ಬಡಬಡಿಸುವನು ಕ್ಷಣದಲ್ಲಿ ಅಳುವನು, ಹಾಡುವನು, ವೈರಾಗ್ಯ ವನ್ನು ತೋರಿಸುವನು ಪುನಃ ಅಹಂಕಾರಯುಕ್ತನಾಗುವನು

ಕಾಮ, ಕ್ರೋಧ, ವಿಷಯಸಂಗ, ಸಂಶಯ, ಆಶೆ, ಮಮತೆ, ಕಾಮನಾ, ದೇಹಬುದ್ಧಿ, ನಿದ್ದೆ, ಹಸಿವು, ನೀರಡಿಕೆ, ಚಿಂತೆ ಇವೆಲ್ಲವು ಆ ಕುವಿದ್ಯಾವಂತನ ಲಕ್ಷಣದ್ಯೋತಕಗಳು ಇವೆಲ್ಲವು ಅವನಲ್ಲಿ ತುಂಬಿ ರುವವು ಸಚ್ಛಿಷ್ಯನ ಲಕ್ಷಣಗಳು ಏನೊಂದು ಆತನಲ್ಲಿ ಇರುವದಿಲ್ಲ ಇಂಥ ಮೂಢನೂ, ಚಂಚಲನೂ, ಪತಿತನೂ, ವಿಷಯಾಸಕ್ತನೂ, ಅನ್ಯರ ಹುಳುಕನ್ನು ಎತ್ತಿ ತೋರಿಸುವವನೂ ಆದ ಪಾಪವನು ಒಬ್ಬ ಶ್ರೇಷ್ಠ ಗುರುವಿನ ಶಿಷ್ಯತ್ವವನ್ನು ವಹಿಸಿ ಉಪಯೋಗವೇನು? ಅವನಿಗೆ

ಸಂಸಾರ ತೊಂದರೆ, ಪರಮಾರ್ಥದ ಹಾನಿಯುಂಟಾಗಿ ಅವನ ಪ್ರಿಯ ವಂತರು ಅವನಿಂದ ದೂರಾಗುವರು, ಮತ್ತು ಭಗವಂತನನ್ನು ಆತನು ಕಾಣದಾಗುವನು ಇದೆಲ್ಲವು ಅಂಥ ನೀಚ ಶಿಷ್ಯನ ಬಗೆಗೆ ವಿವರವಾಯಿತು ಸತ್ವಗುಣಸಂಪನ್ನ ಸಚ್ಛಿಷ್ಯನು ವೈರಾಗ್ಯ, ದೃಢವಿಶ್ವಾಸ ಮುಂತಾದ ನಿರ್ಮಲ ಗುಣಗಳಿಂದ ಸ್ವಾನಂದ ಸುಖ ಪಡೆಯುವನು, ವಿಕಲ್ಪನೆ, ಕುಲಾ ಭಿಮಾನ ಮುಂತಾದ ದೋಷಾನ್ವಿತ ಪ್ರಾಪಂಚಿಕನು ಕಡೆಗೆ ಕಷ್ಟಕ್ಕೇ ಗುರಿಯಾಗುವನು, ಸಂಸಾರವು ತುದಿಮೊದಲು ದುಃಖರೂಪವಾಗಿರುವದು, ಸಂಸಾರದಲ್ಲಿದ್ದುಕೊಂಡು ಸುಖಪಡೆದವರಾರೆಂಬುದನ್ನು ಯಾರೂ ಕೇಳಿಲ್ಲ ಹಾಗು ನೋಡಿರುವದಿಲ್ಲ ಇದನ್ನರಿತರೂ ಅನ್ಯರಿಗೆ ಅಹಿತ ಬಯಸು ವವನು ತಾನೂ ದುಃಖಕ್ಕೆ ಗುರಿಯಾಗುವನೆಂಬದನ್ನು ಮರೆಯುವನು, ಸಂಸಾರದಲ್ಲಿ ಸುಖವನ್ನು ತಿಳಿದ ಮಂದಮತಿಯು ಕಲಿತ ಮೂರ್ಖ ನೆಂದೇ ಹೇಳಬಹುದು, ಸುಖವಾಗಿ ಪ್ರಪಂಚವನ್ನು ಸಾಗಿಸಿಕೊಂಡು ಕೆಲವು ಪರಮಾರ್ಥವನ್ನು ಸಾಧಿಸಿಕೊಳ್ಳಬೇಕು,ಕೆಲವನ್ನು ಬಿಟ್ಟುಬಿಡಬೇಕು ಎಂಬ ವಿಚಾರ ಎಂದಿಗೂ ಹಿತವಲ್ಲ,

ಇದು ವರೆಗೆ ಗುರುಶಿಷ್ಯರ ಲಕ್ಷಣಗಳನ್ನು ಹೇಳಿತು ಇನ್ನು ಉಪದೇ ಶದ ಲಕ್ಷಣಗಳನ್ನು ಹೇಳುವೆವು

ಶ್ರೀ ರಾಮ ॥ ೪ ಉಪದೇಶ ಲಕ್ಷಣ ॥ ಇನ್ನು ಉಪದೇಶದ ಲಕ್ಷಣ ಗಳನ್ನು ಕೇಳಿರಿ ಹಲವು ಮಂತ್ರಗಳ ಉಪದೇಶ ಬೋಧಿಸುವ ಗುರು ಗಳು ಹಲವರಿರುವರು- ಕೆಲವರು ಪ್ರಣವ ಜಪದ ಬಗೆಗೆ, ಕೆಲವರು ಶಿವ, ಭವಾನೀ, ವಿಷ್ಣು, ಗಣೇಶ ಮತ್ತು ಸೂರ್ಯ ಇವರ ಮಂತ್ರದ ಉಪದೇಶ ಮಾಡುವರು ಹಲವು ದೇವತೆಗಳಿಗೆ ಸಂಬಂಧಿಸಿ ಹಲವು ಮಂತ್ರಗಳಿರು ವವು ದೇವತೆಗಳಿದ್ದಷ್ಟು ಮಂತ್ರಗಳಿರುವವು ಅವುಗಳಲ್ಲಿ ಕೆಲವು ಮಂತ್ರ ಗಳು ಸುಕರವಾಗಿ ಕೆಲವು ದುಷ್ಕರವಾಗಿ ಇರುವವು ಕೆಲವು ಬೀಜಾ ಕ್ಷರ ಮಂತ್ರಗಳು ದಾರುಣವಾಗಿರುವವು ಭೂಮಿಯ ಮೇಲೆ ಅಸಂಖ್ಯ ದೇವತೆಗಳು ಅವುಗಳ ಸಂಖ್ಯೆಯು ಲೆಕ್ಕವಾಗದಷ್ಟಿರುವದು ಆ ದೇವ ತೆಗಳಿಗನುಸರಿಸಿ ಅಸಂಖ್ಯ ಮಂತ್ರಗಳೇ ಇರುವವು ಕೆಲವು ಮಂತ್ರಗಳಿಂದ ಭೂತ-ಪಿಶಾಚಿ ಬಾಧೆಗಳೂ, ಕೆಲವುಗಳಿಂದ ರೋಗ ಪರಿಹಾರವೂ ಉಂಟಾ

ಗುವದು ಹಿವತಾಪ ನಿವಾರಿಸುವ ಮಂತ್ರ, ಹಾವು ಚೇಳುಗಳ ವಿಷ ವನ್ನು ಇಳಿಸುವ ಮಂತ್ರ ಹೀಗೆ ಅನೇಕ ಪ್ರಕಾರಗಳ ಮಂತ್ರಗಳು ಕಿವಿ ಯಲ್ಲಿ ಉಪದೇಶಿಸಲ್ಪಡುವವು ಇದಲ್ಲದೆ ಜಪ, ಧ್ಯಾನ, ಪೂಜಾ, ಯಂತ್ರಾ ದಿಗಳು ವಿಧಾನಯುಕ್ತವಾಗಿ ಬೋಧಿಸಲ್ಪಡುವವು ಹರಿಹರರ ನಾಮ ಮಾತ್ರ ಅನೇಕ ಮಂತ್ರಗಳನ್ನು ಹೇಳುವರು ಶಿವ-ಶಕ್ತಿ ಸ್ವರೂಪದ ಹಲವು ಮಂತ್ರಗಳಿರುವವು ಉಪದೇಶ ಪಡೆಯುವವರ ಇಚ್ಛೆಗನುಸರಿಸಿ ಆವ ಶ್ಯಕ ಮಂತ್ರಗಳು ಆ ಗುರುಗಳಿಂದ ಬೋಧಿಸಲ್ಪಡುವವು ಕೆಲವರು ಖೇಚರೀ, ಭೂಚರೀ, ಚಾಚರೀ, ಅಗೋಚರೀ ಈ ನಾಲ್ಕು ಮುದ್ರಾಗಳ ಬಗೆಗೆ ಬೋಧಿಸುವರು ಇವಲ್ಲದೆ ಆಸನ ವಿಧಿಗಳು, ಹೇಳಲ್ಪಡುವವು ಕೆಲವರು ಮಂತ್ರದಿಂದ ಅಪೂರ್ವ ದೃಶ್ಯಗಳನ್ನು ತೋರಿಸುವರು ಕೆಲ ವರು ಅನಾಹತ ಧ್ವನಿ (ತಡೆಯಿಲ್ಲದೆ ಪಸರಿಸಿದ ಧ್ವನಿ)ಯನ್ನು ಶ್ರವಣ ಮಾಡಿಸುವರು ಶಾರೀರಿಕ ವಿಜ್ಞಾನಿಗಳು ಪಿಂಡಜ್ಞಾನ ಹೇಳುವರು, ಕೆಲವರು ಕರ್ಮಮಾರ್ಗ ಉಪಾಸನಾ ಮಾರ್ಗಗಳನ್ನು ಬೋಧಿಸುವರು, ಅಷ್ಟಾಂಗ ಯೋಗಗಳನ್ನೂ ಅವಕ್ಕಾಗಿ ಹಲವು ಚಕ್ರಗಳನ್ನು ಬೋಧಿಸು ವರು ಕೆಲವರು ತಪಸ್ಸನ್ನು ಆಚರಿಸುವದನ್ನೂ ಮತ್ತೆ ಕೆಲವರು ಅಜ ಪಾಜಪ ವಿಧಿಯನ್ನು ಮಂತ್ರವನ್ನೂ ಹೇಳುವರು

ತತ್ವಜ್ಞಾನಿಗಳು ತತ್ವಗಳನ್ನು ವಿಸ್ತರಿಸುವರು ಮತ್ತೆ ಕೆಲವರು ಸಗು ಣೋಪಾಸನೆಯನ್ನು ತಿಳಿಸುವರು ಇನ್ನೊಬ್ಬರು ನಿರ್ಗುಣೋಪಾಸನೆ ಯತ್ತ ಮನ ಸೆಳೆಯುವರು. ಇದರಂತೆ ಇನ್ನೂ ಹಲಕೆಲವು ಗುರುಗಳು ತೀರ್ಥಯಾತ್ರೆ ಮಾಡಲು ಬೋಧಿಸುವರು, ಮಹಾವಾಕ್ಯವನ್ನು ಉಪದೇ ಶಿಸಿ ಅದನ್ನು ಜಪಿಸುವ ಕುರಿತು ತಿಳಿಸುವರು ಸರ್ವಬ್ರಹ್ಮನ ಬಗೆಗೆ ಹೇಳುವರು ಇನ್ನೂ ಕೆಲವರು ಶಾಕ್ತಮಾರ್ಗ ಪ್ರವರ್ತಕರನ್ನಾಗಿ ಮಾಡು ವರು, ಕೆಲವರು ಮುಕ್ತಮಾರ್ಗವನ್ನು ಪ್ರತಿಷ್ಠಾಪಿಸುವರು ಕೆಲವರು ತನ್ನನ್ನು ತಾನೇ ಪೂಜಿಸಿಕೊಳ್ಳುವ ಇಂದ್ರಿಯ ಪೂಜೆಯ ಮಾರ್ಗದರ್ಶನ ಮಾಡಿ ಕೊಡುವರು

ಈ ಮೇಲಿನ ಉಪದೇಶಗಳಲ್ಲದೆ—

ವಶೀಕರಣ, ಸ್ತಂಬನ, ಮೋಹನ, ಉಚ್ಚಾಟನ, ಜಾಟಕ ಮಾಟಕ ಮುಂತಾದ ಹಲವು ವಿದ್ಯೆಗಳ ಬಗೆಗೆ ಆಯಾ ಗುರುಗಳಿಂದ ಬೋಧಿಸಲ್ಪಡುವದು ಹೀಗೆ ಉಪದೇಶಗಳ ಸ್ಥಿತಿಯನ್ನು ನಿರೂಪಿಸುವದು ಇನ್ನು ಸಾಕು. ಇಂಥ ಉಪದೇಶಗಳು ಇನ್ನೂ ಹಲವು ಉಂಟು. ಆದರೆ ಎಲ್ಲ ಉಪದೇಶಗಳಿಗೆ ಜ್ಞಾನವೇ ಮುಖ್ಯಾಧಾರವು ಆ ಜ್ಞಾನವೊಂದಿಲ್ಲದೆ ಹೋದರೆ ಉಪದೇಶಗಳೆಲ್ಲ ನಿರರ್ಥಕವೆಂದು ಹೇಳಬಹುದು ಇದನ್ನು ಕುರಿತು ಭಗವದುಕ್ತಿಯು ಇಂತಿದೆ—

ಹಲವು ಶಾಸ್ತ್ರಗಳನ್ನು ಪಠಣ ಮಾಡುವದಕ್ಕೂ ಹಲವು ದೇವತೆಗಳ ಆರಾಧನೆಗೂ ಆತ್ಮಜ್ಞಾನ ಅತ್ಯವಶ್ಯ ಈ ಆತ್ಮಜ್ಞಾನವಿಲ್ಲದ ಕರ್ಮಗಳೆಲ್ಲ ನಿರರ್ಥಕವಾದವು ಶೈವ, ಶಾಕ್ತ, ಆಗಮ ಮುಂತಾದ ಬೇರೆ ಹಲವು ಮತಗಳಿವೆ ಅವೆಲ್ಲ ಜ್ಞಾನರಾಹಿತ್ಯದಿಂದ ಅಪಭ್ರಂಶವಾಗಿ ಪ್ರಾಣಿಗಳನ್ನು ಭ್ರಾಂತಿಗೀಡು ಮಾಡುವವು, ಆದುದರಿಂದ ಜ್ಞಾನಕ್ಕೆ ಸಮವಾದದು ಇನ್ನೊಂದಿಲ್ಲ ಅದುವೇ ಪವಿತ್ರವು ಹಾಗು ಅಜ್ಞಾನವೇ ಶ್ರೇಷ್ಠವಾದುದು'

ಆದುದರಿಂದ ಪವಿತ್ರವಾದ ಆತ್ಮಜ್ಞಾನವನ್ನು ಸಾಧಿಸಿಕೊಳ್ಳಲೇಬೇಕು ಹಲವು ಬೋಧೆಗಳಲ್ಲಿ ಆತ್ಮಜ್ಞಾನದ ಬೋಧೆಯು ಶ್ರೇಷ್ಠವೆಂದು ಭಗವಂತನು ಮೇಲೆ ಮೇಲೆ ಉಪದೇಶ ಮಾಡುತ್ತ ಬಂದಿರುವನು ಮತ್ತು ಆತನು ಬೋಧಿಸುವದೇನೆಂದರೆ —

''ಯಾವ ಜಾತಿಯವನೇ ಆದರೂ ಅವನಲ್ಲಿ ಆತ್ಮಜ್ಞಾನವು ಪ್ರತಿಷ್ಠಿತವಾಗಿದ್ದರೆ ನಾನು ಜನ್ಮಜನ್ಮಾಂತರಗಳಲ್ಲಿಯೂ ಕೂಡ ಆ ಮಾನವನ ಆಳಿನ ಆಳಾಗುವೆನು''

ಎಂದ ಮೇಲೆ ಆತ್ಮಜ್ಞಾನದ ಮಹತಿಯು ಸ್ಪಷ್ಟವಾಗುವದು. ಅದರ ಮಹಿಮೆಯು ಚತುರ್ಮುಖ ಬ್ರಹ್ಮನಿಗೆ ತಿಳಿಯದೆಂದ ಮೇಲೆ ಪ್ರಾಣಾಂತರ್ಗತ ಜೀವಾತ್ಮನು ಅದೆಂತು ತಿಳಿಯುವನು? ಆತ್ಮಜ್ಞಾನದ ಸ್ಥಿತಿಯು ಸಕಲ ತೀರ್ಥಗಳ ಮಹತಿಗಿಂತಲೂ, ಸ್ನಾನದಾನಗಳ ಫಲಶ್ರುತಿಗಿಂತಲೂ ಕೋಟಿ ಪಟ್ಟು ಮಹತ್ವವುಳ್ಳದ್ದಾಗಿರುವದು. ಇದೇ ಅರ್ಥವನ್ನು ಹೇಳುವ ಶ್ಲೋಕವೊಂದರ ಅರ್ಥವು ಹೀಗೆ ಇರುವದು

ಈ ಎಲ್ಲ ವಿವರಗಳಿಂದ ಆತ್ಮಜ್ಞಾನವು ದೊಡ್ಡದು ಅಂದರೆ ದೊಡ್ಡದಕ್ಕಿಂತಲೂ ದೊಡ್ಡದಾಗಿರುವದು ಇದನ್ನೇ ಮುಂದೆ ಹೇಳಲ ಡುವದು

ಶ್ರೀ ರಾಮ || ೫ ಬಹುಧಾಜ್ಞಾನ || ಎಲ್ಲಿಯ ವರೆಗೆ ಶುದ್ಧ ಜ್ಞಾನ ಪ್ರಾಪ್ತವಾಗುವದಿಲ್ಲವೋ ಅದುವರೆಗೆ ಎಲ್ಲವೂ ವ್ಯರ್ಥ ಜ್ಞಾನವಿಲ್ಲದೆ ಮನಸಿನ ತಳಮಳವು ನಿಲ್ಲುವದಿಲ್ಲ 'ಜ್ಞಾನ'ವೆಂದ ಕೂಡಲೆ ಅದರಲ್ಲಿ ಗೂಢವೇನಿದೆ ಎಂಬದು ತಿಳಿಯದೆ ಮಾನವನು ತೊಂದರೆ ಗೀಡಾಗ ಬಹುದು ಇದಕ್ಕಾಗಿ ಜ್ಞಾನದಲ್ಲಿ ಯಾವ ಯಾವ ಸಂಗತಿಗಳ ಸಮಾ ವೇಶವಾಗುವದಿಲ್ಲೆಂಬುದನ್ನು ಮೊದಲು ಹೇಳಿ ಬಳಿಕ ಜ್ಞಾನವೆಂದರೇ ಎಂಬುವದನ್ನು ಹೇಳುವೆವು

ಭೂತ, ಭವಿಷ್ಯ, ವರ್ತಮಾನ ಕಾಲಗಳ ಸಂಗತಿಯನ್ನು ಹೇಳು ವದು ತ್ರಿಕಾಲ ಜ್ಞಾನವೆನ್ನಿಸುವದು ಲದರೆ ಇದು ನಿಜವಾದ ಜ್ಞಾನ ವೆಂದು ತಿಳಿಯಲಾಗದು ಬಹಳ ವಿದ್ಯೆಗಳನ್ನು ಕಲಿಯುವದು, ಸಂಗೀತ ಶಾಸ್ತ್ರ-ರಾಗ ಜ್ಞಾನಗಳನ್ನು ಅರಿತು ಕೊಳ್ಳುವದು, ವೈದಿಕ ಶಾಸ್ತ್ರ ಪಾರಂಗತನಾಗುವದು, ವೇದಾಧ್ಯಯನ ಮಾಡುವದು ಇವೆಲ್ಲವೂ ನಿಜ ಜ್ಞಾನಗಳಲ್ಲ. ಇದರಂತೆ ಹಲವು ಉದ್ಯೋಗ ಜ್ಞಾನಗಳು, ದೀಕ್ಷೆ, ಪರೀಕ್ಷೆ, ಇವೂ ಜ್ಞಾನಗಳಲ್ಲ ಸ್ತ್ರೀ ಪರೀಕ್ಷೆ, ನದೀ ಪರೀಕ್ಷೆ ,ಮಾನವ ಪರೀಕ್ಷೆ, ಅಶ್ವ ಪರೀಕ್ಷೆ, ಗಜ ಪರೀಕ್ಷೆ, ಕ್ರೂರ ಶ್ವಾಪದಗಳ ಪರೀಕ್ಷೆ, ಪಶು-ಪಕ್ಷಿಗಳ ಪರೀಕ್ಷೆ, ಭೂತಾದಿಗಳ ಪರೀಕ್ಷೆ, ವಾಹನ ಪರೀಕ್ಷೆ, ವಸ್ತ್ರ ಪರೀಕ್ಷೆ, ಶಸ್ತ್ರ ಪರೀಕ್ಷೆ, ಧಾತು-ಲೋಹ ಪರೀಕ್ಷೆ, ನಾಣ್ಯ ಪರೀಕ್ಷೆ, ರತ್ನ-ಪಾಷಾಣಗಳ ಪರೀಕ್ಷೆ, ಕಾಷ್ಟ ಪರೀಕ್ಷ, ವಾದ್ಯ ಪರೀಕ್ಷೆ ಇವೆಲ್ಲವು ನಿಜವಾದ ಜ್ಞಾನಗಳಲ್ಲಿ ಇವುಗಳಂತೆ ಮತ್ತೂ-

ಭೂಮಿ ಜಲ, ತೇಜ, ರಸ, ಬೀಜ, ಅಂಕುರ, ಪುಷ್ಟ, ಫಲಗಳು ಬಳ್ಳಿ ಇವೆಲ್ಲವುಗಳನ್ನು ನಿರೀಕ್ಷಿಸಿ ಪರೀಕ್ಷಿಸುವ ಜ್ಞಾನವು ಜ್ಞಾನವಿಲ್ಲ

ದುಃಖ, ರೋಗ, ಚಿಹ್ನ, ಯಂತ್ರ—ಮಂತ್ರ, ಮುಹೂರ್ತ, ಕ್ಷೇತ್ರ, ಗೃಹ, ಪಾತ್ರೆ, ಭವಿಷ್ಯ, ಕಾಲ, ತರ್ಕ, ಅನುಮಾನ, ನೀಮಸ್ತ, ಪ್ರಕಾರ, ವಿದ್ಯೆ–ಕಲೆಗಳು, ಚಾತುರ್ಯ, ಶಬ್ದ–ಅರ್ಥ–ಭಾಷೆಗಳು, ಸರ್ವ—ವರ್ಣ–ಲೇಖನಗಳು, ಮತ–ಜ್ಞಾನ–ವೃತ್ತಿಗಳು, ರೂಪ–ರಸನೆ–ಗಂಧಗಳು, ಸೃಷ್ಟಿ—ವಿಸ್ತಾರ, ಪದಾರ್ಥ ಇವೆಲ್ಲವುಗಳ ಪರೀಕ್ಷೆಯ ಜ್ಞಾನವು ನಿಜವಾದ ಜ್ಞಾನವಲ್ಲ ನಿಯಮಿತ ವಾಕ್ಯ, ಆಶುಪ್ರತ್ಯುತ್ತರ, ಶೀಘ್ರ ಕವಿತ್ವ ಇವೆಲ್ಲ ಜ್ಞಾನಗಳಲ್ಲ

ಕಣ್ಸನ್ನೆ, ಕರ ಪಲ್ಲವಿ, ನುಡಿ ಪರೀಕ್ಷ ಇವೂ ಜ್ಞಾನಗಳಲ್ಲ ಇವುಗಳಂತೆ ಕಾವ್ಯ ಕುಶಲತೆ, ಸಂಗೀತ ಕಲೆ, ಗಾಯನ ಪ್ರಬಂಧ, ನಾಟ್ಯಕಲೆ, ಸಭಾ ರಂಜನೆಯ ಮಾತುಗಳು, ಮನಹರ ವಚನಗಳು, ಮೋಹನ ಕಲೆ, ರಮ್ಯ ಗಾಯನ ಹಾಸ್ಯ ವಿನೋದಗಳು, ಕಾಮ ಕಲೆಯು, ಕುಶಲ ಕಾರಾಗೀರತೆ, ಚಿತ್ರಕಲೆ, ವಾದ್ಯ ವಿದ್ಯೆ, ಹಲವು ಬಗೆಯ ಚಮತ್ಕಾರಿಕ ಕಲೆಗಳ ಮೊದಲಾಗಿ ಅರವತ್ನಾಲ್ಕು ಕಳೆಗಳು, ಹದಿನಾಲ್ಕು ವಿದ್ಯೆಗಳು, ಸಕಲ ಸಿದ್ಧಿ ಪ್ರಾಪ್ತಿ ಇವೆಲ್ಲವು ನಿಜವಾದ ಜ್ಞಾನಗಳಲ್ಲ

ಈ ಮೇಲಿನವೆಲ್ಲವೂ ನಿಜವಾದ ಜ್ಞಾನಗಳಲ್ಲ ಅದೆಂತಿರಲಿ ಎಲ್ಲ ವಿದ್ಯೆ ಕಲೆಗಳಲ್ಲಿ ಬಲ್ಲಿದವನೂ ಪರಿ ಪೂರ್ಣನೂ ಕೌಶಲ್ಯಯುತನೂ ಆದಂಥವನು ನಿಜಜ್ಞಾನ ಗಳಿಸಿಕೊಂಡವನೆಂದು ಹೇಳಲಾಗುವದು.

ಇಂಥವನಿಗಾದ ಜ್ಞಾನಗಳ ಹೊರತು ನಿಜವಾದ ಜ್ಞಾನವು ಬೇರೆಯೇ ಇರುವದು. ಆ ಜ್ಞಾನವೇ ಮುಖ್ಯವಾದುದು ಅದರ ಹೊರತು ಉಳಿದವಕ್ಕೆ ಜ್ಞಾನವೆನ್ನುವದು ಹುಚ್ಚುತನವು

ಇನ್ನು ಅನ್ಯರ ಮನೋಗತದ ಬಗೆಗೆ ಅರಿತು ಕೊಳ್ಳುವದನ್ನು ಜ್ಞಾನವೆಂದು ತಿಳಿಯಬಹುದು ಆದರೆ ಅದಾದರೂ ಆತ್ಮ ಜ್ಞಾನದ ಲಕ್ಷಣವಲ್ಲ ಯಾವನೊಬ್ಬ ಮಹಾತ್ಮನು ಮಾನಸ ಪೂಜೆಯನ್ನು ಕೈಕೊಂಡಾಗ ಆತನು ಎಲ್ಲಿ ತಪ್ಪಿದನೆಂಬುದನ್ನು ಬೇರೊಬ್ಬನು ತನ್ನ ಅಂತರ್ಜ್ಞಾನದಿಂದ 'ನೀನು ಇಂಥಲ್ಲಿ ತಪ್ಪಿದಿರಿ' ಎಂದು ಸ್ಪಷ್ಟವಾಗಿ ಆತನಿಗೆ ಹೇಳುವನು ಎಂದ ಮೇಲೆ ಆ ಮಾನವನ ಅಂತರ್ಜ್ಞಾನವು ಜ್ಞಾನವೆಂದು ಭಾವಿಸುವದು ಸರಿಯಾಗಲಾರದು ಯಾಕಂದರೆ ಅಂತರ್ಜ್ಞಾ

ನಕ್ಕೆ ಆತ್ಮಜ್ಞಾನವೆನ್ನಲಾಗದು ಇಂಥ ಅಂತಜ್ಞಾ೯ನಿಯನ್ನು ಜನರು ಪರಮ ಜ್ಞಾನಿಯೆಂದು ತಿಳಿಯುವದು ಆದರೆ ಆವನಲ್ಲಿಯ ಆ ಅಂತ ಜ್ಞಾ೯ನವು ಮೋಕ್ಷವನ್ನು ಕೊಡುವದಿಲ್ಲ

ಇಂತು ಜಗತ್ತಿನಲ್ಲಿ ಹಲವು ಬಗೆಯ ಅಸಾಮಾನ್ಯ ಜ್ಞಾನಗಳು ಅದೆಷ್ಟೋ ಇರುವವು ಆದರೆ ಸಾಯುಜ್ಯತೆಯೆಂಬ ಶ್ರೇಷ್ಠ ಮೋಕ್ಷ ದಾಯಕ ಜ್ಞಾನವು ಆ ಎಲ್ಲ ಜ್ಞಾನಗಳಿಂದ ಭಿನ್ನವೂ ಮಹತ್ವದ್ದೂ ಆಗಿ ರುವದು ಆದರೂ ಆ ನಿಜಜ್ಞಾನವು ಎಂಥದಿರುವದು? ಸಮಾಧಾನದ ಲಕ್ಷಣಗಳೇನು ? ಎಂದು ಶ್ರೋತೃಗಳ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಶುದ್ಧ ಜ್ಞಾನದ ಬಗೆಗೆ ಮುಂದಿನ ಸಮಾಸದಲ್ಲಿ ನಿರೂಪಿಸಿರುವರು ಶ್ರೋತೃ ಗಳು ಲಕ್ಷ್ಯಗೊಟ್ಟು ಅವಧರಿಸಬೇಕು

ಶ್ರೀ ರಾಮ || ೬ ಶುದ್ಧ ಜ್ಞಾನ || ಇನ್ನು ಜ್ಞಾನದ ಲಕ್ಷಣವನ್ನು ಕೇಳಿರಿ. ಇಲ್ಲಿ ಜ್ಞಾನವೆಂದರೆ ಆತ್ಮಜ್ಞಾನವು ಅಂದರೆ ತನ್ನನ್ನು ತಾನೇ ಕಂಡು ಕೊಳ್ಳುವದು ಎಂದರ್ಥ ಇನ್ನು ಜ್ಞಾನಗಳೆಂಬವು ಯಾವವು ನೋಡೋಣ.

ಮುಖ್ಯವಾಗಿ ದೇವನನ್ನು ಅರಿತುಕೊಳ್ಳುವದು ಅಂದರೆ ಆತನ ಸತ್ಯ ಸ್ವರೂಪವನ್ನು ತಿಳಿಯುವದು ಹಾಗು ನಿತ್ಯಾ—ನಿತ್ಯ ವಿಚಾರಿಸಿ ಕೊಂಡು ಶಾಶ್ವತವಾದುದನ್ನು ತಿಳಿಯುವದು ಈ ಎಲ್ಲ ಕ್ರಿಯೆಗಳು ಜ್ಞಾನವೆನ್ನಿಸುವವು

ಮಾನವನ ದೃಶ್ಯ ಪ್ರಕೃತಿಯು ಅಡಗಿ ಪಂಚಭೂತಗಳೆಲ್ಲ ಇಲ್ಲ ದಂತಾಗಿ ದ್ವೈತವು ನಷ್ಟವಾಗಲು ಅವರಲ್ಲಿ ಜ್ಞಾನವು ಉದಯ ವಾಗುವದು

ಮನಸು-ಬುದ್ಧಿಗಳಿಗೆ ಕಾಣದ ಹಾಗು ತರ್ಕಕ್ಕೆ ನಿಲುಕದ ಮತ್ತು ಶ್ರೇಷ್ಠಕ್ಕಿಂತಲೂ ಶ್ರೇಷ್ಠನಾದ ಪರಮಾತ್ಮನನ್ನು ಅರಿಯುವದೇ ಜ್ಞಾನವು ಶುದ್ಧ ಸ್ವರೂಪ ಜ್ಞಾನವೆಂದರೆ ದೃಶ್ಯ ವಸ್ತುವನ್ನು ನಿರೀಕ್ಷಿಸಿ ಅದರ ಅರಿವು ಉಳಿಯದ ಹಾಗು ಬ್ರಹ್ಮ ಸ್ವರೂಪ ಜ್ಞಾನವೂ ಕೂಡ ಜ್ಞಾತ ವಿರದ ಸ್ಥಿತಿಯು ಶುದ್ಧ ಸ್ವರೂಪ ಜ್ಞಾನವೆನ್ನಿಸುವದು ಸರ್ವ ಸಾಕ್ಷಿತ್ವ

ವುಳ್ಳ ತುರ್ಯಾವಸ್ಥೆಗೆ ಜ್ಞಾನವೆನ್ನುವರು ಆದರೆ ಆ ಅವಸ್ಥೆಯೂ ಸ್ಥಿತಿಯೂ ಪದಾರ್ಥ ಜ್ಞಾನದಲ್ಲಿ ಬರುವದರಿಂದ ಅದು ಶುದ್ಧ ಜ್ಞಾನವಲ್ಲ ಪದಾರ್ಥ ಜ್ಞಾನವೆಂದರೆ ದೃಶ್ಯ ವಸ್ತುಗಳನ್ನು ಅರಿತು ಕೊಳ್ಳುವದು ಸ್ವರೂಪ ಜ್ಞಾನವೆಂದರೆ ಶುದ್ಧ ಸ್ವರೂಪವನ್ನು ತಿಳಿದುಕೊಳ್ಳುವದು ಎಲ್ಲಿಯೂ ಯಾವದೂ ಇಲ್ಲದಲ್ಲಿ ಸರ್ವ ಸಾಕ್ಷಿತ್ವವು ಇರುವದುಹೇಗೆ? ಅಂದಮೇಲೆ ಆ ಸರ್ವ ಸಾಕ್ಷಿತ್ವದ ತುರ್ಯಾವಸ್ಥೆಯು ಶುದ್ಧ ಜ್ಞಾನ ವಾಗಲಾರದು

ಜ್ಞಾನವೆಂದರೆ ಅದ್ವೈತವು, ತುರ್ಯಾವಸ್ಥೆಯು ದ್ವೈತವು ಇದರ ಮೇಲಿಂದ ಶುದ್ಧ ಜ್ಞಾನವೆಂಬುದು ಸತತವೂ ಬೇರೆಯೇ ಇರುವದು ಶುದ್ಧ ಸ್ವರೂಪವನು ತಾನು, ಎಂಬ ತಿಳುವಳಿಕೆಯೇ ಶುದ್ಧ ಸ್ವರೂಪ ಜ್ಞಾನವು 'ತತ್ವಮಸಿ' ಎಂಬ ಮಹಾ ವಾಕ್ಯವು ಯೋಗ್ಯವಾದುದರೂ ಅದನ್ನು ಜಪಿಸುವದನ್ನು ಮಾತ್ರ ಹೇಳಿರುವದಿಲ್ಲ ಸಾಧಕರು ಇದನ್ನು ವಿಚಾರಿಸಬೇಕು ಈ ಮಹಾವಾಕ್ಯದ ಉಪದೇಶ ಪಡೆದರೂ ಕೂಡ ಅದರ ಜಪದಿಂದ ಭ್ರಾಂತಿಯೆಂಬ ಕಗ್ಗತ್ತಲೆ ದೂರಾಗುವದಿಲ್ಲ ಇದನ್ನು ವಿಚಾರ ಮಾಡತಕ್ಕದ್ದು ಮಹಾವಾಕ್ಯದ ಅರ್ಥವನ್ನು ನೋಡಲು ' ನಾನು ವಸ್ತುವು ಆಗಿರುವೆನು ಅಂದಮೇಲೆ ಇದರ ಜಪ ಮಾಡುವದು ವ್ಯರ್ಥವು' ಎಂದು ತಿಳಿಯುವದು ಮಹಾ ವಾಕ್ಯವು ಮುಖ್ಯವಾಗಿ ಜ್ಞಾನದ ಲಕ್ಷಣವನ್ನೇ ವಿವರಿಸುವದು ಮತ್ತು ಮಹಾ ವಾಕ್ಯದ ಶುದ್ಧತೆಯನ್ನು ನಿರೀಕ್ಷಿಸಲು ' ನಾನು ಪರಬ್ರಹ್ಮ ವಸ್ತುವು ' ಆಗಿರುವೆನು ಎಂದು ತಿಳಿಯುವದು ಅಲ್ಲದೆ ತನ್ನ ಸ್ವರೂಪ ಲಾಭಕ್ಕಿಂತ ಇನ್ನೊಂದು ಜ್ಞಾನ ಲಾಭವಿಲ್ಲ, ನನ್ನ ಸ್ವರೂಪವೇ ಅನಾದಿ ಸ್ವಯಂ ಸಿದ್ಧ ವಸ್ತುವಾಗಿರುವದು ಎಂದು ಬೋಧೆಯಾಗುವದು

ಎಲ್ಲವುಗಳ ಉತ್ಪತ್ತಿ ಲಯಗಳೊದಗುವ ಸ್ಥಾನ ( ಸ್ವಯಂ ಸಿದ್ಧ ವಸ್ತು )ದ ಜ್ಞಾನವಾದ ಕೂಡಲೆ ಎಲ್ಲ ಬಂಧನಗಳೂ ಸಂಸಾರ ಭ್ರಾಂತಿಯೂ ದೂರಾಗುವವು ಆ ಸ್ಥಾನದಲ್ಲಿ ಹಲವು ಮತಗಳು ಹಾಗು ಮತಾಂತರಗಳು ನಿರ್ವಿಕಾರತೆ ಪಡೆಯುವವು ಹಾಗು ಸೂಕ್ಷ್ಮ ವಿಚಾರದಿಂದ ನೋಡಲು ಅವುಗಳ ಐಕ್ಯತೆಯು ಕೂಡು ಬರುವದು.

ವೇದಾಂತ ಮತದಿಂದ ಈ ಚರಾಚರಕ್ಕ ಮೂಲನಾದ ವಿಮಲ ಬ್ರಹ್ಮನು ಶುದ್ಧ ಸ್ವರೂಪನೂ ಹಾಗು ನಿರ್ಮಲನೂ ಎಂದರಿಯುವದೇ ಜ್ಞಾನ ವೆಂದು ಹೇಳಲ್ಪಡುತ್ತದೆ ಆ ಮೂಲ ಬ್ರಹ್ಮನ ಸ್ಥಾನವನ್ನು ಶೋಧ ಮಾಡಲು ಅಜ್ಞಾನವು ತಾನಾಗಿಯೇ ಅಡಗುವದು ಇದಕ್ಕೇ ಮೋಕ್ಷದಾ ಯಕ ಬ್ರಹ್ಮಜ್ಞಾನವೆಂಬ ಹೆಸರು 'ನಾನು ಯಾರು' ಎಂಬದರ ಬಗೆಗೆ ಶೋಧ ಮಾಡಹತ್ತಲು ಆತ್ಮಸ್ವರೂಪದ ಪ್ರಾಪ್ತಿಯಾಗುವದು ಮೊದಲಿನ ಕಾಲದಲ್ಲಿ ವ್ಯಾಸರು ವಶಿಷ್ಠ ಮಹಾಮುನಿಗಳು, ಶುಕನಾರದರು, ಮಹಾ ಜ್ಞಾನಿಗಳಾದ ಸನಕಾದ್ಯರು, ವಾಲ್ಮೀಕಿ, ಅತ್ರಿ ಶೌನಕಾದಿ ಋಷಿಗಳು, ಆದಿ ನಾಥ, ಮತ್ಸ್ಯೇಂದ್ರ ಗೋರಖನಾಥ ಮುಂತಾದ ಮುನಿಗಳು ಇವರಲ್ಲದೆ ಇನ್ನೂ ಹಲವು ಸಿದ್ಧ ಮಹಾನುಭಾವರು ವೇದಾಂತ ಮತವನ್ನನುಸರಿಸಿ ಈ ಜ್ಞಾನದಿಂದಲೇ ಧನ್ಯತೆಯನ್ನು ಹೊಂದಿದರು ಮಹಾದೇವನು ಇದೇ ಜ್ಞಾನಾನಂದದಿಂದ ಸತತವೂ ಸಂತೃಪ್ತಿಯುಳ್ಳವನಾದನು ವೇದ, ಶಾಸ್ತ್ರ ಗುರುಬೋಧೆ, ಮತ್ತು ಆತ್ಮಾನುಭವ ಇವೆಲ್ಲವುಗಳ ಸಾರವೇ ಈ ಜ್ಞಾನವಾ ಗಿರುವದು ಭಾವಿಕರಿಗೆ ಆದರ ಭಾಗ್ಯಾನುಸಾರವಾಗಿ ಈ ಜ್ಞಾನ ಪ್ರಾಪ್ತಿ ಯಾಗುವದು ಸಾಧು ಸಂತ ಸಜ್ಜನರ ಹಾಗು ತ್ರಿಕಾಲಜ್ಞಾನಿಗಳ ಇವರೆ ಲ್ಲರ ಗುಹ್ಯಜ್ಞಾನವು ಇದೇ ಜ್ಞಾನವಾಗಿರುವದು ತೀರ್ಥ ವ್ರತ ತಪ ದಾನ ಗಳು, ಹೊಗೆಯನ್ನು ಸೇವಿಸಿ ಮಾಡುವ ತಪಸ್ಸು, ಪಂಚಾಗ್ನಿ ಸಾಧನವು, ತನ್ನನ್ನು ತಾನೇ ದಹಿಸಿಕೊಳ್ಳುವದು ಇತ್ಯಾದಿ ಸಾಧನಗಳಿಂದ ಪ್ರಾಪ್ತವಾಗ ದ್ದನ್ನು ಈ ಶುದ್ಧ ಜ್ಞಾನದಿಂದ ಫಲಿತವನ್ನಾಗಿ ಮಾಡಿಕೊಳ್ಳಲು ಬರುವದು. ಎಲ್ಲ ಜ್ಞಾನಗಳಿಗೆ ಈ ಆತ್ಮಜ್ಞಾನವೇ ಅಂತಿಮವಾಗಿರುವದು. ಈ ಜ್ಞಾನ ದಿಂದಲೇ ಸಂದೇಹ ನಿವೃತ್ತಿಯಾಗುವದು ಐವತ್ತಾರು ಭಾಷೆಗಳಲ್ಲಿ ಪ್ರಚ ಲಿತವಾದ ವೇದಾಂತ ಗ್ರಂಥಗಳೆಲ್ಲವುಗಳಲ್ಲಿಯು ಗಹನಾರ್ಥವು ಒಂದೇ ತೆರ ನಾಗಿರುವದು ವೇದ ಪುರಾಣಗಳಿಗೆ ನಿಲಕದ ರಹಸ್ಯವು ಗುರು ಕೃಪೆಯಿಂದ ಸ್ಫುಟಿಸುವದು ಸಂಸ್ಕೃತ ಗ್ರಂಥಗಳಲ್ಲಿ ನನ್ನ ಪ್ರವೇಶವಿಲ್ಲ ಪ್ರಾಕೃತ ಗ್ರಂಥಗಳನ್ನು ನಾನು ಓದಿರುವದಿಲ್ಲ. ಆದರೂ ಕೃಪಾಳು ಗುರುದೇವನು ನನ್ನ ಹೃದಯ ಸ್ಥಿತನಾಗಿರುವನು ನಾನು ವೇದಾಧ್ಯಯನ ಮಾಡದಿದ್ದರೂ ಆಯಾಸ ಪಟ್ಟು ಶ್ರವಣವನ್ನು ಕೈಕೊಳ್ಳದಿದ್ದರೂ ನನ್ನ ಪ್ರಯತ್ನವಿಲ್ಲದೆ

ಸುರಸವಾಗಿ ನನಗೆ ಗುರುಕೃಪೆಯುಂಟಾಗಿದೆ ವೇದಾಂತ ವಿಷಯಕ್ಕೆ ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿ ಗ್ರಂಥಗಳಿರುವವು ಅವುಗಳಲ್ಲಿ ಸಂಸ್ಕೃತದಲ್ಲಿಯೇ ಸ್ಪಷ್ಟವಾಗಿ ವೇದಾಂತ ಬೋಧೆಯಿರುವದು ಆ ವೇದಾಂತವನ್ನು ಳಿದು ಇನ್ನೊಂದು ಶ್ರೇಷ್ಠವಾದುದಿಲ್ಲ ಎಲ್ಲ ವೇದಗಳ ಗರ್ಭಿತಾರ್ಥವು ವೇದಾಂತದಲ್ಲಿ ಪ್ರಕಟವಾಗಿರುವದು

ಇದಂತಿರಲಿ. ಈ ವೇದಾಂತದ ಮಥಿತಾರ್ಥವು ಅತಿಗಹನವಾದದ್ದಾಗಿರುವದು ಅದೇ ಪರಮಾರ್ಥವು ಅದನ್ನೇ ಹೇಳುವೆನು ಕೇಳಬೇಕು

ಪರಮಾರ್ಥವು ಅತಿ ಗಹನವಾದುದೆಂದು ಸದ್ಗುರು ವಚನವುಂಟು ಆ ಸದ್ಗುರು ವಚನದಿಂದಲೇ ಶಾಂತಿಯು ನಿಶ್ಚಿತವಾದುದು ಆ ಗುರುವಿನ ವಚನಗಳೇ ವೇದಾಂತವು ಅವೇ ಸಿದ್ಧಾಂತಗಳು ಹಾಗು ವೇದಾಂತಗಳ್ಳನ್ನ ಜೀವಿತ ಗುಟ್ಟೆಂದರೆ ಗಹನವಾದ ಸದ್ಗುರು ವಚನಗಳ ಹಾಗೂ ಅವುಗಳಿಂದೊದಗುವ ಶಾಂತಿಯು ಇದೇ ಆಗಿರುವದು ಈ ರಹಸ್ಯವನ್ನೇ ಹೇಳುವೆನು ಕೇಳಿರಿ ಎಂದು ಗುರುವು ನುಡಿದ ಕೂಡಲೇ ಶಿಷ್ಯನು ಬಾಡಿದ ಮುಖದಿಂದ ಗುರುಪಾದಕ್ಕೆ ವಂದಿಸಿದನು ಆಗ ಗುರುಗಳು ಶಿಷ್ಯನನ್ನು ಕುರಿತು ಶಿಷ್ಯನೆ !

'ಅಹಂ ಬ್ರಹ್ಮಾಸಿ' ಎಂಬ ಮಹಾ ವಾಕ್ಯವಿದೆ ಅದರ ಅರ್ಥವು ಮಾನವನ ತರ್ಕಿಗೆ ಮಿಗಿಲಾಗಿರುವದು ಆ ವ್ಯಾಕ್ಯದಿಂದ ಗುರಶಿಷ್ಯರೆಲ್ಲ ಐಕ್ಯತೆಯುಂಟಾಗುವದು ಇದರಲ್ಲಿ ಸಂಶಯವನ್ನೆಣಿಸಬೇಡ ಒಂಭತ್ತು ಬಗೆಯ ಭಕ್ತಿಗಳಿರುವವು ಅವುಗಳಲ್ಲಿ 'ಆತ್ಮ ನಿವೇದನ ಭಕ್ತಿಯೇ' ಮುಖ್ಯವಾಗಿರುವದು ಅದರ ವಿಷಯಕ್ಕೆ ಸಾಗ್ರವಾಗಿ ಹೇಳುವೆನು

ಪಂಚಮಹಾ ಭೂತಗಳೆಲ್ಲ ಕಲ್ಪಾಂತ್ಯದಲ್ಲಿ ಒಂದರಿಂದೊಂದು ನಷ್ಟವಾಗುವವು. ಆಗ ಇವುಗಳನ್ನು ಉತ್ಪಾದಿಸಿದ ಪ್ರಕೃತಿ ಪುರುಷಗಳು ಸಹ ಬ್ರಹ್ಮನಲ್ಲಿ ಲೀನತೆಗೊಳ್ಳುವವು ದೃಶ್ಯವಸ್ತುಗಳೆಲ್ಲ ಕಾಣದಾಗಲು ಆಗ 'ನಾನು' ಎಂಬದೂ ಉಳಿಯುವದಿಲ್ಲ ಯಾಕಂದರೆ ಅವು ಮೂಲತ ಬ್ರಹ್ಮನಿಂದ ಭಿನ್ನವಿರುವದಿಲ್ಲ ಮೊದಲೇ ಅವು ಬ್ರಹ್ಮನಲ್ಲಿ ಐಕ್ಯತೆ ಹೊಂದುವವು ಸೃಷ್ಟಿಯೂ, ಪಿಂಡ ಬ್ರಹ್ಮಾಂಡಗಳೂ ಐಕ್ಯವಾದ ನಂತರ ತೋರುವದೆಲ್ಲಿ ? ಜ್ಞಾನವೆಂಬ ಬೆಂಕೆಯಿಂದ ದೃಶ್ಯಗಳೆಂಬ ಹೊಲಸು ಸುಟ್ಟು ಹಾಳಾಗುವದು

ತಾತ್ಪರ್ಯವೇನೆಂದರೆ– ಬ್ರಹ್ಮನಲ್ಲಿ ತದಾಕಾರ ವೃತ್ತಿಯಾದ ನಂತರ ಭಿನ್ನತ್ವವು ಉಳಿಯುವದಿಲ್ಲ ಈ ದೃಶ್ಯ ಸೃಷ್ಟಿಯು ಮಿಥ್ಯವಾದದ್ದು ಇದನ್ನರಿತೇ ವೃತ್ತಿಯು ಹಿಂದಿರಿಗಿತೆಂದರೆ ಅದೃಶ್ಯವು ಇದ್ದೂ ಇಲ್ಲದಂತಾಗುವದು ಇಂತು ಸಹಜನವಾಗಿ ಆತ್ಮ ನಿವೇದನೆಯ ವಿಚಾರವಾಯಿತು ಇರಲಿ

ಇನ್ನು ಗುರುವಿನಲ್ಲಿ ಅನನ್ಯಭಾವನೆಯನ್ನಿರಿಸಿದರೆ ನೀನು ಏನೊಂದು ಚಿಂತೆಯನ್ನು ಮಾಡಬೇಕಾಗಿಲ್ಲ ಮಾತ್ರ ನೀನು ಅಭಕ್ತನಾಗಿ ಗುರುವಿನಿಂದ ಹೊರತಾಗಿ ಉಳಿಯಬೇಡ ಈ ಭಕ್ತಿಯನ್ನು ನೀನು ಗುರು ಭಜನೆಯಿಂದ ಧೃಢೀಕರಿಸಿಕೊಳ್ಳು ಸದ್ಗುರು ಭಜನೆಯಿಂದ ಶಾಂತಿಯುಂಟಾಗುವದು ಇದೇ ಆತ್ಮಜ್ಞಾನವು ಈ ಜ್ಞಾನದಿಂದ ಸಮಾಧಾನವಾಗುವದಲ್ಲದೆ ಭವ ಭಯ ಬಂಧನವು ಹರಿಯುವದು ಇನ್ನು 'ದೇಹವೇ ನಾನು' ಎಂದು ತಿಳಿದವನು ಆತ್ಮಘಾತಕಿಯೆನ್ನಿಸುವದು ದೇಹಾಭಿಮಾನಿಗೆ ಜನನ ಮರಣ ಚಕ್ರವು ತಪ್ಪುವದಿಲ್ಲ ಅದನ್ನು ಅವನು ಅನುಭವಿಸಲೇ ಬೇಕಾಗುವದು. ಎಂದು ಹೇಳಿ ಗುರುಗಳು ಮತ್ತೆ ಆ ಶಿಷ್ಯನಿಗೆ—

'ನೀನು ನಾಲ್ಕು ದೇಹಗಳಿಂದ ಹೊರತಾಗಿರುವಿ, ನಿನಗೆ ಜನ್ಮ ಕರ್ಮ ಸಂಬಂಧವಿಲ್ಲ, ನೀನು ಎಲ್ಲ ತರದ ಒಳ ಹೊರಗೆ ತುಂಬದ ಬ್ರಹ್ಮನೇ ಆಗಿರುವಿ ಜೀವಭ್ರಾಂತಿಯಿಂದ ನೀನು ನಿನ್ನನ್ನು ಬದ್ಧನೆಂದು ಗ್ರಹಿಸುವಿ ಆದರೆ ತತ್ವತ ಯಾರೂ ಬದ್ಧರಲ್ಲ ನೀನು ಏಕಾಂತದಲ್ಲಿ ಕುಳಿತು ಆತ್ಮ ಸ್ವರೂಪದಲ್ಲಿ ವಿಶ್ರಾಂತಿ ಸುಖವನ್ನು ಅನುಭೋಗಿಸುವಿಯಾದರೆ ನಿನ್ನಲ್ಲಿ ಪರಮಾರ್ಥವು ಧೃಡತೆಗೊಳ್ಳುತ್ತ ಹೋಗುವದು ಅಖಂಡ ಶ್ರವಣ ಮನನಗಳಿಂದ ಸಮಾಧಾನವುಂಟಾಗುವದು, ಮತ್ತು ಬ್ರಹ್ಮಜ್ಞಾನ ಪೂರ್ಣವಾದ ಮೇಲೆ ಬೇಡೆಂದರೂ ವೈರಾಗ್ಯವು ದೇಹಸ್ಥಿತವಾಗುವದು 'ನಾನು ಮುಕ್ತನು' ಎಂಬದಾಗಿ ತಿಳಿದುಕೊಂಡು ಸ್ವೈರ ವೃತ್ತಿಯಿಂದ ನಡೆದು ಇಂದ್ರಿಯಗಳನ್ನು ವಿಷಯಗಳ ಕಡೆಗೆ ನೂಕಿದ್ದಾದರೆ ನಿನ್ನ ತಳಮಳವು ದೂರಾಗುವದಿಲ್ಲ ಕೋಡಿನಿಂದ ಮಾಡಿದ ಕ್ಷುಲ್ಲಕ ಮಣಿಯೊಂದರ ಆಶೆಯಿಂದ ರಾಜನೊಬ್ಬನು ತನ್ನ ರಾಜ್ಯವನ್ನು ಕಳದುಕೊಂಡಂತೆ ಕ್ಷುದ್ರ ವಿಷಯಗಳ ನಾದಿಗೆ ಮಬ್ಬಾಗಿ ಆತ್ಮ ಸಾಧನವನ್ನು ಕಳೆದುಕೊಳ್ಳಬೇಡ ಯಾವ ವಸ್ತುವಿನ ಧ್ಯಾನ ಮಾಡುವನೋ ಆ ವಸ್ತುವನ್ನೇ ಪಡೆಯುವನು' ಎಂಬ ಒಂದು

ನಿಯಮವಿದೆ ಆದ್ದರಿಂದ ನೀನು ಅವಿದ್ಯೆಯ (ಸಂಸಾರದ) ಧ್ಯಾನವನ್ನು ಬಿಟ್ಟು ಸುವಿದ್ಯೆ (ಬ್ರಹ್ಮವಿದ್ಯೆ)ಯ ಸಂಗವನ್ನು ಬಳಿಸು ಅದರಿಂದ ನೀನು ತೀವ್ರವೇ ಜಗದ್ವಂದ್ಯನಾಗುವಿ ಸನ್ನಿಪಾತ ಕೂಡಿದ ರೋಗಿಯ ಸ್ಥಿತಿಯನ್ನು ಕಂಡು ಭಯವೆನಿಸುವದು ಆದರೆ ಔಷಧದಿಂದ ಜ್ವರವಳಿದು ಸನ್ನಿಪಾತ ದೂರಾಯಿತೆಂದರೆ ರೋಗಿಯು ಸುಖ ಹೊಂದುವನು ಅದರಂತೆ ಅಜ್ಞಾನವೆಂಬ ಸನ್ನಿಪಾತದಿಂದ ದೃಷ್ಟಿಗೆ ಮಿಥ್ಯತ್ವವೇ ತೋರುವದು ಅದಕ್ಕೆ ಜ್ಞಾನವೆಂಬ ಔಷಧ ಪ್ರಯೋಗಮಾಡಲು ಆ ಮಿಥ್ಯತ್ವವೇ ಉಳಿಯಲಾರದು ಕನಸಿನಲ್ಲಿ ಅಂಜಿದವನು ಎಚ್ಚತ್ತ ಕೂಡಲೇ ಕನಸಿನ ಭಯವೆಲ್ಲ ದೂರಾಗಿ ಆವನು ನಿರ್ಭಯನಾಗುವಂತೆ ಅಸತ್ಯವನ್ನು ಸತ್ಯವೆಂದು ಅರಿಯುವದರಿಂದ ದುಃಖವುಂಟಾಗಿ ಅದರ ನಿಜತ್ವವು ತಿಳಿದ ಮೇಲೆ ಆ ದುಃಖ ದೂರಾಗುವದು ನಿದ್ದೆ ತಿಳಿದೆದ್ದವನಿಗೆ ಸ್ವಪ್ನವು ಸುಳ್ಳೆಂದು ಅನುಭವಕ್ಕೆ ಬರುವದು ಆ ನಿದ್ದೆಯಲ್ಲಿರುವವನಿಗೆ ಆ ಸ್ವಪ್ನವು ಭ್ರಮೆ ಭಯಗಳಲ್ಲಿಯೇ ನೂಕುವದು ಎಚ್ಚರಾದ ಮೇಲೆ ಅವುಗಳ ನಿವೃತ್ತಿಯಾಗುವದು ಅದರಂತೆ ಈ ಅವಿದ್ಯೆಯೆಂಬ ನಿದ್ದೆಯ ಮುಸುಕು ಕಣ್ಣಿನ ಮೇಲೆ ಇರುವವರಗೆ ಜೀವವು ಭಯಾಕುಲವಾಗುವದು ಇಂಥ ನಿದ್ದೆಯನ್ನು ಶ್ರವಣ ಮನನಗಳಿಂದ ಕಳೆದುಕೊಂಡು ಎಚ್ಚರಾಗಬೇಕು

ಇನ್ನು ಜಾಗ್ರತಿಯ ಲಕ್ಷಣವೇನಂದರೆ– ಜಾಗ್ರತ ಪುರುಷನು ಮನಸಿನಿಂದ ವಿಷಯಗಳಲ್ಲಿ ವಿರಕ್ತನಾಗುವನು, ವಿರಕ್ತನಾಗದವನು ನಿರಭಿಮಾನದಿಂದ ಸಾಧನ ಮಾಡಬೇಕು ವಿರಕ್ತನಾಗದೆ ಸಾಧನ ಮಾಡಲು ಆಗದಿದ್ದರೆ ಅವನು ಸ್ವತಃ ಸಿದ್ಧನೆಂದು ತಿಳಿದುಕೊಂಡರೂ ಅವನ ಈ ತಿಳುವಳಿಕೆಯು ಅವನಿಗೆ ದೊಡ್ಡ ಸಂಕಟವೂ ಬಂಧನಕಾರಿಯೂ ಆಗುವದು ಸಿದ್ಧನು ಬದ್ಧನಾದವನಿಗಿಂತ ಮುಮುಕ್ಷುವು ಮೇಲು ಯಾಕಂದರೆ ಮುಮುಕ್ಷುವು ಜ್ಞಾನದ ಅಧಿಕಾರಿಯು ಇನ್ನು ಈ ಕ್ರಮದಿಂದ ಬಂದ ಬದ್ಧ, ಮುಮುಕ್ಷು, ಸಾಧಕ ಹಾಗು ಸಿದ್ಧರನ್ನು ತಿಳಿಯುವ ಲಕ್ಷಣ ಹೇಳುವೆನು ಶ್ರವಣ ಮಾಡಬೇಕು

ಶ್ರೀ ರಾಮ ||೭ ಬದ್ಧಲಕ್ಷಣ || ಈ ಚರಾಚರ ಸೃಷ್ಟಿಯಲ್ಲಿ ಅನಂತ ಜೀವಿಗಳಿರುವವು ಅವನ್ನು ಬದ್ಧ ಮುಮುಕ್ಷ ಸಾಧಕ ಹಾಗೂ ಸಿದ್ಧರೆಂದುನಾಲ್ಕು

ವರ್ಗಗಳಿಗಾಗಿ ವಿಭಾಗಿಸಬಹುದು ಈ ನಾಲ್ಕರ ಹೊರತು ಇನ್ನೊಂದಿಲ್ಲ ಇನ್ನು ಇವೆಲ್ಲವನ್ನು ವಿವರಿಸೋಣ

ಬುದ್ಧನೆಂದರೆ ಯಾರು ? ಮುಮುಕ್ಷುವಿನ ಲಕ್ಷಣಗಳೇನು ? ಸಾಧಕ ಸಿದ್ಧರನ್ನು ಗುರುತಿಸುವ ಬಗೆ ಹೇಗೆ ? ಇವೆಲ್ಲ ಪ್ರಶ್ನೆಗಳಿಗೆ ಉತ್ತರರೂಪ ವಾಗಿ—

ಬದ್ಧನು— ಕಗ್ಗತ್ತಲೆಯ ರಾತ್ರಿಯಲ್ಲಿ ನಡೆಯುವ ಕುರುಡನಿಗೆ ಹತ್ತೂ ದಿಕ್ಕುಗಳು ಶೂನ್ಯವಾಗಿರುವಂತೆ ಈ ಬದ್ಧನ ಸ್ಥಿತಿಯಿರುವದು ಇವನ ದೃಷ್ಟಿಯಲ್ಲಿ ಭಕ್ತರು, ಜ್ಞಾನಿಗಳು, ತಪಸ್ವಿಗಳು, ಯೋಗಿ ವೈರಾಗಿ ಗಳು, ಸಂನ್ಯಾಸಿಗಳು ಇವರಾರೂ ಕಂಡುಬರುವದಿಲ್ಲ ಅವನು ಕರ್ಮಾ ಕರ್ಮಗಳನ್ನೂ, ಧರ್ಮಾಧರ್ಮಗಳನ್ನೂ, ಪರಮಾರ್ಥದ ಸುಲಭ ಮಾರ್ಗ ವನ್ನೂ ಕಾಣನು ಹಾಗೂ ತಿಳಿಯನು ಅದರಂತೆ ಸತ್‌ಶಾಸ್ತ್ರ, ಸತ್ಪಾತ್ರ, ಸನ್ಮಾರ್ಗ ಹಾಗೂ ಪವಿತ್ರಗಳನ್ನು ನೋಡನು, ತಿಳಿಯನು ಸಾರಾಸಾರ ವಿಚಾರ, ಸಧರ್ಮಾಚಾರ, ಪರೋಪಕಾರ, ದಾನ-ಪುಣ್ಯ, ಭೂತದಯೆ, ದೇಹ ಪಾವಿತ್ರ್ಯತೆ, ಸವಿನುಡಿಗಳು, ಭಕ್ತಿ ಜ್ಞಾನ, ವೈರಾಗ್ಯಗಳು, ಧ್ಯಾನ ಮೋಕ್ಷ ಸಾಧನಗಳು ಇವಾವವನ್ನೂ ತಿಳಿಯಲಾರನು ದೇವನ ಅಸ್ತಿತ್ವ ವನ್ನೂ, ನಂತರ ವಿವೇಕವನ್ನೂ ಮಾಯೆಯ ಕೌತುಕವನ್ನೂ ಈ ಬದ್ಧನು ಅರಿಯನು ಪಾರಮಾರ್ಥಿಕ ಸಂಕೇತವು ಆಧ್ಯಾತ್ಮ ನಿರೂಪಣೆಯೂ ನಾನು ತಾನೆಂಬ ಅರಿವೂ ಇವನಲ್ಲಿ ಇರುವದಿಲ್ಲ ಹಾಗೂ ಇವನು ತಿಳಿಯುವದಿಲ್ಲ, ಜೀವನ ಜನ್ಮ ಮೂಲವೂ ಸಾಧನಗಳ ಫಲವೂ, ನಿಶ್ಚಿತ ತತ್ವಗಳೂ ಇವನ ಅರಿಕೆಗೆ ಬಾರವು

ಇನ್ನು ಬದ್ಧನ ಲಕ್ಷಣ ಹೇಳುವದಾದರೆ—

ಬದ್ಧನಿಗೆ ಬಂಧನ ಮುಕ್ತಿಗಳ ಲಕ್ಷಣ ತಿಳಿಯವು ವಸ್ತು ವೈಲಕ್ಷಣ್ಯ ವರಿಯದು ಹೇಳಿದ ಶಾಸ್ತ್ರಾರ್ಥ ಜ್ಞಾನವಾಗದು, ತನ್ನ ಹಿತವನ್ನು ತಾನರಿ ಯನು, ಸಂಕಲ್ಪಿಸಿಕೊಂಡುದನ್ನು ಮರೆಯುವನು, ಆತ್ಮಜ್ಞಾನದಿಂದ ರಹಿತ ನಾಗಿರುವನು, ತೀರ್ಥ-ವ್ರತ-ದಾನ ಪುಣ್ಯಗಳಲ್ಲಿ ಆತನ ಮನಸ್ಸಿರುವ ದಿಲ್ಲ ದಯಾಂತ ಕರುಣಗಳಂತೂ ಆತನಲ್ಲಿ ಇರುವದೇ ಇಲ್ಲ, ಆರ್ಜವ ವೃತ್ತಿ ಸ್ನೇಹತ್ವ, ಶಾಂತಿ, ಕ್ಷಮೆ ಇವಾವವೂ ಇವನಲ್ಲಿ ಇರುವದಿಲ್ಲ ಜ್ಞಾನವನ್ನೆ

ಅರಿಯನು. ಎಂದಮೇಲೆ ಜ್ಞಾನದ ಲಕ್ಷಣಗಳೂ ಇವನಲ್ಲಿರಲು ಸಾಧ್ಯವಿಲ್ಲ ಇದೆಲ್ಲವೂ ಆತನಲ್ಲಿ ಇರದೇ ಹೋದರೂ ಅಜ್ಞಾನದ ಕೆಟ್ಟಲಕ್ಷಣಗಳಿಂದ ಮಾತ್ರಆತನು ಯುಕ್ತನಾಗಿರುವನು ಹಲವು ಪಾಪಕರ್ಮಗಳನ್ನುಮಾಡುವಲ್ಲಿ ಸಂತೋಷಗೊಳ್ಳುವನು ಕಾಮಾದಿ ವಿಕಾರಗಳೂ, ವಿಷಯ ಲುಬ್ಧತೆಯೂ ಕಠೋರತೆಯೂ, ಅಮಂಗಲತೆಯೂ ಆ ಬದ್ಧನಲ್ಲಿರುವವು ಕೃತಘ್ನತೆ, ಕಾಪಟ್ಯ, ಕುತರ್ಕ, ಮತ್ಸರ, ಅಸೂಯೆ, ತಿರಸ್ಕಾರ, ಪಾಪವಿವುಲತೆ, ವಿಕಾರ ವಶತೆ, ಅಭಿಮಾನ ಬಾಹುಲ್ಯ, ಬಿರುಸುತನ, ಅಹಂಕಾರ ವೃತ್ತಿ ವಾದವಿವಾದ ಕುತರ್ಕಯುತ ಭೇದಾಭೇದ, ಕ್ರೂರತ್ವ, ನಿರ್ದಯತ್ವ, ಪರನಿಂದೆ, ಶತ್ರುತ್ವ ಅಧರ್ಮತೆ, ದುರಾಭಿಲಾಷೆ, ಬಹು ದೋಷಾನ್ವಿತತೆ, ಭ್ರಷ್ಟತೆ, ಅನಾಚಾರಿತ್ವ ನಿಷ್ಠುರತೆ,ಹಿಂಸಾಕೃತ್ಯಕಾರಿತೆ ಪತಿತ್ವವು ಇವೆಲ್ಲವು ಆ ಬದ್ಧನಲ್ಲಿ ಅತಿಯಾಗಿ ಮೂರ್ತಿಮತ್ತಾಗಿರುವವು ಮತ್ತು ಆ ಬದ್ಧನು—

ಹಲವು ಕುವಿದ್ಯೆಗಳನ್ನು ಗಳಿಸಿದವನು,ದುರಾಶಾಯುಕ್ತನೂ, ಸ್ವಾರ್ಥ ಪರನೂ, ಕಲಹಕಾರನ`, ಅನರ್ಥಕಾರಿಯು, ಕುನಸಿನವನು, ದುರ್ಬುದ್ಧಿ ವಂತನು, ಬಹು ಕಲ್ಪಕನು, ಬಹುಕಾಮುಕನು, ಲೋಭಿಯು, ಹಲವು ವಾಸ ನಾನ್ವಿತನು, ಮನುಕಾರಿ ಯು, ಹಲವು ಭಾವನಾಪರವಶನು ವಿಕಲ್ಪನೆಯು ಳ್ಳವನು, ವಿಷಾದ ಪಡುವವನು, ಕಡುಮೂರ್ಖನು, ಅಧಿಕಪ್ರಸಂಗಿಯು, ಸಂಸಾರ ಲೋಲುಪನು, ಅತ್ಯವಾಧಿಯುಕ್ತನು, ಬಡಬಡಿಕೆಯುಳ್ಳವನು, ಪಾಖಂಡಿಯು, ದುರ್ಜನನು, ಕೋಲಾಹಲಕಾರಿಯು, ಚಾಡಿಖೋರನು, ನೀಚ ಹೇಡಿಯು, ಕಂಗಾಲನು, ಭ್ರಮೆಯಿಂದ ಪೀಡಿ ತನು, ಮೋಹಿತನು, ಮದಾಂಧನು, ಸಂಶಯವೃತ್ತಿಯವನು, ಭಗವಂತನಿಂದ ವಿರಹಿತನು, ಕೃಪಣನು, ತೋಳ್ಗಸುವಿನವನು, ದುಸ್ವರೂಪಿಯು, ಉದ್ಧಟನು ನೀಚಕರ್ಮಿಯು, ವಿರುದ್ಧಕ್ರಿಯಾಚರಣಿಯು, ಪಾರಮಾರ್ಥಕದಲ್ಲಿ ಜ್ಞಾನ ರಹಿತನು, ಪ್ರಾಪಂಚಿಕ ವಿಷಯುಬಲ್ಲಿದನು, ಆತ್ಮಕಾಂತಿಯಿಲ್ಲದವನು, ಪರ ಮಾರ್ಥದಲ್ಲಿ ಅಪ್ರೀತಿಯುಳ್ಳವನು, ಸಂಸಾರದಲ್ಲಿ ಆಸಕ್ತನು, ಪ್ರಾಪಂಚಿಕ ಭಾರವನ್ನು ಸಹಿಸುವವನು

ಈ ಎಲ್ಲ ಬಗೆಯ ಲಕ್ಷಣಗಳಿಂದ ಆ ಬದ್ಧನು ಯುಕ್ತನಾಗಿರುವನು ಅವನಿಗೆ ಸತ್ಸಂಗವು ರುಚಿಸಲಾರದು ಸಜ್ಜನರ ದೂಷಣೆಯಲ್ಲಿ ಪ್ರವರ್ತನಾ

ಗಿರುವನು, ದೇಹ ಬುದ್ಧಿಯೆಂಬ ಸಂಕೋಲೆಯನ್ನು ತೊಡಿಸಿಕೊಂಡಿರುವನು
ಕೈಯಲ್ಲಿ ಹಣದ ಎಣಿಕೆಯನ್ನು ಮಾಡುವ ಜಪಮಾಲೆ ಹಿಡಿದಿರುವನು
ಕಣ್ಮುಚ್ಚಿ ಯಾವಾಗಲೂ ಸ್ತ್ರೀಯರ ಕಾಮನೆಯಿಂದ ತಪಸ್ವಿಯಂತೆ ಕುಳಿತಿ
ರುವನು, ಸತ್ಸಂಗವನ್ನು ಆತನು ಇಚ್ಛಿಸಿದರೂ ಆವನಿಗೆ ಅದರೆ ದುಷ್ಕಾಳವೇ
ಸರಿ ಆವನ ದೃಷ್ಟಿಯ ಕ್ರಿಯೆಯು ಸತೀ ಸಂಪತ್ತುಗಳನ್ನು ನೋಡುವಲ್ಲಿ
ಶ್ರವಣಕ್ರಿಯೆಯು ಆ ಸತೀ ಸಂಪತ್ತುಗಳ ವಾರ್ತೆ ಕೇಳುವಲ್ಲಿ ಮನಸ್ಸು ಸತೀ
ಸಂಪತ್ತುಗಳ ಚಿಂತೆಯಲ್ಲಿ ಪ್ರವೃತ್ತವಾಗಿರುವವು ತ್ರಿಕರಣ ಪೂರ್ವಕವಾಗಿ
ಆತನ ವಿತ್ತ, ಚಿತ್ತ, ಜೀವ ಪ್ರಾಣಿಗಳೆಲ್ಲ ಸತೀ ಸಂಪತ್ತುಗಳಿಗಾಗಿ [illegible]ವಾ
ಗಿರುವವು ಆ ಸತೀ ಸಂಪತ್ತುಗಳಿಗಾಗಿಯೇ ಆತನು ಇಂದ್ರಿಯ ದಮನ
ಮಾಡಿಕೊಳ್ಳುವನು ಸಂಯಮತೆಯನ್ನು ತಂದು ಕೊಳ್ಳುವನು
ಅವನಿಗೆ ಆ ಹೆಂಡಿರ ಸಂಪತ್ತಿಯೂ ತೀರ್ಥ ಪರಮಾರ್ಥಗಳ
ಮಹತಿಗಿಂತಲೂ ಅತ್ಯಧಿಕವಾಗಿ ತೋರುವವು ಸತತವೂ ಆ
ಬದ್ಧನು ಸಂಸಾರ ಚಿಂತೆಯಲ್ಲಿ ಹಾಗು ಕಾಂತಾಕಥೆಯಲ್ಲಿ ಕಾಲ
ಕಳೆಯುವನು

ಆ ಬದ್ಧನಿಗೆ ಹಲವು ಚಿಂತೆಗಳು, ಹಲವು ಉದ್ವೇಗಗಳು ,ಮತ್ತು ಅದೆ
ಷ್ಟೋ ದುಃಖಗಳ ಸಂಸರ್ಗಗಳು ತಪ್ಪಿರಲಾರವು ಪರಮಾರ್ಥದ ತ್ಯಾಗವಂತೂ
ಅವನಿಂದ ಇದ್ದೇ ಇರುವದು ಪ್ರತಿ ನಿಮಿಷದಲ್ಲಿ ಪ್ರತಿಗಳಿಗೆ ಪ್ರತಿ ತಾಸುಗಳಲ್ಲಿ
ಅವನ ಹೃದಯದಲ್ಲಿ ಶಾಂತಿಯಿರದೆ ದ್ರವ್ಯ, ಹೆಂಡತಿ, ಪ್ರಪಂಚ ಇವುಗಳ
ಚಿಂತೆಯು ಪುನಃ ಪುನ ಆತನ ಸ್ಮರಣೆಯಲ್ಲಿಂದ ಉದ್ಭೂತ-ಲಯವಾಗುತ್ತಿರು
ವವು ದ್ರವ್ಯ ದಾರಾದಿ ಪ್ರಾಪಂಚಿಕ ವಿಷಯಗಳೇ ಅವನಿಗೆ ತೀರ್ಥ ಯಾತ್ರಾ
ದಿಗಳೆಲ್ಲವುಗಳ ಮಹತ್ವಕ್ಕಿಂತ ಫಲದಾಯಕ ಎಂಬ ಧೃಡನಂಬುಗೆಯಾಗಿ
ಬಿಟ್ಟಿದೆ ಅಹರ್ನಿಶವಾಗಿ ಪ್ರಾಪಂಚಿಕ ವಿಷಯಗಳ ಧ್ಯಾನವೇ ಅವನದಾ
ಗಿರುವದು ಈ ಜಂಜಡದಲ್ಲಿ ಆ ಬದ್ಧನಿಗೆ ಕ್ಷಣವೂ ಕೂಡ ಬಿಡುವು
ಇರುವದಿಲ್ಲ

ಈ ಎಲ್ಲ ಲಕ್ಷಣಗಳು ಬದ್ಧಜೀವಿಯ ಲಕ್ಷಣಗಳು ಇವೆಲ್ಲವು
ಮುಂದೆ ಮುಮುಕ್ಷುವಿನಲ್ಲಿ ಪರಿವರ್ತಿಸುವವು ಮುಂದಿನ ಸಮಾಸದಲ್ಲಿ ಆ
ಮುಮುಕ್ಷುವಿನ ಲಕ್ಷಣಗಳನ್ನು ಹೇಳುವೆವು

ಶ್ರೀ ರಾಮ ‖ ೮ ಮುಮುಕ್ಷುಲಕ್ಷಣ ‖

ಶ್ರೀ ರಾಮ ‖ ಬದ್ಧನು ಸಂಸಾರ ಮದದ ಹೆಚ್ಚಳದಿಂದ ಹಲವು ನೀಚ ಲಕ್ಷಣಗಳನ್ನು ಹೊಂದುವನು ಇಂಥ ದುರ್ಲಕ್ಷಣಯುತ ಮಾನವನ ಮುಖ ದರ್ಶನವೂ ಕೂಡ ದೋಷಾವಹವಾಗುವದು ಹಿಂದೆ ಹೇಳಿದಂತೆ ಬದ್ಧನು ಸಂಸಾರ ತಾಪದಿಂದ ಹುರಪಳಿಸಿ ಹೊರಟನು, ಮುಂದೆ ಅವನಿಗೆ ಎಷ್ಟೋ ಕಥಾ ನಿರೂಪಣೆಯ ಶ್ರವಣವೊದಗಿತು ಆತನು ಸಂಸಾರಕ್ಕೆ ತೀರಾ ಹೇಸಿಕೊಂಡನು ತನ್ನ ಜೀವನ ಕಾಲವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳುವ ಬುದ್ಧಿಯು ಆತನಲ್ಲಿ ಹುಟ್ಟಿತು, ಅವನಿಗೆ ಪೂರ್ವಕರ್ಮದ ನೆನಪು ಉಂಟಾಗಿ ಅವನಲ್ಲಿ ಪೂರ್ಣ ಪಶ್ಚಾತ್ತಾಪ ಉಂಟಾಯಿತು ತಾನು ಮಾಡಿದ ಪಾಪ ಕರ್ಮಗಳ ಫಲವಾಗಿ ಯಮನ ದರಬಾರಿನಲ್ಲಿ ತನಗೆ ವಿಧಿಸುವ ಶಿಕ್ಷೆಗಳನ್ನು ಮನಸಿನಲ್ಲಿ ತಂದುಕೊಂಡನು ಪುಣ್ಯಮಾರ್ಗದ ಮಹತಿಯನ್ನು ತಿಳಿದುಕೊಂಡು ಭವಸಾಗರದಿಂದ ನಾನು ಹೇಗೆ ಉದ್ಧೃತನಾದೇನೆಂಬ ಚಿಂತೆಯು ಅವನ್ನು ಬಾಧಿಸಹತ್ತಿತು ಹಿಂದೆ ತಾನು ಮಾಡಿದ ದುಷ್ಕೃತ್ಯಗಳನ್ನು ಸ್ಮರಣೆಗೆ ತಂದುಕೊಂಡನು ಇದುವರೆಗೆ ತಾನು ಸಾಧು ಸಂತರನ್ನು ನಿಂದಿಸಿದ್ದನ್ನೂ ಅತಿಥಿ ಅಭ್ಯಾಗತರಿಗೆ ಅನಾದರತೆಯನ್ನು ತೋರಿಸಿರುವದನ್ನೂ ಮನಸ್ಸು ಅಡ್ಡ ಮಾರ್ಗಕ್ಕೆ ಬಿದ್ದುದನ್ನೂ, ತಾನು ವಿಕಾರವಶನಾಗಿ ಕಾಮ ಕ್ರೋಧಾದಿಗಳಿಗೆ ಬಲಿ ಬಿದ್ದುದನ್ನೂ ಪರೋಪಕೃತಿಯ ಪ್ರಸಂಗಗಳಿಂದ ತಪ್ಪಿಸಿಕೊಂಡುದನ್ನೂ, ಧರ್ಮಲಂಡ ಪಿತೃಲಂಡನಾಗಿ ವರ್ತಿಸಿದುದನ್ನೂ, ಭಗವಂತನ ಭಜನ ಪೂಜನಗಳನ್ನು ಧಿಕ್ಕರಿಸಿದುದನ್ನೂ, ನಿರರ್ಥಕವಾಗಿ ಹಲವು ಪಾಪ ಕರ್ಮಗಳನ್ನು ಮಾಡಿದುದನ್ನೂ ಪುನಃ ಪುನಃ ನೆನಪಿಗೆ ತಂದುಕೊಂಡನು ಇವೆಲ್ಲ ತನ್ನಿಂದ ಒದಗಿದ ಕ್ರಿಯೆಗಳಿಗಾಗಿ ಇನ್ನು ಏನು ಉಪಾಯ ಮಾಡಬೇಕು ? ದೇವ ಸಾಕ್ಷಾತ್ಕಾರವೆಂತು ದೊರೆಯುವದು ? ಎಂಬ ವೈಚಾರಿಕ ಪ್ರಶ್ನೆಗಳು ಆತನಲ್ಲಿ ಉದ್ಭೂತವಾದವು ಹಿಂದೆ ತಾನು ಹಲವು ಸಾರೆ ದೇವತಾರ್ಚನೆ ಮಾಡಿದ್ದರೂ ಆ ಪೂಜಾ ವಿಧಾನವು ಕೇವಲ ದಂಭಕ್ಕಾಗಿ ಹಾಗೂ ಲೋಕಾರೂಢಿಗಾಗಿ ಮಾಡಿದೆನೆಂದು ಅರಿವು ಅವನಿಗಾಯಿತು ಆಗ ಅವನು ನಾನು ದೇವನನ್ನು ಸಂತೆ ಪೇಟೆಗಳಲ್ಲಿಟ್ಟು ಹೊಟ್ಟೆಯ ಪಾಡಿಗಾಗಿ ಕೀರ್ತನ ಭಕ್ತಿಯನ್ನು ವ್ಯಕ್ತಪಡಿಸಿದೆನು ಯಾವಾ

ಗಲೂ ಹೊಟ್ಟೆಯಲ್ಲಿ ಸುಳ್ಳು ಬುದ್ಧಿಯನ್ನಿರಿಸಿಕೊಂಡು ನಡೆದೆನು ಒಳಗೆ ಅಹಂಕಾರ ರಾಕ್ಷಸನನ್ನು ನಿಲ್ಲಿಸಿಕೊಂಡು ಹೊರಗೆ ನಿರ್ಮಲ ಹಾಗು ನಿರಭಿಮಾನದ ಭಾಷೆಗಳನ್ನಾಡುತ್ತ ಬಂದೆನು ಹೃದಯದಲ್ಲಿ ದ್ರವ್ಯಾರ್ಜನೆಯ ಆಕಾಂಕ್ಷೆಯನ್ನಿರಿಸಿಕೊಂಡು ಧ್ಯಾನಸ್ಥನಾಗಿ ಕುಳಿತೆನು ಉತ್ಪತ್ತಿಯ ಬಲದಿಂದ ಜನರನ್ನು ಮೋಸಗೊಳಿಸಿದೆನು. ಹೊಟ್ಟೆಯ ದೆಸೆಯಿಂದ ಸಂತಸಜ್ಜನರನ್ನು ಹೀಯಾಳಿಸಿದೆನು

ಇಂಥ ಹಲವು ಪಾಪಗಳನ್ನು ಹೊಟ್ಟೆಯಲ್ಲಿರಿಸಿಕೊಂಡು ಉದರ ನಿರ್ವಾಹ ನಿಮಿತ್ತ ಎಷ್ಟೋ ನೀಚ ಕರ್ಮಗಳನ್ನು ಮಾಡಿದೆನು ಸತ್ಯನನ್ನು ಮೂಜಿಟ್ಟು ಅಸತ್ಯಗಳನ್ನೇ ಪ್ರತಿಪಾದಿಸಿದೆನು," ಹೀಗೆ ಪೂರ್ಣ ಪಶ್ಚಾತ್ತಾಪವಾಗಿ ಕಥೆಯ ನಿರೂಪಣಗಳನ್ನು ಕೇಳಿ ಕೇಳುತ್ತಿರಲು ಅಂತರ್ಯಾಮಿಯ ಸ್ಥಿತಿಯು ಬದಲಾಯಿತು ಇಂತು ಬದಲಾದ ಸ್ಥಿತಿಯೇ ಹೆಚ್ಚಿನದೆಂದು ಹೇಳಬಹುದು ಸ್ಥಿತಿ ಬದಲಿಸಿದ ನಂತರ ಅವನಿಗೆ ಮುಮುಕ್ಷು ಎಂಬ ಹೆಸರು ಬಂದಿತು ಇನ್ನು ಮುಮುಕ್ಷುಗಳೆಂದು ಯಾರಿಗೆನ್ನಬೇಕು ? ಅವರ ಲಕ್ಷಣಗಳೆಂತಿರಬೇಕು? ಇದನ್ನು ನೋಡೋಣ

ಸಂಸಾರದಲ್ಲಿ ಹೇಯ ಬುದ್ಧಿಯುತ್ಪನ್ನವಾಗಿ ಸತ್ಸಂಗತಿ ಮತ್ತು ಪುಣ್ಯಮಾರ್ಗಗಳ ಅಭಿಲಾಷೆಯುಳ್ಳಾತನು ಮುಮುಕ್ಷುವು ತನ್ನಲ್ಲಿಯ ಅವಗುಣಗಳು ತನಗೆ ತೋರಿ ವೈರಾಗ್ಯ ಬಲದಿಂದ ಅವನ್ನು ತಿರಸ್ಕರಿಸುವವನು ಮುಮುಕ್ಷುವು. ತನ್ನಲ್ಲಿಯ ಪತಿತತನ, ಹಲವು ವ್ಯಸನಗಳು ಕುಟಿಲ ಕುಬುದ್ಧಿಗಳು, ದುರಾಚರಣೆ, ಅನಧಿಕಾರಿತ್ವ,ಸ್ವಾರ್ಥತೆ, ಅವಗುಣಗಳು, ಮುಂತಾದವುಗಳನ್ನು ನೆನಪಿಗೆ ತಂದುಕೊಂಡು 'ನಾನು ಮಾನವನಾಗಿ ಜನ್ಮತಾಳಿದ್ದು ವ್ಯರ್ಥ' ಎಂಬುದಾಗಿ ಪಶ್ಚಾತ್ತಾಪಪಟ್ಟು ತನ್ನ ಅವಗುಣಗಳ ನಿಂದೆ ಮಾಡಿಕೊಳ್ಳುವವನು ಮುಮುಕ್ಷುವು

ಸತ್ಸಂಗ, ಸನ್ಮಾರ್ಗ, ಜನ್ಮಸಫಲತೆಗಳ ಉದ್ದೇಶವನ್ನಿಟ್ಟುಕೊಂಡು ತೀರ್ಥ ಕ್ಷೇತ್ರಗಳನ್ನು ಆಚರಿಸುವವನೂ, ಶಮ ದಮಾದಿ ಸಾಧನ ಮಾಡಿಕೊಳ್ಳುವವನೂ, ಪರಮಾರ್ಥ ಗ್ರಂಥಗಳ ಅಭ್ಯಾಸ ಮಾಡುವವನೂ,

ಸದಾ ಶ್ರವಣ ಮನನಗಳಲ್ಲಿ ವೇಳೆ ಕಳೆಯುವವನೂ, ಇವೆಲ್ಲವುಗಳಿಂದ ಲೂ ಸಮಾಧಾನ ಹೊಂದದೆ ಸಂತರಿಗೆ ಶರಣು ಹೋಗುವವನೂ,ದೇಹ, ಜಾತಿ, ದ್ರವ್ಯ, ಇವೆಲ್ಲವುಗಳ ಬಗೆಗೆ ನಿರಬಿಮಾನಿಯಾದವನೂ, ಮುಮುಕ್ಷು ವೆನ್ನಿಸುವನು ಅಹಂಕಾರವನ್ನು ಬಿಟ್ಟು ತನ್ನನ್ನು ತಾನು ಹೀಗಳೆ ಯುತ್ತ ಮೋಕ್ಷಾಪೇಕ್ಷೆ ಮಾಡುವವನು ಮುಮುಕ್ಷುವು. ಪರಮಾರ್ಥ ಪ್ರಾಪ್ತಿಗಾಗಿ ತನ್ನ ದೊಡ್ಡಸ್ತಿಕೆಯನ್ನು ಹಿಂದಿರಿಸಿ ಸಂತರ ಪಾದಗ ಳಲ್ಲಿ ವಿಶ್ವಾಸವಿಟ್ಟು ನಡೆಯುವವನು ಮುಮುಕ್ಷುವು ಸ್ವಾರ್ಥವನ್ನು ಬದಿಗೊತ್ತಿ ಪ್ರಪಂಚದ ಹವ್ಯಾಸವನ್ನು ಬಿಟ್ಟವನೂ, ಸಜ್ಜನರ ದಾಸಾ ನುದಾಸನಾಗಿ ಪರಮಾರ್ಥದ ಅಭಿಲಾಷೆ ಮಾಡುವವನೂ ಮುಮು ಕ್ಷುವು

ಇಂತು ಮುಮುಕ್ಷುವಿನ ಗುಣ ಲಕ್ಷಣಗಳಿವೆ ಇವೆಲ್ಲವನ್ನು ಶ್ರೋತೃಗಳು ಅರಿತುಕೊಂಡು ಮುಂದೆ ಸಾಧಕನ ಲಕ್ಷಣಗಳನ್ನು ಅರಿತು ಕೊಳ್ಳಲು ಸಾವಧಚಿತ್ತರಾಗಬೇಕು

ಶ್ರೀ ರಾಮ|| ೯ ಸಾಧಕ ಲಕ್ಷಣ || ಈ ಮೊದಲು ಮುಮುಕ್ಷು ವಿನ ಲಕ್ಷಣಗಳನ್ನು ಹೇಳಿತು ಇನ್ನು ಸಾಧಕನೆಂತಿರಬೇಕೆಂಬುದನ್ನು ಶ್ರವಣ ಮಾಡತಕ್ಕದ್ದು

ತನ್ನಲ್ಲಿಯ ಅವಗುಣಗಳನ್ನು ಬಿಟ್ಟು ಸಂತ ಸಂಗವನ್ನು ಬಳಸಿ ದವನು ಸಾಧಕನೆಂದು ಹೇಳಲ್ಪಡುವನು ಗ್ರಂಥಗಳಲ್ಲಿಯಾದರೂ ಸಂತ ರಿಗೆ ಶರಣಾಗತನಾಗಿ ಅವರಿಂದ ಆಶ್ವಾಸನ ಪಡೆದ ಮೇಲೆಯೇ ಸಾಧ ಕತ್ವ ಪ್ರಾಪ್ತಿಯಾಗುವದೆಂದು ಹೇಳಲ್ಪಟ್ಟಿವೆ ಆತ್ಮ ಬೋಧೆಯಾಯಿತು, ಸಂಸಾರ ನಿವೃತ್ತಿಯಾಯಿತು ಆದರೆ ಇವುಗಳ ದೃಢತೆಗಾಗಿ ಸಾಧನವು ಅವಶ್ಯವಾಗಿರಬೇಕು ಅಂದರೆ ಅವನು ಸಾಧಕನಾಗಬೇಕು ಎಂದಂತಾ ಯಿತು ಶ್ರವಣ ವಿಷಯದಲ್ಲಿ ಪ್ರೀತಿ, ಅದ್ವೈತ ನಿರೂಪಣೆಯಲ್ಲಿ ರುಚಿ, ಅರ್ಥಾಂತರ ತೆಗೆಯುವಲ್ಲಿ ರೂಢಿ ಇವೆಲ್ಲವು ಸಾಧಕನಿಗೆ ಸಾಧ್ಯವು ಆತ್ಮನ ಬಗೆಗೆ ಸಾರಾಸಾರ ವಿಚಾರಗಳನ್ನು ಕೇಳಿಕೊಂಡು ತತ್ಪರನಾಗಿ ಸಂದೇಹಗಳನ್ನು ನಿವಾರಿಸಿಕೊಂಡದ್ದಾದರೆ ಆತ್ಮಜ್ಞಾನವು ದೃಢತೆಗೊಳ್ಳುವದು ಈ ವಿಷಯದಲ್ಲಿ ಬರತಕ್ಕ ಸಂದೇಹ ನಿವೃತ್ತಿ

ಗಾಗಿ ಸತ್ಸಂಗವನ್ನು ಬಳಿಸಬೇಕು, ಸ್ವಂತ ವಿಚಾರಮಾಡಬೇಕು, ಗುರು ಮುಖದಿಂದ ತಿಳಿಯಬೇಕು ಹೀಗೆಲ್ಲ ಸಾಧನಗಳನ್ನು ಬಳೆಯಿಸಿ ಕೊಳ್ಳ ತಕ್ಕದ್ದು

ದೇಹ ಬುದ್ಧಿಯನ್ನು ಬಿಟ್ಟು ಆತ್ಮ ಬುದ್ಧಿಯನ್ನು ದೃಢೀ (ಕರಿಸಿ ಕೊಳ್ಳುವದು) ಶ್ರವಣ ಮನನಗಳನ್ನು ಅಭ್ಯಸಿಸುವದು ಸಾಧಕನ ಕ್ರಿಯೆಗಳು

ದೃಶ್ಯ ವಸ್ತುಗಳೆಲ್ಲ ಅಶಾಶ್ವತವೆಂದು ಅರಿತು ಆತ್ಮ ಜ್ಞಾನದಲ್ಲಿ ದೃಢತೆಯನ್ನು ಸಂಬುವವನು ಮತ್ತು ಈ ಬಗ್ಗೆ ವಿಚಾರ ಮಾಡಿ ಕೊನೆಗೆ ಸಮಾಧಾನ ಪಡೆಯುವವನು ಸಾಧಕನೆಂದು ಹೇಳಬಹುದು

ದ್ವೈತವನ್ನು ಹರಿದೊಗೆದು ಅದ್ವೈತ ಸಾಧಿಸಿಕೊಂಡ ಸಮಾಧಿ ಯಲ್ಲಿ ಐಕ್ಯತೆಯ ಸುಖವನ್ನು ಪಡೆಯುವವನು ಸಾಧಕನು

ತನ್ನಲ್ಲಿ ಆತ್ಮ ಜ್ಞಾನವನ್ನು ಬೆಳೆಯಿಸಿಕೊಂಡು ವಿವೇಕದಿಂದ ಭವ ದಿಂದ ದೂರಾಗುವವನು ಸಾಧಕನು

ಶ್ರೇಷ್ಠ ಸಾಧುಗಳ ಲಕ್ಷಣಗಳನ್ನೂ ನಿರೂಪಣೆಯನ್ನು ಸ್ವೀಕ ರಿಸಿ ಅದರ ಬಲದಿಂದ ಸ್ವರೂಪಾಕಾರ ಪಡೆಯುವವನು ಸಾಧಕನು

ದುಷ್ಕರ್ಮಗಳನ್ನು ಬಿಟ್ಟು ಸತ್ಕ್ರಿಯಾ ಪ್ರವರ್ತಕನಾಗಿ ಸ್ವರೂಪ ಸ್ಥಿತಿಗಳನ್ನು ಬಲಪಡಿಸಿಕೊಳ್ಳುವವನು ಸಾಧಕನು

ದಿನ ದಿನಕ್ಕೂ ಅವಗುಣಗಳನ್ನು ಬಿಟ್ಟು ಉತ್ತಮ ಗುಣಗಳನ್ನು ಅಭ್ಯಸಿಸಿ ಆತ್ಮ ಸ್ವರೂಪದಲ್ಲಿ ನಿಜಧ್ಯಾನವನ್ನಿರಿಸಿಕೊಳ್ಳುವವನು ಸಾಧಕನು

ತನ್ನ ದೃಢ ನಿಶ್ಚಯದಿಂದ ದೃಶ್ಯ ಸಂಸಾರವನ್ನು ನಿರೀಕ್ಷಿಸದೆ ಸತತವೂ ಆತ್ಮ ಸ್ವರೂಪದಲ್ಲಿ ಕೂಡಿಕೊಂಡವನು ಸಾಧಕನು

ಪ್ರತ್ಯಕ್ಷ ಮಾಯೆಯನ್ನು ದುರ್ಲಕ್ಷಿಸಿ ಅಲಕ್ಷ ವಸ್ತುವಾದ ಬ್ರಹ್ಮ ನನ್ನು ಅಂತಸ್ಥಿತವನ್ನಾಗಿರಿಸಿಕೊಂಡು ಆತ್ಮ ಸ್ವರೂಪ ಪಡೆಯುವವನು ಸಾಧಕನು

ಜನರರಿಯದ ಹಾಗು ಮನಸಿಗೆ ಅನುಮಾನದಿಂದ ಬೋಧೆಯಾಗದ ಬ್ರಹ್ಮನನ್ನು ದೃಢವಾಗಿ ಹೃದಯದಲ್ಲಿರಿಸಿ ಕೊಂಡವನು ಸಾಧಕನು

ಅನಿರ್ವಚನೀಯ ಹಾಗು ಅದೃಶ್ಯ ವಸ್ತುವನ್ನು ಸಾಧಿಸಿ ಕೊಳ್ಳುವವನು ಸಾಧಕನು

ಅಸಾಧ್ಯವಾದುದನ್ನೂ ಅಲಕ್ಷವಾದುದನ್ನೂ ಆತ್ಮಾನುಭವದಿಂದ ಮನಸಿನಲ್ಲಿ ತಂದುಕೊಳ್ಳುವವನು ಸಾಧಕನು

ಮನಸ್ಸಿನಿಂದ ತಿಳಿಯದ, ತರ್ಕದಿಂದ ಊಹೆಯಾಗದ ವಸ್ತುವನ್ನು ತನ್ನ ಅನುಭವ ಬಲದಿಂದ ಸಾಧಿಸಿಕೊಳ್ಳುವವನು ಸಾಧಕನು ಇಂತು ಸ್ವಾನುಭವದಿಂದ ಸಾಧಿಸಿದ ವಸ್ತುವನ್ನು ಸಾಧಕನು ತನ್ನ ಹೃದಯ ಸ್ಥಿತ ಮಾಡಿಕೊಳ್ಳುವನು ಸ್ವಾನುಭವದಿಂದ ಯೋಗಿಯ ಅಂತಸ್ಥವನ್ನರಿತು ಕೊಳ್ಳುವವ ಸಾಧಕನು- ಆತ್ಮ ಸ್ವರೂಪ ಹೊಂದುವನು

ಸಾಧಕನು ಉಪಾಧಿಗಳನ್ನೆಲ್ಲ ಬದಿಗಿರಿಸಿ ಅಸಾಧ್ಯವನ್ನು ಸಾಧನಗಳಿಂದ ಸಾಧಿಸಿಕೊಳ್ಳುವನು ಹಾಗು ಅದರ ಸ್ವರೂಪದಲ್ಲಿ ದೃಢ ಬುದ್ಧಿಯುವನಾಗುವನು ಸಾಧಕನು ದೇವ ಹಾಗು ಭಕ್ತರ ಮರ್ಮವನ್ನೆಲ್ಲ ಶೋಧಿಸಿ ಶೋಧಿಸಿ ತಾನೂ ಸಿದ್ಧ ಸ್ವರೂಪಿಯಾಗುವನು

ನಿತ್ಯ ಹಾಗು ಅನಿತ್ಯಗಳನ್ನು ತಿಳಿಯುವ ಶಕ್ತಿಯೇ ವಿವೇಕವೆನ್ನಿಸುವದು ಈ ವಿವೇಕದಿಂದ ಸಾಧಕನು ಅನಿತ್ಯ ವಸ್ತುಗಳಾದ ದೇಹಾದಿಗಳನ್ನು ತ್ಯಾಗ ಮಾಡಿ ನಿತ್ಯ ವಸ್ತುವಿನ ಸ್ವರೂಪದಲ್ಲಿ ಮುಳುಗಿ ಅಲ್ಲಿಯೇ ನಿಶ್ಚಲನಾಗಿರುವನು ಆತನು ಜಡದೇಹದಿಂದ ತೋರಿದರೂ ಆವನ ಅಂತಃ ಸ್ವರೂಪವು ಯಾವುದನ್ನೂ ಅರಿಯಲಾರದು ಆ ಸಾಧಕನು ಅಹಂಕಾರವನ್ನು ತ್ಯಾಗಮಾಡಿ ತುರ್ಯಾವಸ್ಥೆಯ ಆಚೆಗೆ ಹೋಗುವನು ಮತ್ತು ಉನ್ಮನಿ ಯಾವಸ್ಥೆಯ ಕೊನೆಗೆ ಆತ್ಮ ಸ್ವರೂಪಹೊಂದಿ ಆ ಅಖಂಡಾನಂದ ಭೋಗ ಭೋಗಿಸುತ್ತಿರುವನು ದ್ವೈತಾಭಾಸವನ್ನು ದೂರ ಮಾಡಿ ಅವನು ಜಡ ದೇಹದಿಂದಲೇ ವಿದೇಹ ಸ್ಥಿತಿಯ ಅನುಭವ ಪಡೆಯುವನು ಎಲ್ಲ ಸಂಶಯಗಳಿಂದ ರಹಿತನಾಗಿ ಅಖಂಡ ಸ್ವರೂಪಾನುಭವದಲ್ಲಿ ನಿಮಗ್ನನಾಗುವನು ಪಂಚ ಭೂತಗಳಿಂದಾದವುಗಳೆಲ್ಲ

ಅವನಿಗೆ ಸ್ವಪ್ನದಂತೆ ತೋರುವವು ಮತ್ತು ಆ ಸಾಧಕನು ನಿರ್ಗುಣ ಪರಮಾತ್ಮನಲ್ಲಿ ಅನನ್ಯನಾಗುವನು ಕನಸಿನಲ್ಲಿ ಉಂಟಾದ ಅಂಜಿಕೆಯು ಎಚ್ಚತ್ತ ಮೇಲೆ ಉಳಿಯುವದಿಲ್ಲ ಅದರಂತೆ ಆತ್ಮ ಜಾಗೃತಿಯಾದ ಮೇಲೆ ಸಂಸಾರ ಭಯವಿಲ್ಲದಾಗುವದು. ಜನರು ಪ್ರತ್ಯಕ್ಷ ತೋರುವ ದನ್ನು ಸತ್ಯವೆಂದು ಭಾವಿಸುವರು ಸೃಷ್ಟಿಯು ಪ್ರತ್ಯಕ್ಷವು ಆದ್ದರಿಂದ ಜಗತ್ಸತ್ಯವೆಂದು ತಿಳಿಯುವರು ಆದರೆ ಇದು ಸ್ವಾನುಭವದಿಂದ ದೂರಾ ಗುವದು ಸೃಷ್ಟಿಯ ಮಿಥ್ಯತ್ವವು ಅನುಭವಕ್ಕೆ ಬರವದು ಇಂತು ಸಾಧ ಕನ ಅಂತಸ್ಥಿತಿಯುಂಟಾಗುವದು.

ಇನ್ನು ಬಾಹ್ಯಾಚರಣೆಯಲ್ಲಿ ಪೂರ್ಣ ನಿಸ್ಪ್ರಹನೂ, ಸಂಸಾರದ ಉಪಾಧಿಗಳಿಂದ ಹೊರತಾದವನೂ ಸಾಧಕನೆಂದು ಹೇಳಬಹುದು ಸಾಧ ಕನಲ್ಲಿ ಯಾವ ವಿಕಾರಗಳು ಇರಲಾರವು ಕುಲಾಭಿಮಾನ, ಜನ ಲಜ್ಜೆ ಗಳನ್ನು ಬದಿಗಿಟ್ಟು ವಿರಕ್ತಿ ಬಲದಿಂದ ಪರಮಾರ್ಥವನ್ನು ಬಲಿಸಿಕೊಳ್ಳು ವನು ಅವಿದ್ಯೆಯಿಂದ ದೂರಾದವನೂ, ಸಂಸಾರದಿಂದ ನಿವೃತ್ತನಾದವನೂ ಆದ ಸಾಧಕನೂ—

ಭೇದ, ಅಹಂಕಾರ, ವಿಕಲ್ಪನೆ, ಸಂಕಲ್ಪ-ವಿಕಲ್ಪ, ಮದ, ಸ್ವಾರ್ಥ, ದ್ವೇಷ, ಅನರ್ಥ, ನಾಸ್ತಿಕ್ಯ ಭಾವ, ಕುತರ್ಕ, ಕೋಪ ಮುಂತಾದವುಗಳು ಪರಮಾರ್ಥಕ್ಕೆ ಅಡೆ ತಡೆಗಳೆಂದು ಭಾವಿಸಿ ಅವನ್ನು ಪೂರ್ಣ ನಾಶ ಮಾಡಿಕೊಳ್ಳುವನು ಪ್ರವೃತ್ತಿ (ಸಂಸಾರ)ಯ ತ್ಯಾಗಮಾಡಿ ನಿಸ್ಸಂಗನಾಗಿ ಅವನು ನಿವೃತ್ತಿ (ಸನ್ಯಾಸ) ಮಾರ್ಗದಿಂಡ ಜ್ಞಾನಯೋಗ ಸಾಧಿಸಿ ಕೊಳ್ಳು ವನು ಮಮತೆ ಮಾಯೆಗಳೂ, ದುರಾಶೆಗಳೂ, ಅವನ ಸನಿಹಕ್ಕೆ ಬರ ಲಾರವು ಅವನ ಅಂತಸ್ಥಿತಿಯು ಅಭ್ಯಾಸ ವೈರಾಗ್ಯಗಳಿಂದಲೂ, ಬಹಿಸ್ಥಿ ತಿಯು ಸತ್ಸಂಗದಿಂದಲೂ ಕೂಡಿರುವವು ಇದರ ಹೊರತು ಉಳಿದವುಗ ಳನ್ನೆಲ್ಲ ತ್ಯಾಗ ಮಾಡಿ ಬಿಡುವನು ತಾನು ಸ್ಮರಿಸುವ ಸ್ವರೂಪದಂತಾ ಗುವನು, ಸಾಧನಗಳಲ್ಲಿ ನಿತ್ಯ ತತ್ಪರನಾಗುವನು

ಇನ್ನು ಸಾಧಕನ ಬಗೆಗೆ ಇಷ್ಟು ವಿವರವು ಸಾಕು ಅವಗುಣಗ ಳನ್ನು ಬಿಟ್ಟವನೇ ಸಾಧಕನೆಂದು ನಿರೂಪಿಸುವದನ್ನು ತಿಳಿದುಕೊಳ್ಳ ಬೇಕು ಆತ್ಮ ಬಲದಿಂದ ಅವಗುಣಗಳನ್ನು ತ್ಯಾಗ ಮಾಡಿದವನೇ ಸಾಧ

ಕನು ಮುಂದಿನ ಸಮಾಸದಲ್ಲಿ ಸಿದ್ಧ ಲಕ್ಷಣ ಹೇಳುವೆವು ಎಂದು ಗುರುಗಳು ನುಡಿಯುತ್ತಿರಲು ಶಿಷ್ಯರು— ' ನಿಸ್ಪೃಹನಾದವನು ಸಾಧಕ ನಾಗುವನೆಂದ ಮೇಲೆ ಸಂಸಾರಿಕನಿಂದ ತ್ಯಾಗ ಉಂಟಾಗುವದಿಲ್ಲ ಅಂದ ಮೇಲೆ ಸಂಸಾರಿಕರು ಸಾಧಕರಾಗರು ' ಎಂಬ ಸಂಶಯವನ್ನು ಮುಂದಿಟ್ಟರು ಶ್ರೀ ಗುರುಗಳು ಶ್ರೋತೃಗಳ ಸಂದೇಹಕ್ಕೆ ಉತ್ತರ ರೂಪವಾಗಿ ಮುಂದಿನ ಸಮಾಸದಲ್ಲಿ ಬೋಧೆ ಮಾಡಿರುವರು ಅದನ್ನು ತತ್ಪರತೆಯಿಂದ ಶ್ರವಣ ಮಾಡತಕ್ಕದ್ದು

ಶ್ರೀರಾಮ || ೧೦ ಸಿದ್ಧ ಲಕ್ಷಣ || ಈ ಮೊದಲು ಸಂಸಾರಿಕರ ವಿಷಯಕ್ಕೆ ಹಲವು ಸಂಗತಿಗಳನ್ನು ಹೇಳಿದೆವು ಆ ಸಾಂಸಾರಿಕ ತ್ಯಾಗದ ಹೊರತು ಸಾಧಕತ್ವವು ಸಾಧಿಸಲಾರದು ಈ ಸಾಧಕತ್ವದ ಬಗೆಗೆ ವಿವೇಕ ವಿಚಾರಗಳನ್ನು ಕೇಳತಕ್ಕದ್ದು ಮೊದಲು ಸಂಸಾರಿಕ ತ್ಯಾಗವನ್ನು ಕುರಿತು ಹೇಳುವೆವು

ಮಾನವ ಪ್ರಾಣಿಯು ಸನ್ಮಾರ್ಗಾವಲಂಬಿಯಾಗಬೇಕು ದುರ್ಮಾರ್ಗ ವೃತ್ತಿಯನ್ನು ತ್ಯಾಗ ಮಾಡತಕ್ಕದ್ದು ಸುಬುದ್ಧಿಯುಂಟಾಗುವದಕ್ಕಾಗಿ ಕುಬುದ್ಧಿಯನ್ನು ತ್ಯಾಗ ಮಾಡಬೇಕು ಪರಮಾರ್ಥ ಮಾರ್ಗ ಪ್ರಾಪ್ತಿಗಾಗಿ ಪ್ರಪಂಚವನ್ನು ಹೀಗಳೆದು ಮನಸ್ಸಿನಿಂದ ವಿಷಯುಗಳನ್ನು ತ್ಯಾಗ ಮಾಡಬೇಕು ಇದಲ್ಲದೆ ಅಭಾವ, ಸಂಶಯ, ಅಜ್ಞಾನಗಳನ್ನು ಮೆಲ್ಲ ಮೆಲ್ಲನೆ ಎಲ್ಲವನ್ನು ತ್ಯಾಗ ಮಾಡತಕ್ಕದ್ದು

ಇಂತು ಅಂತಸ್ತ್ಯಾಗವು ಒದಗದ ಹೊರತು ಪರಮಾರ್ಥ ಪ್ರಾಪ್ತಿಯಿಲ್ಲ ಇದು ಸೂಕ್ಷ್ಮವಾಗಿ ಸಾಧಕ ಸಂಸಾರಿಕರಿಬ್ಬರಲ್ಲಿಯೂ ಇರುವದು ನಿಸ್ಪೃಹನಲ್ಲಿ ಬಾಹ್ಯ ತ್ಯಾಗವು ವಿಶೇಷ ವಿರುವದು ಸಂಸಾರಿಕನಿಗೆ ಅಲ್ಲಲ್ಲಿಗೆ ಬ್ಯಾಹ್ಯತ್ಯಾಗ ಪ್ರಸಂಗಗಳೊದಗುವವು ನಿತ್ಯ ನೇಮ ಶ್ರವಣಾದಿಗಳು ತ್ಯಾಗವಿಲ್ಲದೆ ಸಾಧ್ಯವಿಲ್ಲ ಸಾಧಕನ ಮನಸ್ಸಂದೇಹಗಳು ತ್ಯಾಗದಿಂದ ದೂರಾದರೆ ಮಾತ್ರ ಆವನ ಸಾಧಕತ್ವವು ಸಫಲವು

ಇದರಲ್ಲಿ ಇನ್ನು ಮುಂದಿನ ಕತೆಯ ಅನ್ವಯವನ್ನು ಶ್ರವಣ ಮಾಡಿರಿ ಎಂದು ಗುರುಗಳು ಸಿದ್ಧ ಲಕ್ಷಣವನ್ನು ಹೇಳ ಹತ್ತಿದರು. ಏನೆಂದರೆ—

ಬದ್ಧನಲ್ಲಿಯ ಅವಗುಣಗಳು ಮುಮುಕ್ಷುವಾದಾಗ ಗತಿಸುವವು, ಮುಮುಕ್ಷು ಲಕ್ಷಣವನ್ನು ಮೀರಿ ಸಾಧಕನು ಮುಂದೆ ಹೋಗುವನು ಮತ್ತು ಆ ಸಾಧಕನ ಸಂದೇಹ ವೃತ್ತಿಯು ಬರೆಬರುತ್ತ ನಿವೃತ್ತಿಯಾಗುವದು ಆ ನಿವೃತ್ತಿ ಸ್ಥಿತಿಯು ನಿಸ್ಸಂದೇಹವೆಂದಾದ ಕೂಡಲೆ ಆ ಸಾಧಕನಿಗೆ ಸಿದ್ಧದೆಸೆಯು ಪ್ರಾಪ್ತವಾಗುವದು ಇದರ ತಾತ್ಪರ್ಯವೆಂದರೆ— ಸಂದೇಹವಿಲ್ಲದ ಜ್ಞಾನವು, ನಿಶ್ಚಲ ವಸ್ತುರೂಪತೆಯು ಇವೇ ಸಿದ್ಧನ ಮುಖ್ಯ ಲಕ್ಷಣಗಳು

ಸಂಶಯ ವಿಶಿಷ್ಟ ಜ್ಞಾನವು ಅಯೋಗ್ಯವು, ಹಾಗು ಸಂಶಯಿತ ವೈರಾಗ್ಯವು ಹುಡುಗಾಟಿಕೆಯದು, ಸಂಶಯದ ಭಜನವು ನಿರರ್ಥಕವು ಹಾಗು ನಿಷ್ಫಲವು ದೇವ, ಧರ್ಮ, ವ್ರತ, ತೀರ್ಥ, ಭಕ್ತಿ, ಜ್ಞಾನ. ಕರ್ಮ, ವಿದ್ಯೆ, ವ್ಯುತ್ಪತ್ತಿ, ಗತಿ, ಪ್ರೀತಿ, ದಕ್ಷತೆ, ಮೋಕ್ಷ, ಸಂತ, ಪಂಡಿತ, ಬಹುಶ್ರುತತ್ವ, ಶ್ರೇಷ್ಠತೆ, ವ್ಯುತ್ಪನ್ನತೆ, ಜ್ಞಾನಿ, ಈ ಎಲ್ಲವುಗಳಲ್ಲಿ ಸಂಶಯವು ಇದ್ದುದಾದರೆ ಅವೆಲ್ಲವು ವ್ಯರ್ಥವಾದವುಗಳೆಂದು ಹೇಳಬಹುದು ನಿಶ್ಚಯವಿಲ್ಲದ ಮಾತುಗಳು ವ್ಯರ್ಥ ನಿಶ್ಚಯವಿಲ್ಲದೆ ಎಲ್ಲವು ತಿಲಮಾತ್ರವೂ ಆಧಾರವಿಲ್ಲದವಾಗುವವು ಕೇವಲ ಸಂದೇಹರೂಪದ ಪ್ರವಾಹದಲ್ಲಿ ವ್ಯರ್ಥ ಬಿದ್ದಂತಾಗುವದು ನಿಶ್ಚಯವಿಲ್ಲದ ಮಾತುಗಳು ಮನಸಿಗೆ ಕಂಟಾಳಿಕೆ ಹುಟ್ಟಿಸುವವು

ನಿಶ್ಚಯವಿಲ್ಲದ ಬಡಬಡಿಕೆ ನಿರರ್ಥಕವು ನಿಶ್ಚಯವಿಲ್ಲದ ಹೊಗಳಿಕೆ ವ್ಯರ್ಥ ಸಂಶಯದಿಂದ ಸಮಾಧಾನವಿಲ್ಲ ಆದ್ದರಿಂದ ಸಂದೇಹರಹಿತವಾದ ಜ್ಞಾನವು ನಿಶ್ಚಿತ ಶಾಂತಿದಾಯಕವು ಇದೇ ಸಿದ್ಧ ಲಕ್ಷಣವು ನಿಶ್ಚಿತವಾದದ್ದು

ಈ ಪ್ರಕಾರ ಗುರುವು ಹೇಳಲು ಶಿಷ್ಯರು — ಯಾವ ನಿಶ್ಚಯ ಮಾಡಬೇಕು? ಹಾಗು ನಿಶ್ಚಯದ ಲಕ್ಷಣಗಳೇನು? ಎಂದು ಕೇಳಲು ಗುರುಗಳು —

ಮಾನವನು ಹಲವು ದೇವತೆಗಳ ಮತ್ತು ಸಾಧನಗಳ ಗೊಂದಲದಲ್ಲಿ ಬೀಳದೆ ಮುಖ್ಯ ದೇವ ಹಾಗು ಮುಖ್ಯ ಸಾಧನಗಳ ನಿಶ್ಚಯ ಮಾಡಿಕೊಳ್ಳಬೇಕು ಈ ಚರಾಚರಗಳನ್ನು ನಿರ್ಮಿಸಿದ ಪರಮಾತ್ಮನ ಬಗೆಗೆ ಮಾಡುವ ವಿಚಾರವು ನಿಶ್ಚಿತವಾದುದಿರಬೇಕು ಶುದ್ಧ ವಿವೇಕ ದಿಂದ ಪರಮೇಶ್ವರನನ್ನು ತಿಳಿಯಬೇಕು ಮುಖ್ಯ ದೇವನಾರು? ಭಕ್ತನ ಲಕ್ಷಣಗಳೇನು ? ಈ ವಿಚಾರಗಳಲ್ಲಿ ಅಸತ್ಯವನ್ನು ಬಿಟ್ಟು ನಿಶ್ಚಿತ ವಾದ ಸತ್ಯವನ್ನು ಅವಲಂಬಿಸಬೇಕು ತನ್ನ ದೇವನನ್ನು ಗುರುತಿಸ ಬೇಕು, ಬಳಿಕ ನಾನು ಯಾರು ಎಂಬುದನ್ನು ನೋಡಿಕೊಳ್ಳಬೇಕು ನಿಸ್ಸಂಗನಾಗಿ ' ನಾನು ' ಎಂಬುದನ್ನು ಬಿಟ್ಟು ವಸ್ತು ರೂಪವಾಗಿ ಇರಬೇಕು ಸಂಶಯದಿಂದುಂಟಾದ ಬಂಧನವನ್ನು ಹರಿದೊಗೆದು ನಿಶ್ಚಯ ವಾದ ಮೋಕ್ಷದ ವಿಚಾರವನ್ನು ಮಾಡಬೇಕು ಅನ್ವಯ ವ್ಯತಿರೇಕಗ ಳಿಂದ ವಿಚಾರ ಮಾಡಿ ಸೃಷ್ಟ ಭೂತಗಳೆಲ್ಲ ಅಶಾಶ್ವತ ಹೇಗಾದನೆಂಬ ದನ್ನು ಅರಿತು ಕೊಳ್ಳಬೇಕು ಪೂರ್ವ ಪಕ್ಷದ ನಿರಸನ ಮಾಡಿ ಕೊಂಡು ತ್ರಿಗುಣಗಳಿಂದಲೂ ಪಂಚ ಭೂತಗಳಿಂದಲೂ ಅತೀತನಾದ ದೇವನನ್ನು ಅರಿತು ' ಅವನೇ ನಾನು ' ಎಂಬುದಾಗಿ ನಿಶ್ಚಯ ಮಾಡಿ ಕೊಳ್ಳಬೇಕು ದೇಹಾಭಿಮಾನದಿಂದ ಹಲವು ಸಂಶಯಗಳು ಉತ್ಪನ್ನವಾಗುವವು ಅದಕ್ಕಾಗಿಯೇ ತನ್ನ ಆತ್ಮತ್ವದ ನಿಶ್ಚಯ ಮಾಡಿ ಕೊಳ್ಳಬೇಕು ಆತ್ಮಜ್ಞಾನವು ಸ್ವಯಂ ಸಿದ್ಧವಾದದ್ದು ದೇಹಾಭಿ ಮಾನವು ಸಂದೇಹವನ್ನು ಹೆಚ್ಚಿಸುವಂತಹದು ಆದ್ದರಿಂದಲೇ ಆತ್ಮ ನಿಶ್ಚಯ ಕಾಯ್ದುಕೊಂಡು ಶಾಂತಿ ಹೊಂದಬೇಕು

ದೇಹ ಬುದ್ಧಿಯನ್ನು ನೆನಪಿಗೆ ತಂದ ಕೂಡಲೆ ವಿವೇಕದ ಪಾವಿ ತ್ರ್ಯವು ದೂರಾಗುವದು ಆದ್ದರಿಂದಲೇ ಆತ್ಮ ಬುದ್ಧಿಯನ್ನು ದೃಢೀ ಕರಿಸಿಕೊಳ್ಳಬೇಕು ಈ ಆತ್ಮ ಬುದ್ಧಿಯು ನಿಶ್ಚಿತವಾದುದು ಇದ ರಿಂದಲೇ ಮೋಕ್ಷಲಕ್ಷ್ಮೀದೇವಿಯು ಲಭಿಸುವದು ಆದ್ದರಿಂದ 'ನಾನೇ ಆತ್ಮನು' ಎಂಬ ಮಂತ್ರವನ್ನು ಎಂದೂ ಮರೆಯಬಾರದು

ಇಂತು ಗುರುಗಳು ನಿಶ್ಚಯದ ಲಕ್ಷಣಗಳನ್ನು ಬೋಧಿಸಿದರು ಆದರೂ ಈ ಲಕ್ಷಣಗಳು ಸತ್ಸಂಗವಿಲ್ಲದೆ ತಿಳಿಯಲಾರವು ಆದ್ದರಿಂದ ಸಂತರಿಗೆ ಶರಣು ಹೋಗಬೇಕು ಅಂದರೆ ಸಂಶಯ ನಿವೃತ್ತಿಯಾಗುವದು

ಇನ್ನು ಈ ಹೇಳಿಕೆ ಅದಂತಿರಲಿ, ಸಿದ್ಧ ಲಕ್ಷಣಗಳನ್ನು ಸ್ವಲ್ಪದರಲ್ಲಿ ಹೇಳುವದಾದರೆ ಮುಖ್ಯವಾಗಿ 'ನಿಸ್ಸಂದೇಹತ್ವ' ಇದುವೇ ಸಿದ್ಧ ಲಕ್ಷಣವು. ಸಿದ್ಧ ಸ್ವರೂಪದಲ್ಲಿ ದೇಹವಿಲ್ಲನೆಂದ ಮೇಲೆ ಅಲ್ಲಿ ಸಂಶಯಕ್ಕೆ ಆಸ್ಪದವಿಲ್ಲ ಆದ ಕಾರಣ ನಿಸ್ಸಂದೇಹಿಯಾದ ಸಿದ್ಧನನ್ನು ಕಾಣುವದು ಯುಕ್ತವು ದೇಹ ಸಂಬಂಧವುಳ್ಳವರ ಗುಣ ಲಕ್ಷಣಗಳಿಗೆ ಕೊರತೆಯಿಲ್ಲ ಆದರೆ ದೇಹಾತೀತನ ಲಕ್ಷಣಗಳನ್ನು ಏನೆಂದು ಹೇಳುವದು? ಆದೇಹಾತೀತನನ್ನು ಕಣ್ಣುಗಳಿಂದ ನೋಡಲು ಸಾಧ್ಯವಿಲ್ಲ ಅಂದ ಮೇಲೆ ಅವನ ಸ್ವರೂಪ ಲಕ್ಷಣಗಳನ್ನು ಹೇಗೆ ಹೇಳುವರು? ಸಿದ್ಧನು ನಿರ್ಮಲ ವಸ್ತುವು ಆದುದರಿಂದ ಅವನ ಲಕ್ಷಣ ತಿಳಿಯುವದು ಹೇಗೆ?

ಸಿದ್ಧನ ಲಕ್ಷಣವೆಂದರೆ ಆ ಸಿದ್ಧ ವಸ್ತುವಿನ ವಸ್ತು ರೂಪವಾದ ನಿರ್ಗುಣಿತ್ವವೇ ಸಿದ್ಧ ಲಕ್ಷಣವು ಆದರೂ ಇದನ್ನು ಜ್ಞಾನದ ಶತಕದಲ್ಲಿ ಹೇಳಿದೆ ಆದ್ದರಿಂದ ಇಲ್ಲಿಗೆ ವಕ್ತೃತ್ವವನ್ನು ತಡೆದೆವು. ಶ್ರೋತೃಗಳು ನ್ಯೂನತೆಯನ್ನೆಣಿಸದೆ ಅವನ್ನು ಪೂರ್ಣಮಾಡಿಕೊಂಡು ಕ್ಷಮಿಸಬೇಕು

೫ನೇ ದಶಕ ಮುಗಿದುದು



## ಜಯ ರಘುವೀರ ಸಮರ್ಥ

## ೬ನೆಯ ದಶಕ [ದೇವಶೋಧನ]

ಶ್ರೀ ರಾಮ || ದೇವ ಶೋಧನ || ಶ್ರೀ ಗುರುಗಳು ದೇವ ಶೋಧನ ಬೋಧೆಯ ಮೊದಲು ಶ್ರೋತೃಗಳನ್ನು ಕುರಿತು— 'ನಿಮಿಷ ಮಾತ್ರ ಸ್ವಸ್ಥಚಿತ್ತದಿಂದ ಕುಳಿತು ಶ್ರವಣಮಾಡಿರಿ ಎಂದು ಎಚ್ಚರಿಸಿ ಹೇಳಹತ್ತಿದರು

''ನಾವು ಯಾವದೇ ಒಂದು ಊರಿನಲ್ಲಿ ಅಥವಾ ಪ್ರದೇಶದಲ್ಲಿ ಇರುವದಾದರೆ ಆ ಗ್ರಾಮದ ಇಲ್ಲವೆ ಪ್ರದೇಶದ ಒಡೆಯನನ್ನು ಕಾಣದೆ ಇದ್ದರೆ ನಮಗೆ ಸುಖವಾಗುವದಿಲ್ಲ ಆದ್ದರಿಂದ ಅಲ್ಲಿಯ ಒಡೆಯನಿಗೆ ಕಂಡುಕೊಳ್ಳುವದು ಯೋಗ್ಯವು, ಒಂದು ವೇಳೆ ನಾವು ಹಾಗೆ ವರ್ತಿಸದಿದ್ದರೆ ನಮಗೆ ಮಾನ್ಯತೆ ದೊರೆಯಲಾರದು ಹಾಗು ನಮ್ಮ ಮಹತ್ವವು ತೀವ್ರವೇ ಇಲ್ಲದಾಗುವದು ಆದ್ದರಿಂದಲೇ ಬಡವ ಬಲ್ಲಿದರೆಲ್ಲರೂ ಇದನ್ನನುಸರಿಸಬೇಕು ಇದೇ ವಿವೇಕವು ಒಡೆಯನನ್ನು ಕಾಣದೆ ಅಲ್ಲಿ ವಾಸ್ತವ್ಯ ಮಾಡಿದ್ದಾದರೆ ನಾವು ಕಂಗಾಲರಾಗಬಹುದು ಇಲ್ಲವೆ ತಪ್ಪು ಮಾಡದೆ ಅಪರಾಧಕ್ಕೆ ಗುರಿಯಾಗಬಹದು ಆದ್ದರಿಂದಲೇ ಜಾಣನಾದವನು ಅಲ್ಲಿಯ ಅಧಿಪತಿಗೆ ಭೆಟ್ಟಿಯಾಗಬೇಕು ಇಲ್ಲದೆ ಹೋದರೆ ಅವನ ಪ್ರಪಂಚವು ದೈನ್ಯತೆ ಹೊಂದುವದು

ಊರಿಗೆ ಊರಿನ ಒಡೆಯನು ದೊಡ್ಡವನು ಅವನಿಗಿಂತಲೂ ದೇಶಕ್ಕೊಡೆಯನಾದ ದೇಶಾಧಿಪತಿಯು ದೊಡ್ಡವನು ಇದರಂತೆ ಉತ್ತರೋತ್ತರವಾಗಿ ರಾಷ್ಟ್ರಪತಿಯು, ಬಹು ರಾಷ್ಟ್ರಪತಿ ಚಕ್ರವರ್ತಿ ಮಹಾರಾಜನು ಇವರೆಲ್ಲರೂ ಹೆಚ್ಚಿನವರು ಅಧಿಕಾರ ತಾರತಮ್ಯದಿಂದ ನರಪತಿ, ಗಜಪತಿ, ಹಯಪತಿ, ಭೂಪತಿಗಳೆಂದು ಅಧಿಕಾರಿಗಳಿರುವರು ಇವರೆಲ್ಲ ವರಿಷ್ಟರು ಈ ಎಲ್ಲರಲ್ಲಿ ಚಕ್ರವರ್ತಿ ಮಹಾರಾಜನೇ ದೊಡ್ಡವನು, ಶ್ರೇಷ್ಠನು

ಇದೆಲ್ಲವು ಇಷ್ಟಕ್ಕೆ ಇರಲಿ

ನಮ್ಮ ವಿಷಯದಲ್ಲಿ ಸಕಲ ಸೃಷ್ಟಿಕರ್ತ ಬ್ರಹ್ಮನಿಗೆ ಶ್ರೇಷ್ಠತೆಯುಂಟು ಆದರೆ ಆ ಬ್ರಹ್ಮನನ್ನು ಸಹ ನಿರ್ಮಾಣ ಮಾಡಿದವನು ಇರಬೇಕಲ್ಲವೇ? ಅಂದ ಮೇಲೆ ಆ ಬ್ರಹ್ಮ ನಿರ್ಮಾತೃವಿಗೆ ಶ್ರೇಷ್ಠತೆಯನ್ನು ಒಪ್ಪಬೇಕಾ

ಗುವದು ಆ ನಿರ್ಮಾತೃ ಪರಮೇಶ್ವರನೇ ಎಲ್ಲರಿಗಿಂತಲೂ ಶ್ರೇಷ್ಠತೆ ಮನು ಅವನನ್ನು ಹಲವು ಪ್ರಯತ್ನದಿಂದ ಗುರುತಿಸಿಕೊಳ್ಳಬೇಕು. ಆತನಿಲ್ಲದ ಸ್ಥಾನವಿಲ್ಲ ಆದರೂ ಪ್ರಾಣಿಗಳಿಗೆ ಯಮಯಾತನೆ ತಪ್ಪುವ ದಿಲ್ಲವಲ್ಲ! ಬ್ರಹ್ಮಾಂಡ ನಾಯಕ ಅದರ ಪರಮೇಶ್ವರನು ಇದನ್ನು ಅಲಕ್ಷಿ ಸುವದು ಸರಿಯಲ್ಲವೆನ್ನಿಸುವದು ಅವನೇ ಸಂಸಾರವನ್ನಿಟ್ಟವನು, ಅವ ನಿಂದಲೆ ಬ್ರಹ್ಮಾಂಡಗಳ ಉತ್ಪತ್ತಿ ಆವನನ್ನು ತಿಳಿದುಕೊಂಡಿದ್ದಾದರೆ ಯಮ ಯಾತನೆಗಳಂಥ ಬಾಧೆಗಳು ನಮಗೆ ತಟ್ಟಲಾರವು ಇಂಥ ಮಹತ್ವ ವುಳ್ಳ ಆ ಪರಮಾತ್ಮನನ್ನು ತಿಳಿಯದವನು ಪತಿತನೆಂದು ಹೇಳಬಹುದು

ಆದ್ದರಿಂದಲೇ ಪ್ರತಿಯೊಬ್ಬ ಮಾನವನು ಆ ಪರಮಾತ್ಮನನ್ನು ತಿಳಿದು ಜನ್ಮಸಾಫಲ್ಯ ಮಾಡಿಕೊಳ್ಳಬೇಕು ಆತನ ಪರಿಚಯವಾಗದಿದ್ದರೆ ಸತ್ಸಂಗವನ್ನು ಹಿಡಿದು ಅದರಿಂದ ಪರಮಾತ್ಮನನ್ನು ಕಂಡುಕೊಳ್ಳಬೇಕು

ಇಂತು ಆ ಪರಮಾತ್ಮ ಭಗವಂತನನ್ನು ಅರಿತವನೇ ಸಂತನೆನ್ನಿ ಸುವನು ಆ ಸಂತನಿಂದ ಶಾಶ್ವತ ಅಶಾಶ್ವತಗಳಾವವೆಂಬುದು ತಿಳಿಯುವದು ಆ ಸಂತ ಮಹಾನುಭಾವನು ತನ್ನ ಅಂತರ್ಭಾವದಿಂದ ದೇವನನ್ನು ಅತ್ತಿತ್ತ ಹೊಯ್ದಾಡಗೊಡನು ಅಂದರೆ ಅವನ ಹೃದಯವು ದೇವಮಂದಿರವೇ ಆಗಿ ಬಿಟ್ಟಿರುವದು ಆ ಸಾಧುವು ಜನರಲ್ಲಿ ಬೆರೆತಿದ್ದರೂ, ಅವನ ನಡೆ-ನುಡಿ ಗಳು ಬೇರೆಯಾಗಿರುವವು ಅವನ ಅಂತಸ್ಥದಲ್ಲಿ ಜ್ಞಾನವು ಜಾಗೃತವಾ ಗಿರುವದು, ಆ ಜ್ಞಾನವೆಂದರೆ ನಿರ್ಗುಣ ಪರಮಾತ್ಮ ವಿಷಯಕವಾ ದದ್ದು ಈ ಜ್ಞಾನದ ಹೊರತು ಉಳಿದೆಲ್ಲವೂ ಅಜ್ಞಾನವೆಂದು ತಿಳಿ ಯತಕ್ಕದ್ದು ಉದರ ನಿಮಿತ್ತಗಾಗಿ ಹಲವು ವಿದ್ಯೆಗಳನ್ನು ಅಭ್ಯಾಸಮಾಡಿ ಗಳಿಸಿದುದೂ ಜ್ಞಾನವೆನ್ನಿಸುವದಾದರೂ ಅದು ಸಾರ್ಥಕ ಜ್ಞಾನವಲ್ಲ ದೇವ ನನ್ನು ತಿಳಿದುಕೊಳ್ಳುವ ಜ್ಞಾನವೊಂದೇ ಸಾರ್ಥಕ ಜ್ಞಾನವು ಆ ಜನ್ಮ ಪರಿ ಹೊಟ್ಟೆ ತುಂಬಿಕೊಂಡು ದೇಹ ಸಂರಕ್ಷಣೆ ಮಾಡಿದ್ದಾದರೆ ಕಡೆಗೆ ಆ ದೇಹವು ನಾಶವಾಗುವದೇ ಹೊರತು ಅದು ಸಾರ್ಥಕ ಹೊಂದಲಾರದು ಇದರಂತೆ ಹೊಟ್ಟೆ ತುಂಬಿಕೊಳ್ಳಲು ಗಳಿಸಿದ ವಿದ್ಯೆಗಳೆಲ್ಲವೂ ನಿರರ್ಥ ಕವು ಯಾಕಂದರೆ ಆ ವಿದ್ಯೆಗಳು ಸದ್ವಿದ್ಯೆಗಳಲ್ಲ ಸರ್ವವ್ಯಾಪಕ ಪರ ಮಾತ್ಮನನ್ನು ಅರಿಯುವದೇ ಜ್ಞಾನವು ಆ ಜ್ಞಾನವನ್ನು ಗಳಿಸಿಕೊಡು

ವದೇ ಸದ್ವಿದ್ಯೆಯು ಇಂತು ಪರಮಾತ್ಮ ವಿಷಯಕ ಜ್ಞಾನ ಗಳಿಸಿದ ವನೇ ಸಜ್ಜನನು ಜ್ಞಾನದಿಂದ ಶಾಂತಿ ಪಡೆಯುವ ಅಭಿಲಾಷೆಯುಳ್ಳವರು ಆತನನ್ನು ಕೇಳಬೇಕು ಒಬ್ಬ ಅಜ್ಞನನ್ನು ಇನ್ನೊಬ್ಬ ಅಜ್ಞಾನಿಯು ಕಂಡು ಜ್ಞಾನ ಪಡೆಯಲಿಚ್ಛಿಸಿದರೆ ಸಾಧ್ಯವೇ ಇಲ್ಲ ತನಗಿಲ್ಲದ ದರಿದ್ರನು ಅನ್ಯರಿಗೇನು ಕೊಡುವನು? ಅದರಂತೆ ಒಬ್ಬ ರೋಗಿಯು ಇನ್ನೊಬ್ಬ ರೋಗಿಯಿಂದ ತನ್ನ ಆರೋಗ್ಯತೆಯನ್ನು ಬಯಸಿದರೆ ರೋಗ ನಾಶಿಯಾಗುವದೇ? ಇಲ್ಲ ಒಬ್ಬ ಹೇಡಿಯು ಇನ್ನೊಬ್ಬ ಹೇಡಿಯ ಬೆನ್ನು ಬಿದ್ದಂತೆ ಇದಾಗುವದು ಪಿಶಾಚಿಯಿಂದ ಪಿಶಾಚ್ಚವು, ಉನ್ಮತ್ತನಿಂದ ಉನ್ಮತ್ತತೆಯು ದೂರಾಗದು ಕುಲಗೇಡಿಯಿಂದ ದೀಕ್ಷೆ ಸಾಧ್ಯವಿಲ್ಲ ಕತ್ತಲೆಯಿಂದ ಬೆಳಕನ್ನು ಹುಡುಕುವದು ಸಾಧ್ಯವಿಲ್ಲ ಇದರಂತೆ ಬದ್ಧನಿಂದ ಬದ್ಧಮಾನವನು ಸಿದ್ಧನಾಗುವದು ಶಕ್ಯವಿಲ್ಲ, ದೇಹಿಯು ದೇಹಿಯನ್ನು ವಿದೇಹಸ್ಥಿತಿಗೆ ತರಲು ಸಾಧ್ಯವಿಲ್ಲ, ಇವೆಲ್ಲ ದೃಷ್ಟಾಂತಗಳಿಂದ ಜ್ಞಾನ ಪ್ರಾಪ್ತಿಯು ಸುಜ್ಞಾತರಿಂದಲ್ಲದೆ ಅನ್ಯರಿಂದಾಗದೆಂಬದು ಸಿದ್ಧವಾಗುವದು ಒಟ್ಟಿನ ಮೇಲೆ ಜ್ಞಾನಿಗಳನ್ನು ಕಂಡು ಅವರ ಅನುಗ್ರಹ ಪಡೆದು ಸಾರಾಸಾರ ವಿಚಾರ ಮಾಡಿದ ಜೀವಿಗಳಿಗೆ ಮೋಕ್ಷ ಪ್ರಾಪ್ತವಾಗುವದು

ಶ್ರೀ ರಾಮ || ೨ ಬ್ರಹ್ಮ ನಿರೂಪಣ || ಇನ್ನು ಸಾಯುಜ್ಯತೆಯನ್ನು ಒದಗಿಸಿ ಕೊಡುವ ಸಾಧನಗಳಲ್ಲಿ ಒಂದಾದ ಉಪದೇಶದ ಲಕ್ಷಣಗಳನ್ನು ಕೇಳಿರಿ ಅದಕ್ಕಾಗಿ ಹಲವು ಅಭಿಪ್ರಾಯಗಳನ್ನು ನಿರೀಕ್ಷಿಸಬೇಕಾಗಿಲ್ಲ ಉಪದೇಶವು ಬ್ರಹ್ಮಜ್ಞಾನ ಬೋಧೆಯೇ ಆಗಿರಬೇಕು ಅದಿಲ್ಲದೆ ಉಪದೇಶಕೊಳ್ಳುವದೆಂದರೆ ಕಾಳನ್ನು ಬಿಟ್ಟು ತೌಡು ಮುಕ್ಕಿದಂತಾಗುವದು ಸಿಪ್ಪೆಯನ್ನು ಹಿಂಡುವದು, ಮಜ್ಜಿಗೆಯನ್ನು ಮಥಿಸಿ ಬೆಣ್ಣೆ ತೆಗೆಯಲು ಯತ್ನಿಸುವದು, ಕಚ್ಚನ್ನು ಕುಡಿಯುವದು, ತೊಗಟೆಯನ್ನು ತಿನ್ನುವದು, ನೆಕ್ಕೆಯನ್ನು ನೆಕ್ಕುವದು, ಕೊಬ್ಬರಿಯನ್ನು ಬಿಟ್ಟುಗೊಟ್ಟು ಪರಟೆಯನ್ನು ಸಂಗ್ರಹಿಸುವದು, ಇವೆಲ್ಲವು ನಿರರ್ಥಕವಾಗಿರುವಂತೆ ಬ್ರಹ್ಮಜ್ಞಾನವಿಲ್ಲದ ಬೋಧೆಯು ವ್ಯರ್ಥವಾಗಿರುವದು ಜಾಣನಾದವನು ಸತ್ವವನ್ನು ಬಿಟ್ಟು ಜೊಳ್ಳನ್ನು ಸ್ವೀಕರಿಸಲಾರನು

ಇನ್ನು ನಿರ್ಗುಣ ಬ್ರಹ್ಮನ ವಿಚಾರವನ್ನು ಹೇಳುವೆವು ಸೃಷ್ಟಿಯೆಲ್ಲವು ಪಂಚಭೂತಾತ್ಮಕವೂ ಅಶಾಶ್ವತವೂ ಆಗಿರುವದು ಬ್ರಹ್ಮನ ಆದ್ಯಂತದಲ್ಲಿ ನಿರ್ಗುಣನು ಹಾಗು ಶಾಶ್ವತನು ಪಂಚಭೂತಗಳೆಲ್ಲ ಸಗುಣವಾಗಿ ನಾಶವಾಗುವಂಥವು ಅಂದ ಮೇಲೆ ಆ ಭೂತಗಳಲ್ಲಿ ದೇವತ್ವವಿಲ್ಲ ಮಾನವನಿಗೆ—'ನೀನು ಭೂತನು' ಎಂದ ಕೂಡಲೆ ಅವನಿಗೆ ಅರ್ಥವಿಪರ್ಯಾಸವಾಗಿ ಸಿಟ್ಟು ಬರುವದು ಅಂದ ಮೇಲೆ ಪರಮಾತ್ಮನಿಗೆ ಭೂತಗಳ ಉಪಮೆಯನ್ನು ಹೇಗೆ ಕೊಡುವದು? ಆ ಪರಮಾತ್ಮನ ಮಹಿಮೆ ಬ್ರಹ್ಮಾದಿಕರಿಗೂ ತಿಳಿಯದು ಅವನಿಗೆ ಭೂತವನ್ನು ಹೋಲಿಸಲು ದೋಷವುಂಟಾಗುವದು ಮಹಾಪುರುಷರು ಇದೆಲ್ಲ ವಿಚಾರವನ್ನು ಅರಿತಿರುವರು

ಪೃಥ್ವಿ, ಜಲ, ವಾಯು, ತೇಜ, ಆಕಾಶ ಇವೇ ಪಂಚಭೂತಗಳು ಜಗದೀಶನು ಈ ಭೂತಗಳನ್ನೆಲ್ಲ ಒಳಗೂ ಹೊರಗೂ ವ್ಯಾಪಿಸಿ ಬಿಟ್ಟಿರುವನು ಪಂಚ ಭೂತಗಳೆಲ್ಲಕ್ಕೆ ನಾಶವುಂಟು ಪರಬ್ರಹ್ಮನು ಅವುಗಳಿಂದ ಬೇರೆಯೇ ಇರುವನು ಭೂತಗಳೆಲ್ಲ ನಾಮ ರೂಪಾತ್ಮಕಗಳು, ಪರಬ್ರಹ್ಮನು ನಾಮ ರೂಪಾತೀತನು ಪಂಚಭೂತಗಳೂ ಮೂರು ಗುಣಗಳೂ ಕೂಡಿ ಅಷ್ಟಧಾಪ್ರಕೃತಿಯೆನ್ನಿಸುವದು ಅಷ್ಟಧಾಪ್ರಕೃತಿಗೇ ದೃಶ್ಯವೆಂಬ ಹೆಸರು ವೇದ ಶ್ರುತಿಗಳೆಲ್ಲ 'ದೃಶ್ಯವೆಲ್ಲವೂ ನಾಶವು' ಎಂದು ಹೇಳುವವು ಆದ್ದರಿಂದಲೇ ಜ್ಞಾನಿಯು ನಿರ್ಗುಣ ಬ್ರಹ್ಮನನ್ನು ಶಾಶ್ವತನೆಂದು ನಿಶ್ಚಿತ ತಿಳಿಯುವನು ಆ ಶಾಶ್ವತನನ್ನು ಶಸ್ತ್ರ-ಆಯುಧಗಳಿಂದ ತುಂಡರಿಸಲು ಬರಲಾರದು, ಅಗ್ನಿಯು ಆತನನ್ನು ದಹಿಸಲಾರದು, ನೀರು ಮುಳುಗಿಸಿ ಕೊಳ್ಳಲಾರದು. ಗಾಳಿಯು ತೂರಿ ಹಾರಿಸಲಾರದು, ಆಕಾಶದಲ್ಲಿ ಅವನು ಒಂದೆಡೆಗೆ ಬೀಳನು, ಒಂದೆಡೆಯಿಂದ ಏಳನು. ಆ ಪರಬ್ರಹ್ಮನಿಗೆ ವರ್ಣಗಳಿಲ್ಲ ಎಲ್ಲದರಿಂದಲೂ ಅವನು ಬೇರೆ ಇರುವನು ಮತ್ತು ಅವನು ಸದಾವ ಕಾಲವೂ ಇದ್ದೇ ಇರುವನು ಅವನು ಅದೃಶ್ಯನಾಗಿದ್ದರೂ ಎಲ್ಲೆಡೆಯಲ್ಲಿ ಸಂಚರಿಸುವನು ಎಲ್ಲಿ ನೋಡಿದಲ್ಲಿ ಅವನು ಸೂಕ್ಷ್ಮವಾಗಿ ಇದ್ದೇ ಇರುವನು ದೃಷ್ಟಿಯು ನೋಡುವ ಕ್ರಿಯೆಯನ್ನು ಮಾಡುವದು

ಆದರೆ ಬ್ರಹ್ಮನು ದೃಶ್ಯನಲ್ಲದ ಮೂಲಕ ಅವನನ್ನು ನೋಡಲು ದೃಷ್ಟಿಯು ಕ್ರಿಯೆಯು ಕುಂಠಿತವಾಗುವದು ಅಂದರೆ ಆತನು ಗುಪ್ತನಾಗಿಯೇ ಇರುವನು ಅವನು ಗೌಪ್ಯನಾಗಿರುವ ಗುಟ್ಟನ್ನು ತಿಳಿಯಬೇಕಾದರೆ ಗುರುಮುಖದಿಂದ ತಿಳಿದುಕೊಳ್ಳಬೇಕು ಅಂದರೆ ಕಾಣುವದೆಲ್ಲವೂ ಹುರುಳಿಲ್ಲದ್ದು ಕಾಣದ್ದೆಲ್ಲವೂ ಸತ್ಯಯುತವಾದದ್ದು ಈ ವಿಚಾರವು ಉತ್ಪನ್ನವಾಗುವದು ವಿವೇಕ ಬಲದಿಂದ ಹುಟ್ಟದ್ದನ್ನು ಹುಟ್ಟಿಸಿಕೊಳ್ಳಬೇಕು, ಕಾಣದ್ದನ್ನು ನೋಡಬೇಕು ಹಾಗು ತಿಳಿಯದ್ದನ್ನು ಅರಿತುಕೊಳ್ಳಬೇಕು ಗುಪ್ತವಿದ್ದುದನ್ನು ಬಯಲಿಗೆಳೆಯಬೇಕು, ಅಸಾಧ್ಯವಾದುದನ್ನು ಸಾಧಿಸಿಕೊಳ್ಳಬೇಕು ಕಠಿಣವಾದುದನ್ನು ಸಾವಕಾಶವಾಗಿ ಅಭ್ಯಾಸ ಮಾಡಬೇಕು ಪರಬ್ರಹ್ಮನನ್ನು ವರ್ಣಿಸುವಲ್ಲಿ ವೇದಗಳು, ಬ್ರಹ್ಮನು, ಶೇಷನು ಇವರೆಲ್ಲರು ಅಸಮರ್ಥರಾದರು ಇಂಥ ವಿಶಿಷ್ಟ ಮಹಿಮೆಯು ಪರಮಾತ್ಮನದು, ಅಂಥ ಪರಮಾತ್ಮನನ್ನು ಆದಾವ ಬಗೆಯಿಂದ ಸಾಧಿಸಿಕೊಳ್ಳುವದು? ಕೇವಲ ಅಧ್ಯಾತ್ಮ ಶ್ರವಣಮಾತ್ರದಿಂದ ಸಾಧ್ಯವಾಗುವದು ಆ ಪರಬ್ರಹ್ಮನು ಪಂಚಭೂತಗಳಲ್ಲಿ ಒಂದೂ ತಾನಾಗಿಲ್ಲ ಅವನಿಗೆ ವರ್ಣಗಳಿಲ್ಲ ಅವನು ವ್ಯಕ್ತನಾಗಿರದೆ ಯಾವಾಗಲೂ ಅವ್ಯಕ್ತನಾಗಿರುವನು ಅವನನ್ನೇ ಶ್ರೇಷ್ಠನಾದ ದೇವನೆಂದು ಎನ್ನುವದು ಜನರ ಸ್ವಭಾವವಾಗಿದೆ ಜಗತ್ತಿನ ಮೇಲೆ ಎಷ್ಟು ಗ್ರಾಮಗಳಿವೆಯೋ ಅಷ್ಟು ಗ್ರಾಮದೇವತೆಗಳು ಜನರಿಂದ ಕಲ್ಪಿತವಾಗಿವೆ ಎಂದ ಮೇಲೆ ದೇವತ್ವದ ಕಲ್ಪನೆಯು ಎಲ್ಲರಲ್ಲಿಯೂ ಇದ್ದಂತಾಯಿತು ಇದರಿಂದ ದೇವನ ನಿರ್ಗುಣತ್ವವು ಅನುಭವಕ್ಕೆ ಬಂದಂತಾಗುವದು ಇನ್ನು ಪ್ರತಿಯೊಬ್ಬನು ತನ್ನನ್ನೇ ತಾನು ಅರಿತುಕೊಳ್ಳಬೇಕು ಯಾವನೊಬ್ಬನು "ಇದು ನನ್ನ ಶರೀರ" ಎಂದು ಉಚ್ಚರಿಸಿದಾಗ ಅವನು ತಾನು ಶರೀರದಿಂದ ಬೇರೆಯಿರುವೆನು ಎಂದು ಹೇಳಿದ ಹಾಗಾಗುವದು ಅದರಂತೆ "ನನ್ನ ಮನಸ್ಸು" ಎನ್ನುವ ನುಡಿಯಿಂದ ಮನಸ್ಸು ತನ್ನಿಂದ ಹೊರತು ಎಂಬ ಅವನ ಭಾವನೆ ವ್ಯಕ್ತವಾಗುವದು ಈ ಪ್ರಕಾರ ದೇಹದ ವಿಚಾರವಿದೆ. ಇದೇ ವಿಚಾರವು ತತ್ವಗಳಿಗೂ ಅನ್ವಯಿಸುವದು ಪಿಂಡದಲ್ಲಿಯ ತತ್ವಗಳನ್ನು ಬ್ರಹ್ಮಾಂಡದ ತತ್ವಗಳೊಡನೆ ಕೂಡಿಸಲು ಎಲ್ಲ ತತ್ವಗಳಿಂದ ಭಿನ್ನವಾದ ಸತ್ತಾನ್ವಿತ

ಆತ್ಮನೇ ಉಳಿಯುವದು ದೇಹವು ತತ್ವಗಳುಳ್ಳ ಒಂದು ಗಂಟುಮೂಟೆ ಅದನ್ನು ವಿವೇಕ ವಿಚಾರದಿಂದ ಬಿಚ್ಚಿ ನೋಡಲು ಆತ್ಮನೇ ಕಂಡು ಬರುವದು "ನಾನು" ಎಂಬದು ಅಲ್ಲಿ ಉಳಿಯುವದಿಲ್ಲ ಅಂದ ಮೇಲೆ ಜನನ ಮೃತ್ಯುಗಳು ಆ ಆತ್ಮನಿಗೆ ಕಂಡು ಬರುವದೆಲ್ಲಿ? ಪಾಪ ಪುಣ್ಯಗಳೊ, ಯಮಯಾತನೆಗಳೂ ಅವೆಲ್ಲಿ ಉಳಿಯುವವು? ದೇಹಬುದ್ಧಿಯಿಂದ ಕಟ್ಟಿದ ಮೂಟೆಯುನ್ನು ವಿವೇಕದಿಂದ ಬಿಚ್ಚಲು 'ನಾನು' ಎಂಬುದು ಆತ್ಮನಿಂದ ಭಿನ್ನವಿಲ್ಲೆಂಬದರ ಬೋಧೆಯಾಗುವದು ಇದೇ ಮೋಕ್ಷವು 'ನಾನೊಬ್ಬನೇ ನಿರ್ಗುಣ ಆತ್ಮನು' ಎಂಬ ವಿವೇಕವು ಸತತವೂ ಜಾಗೃತವಾಗಿರಬೇಕು ನಿದ್ದೆಯಿಂದ ಎಚ್ಚರಾಗಲು ಸ್ವಪ್ನಭಯ ದೂರಾಗುವದು ಅದರಂತೆ ವಿವೇಕದಿಂದ ನೋಡಲು ದೃಶ್ಯವು ನಾಶವಾಗುವದು ಸ್ವಸ್ವರೂಪದ ಅನುಷಂಗದಿಂದ ಪ್ರಾಣಿಯು ಉದ್ಧೃತವಾಗುವದು ಇದೇ ಆತ್ಮನಿವೇದನವು ಪ್ರಥಮದಲ್ಲಿ ಅಧ್ಯಾತ್ಮ ಶ್ರವಣವು, ಬಳಿಕ ಸದ್ಗುರು ಪಾದಸೇವನವು, ತಂಡನಂತರ ಕ್ರಮದಿಂದ ಆತ್ಮನಿವೇದನ ಹಾಗು ಅಖಂಡ ವಸ್ತುವಿನ ಅನುಸಂಧಾನ ಹೀಗೆ ಬ್ರಹ್ಮ ಬೋಧವಾಗುವದು ಹಾಗು ತಾನು ಬ್ರಹ್ಮರೂಪನೇ ಆಗುವನು ಈ ಬ್ರಹ್ಮಜ್ಞಾನವೇ ಶಾಂತಿಯುನ್ನು ಕೊಡುವದು ಇದರಿಂದ ಪರಬ್ರಹ್ಮನಲ್ಲಿ ಅಭಿನ್ನ ಭಕ್ತಿಯುಂಟಾಗುವದು ಮನಸ್ಸಿನಲ್ಲಿ ಸಂದೇಹಾಸ್ಪದವಾದ ಜನ್ಮ ಮೃತ್ಯುಗಳು ದೂರಾಗುವವು ದೇವ-ಭಕ್ತರಲ್ಲಿ ಇಂತು ಐಕ್ಯತೆಯುಂಟಾಗಲು ಸಂಸಾರದಲ್ಲಿ ಬೀಳುವದು ತಪ್ಪುವದು ಮತ್ತು ಸತ್ಸಂಗದಿಂದ ಪರಮಾತ್ಮನ ಪರಿಚಿತವಾಗುವದು '

ಶ್ರೀ ರಾಮ ||ನಿಃಸಂದೇಹ ನಿರೂಪಣ|| ನಿರ್ಗುಣನಾದ ಆತ್ಮನು ಆಕಾಶದೋಪಾಧಿಯಲ್ಲಿ ನಿರ್ಮಲನೂ, ನಿಶ್ಚಲನೂ, ಎಲ್ಲೆಡೆಯಲ್ಲಿ ದಟ್ಟಾಗಿ ತುಂಬಿದ ಘನವಂತನೂ ಆಗಿರುವನು. ಅವನು ವಿಭಜಿಸಲು ಬಾರದ ಅಖಂಡನಾಗಿರುವನು ಶ್ರೇಷ್ಠಗಳಿಗಿಂತಲೂ ಶ್ರೇಷ್ಠನಾಗಿರುವನು ಗಗನಕ್ಕಿಂತಲೂ ವಿಸ್ತೃತನು ಹಾಗೂ ಸೂಕ್ಷ್ಮಕ್ಕಿಂತಲೂ ಸೂಕ್ಷ್ಮನಾಗಿರುವನು ಈ ಬ್ರಹ್ಮನು ದೃಷ್ಟಿಗೆ ಅಗೋಚರನು, ಮನಕ್ಕೆ

ಅರಿಯದವನು, ಹುಟ್ಟು ಸಾವುಗಳಿಂದ ರಹಿತನು ಬರಹೋಗುವಿಕೆಯು ಈ ಪರಬ್ರಹ್ಮನಿಗಿಲ್ಲ ಇವನಿಗೆ ಗತಿ ಹೊಯ್ದಾಟಗಳಿಲ್ಲ, ಅವನಿಗೆ ಮುರಿ ಹರಿಗಳಿಲ್ಲ, ಮಾಡುವ ಹಾಗು ಕೆಡಿಸುವ ಕ್ರಿಯೆಗಳು ಅವನಲ್ಲಿಲ್ಲ ಯಾವಾ ಗಲೂ ಸನ್ಮುಖನಾಗಿಯೇ ಇರುವನು ದೋಷ–ಕಲೆಗಳು ಇವನಿಗಿಲ್ಲ, ಪೂರ್ಣನಾಗಿದ್ದು ಎಲ್ಲವುಗಳಲ್ಲಿಯೂ ವ್ಯಾಪಿಸಿ ಬಿಟ್ಟಿರುವನು ಬ್ರಹ್ಮನು ಅವಿನಾಶಿಯೂ ನಿರ್ಗುಣನೂ ಆಗಿರುವನು ಮಾಯೆಯು ನಶ್ವರ ಹಾಗೂ ಸಗುಣವಾದದ್ದು ಬ್ರಹ್ಮ ಹಾಗು ಮಾಯೆಯ ಮಿಲನವನ್ನು ಕುರಿತು ಯೋಗೇಶ್ವರರು ಬಹಳ ವಿಚಾರದಿಂದ ಅಭ್ಯಾಸ ಮಾಡುವರು ಆ ಜ್ಞಾನಿ ಗಳು ನಿತ್ಯಾನಿತ್ಯವಿವೇಕದಿಂದ ಹಂಸಕ್ಷೀರ ನ್ಯಾಯವನ್ನನುಸರಿಸಿ ಜಡ, ಮಿಶ್ರ ಮತ್ತು ಪಂಚಭೌತಿಕಗಳೆಲ್ಲವುಗಳಲ್ಲಿ ವ್ಯಾಪಕವಾಗಿದ್ದ ಆತ್ಮನನ್ನೇ ಬೇರೆಯಾಗಿ ತಿಳಿದುಕೊಳ್ಳುವರು ಕಬ್ಬಿನಲ್ಲಿಯ ರಸವನ್ನು ಹೀರಿಕೊಂಡು ಸಿಪ್ಪೆಯನ್ನು ಚೆಲ್ಲಿಕೊಡುವಂತೆ ಜಗತ್ತಿನಲ್ಲಿ ವ್ಯಾಪಕವಾಗಿದ್ದ ಜಗದೀಶ ನನ್ನು ಪಂಚಭೌತಿಕ ಹಾಗು ತ್ರಿಗುಣಗಳನ್ನು ಬಿಟ್ಟು ಕಂಡುಕೊಳ್ಳಬೇಕು ಆತ್ಮನಂತಹ ಬೇರೆ ವಸ್ತುಗಳಿಲ್ಲವೆಂಬುದಕ್ಕೆ ಇಂಥವೇ ದೃಷ್ಟಾಂತಗಳನ್ನು ಕೊಡಬೇಕಾಗುವದು, ಇಲ್ಲದಿದ್ದರೆ ಕಬ್ಬಿನ ರಸವೇನು? ಬ್ರಹ್ಮನೇನು? ಏನೊಂದು ಹೆಚ್ಚಿಗೆ ತಿಳಿಯಬೇಕೆಂದು ಈ ದೃಷ್ಟಾಂತ ತೆಗೆದುಕೊಂಡಿದೆ ಆತ್ಮಸ್ಥಿತಿಯುಳ್ಳವನಲ್ಲಿ ಮಾಯೆಯ ಯೋಗವೇಕೆ? ಎಂಬುದರ ಅನು ಮಾನ ನಿರಸನಕ್ಕಾಗಿ ವಿವರವು ಇಂತಿದೆ—

ವ್ಯಾಪಕವಾದ ಆಕಾಶದಲ್ಲಿ ವಾಯುವು ಸುಳಿಯಹತ್ತಿತು ಆ ವಾಯುವಿನಿಂದ ತೇಜವು ಪ್ರಕಾಶಿತವಾಯಿತು, ಮುಂದೆ ಆ ತೇಜದಿಂದ ನೀರು ಒಸರಿತು, ಆ ನೀರಿನಿಂದಲೇ ಭೂಮಂಡಲವು ರೂಪುಗೊಂಡಿತು, ಕೊನೆಗೆ ಆ ಭೂಮಂಡಲದಿಂದ ಅದೆಷ್ಟೋ ಜೀವರಾಶಿಗಳ ಉತ್ಪತ್ತಿಯಾಯಿತು, ಆದರೆ ಇವೆಲ್ಲವನ್ನು ಆದ್ಯಂತದಲ್ಲಿ ಬ್ರಹ್ಮನು ವ್ಯಾಪಿಸಿಯೇ ಬಿಟ್ಟಿರುವ ನೆಂಬದನ್ನು ಮರೆಯಕೂಡದು ಹುಟ್ಟಿದ್ದೆಲ್ಲವೂ ನಾಶವಾಗತಕ್ಕದ್ದೇ. ಆದರೆ ಬ್ರಹ್ಮನು ಮಾತ್ರ ಅವಿನಾಶನು, ಇದನ್ನು ಉದಾಹರಣೆಯಿಂದ ಕಂಡುಕೊಳ್ಳುವದಾದರೆ ಘಟವೊಂದರಿಂದ ತಿಳಿಯಬೇಕು ಆಕಾಶವು ಆ ಘಟಕ್ಕಿಂತ ಮೊದಲಿಗೇ ಇರುವದು ಮಣ್ಣಿನ ಸ್ವರೂಪ ಬಿಟ್ಟು ಘಟವು

ಸಿದ್ಧನಾದ ಮೇಲೆ ಅದರಲ್ಲಿಯೂ ಆಕಾಶವುಂಟಾಯಿತು. ಮುಂದೆ ಆ ಘಟವು ಒಡೆದು ಚೂರಾಯಿತಾದರೂ ಆಕಾಶವು ಉಳಿದೇ ಉಳಿಯಿತು ಈ ಉದಾಹರಣೆಯನ್ನು ಜಗತ್ತಿಗೆ ಅನ್ವಯಿಸಲು, ಚರಾಚರ ಜಗತ್ತು ಉಂಟಾಯಿತು, ಅದು ನಿರ್ಮಾಣವಾಗುವ ಮೊದಲೇ ಬ್ರಹ್ಮನು ವ್ಯಾಪಿಸಿ ಬಿಟ್ಟಿದ್ದನು. ಮುಂದೆ ಏನೊಂದು ಕಾರಣದಿಂದ ಜಗತ್ತು ಸರ್ವ ನಾಶಕ್ಕೊಳಗಾಗಲು ಅವಿನಾಶಿ ಬ್ರಹ್ಮನೊಬ್ಬನು ಮಾತ್ರ ಹಾಗೆಯೇ ಇರು ವನು ಜ್ಞಾನಿಯಾದವನು ಅವಿನಾಶಿ ಬ್ರಹ್ಮನನ್ನೇ ಸ್ವೀಕರಿಸಿಕೊಳ್ಳು ವನು ದೇಹವು ತತ್ವಗಳಿಂದ ಯುಕ್ತವಾದ ಮೂಟೆ. ತತ್ವಗಳು ತತ್ವ ಗಳಲ್ಲಿ ಕೂಡಿ ಅವೆಲ್ಲ ನಿಃಶೇಷವಾಗಲು ಅಲ್ಲಿ ದೇಹದ ಅಹಂಭಾವವು ಅಳಿದು ಹೋಗುವದು, ಆಗ ಜ್ಞಾನಿಯು ದೇಹಾತೀತನಾಗಿ ಬ್ರಹ್ಮನೊ ಡನೆ ಐಕ್ಯತೆ ಹೊಂದುವನು, 'ನನಗೆ ನಾನೇ ಲಾಭ' ಅಂದರೆ ಆತ್ಮ ಲಾಭವು ಇದೇ ಆಗಿರುವದು ವಿವೇಕದಿಂದ ಶರೀರವಿಷಯಕನೋಡಲು ಮತ್ತು ತನ್ನನ್ನು ತಾನೇ ಶೋಧಿಸಲು ತತ್ವಗಳೆಲ್ಲ ಮಾಯೆಯ ಸಂಬಂಧಿ ಕವು, ನಾನೇನೂ ಸಂಬಂಧವಿಲ್ಲ ಕೊನೆಗೆ 'ನಿರ್ಗುಣ ಬ್ರಹ್ಮನೊಬ್ಬನು ಉಳಿಯುವನು, ಈಎಲ್ಲವು ಅನುಭವಕ್ಕೆ ಬರುವವು ಈ ನಿರ್ಗುಣಬ್ರಹ್ಮನ ಐಕ್ಯತೆಯೇ' ನಿವೇದನೆಯ ಗುಟ್ಟು, ಇದನ್ನರಿತರೆ 'ನಾನು' 'ನೀನು' ಎಂಬ ದ್ವೈತ ಭ್ರಮೆ ದೂರಾಗುವದು 'ಅಹಂ'ಭಾವವು ದೂರಾದ ನಂತರ ನಿರ್ಗುಣ ಆತ್ಮನು ತಾನಾಗುವನು, ತತ್ವಗಳ ನಿರಸನವಾದ ನಂತರ ಉಳಿಯುವ ನಿರ್ಗುಣ ಆತ್ಮನೇ ತಾನಾಗುವನು ತತ್ವ ನಿರಸನವಾದ ಮೇಲೆ 'ಅಹಂಭಾವ'ವೇಕೆ? ತತ್ವಗಳಲ್ಲಿಂದ ಅಹಂಭಾವವು ದೂರಾದರೆ ಸಹಜವಾಗಿ ನಿರ್ಗುಣವೇ ಉಳಿಯುವದು, ಮತ್ತು 'ಅವನೇ ನಾನು' [ಸೋಽಹಂ] ಈ ವಿಚಾರದಿಂದ ಆತ್ಮ ನಿವೇದನೆಯಾಯಿತು ದೇವ-ಭಕ್ತ ರಲ್ಲಿ ಐಕ್ಯತೆಯಾಯಿತು ದ್ವೈತವನ್ನು ಬಿಟ್ಟ ಭಕ್ತನಾದನು ನಿರ್ಗುಣ ಬ್ರಹ್ಮನಿಗೆ ಹುಟ್ಟು-ಸಾವುಗಳಿಲ್ಲ, ಪಾಪ-ಪುಣ್ಯಗಳ ಲೇಪವಿಲ್ಲ, ಇಂಥ ನಿರ್ಗುಣ ಬ್ರಹ್ಮನನ್ನು ಅನನ್ಯವಾಗಿ ಸೇವಿಸುವವನೇ ಅಥವಾ ಚಿಂತಿಸು ವವನೇ ಸಾಯುಜ್ಯ ಮುಕ್ತಿ ಪಡೆಯುವನು, ತತ್ವಗಳಿಂದ ಆವೃತವಾ ಗುವ ಪ್ರಾಣಿಯು ಸಂಶಯದಲ್ಲಿ ಮುಳುಗಿ ತನ್ನನ್ನು ತಾನೇ ಮರೆತು 'ಶೋಽಹಂ' ಎನ್ನುವನು ತತ್ವದಲ್ಲಿ ಕೂಡಿಕೊಳ್ಳಲು ಆತನು 'ನಾನು

ಯಾರು?' ಎಂದೆನ್ನುವನು ವಿವೇಕ ಉಂಟಾಗಲು ಅವನು 'ನಾನೇ ಆ ನಿರ್ಗುಣ ಬ್ರಹ್ಮನು' ನಿರ್ಗುಣ ಬ್ರಹ್ಮನೊಡನೆ ಅನನ್ಯ ಸಮರಸವಾಗಲು 'ಅಹಂಸೋಽಹಂ' ಅವನು, ನಾನು ಇವೆರಡೂ ಲಯವಾಗುವವು ಆ ಮೇಲೆ ನಿರ್ಗುಣ ಬ್ರಹ್ಮನೇ ಉಳಿಯುವನು, ಮತ್ತು ದೇಹಿಯು ಅವನೊಡನೆ ಅಭಿನ್ನನಾಗುವನು ಆಗ ಆತನು ದೇಹಾತೀತನೆಂದು ಜನರಿಗೆ ಪ್ರತ್ಯಯವಾಗುವದು. ಕೊನೆಗೆ ಗುರುಗಳು– 'ನಿಮ್ಮ ಸಂದೇಹವೃತ್ತಿಯು ನಾಶವಾಗಲಿಲ್ಲೆಂಬುದನ್ನು ತಿಳಿದು ಪುನ ಪುನಃ ಹೇಳುವ ಪ್ರಸಂಗವು ನಮಗೆ ಒದಗಿತು ಕಾರಣ ಶ್ರೋತೃಗಳು ಕ್ಷಮಿಸಬೇಕು" ಎಂದರು

ಶ್ರೀ ರಾಮ ॥ ಳಜಾಣಪಣ ನಿರೂಪಣ ॥ ಕೃತಯುಗ [ಸತ್ಯಯುಗ] ದ ಪ್ರಮಾಣವು ೧೭ ಲಕ್ಷ ೨೮ ಸಾವಿರ ವರುಷಗಳು, ತ್ರೇತಾಯುಗದ್ದು ೧೨ ಲಕ್ಷ ೯೬ ಸಾವಿರ ವರುಷ, ದ್ವಾಪರ ಪ್ರಮಾಣವು ೮ ಲಕ್ಷ ೬೪ ಸಾವಿರ ಮತ್ತು ಕಲಿಯುಗದ ಆಯುಷ್ಯ ಪ್ರಮಾಣವು ೪ಲಕ್ಷ ೩೨ಸಾವಿರ ವರುಷ ಹೀಗೆನಾಲ್ಕೂ ಯುಗಗಳ ಆಯುಷ್ಯ ಪ್ರಮಾಣಗಳು ಇರುವವು ಈ ಯುಗಗಳೆಲ್ಲ ಪ್ರತಿಯೊಂದು ಒಂದೊಂದು ಸಾವಿರ ಸಾರೆ ಸುತ್ತುಹಾಕಿದರೆ ಒಟ್ಟಾಗುವ ಅವಧಿಯು ಬ್ರಹ್ಮದೇವನ ಒಂದು ದಿವಸವೆನ್ನಿಸುವದು ಆ ಬ್ರಹ್ಮದೇವನ ಒಂದುಸಾವಿರವರುಷಗಳು ವಿಷ್ಣುವಿನಒಂದುಗಳಿಗೆ(೨೪ಮಿನಿಟು)ಯ ಕಾಲವಾಗುವದು. ಈ ವಿಷ್ಣುವಿನ ಒಂದು ಸಾವಿರ ವರುಷಗಳು ಮಹೇಶ್ವರನ ಒಂದು ಪಲವಾಗುವದು ಮಹೇಶ್ವರನ ಒಂದು ಸಾವಿರ ವರುಷಗಳು ಆದಿಮಾಯೆಯ ಅರ್ಧಪಲವಾಗುವದು ಈ ಪ್ರಕಾರ ಕಾಲಗಣನೆಯು ಶಾಸ್ತ್ರಗಳಲ್ಲಿ ಹೇಳಿದೆ ಇಷ್ಟೇ ಅಲ್ಲ, ಅನಂತ ಆದಿಶಕ್ತಿಗಳೂ ಅನಂತ ಬ್ರಹ್ಮಾಂಡ ರಚನೆಗಳೂ ಉಂಟಾಗುವವು, ಲಯವಾಗುವವು ಆದರೆ ಈ ಎಲ್ಲರ ಕಾಲಗಳು ಅನಂತವಾಗಿ ಹಾಗು ಅವ್ಯಾಹತವಾಗಿ ನಡೆಯುತ್ತಿದ್ದರೂ ಎಲ್ಲ ಕಾಲಗಳಲ್ಲಿ ಪರಬ್ರಹ್ಮನ ಸ್ಥಿತಿಯು ಅಖಂಡವಾಗಿಯೇ ಇರುವದು ಆ ಪರಬ್ರಹ್ಮನ ಸ್ಥಿತಿಯನ್ನು ಶೋಧಿಸಲು ಪ್ರಯತ್ನಿಸಿ ಕೊನೆಗೆ 'ನೇತಿ' 'ನೇತಿ' ಅಂದರೆ ಪರಮಾತ್ಮನ ಸ್ವರೂಪ ತಿಳಿಯಲಾರದು ಎಂದು ಹತಾಶವಾಗಿ ಬಿಟ್ಟವು ಸದ್ಯ (ಸಮರ್ಥರಿಂದ ಈ ದಾಸಬೋಧೆಯ ಕಾಲ)ದಲ್ಲಿ ಕಲಿಯುಗದ ೪೭೬೦ ವರುಷಗಳು ಉರುಳಿ ಹೋಗಿವೆ ಇನ್ನೂ ೪ ಲಕ್ಷ ೨೭ ಸಾವಿರೆ ೨ ನೂರಾ ೪೦ ವರುಷ ಕಲಿಯುಗದ ಆಯುಷ್ಯ ಉಳಿದಿದೆ

ಮುಂದೆ ವರ್ಣಸಂಕರಗಳುಂಟಾಗುವ ಲಕ್ಷಣಗಳು ತೋರಹತ್ತಿರುವವು. ಈ ಚರಾಚರ ಸೃಷ್ಟಿಯಲ್ಲಿ ನಡೆಯುವ ಸಂಗತಿಗಳ ವಿಚಾರವು ಏನೊಂದನ್ನು ಅರಿಯದಂತಾಗಿದೆ ಈಗ ಒಬ್ಬನಿಂದ ಇನ್ನೊಬ್ಬನು ಶ್ರೇಷ್ಠನೆಂಬ ಭಾವನೆ ಯುಳ್ಳವರಾಗುವರು ಒಬ್ಬ ವೈಷ್ಣವನು ವಿಷ್ಣುವಿನ ಮಹತಿಯನ್ನು ಹೇಳಲು ಸ್ಮಾರ್ತನು ರುದ್ರನು ಹೆಚ್ಚಿನವನು ಎಂದೆನ್ನುವನು ಇನ್ನೊಬ್ಬನು ಎಲ್ಲರಲ್ಲಿ ಶಕ್ತಿದೇವತೆಯೇ ಮಿಗಿಲು ಎನ್ನುವನು. ಹೀಗೆ ಪ್ರತಿಯೊಬ್ಬ ಭಕ್ತರು ತಮತಮಗೆ ಸರಿಕಂಡಂತೆ ದೇವ ದೇವತೆಗಳಲ್ಲಿ ತಾರತಮ್ಯವನ್ನು ಎಣಿಸುವರು ಆದರೆ— ''ಯದ್ದೃಷ್ಟಂತನ್ನಷ್ಟಂ" ಎಂದರೆ ಕಾಣುವದೆಲ್ಲವೂ ನಾಶವಾಗತಕ್ಕದ್ದೇ ಎಂದು ಶ್ರುತಿ ವಾಕ್ಯವುಂಟು ಈ ನಿಯಮದಂತೆ ಭಕ್ತರ ತಾರತಮ್ಯ ಗೊಂದಲದಲ್ಲಿ ಸಿಕ್ಕ ದೇವ ದೇವತೆಗಳೆಲ್ಲ ದೇಹಿಗಳಾದ ನಮ್ಮಂತೆ ಕಲ್ಪಾಂತ್ಯದಲ್ಲಿ ನಾಶವಾಗತಕ್ಕವರೇ

ಉಪಾಸಕನು ತನ್ನ ಉಪಾಸ್ಯ ದೇವತೆಯ ಬಗ್ಗೆ ಅಭಿಮಾನವನ್ನು ಹಿಡಿದು ಈ ತಾರತಮ್ಯ ಗೊಂದಲಕ್ಕೆ ಬೀಳುವನು ಆದರೆ ಇದರ ಕೊನೆಯ ನಿಶ್ಚಯವು ಜ್ಞಾನಿಯಿಂದಲ್ಲದೆ ಅನ್ಯರಿಂದಾಗದು ಆ ಜ್ಞಾನಿಯಾದ ಸಾಧುವು ಆತ್ಮನು ಎಲ್ಲೆಡೆಯಲ್ಲಿ ಎಲ್ಲರಲ್ಲಿ ವ್ಯಾಪಿಸಿರುವನು ಆತನಿಲ್ಲದ ಚರಾಚರಗಳಿಲ್ಲ ಸಾವಿರಾರು ಸೈನಿಕರುಳ್ಳ ಒಂದು ಬರೆದ ಚಿತ್ರದಲ್ಲಿ ತೋರುವ ವ್ಯಕ್ತಿಗಳಲ್ಲಿ ಶ್ರೇಷ್ಠನಾರು? ಕನಿಷ್ಠನಾರು? ಇದನ್ನು ಹೇಳಲು ಬರಲಾರದು ಸ್ವಪ್ನದಲ್ಲಿ ಕಂಡ ವೈಭವವು ಜಾಗೃತನಾದ ಕೂಡಲೇ ಉಳಿಯುವದಿಲ್ಲ, ಆಗಿನ ತಾರತಮ್ಯವೂ ಉಳಿಯುವದಿಲ್ಲ ಮಾಯಿಕ ವಿಚಾರಗಳುಳ್ಳವರು ಹೀಗೆ ದೇವ-ದೇವತೆಗಳಲ್ಲಿ ಉಚ್ಚ ನೀಚತ್ವವನ್ನೆಣಿಸುವರು ಎಂಬದಾಗಿ ಆ ಜ್ಞಾನಿಯು ನಿಶ್ಚಯಿತ ಮತ ನೀಡುವನು ಎಷ್ಟೋ ಜನರು ಜನ್ಮ ತಾಳಿದರು ತಾವು ದೊಡ್ಡವರೆಂಬ ಅಭಿಮಾನದಿಂದ ಮೆರೆದರು ಆ ಸಡಗರದಲ್ಲಿಯೇ ಅವರು ಸತ್ತುಹೋದರು ಅವರ ಜೊತೆಗೆ ದೊಡ್ಡಿಸ್ತಿಕೆಯೂ ಹೋಯಿತು ಎಂದ ಮೇಲೆ ಇವೆಲ್ಲವು ಅಶಾಶ್ವತವಾದವುಗಳು ನಿಜವಾಗಿ ಆತ್ಮಜ್ಞಾನ ಪಡೆದವನೇ ದೊಡ್ಡವನು, ಅವನೇ ಶ್ರೇಷ್ಠನು, ಅವನೇ ಹೆಚ್ಚಿನವನು ಹೀಗೆ ವೇದ-ಶಾಸ್ತ್ರ-ಪುರಾಣಗಳು ಹೇಳುವವು, ಜ್ಞಾನಿಗಳೂ ಹೀಗೆಯೇ ತಿಳಿಯುವರು ತಾತ್ಪರ್ಯ

ವೆಂದರೆ— ಎಲ್ಲರಲ್ಲಿ ಪರಮೇಶ್ವರನೊಬ್ಬನೇ ದೊಡ್ಡವನು, ಹರಿ-ಹರ ಮುಂತಾದವರೆಲ್ಲ ಆತನಲ್ಲಿಯೇ ಆಗುವರು, ಹೋಗುವರು ಆ ಪರಮಾತ್ಮನು ನಿರ್ಗುಣನೂ ನಿರಾಕಾರನೂ ಆಗಿರುವದರಿಂದ ಅವನಿಗೆ ಉತ್ಪತ್ತಿ ಲಯಗಳಿಲ್ಲ, ಅವನ ಸ್ಥಾನಮಾನಗಳೂ ನಾಮ ರೂಪಗಳೂ ಇವೆಲ್ಲ ಸಂದೇಹಯುಕ್ತವು, ಆದರೂ ಆ ಪರಮಾತ್ಮನ ಬಗೆಗೆ ಮಾಡುವ ವಿಚಾರಗಳು ಬ್ರಹ್ಮ ಪ್ರಳಯದ ಪರಿಯಂತ ಮಾತ್ರ ಆ ಪ್ರಳಯದಲ್ಲಿ ಅವೂ ಕೂಡ ಉಳಿಯದೆ ಅವನೊಬ್ಬನೇ ಉಳಿಯುವನು. ಇಂತು ಪರಬ್ರಹ್ಮನು ಪ್ರಳಯದಿಂದ ಬೇರೆಯಿರುವನು, ನಾಮರೂಪಗಳು ಅದರಿಂದ ಬೇರೆಯಿರುವವು, ಅವನಿಗೆ ಕಾಲಗಣನೆಯ ನಿರ್ಬಂಧವೂ ಇಲ್ಲ

ಈ ಬ್ರಹ್ಮ ನಿರೂಪಣವನ್ನು ಅಂದರೆ ಸಂಪೂರ್ಣಬ್ರಹ್ಮನನ್ನು ಅರಿತವನೇ ಬ್ರಾಹ್ಮಣನು, ಅವನೇ ಬ್ರಹ್ಮ ಜ್ಞಾನಿಯು' ಈ ಪ್ರಕಾರ ಗುರುಗಳು ಹೇಳಿದರು

ಶ್ರೀರಾಮ ॥ ೫ ಬ್ರಹ್ಮ ನಿರೂಪಣೆ ॥ ಗುರುಗಳು—

" ಶ್ರೋತೃಗಳು ಕೇಳದಿದ್ದರೂ ಮಾಯೆ ಹಾಗು ಬ್ರಹ್ಮ ಇವರ ವಿಷಯವನ್ನು ಕೇವಲ ಅವರಿಗಾಗಿ ಹೇಳುವೆನು ಕೇಳತಕ್ಕದ್ದು "

" ಬ್ರಹ್ಮನೆಂಥವನು ? ಮಾಯೆ ಎಂಥದು? ಇವುಗಳನ್ನು ಹೇಳುವ ಮೊದಲು ಬ್ರಹ್ಮನ ಲಕ್ಷಣಗಳ ವಿಪರೀತವಾಗಿ ಮಾಯೆಯ ಲಕ್ಷಣಗಳಿರುವವೆಂಬದನ್ನು ಹೇಳಬೇಕಾಗಿದೆ

| | | | |
|---|---|---|---|
| ಬ್ರಹ್ಮನು | ನಿರ್ಗುಣನಾದರೆ | ಮಾಯೆಯು | ಸಗುಣ |
| ,, | ನಿರಾಕಾರ | ,, | ಸಾಕಾರ |
| ,, | ಅಂತಪಾರ ರಹಿತನು | ,, | ಪಾರಾವಾರವುಳ್ಳದ್ದು |
| ,, | ಉಪಾಧಿರಹಿತನು | ,, | ಸೋಪಾಧಿಯು |
| ,, | ಅದೃಷ್ಟನು | ,, | ದೃಶ್ಯವು |
| ,, | ಅಭಾಸನು | ,, | ಆಭಾಸವು |
| ,, | ಅವಿನಾಶನು | ,, | ನಶ್ವರವು |
| ,, | ಕೃತಿ ರಹಿತು | ,, | ಕೃತಿಯುಕ್ತ |

| | | | |
|---|---|---|---|
| ,, | ಅಜ್ಞಾನಿಗಳಿಂದಧಿಕೃತನು | ,, | ಅಜ್ಞಾನಿಗಳಿಂದ ಸ್ವೀಕೃತವು |
| ,, | ಜನ್ಮವಿಲ್ಲದವನು | ,, | ಜನ್ಮವುಳ್ಳದ್ದು |
| ,, | ವ್ಯಕ್ತಿ ರಹಿತ | ,, | ವ್ಯಕ್ತಿಯುಕ್ತ, |
| ,, | ಹಿಡಿದವರಿಗೆ ಸಿಗನು | ,, | ಸಿಗುವದು |
| ,, | ಒಡೆಯದವನು | ,, | ಒಡೆಯುವಂತಹದು |
| ,, | ಹರಕು ಮುರುಕುಗಳಿಲ್ಲದವ | ,, | ಹರಕು ಮುರುಕುಗಳುಳ್ಳದ್ದು |
| ,, | ನಿರ್ವಿಕಾರಿ | ,, | ವಿಕಾರಿ |
| ,, | ರೂಪ ರಹಿತ | ,, | ರೂಪಧೃತ |
| ,, | ಶಾಶ್ವತನು | ,, | ಪಂಚಭೂತಗಳಿಂದ ಯುಕ್ತ |
| ,, | ದೊಡ್ಡವನು | ,, | ಸಣ್ಣದು |
| ,, | ಸತ್ವಯುತ | ,, | ಸತ್ವರಹಿತ |
| ,, | ದುಃಖ ರಹಿತ | ,, | ದುಃಖಯುಕ್ತ |

ಇಷ್ಟೆಲ್ಲ ಬ್ರಹ್ಮ ಮಾಯೆಯರ ಸ್ಥಿತಿಯಲ್ಲಿ ವಿಪರ್ಯಾಸ ವಿರುವದಲ್ಲದೆ ಬ್ರಹ್ಮ ಸ್ಥಿತಿಯನ್ನು ಮಾಯೆಯು ವಿಸ್ತೃತವಾಗಿ ಮುಚ್ಚು ಹಾಕಿರುವದು ಆದರೂ ಜ್ಞಾನಿಗಳು ಬ್ರಹ್ಮನನ್ನು ಆ ಆವರಣದಿಂದ ಹೊರತು ಪಡಿಸಿ ಬ್ರಹ್ಮನನ್ನು ತಿಳಿಯುವರು ಜಲಾಶಯದಲ್ಲಿಯ ಅಂತರ ಗಂಗೆ ಮೊದಲಾದ ಹೊಲಸನ್ನು ಬದಿಗೆ ಮಾಡಿ ಸ್ವಚ್ಛ ನೀರನ್ನು ತೆಗೆದುಕೊಳ್ಳುವಂತೆ, ನೀರನ್ನು ಬಿಟ್ಟು ಹಾಲು ಸ್ವೀಕರಿಸುವಂತೆ ಜ್ಞಾನಿಗಳು ಮಾಯೆಯನ್ನು ಹೊರತು ಪಡಿಸಿ ಬ್ರಹ್ಮನನ್ನು [ ಬ್ರಹ್ಮಾನಂದವನ್ನು] ಪಡೆಯುವರು

ಇನ್ನೂ ಬ್ರಹ್ಮ ಮಾಯೆಯರ ಸ್ಥಿತಿಗತಿಯನ್ನು ಹೇಳುವದಾದರೆ—

ಬ್ರಹ್ಮನು ಆಕಾಶದಂತೆ ನಿರ್ಮಲನು ಮಾಯೆಯು ಪೃಥ್ವಿಯಂತೆ ಅಸ್ವಚ್ಛತೆಯುಳ್ಳದ್ದು- ಬ್ರಹ್ಮನು ಸೂಕ್ಷ್ಮನು, ಮಾಯೆಯು ಸ್ಥೂಲವ

ದದ್ದು, ಬ್ರಹ್ಮನು ಇಂದ್ರಿಯಗಳಿಗೆ ಅಗೋಚರನಾದರೆ ಮಾಯೆ ಗೋಚರವಾಗುವಂತಹದು.ಬ್ರಹ್ಮನಲ್ಲಿ ಸಮತೆಯೂ ಮಾಯೆಯಲ್ಲಿ ವಿಷಮತೆಯೂ, ಬ್ರಹ್ಮನು ಅಲಕ್ಷ್ಯನಾದರೆ ಮಾಯೆಯು ಲಕ್ಷ್ಯವು ಬ್ರಹ್ಮನು ಸಾಕ್ಷಿ ರಹಿತನು ಮಾಯೆಯು ಸಾಕ್ಷೀ ಭೂತವು ಬ್ರಹ್ಮನು ದ್ವಂದ್ವಾತೀತನು, ಮಾಯೆಯು ದ್ವಂದ್ವಯುಕ್ತವು, ಬ್ರಹ್ಮನು ಸಿದ್ಧಾಂತ ಮಂಡಿತನಾದರೆ ಮಾಯೆಯು ಪೂರ್ವ ಪಕ್ಷ ಮಂಡಿತವು ಬ್ರಹ್ಮನು ಸಂತನು, ಮಾಯೆಯು ಅನಂತವು, ಬ್ರಹ್ಮನಲ್ಲಿ ಕ್ರಿಯೆಯ ಉದ್ದೇಶವಿಲ್ಲ ಮಾಯೆಯು ಉದ್ದೇಶವುಳ್ಳದ್ದು ಬ್ರಹ್ಮನು ಅಖಂಡ ಘನವಂತನಾದರೆ ಮಾಯಯು ಪಂಚ ಭೂತಗಳ ತುಣುಕುಗಳಿಂದಾದದ್ದು, ಬ್ರಹ್ಮನು ನಿರಂತರ ಪರಿಪೂರ್ಣನು ಮಾಯೆಯು ಹಳೆಯ ಜರ್ಜರಿತವು, ಮಾಯೆ ಕ್ರಿಯೆಯುಳ್ಳದ್ದು ಬ್ರಹ್ಮನು ಕ್ರಿಯಾ ರಹಿತನು, ಮಾಯೆಯು ಪತಿತವು ಬ್ರಹ್ಮನು ನಿಷ್ಪತಿತನು, ಮಾಯೆ ವಿಕಾರಿ ಬ್ರಹ್ಮ ನಿರ್ವಿಕಾರಿ

ಬ್ರಹ್ಮನಿಗೆ ಕಲ್ಪಾಂತವಿಲ್ಲ, ಮಾಯೆಗೆ ಕಲ್ಪಾಂತವುಂಟು ಬ್ರಹ್ಮನು ಕೋಮಲನು—ಮಾಯೆ—ಕಠಿಣವಾದುದು, ಬ್ರಹ್ಮನು ವಿಸ್ತೃತನು ಮಾಯೆಯು ಅಲ್ಪವು, ಬ್ರಹ್ಮನು ಸದಾವ ಕಾಲದಲ್ಲಿರುವನು ಮಾಯಯು ಸರ್ವ ಕಾಲದಲ್ಲಿ ನಾಶವಾಗುವದು ಇಂತು ವಸ್ತುವಲ್ಲದ ಬ್ರಹ್ಮನ ಸ್ಥಿತಿಯನ್ನು ಹಾಗು ಮಾಯೆಯ ಸ್ಥಿತಿಯನ್ನು ಇದ್ದಂತೆ ವರ್ಣಿಸಿತು ಆದರೆ ವಸ್ತುವೆನಿಸಿದ್ದ ಮಾಯೆಯನ್ನು ಕಾಲವು ಮುನುಕುವದು ಮಾಯೆಯ ಹಲವು ರೂಪ ವರ್ಣಗಳು ಎಲ್ಲವೂ ಮಾಯೆಯ ಪ್ರಸಂಗದಿಂದ ಕಂಡು ಬರುವವು ಇಂಥ ಮಾಯೆಯ ಸ್ಥಿತಿಗಳು ಎಂದಾದರೂ ಭಂಗವಾಗುವವು. ಆದರೆ ಬ್ರಹ್ಮನು ಮಾತ್ರ ಇದ್ದಂತೆ ಅಭಂಗನಾಗಿಯೇ ಇರುವನು

ಇನ್ನು ಈ ವಿಚಾರವು ಇರಲಿ ಚರಾಚರಗಳೆಲ್ಲವೂ ಆಗು ಹೋಗುಗಳನ್ನು ಹೊಂದುವವು ಎಲ್ಲವೂ ಮಾಯೆಯ ಸಮ್ಮಂಧಿಕಗಳು ಬ್ರಹ್ಮನು ಎಲ್ಲ ಚರಾಚರಗಳ ಒಳಗೂ ಹೊರಗೂ ವ್ಯಾಪಿಸಿರುವನು ಆ ಪರಮಾತ್ಮನು ಎಲ್ಲ ಉಪಾಧಿಗಳಿಂದ ಬೇರೆಯಿರುವನು ಆಕಾಶವು ನೀರಿನಲ್ಲಿದ್ದರೂ ಅದಕ್ಕೆ ನೀರಿನ ಸ್ಪರ್ಶ ವಿರುವದಿಲ್ಲ ಅಂತೆಯೇ ಪರಮಾತ್ಮನು

ಇಂತು ಮಾಯಾ ಬ್ರಹ್ಮರ ವಿವರಣೆಯುಲ್ಲಿಂದ ಜನನ ಮರಣಗಳಿಂದ ಮುಕ್ತನಾಗುವ ಹಂಚಿಕೆ ದೊರೆಯುವದು ಮತ್ತು ಸಂತರಿಗೆ ಶರಣು ಹೋಗುವದರಿಂದ ಮೋಕ್ಷಲಭಿಸುವದು ಈ ಸಂತರ ಮಹಿಮೆಯನ್ನು ವರ್ಣಿಸುವದಕ್ಕೆ ಸೀಮೆಯಿಲ್ಲ ಸಂತ ಸಂಗದಿಂದ ಜಗದಾತ್ಮನು ಹೃದಯ ಸ್ಥಿತನಾಗುವನು.

ಶ್ರೀ ರಾಮ ॥ ೬ ಸೃಷ್ಟಿ ಕಥನ ॥ ಶಿಷ್ಯನು ಗುರುಗಳನ್ನು ಕುರಿತು-

ಸೃಷ್ಟಿಯ ಮೊದಲು ಬ್ರಹ್ಮನಿದ್ದನು ಅಲ್ಲಿ ಸೃಷ್ಟಿಯು ಮೂಲತ ಇರಲಿಲ್ಲ ಈಗ ಸೃಷ್ಟಿಯು ಗೋಚರವಾಗುತ್ತಿದೆ ಇದು ಸತ್ಯವೋ ಅಸತ್ಯವೋ ಎಂಬುದನ್ನು ಜ್ಞಾನಿಗಳಾದ ತಾವು ವಿವರಿಸಿ ನನಗೆ ಸಮಾಧಾನವನ್ನು ಮಾಡಬೇಕು ಎಂದು ಬೇಡಿಕೊಂಡರು. ಅದಕ್ಕೆ ಗುರುಗಳು—

" ಜೀವ ಭೂತಃ ಸನಾತನ " ಎಂದು ಭಗವದ್ವಾಕ್ಯವಿದೆ ಆ ವಾಕ್ಯದ ಸತ್ಯತೆಯು ಸೃಷ್ಟಿಗೆ ಅನ್ವಯಿಸುವವು ' ಯದ್ದೃಷ್ಟಂತನ್ನಷ್ಟಂ ' ಎಂಬ ವಾಕ್ಯವು ಸೃಷ್ಟಿಯ ಮಿಥ್ಯತ್ವವನ್ನು ತಿಳಿಸುವದು ಈ ಎರಡೂ ವಾಕ್ಯಗಳು ಪ್ರಮಾಣ ಭೂತವಾಗಿರುವದರಿಂದ ಸೃಷ್ಟಿಯು ಸತ್ಯವೋ ಮಿಥ್ಯವೋ ಎಂಬುವದನ್ನು ನಿರ್ಣಯಿಸುವವರಾರು ? ಸತ್ಯವೆಂದರೆ ಅದು ನಾಶವಾಗುವಂಥದು ಅಸತ್ಯವೆಂದರೆ ಕಣ್ಣಿಗೆ ತೋರುವದು, ಒಟ್ಟಿನ ಮೇಲೆ ಈ ಸೃಷ್ಟಿಯನ್ನು ಸತ್ಯವೆಂದೂ ಅನ್ನಲಿಕ್ಕೆ ಬರಲಾಗದು ಅಸತ್ಯವೆಂದೂ ಅನ್ನಲಿಕ್ಕೆ ಬರಲಾಗದು ಅಂದರೆ ಈ ಸೃಷ್ಟಿಯ ವಿಚಾರವೂ ಬ್ರಹ್ಮನಂತೆ ಅನಿರ್ವಚನೀಯವಾಯಿತು ಇನ್ನು ಇದಕ್ಕೆ ಏನೂ ಉತ್ತರವಿಲ್ಲೆಂತಲ್ಲ ಈ ಸೃಷ್ಟಿಯಲ್ಲಿ ಜ್ಞಾನಿಗಳೂ ಇರುವರು ಅಜ್ಞಾನಿಗಳೂ ಇರುವರು ಅಜ್ಞಾನಿಗಳು ಈ ಸೃಷ್ಟಿಯು ಸತ್ಯ ಹಾಗು ಶಾಶ್ವತವೆಂದು ತಿಳಿದು ಎಲ್ಲ ವ್ಯವಹಾರಸಾಗಿಸುವರು ಅವರಅಭಿಪ್ರಾಯದಂತೆ ದೇವ,ಧರ್ಮ,ತೀರ್ಥ, ವ್ರತ ಮುಂತಾದವೆಲ್ಲವು ಸತ್ಯ ಇವರ ಅಭಿಪ್ರಾಯಕ್ಕೆ ವಿಪರೀತವಾಗಿ ಜ್ಞಾನಿಗಳು ಸೃಷ್ಟಿಯಲ್ಲಿ ಮಿಥ್ಯತ್ವವನ್ನು ತಿಳಿದು ಶಾಶ್ವತ ಬ್ರಹ್ಮನನ್ನು ಅಂಗೀಕರಿಸುವರು ಜ್ಞಾನಿಯ ವಿಗ್ರಹ ಪೂಜೆಯ ಅಜ್ಞಾನಿಗಳಿಗೆ ಒಪ್ಪಿಗೆಯಾಗಿದ್ದರೂ ಬ್ರಹ್ಮ ಪ್ರಳಯದ ಪ್ರಸಂಗದಲ್ಲಿ ಅಂದರೆ ಸರ್ವ ವಿಶ್ವವು

ಲಯವಾಗುವ ಕಾಲದಲ್ಲಿ ಆ ವಿಗ್ರಹ ಪೂಜೆಯು ಉಳಿಯಲಾರದು ಆ ದೇವರುಗಳೇ ಇರುವದಿಲ್ಲೆಂದಮೇಲೆ ಆ ದೇವರ ಪ್ರತಿಮೆಗಳು ಎಲ್ಲಿ ಉಳಿಯುವವು? ಹಿತವನ್ನು ಬಯಸುವವನು ಜ್ಞಾನಿಗಳ ಹಾಗು ಸಂತ ಸಜ್ಜನರ ವಚನಗಳಿಗನುಸರಿಸಿ ವರ್ತಿಸತಕ್ಕದ್ದು ಇದೇ ಉತ್ತಮ, ಎಂದು ಗುರುಗಳು ನುಡಿಯಲು ಶಿಷ್ಯರು—' ಸೃಷ್ಟಿಯು ಮಿಥ್ಯವೆಂದು ಹೇಳಿದ ಹೇಳಿದ ಬಳಿಕ ತೀರ್ಥಾಟನ, ಗುರುಸೇವೆ ಮುಂತಾದವೂ ಮಿಥ್ಯತ್ವವನ್ನು ಹೊಂದುವಂತಾಯಿತಲ್ಲವೇ ! ಬಳಿಕ ಗುರು ವಚನಗಳ ಸತ್ಯತ್ವವನ್ನು ಅದೇಕೇ ನಂಬಬೇಕು? ಎಂಬ ಸಂಶಯವನ್ನು ಎದುರಿಡಲು ಅದಕ್ಕೆ ಗುರುಗಳು—

''ನಿಮ್ಮ ಕಲ್ಪನೆಯಿಂದ 'ಗುರು' ಎಂದರೆ ಕೇವಲ ಎಲುವು ಮಾಂಸಗಳ ಮುದ್ದೆಯಾದಂತಾಯಿತು ಆದರೆ ಗುರುವಿನ ನಿಜ ಸ್ವರೂಪವು ಆತನು ದ್ವಂದ್ವಗಳಿಗೆ ಅತೀತನು- ತತ್ವಮಸ್ಯಾದಿ ಲಕ್ಷ್ಯನು, ಒಬ್ಬನು ನಿತ್ಯನು, ಅಚಲನು ಈ ಪ್ರಕಾರವಿರುವದು ಇಂಥ ಗುರುವಿನ ಶುದ್ಧ ಸ್ವರೂಪವನ್ನು ಸ್ಮರಿಸಿ ಧ್ಯಾನ ಮಾಡಿದ್ದಾದರೆ ಸೃಷ್ಟಿಯು ಮಿಥ್ಯವೆಂಬ ನಿಶ್ಚಿತ ಜ್ಞಾನವು ಉಂಟಾಗುವದು.

ಗುರುಗಳು ಈ ಬಗೆಯಾಗಿ ಸೃಷ್ಟಿಯ ಮಿಥ್ಯತ್ವವನ್ನು ಉತ್ತರ ರೂಪದಿಂದ ಬೋಧಿಸಲು ಶಿಷ್ಯನು ಮತ್ತೆ—'ನೀವು ' ಜೀವ ಭೂತಃ ಸನಾತನ ' ಈ ಭಗವಂತನ ವಚನವನ್ನು ಆಧರಿಸಿ ಸೃಷ್ಟಿಯು ಇರುವದು ಎಂದು ಹೇಳಿದಿರಿ ಇದರಿಂದ ಆ ಭಗವಂತನ ವಚನಕ್ಕೆ ಬಾಧೆ ಬರುವದಿಲ್ಲವೇ ' ಎಂದು ಕೇಳಿದರು ಅದಕ್ಕೆ ಗುರುಗಳು ಭಗವದ್ಗೀತೆಯಲ್ಲಿ ಭಗವಂತನು ಈ ವಾಕ್ಯವನ್ನು ಅದಾವ ಅರ್ಥದಿಂದ ಹೇಳಿದನೆಂಬದು ನಿನಗೆ ತಿಳಿದಿರುವದಿಲ್ಲ ಆ ದೇವನು— 'ಅಶ್ವತ್ಥ ಸರ್ವ ವೃಕ್ಷಾಣಾಂ ' ಎಂದರೆ ಎಲ್ಲ ವೃಕ್ಷಗಳಲ್ಲಿ ನಾನು ಅಶ್ವತ್ಥನಾಗಿರುವನು ಎಂದು ಹೇಳಿರುವನು.ಮತ್ತು ಆ ದೇವನು ತನ್ನ ರೂಪದ ಬಗೆಗೆ 'ನೈನಂಛಿಂದಂತಿಶಸ್ತ್ರಾಣಿ' ಎಂದೂ ಹೇಳಿರುವನು ಅಂದಮೇಲೆ ನೀನು ಕೊಡಲಿಯಿಂದ ಅಶ್ವತ್ಥ ವೃಕ್ಷವನ್ನು ಕಡಿದರೆ ಅದು ತುಂಡಾಗದೆ ಉಳಿಯುವದೇ ? ಅಂದ ಮೇಲೆ ವಿಪರ್ಯಾಸವಾಗಿ ತೋರುವ ಈ ಎರಡೂ ವಚನಗಳನ್ನು ನೀನು ಹೇಗೆ ಮೇಳುಗೂಡಿ

ಸುವಿ? ಇದು ನಿನಗೆ ಸಾಧ್ಯವಿಲ್ಲ ಇದನ್ನು ತಿಳಿಯುವದಕ್ಕಾಗಿಯೇ ಸದ್ಗುರುವು ಬೇಕಾಗುವನು.

ಆ ಗುರು ಮುಖದಿಂದ ಈ ವಚನಗಳ ನಿಜವಾದ ಮರ್ಮವನ್ನು ತಿಳಿದುಕೊಂಡರೆ ನಿನ್ನಲ್ಲುಂಟಾದ ವಿರೋಧಾಭಾಸವು ಹಾರಿ ಹೋಗುವದು ಇನ್ನು ಎರಡನೆಯ ಉದಾಹರಣೆಯೆಂದರೆ— 'ಇಂದ್ರಿಯಾಣಾಂ ಮನಶ್ಚಾಸ್ಮಿ' ಮತ್ತು 'ಚಂಚಲಂಹಿ ಮನಃ ಕೃಷ್ಣ' ಈ ಗೀತೆಯ ವಚನಗಳಿಂದ ದೇವನು ಚಂಚಲ ಮನಸ್ಸನ್ನು ನಿಗ್ರಹಿಸುವದಕ್ಕೆ ಹೇಳಿರುವನು. ಮನಸು ದೇವ ವಿಭೂತಿಯಾಗಿದ್ದರೆ ಆ ಮನಸಿನ ನಿಗ್ರಹವನ್ನು ಯಾರು ಹೇಗೆ ಮಾಡುವರು? ಭಗವದ್ವಚನಗಳು ಹಲವು ಉಂಟು ಆವನ ವಾಕ್ಯಗಳ ನಿಜವಾದ ಅರ್ಥವನ್ನು ಗುರು ಮುಖದಿಂದಲೇ ತಿಳಿಯಬೇಕು. ಸಾಧನ ಮಾರ್ಗ ತೋರಿಸುವದಕ್ಕಾಗಿ ಹಾಗು ಆತ್ಮ ಸಂಯಮನ ಮಾಡುವದಕ್ಕಾಗಿ ದೇವನು ಹಾಗೆ ಹೇಳಿರುವನು ಆ ದೇವನ ಭಾಷಣದ ಮರ್ಮವು ದೇಹ ಬುದ್ಧಿಯನ್ನು ಹೋಗಲಾಡಿಸುವದಕ್ಕಾಗಿ ಇರುವದು ಶಾಸ್ತ್ರಗಳ ನಿಶ್ಚಿತಾರ್ಥವನ್ನು ಸಂತ ಮುಖದಿಂದಲೇ ಕೇಳಬೇಕು ವಿರುದ್ಧ ವಚನಗಳನ್ನು ಆಧರಿಸಿ ವಾದ ಬೆಳೆಸುತ್ತ ಹೋಗುವದು ಸರಿಯಲ್ಲ ವೇದ ಶಾಸ್ತ್ರಗಳಲ್ಲಿ ಇಂಥ ನೂರಾರು ಪರಸ್ಪರ ವಿರೋಧ ವಚನಗಳು ಸಿಗುವವು ಆದ್ದರಿಂದ ವಿವಾದ ಬುದ್ಧಿಯನ್ನು ಬಿಟ್ಟು ಒಳ್ಳೆ ವಾದ ಮಾಡುವದನ್ನು ಅಭ್ಯಾಸಮಾಡು ಅಂದರೆ ಸಂತ ಗುರು ಕೃಪೆಯಿಂದ ಸ್ವಾನುಭವವುಂಟಾಗಿ ಎಲ್ಲ ವಾದಗಳು ಬಗೆ ಹರಿಯುವವು ಮತ್ತು ನೀನು ಬ್ರಹ್ಮಾನಂದಕ್ಕೆ ಪಾತ್ರನಾಗುವಿ ಕಲ್ಪನೆಯೊಂದರ ಹೊಟ್ಟೆಯಿಂದ ಅನಂತ ಸೃಷ್ಟಿಗಳು ನಿರ್ಮಾಣವಾಗುವವು, ಲಯವಾಗುವವು- ಆದರೆ ಅವೆಲ್ಲವನ್ನು ಸತ್ಯವೆಂದು ಒಪ್ಪಲು ಬರಲಾರದು ಆದ್ದರಿಂದ ಸೃಷ್ಟಿಯು ಮಿಥ್ಯವಾದದ್ದೆಂದು ದೃಢವಾಗಿ ಅರಿತುಕೊಳ್ಳು

ಇನ್ನು ಕಲ್ಪನೆಯಿಂದ ದೇವನನ್ನು ಸ್ಥಾಪಿಸಿಕೊಂಡು ಆ ದೇವನಲ್ಲಿ ದೃಢಭಾವನೆಯನ್ನಿರಿಸಿತೆಂದು ತಿಳಿಯೋಣ. ಮುಂದೆ ಆ ದೇವಮೂರ್ತಿಯು ವಿದ್ರೂಪ ಗೊಂಡರೆ ಭಕ್ತನಿಗೆ ಶೋಕ ತಾಪಗಳಾಗುವವು ಮನೆಯಲ್ಲಿಯ

ದೇವ ವಿಗ್ರಹವು ಮನೆಯಲ್ಲಿಯೇ ಕಳೆದು ಹೋದರೆ, ಕಳವಾಗಿ ಹೋದರೆ, ಇಲ್ಲವೆ ವಾಖಂಡಿಯು ಅದನ್ನು ಭಿನ್ನತೆ ಗೊಳಿಸಿದರೆ ಅಥವಾ ನೀರ್ಮಡುವಿನಲ್ಲಿ ಎಸೆಯಲ್ಪಟ್ಟರೆ ಮುಂತಾದ ಈ ಎಲ್ಲ ದುರವಸ್ಥೆಗಳು ಆ ವಿಗ್ರಹಕ್ಕೆ ಉಂಟಾಗಲು ಅದರಿಂದ ಭಕ್ತನು ಬಲು ಕಷ್ಟ ಹೊಂದುವನು. ಹಾಗು ಆತನಲ್ಲಿ ತೀರ್ಥ—ದೇವರುಗಳ ಮಹತ್ವವಾದ ಸತ್ವವು ದೂರಾಯಿತೆಂಬ ಭಾವನೆಯುದಿಸಿ ಆತನು ಮತ್ತೆ ಶೋಕಕ್ಕೆ ಆಸ್ಪದ ಕೊಡುವನು. ನರ್ಮದೆ, ಗಂಡಕೀ ನದಿಗಳಲ್ಲಿ ಲೆಕ್ಕವಿಲ್ಲದಷ್ಟು ಶಿಲೆಗಳು ಬಿದ್ದಿರುವವು, ಚಕ್ರ ತೀರ್ಥದಲ್ಲಿ ಚಕ್ರಾಂಕಿತ ಶಿಲೆಗಳೆಷ್ಟೋ ಇರುವವು. ಅವೆಲ್ಲವನ್ನು ದೇವರೆಂದು ತಿಳಿಯದೆ ಅವುಗಳಲ್ಲಿ ಒಂದೆರಡನ್ನು ಮಾತ್ರ ದೇವರೆಂದು ಕಲ್ಪಿಸಿ ಪೂಜಿಸುವನು ಬಾಣ, ಅಕ್ಷತೆ, ತಾಮ್ರ ನಾಣ್ಯ, ಸ್ಫಟಿಕ, ಬಹಳೇಕೆ! ದೇವರನ್ನು ಕೂಡ್ರಿಸುವ ಕಟ್ಟಿಗೆಯ ಚೌಕಿ—ಮಂಟಪವು ಇವೆಲ್ಲ ಭಕ್ತನಿಂದ ಪೂಜೆ ಗೊಳ್ಳುವವೆಂದಮೇಲೆ ದೇವನೆಂದರೆ ಯಾರು? ದೇವನು ನಿಜವೋ! ನಿಜವಲ್ಲವೋ ! ರೇಶಿಮೆಯಿಂದ ದೇವನನ್ನು ಕಲ್ಪಿಸಿದರೆ ಆ ರೇಶಿಮೆಯೂ ಹರಿಯುವದು ಆದ್ದರಿಂದ ಮಣ್ಣಿನ ವಿಗ್ರಹದಲ್ಲಿ ದೇವತ್ವದ ಹೊಸ ಕಲ್ಪನೆ ಮೂಡಿತು ಆಗ ಭಕ್ತನು—' ನಮ್ಮ ದೇವನು ಸತ್ಯನು, ನಮ್ಮ ಕಷ್ಟ ದೂರಮಾಡಿ ನಮ್ಮ ಮನೋರಥಗಳನ್ನು ಪೂರೈಸುತ್ತಿರುವನು ' ಅನ್ನುವನೇ ಹೊರತು 'ದೇವನಲ್ಲಿಯ ಸತ್ವ ಹೋಯಿತು ' ಎಂದು ಶೋಕಿಸುವದಕ್ಕೆ ಅವಸರವಿಲ್ಲದಾಗುವದು ಧಾತುಗಳು, ಕಲ್ಲು, ಮಣ್ಣು, ಫೋಟೋ, ಕಟ್ಟಿಗೆ ಇವೆಲ್ಲವುಗಳಲ್ಲಿ ದೇವತ್ವವನ್ನೊಪ್ಪುವದು ಅಜ್ಞತೆಯು ಇವೆಲ್ಲವೂ ಕಲ್ಪನೆಯವು ' ಪ್ರಾಪ್ತಿಯಂತೆ ಫಲವು ' ಎಂಬ ತಿಳುವಳಿಕೆಯಿದ್ದರೂ ಆ ದೇವನ ಬಗೆಗೆ ಬೇರೆ ವಿಚಾರ ವಿರುವದು ಆದ್ದರಿಂದಲೇ ವೇದ ಶಾಸ್ತ್ರ ಪುರಾಣಗಳು—' ಮಾಯೆಯ ಭ್ರಾಂತಿಯ ಕೋಟಿಪಟ್ಟು ಸೃಷ್ಟಿಯ ಮಿಥ್ಯತ್ವವಿರುವದು' ಎಂದು ಹೇಳುವವು ಸಾಧು—ಸಂತ—ಮಹಾನುಭಾವರೂಕೂಡ—'ದೇವನು ಪಂಚ ಭೂತಾತೀತನು, ಸೃಷ್ಟಿಯು ಮಿಥ್ಯವು' ಎಂಬದರ ಅನುಭವ ಪಡೆದಿರುವರು ಈ ಸಿದ್ಧಾಂತವೇ ನಿಜವು ಸೃಷ್ಟಿಯ ಸ್ಥಿತಿಯಿರುವಾಗಲೂ ಅದರ ಸಂಹಾರವಾದ ಮೇಲೆಯೂ ದೇವನು ಶಾಶ್ವತನಾಗಿಯೇ

ಇರುವನು ಇದೇ ನಿಜವಾದುದು. ಇದು ಎಲ್ಲರಿಗೂ ನಿಶ್ಚಿತವಾದುದು ಇದರಲ್ಲಿ ಸಂಶಯವಿಲ್ಲ ಕಲ್ಪನೆಯನ್ನು ಅನ್ವಯಿಸುವದು ವ್ಯತಿರೇಕವು ಒಂದು ಕಲ್ಪನೆಯಿಂದ ಎಂಟು ಬಗೆಯ ಸೃಷ್ಟಿಗಳೆಂದು ಹೇಳಲ್ಪಡುವವು ಆ ಸೃಷ್ಟಿಗಳ ಬಗೆಗೆ ಕೇಳು

ಮೊದಲನೆಯದು ಕಲ್ಪನೆಯ ಸೃಷ್ಟಿಯು ೨ನೆಯದು ಶಾಬ್ದಿಕ ಸೃಷ್ಟಿಯು ಇದರಂತೆ ಮುಂದಿನ ಸೃಷ್ಟಿಗಳೆಂದರೆ ೩ ಪ್ರತ್ಯಕ್ಷ ಸೃಷ್ಟಿ ೪ ಚಿತ್ರ ಲೇಖ ಸೃಷ್ಟಿ ೫ ಸ್ವಪ್ನ ಸೃಷ್ಟಿ ೬ ಗಂಧರ್ವ ಸೃಷ್ಟಿ ೭ ಜ್ವರ ಸೃಷ್ಟಿ ಮತ್ತು ೮ನೆಯದು ದೃಷ್ಟಿ ಬಂಧನ ಸೃಷ್ಟಿ ಹೀಗೆ ಎಂಟು ಬಗೆಯ ಸೃಷ್ಟಿಗಳು ಈ ಎಂಟೂ ಸೃಷ್ಟಿಗಳಲ್ಲಿ ಸತ್ಯವಾದದ್ದಾವುದು? ಶ್ರೇಷ್ಠ ವಾದದ್ದಾವುದು? ಅರ್ಥಾತ್ ಯಾವುದೂ ಇಲ್ಲ 'ಸೃಷ್ಟಿಯು ನಾಶವಂತ' ವೆಂಬುವದು ಸಿದ್ಧಾಂತವು ಇದನ್ನು ಸಂತ ಮಹಂತರೆಲ್ಲ ಅರಿತಿರು ವರು ಅಂಥ ಸಂತ ಸಂಗ ದೊರೆಕೊಳ್ಳದಿದ್ದರೆ ಚಿತ್ತವು ದುಶ್ಚಿತವಾಗು ವದು ಹೀಗಾಗಿಯೇ ನೀನು ಸಂಶಯದಲ್ಲಿ ಬಿದ್ದಿರುವಿ ಆ ಸಂಶಯ ವನ್ನು ಬಿಟ್ಟು 'ಜಗನ್ಮಿಥ್ಯೆ' ಎಂಬುದನ್ನು ಸಂತ ಸಂಗದಲ್ಲಿ ಇದ್ದು ಕಲಿತು ಕೊಳ್ಳು, ಎಂದು ಗುರುಗಳು ಹೇಳಲು ಶಿಷ್ಯನು—'ಜಗನ್ಮಿಥ್ಯೆ' ಎಂಬುದು ತಿಳಿದರೂ ಆ ಜಗತ್ತು ತೋರುವದೇಕೆ?' ದೃಷ್ಟಿಗೆ ತೋರಿದ್ದು ಸತ್ಯ' ಎಂದು ಎನ್ನಿಸುವದು ಇದಕ್ಕೆ ಏನು ಮಾಡಬೇಕು? ಎಂದು ಕೇಳಿದನು ಇದಕ್ಕೆ ಸರಿಯಾದ ಉತ್ತರವನ್ನು ಗುರುಗಳು ಹೇಳಿದುದನ್ನು ಮುಂದಿನ ಸಮಾಸದಲ್ಲಿ ಹೇಳದೆ ಅದನ್ನು ಶ್ರವಣ ಮಾಡತಕ್ಕದ್ದು

ಹೀಗೆ 'ಸೃಷ್ಟಿಯು ಮಿಥ್ಯೆ' ಎಂಬುದನ್ನರಿತು ಸಗುಣವನ್ನು ರಕ್ಷಿ ಸಿಕೊಳ್ಳಬೇಕು, ಇದೇ ಅನುಭಾವಿಗಳ ಸಿದ್ಧಾಂತವು ಆ ಸಗುಣದಾಧಾ ರದಿಂದಲೂ ಸಾರಾಸಾರ ವಿಚಾರ ಸಾಮರ್ಥ್ಯದಿಂದಲೂ ಸತ್ಸಂಗತಿಯನ್ನು ಬಳಸಿ ಶಾಶ್ವತ ಬ್ರಹ್ಮನನ್ನು ಕಂಡು ಬ್ರಹ್ಮ ಸ್ವರೂಪನಾಗಬೇಕು.

ಶ್ರೀ ರಾಮ || ೭ ಸಗುಣ ಭಜನ || ಶಿಷ್ಯನು ಗುರುಗಳನ್ನು ಕುರಿತು– ''ಜ್ಞಾನದಿಂದ ದೃಶ್ಯಗಳೆಲ್ಲವೂ ಮಿಥ್ಯವಾದರೆ ಭಜನವೇಕೆ ಬೇಕು? ಹಾಗು ಭಜನಮಾಡುವದರಿಂದ ಪ್ರಾಪ್ತವಾಗುವದೇನು? ಮತ್ತು ಉಪಾಸನೆಯು ಜ್ಞಾನಕ್ಕಿಂತ ಶ್ರೇಷ್ಠವಾಗದಿದ್ದರೆ ಜನರು ಉಪಾಸನೆಯಿಂದ ದೊರಕಿಸುವ

ದೇನು ? ನಿರ್ಗುಣವು ಮುಖ್ಯವು ಆದರಲ್ಲಿ ಸುಗುಣವು ತೋರುವ ದಿಲ್ಲ ಎಂದಮೇಲೆ ಸಗುಣ ಭಜನೆ ಮಾಡುವದರಿಂದೇನು ಫಲ ? ನಾಶತ್ವ ವುಳ್ಳವೆಲ್ಲವನ್ನು ಯಾಕೆ ಭಜಿಸಬೇಕು ? ಸತ್ಯವನ್ನು ಬಿಟ್ಟು ಅಸತ್ಯವನ್ನೇಕೆ ಭಜಿಸುವರು ? ಅಸತ್ಯದ ಅನುಭವ ತೋರಿದ ಮೇಲೆ ಅದರ ಬಗೆಗೆ ನೇಮ ವೇಕೆ ? ಸತ್ಯವನ್ನು ಬಿಟ್ಟು ವ್ಯರ್ಥ ಪ್ರಯಾಸ ಪಡುವದೇಕೆ? ನಿರ್ಗುಣೋ ಪಾಸನೆಯಿಂದ ಪ್ರತ್ಯಕ್ಷ ಮೋಕ್ಷವಾಗುವ ಪ್ರತ್ಯಯವಿದ್ದರೂ ಸಗುಣವನ್ನು ಕೊಡಬಯಸುವದೇಕೆ ? ಸುಗುಣವು ನಾಶತ್ವವೆಂದು ಹೇಳಿ ಪುನಃ ಭಜನ ವನ್ನು ಹೇಳುವಿರೇಕೆ ? ಒಟ್ಟಿನ ಮೇಲೆ ನಿರ್ಗುಣದಿಂದ ಮೋಕ್ಷವಾಗುವ ದೆಂದ ಮೇಲೆ ಸಗುಣವೇತಕ್ಕೆ ಬೇಕು'' ಎಂದು ಕೇಳಿದನು ಆಗ ಗುರು ಗಳು – ''ಗುರುವಚನದಲ್ಲಿ ವಿಶ್ವಾಸವಿಟ್ಟು ನಡೆಯತಕ್ಕದ್ದು ಇದು ಪರ ಮಾರ್ಥದ ಮುಖ್ಯ ಲಕ್ಷಣವು ಮತ್ತು ಸಗುಣೋಪಾಸನೆಯನ್ನು ಕೈಕೊ ಳ್ಳುವ ವಿಷಯದಲ್ಲಿ ಗುರ್ವಾಜ್ಞೆಯಿರುವದೆಂದು ತಿಳಿದು ನೀನು ಅದನ್ನು ಮಾಡಲಿಕ್ಕೇ ಬೇಕು" ಎಂದರು ಆಗ ಶಿಷ್ಯನು – '' ಗುರುಗಳ ಆಜ್ಞೆಯು ಮಾನ್ಯ ಆದರೆ ಗುರುಗಳಾದರೂ ಹೀಗೇಕೆ ಹೇಳಬೇಕು ? ಸಗುಣ ಮಿಥ್ಯತ್ವವನ್ನು ಹೇಳಿ ಆ ಸಗುಣ ಭಜನ-ಪೂಜನಗಳನ್ನು ಆಚರಿ ಸುತ್ತಿರು ಎಂದು ಹೇಳುವದು ನಿಮಗೆ ಸರಿಯಾಗದು ಸಗುಣವು ಮಿಥ್ಯವೇ ಆದದ್ದಾದರೆ ಆದರ ಭಜನದಿಂದೇನು ಫಲ ? ಪ್ರಾರಬ್ಧಕ್ಕನುಸರಿಸಿ ಸುಖ ಗಳೊದಗುವವು ಆ ಸುಖಗಳು ಸಗುಣ ಭಜನದಿಂದ ಬದಲಿಸುವದಿಲ್ಲ ಆದರೆ ಕಷ್ಟ ಪಡಬೇಕೇಕೆ ? "ಎಂದನು ಅದಕ್ಕೆ ಗುರುಗಳು –'ಜ್ಞಾನವೆಂದ ಕೂಡಲೆ ನಿನ್ನಲ್ಲಿ ಜ್ಞಾನದ ಲಕ್ಷಣಗಳೆಲ್ಲ ಉಂಟಾದವೆಂದು ನೀನು ತಿಳಿದು ಕೊಳ್ಳುವಿ ಸಗುಣವು ಮಿಥ್ಯವೆಂದು ಹೇಳದ ಕೂಡಲೆ ನೀನು ನಿರ್ಗುಣ ಪದಾರೂಢನಾದಿ ಆದರೆ ಉಳಿದ ವ್ಯವಹಾರಗಳು ನಿನ್ನನ್ನು ಬಿಡಲಿಲ್ಲ ಒಂದು ವೇಳೆ ಆ ವ್ಯವಹಾರ ಬಿಟ್ಟಿದ್ದಾದರೆ ಪ್ರಶ್ನೆ ಬೇರೆ ನೀನು ನಿನ್ನ ಶರೀರದ ಅನ್ಯ ವ್ಯಾಪಾರ ಸಾಗಿಸಬೇಕಾಗುವದಲ್ಲವೆ ! ಅಂದರೆ ಊಟ ಉಡಿಗೆ, ಉದಕ–ಪ್ರಾಶನ, ಮಲ ಮೂತ್ರ ವಿಸರ್ಜನೆ ಇವೆಲ್ಲವು ನಿನ್ನನ್ನು ಬಿಡಲಾರವು ಕೇವಲ ಜನರ ಸಮಾಧಾನಕ್ಕಾಗಿ ನಿನ್ನ ನಿಶ್ಚಿತವನ್ನರಿತು ಭಜನೆ ಬಿಡುವ ನಿನ್ನ ಜ್ಞಾನವೆಂಥದು ? ಆ ನಿನ್ನ ಜ್ಞಾನವನ್ನು ವಿವೇಕದಿಂದ

ಮಿಥ್ಯವಾದುದೆಂದು ತಿಳಿಯುವಿ ಆದರಂತೆ ಭಜನವೂ ಮಿಥ್ಯವೆಂದುಬಿಟ್ಟರೆ ಉಳಿದ ವ್ಯವಹಾರಗಳನ್ನು ಸತ್ಯವೆಂದು ಏಕೆ ಕೈಕೊಳ್ಳುವಿ ? ಅವೂ ಕೂಡ ಮಿಥ್ಯವಾದವುಗಳಲ್ಲವೆ ? ಕೆಲವರು ಮೇಲಧಿಕಾರಿಗಳ ವಾದಗಳ ಮೇಲೆ ಉರುಳಾಡಿ ಹೊಟ್ಟೆಗಾಗಿ ನೀಚ ಸೇವೆ ಮಾಡುವದನ್ನು ಬಿಡುವದಿಲ್ಲ ಆದರೆ ಭಜನ ಮಾತ್ರ ಬಿಡುವರು ಇದೆಂಥ ಜ್ಞಾನವು ? ಹರಿಹರ ಬ್ರಹ್ಮಾದಿಗಳು ಕೂಡ ತಾವು ಯಾವಾತನ ಆಜ್ಞೆಯಲ್ಲಿರುವರೋ ಆ ಪರಮಾತ್ಮನ ಆಜ್ಞಾನು ವರ್ತಿಗಳಾಗಿರುವರೆಂದಮೇಲೆ ಪಾಮರನಾದ ನೀನು ಆ ದೇವಾಧಿದೇವನ ಭಜನ ಮಾಡದಿದ್ದರೆ ಆಗುವದೇನು ? ಇನ್ನೊಂದೇನೆಂದರೆ- ನಾವು ಶ್ರೀ ರಾಮ ಭಜಕರು ಆ ರಘುರಾಮನ ಉಪಾಸನೆಯಿಂದಲೇ ನಮಗೆ ಜ್ಞಾನವುಂಟಾಗಿದೆ ಉಪಾಸನೆಯ ಯೋಗದಿಂದಲೇ ಆತ್ಮಜ್ಞಾನವು ಲಭಿಸುವದೆಂಬದು ನಮ್ಮ ಅನುಭವಕ್ಕೆ ಬಂದಿದ ಆದ್ದರಿಂದ ಆ ಸಮರ್ಥನನ್ನು ನಮ್ಮ ಹೃದಯದಿಂದ ದೂರೀಕರಿಸುವದು ನಮ್ಮ ನೀಚತನವು ಗುರುವು ಸಾರಾಸಾರ ವಿಚಾರಿಸಿ ಹೇಳಿದ್ದ ನಿಶ್ಚಯವನ್ನು ಒಪ್ಪದೆ ಆ ವಿಷಯದಲ್ಲಿ ಕುತರ್ಕ ಕುಬುದ್ಧಿಗಳನ್ನು ಉಪಯೋಗಿಸುತ್ತ ಕೂಡ್ರುವದು ಅಯೋಗ್ಯವು 'ಬ್ರಹ್ಮಜ್ಞಾನಿಗಿಂತ ನಾನೇ ದೊಡ್ಡವನು' ಹೀಗೆ ನುಡಿಯುವದು ಅಹಂಭಾವದ ಮಾತು ಇದರಿಂದ ನುಡಿಯುವವನ ದೇಹಬುದ್ಧಿಯು ವ್ಯಕ್ತವಾಗುವದು 'ಪರಮಾತ್ಮನ ಭಜನವನ್ನು ಮಾಡದಿರುವದೂ, ಮತ್ತೂ ಮಾಡ್ರುವದಿಲ್ಲೆಂದು ಹೇಳದಿರುವದೂ ಆ ಭಜಕನ ಸಂಶಯುಗ್ರಸ್ತ ಮನಸ್ಸನ್ನು ವ್ಯಕ್ತಗೊಳಿಸುವದು. ಇಂಥ ಸಂಶಯಗ್ರಸ್ತ ಮನಕ್ಕೇನೆನ್ನಬೇಕು ? ಇದು ಜ್ಞಾನವೂ ಅಲ್ಲ, ಭಜನವೂ ಅಲ್ಲ, ಕೇವಲ ದೇಹಾಭಿಮಾನವೆಂದು ಹೇಳಬಹುದು ಇಂಥ ಅಭಿಮಾನದಲ್ಲಿ ಬೀಳದೆ ಮನಸ್ಸನ್ನು ರಾಮ ಭಜನದಲ್ಲಿ ತೊಡಕಿಸಬೇಕು ಆ ಬಳಿಕ ಅದರಿಂದ ಜ್ಞಾನವನ್ನು ಹೇಳಬೇಕು ನಮ್ಮ ನಿಸ್ಸಂದೇಹ ಭಜನ ಜ್ಞಾನದಿಂದ ದುರ್ಜನ ಸಂಹಾರವು ನಿಶ್ಚಿತವಾಗಿ ಆಗಿಯೇ ತೀರುವದು. ಮತ್ತು ನಾವು ಮನಸಿನಲ್ಲಿ ಗೊತ್ತುಮಾಡಿಕೊಂಡದ್ದೆಲ್ಲವೂ ತೊಂದರೆ ದೂರಾಗಿ ವರ್ತಿಸುವಲ್ಲಿ ಶ್ರೀ ರಘುರಾಮನ ದಯೆಯು ತೋರಿಬರುವದು ರಘುರಾಮನ ಭಜನದಿಂದ ಜ್ಞಾನವಾಗುವದು ಮಹತ್ವ ಬೆಳೆಯುವದು. ಎಂದಮೇಲೆ ಭಜನವನ್ನು ಮೊದಲಿಗೆ ಮಾಡಲಿಕ್ಕೇ ಬೇಕು

ಅನುಭವಸಿದ್ಧವಾದುದರಲ್ಲಿ ನಿನಗೆ ಅನುಭವವುಂಟಾಗದಿದ್ದರೆ ಸಾಕ್ಷಾತ್ಕಾರ ದಿಂದ ಅನುಭವ ಕಂಡುಕೊಳ್ಳು ಶ್ರೀ ರಘುರಾಮನನ್ನು ಸ್ಮರಿಸಿಮಾಡಿದ ಕಾರ್ಯವು ಕೂಡಲೇ ಸಿದ್ಧಿಸುವದು ಆ ಕಾರ್ಯಮಾಡುವಲ್ಲಿಈ ಕ್ರಿಯಾಕರ್ತೃವು ಶ್ರೀ ರಘುರಾಮನೇ ಆಗಿರುವನೆಂದು ನಿನ್ನ ಅಂತರಂಗದ ದೃಢತೆಯಾಗಿ ರಬೇಕು 'ಕ್ರಿಯಾಕರ್ತೃವು ನಾನು' ಎಂದು ಹೇಳಿಕೊಂಡದ್ದಾದರೆ ಅದರಿಂದ ಏನೂ ಸಾಧಿಸಲಾರದು, ಇದರ ಅನುಭವವು ತೀವ್ರವೇ ನಿನಗೆ ಉಂಟಾಗು ವದು 'ಕ್ರಿಯಾಕರ್ತೃವು ನಾನು' ಎಂದು ಹೇಳಿಕೊಳ್ಳುವವನು ಕಷ್ಟಕ್ಕೆ ಗುರಿ ಯಾಗುವನು ಶ್ರೀ ರಘುರಾಮನೇ ಕ್ರಿಯಾಕರ್ತೃವೆಂದು ನಂಬಿದವನ ಯಶ, ಕೀರ್ತಿ, ಪ್ರತಾಪಗಳು ವರ್ಧಿಸುವವು.

ನಾನು ಕರ್ತೃವೆಂಡು ಭಾವಿಸುವವನು ದೇವನಿಂದ ದೂರಾಗುವನು ಶ್ರೀ ರಘುರಾಮನು ಕರ್ತೃವೆಂದು ಭಾವಿಸುವವನು ದೇವನ ಕೃಪಾದೃಷ್ಟಿಗೆ ಪಾತ್ರನಾಗುವನು ನಮ್ಮ ಜೀವನವು ಅತ್ಯಲ್ಪಕಾಲದ್ದು ದೇವನು ಬಹು ಕಾಲದವನು ನಾವು ಸ್ವಲ್ಪ ಮಾತ್ರ ತಿಳಿಯುವೆವು ದೇವನು ಮೂರು ಲೋಕಗಳನ್ನೇ ತಿಳಿಯು ವನು. ಈ ಕಾರಣದಿಂದಲೇ ಶ್ರೀ ರಘುರಾಮನ ಭಜನವು ಹಲವರಿಗೂ ದೇವನಿಗೂ ಒಪ್ಪಿತವಾಗಿದೆ ಬ್ರಹ್ಮಾದಿಕರು ಮೊದ ಲಾದವರು ಇದರಿಂದಲೇ ಶ್ರೀ ರಾಮ ಭಜನೆಯಲ್ಲಿ ತತ್ಪರರಾಗಿರುವವರು, ಭಕ್ತರಾದ ನಾವು ಜ್ಞಾನಬಲದಿಂದ ಉಪಾಸನೆಯನ್ನು ಒಪ್ಪದಿದ್ದರೆ ನಾವು ದೋಷಗಳಿಂದ ಪತಿತರಾಗಿ ಅಭಕ್ತರೆನ್ನಿಸುವೆವು ನಾವು ದೊಡ್ಡವರೆಂಬ ತಿಳುವಳಿಕೆಯಿಂದ ದೇವನನ್ನು ಉಪೇಕ್ಷೆ ಮಾಡಿದ್ದಾದರೆ ನಮ್ಮ ಆ ದೊಡ್ಡಿಸ್ತಿ ಕೆಯು ಪ್ರಮಾಣಭೂತವಾಗುವದು, ಹೊಗಳಿಕೆಗೆ ತಕ್ಕದ್ದಾಗದು, ಹಾಗು ಅದು ನಮ್ಮ ಶ್ರೇಷ್ಠತೆಯನ್ನು ವ್ಯಕ್ತಪಡಿಸಲಾರದು

ದೇಹದ ಅಂತರದಲ್ಲಿ ಅಂಟಿದ್ದ ಉಪಾಸನೆಯು ವಿವೇಕದಿಂದ ಉಳಿ ಯಲಾರದು ಇದೇ ಪ್ರಕಾರ ಸಂತ ಸಜ್ಜನರ ಅಂತರ್ಭಾವವಿರುವದು. ಶ್ರೀ ರಘುರಾಮನ ಭಜನದಿಂದ ದೃಶ್ಯಗಳೆಲ್ಲ • ಮಿಥ್ಯಗಳಾಗಿ ಹೋಗುವದು ತಿಳಿಯುವದು ಜ್ಞಾನಿಗಳ ಮತದಿಂದ ದೃಶ್ಯಗಳೆಲ್ಲ ಸ್ವಪ್ನದಂತೆ ತೋರುವವು ಸೃಷ್ಟಿಯ ರಚನೆಯು ಸ್ವಪ್ನದಂತಿದೆ ಸೃಷ್ಟಿಯೂ ಸ್ವಪ್ನವೂ ಇವೆರಡೂ ಮಿಥ್ಯವಾದವುಗಳೇ ದೃಶ್ಯವಾದವು ಮಿಥ್ಯಗಳೆಂದು ಸಾಧುಗಳು ತಿಳಿಯು

ವರು ” ಎಂದು ಗುರುಗಳು ಹೇಳಿದರು. ಕೂಡಲೇ ಶಿಷ್ಯರು – ‘ದೃಶ್ಯಗಳೆಲ್ಲ ನಮಗೆ ಮಿಥ್ಯವಾಗಿ ತೋರುವವೇಕೆ ?” ಎಂದು ಆಕ್ಷೇಪಿಸಲು ಗುರುಗಳು ಅದಕ್ಕೆ ಉತ್ತರರೂಪವಾಗಿ ಕೊಟ್ಟ ವಿವರವನ್ನು ಮುಂದಿನ ಸಮಾಸದಲ್ಲಿ ಹೇಳಿದೆ

— ಇಂತಿದೆ ಶ್ರೀ ದಾಸಬೋಧೆಯ ೬ನೆಯ ದಶಕದ ೭ನೆಯ ಸಮಾಸ —

ಶ್ರೀ ರಾಮ || ೮ ದೃಶ್ಯ ನಿರಸನ || ಹಿಂದಿನ ಸಮಾಸದಲ್ಲಿ ಶಿಷ್ಯರು ದೃಶ್ಯವಾದವು ಅಸತ್ಯವಾಗಿ ಯಾಕೆ ತೋರುವವು ? ಎಂದು ಕೇಳಿದ್ದಕ್ಕೆ ಗುರುಗಳು ಕೊಟ್ಟ ಉತ್ತರವನ್ನು ಇಲ್ಲಿ ಹೇಳಿದೆ ಗುರುಗಳು – “ಕಂಡದ್ದೆಲ್ಲ ವನ್ನು ಸತ್ಯವೆಂದು ತಿಳಿಯುವದು ಜ್ಞಾನವುಳ್ಳವನ ತಿಳುವಳಿಕೆಯಲ್ಲ, ಜಡ ಮೂಢ, ಅಜ್ಞಾನಿಗಳು ಮಾತ್ರ ಹಾಗೆ ಸತ್ಯವೆಂದು ತಿಳಿಯುವದು ಸಹಜವಿದೆ ಆದರೆ ಅದೂ ನಿಜವಲ್ಲ ಹಲವಾರು ಗ್ರಂಥಗಳೂ, ಸಂತಮಹಂತರೂ ಸೃಷ್ಟಿಯು ಅಸತ್ಯವೆಂದು ಹೇಳುತ್ತಿರುವಾಗ ‘ನನ್ನ ದೃಷ್ಟಿಗೆ ಕಾಣುವದೆಲ್ಲವೂ ಸತ್ಯವು’ ಎಂಬದಾಗಿ ಅನುಮಾನ ಪಡುವದು ಸರಿಯಾಗಲಾರದು ನಾನು ಕಂಡದ್ದೇ ನಿಜವು, ಇದರಲ್ಲಿ ಅನ್ಯರ ಹೇಳಿಕೆಯೇನೂ ನಡೆಯದು ಎಂಬ ಸಂಶಯದಲ್ಲಿ ಮಗ್ನರಾಗಬಾರದು ಚಿಗರೆಗಳು ಮೃಗಜಲವನ್ನು ಕಂಡು ನೀರೆಂದು ಭಾವಿಸಿ ಅಲ್ಲಿಗೆ ಓಡಿ ಹೋಗುವವು ಹೋದ ಹೋದಂತೆ ಅವಕ್ಕೆ ಆ ನೀರೇ ಸಿಗದಂತಾಗುವದು ಇದು ನಿಜವಾಗಿ ನೀರಲ್ಲ ಎಲ್ಲವೂ ಮಿಥ್ಯವು ಆ ಪಶುವಿಗೆ ಹೇಗೆ ತಿಳಿಯುವದು ? ರಾತ್ರಿಯಲ್ಲಿ ಸ್ವಪ್ನ ಕಂಡಾಗ ವಿಪುಲ ದ್ರವ್ಯದೊರಕಿತು ಬಹುಜನರೊಡನೆ ಆ ದ್ರವ್ಯದಿಂದ ವ್ಯವಹಾರ ನಡೆಯಿತು ಇದು ನಿಜವೆಂದು ಹೇಗೆ ಒಪ್ಪಿಕೊಳ್ಳುವದು ? ಕುಶಲಕಾರಾಗೀರನು ಅತ್ಯುತ್ತಮ ಹಾಗು ವಿಚಿತ್ರವಾಗಿ ಸಿದ್ಧಪಡಿಸಿದ ಮೂರ್ತಿಯೊಂದನ್ನು ಕಂಡ ಕೂಡಲೆ ಬಹು ಪ್ರೀತಿ ಕೌತುಕಗಳು ಉತ್ಪನ್ನವಾಗುವವು, ಆದರೆ ನಿಜವಾಗಿ ಆ ಮೂರ್ತಿಯು ಮಣ್ಣಿನದೇ ಆಗಿರುವದು ಅನೇಕ ಯುವತಿಯರು, ಆನೆ ಕುದುರೆಗಳು ಇವನ್ನು ರಾತ್ರಿಯಲ್ಲಿ ನಿರೀಕ್ಷಿಸಲು ಮನಹರವೆನ್ನಿಸುವದು ಆದರೆ ಹಗಲಿನಲ್ಲಿ ಅವನ್ನೇ ನೋಡಲು ಅವೆಲ್ಲ ಚರ್ಮವೇಷ್ಟಿತವಾಗಿರುವದೆಂದು ಮನಸ್ಸು ತಿರಸ್ಕೃತಿಯನ್ನು ಹೊಂದುವದು ಕಟ್ಟಿಗೆ, ಕಲ್ಲು, ಮುಂತಾದವುಗಳಲ್ಲಿ ಕೆತ್ತಿದ ಗೊಂಬೆಗಳು ಹಲವು ಜಾಣ್ಮೆಯಿಂದ ಸುಂದರವಾಗಿ ಸಿದ್ಧಪಡಿಸಿದವಾಗಿ

ದ್ದರೂ ಕೊನೆಗೆ ಅವು ಕಟ್ಟಿಗೆ ಕಲ್ಲು ಮುಂತಾದವುಗಳೇ ಆಗಿರುವವು ಹಲವು ಗೋಪುರಗಳಲ್ಲಿ ನಿರ್ಮಿಸಿದ ಚಿತ್ರ ವಿಚಿತ್ರ ಗೊಂಬೆಗಳ ಕೆಲವು ಬಾಗಿ ಬಳ ಕುವ ಶರೀರವುಳ್ಳವೂ ಕೆಲವು ಹಾವಭಾವ ಪೂರಿತ ದೃಷ್ಟಿ ನೋಟಗಳುಳ್ಳವೂ ಆಗಿ ನಯನಮನೋಹರವಾಗಿ ತೋರುವವು ಅವು ನೋಡುವವರ ದೃಷ್ಟಿ ಯನ್ನು ಚಕಿತಗೊಳಿಸುವವು ಕಡೆಗೆ ಅವು ರುಂಡ-ಮುಂಡ-ದಂಡಗಳಿಂದ ಮೂರು ಭಾಗವಾಗಿಯೇ ನಾಶವಾಗುವವು ದಶಾವತಾರಗಳನ್ನು ತೋರಿ ಸುವ ನಾಟಕಗಳಲ್ಲಿ ಸ್ತ್ರೀ ವೇಷಧಾರಿಗಳಾದ ಪುರುಷರು ಕಣ್ಣು ತಿರುವಿ, ಕೈ ಹೊರಳಿಸಿ ಹಾವಭಾವ ಮಾಡಿ ನಿಜ ಸ್ತ್ರೀಯರೆಂದೇ ಪ್ರೇಕ್ಷಕರಿಗೆ ತೋರು ವರು ಆದರೆ ನಾಟಕ ಮುಗಿದ ಮೇಲೆ ಆ ಸ್ತ್ರೀ ವೇಷಗಳು ಮಾಯವಾಗಿ ಅವರು ಪುರುಷರೇ ಎಂದು ತಿಳಿಯುವದು ಹಲವು ವಿಧದಲ್ಲಿ ಸೃಷ್ಟಿಯು ಅಸತ್ಯವು ಮಾಯಾವಿ ಮಾಟಗಾರನ ಕೃತ್ಯಗಳಂತೆ ನೀನು ಕಂಡವೆಲ್ಲವೂ ಅಸತ್ಯವಾಗಿರುವವು ಆದರೆ ಆ ದೃಶ್ಯಗಳೆಲ್ಲವೂ ನಿಜವಾಗಿ ಅವಿದ್ಯಾ ಅರ್ಥಾತ್ ಮಾಯೆ ಅಸತ್ಯವು ಸತ್ಯದಂತೆ ತೋರಿದರೂ ವಿಚಾರಮಾಡಿದಾಗ ಅಲ್ಲಿ ದೃಷ್ಟಿಯು ಚಂಚಲತೆ ಹೊಂದಲು ಅದು ಸತ್ಯವೆಂದು ಹೇಗೆ ಒಪ್ಪ ಬೇಕು ? ನಾವು ಆಕಾಶದ ಕಡೆಗೆ ನೋಡಲು ಅದು ಭೂಮಿಯ ಮೇಲೆ ಕೊಪ್ಪರಿಗೆಯನ್ನು ಡಬ್ಬು ಹಾಕಿದಂತೆ ತೋರುವದು, ನೀರಲ್ಲಿ ನೋಡಲು ಅದೇ ಆಕಾಶವು ಬಿಂಗಾತಾಗಿ ಬಿದ್ದಂತೆ ತೋರುವದು, ನಡುವೆ ಚಂದ್ರಪ್ರ ಕಾಶವೂ ತೋರುವದು ಅದರೆ ಆಕಾಶ ಮೊದಲಾಗಿ ಎಲ್ಲವೂ ಅಸತ್ಯವಾದ ವುಗಳು ಒಬ್ಬಾನೊಬ್ಬ ಅರಸನು ಕುಶಲ ಕಲಾಕೋವಿದನಿಂದ ತನ್ನ ಪ್ರತಿ ಮೆಯೊಂದನ್ನು ಮಾಡಿಸಿದನು ಅದನ್ನು ನೋಡಲು ಅರಸನಂತೆ ತದ್ರೂಪ ವಾಗಿ ತೋರಿತು ಆದರೆ ಅದೆಲ್ಲವೂ ಮಾಯಿಕವಾದದ್ದು ನಮ್ಮ ಕಣ್ಣಿನಲ್ಲಿ ಗೊಂಬೆಗಳಿಲ್ಲ ಆದರೆ ಯಾವುದನ್ನು ದೃಷ್ಟಿಸುವೆವೋ ಅದರ ಪ್ರತಿಬಿಂಬವು ಕಣ್ಣಲ್ಲಿ ಮೂಡುವದು ಆದರೆ ಆಗ ಕಣ್ಣಲ್ಲಿ ಮೂಡಿದ ಪ್ರತಿಮೆಯು ಸತ್ಯ ವೆಂದು ಹೇಗೆ ಹೇಳುವದು ? ನೀರಲ್ಲಿ ನೀರ್ಗುಳ್ಳೆಗಳು ಹಲವು ತೋರುವವು ಅವೆಲ್ಲವುಗಳಲ್ಲಿ ಒಂದೇ ರೂಪು ಹಲವಾಗಿ ತೋರುವದು ಕ್ಷಣಾರ್ಧದಲ್ಲಿ ಆ ಗುಳ್ಳೆಗಳು ಒಡೆದು ಹೋಗುವವು ಅವುಗಳಲ್ಲಿ ತೋರಿದ ರೂಪಗಳೆಲ್ಲ ಮಿಥ್ಯವಾದವು. ನಾಲ್ಕಾರು ಚಿಕ್ಕ ಚಿಕ್ಕ ಕನ್ನಡಿಗಳನ್ನು ಕೈಯಲ್ಲಿ ಹಿಡಿದು

ಕೊಂಡು ಮುಖ ನಿರೀಕ್ಷಣೆ ಮಾಡಿಕೊಳ್ಳಲು ಎಲ್ಲ ಕನ್ನಡಿಗಳಲ್ಲಿ ಅಂದರೆ ಪ್ರತಿಯೊಂದರಲ್ಲಿ ಮುಖವು ಕಂಡು ಕಾಣುವದು ಆದರೆ ಅವೆಲ್ಲ ಕನ್ನಡಿಗ ಳನ್ನು ತೆಗೆಯಲು ಮುಖವೊಂದೇ ಉಳಿಯುವದು ಅಂದರೆ ಕನ್ನಡಿಗಳ ಮಿಥ್ಯತೆಯು ತೋರುವದು ಆದರಂತೆ ನದಿಯ ನೀರಲ್ಲಿ ಒಂದು ಭಾರವ ನ್ನೊಯ್ಯುವಾಗ ಅದರ ವಿರುದ್ಧವಾಗಿ ಪ್ರತಿಬಿಂಬ ಮೂಡುವದು ಆ ಪ್ರತಿ ಬಿಂಬವು ಅಸತ್ಯವು ಒಂದುಖಡ್ಗವನ್ನು ಝಳಪಿಸಲು ಇನ್ನೊಂದು ಅಂಥದೇ ಕಾಣುವದು, ವಾದ್ಯದ ತಂತಿಗೆ ಆಘಾತವನ್ನುಂಟು ಮಾಡಲು ಆ ತಂತಿಯಂಥ ಇನ್ನೊಂದು ತಂತಿ ಗೋಚರಿಸುವದು ಆದರೆ ಮೂಲಕ್ಕೆ ಪ್ರತಿಯಾಗಿ ತೋರುವವೆಲ್ಲ ಮಿಥ್ಯಗಳೆಂದೇ ತಿಳಿಯುವದು ಹೀಗೆ ಹಲವು ದೃಷ್ಟಾಂತಗ ಳನ್ನು ಕೊಡಬಹುದು ಶಿಲಾಮಂದಿರದ ಗರ್ಭ ಗುಡಿಯಲ್ಲಿಂದ ಹೊರಟ ಧ್ವನಿಯಿಂದ ಅದೆಷ್ಟೋ ಪ್ರತಿಧ್ವನಿಗಳು ಹೊರಡುವವು. ನಿಜವಾದವುಗಳಂತೆ ಈ ಪ್ರಕಾರಗಳೆಲ್ಲ ನಿಜವೋ ? ಹಲವು ವಿಧಗಳಲ್ಲಿ ಸೃಷ್ಟಿಯು ಅಸತ್ಯ ವೆಂಬುದು ನಿಜ ಮಾಯೆಯು ಇಂದ್ರಜಾಲ ವಿದ್ಯೆವಿಶಾರದನಂತಿದೆ ಮನುಷ್ಯರು ಮಾಡುವ ಮಾಟಗಳೂ, ರಾಕ್ಷಸರ ಮಾಯಾವಿ ಲೀಲೆಗಳೂ ಇರುವಂತೆಯೇ ಭಗವಂತನ ಮಾಯೆಯು ಚಮತ್ಕಾರವಾದದ್ದಿರುವದು ರಾಕ್ಷಸರ ಮಾಯೆಗಳು ಒಮ್ಮೊಮ್ಮೆ ದೇವರಿಗೂ ಕೂಡ ಸತ್ಯವೆಂಬಂತೆ ಭಾಸ ವಾಗುವವು ಶ್ರೀ ರಘುರಾಮನು ಪಂಚವಟಿಯಲ್ಲಿರುವಾಗ ಮಾಯಾ ಕಾಂಚನ ಮೃಗವನ್ನು ನಿಜವಾದ ಮೃಗವೆಂದು ಭಾವಿಸಲಿಲ್ಲವೆ ? ರೂಪಬದ ಲಿಸುವದು, ರಕ್ತ ಬಿಂದುವಿನಿಂದ ರಾಕ್ಷಸರು ಹುಟ್ಟುವದು ಇವೆಲ್ಲ ಮಾಯಾಕೃತಿಗಳಿಂದ ರಾವಣನು ರಾಮನಿಗೆ ಕಪಟತನವನ್ನು ನಿಜವಾಗು ವಂತೆ ತೋರಿಸಿದನು ದೈತ್ಯರು ಹಣ್ಣುಕಾಯಿಗಳ ರೂಪ ತೆಗೆದುಕೊಂಡು ಮಾಯಾಬಾಜಾರ ನೆರೆಯಿಸಿದರು ಹೀಗೆ ಎಷ್ಟೋ ರಾಕ್ಷಸರ ಮಾಯಾವಿ ಕೃತಿಗಳು ಪುರಾಣಗಳಲ್ಲಿ ಉಲ್ಲೇಖವಾಗಿವೆ ಶ್ರೀ ಕೃಷ್ಣನು ಮಾಯಾವಿ ರಕ್ಕಸರನ್ನು ಲೆಕ್ಕವಿಲ್ಲದಷ್ಟು ಕೊಲ್ಲಲಿಲ್ಲವೇ? ರಾಕ್ಷಸರ ಕಪಟ ವಿದ್ಯೆಗೆ ದೇವತೆ ಗಳು ಸಹ ಮೋಸ ಹೋಗಿರುವರು. ಆದರೆ ಕಡೆಗೆ ರಾಕ್ಷಸರೇ ದೇವತೆಗಳಿಂದ ಪರಾಜಿತರಾದರು ಈ ಮಾತು ಬೇರೆಯಿರಲಿ, ಇನ್ನು ದೇವಮಾಯೆಯು ಅಸತ್ಯವಾಗಿದ್ದು ಅದು ಪರಾಜಿತರಾದರು ಸತ್ಯವೆಂದು ತಿಳಿಯುವದು ತಪ್ಪು

ಅದು ಹೇಗೆಂದರೆ—

ಈ ದೃಶ್ಯಭಾಸವು ಅವಿದ್ಯಾತ್ಮಕವಾದದ್ದು ನಿನ್ನ ದೇಹವೂ ಕೂಡ ಅಂತೆಯೇ ಇರುವದು ಆದ್ದರಿಂದ ಅವಿವೇಕವು ಅಲ್ಲಿ ಸಂಚರಿಸುವದು ದೃಶ್ಯವನ್ನು ದೃಷ್ಟಿಯಿಂದ ಕಂಡಕೂಡಲೆ ಮನಸ್ಸು ಆಭಾಸಗೊಳ್ಳುವದು ಅದರಿಂದ ವಾಸನಾತ್ಮಕ ಲಿಂಗದೇಹವೇ ಅವಿದ್ಯೆಯಿಂದಾಗಿದೆ ಎಂಬ ಅವಿವೇಕಕ್ಕೆ ಆಸ್ಪದ ದೊರೆಯುವದು, ಇಂಥ ಅಸತ್ಯ ದೇಹವೇ ನಾನು ಎಂಬ ದೇಹಬುದ್ಧಿಯು ಬೆಳೆದು ಆದರಿಂದ ಎಲ್ಲ ದೃಶ್ಯಗಳು ನಿನಗೆ ಸತ್ಯವಾಗಿ ತೋರುವವು ದೇಹ ಬುದ್ಧಿಯನ್ನು ದೃಢವಾಗಿರಿಸಿಕೊಂಡು ಅಲ್ಲಿಂದ ಪರಬ್ರಹ್ಮವಸ್ತುವನ್ನು ನೋಡಲ ನೀನು ಹೋಗುವಿಯೆಂದೇ ತಿಳಿದು ನಡುವೆ ದೃಶ್ಯವೆನ್ನುವ ದೊಡ್ಡದೊಂದು ಬಂಡೆಗಲ್ಲು ಅಡ್ಡಾಗಿದೆ, ಕೊನೆಗೆ ಈ ದೃಶ್ಯವು ಸತ್ಯವೆಂದು ತಿಳಿಯುವದು ದೊಡ್ಡ ತಪ್ಪು ಇದಿರಲಿ

ಅಹಮತ್ವವು ಬ್ರಹ್ಮನನ್ನು ಹೊಂದಗೊಡುವದಿಲ್ಲ ದೇಹ ಬುದ್ಧಿಯ ಲಕ್ಷಣಗಳು ದೃಶ್ಯವೆಂದು ಭಾವಿಸಲ್ಪಡುವವು ಅಸ್ಥಿಪಂಜರವುಳ್ಳ ದೇಹದಲ್ಲಿ ಚರ್ಮಚಕ್ಷುಗಳಿವೆ ಆ ಮಾಂಸಯುತ ಕಣ್ಣುಗಳಿಂದ ಬ್ರಹ್ಮಗೋಲವನ್ನು ನೋಡ ಬಯಸುವವನು ತಿಳಿದವನಲ್ಲ ಅವನು ಕೇವಲ ಕುರುಡನು ಹಾಗು ಮೂರ್ಖನು ದೃಷ್ಟಿಗೆ ತೋರುವದು, ಮನಸ್ಸಿಗೆ ಭಾಸಿಸುವದು ಮತ್ತು ಎಲ್ಲವೂ ಕಾಲಾಂತರದಲ್ಲಿ ನಾಶವಾಗುವದು. ಆದರೆ ಪರಬ್ರಹ್ಮನು ಈ ಬಗೆಗಳಿಂದ ಭಿನ್ನವಿರುವನು ಅಂದರೆ ಅವನು ದೃಶ್ಯಕ್ಕೆ ಅತೀತನಾಗಿರುವನು, ಶಾಶ್ವತನಾಗಿರುವನು ಅನೇಕ ಶಾಸ್ತ್ರಗಳು ಮಾಯೆಯು ಅಶಾಶ್ವತವೆಂದೂ ಪರಬ್ರಹ್ಮನು ಶಾಶ್ವತನೆಂದೂ ನಿಶ್ಚಿತಾರ್ಥವನ್ನು ಹೇಳಿರುವವು.

ಇನ್ನು ಮುಂದೆ ದೇಹಬುದ್ಧಿಯು (ಅಹಂಭಾವದ) ಮೂಲಕ ಉಂಟಾಗುವ ತಪ್ಪನ್ನು ಹೇಗೆ ಸರಿಪಡಿಸಿಕೊಳ್ಳಬೇಕು ? ಎಂಬದನ್ನು ಹೇಳುವೆವು. ಅಂದರೆ ನಾನು ಯಾರೆಂಬದನ್ನು ಅರಿತುಕೊಂಡು ಅಹಂಕಾರ ಬಿಟ್ಟು ಅನನ್ಯನಾಗಬೇಕು. ಬಳಿಕ ಸಮಾಧಾನ ಹೊಂದಬೇಕು ಈ ಭಾವನೆಯನ್ನು ತನ್ನಲ್ಲಿ ತಂದುಕೊಳ್ಳುವ ವಿಚಾರವನ್ನು ಹೇಳುವೆವು" ಎಂದು ಗುರುಗಳು ಹೇಳಿದರು

ಶ್ರೀ ರಾಮ ॥ ೯ ಸಾರಶೋಧನ ॥ ಜ್ಞಾನವೆಂಬ ಬಂಧನವು ಗೌಪ್ಯವಾಗಿಯೂ ಶ್ರೇಷ್ಠವಾಗಿಯೂ ಇರುವದು ಇದನ್ನು ಸೇವಕರು ಆ

ಯಂಥು. ಯಾಕಂದರೆ ಅವರು ಬಾಹ್ಯಾತ್ಕಾರದ ಜ್ಞಾನವುಳ್ಳವರು. ಜ್ಞಾನವು ಗುಪ್ತವಾಗಿದ್ದ ಶ್ರೇಷ್ಠ ಸಂಪತ್ತು ಬಾಹ್ಯ ಪದಾರ್ಥಗಳು ಸ್ವಾರ್ಥ ಸಂಪತ್ತು ಬುದ್ಧಿವಂತನು ಗುಪ್ತ ಸಂಪತ್ತನ್ನೇ ದೊರಕಿಸಲು ಶೋಧಿಸು ವನು. ಆದರಂತೆ ದೃಶ್ಯ ಸಂಪತ್ತು ಮಾಯಿಕವು ಎಲ್ಲರೂ ಅದನ್ನೇ ಕಾಣುತ್ತಿರುವರು ಆದರೆ ವಿವೇಕಿಯು ಗುಪ್ತ ಹಾಗು ದೃಶ್ಯ ಸಂಪತ್ತು ಗಳ ಅಂತರವನ್ನು ತಿಳಿಯುವನು ದ್ರವ್ಯವನ್ನು ಹುಗಿದಿಟ್ಟು ಅದರಮೇಲೆ ನೀರುತುಂಬಿ ಮಡುವಾಗಿಸಿದರೆ ಜನರು ಇದು ಸರೋವರವು ನೀರಿನಿಂದ ತುಂಬಿದೆ ಎಂದು ಇಷ್ಟೇ ತಿಳಿಯುವದು ಆದರೆ ಅದರ ಅಭ್ಯಂತರವು ಸಮ ರ್ಥರಾದವರಿಗೆ ಮಾತ್ರ ತಿಳಿಯುವದು ಅಂಥ ಸಮರ್ಥರೆಂದರೆ ಜ್ಞಾನಿ ಗಳೇ ಅವರೇ ಪರಮಾರ್ಥವನ್ನು ತಿಳಿಯುವರು ಇತರರು ಸ್ವಾರ್ಥ ಮೂಲಕವಾಗಿ ದೃಶ್ಯವನ್ನು ತಿಳಿದುಕೊಳ್ಳುವರು ಈ ಜಗತ್ತಿನಲ್ಲಿ ದುಡಿ ಯುವವನು ಕಷ್ಟಪಡುವನು, ಶ್ರೀಮಂತನು ವೈಭವ ಸುಖವನ್ನು ಅನು ಭೋಗಿಸುವನು ಕರ್ಮಯೋಗದಿಂದ ಅವರವರ ಅನುಭೋಗವು ಅವರ ವರಿಗೆ ರುಚಿಸುವದು ವಿಚಾರವೆಂಬ ಬಂಡವಲು ಇದ್ದವನು ಸುಖಾಸನದ ಮೇಲೆ ಕುಳಿತುಕೊಳ್ಳುವನು, ಅಜ್ಞಾನಿಯು ಜೀವನದ ಭಾರವನ್ನು ಹೊತ್ತು ಆಯುಷ್ಯ ಕಳೆಯುವನು ಒಬ್ಬನು ದಿವ್ಯಾನ್ನವನ್ನು ಭುಂಜಿಸಿದರೆ ಇನ್ನೊ ಬ್ಬನು ಕದನ್ನಸೇವಿಸಿ ನಿಂದ್ಯಕರ್ಮ ಮಾಡುವನು ಇದು ಅವರವರಿಗೆ ಅವರವರ ಅಭಿಮಾನವೇ ಎನ್ನಿಸುವದು ಒಬ್ಬನು ಸಾರಯುಕ್ತವನ್ನು ಸೇವಿಸಿ ಶ್ರೇಷ್ಠನಾಗುವನು, ಇನ್ನೊಬ್ಬನು ನಿಸ್ಸತ್ವವನ್ನು ಸೇವಿಸಿ ಬಡಕನಾಗು ವನು, ಈ ಸತ್ವಾಸತ್ವಗಳ ವಿಚಾರವು ಜ್ಞಾನವುಳ್ಳವರಿಗೆ ಮಾತ್ರ ತಿಳಿಯು ವದು. ಪರಿಸಗಲ್ಲು, ಚಿಂತಾಮಣಿರತ್ನಗಳು ಗುಪ್ತವಿರುವವು, ಅದೇ ಕಲ್ಲುಕಾಜು ಗಳು ಪ್ರಕಟ ಸ್ವರೂಪದಲ್ಲಿರುವವು ಬಂಗಾರ-ರತ್ನಗಳಕಣಿಗಳು ಗುಪ್ತವಿರು ವವು ಆದರೆ ಕಲ್ಲು ಮಣ್ಣುಗಳು ಸತತ ಪ್ರಕಟವಿರುವವು ಉತ್ತಮ ಶಂಖ, ಉತ್ತಮಬಳ್ಳಿಗಳು ಹಾಗು ಉತ್ತಮ ವನಸ್ಪತಿಗಳು ದುರ್ಮಿಳಗಳು ಆದರೆ ಸಿಂಪುಗಳೂ, ಔಡಲ, ಮದುಗುಣಿಕೆ ಮೊದಲಾದ ಗಿಡಗಳೂ ವಿಪುಲ ಶ್ರೇಷ್ಠ ಕಲ್ಪತರುವೂ ಸೌಗಂಧಿಕ ವನಸ್ಪತಿಗಳೂ ಗುಪ್ತ ಬಾರಿ, ಜಾಲಿಗಿಡ ಗಳು ಪ್ರಕಟವಿರುವವು ಕಾಮಧೇನುಗಳು ಸುರಪತಿಯಲ್ಲಿ ಮಾತ್ರ ಇರು

ವವು, ಜಗತ್ತಿನಲ್ಲಿ ಆಕಳು ದನಗಳಿರುವವು ಅರಸರು ಮಹದ್ಭಾಗ್ಯ ಭೋಗಿಸಿದರೆ ಇತರರು ಕರ್ಮಾನುಸಾರ ಕಷ್ಟ ಭೋಗಿಸುವರು ಜನರು ಹಲವು ವ್ಯಾಪಾರದಿಂದ ಅಪಾರ ಸಂಪತ್ತು ಗಳಿಸಿದರೂ ಅವರು ಕುಬೇರ ನನ್ನು ಸರಿಗಟ್ಟಲಾರರು, ಇವೆಲ್ಲವುಗಳಂತೆ –
ಜ್ಞಾನಿಗಳಾದ ಯೋಗೇಶ್ವರರು ಈಶ್ವರನೆಂಬ ಗುಪ್ತ ಸಂಪತ್ತನ್ನು ದೊರ ಕಿಸಿಕೊಂಡರೆ ಉಳಿದವರು ಹೊಟ್ಟೆಯ ಪಾಡಿಗಾಗಿ ಹಲವು ಜನರ ಸೇವಾ ವೃತ್ತಿಗಾಗಿ ಹವಣಿಸುವರು ಆದ್ದರಿಂದ ಜನರಲ್ಲಿ ಸಾರಭೂತವಾದ ಜ್ಞಾನ ತೋರದೆ ನಿಸ್ಸಾರತ್ವವೇ ತೋರುವದು, ಈ ಸಾರಾಸಾರಗಳ ವಿವೇಚನೆ ಯನ್ನು ಸಾಧುಗಳು ಮಾತ್ರ ತಿಳಿಯುವರು, ಜ್ಞಾನಿಗಳಾದ ಸಂತರನ್ನು ಅವರಂಥ ಜ್ಞಾನವುಳ್ಳವರೇ ತಿಳಿಯುವರು, ಅಜ್ಞಾನಿಗಳಿಗೆ ಇದು ತಿಳಿ ಯಲಾರದು ನಿಧಿ–ನಿಕ್ಷೇಪಗಳು ಬರಿಗಣ್ಣಿಗೆ ಕಾಣುವದಿಲ್ಲ ಕಣ್ಣಿಗೆ ಅಂಜನವನ್ನು ಹಚ್ಚಿಕೊಂಡು ಕಂಡು ಹಿಡಿಯಬೇಕಾಗುವದು ಅದ ರಂತೆಯೇ ಗೌಪ್ಯನಾಗಿದ್ದ ಪರಮಾತ್ಮನೆಂಬ ನಿಧಿಯನ್ನು ಸಜ್ಜನ ಸಂಗವೆಂಬ ಅಂಜನವನ್ನು ಉಪಯೋಗಿಸಿ ದೊರಕಿಸಿಕೊಳ್ಳಬೇಕು ಅರ ಸನನ್ನು ಕಂಡರೆ ದಾರಿದ್ರ್ಯ ದೂರಾಗಬಹುದು ಆದರೆ ಸತ್ಸಂಗವನ್ನು ಹಿಡಿದರೆ ಸದ್ವಸ್ತು ದೊರಕುವದು ಸದ್ವಸ್ತುವಿನಿಂದ ಸದ್ವಸ್ತುವು ದೊರೆ ಯುವದು. ಪದಾರ್ಥಮಯ ಚಿತ್ತಕ್ಕೆ ಪದಾರ್ಥವೇ ಕಾಣುವದು, ಪ್ರಶಸ್ತ ಮನಸ್ಕರಿಗೆ ಪ್ರಶಸ್ತ ಪರಬ್ರಹ್ಮ ವಸ್ತುವಿನ ಲಾಭವಾಗುವದು, ಈ ವಿವರ ದಿಂದ ದೃಶ್ಯವಸ್ತುಗಳೆಲ್ಲ ಅಶಾಶ್ವತಗಳು ಪರಮಾತ್ಮನು ಚ್ಯುತಿರಹಿ ತನೂ, ಅಂತರಹಿತನೂ, ಅದೃಶ್ಯನೂ ಆಗಿರುವನು ದೃಶ್ಯದಿಂದ ಅಂತ ರಿಸಿ ದೃಶ್ಯದಿಂದ ಬೇರೆಯೇ ಇರುವನು ಆತನು ಸರ್ವಾತ್ಮನು, ಚರಾಚರ ಪರಿಪೂರ್ಣನು, ಇದು ನಿಶ್ಚಯವು

ಇನ್ನು ಸಂಸಾರ ಬಿಡದೆ ಪ್ರಾಪಂಚಿಕ ಉಪಾಧಿಗಳನ್ನು ಕಳೆಯದೆ ಜನ್ಮಸಾರ್ಥಕವಾಗಬೇಕಾದರೆ ವಿಚಾರವು ಅವಶ್ಯ ಇದು ಅನುಭವೋಕ್ತಿಯು ವಿವೇಕದಿಂದ ಅನುಭವ ಪಡೆಯಬೇಕು, ಅಂಥ ಅನುಭವಿಯೇ ಜಾಣನು

ಸ್ವಾನುಭವ ಹಾಗು ಅನುಮಾನ ಇವು ಕ್ರಮವಾಗಿ ಪ್ರತ್ಯಕ್ಷ ಹಾಗು ಅಪ್ರತ್ಯಕ್ಷಗಳು ಅಂದರೆ ನಗದು ಉದ್ದರಿಗಳು ಮಾನಸ ಪೂಜೆಯು ಪ್ರತ್ಯಕ್ಷ

ದರ್ಶನವು ಮುಂದೆ ಜನ್ಮಾಂತರದಲ್ಲುಂಟಾಗುವ ಲಾಭವು ಉದ್ಧರಿಸ್ವರೂಪದ್ದು ಸದ್ಯದ ಲಾಭವು ಅದರಂತಲ್ಲ ಸಾರಾಸಾರವುಳ್ಳದ್ದು, ನಗದು ಲಾಭದಿಂದ ಜೀವನು ಸಂಸಾರದಿಂದ ಮುಕ್ತನಾಗುವನು, ಅವನ ಸಂಶಯಗಳು ದೂರಾಗಿ ಜನನ ಮರಣಗಳು ತಪ್ಪುವವು ಸಂಸಾರಿಯಾದರೂ ಅವನು ಇದೇ ಜನ್ಮ, ಇದೇ ಕಾಲಗಳಲ್ಲಿ ಸ್ವರೂಪಾಕಾರದಿಂದ ನಿಶ್ಚಲ ಮೋಕ್ಷ ಪಡೆಯುವನು ಈ ವಿಷಯಕ್ಕೆ ಸಂಶಯ ಪಡುವವನು ಸಿದ್ಧನಿದ್ದರೂ ಅವನು ಪತಿತನಾಗುವನು, ಬೋಧಕನು ಸುಳ್ಳೇ ಹೇಳಿದರೆ ಅವನಿಗೆ ಅವನ ಉಪಾಸನೆಯ ಆಣೆಯಾಗಿದೆ ಇದು ಸರಿಯೆಂದು ನುಡಿವ ವಿವೇಕಿಯು ತೀವ್ರವೇ ಮುಕ್ತನಾಗುವನು ಅವನು ಜನರಲ್ಲಿ ಇದ್ದೂ ಇಲ್ಲದಂತಾಗುವನು, ನಿರ್ಗುಣವು ದೇವಪದತ್ವವುಳ್ಳದ್ದು ದೇವಪದವನ್ನು ಅನನ್ಯ ಸ್ಮರಿಸಬೇಕು ಅಂದರೇನೇ ಶಾಂತಿ ದೇಹಧಾರಿಯಾಗಿದ್ದರೂ ವಿದೇಹ ಸ್ಥಿತಿಯಲ್ಲಿರುವದೂ, ಮಾಡಿಯೂ ಮಾಡದಂತಿರುವದೂ ಇವು ಇವು ಜೀವನ್ಮುಕ್ತನ ಲಕ್ಷಣಗಳು ಜೀವನ್ಮುಕ್ತನೇ ಇವನ್ನು ತಿಳಿಯುವನು ಈ ಬಗ್ಗೆ ಇದಕ್ಕೂ ಮೀರಿ ಉಂಟಾದ ಅನುಮಾನ ಸಂದೇಹಗಳುಂಟಾದರೆ ಅವು ಸದ್ಗುರು ವಚನಗಳಿಂದ ನಿರಸನವಾಗುವವು ”

ಶ್ರೀ ರಾಮ ॥ ೧೦ ಅನಿರ್ವಾಚ್ಯ ॥ ಗುರುಗಳು—

“ಸಮಾಧಾನವು ಆಡಿ ತೋರಿಸಲಿಕ್ಕೆ ಬಾರದಂತಹದು ಶಾಂತಿಯ ಸವಿಯನ್ನು ಹೇಳುವದಕ್ಕೆ ಭಾಷೆಯಲ್ಲಿ ಶಬ್ದಗಳೇ ಇರುವದಿಲ್ಲ, ಹಾಗು ಶಾಂತಿಯ ಅನುಭವವನ್ನು ವ್ಯಕ್ತಪಡಿಸಲು ಬರುವಂತಿಲ್ಲ ಶಾಂತಿಯು ಇಂಥ ಅಗಮ್ಯವಾದುದೆಂದು ಎಲ್ಲರೂ ಹೇಳುತ್ತಾರೆ ಆದರೂ ಸಮಾಧಾನವು ಅನಿರ್ವಾಚ್ಯವೆಂದು ಏಕೆ ಹೇಳುವರು? ಇದನ್ನು ನಮಗೆ ತಿಳಿಸುವದಾಗಬೇಕು” ಎಂದು ಶಿಷ್ಯನು ಗುರುಗಳಿಗೆ ಪ್ರಶ್ನೆ ಮಾಡಿದನು ಆಗ ಗುರುಗಳು:- ಪರಬ್ರಹ್ಮ ಸ್ವರೂಪವೇ ಶಾಂತಿಯ ಸ್ಥಾನವು ಆ ಸ್ವರೂಪವೇ ಅನುಭವವು ಆ ಶಾಂತಿಯೇ ಅನಿರ್ವಾಚ್ಯವು ಅದರ ಸವಿಯನ್ನು ತಿಳಿಸಿ ಹೇಳುವದೆಂದರೆ ಕೈಯಲ್ಲಿ ಬೆಲ್ಲದ ಕರಣೆಯನ್ನು ಇಟ್ಟಂತೆ ಎಂಬುದು ನಿಜ ಶಾಂತಿಯನ್ನು ಅದು ಹೀಗೆಯೇ ಇರುವವೆಂದು ಹೇಳುವದಕ್ಕೆ ತಿಳಿಯುದಿದ್ದರೂ ಹೇಳದ ಹೊರತು ತಿಳಿಯುವದೂ ಇಲ್ಲ ಆದರೆ ಬ್ರಹ್ಮಸ್ವರೂಪಿ

ಗಳಾದ ಸಂತಸಜ್ಜನರಾದ ಸದ್ಗುರುಗಳು ಅದನ್ನು ತಿಳಿಸುವದಕ್ಕೆ ಸಮರ್ಥರು ಅವರ ಕೃಪೆಯಾಗುವದೂ ಸಹ ಕಠಿಣ ಅದನ್ನು ಪಡೆಯುವ ಹಂಬಲವುಳ್ಳವನು ನಿವಾಂತ ಸ್ಥಾನದಲ್ಲಿ ಕುಳಿತುಕೊಂಡು ತನ್ನಲ್ಲಿಯೇ ತನ್ನ ನಿಜತ್ವವನ್ನು ಅರಿತುಕೊಂಡಡರೆ ಮಾತ್ರ ಅವನಿಗೆ ಸದ್ಗುರುಕೃಪೆಯು ಲಭಿಸುವದು, ಹೊರಗಣ ಇಂದ್ರಿಯಗಳಿಂದ ಮನಸ್ಸನ್ನು ನಿರೋಧಿಸಿ ಕುಳಿತು ತನ್ನನ್ನು ತಾನು ಶೋಧಿಸಿಕೊಳ್ಳಬೇಕು ಹೀಗೆ ತನ್ನ ಅರಿವನ್ನು ಕಾಣುವಾಗಲೇ ಅವನಿಗೆ ಅಕಸ್ಮಾತ್ ಸಮಾಧಿಯುಂಟಾಗುವದು, ತನ್ನ ಶೋಧ ನಡೆಯಿಸಿರುವಾಗಲೇ ಅವನಿಗೆ ತನ್ನ ಸಂಬಂಧದ ಸಂಗತಿಗಳೆಲ್ಲ ಸ್ವರೂಪವೇ ಹೀಗೆ ಉಳಿದ ಶುದ್ಧ ಸ್ವರೂಪವೇ ಮಾಯಾಯುತವೆಂದು ತಿಳಿದು ಬರುವದು ಮತ್ತು ಅವನಲ್ಲಿ ಶುದ್ಧ ಸಮಾಧಾನವು ಅಥವಾ ಶಾಂತಿಯು ಅಲ್ಲಿ ಸಾಕ್ಷಿತ್ವದ ಆವಶ್ಯಕತೆ ಉಳಿಯುವದಿಲ್ಲ ಆತ್ಮನೇ ಸರ್ವಸಾಕ್ಷಿಯಾಗಿರುವನು. ಈ ಸರ್ವಸಾಕ್ಷಿತ್ವವು ಒಂದು ಅವಸ್ಥೆಯಾಗಿರುವದು ಮತ್ತು ಪರಮಾತ್ಮವಸ್ತುವು ಅವಸ್ಥಾಹಿತವು ಅಂದರೆ ಅವಸ್ಥಾತೀತವಾಗಿರುವದು ಆದ್ದರಿಂದ ಸರ್ವಸಾಕ್ಷಿತ್ವವಾಗಲಿ ಅಥವಾ ಇಂಥ ಬೇರೊಂದು ಲಕ್ಷಣವಾಗಲೀ ಆ ಪರಮಾತ್ಮ ವಸ್ತುವಿಗೆ ಅನ್ವಯಿಸುವದಿಲ್ಲ ಸರ್ವಸಾಕ್ಷಿತ್ವ, ಅನುಭವ, ಯಥಾರ್ಥಜ್ಞಾನ ತ್ರಿಪುಟೀ, ವಾಣಿ, ಮನಸ್ಸು ಇವುಗಳ ಕೈವಾಡವು ಅಲ್ಲಿ ನಡೆಯುವದಿಲ್ಲ, ಆ ವಸ್ತುವಿನಲ್ಲಿ ಜ್ಞಾನವು ಅಟ್ಟಸುವದು, ದೃಷ್ಟಾದೃಷ್ಟಿಗಳು ಅಲ್ಲಿ ಉಳಿಯುವದಿಲ್ಲ ಆಗಲೇ "ನಾನು" ಎಂಬುದು ಇಲ್ಲದಂತಾಗುತ್ತದೆ. ಹೀಗೆ ಅಹಂ ಮನ್ಯತೆಯು ನಿಶ್ಶೇಷವಾಗುವದೇ ಅದು ಅನುಭವದ ಗುರ್ತು ಆಗ ಅನುಭವ ಹೇಳಿಕೇಳುವದೆಲ್ಲ ವ್ಯರ್ಥವು ಆದ್ದರಿಂದಲೇ ಸಮಾಧಾನವೆಂಬುದು ಅನಿರ್ವಾಚ್ಯವಾಗಿದೆಂದು ಹೇಳುತ್ತಾರೆ ಶಾಂತಿಯು ಅನಿರ್ವಾಚ್ಯವೆಂದು ಹೇಳುವಲ್ಲಿ ಇನ್ನೊಂದು ಕಾರಣವು ಹೀಗೆ ಇರುವದೆಂದು ಹೇಳುವದು ಶಾಬ್ದಿಕ ಕ್ರಿಯೆಯು ಶಬ್ದದಿಂದ ಅರ್ಥ ಜ್ಞಾನವಾಗುವದು ಇಲ್ಲವೆ ವಸ್ತುವಿನ ಭಾಸವಾಗುವದು ನಿಜವಿದ್ದರೂ ಆ ಶಬ್ದವು ಮಾಯಾಯುತವೂ ಜೊಳ್ಳಾಗಿಯೂ ಇರುವದರಿಂದ ಅದು ಪರಮಾರ್ಥ ಸ್ವರೂಪದ ವರೆಗೆ ಹೋಗಿ ಮುಟ್ಟುವದಿಲ್ಲ ತೌಡಿನ ಸಂಬಂಧ

ಬಿಟ್ಟುಕೊಂಡು ಧಾನ್ಯವುಹುಟ್ಟುವದು ಆದರ ಆ ಧಾನ್ಯವನ್ನು ತೆಗೆದುಕೊಂಡರ ಉಳಿಯುವ ತೌಡುಚಲ್ಲಲ್ಪಡುವದು ಈ ದೃಷ್ಟಾಂತದಂತೆ ಶಬ್ದದಿಂದ ಅರ್ಥ ಸಿಗುವದು ಅರ್ಥ ದೊರೆತ ಮೇಲೆ ಅದನ್ನು ಸ್ವೀಕರಿಸಿ ಶಬ್ದವನ್ನು ಬಿಡುವರು ಶಬ್ದಕ್ಕಿಂತಲೂ ಅದಕ್ಕಿರುವ ಅರ್ಥವು ಸೂರ್ವದ್ದಾದದ್ದರಿಂದ ಗಟ್ಟಿ ಕಾಳಿನಿಂದ ತೌಡು ಹಾರಿ ಹೋಗುವಂತೆ ಪರಬ್ರಹ್ಮನಿಂದ ಶಬ್ದವು ದೂರಾಗಿಯೇ ಇರುವದು ಶಬ್ದವು ಮಾತಿನಿಂದ ಹೊರಟರೆ ಅರ್ಥವು ಅದಕ್ಕಿಂತಲೂ ಮೊದಲಿಗೇ ಇರುವದು ಎಂದ ಮೇಲೆ ಅವೆರಡರ ಸಾದೃಶ್ಯವು ಸರಿಯಾಗಲಾರದು ತೌಡು ಚೆಲ್ಲಿ ಕಾಳನ್ನು ತೆಗೆದುಕೊಳ್ಳುವಂತೆ ವಾಚ್ಯಾಂಶವನ್ನು ಬಿಟ್ಟು ಲಕ್ಷ್ಯಾಂಶವನ್ನು ಸ್ವೀಕರಿಸಬೇಕು ಅಂದರೆ ಸ್ವಾನುಭವವು ನಿರ್ಮಲವಾಗುವದು

ಇನ್ನು ವಾಚ್ಯಾಂಶವೆಂದರೆ—ದೃಶ್ಯ ವಸ್ತುವಿನ ಹೊರತು ನುಡಿಯುವದು ಆದರ ಅರ್ಥವನ್ನು ತಿಳಿಯುವದೇ ಲಕ್ಷ್ಯಾಂಶವು ಇದೇ ಶುದ್ಧ ಲಕ್ಷ್ಯಾಂಶವು ಇದನ್ನು ಪೂರ್ವಪಕ್ಷವೆಂದು ತಿಳಿಯಬೇಕು ಸ್ವಾನುಭವವು ಅಲಕ್ಷ್ಯವು ಅದನ್ನು ಕಂಡು ಹೇಳಲಿಕ್ಕೆ ಬರಲಾರದು ಬ್ರಹ್ಮಜ್ಞಾನಕ್ಕಾಗಿ ಅತಿ ಸೂಕ್ಷ್ಮವಾದ ಆಕಾಶವನ್ನು ಬ್ರಹ್ಮನಿಗೆ ಹೋಲಿಸುವರು ಆ ಬ್ರಹ್ಮರೂಪ ಆಕಾಶದಿಂದ ಅನುಭವವನ್ನು ನೋಸಿ ತೆಗೆದುಕೊಂಡಿದೆ ಈ ಅನುಭವ ರೂಪವಾದರೂ ಬ್ರಹ್ಮಕಲ್ಪನೆಯಿಂದಲೆ ಕಲ್ಪಿತವಾಗಿದೆ ಕಲ್ಪನೆ ಬೆಳೆ ಬೆಳೆದಂತೆ ಕಲ್ಪನೆಯೇ ತೋರುವದು ಮೂಲತಃ ಕಲ್ಪನೆಯು ಮಿಥ್ಯವು ಅಂದ ಮೇಲೆ ಕಲ್ಪನೆಯಿಂದ ಉಂಟಾದ ಅನುಭವವೂ ಮಿಥ್ಯವು ಅನುಭವದಿಂದ ತ್ರಿಪುಟಿಗಳು (ಅನುಭವಿತಾ, ಅನುಭಾವ್ಯ, ಅನುಭವ)ಹುಟ್ಟುವವು ಅನುಭವದಿಂದ ದ್ವೈತವುದಿಸುವದು ಈ ದ್ವೈತವು ಶುದ್ಧ ಸ್ವರೂಪದಲ್ಲಿ ಒಪ್ಪುವದಿಲ್ಲ ಆದ್ದರಿಂದ ಅನುಭವವು ಅನಿರ್ವಾಚ್ಯವು ಸೂರ್ಯನಿಂದ ಹಗಲು-ರಾತ್ರಿಗಳ ಪರಿಮಿತಿಯು ಆದರೆ ಸೂರ್ಯನೇ ಇಲ್ಲದಾಗಲು ಅದಾವದೂ ಉಳಿಯುವದಿಲ್ಲ ಶಬ್ದ ಹಾಗು ನಿಶ್ಶಬ್ದ(ಮೌನತ್ವ)ಗಳ ವಿಚಾರವು ಮೂಲ ಓಂಕಾರದಿಂದ ಧ್ವನಿತವಾಗುವದು ಆದರೆ ಆ ಓಂಕಾರವಿಲ್ಲದಾಗಲು ಉಚ್ಚಾರವೆಂತಾಗುವದು? ಒಟ್ಟಿನ ಮೇಲೆ ಅನುಭವವು ತ್ರಿಪುಟಿಯಲ್ಲಿಯದೇ ಆದುದರಿಂದ ಅದು ಮಾಯಾಂತರ್ಗತ

ವಾಗಿರುವದು ಆದರೆ ಸ್ವರೂಪದಲ್ಲಿ ಮಾಯೆಯಿರದ್ದರಿಂದ ಅನುಭವವು ಅದೆಲ್ಲಿ ಸಿಗುವದು? ವಸ್ತುವಿನಿಂದ ನಾನು ಬೇರೆಯಾಗಿರದಿದ್ದರೆ ಅನುಭವದ ವಿವೇಕವನ್ನು ಹೇಳುವದೆಂತು? ಭಿನ್ನತೆ, ಭೇದ, ದ್ವೈತಭಾವಗಳು ಮಾಯೆಯಿಂದ ಜನಿತಗಳು ಆ ಮಾಯೆಯು ವಂಧ್ಯಾಪುತ್ರನೆಂಬುವ ಮಾತಿನಂತೆ ಮಿಥ್ಯವಾಗಿರುವದು 'ವಸ್ತುವಿನಿಂದ ನಾನು ಅಭಿನ್ನನು' ಎಂಬ ಸ್ವರೂಪ ಸಮಾಧಾನವು ಹೇಳಲು ಬರುವಂತಿಲ್ಲ ಅಂದರೆ ಅದು ಅನಿರ್ವಾಚ್ಯವಾಗಿದೆ

ಇನ್ನು ಸ್ವರೂಪದಲ್ಲಿ ಜನ್ಮ, ಬಂಧ, ಮೋಕ್ಷ ಮೊದಲಾದವು ಏನೊಂದಿಲ್ಲ ಆ ಸ್ವರೂಪವು ತಾನೇ ಸಮಾಧಾನರೂಪವಾಗಿರುವದು ಹಾಗು ಸಹಜವಾಗಿ ಅದು ಅಭಿನ್ನತ್ವವಾಗಿಯೇ ಇರುವದು ಆದಕ್ಕೆ ಸೃಷ್ಟಿ ಸಂಸಾರಗಳ ಪರಿವೆಯೇ ಇಲ್ಲ, ಇದಕ್ಕೆ ಒಂದು ಕಥೆ:— "ಎಂದೂ ಜನ್ಮಕ್ಕೆ ಬಾರದವನೊಬ್ಬನು ಸ್ವಪ್ನದಲ್ಲಿ ಸ್ವಪ್ನವನ್ನು ಕಂಡನು ಅವನು ಮೊದಲನೆಯ ಸ್ವಪ್ನವಾದ ಸಂಸಾರಕ್ಕೆ ಬೇಸತ್ತನು ಬಳಿಕ ಗುರುವಿಗೆ ಶರಣು ಹೋದನು ಆ ಗುರುಬೋಧೆ ಹೊಂದಿ ಮುಕ್ತನಾದಂತೆ ಪ್ರತಿ ಸ್ವಪ್ನ ಕಂಡನು ಇಷ್ಟರಿಂದ ಆತನು 'ಸಂಸಾರ ತಾಪದಿಂದ ಬೆಂದು ನಾನು ಗುರುವಿಗೆ ಶರಣು ಹೋದೆನು ಅವರ ಉಪದೇಶದಿಂದ ಸಂಸಾರ ದೂರಾಗಿ ನನ್ನ ಅಜ್ಞಾನವು ಕಳೆಯಿತು ನಾನು ಜ್ಞಾನಿಯಾದೆನು' ಎಂದು ಹೇಳುವದರಿಂದ ಇದ್ದದೆಲ್ಲವೂ ಇಲ್ಲದಾಯಿತು, ಇಲ್ಲದ್ದು ಇಲ್ಲವೇ ಇಲ್ಲ, 'ಇದೆ' 'ಇಲ್ಲ' ಇವೆರಡೂ ಹೋಗಿ ಏನೂ ಇಲ್ಲದಾಯಿತು, ಎಂಬಂತಾಯಿತು ಇದರಿಂದ ಪಂಚಭೌತಿಕ ದೃಶ್ಯಗಳೆಲ್ಲ ವಿವೇಕದಿಂದ ದೂರಾದವು ಶೂನ್ಯತ್ವದ ಆಚೆಗಿರುವ ಶುದ್ಧ ಜ್ಞಾನವು ಅವನಿಗಾಯಿತು ಆದರಿಂದ ಅವನಿಗೆ ಸಮಾಧಾನವಾಯಿತು ಮತ್ತು ಐಕ್ಯ ರೂಪದಲ್ಲಿ ಅಭಿನ್ನ ಸಹಜ ಸ್ಥಿತಿಯನ್ನು ಅವನು ಹೊಂದಿದನು ಈ ಪ್ರಕಾರ ದ್ವೈತಭಾವನೆಯ ನಿದ್ರೆ ದೂರಾಗಿ ಅವನು ಜಾಗೃತನಾದನು "

ಈ ಮೇಲಿನ ಕಥೆಯನ್ನು ಹೇಳಿ ಗುರುಗಳು — "ಪರಮಾರ್ಥದಲ್ಲಿ ಮನಸು ತೊಡಗಿಸಿ ಉಂಟಾದ ಸಮಾಧಾನದ ಗುಟ್ಟನ್ನು ಅದರ ಲಕ್ಷಣದಿಂದ ತಿಳಿಯಬೇಕು ಕಥೆಯಲ್ಲಿ ಹೇಳಿದ ಅಜನ್ಮನು ಹೇಳಿದ 'ಜ್ಞಾನ

ಗಳೆಲ್ಲ ಸ್ವಪ್ನವಾಗಿಯೇ ಹೋದವು ಆ ಅಜನ್ಮನು ಹೇಳಿದ ಅನುಭವ ಗಳೆಲ್ಲ ಅವನ ಬಡಬಡಿಕೆಗಳಂತಾಗಿ ಸ್ವಪ್ನದಲ್ಲಿಯ ಸ್ವಪ್ನವತ್ತಾಗಿ ಬಿಟ್ಟವು ಕೊನೆಗೆ ಶಬ್ದಾತೀತವಾದ ಅನಿರ್ವಾಚ್ಯ ಸುಖ ಮಾತ್ರ ಉಳಿಯಿತು ಆ ಅಜನ್ಮನು ವಸ್ತುತಃ ಶಬ್ದರಹಿತ ಐಕ್ಯತೆ, ಅನುಭವಿಸದ ಅನುಭವ, ಈ ಪ್ರಕಾರ ಅದ್ವೈತ ಸ್ವರೂಪದಲ್ಲಿರುವಾಗಲೇ ನಾನು ಜಾಗೃತನಾದೆನು ಮುಂತಾಗಿ ಹೇಳಿದ ಹೇಳುವಿಕೆಗಳೆಲ್ಲ ಜೊಳ್ಳುಗಳಾದವು" ಎಂದರು

ಬಳಿಕ ಶಿಷ್ಯನು— 'ಆ ಅಜನ್ಮನ ಹೇಳಿಕೆಯನ್ನು ಹೇಳುವಲ್ಲಿರುವ ನಿಮ್ಮ ಮರ್ಮವನ್ನು ನನಗೆ ಅನುಭವವಾಗುವಂತೆ ಬೋಧಿಸಬೇಕು' ಎನ್ನಲು ಗುರುಗಳು—

'ನೀನೇ ಅಜನ್ಮವಿರುವಿ, ಬಂಧ-ಮೋಕ್ಷಗಳಿಂದ ಅತೀತನಾಗಿರುವಿ, ಸಹಜಸ್ವರೂಪನಾಗಿರುವಿ, ಮೇಲಿನ ಕಥೆಯು ನಿನಗೆ ಅನ್ವಯಿಸಿಯೇ ಹೇಳಿರುವದು ಹೇಗೆಂದರೆ —

'ಸ್ವಪ್ನದಲ್ಲಿ ಕಂಡ ಸ್ವಪ್ನ'ದಂತೆಯೇ ಸಂಸಾರವಿರುವದೆಂಬದನ್ನು ನೀನು ಸಾರಾಸಾರ ವಿಚಾರದಿಂದ ತಿಳಿದುಕೊಳ್ಳುವಿ, ಸದ್ಗುರುವಿಗೆ ಶರಣು ಬಂದಿರುವಿ, ಶುದ್ಧ ನಿರೂಪಣವನ್ನು ಕುರಿತು ನೀನು ಪ್ರತ್ಯಕ್ಷ ಊಹಾ ಪೋಹ ಮಾಡುವಿ, ನನಗೆ ನಿವಾಂತವಾದ ವಿಶ್ರಾಂತಿ ಸ್ಥಾನವು ದೊರೆ ಯಿತು, ನಾನು ಎಚ್ಚರಾದೆ, ಎಂದೆನ್ನುವಿ ಈಗ ಎಚ್ಚರಾದೆ ಎನ್ನುವದು ಜಾಗೃತಿಯಲ್ಲ ಇದು ಭ್ರಾಂತಿಯೇ ಆಗಿರುವದು ಇನ್ನೂ ನೀನು ಚೇತನ ಗೊಂಡಿಲ್ಲ ನಿನ್ನ ಅನುಭವದ ರುಚಿಯನ್ನು ನೀನು ಹೇಳುವದನ್ನು ಬಿಡುವ ವರೆಗೆ ಹಾಗು ನಿನಗೆ ಜಾಗೃತದ ಕಲ್ಪನೆಯಿರುವವರೆಗೆ ನೀನು ಸ್ವಪ್ನ ದಲ್ಲಿಯೇ ಇರುವಿ ಹಾಗು ನಿನ್ನ ಭ್ರಾಂತಿಗೊಳಗಾಗಿಯೇ ಇರುವಿ ಎಂದು ನಾವು ಹೇಳುವೆವು ನಿನ್ನ ಈ ಜಾಗೃತಿಯು ಭ್ರಮೆ ರೂಪ ಸ್ವಪ್ನದಲ್ಲಿಯದು 'ನಾನು ಮೌನ ವ್ರತಸ್ಥನು' ಎಂದು ಯಾವ ನೊಬ್ಬನು ಹೇಳಹತ್ತಲು ಅವನು ನಿಜವಾದ ಮೌನವ್ರತಸ್ಥನೇ ಆಗ ಲಾರನು ಅದರಂತೆ ನೀನು 'ನಾನು ಅನುಭವರೂಪನು' 'ನಾನು ಜಾಗ್ರತನಾಗಿರುವೆನು' ಹೀಗೆ ನಾನು ಹೇಳಿಕೊಳ್ಳುವ ವರೆಗೆ ನೀನು ಅನು ಭವಿಯಲ್ಲ ಹಾಗು ಜಾಗೃತನಾಗಿರುವನಿಲ್ಲ ಎಂದು ತಿಳಿ ಜಾಗೃತಿಯು

ನಂತರ ನೀನು ಹೇಳುವದೆಲ್ಲ ವ್ಯರ್ಥವು ಇಷ್ಟೇ ಅಲ್ಲ ಅದು ವಿವೇಕವನ್ನು ಹಿಡಿತದಿಂದ ತಪ್ಪಿಸಿ ಬಿಡುವದು. ಆದ್ದರಿಂದಲೇ ಸಮಾಧಾನವನ್ನು ಶಬ್ದದಿಂದ ಹೇಳಲಿಕ್ಕೆ ಬರಲಾಗದು. ನಿಶ್ಯಬ್ದದ ಪರಿಚಯವನ್ನು ಇದರಿಂದ ಅರಿತುಕೊಳ್ಳಬೇಕು" ಎಂದು ಬೋಧಿಸಿದರು.

ಇತಿ ದಾಸಬೋಧೆಯ ೬ನೇ ಶತಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೭ನೆಯ ದಶಕ (ಬ್ರಹ್ಮ ದಶಕ)

### ಶ್ರೀ ರಾಮ ॥ ೧ ಚತುರ್ದಶ ಬ್ರಹ್ಮ ॥ ಮಂಗಲಾಚರಣ

ಶ್ರೀ ಮನ್ಮಹಾಗಣಪತಿಯು ವಿದ್ಯಾವಂತರಿಗೆ ಆದ್ಯನು, ಗಜಾನನನು, ಏಕದಂತನು, ತ್ರಿಗುಣಾತೀತನು, ಚತುರ್ಭುಜನು, ಕೊಡಲಿಯನ್ನು ಹಿಡಿದವನು, ಸಂಪದಧಿಪ ಕುಬೇರನಂತೆಯೂ, ಪರಮಾರ್ಥ ಮೂಲ ವೇದಗಳಂತೆಯೂ, ಸಿರಿವಂತರಿಗಾರಾಧ್ಯ ದೇವತೆ ಲಕ್ಷ್ಮಿಯಂತೆಯೂ ಶ್ರೀ ಗಣಪನು ಸಕಲ ವಿದ್ಯಾ ಪ್ರಸರಣಕ್ಕೆ ಮೂಲ ಪುರುಷನಾಗಿ ಶೋಭಿಸುವನು, ಜನರಲ್ಲಿ ಗದ್ಯ—ಪದ್ಯ ಕುಶಲತೆಯನ್ನು ಪ್ರಕಟಿಸಿದನು ಸಮರ್ಥರ ಮಗುಗಳು ಹಲವು ಅಲಂಕಾರಗಳಿಂದ ಸುಂದರರಾಗಿರುವಂತೆ ಮಂಗಳ ಮೂರ್ತಿಯಾದ ಈ ಮೂಲ ಪುರುಷನಿಂದ ಕವಿಗಳು ಶೋಭಿಸುವರು ಇಂಥ ಸಲ್ಲಕ್ಷಣಯುತ ಗಣ ಶ್ರೇಷ್ಠನೇ ನಿನಗೆ ನಮುಸ್ಕಾರವು, ವಿದ್ಯೆಗಳನ್ನು ಬೆಳಗಿಸುವ ಪೂರ್ಣ ಚಂದ್ರನಂತಿರುವನಿಂದ ಉಪದೇಶವೆಂಬ ಸಾಗರವು ಉಕ್ಕೇರಿ ಮೇರೆದಪ್ಪುವದು ದೇವಾ! ನೀನೇ ಕರ್ತೃತ್ವಕ್ಕೆ ಆರಂಭನು, ನೀನೇ ಮೂಲ ಪುರುಷನಾದ ಮೂಲಾರಂಭನು, ನೀನೇ ಆದ್ಯಂತದಲ್ಲಿ ಸ್ವಯಂಭುವು, ಇಂಥ ಗಣಪತಿಯೇ ನಿನಗೆ ನನ್ನ ನಮುಸ್ಕಾರವು

ನಿನ್ನ ಇಚ್ಛೆಯಿಂದಲೇ ಸ್ಫೂರ್ತಿ ಪಡೆದ ಸ್ತ್ರೀಯಳಿಗೆ ಕುಮಾರಿ ಶಾರದೆ ಎಂಬ ಹೆಸರುಂಟಾಯಿತು ಸೂರ್ಯನಿಂದ ಮೃಗ ಜಲವು ಹುಟ್ಟಿ ಗೋದಾವರಿಯ ಪ್ರವಾಹದಂತೆ ನದಿಯ ರೂಪದಿಂದ ಹರಿಯುವದು ಅದರಂತೆ ಬ್ರಹ್ಮನಿಂದ ಶಾರದೆಯು ಜನಿಸಿದಳು ಸತ್ಯ ಸ್ವರೂಪ ಸೂರ್ಯನ ಯೋಗದಿಂದ ಅಸತ್ಯ ಮೃಗ ಜಲವು ತೋರುವಂತೆ ಬ್ರಹ್ಮಾಧಿಷ್ಠತೆಯಿಂದ ಗಣೇಶ–ಶಾರದೆಯರ ರೂಪದ ಮೂಲ ಮಾಯೆಯೂ ಅಸತ್ಯ ತೋರುವದು ಆ ಮಾಯೆಯು ಅಸತ್ಯವೆಂದು ಹೇಳಿದ ಕೂಡಲೇ ಅದು ತನ್ನ ಪಾಶದಲ್ಲಿ ಹಿಡಿದುಕೊಳ್ಳುವದು ಆ ಮಾಯೆಯು ಮಾಯಿಕವಾ

ಗಿರುವದಲ್ಲದೆ ಲಘುತ್ವವುಳ್ಳದಿರುವದು ಬ್ರಹ್ಮ ಬೋಧಿಸುವವನನ್ನು ನುಗ್ಗಿ ಯುತ್ತುವದು, ದ್ವೈತವನ್ನು ಹುಟ್ಟಿಸುವದು, ಮತ್ತು ಅದರ ಯೋಗ ದಿಂದಲೇ ದ್ವೈತ ನಿರಸನನಾಗಿ ಅದ್ವೈತ ಲಭಿಸುವದು ಇಂಥ ಮೂಲ ಮಾಯೆಯು ಅನಂತ ಬ್ರಹ್ಮಾಂಡಗಳನ್ನು ತನ್ನಲ್ಲಿ ಒಳಕೊಂಡಿದೆ. ಪಾವಿತ್ರ್ಯತೆಯಿಂದ ಆ ಮೂಲ ಮಾಯೆಯನ್ನು 'ಔದುಂಬರ ಬಳ್ಳಿ' ಎಂದು ಸಂಭೋಧಿಸಬಹುದು ಈ ಬಳ್ಳಿ ಸ್ವರೂಪದ ಮೂಲ ಮಾಯೆಗೆ ಅನಂತ ಬ್ರಹ್ಮಾಂಡಗಳೆಂಬ ಹಣ್ಣುಗಳು ಜೋತು ಬಿದ್ದಿರುವವು ಈ ಮೂಲ ಮಾಯೆಯು ಮೂಲ ಪುರುಷ ಬ್ರಹ್ಮನ ತಾಯಿಯೂ ಅಹುದು, ಮಗಳೂ ಅಹುದು ಇಂಥ ಮೂಲ ಮಾಯೆಯನ್ನು ಅಂದರೆ ವೇದ ಮಾತೆಯೂ ಆದಿ ಪುರುಷನ ಶಕ್ತಿಯೂ ಎನ್ನಿಸುವ ಶಾರದೆಯನ್ನು ವಂದಿಸುವೆನು.

ಇನ್ನು ಸದ್ಗುರು ಸಮರ್ಥನನ್ನು ಸ್ಮರಿಸುವೆನು ಆ ಗುರುವಿನ ದಯಾ ದೃಷ್ಟಿಯಿಂದ ಆನಂದದ ದೃಷ್ಟಿಯಾಗುವದು ಅದರಿಂದ ಸೃಷ್ಟಿ ಯೆಲ್ಲವೂ ಸುಖಮಯವಾಗುವದು ಹಾಗು ಆನಂದದಿಂದ ತುಂಬಿ ತುಳು ಕಾಡುವದು ಆ ಸದ್ಗುರುವು ಸಾಮಾನ್ಯನಲ್ಲ ಅವನೇ ಸಂತೋಷದ ಜನಕನು, ಅವನೇ ಸಾಯುಜ್ಯ ಮುಕ್ತಿಯ ಒಡೆಯನು ಕೈವಲ್ಯ ಪದ ನೀಡುವವನೂ ಅನಾಥ ಬಂಧುವೂ ಅವನೇ ಆಗಿರುವನು

ಮುಮುಕ್ಷುಗಳೆಂಬ ಜಾತಕ ಪಕ್ಷಿಗಳು ಸುಸ್ವರಗೈಯ್ಯುತ್ತ ಕರುಣಾ ದೃಷ್ಟಿಯಿಂದ ಆಕಾಶ ನಿರೀಕ್ಷಿಸುವಂತೆ ಬ್ರಹ್ಮನನ್ನು ಕಾಣಲು ತವಕ ಪಡುತ್ತಿರಲು ಸದ್ಗುರುವಿನ ಕೃಪೆಯೆಂಬ ಮೋಡವು ಆ ಸಾಧಕ ಜಾತಕ ಗಳ ಮೇಲೆ ಮುಕ್ತಿಯೆಂಬ ಮಳೆ ಸುರಿಸುವದು ಆ ಸದ್ಗುರುವು ಭವ ಸಾಗರವನ್ನು ದಾಟಲು ಭಾವಿಕರಿಗೆ ತನ್ನ ಬೋಧೆಯೆಂಬ ನೌಕೆಯಿಂದ ಆಧಾರನಾಗಿರುವನು ಆ ಗುರುವು ಕಾಲನನ್ನು ನಿಯಂತ್ರಿಸಿ ಸಂಕಟ ದಿಂದ ಪಾರು ಮಾಡುವನು ಮತ್ತು ಭಾವಿಕರಿಗೆ ಮಮತೆಯ ತಾಯಿ ಯಂತಾಗಿರುವನು ಆ ಸದ್ಗುರುವು ಪರಲೋಕಕ್ಕೆ ಆಧಾರನಾಗಿಯೂ, ವಿಶ್ರಾಂತಿಯ ರಮ್ಯ ಸ್ಥಾನನಾಗಿಯು, ಸುಖಕ್ಕೆ ತೌರಮನೆಯಾಗಿಯೂ, ಆನಂದ ಸ್ವರೂಪನೂ ಆಗಿರುವನು ಸದ್ಗುರು ಕೃಪೆಯಿಂದ ಭೇದ ಭಾವ

ವು ಅಡಗುವದು, ಆತನ ಚರಣಕ್ಕೆ ದೇಹ ಬುದ್ಧಿಯನ್ನು ಬಿಟ್ಟು ನಮ ಸ್ಕರಿಸುವೆನು.

ಇನ್ನು ಸಾಧು ಸಂತರಿಗೂ ಶ್ರೋತೃಗಳಿಗೊಂದಿಸುವೆನು ಸಂಸಾರ ರೂಪವಾದ ದೀರ್ಘಸ್ವಪ್ನದಲ್ಲಿ ಜಡಜೀವನವು ನನ್ನ ಹೆಂಡತಿ, ನನ್ನಮಕ್ಕಳು ನನ್ನ ಸಂಪತ್ತು ಇತ್ಯಾದಿಯಾಗಿ ಬಡಬಡಿಸುವದು ಜ್ಞಾನಸೂರ್ಯನು ಅಸ್ತಂಗ ತನಾದಕೂಡಲೇ ಪ್ರಕಾಶವಡಗಿ ಬ್ರಹ್ಮಾಂಡದಲ್ಲೆಲ್ಲ ತಮಂಸ್ಸೆಬ ಕತ್ತಲೆ ಯಿಂದಿಡುಗುವದು. ಏನೊಂದು ಮಾರ್ಗ ತೋರಿಸುವ ಸತ್ವಗುಣವೆಂಬ ಬೆಳ್ದಿಂಗಳು ಕಾಣಿಸುವದಿಲ್ಲ, ಮತ್ತು ಈ ಭ್ರಾಂತಿಯಿಂದ ನಮ್ಮ ಸ್ವರೂಪವೇ ನಮಗೆ ಕಾಣಿಸದಂತಾಗಿದೆ ದೇಹಾತ್ಮ ಬುದ್ಧಿಯ ಅಹಂಕಾರದಿಂದಘೋರ ವಾಗಿ ನಿದ್ರಿಸುತ್ತಿದ್ದ ಜೀವನವು ವಿಷಯ ಸುಖಕ್ಕಾಗಿ ಒದರಾಡುತ್ತಿರುವದು ಮಾಯಾ ನಿದ್ರೆಯಲ್ಲಿದ್ದಾಗಲೇ ಅದು ಸಾಯುವದು, ಪುನಃ ಹುಟ್ಟುತ್ತಲೆ ಮಲಗುವದು ಮಾಯಾ ನಿದ್ರೆಯಲ್ಲಿಯೇ ಎಲ್ಲ ಪ್ರಸಂಚ ಸಾಗುವದು ಈ ಪ್ರಕಾರ ನಿದ್ರೆಯಲ್ಲಿಯೇ ಹಲವು ಜನ್ಮಗಳನ್ನೆತ್ತುವದು, ಮತ್ತು ಪರಮೇ ಶ್ವರನನ್ನು ತಿಳಿಯದೇ ಕಷ್ಟಪಡುವದು, ಈ ಕಷ್ಟ ದೂರಾಗುವದಕ್ಕೆ ಆತ್ಮ ಜ್ಞಾನವು ಅವಶ್ಯ ಅದಕ್ಕಾಗಿ ಆಧ್ಯಾತ್ಮ ಗ್ರಂಥ ನಿರೂಪಣೆ ಬೇಕು. ಅಧ್ಯಾತ್ಮ ವಿದ್ಯೆಯ ವಿಚಾರವು ಎಲ್ಲ ವಿದ್ಯೆಗಳ ಸತ್ವವೆನ್ನಿಸಿದೆ ಇದನ್ನೇ ಶ್ರೀಕೃಷ್ಣನು ಭಗವದ್ಗೀತೆಯ ಹತ್ತನೆಯ ಆಧ್ಯಾಯದಲ್ಲಿ 'ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್' ಎಂಬ ವಚನದಿಂದ ಸ್ಪಷ್ಟಗೊಳಿಸಿ ರುವನು. ಈ ಕಾರಣದಿಂದ ಅದ್ವೈತ ಗ್ರಂಥಗಳು ಪರಮಾರ್ಥಕ್ಕಾಗಿ ಆತ್ಮ ವಿದ್ಯೆಯನ್ನು ಬೋಧಿಸುವದಕ್ಕೆ ಸಮರ್ಥವಾದವುಗಳು ಚಂಚಲವೃತ್ತಿಯ ವರು ಈ ಗ್ರಂಥಗಳನ್ನೇ ತೆರೆದು ನೋಡಬಾರದು ಒಂದು ವೇಳೆ ಅವರು ಈ ಗ್ರಂಥಗಳನ್ನು ಪರಿಶೀಲನ ಮಾಡಹತ್ತಿದರೆ ಅವರಿಗೆ ಇವುಗಳಲ್ಲಿ ಯಾವ ಅರ್ಥವೂ ಹೊಳೆಯುವದಿಲ್ಲ ಪಾರಮಾರ್ಥಿಕ ಬಯಸುವವರು ಈ ಗ್ರಂಥ ಗಳನ್ನು ಪರಿಶೀಲನ ಮಾಡುವದರಿಂದ ಅವರಿಗೆ ನಿಶ್ಚಯವಾಗಿ ಪರಮಾರ್ಥ ದೊರಕುವದು ಪರಮಾರ್ಥ ವಿಷಯಕ್ಕೆ ಮತಿಯಿಲ್ಲದವರಿಗಂತೂ ಈ ಗ್ರಂಥ ಗಳ ಅರ್ಥಬೋಧೆಯಾಗುವದೇ ಇಲ್ಲ ಕುರುಡನ್ನು ನಿಧಿಯನ್ನು ಕಾಣನು ಅಂತೆಯೇ ಆವರಗತಿಯಾಗುವದು ಈ ಗ್ರಂಥವು ಮಹಾರಾಷ್ಟ್ರ ಭಾಷೆಯಲ್ಲಿ

ಬರೆದಿದೆ ಎಂದು ಮೂಗು ಮುರಿಯುವವರು ಮತಿಯಿಲ್ಲದ ಮೂರ್ಖರು ಅಂಧವರಿಗೆ ಅರ್ಥಾನ್ವಯಗಳ ಜ್ಞಾನವೇ ಬರುವದಿಲ್ಲ ಕಬ್ಬಿಣದ ಪೆಟ್ಟಿಗೆಯನ್ನು ಮಾಡಿ ಅದರಲ್ಲಿ ತುಂಬಾ ರತ್ನಗಳನ್ನು ಹಾಕಿ ಬಾಯಿ ಮುಚ್ಚಿ ಮಾರ್ಗದಲ್ಲಿಡಲು ನಿರ್ಭಾಗ್ಯರು ಅದನ್ನು ಇದು ಕಬ್ಬಿಣದ್ದೆಂದು ಸ್ವೀಕರಿಸದೆ ಬಿಡುವರು ಅದರಂತೆ ಈಗ್ರಂಥದ ಭಾಷೆಯು ಪ್ರಾಕೃತವಾದದ್ದೆಂದು ತಿಳಿದು ಇದರೊಳಗಿನ ಅರ್ಥ, ವೇದಾಂತ, ಸಿದ್ಧಾಂತಗಳನ್ನು ತಿಳಿಯದೆ ತ್ಯಾಗಮಾಡಿ ಬಿಟ್ಟರೆ ಅವರು ನಿಜಕ್ಕೂ ಭ್ರಾಂತರು ಹಾಗು ಮಂದಮತಿಗಳು ಅನಾಯಾಸವಾಗಿ ಧನ ದೊರೆಯಲು ಅದನ್ನು ತ್ಯಾಗಮಾಡುವದು ಮಹಾ ಮೂರ್ಖತನವು, ಆಗ ಇನ್ನೊಂದನ್ನೆಣಿಸದೆ ಅದನ್ನು ಸ್ವೀಕರಿಸಿ ಧನಸಂಚಯ ಮಾಡಿಕೊಳ್ಳಬೇಕು ಅಂಗಳದಲ್ಲಿ ಬಿದ್ದ ಪರಿಸಗಲ್ಲು, ಹಾದಿಯಲ್ಲಿ ಚೆಲ್ಲಿಕೊಟ್ಟ ಚಿಂತಾರತ್ನವು ಹಾಗು ಬಾವಿಯಲ್ಲಿದ್ದ ಬಹು ಗುಣವುಳ್ಳ ಬಲಮೂಡಿಯ ಶಂಖವು ಇವುಗಳನ್ನು ಯಾರಾದರೂ ಬಿಡುವದುಂಟೇ? ಅದರಂತೆ ಪ್ರಾಕೃತ ಭಾಷೆಯಲ್ಲಿ ಬರೆದ ಸುಗಮ ಹಾಗು ಅನುಭವಪೂರಿತ ಅದ್ವೈತ ಗ್ರಂಥಗಳನ್ನು ಸ್ವೀಕರಿಸಿ ಶ್ರವಣ-ಮನನ ಮಾಡಲು ಅಕಸ್ಮಾತ್ತಾಗಿ ಅಧ್ಯಾತ್ಮವು ಲಭಿಸುವದು ಆದ್ದರಿಂದ ಅವಶ್ಯವಾಗಿ ಈ ಗ್ರಂಥ ಸ್ವೀಕರಿಸಲೇ ಬೇಕು ಈ ಗ್ರಂಥಕ್ಕಾಗಿ ಏನೊಂದು ವ್ಯುತ್ಪತ್ತಿಯನ್ನು ದೊರಕಿಸಲು ಶ್ರಮ ಪಡಬೇಕಾಗುವದಿಲ್ಲ ಇದರಿಂದ ಶಾಸ್ತ್ರಗಳು ದುರ್ಗಮವೆನ್ನಿಸುವದಿಲ್ಲ ಸತ್ಸಮಾಗಮದ ಮರ್ಮ ವಿದಿತವಾಗುವದು ವ್ಯುತ್ಪತ್ತಿಯಿಂದ ತಿಳಿಯಲಾರದ ಸಂಗತಿಗಳು ಆ ಸತ್ಸಮಾಗಮದಿಂದ ತಿಳಿಯುವವು ಹಾಗು ಅರ್ಥ ಶಾಸ್ತ್ರಗಳು ಸ್ವಾನುಭವಕ್ಕೆ ಗೋಚರವಾಗುವವು ಈ ಕಾರಣದಿಂದ ಸತ್ಸಮಾಗಮವು ಅತ್ಯವಶ್ಯ ಆದರಿಂದ ವ್ಯುತ್ಪತ್ತಿಯ ಶ್ರಮ ಉಳಿಯುವದಲ್ಲದೆ ಜನ್ಮ ಸಾರ್ಥಕತೆಯ ಮರ್ಮವೂ ಗೊತ್ತಾಗುವದು ಈ ಮರ್ಮವು ಭಾಷಾ ಭೇದವಾದರೂ ಬದಲಾಗುವದಿಲ್ಲ ಅರ್ಥದಿಂದಲೇ ಎಲ್ಲ ಕಾರ್ಯ ಸಿದ್ಧಿಸುವವು ಇದು ಪ್ರಾಕೃತವಿದ್ದರೂ ಸಂಸ್ಕೃತ ಭಾಷೆಯ ಗೌರವಕ್ಕೆ ಕುಂದು ತಂದಿರುವದಿಲ್ಲ ಈ ಗುಪ್ತಾರ್ಥವನ್ನು ಯಾರೂ ನೋಡಿರುವದಿಲ್ಲ ಇನ್ನು ಇದಿರಲಿ ಭಾಷೆ ಮತ್ತು ಅರ್ಥ ಇವುಗಳಲ್ಲಿ ಅರ್ಥವೇ ಮಹತ್ವವಾದುದು ಹಣ್ಣಿನ ತಿಳಲು ತಿಂದು ಸಿಪ್ಪೆಯನ್ನು ಚೆಲ್ಲಿಕೊಟ್ಟರೂ ಅರ್ಥವನ್ನು ಸ್ವೀಕರಿಸಬೇಕು ಅರ್ಥ

ದಲ್ಲಿ ಸತ್ವವಿರುವಂತೆ ಭಾಷೆಯಲ್ಲಿಲ್ಲ. ಕೇವಲ ಭಾಷಾಭಿಮಾನವೆಂದು ಪ್ರಯತ್ನಿಸುವಲ್ಲಿ ಅನೇಕ ಬಗೆಯ ಅಹಂತೆಯ ಮಾರ್ಗಗಳು ದಿಸುವವು ಅದರಿಂದ ಮೋಕ್ಷಕ್ಕೆ ತೊಂದರೆಯಾಗುವದು ಲಕ್ಷ್ಯಾರ್ಥವನ್ನು ಹುಡುಕುತ್ತಿರುವ ವಾಚ್ಯಾರ್ಥವು ಏನು ಉಪಯೋಗ ? ಭಗವಂತನ ಮಹಿಮೆ ಲಕ್ಷ್ಯಾಂಶದಂತಿದೆ ಅದನ್ನೇ ತಿಳಿದುಕೊಳ್ಳಬೇಕು ಮೂಕನ ಭಾಷೆಯು ಮೂಕನಿಗೇ ತಿಳಿಯುವದು. ಸ್ವಾನುಭವದ ಸುಖವು ಅದನ್ನು ಅನುಭವಿಸುವವನಿಗೇ ಗೊತ್ತು. ಅಧ್ಯಾತ್ಮದ ಅರ್ಥವನ್ನು ಸರಿಯಾದ ಬಗೆಯಿಂದ ತಿಳಿದುಕೊಳ್ಳುವ ಶ್ರೋತೃಗಳೆಷ್ಟು ಜನರು ? ಇಂಥವನು ಯಾವನಾದರೂ ಕಂಡುಬಂದರೆ ನನಗೆ ಬಲು ಸಂತೋಷ ರತ್ನ ಪರೀಕ್ಷಕನಿಂದ ರತ್ನದ ಪರೀಕ್ಷೆಯಾದರೇ ಸಮಾಧಾನವುಂಟಾಗುವದು ಅದರಂತೆ ಜ್ಞಾನಿಯ ಮುಂದೆ ನಮ್ಮ ಜ್ಞಾನವನ್ನು ಹೇಳುವದರಲ್ಲಿ ಆನಂದವೆನ್ನಿಸುವದು ಮಾಯಾಜಾಲದಿಂದ ಆವೃತನಾದ ಸಂಸಾರಿಕನೆದರು ನಿರೂಪಣ ಮಾಡಲು ಅವನಿಗೆ ಜ್ಞಾನದ ಅರ್ಥವು ತಿಳಿಯಲಾರದು ಶ್ರೀ ಕೃಷ್ಣ ಭಗವಂತನು ಗೀತೆಯಲ್ಲಿ 'ವ್ಯವಸಾಯ ನಿರತನಾದವನಿಗೆ ಬೋಧೆ ತಿಳಿಯಲಾರದು ಅವನಲ್ಲಿ ಅತ್ಯಂತ ದಕ್ಷತೆಯಿರಬೇಕಾಗುವದು, ಎಂದು ಹೇಳಿರುವನು ರತ್ನ ನಾಣ್ಯಗಳನ್ನು ಸರಿಯಾಗಿ ನಿರೀಕ್ಷಿಸದೆ ತೆಗೆದುಕೊಳ್ಳಲು ಹಾನಿಯೊದಗುವದುಂಟು. ಅದನ್ನು ಪರೀಕ್ಷೆ ಮಾಡದೆ ಬಿಟ್ಟರೆ ಮೋಸ ಹೋಗಬೇಕಾಗುವದು ಇದೇ ಬಗೆಯಾಗಿ ಅರ್ಥ ಬೋಧೆಯ ಬಗ್ಗೆ ಇರುವದು ನಿರೂಪಣ ದೃಢತೆಯುಂಟಾಗುವದಕ್ಕೆಂದು ಮೇಲೆ ಮೇಲೆ ಶ್ರವಣ ಮಾಡಲು ಅನುಕೂಲವಾಗುವಂತೆ ನಮ್ಮ ಭಾಷೆಯಲ್ಲಿ ಗ್ರಂಥ ಬರೆದರೂ ತಿಳಿದುಕೊಳ್ಳಲಾರರು ಇಂಥವರು ಮೊದಲೇಗಹನವಾದಂಥ ಅಧ್ಯಾತ್ಮ ವಿಷಯವನ್ನು ಕಠಿಣವಾದ ಸಂಸ್ಕೃತ ಭಾಷೆಯಿಂದ ಬೋಧೆ ಮಾಡಿಕೊಳ್ಳುವಲ್ಲಿ ಅಸಮರ್ಥವಾಗುವರೆಂಬದು ನಾವು ತಿಳಿದ ಮಾತಾಗಿರುವದು ಶ್ರೋತೃಗಳು ಪರಮಾರ್ಥದಲ್ಲಿ ಚಿತ್ತ ದಕ್ಷತೆಯುಳ್ಳವರಾಗಬೇಕು ಇದೇ ಅಧ್ಯಾತ್ಮವು ಇದನ್ನು ನಿರೂಪಿಸುವ ಗ್ರಂಥಗಳೇ ಅಧ್ಯಾತ್ಮ ಗ್ರಂಥಗಳು

ಬ್ರಹ್ಮಜ್ಞಾನವಾಗುವ ಮೊದಲು ಮಾಯೆಯ ರೂಪ ತಿಳಿಯಬೇಕಾಗುವದು ಆ ಮಾಯೆಯು ಸಗುಣ, ಸಾಕಾರ, ಸರ್ವವಿಕಾರ, ಪಂಚಭೌತಿಕ

ವಿಸ್ತಾರ ಇವುಗಳಿಂದ ಯುಕ್ತವಾಗಿರುವದು ಅದರ ದೃಶ್ಯವು ದೃಷ್ಟಿಗೋಚರವಾಗುವದು ಅದರ ಆ ಭಾಸವು ಮನಕ್ಕಾಗ ವದು, ವಿವೇಕದಿಂದ ಆ ಮಾಯೆ ಕ್ಷಣಭಂಗುರವಾದದ್ದೆಂದು ತಿಳಿಯುವದು ಮತ್ತು ಈ ಮಾಯೆಯು ಅನೇಕ ವಿಶ್ವರೂಪಿಯು, ವಿಷ್ಣುವಿನ ಸ್ವರೂಪವು, ನಿಸ್ಸೀಮತೆಯುಳ್ಳದ್ದು ಮುಂತಾಗಿ ಎಷ್ಟು ಹೇಳಿದರೂ ಕಡಿಮೆಯೇ ಆಗಿರುವದು ಮಾಯೆಯು ಗುಣವು ರೂಪ-ವರ್ಣಗಳಿಂದ ಹಲವು ತೆರವಾಗಿರುವದು, ಅದು ಈಶ್ವರನ ಸಂಗತವಾಗಿರುವದು ಅದನ್ನು ಜ್ಞಾನಿಗಳು ಅಭಂಗ (ನಾಶವಿಲ್ಲ)ವಾದುದೆಂದು ತಿಳಿಯುವರು ಸೃಷ್ಟಿಯ ರಚನೆಯಲ್ಲಿ ಮಾಯೆಯು, ನಮ್ಮ ಕಲ್ಪನೆಯಲ್ಲಿ ಮಾಯೆಯು ಹೀಗಾಗಿ ಬಲು ವ್ಯಾಪಕವಾಗಿದೆ ನಿಜವಾದ ಜ್ಞಾನದಿಂದಲೇ ಆ ಮಾಯೆಯನ್ನು ಹೊಡೆದು ಹಾಕಬರುವದಲ್ಲದೆ ಇನ್ನಾವ ಬಗೆಯಿಂದ ಅದನ್ನು ನಾಶಪಡಿಸಲು ಬರಲಾರದು

ಇಂತು ಮಾಯೆಯ ಸಂಕೇತಗಳನ್ನು ಸ್ವಲ್ಪಮಟ್ಟಿಗೆ ಹೇಳಿತು ಮುಂದೆ ಶ್ರೋತೃಗಳು ಚಿತ್ತ ಸಾವಧಾನರಾಗಿ 'ಬ್ರಹ್ಮ ನಿರೂಪಣ'ವನ್ನು ಶ್ರವಣ ಮಾಡಬೇಕು ಅದರಿಂದುಂಟಾಗುವ ಬ್ರಹ್ಮಜ್ಞಾನದಿಂದ ಮಾಯಾ ಮೋಹವೆಲ್ಲ ಒಮ್ಮೆಲೇ ಹರಿದೋಡುವದು

ಶ್ರೀ ರಾಮ ॥ ೨ ಬ್ರಹ್ಮ ನಿರೂಪಣ ॥ "ಬ್ರಹ್ಮನು ನಿರ್ಗುಣನು, ನಿರಾಕಾರನು, ಸಂಗರಹಿತನು, ವಿಕಾರವಿಲ್ಲದವನು, ನಿಸ್ಸೀಮನು, ಈ ಪ್ರಕಾರವಾಗಿ ಸಾಧುಗಳು ಹೇಳುವರು ಮತ್ತೂ ಆ ಬ್ರಹ್ಮನು ಸರ್ವವ್ಯಾಪಿಯು,ಹಲವರಲ್ಲಿ ಒಬ್ಬನು, ಶಾಶ್ವತನು, ಇಂತು ಶಾಸ್ತ್ರಗಳೆಲ್ಲ ಹೇಳುವವು ಇದಲ್ಲದೆ—

ಬ್ರಹ್ಮನು ಚ್ಯುತಿರಹಿತನು, ಅಂತರಹಿತನು, ಸದಾನಂತನು, ನಿರ್ವಿಕಲ್ಪನು, ಕಲ್ಪನಾರಹಿತನು, ದೃಶ್ಯದಿಂದ ಬೇರೆಯಾಗಿರುವವನು, ಶೂನ್ಯದಿಂದ ಹೊರಗುಳಿದವನು, ನಿರಿಂದ್ರಿಯನು, ಅದೃಷ್ಟನು, ಮೂರ್ಖರಲ್ಲಿ ಇರದವನು, ಸಾಧುಗಳಿಲ್ಲದೆ ಅನುಭವಕ್ಕೆ ತಿಳಿಯದವನು, ಸರ್ವಶ್ರೇಷ್ಠನು, ಶ್ರೇಷ್ಠವಾದ ಸತ್ವವಾದವನು, ಸೂಕ್ಷ್ಮನು, ಬ್ರಹ್ಮಾದಿ ದೇವತೆಗಳೆಲ್ಲರಿಗೂ ಅಗೋಚರವಾದವನು

'ಬ್ರಹ್ಮ' ಶಬ್ದವನ್ನು ಹೇಳಿದ ರೀತಿಯನ್ನು ಹೊರತುಪಡಿಸಿ ಇವನು ಇರುವನು ಶ್ರವಣ ಬಲದಿಂದ ಆ ಬ್ರಹ್ಮನು ದೊರಕುವನು

ಬ್ರಹ್ಮನಿಗೆ ಅನಂತ ಹೆಸರುಗಳಿರುವವು ಆದರೂ ಅವನು ನಾಮಾತೀತನು ಆತನಿಗೆ ಉದ್ದೇಶ ದೃಷ್ಟಾಂತಗಳನ್ನು ಕೊಡುವದು ಶೋಭಿಸಲಾರದು.

ಬ್ರಹ್ಮನನ್ನು ಹೋಲುವ ಇನ್ನೊಂದು ನಿಜ ವಸ್ತುವಿಲ್ಲ ದೃಷ್ಟಾಂತಗಳು ಕೂಡ ಇರುವದಿಲ್ಲ ಶ್ರುತಿಗಳು ಸಹ ಬ್ರಹ್ಮಪ್ರಾಪ್ತಿಯ ವಾಙ್ಮನಗಳಿಂದಲೂ ಕೂಡ ಅಸಾಧ್ಯ' ಎಂದು ಸಿದ್ಧಾಂತವನ್ನು ಸ್ಥಾಪಿಸಿರುವವು ಮನಸು ಕಲ್ಪನೆಯುಳ್ಳದ್ದಾದರೆ ಬ್ರಹ್ಮನಲ್ಲಿ ಕಲ್ಪನೆಯಿಲ್ಲ ಆದ್ದರಿಂದ ಶ್ರುತಿಸಿದ್ಧಾಂತವು ಯೋಗ್ಯವಾದದು.

ಇನ್ನು ಮನಸ್ಸಿಗೆ ದೊರಕದ ವಸ್ತುವು ಕೈಗೆ ಸಿಗುವದೆಂತು ? ಎಂದು ಕೇಳಿದರೆ ಇದು ಸದ್ಗುರುವಿನ ಹೊರತು ಸಾಧ್ಯವಿಲ್ಲ ಎಂಬದಾಗಿ ಹೇಳುವೆವು. ತಿಜೋರಿಯಲ್ಲಿ ಹಣವನ್ನು ಇರಿಸಿ ಕೀಲಿಯನ್ನು ಹಾಕಿಬಿಟ್ಟರೆ ಇತರರಿಗೆ ಆ ಕೀಲಿಯನ್ನು ತೆಗೆಯಲಿಕ್ಕೆ ಬಾರದೆ ಆ ಹಣವು ಅವರಿಗೆ ಸಿಗಲಾರದು ಇಲ್ಲಿ ಬ್ರಹ್ಮಪ್ರಾಪ್ತಿ ಎಂಬ ತಿಜೋರಿಯು ಭದ್ರವಾಗಿರಿಸಿದೆ. ಅದರಲ್ಲಿಯ ಸಂಪತ್ತು ಸಿಗಬೇಕಾದರೆ ಅದರ ಕೀಲಿಯನ್ನು ತೆಗೆಯಬೇಕಾಗುವದು ಆ ಕೀಲಿಯೆಂದರೆ ಸದ್ಗುರುವಿನ ಕೃಪೆಯು ಅರ್ಥಾತ್ ಸದ್ಗುರು ಕೃಪೆಯಿಲ್ಲದೆ ಬ್ರಹ್ಮಪ್ರಾಪ್ತಿಯಿಲ್ಲ ಎಂದಾಯಿತು ಸದ್ಗುರು ಕೃಪೆಯಿಂದ ಬುದ್ಧಿ ಪ್ರಕಾಶಿತಗೊಳ್ಳುವದು ದ್ವೈತವೆಂಬ ಬಾಗಿಲು ಒಮ್ಮೆಲೆ ತೆರೆಯಲ್ಪಡುವದು ಬ್ರಹ್ಮಸುಖವು ಅಪಾರವಿದೆ ಅಲ್ಲಿ ಮನಕ್ಕೆ ಪ್ರವೇಶ ಮಾಡಲು ಆಸ್ಪದವಿಲ್ಲ, ಆ ಸುಖವು ಸಾಧ್ಯವಾಗುವದಕ್ಕೆ ಪಡುವ ಪ್ರಯಾಸವು ಮನಸ್ಸಿಗೆ ಸಂಬಂಧಿಸುವದಿಲ್ಲ ಅಂದರೆ ಮನಸ್ಸಿನ ಸಹಾಯವಿಲ್ಲದೆ ಆ ಸುಖವು ಸಿಗುವದು, ಯಾವ ವಾಸನೆಗಳು ಇಲ್ಲದೆ ತೃಪ್ತಿ ಸುಖವುಂಟಾಗುವದು ಅಲ್ಲಿ ಕಲ್ಪನೆಯ ವ್ಯುತ್ಪತ್ತಿಗಳು ನಡೆಯಲಾರವು, ಆ ಬ್ರಹ್ಮ ಸುಖವು ಪರತರವಾಗಿಯೂ ಮನ-ಬುದ್ಧಿಗಳಿಗೆ ಅಗೋಚರವಾಗಿಯೂ ಇರುವದು. ಅದು ನಿಸ್ಸಂಗನಿಗೆ ತೀವ್ರ ಸಿಗುವದು ಆದ್ದರಿಂದ ಅನುಭವಿಗಳು– ಸಂಗರಹಿತರಾಗಿ ಬಳಿಕ ಆ ಬ್ರಹ್ಮನನ್ನು ಕಾಣಬೇಕು, ಅಂದರೆ ಬ್ರಹ್ಮಸುಖ ದೊರೆಯುವದೆಂದು ಹೇಳುವರು ತಾನೆಂದರೆ 'ನಾನು', ನಾನೆಂದರೆ ಜೀವ 'ಜೀವ'ವೆಂದರೆ 'ಅಜ್ಞಾನ' ಈ ಅಜ್ಞಾನವು ಸಂಗದಿಂದ ಕೂಡಿರುವದು ಸಂಗವನ್ನು ಬಿಟ್ಟರೆ ನಿಸ್ಸಂಗವಾಗಿ ಐಕ್ಯತೆಯುಂಟಾಗುವದು ಅನಂತರ ಕಲ್ಪನೆಯಿಲ್ಲದಷ್ಟು ಅಧಿಕಾರವು

ಪ್ರಾಪ್ತವಾಗುವದು, ನಾನು ಯಾರು ?' ಎಂಬದನ್ನು ತಿಳಿಯದಿರುವದೇ ಅಜ್ಞಾನವು ಈ ಅಜ್ಞಾನನಿವೃತ್ತಿಯಾದರೇ ಬ್ರಹ್ಮಪ್ರಾಪ್ತಿಯು ಆ ಪರಬ್ರಹ್ಮ ನಲ್ಲಿ ದೇಹಬುದ್ಧಿಯ ದೊಡ್ಡಿಸ್ತಿಕೆ ನಡೆಯಲಾರದು ಅಲ್ಲಿ ಅಹಂಭಾವನೆಯು ನಿರ್ವಾಣವಾಗಿಯೇ ಬಿಡುವದು ಆ ಪರಬ್ರಹ್ಮನಲ್ಲಿ ಉಚ್ಚ ನೀಚತ್ವಗಳಿಲ್ಲ ಬಡವ ಬಲ್ಲಿದರೆಲ್ಲ ಸಮಾನರು, ಅಲ್ಲಿ ಸ್ತ್ರೀ ಪುರುಷ ಭೇದವಿಲ್ಲದೆ ಒಂದೇ ಪದ ದೊರಕುವದು ಅಲ್ಲಿ ಮಡಿ-ಮೈಲಿಗೆಗಳ ತಾರತಮ್ಯಗಳಿಲ್ಲ, ಭಿನ್ನಾಭಿನ್ನತೆ ಗಳಿಲ್ಲ ಶ್ರೇಷ್ಠ ಬ್ರಹ್ಮತ್ವವು ಅರಸನಿಗೆ, ಕನಿಷ್ಠ ಬ್ರಹ್ಮತ್ವವು ಅವನ ಸೇವ ಕರಿಗೆ ಹೀಗೆ ಭೇದಾಭೇದವು ಅಲ್ಲಿಲ್ಲ ಎಲ್ಲರಿಗೂ ಒಂದೇ ಪ್ರಕಾರದ ಒಬ್ಬನೇ ಬ್ರಹ್ಮನಿರುವನು ಅಲ್ಲಿ ಬಡವ ಬ್ರಹ್ಮನೂ ಇಲ್ಲ ಶ್ರೀಮಂತನಾದ ಬ್ರಹ್ಮನೂ ಇಲ್ಲ ಎಲ್ಲರೂ ಅವನಲ್ಲಿಯೇ ಸೇರಬೇಕಾಗುವದು ಆ ಪರಬ್ರಹ್ಮನ ಸ್ಥಾನವು ಮೂರು ಲೋಕಗಳಲ್ಲಿಯ ಜ್ಞಾನಿಗಳಿಗೆಲ್ಲ ಕೂಡಿ ಒಂದೇ ವಿಶ್ರಾಂತಿಯಸ್ಥಾನ ವಾಗಿದೆ ಗುರು-ಶಿಷ್ಯ ಭೇದವಿಲ್ಲದೆ ಅವರಿಗೆ ಒಂದೇ ಪದವುಂಟು ಆದರೆ ಅಲ್ಲಿ ದೇಹಸಂಬಂಧವನ್ನು ಹರಿಯಬೇಕಾಗುತ್ತದೆ ದೇಹಬುದ್ಧಿಯ ಕೊನೆ ಯಲ್ಲಿ ಅಲ್ಲ ಎಲ್ಲರಿಗೂ ಒಂದೇ ಪ್ರಾಪ್ತಿಯು ಶ್ರುತಿಗಳಲ್ಲಿ 'ಒಬ್ಬನೇ ಬ್ರಹ್ಮನು ಇನ್ನೊಬ್ಬನಿಲ್ಲ' ಎಂಬ ವಚನದಿರುವದು ಸಾಧುಗಳು ಬೇರೆ ಬೇರೆಯಾಗಿ ತೋರಿದರೂ ಅವರು ಸ್ವರೂಪದಲ್ಲಿ ಕೂಡಿಕೊಂಡು ಒಂದೇ ಆದರೆ ಅದೊಂದು ದೇಹಾತೀತವಾಗುವದು ಬ್ರಹ್ಮನಲ್ಲಿ ಹಳೆಯ ಹೊಸ ಹೀಗೆ ಉಪಾಧಿಗಳಿಲ್ಲ ಆಧಿಕ್ಯ ನ್ಯೂನತೆಗಳಿಲ್ಲ, ಆ ಬ್ರಹ್ಮನಲ್ಲಿ ದೇಹಬುದ್ಧಿಯಿಂದ ನ್ಯೂನತೆಯನ್ನು ಕಲ್ಪಿಸುವವನು ನಾಯಿಯೆಂದು ತಿಳಿಯಬೇಕು ದೇಹ ಬುದ್ಧಿಯ ಸಂಶಯ ದಿಂದ ಶಾಂತಿ ಕ್ಷಯವಾಗುವದು ದೇಹಬುದ್ಧಿಯ ಯೋಗದಿಂದ ಸಮಾಧಾನ ಸಮಯವು ತಪ್ಪಿ ಹೋಗುವದು ದೇಹದ ಮೇಲಿನ ಮಮತೆಯೇ ದೇಹ ಬುದ್ಧಿಯ ಲಕ್ಷಣವು ದೇಹವು ಮಿಥ್ಯವೆಂದು ಬಲ್ಲವರು ತಿಳಿದು ಅದನ್ನು ತಿರಸ್ಕರಿಸುವರು ದೇಹವು ನಾಶವಾಗುವ ಪರಿಯಂತವೂ ದೇಹಾಭಿಮಾನವಿ ರುವದು ಇದರ ಪರಿಣಾಮವಾಗಿಯೇ ಮರಣ ಹೊಂದಿದ ದೇಹವನ್ನು ದೇಹ ಬುದ್ಧಿಯು ಪುನರಾಗಮನವನ್ನು ಹೊಂದುವದು ದೇಹವಿರುವವರೆಗೆ ಅದಕ್ಕೆ ಗೌರವವೂ ಹಾಗು ಸಮಾಧಾನಕ್ಕೆ ನ್ಯೂನತೆಯೂ ಇರುವವು ಇವುಗಳಲ್ಲಿ ಯಾವುದರಿಂದ ದೇಹವು ನಾಶವಾಯಿತೆಂಬುದು ತಿಳಿಯುವದಿಲ್ಲ ದೇಹಾತೀತ

ನಾಗುವದರಲ್ಲಿಯೇ ಹಿತವೆಂದು ಸಂತರು ಹೇಳುವರು ಯೋಗ್ಯ ಸಾಮರ್ಥ್ಯ ವುಳ್ಳವನಾಗಿದ್ದರೂ ಅವನನ್ನು ದೇಹ ಬುದ್ಧಿಯು ಹಿಂದೆ ಜಗ್ಗುತ್ತಿರುವದು ಈ ಬುದ್ಧಿಯು ನಿಶೇಷವಾಯಿತೆಂದರೆ ಪರಮಾರ್ಥವೇ ದೊರಕುವದು ಆದ್ದರಿಂದಲೇ ಬುದ್ಧಿವಂತರು ದ್ವೇಷ ಮಮತ್ವವನ್ನು ಬಿಟ್ಟು ಸತ್ಯಬ್ರಹ್ಮನನ್ನು ಬೆರೆತುಕೊಂಡು ಹೋಗಬೇಕು ಈ ಸತ್ಯಬ್ರಹ್ಮನೆಂದರೆ ಇನ್ನೊಬ್ಬ ಬ್ರಹ್ಮನಲ್ಲ ಬ್ರಹ್ಮನು ಒಬ್ಬನೇ ಅವನೇ ಹಲವು ವಿಧವಾಗಿ ಭಾಸವಾಗುವನು

ನಿಜಕ್ಕೂ ಅವನು ಒಬ್ಬನೇ ಇರುವನು ಹಲವು ಮತಗಳ ಮೂಲಕವಾಗಿ ಹಲವು ದೇಹಗಳಲ್ಲಿ ಅನುಭವವು ಬೇರೆ ಬೇರೆ ಯಾಗಿರುವದು ಪ್ರತಿಯೊಬ್ಬನು ತನ್ನ ಅನುಭವಕ್ಕೆ ಬಂದದ್ದೇ ತನಗೆ ನಿಜವೆಂದು ತಿಳಿಯುವನು ಬ್ರಹ್ಮನು ಒಬ್ಬನೇ ಇದ್ದು ನಾಮ ರೂಪಾತೀತನಾಗಿರುವನು ಆದರೂ ಅವನಿಗೆ ಅನೇಕ ಹೆಸರುಗಳು ಕೊಡಲ್ಪಟ್ಟಿರುವವು

ಆ ಬ್ರಹ್ಮನು ನಿಶ್ಚಲನು, ನಿರ್ಮಲನು, ನಿವಾಂತನು, ನಿಜಾನಂದನು, ಅರೂಪನು, ಅಲಕ್ಷನು, ಅಗೋಚರನು, ಅಪರಂಪಾರನು, ಅದೃಶ್ಯನು, ಅತರ್ಕ್ಯನು, ಅಪಾರನು ಈ ನಾಮಗಳಲ್ಲದೆ–

ನಾಮ ರೂಪನು, ಜ್ಯೋತಿರೂಪನು, ಚೈತನ್ಯ ರೂಪನು, ಸತ್ತಾರೂಪನು, ಸಾಕ್ಷೀ ರೂಪನು, ಸಸ್ವರೂಪನು ಹೀಗೆ ಹೆಸರುಗಳು ಮತ್ತು—

ಶೂನ್ಯನು, ಸನಾತನನು, ಸರ್ವೇಶ್ವರನು, ಸರ್ವಜ್ಞನು, ಜಗಜ್ಜೀವನನು, ಸಹಜನು, ಸದೋದಿತನು, ಶುದ್ಧನು, ಬುದ್ಧನು, ಸರ್ವಾತೀತನು, ಶಾಶ್ವತನು, ಶಬ್ದಾತೀತನು, ವಿಶಾಲನು, ವಿಸ್ತೀರ್ಣನು, ವಿಶ್ವಂಭರನು, ವಿಮಲಾತ್ಮನು, ವ್ಯೋಮಾಕಾರನು, ಆತ್ಮನು, ಪರಮಾತ್ಮನು, ಪರಮೇಶ್ವರನು ಈ ಹೆಸರುಗಳಲ್ಲದೆ—

ಪರಮಾತ್ಮನು, ಜ್ಞಾನಘನನು, ಏಕರೂಪನು, ಪುರಾತನನು, ಚಿದ್ರೂಪನು, ಚಿನ್ಮಾತ್ರನು, ಹೀಗೆ ಹಲವು ಹೆಸರುಗಳನ್ನು ಹೇಳಿದರೂ ಕೊನೆಗೆ ಅವನು ಅನಾಮನು ಎಂದು ಹೇಳಲ್ಪಡುವನು

ಇಂಥ ಅಸಂಖ್ಯ ಹೆಸರುಗಳುಳ್ಳ ಆ ಪರೇಶನು ನಾಮಾತೀತನೆಂಬ ಹೆಸರಿನಿಂದ ಕರೆಯಲ್ಪಡುವನು ಇದರ ನಿಶ್ಚಿತಾರ್ಥವನ್ನು ತಿಳಿಯುವದಕ್ಕಾಗಿಯೇ ಅವನಿಗೆ ಹಲವು ಹೆಸರುಗಳು ಇಡಲ್ಪಟ್ಟಿವೆ. ಆ ಬ್ರಹ್ಮನು

ವಿಶ್ರಾಂತಿಗೆ ವಿಶ್ರಾಮನು, ಆದಿ ಪುರುಷನು, ಆತ್ಮಾರಾಮನು ಆಗಿದ್ದರೂ ಅವನು ಒಬ್ಬನೇ ಪರಬ್ರಹ್ಮನು. ಇನ್ನೊಬ್ಬ ಪರ ಬ್ರಹ್ಮನಿಲ್ಲ

ಇದನ್ನೇ ತಿಳಿಯುವದಕ್ಕಾಗಿ ಇನ್ನು ಮುಂದ ಉಳಿದ ಹದಿನಾಲ್ಕು ಬ್ರಹ್ಮಗಳ ಲಕ್ಷಣವನ್ನು ಹೇಳುವೆವು ಅವನ್ನು ಶ್ರವಣ ಮಾಡಿರಿ ಮೇಲಿನ ಎಲ್ಲವೂ ಸುಳ್ಳೆಂದು ತಿಳಿದರೆ ಉಳಿದದ್ದೇ ನಿಜವಾಗುವದೆಂದು ತಿಳಿಯಿರಿ. ಈ ಹದಿನಾಲ್ಕು ಬ್ರಹ್ಮಗಳ ಹೆಸರುಗಳನ್ನು ನಾನು ಕೇವಲ ಶಾಸ್ತ್ರಗಳ ಆಧಾರದಿಂದಲೇ ಹೇಳುವೆನು" ಎಂದರು.

ಶ್ರೀ ರಾಮ ॥ ೩. ಚತುರ್ದಶ ಬ್ರಹ್ಮರು ॥ ಇನ್ನು ಬ್ರಹ್ಮ ಜ್ಞಾನದ ಬಗೆಗೆ ಹೇಳುವೆವು, ಈ ಬ್ರಹ್ಮ ಜ್ಞಾನದಿಂದ ಸಾಧಕರಿಗೆ ಸಮಾಧಾನವುಂಟಾಗುವದು ರತ್ನ ಬಂಗಾರಗಳನ್ನು ಶೋಧಿಸಬೇಕಾದರೆ ಮೊದಲು ಮಣ್ಣನ್ನು ಬಳಿದು ಕೂಡ ಹಾಕಬೇಕಾಗುವದು ಅದರಂತೆಯೇ ೧೪ ಬ್ರಹ್ಮರುಗಳ ಲಕ್ಷಣವನ್ನು ಕಂಡು ಹಿಡಿಯಬೇಕಾಗುವದು ಪದಾರ್ಥವಿಲ್ಲದೆ ಅದರ ಹೆಸರನ್ನೂ ದ್ವೈತವನ್ನು ಹೊರತು ಪಡಿಸಿ ದೃಷ್ಟಾಂತವನ್ನೂ, ಪೂರ್ವ ಪಕ್ಷವಿಲ್ಲದೆ ಸಿದ್ಧಾಂತವನ್ನೂ ಹೇಳಲಿಕ್ಕೆ ಬರಲಾರದು ಮೊದಲು ಮಿಥ್ಯತ್ವವನ್ನು ಗೊತ್ತುಮಾಡಿಕೊಳ್ಳಬೇಕು ಅದು ತಿಳಿದ ನಂತರ ಅದನ್ನು ಬಿಟ್ಟು ಬಿಟ್ಟರೆ ಸತ್ಯವು ಅಂತರ್ಭಾವಿತವಾಗುವದು ಆದ್ದರಿಂದ ೧೪ ಬ್ರಹ್ಮರುಗಳ ಪರಿಚಯುವನ್ನರಿಯುವದಕ್ಕೆ ಸಿದ್ಧಾಂತ ಸ್ಥಾಪಿಸುತ್ತದೆ ಶ್ರೋತೃಗಳು ಅದನ್ನು ಶ್ರವಣ ಮಾಡಬೇಕು ಮೊದಲನೆಯವನು ಶುದ್ಧ ಬ್ರಹ್ಮನು ೨ನೆಯವನು ಓಂ ಇತಿ ಏಕಾಕ್ಷರ ಬ್ರಹ್ಮನು ಇದರಂತೆ ಮುಂದೆ ೩ನೆಯುವನು ಖಂ ಬ್ರಹ್ಮ ಎಂದು ಶ್ರುತಿವಾಣಿಯಿದೆ ೪ನೆಯವನು ಸರ್ವ ಬ್ರಹ್ಮನು, ೫ನೆಯುನನು ಚೈತನ್ಯ ಬ್ರಹ್ಮನು ೬ನೆಯವನು ಸತ್ತಾಯ ಬ್ರಹ್ಮನು, ೭ನೆಯವನು ಸಾಕ್ಷೀ ಬ್ರಹ್ಮನು ೮ನಯುವನು ಸಗುಣಬ್ರಹ್ಮನು ಮುಂದೆ ೯ನೆಯುವನಿಂದ ಕೊನೆಯ ಬ್ರಹ್ಮನವರೆಗೆ ಕ್ರಮವಾಗಿ ನಿರ್ಗುಣ ಬ್ರಹ್ಮ, ವಾಚ್ಯ ಬ್ರಹ್ಮ, ಅನುಭವ ಬ್ರಹ್ಮ, ಆನಂದ ಬ್ರಹ್ಮ, ತದಾಕಾರ ಬ್ರಹ್ಮ ಹಾಗು ಅನಿರ್ವಾಚ್ಯ ಬ್ರಹ್ಮ ಹೀಗೆ ಒಟ್ಟು ೧೪ ಬ್ರಹ್ಮರುಗಳು ಇನ್ನು ಇವರೆಲ್ಲರ ಸ್ವರೂಪಗಳ ಗುಟ್ಟನ್ನು ಅರಿಯುವ ಸಂಕೇತವನ್ನು ತೋರಿಸುವೆವು ಹೇಗೆಂದರೆ—

೯ ಶಬ್ದ ಬ್ರಹ್ಮ— ಅನುಭವವಿಲ್ಲದೆ ಧ್ವನಿಯಾಗಿ ತೋರುವವನು. ಇವನೇ ಶಬ್ದ ಬ್ರಹ್ಮನು, ಬರಿಯ ಶಬ್ದ ಜ್ಞಾನನಾದರೆ ಬ್ರಹ್ಮ ಜ್ಞಾನ ವಾಗುವದಿಲ್ಲ ಅಂದರೆ ಅನುಭವ ರಹಿತ ಶಬ್ದ ಜ್ಞಾನವು ಉಪಯೋಗ ವಿಲ್ಲ

೨ ಓಮಿತ್ಯೇಕಾಕ್ಷರ ಬ್ರಹ್ಮ— ಇವನು ಒಂದೇ ಅಕ್ಷರದ ಬ್ರಹ್ಮನು

೩ ಖಂ ಬ್ರಹ್ಮ— ಅಂದರೆ ಇವನೇ ಆಕಾಶ ಬ್ರಹ್ಮನು ಆಕಾಶಕ್ಕೆ ವ್ಯಾಪಕವೆಂಬ ಧರ್ಮವಿರುವದು

೪ ಸರ್ವ ಬ್ರಹ್ಮಃ— ಪಂಚ ಭೂತಾತ್ಮಾತ್ಮಕ ಸೃಷ್ಟಿಯಲ್ಲಿ ಕಣ್ಣಿಗೆ ಕಂಡುದದೆಲ್ಲವೂ ಬ್ರಹ್ಮವೆಂದು ಅನ್ನುವರು. ಆದರೆ ಅದು ಸರಿಯಲ್ಲ ಯಾಕಂದರೆ ಬ್ರಹ್ಮ ಪ್ರಳಯದಲ್ಲಿ ಎಲ್ಲ ಭೂತಗಳ ನಾಶವಾಗುತ್ತದೆ

೫ ಚೈತನ್ಯ ಬ್ರಹ್ಮಃ— ವಾಯುವಿಯಿಂದ ಪಂಚ ಭೂತಗಳೆಲ್ಲವು ಚೇತನ ಗೊಳ್ಳುವವು ಅವುಗಳಲ್ಲಿಯ ಚೈತನ್ಯವು ಚೈತನ್ಯ ಬ್ರಹ್ಮವು ಆದರೆ ಹೀಗೆ ಚೇತರಿಸಿಕೊಳ್ಳುವ ಪಂಚ ಭೂತಗಳೆಲ್ಲ ನಾಶವಾಗುವವೆಂದ ಮೇಲೆ ಆ ಚೈತನಕ್ಕೆ ನಿಜತ್ವವುಂಟಾಗದು

೬ ಸತ್ತಾ ಬ್ರಹ್ಮಃ— ಚೈತನ್ಯವು ಯಾವನ ಸತ್ತೆಯಿಂದೊದಗುವದೋ ಅವನಿಗೆ ಸತ್ತಾ ಬ್ರಹ್ಮನೆಂದೆನ್ನುವರು ಶುದ್ಧ ಬ್ರಹ್ಮನು ಪರಿವಾರ ರಹಿತನು ಆದ್ದರಿಂದ ಸತ್ತೆಯ ಉಪಯೋಗವಿಲ್ಲವಾದುದರಿಂದ ಶುದ್ಧ ಬ್ರಹ್ಮನಲ್ಲ

೭ ಸಾಕ್ಷೀ ಬ್ರಹ್ಮಃ— ಆ ಸತ್ತೆಯನ್ನು ತಿಳಿಯುವವನು ಸಾಕ್ಷೀ ಬ್ರಹ್ಮನು. ಅವಸ್ತುವಾದ ಶುದ್ಧ ಬ್ರಹ್ಮನು ಸಾಕ್ಷೀ ಬ್ರಹ್ಮನಲ್ಲ

೮ ಸಗುಣ ಬ್ರಹ್ಮ— ಸಾಕ್ಷೀ ಮೂಲಕವಾಗಿ ಗುಣಗಳಲ್ಲಿ ಆರೋಪಿತನು ಸಗುಣ ಬ್ರಹ್ಮನು ಗುಣಗಳಿಗೆ ನಾಶತೆಯಿರುವದರಿಂದ ಶುದ್ಧ ಬ್ರಹ್ಮನು ಸಗುಣ ಬ್ರಹ್ಮನಲ್ಲ

೯ ನಿರ್ಗುಣ ಬ್ರಹ್ಮಃ— ಗುಣ ಕಥನಕ್ಕೆ ಸಂಬಂಧವಿಲ್ಲದವನು ನಿರ್ಗುಣ ಬ್ರಹ್ಮನು ಸತ್ತಾ, ಸಾಕ್ಷಿತ್ವ, ಚೈತನ್ಯ ಇವೆಲ್ಲ ಗುಣಗಳಿರು

ವಲ್ಲಿ ನಿರ್ಗುಣ ಬ್ರಹ್ಮನೆಂದು ಹೇಳಲು ಬಾರದು ಇದು ಶುದ್ಧ ಬ್ರಹ್ಮ ವಲ್ಲ

೧೦ ವಾಚ್ಯ ಬ್ರಹ್ಮ— ಮಾತಿನಿಂದ ತಿಳಿಯಲು ಬರುವ ಬ್ರಹ್ಮನು ವಾಚ್ಯ ಬ್ರಹ್ಮನು ವಾಣಿಯು ನಾಶವಾಗುವದು ಆದ್ದರಿಂದ ವಾಚ್ಯ ಬ್ರಹ್ಮವು ಶುದ್ಧ ಬ್ರಹ್ಮನಲ್ಲ

೧೧ ಅನುಭವ ಬ್ರಹ್ಮ— ಮಾತಿನಿಂದ ಹೇಳುವದಕ್ಕೆ ಬಾರದೆ ಅನುಭವದಿಂದ ತಿಳಿಯು ಬರುವ ಬ್ರಹ್ಮನು ಅನುಭವ ಬ್ರಹ್ಮನು ಶುದ್ಧ ಬ್ರಹ್ಮನಲ್ಲ

೧೨ ಆನಂದ ಬ್ರಹ್ಮ— ಆನಂದ ಪರಿಪೂರ್ಣತೆಯುಳ್ಳನು ಆನಂದ ಬ್ರಹ್ಮನು ಆದರೆ ಆನಂದವು ಮನಸಿನ ವೃತ್ತಿಯು ಆದ್ದರಿಂದ ಆನಂದ ಬ್ರಹ್ಮನು ಶುದ್ಧ ಬ್ರಹ್ಮನಲ್ಲ

೧೩ ತದಾಕಾರ ಬ್ರಹ್ಮ— ತದಾಕಾರವಾಗುವದೆಂದರೆ ಅಭೇದ ತೋರುವದು ಅಭೇದವಾದನಂತರ ಇನ್ನೊಂದು ಹೆಸರಿನಿಂದ ಅದನ್ನು ತೋರಿಸಲು ಬರಲಾರದು ಅದ್ದರಿಂದ ಈ ವೃತ್ತಿಯಿಂದ ದೂರಾದ ಶುದ್ಧ ಬ್ರಹ್ಮನು ತದಾಕಾರ ಬ್ರಹ್ಮನಲ್ಲ

೧೪ ಅನಿರ್ವಾಚ್ಯ ಬ್ರಹ್ಮ:— ಸಂವಾದ-ವಿವಾದ ಸ್ಥಿತಿಯು ದೂರಾದ ಬಳಿಕ ಉನ್ಮನೀ ಸ್ಥಿತಿಯುಂಟಾಗುವದು ಆ ಉನ್ಮನಿಯು ಒಂದು ಅವಸ್ಥಾ ಭೇದವು ಅಂದ ಮೇಲೆ ಅವಸ್ಥಾ ರಹಿತ ಶುದ್ಧ ಬ್ರಹ್ಮನು ಅನಿ ರ್ವಾಚ್ಯ ಬ್ರಹ್ಮನಲ್ಲ

ಇಂತು ೧೪ ಬಗೆಯ ಬ್ರಹ್ಮರುಗಳು ಹೀಗೆ ಬೇರೆ ಬೇರೆ ತಿಳಿಯುವಲ್ಲಿ ಸಾಧಕರ ಭ್ರಮೆಯಲ್ಲದೆ ಇನ್ನೊಂದಿಲ್ಲ ಅಡ್ಡಿಯಿಲ್ಲ. ಬ್ರಹ್ಮನು ಶಾಶ್ವತನು, ಮಾಯೆ ಅಶಾಶ್ವತವು ಎಂಬುದರಿಂದ ಹದಿನಾಲ್ಕು ಬ್ರಹ್ಮರುಗಳ ಸಿದ್ಧಾಂತವು ಸ್ಥಾಪಿತವಾಯಿತು

ಇನ್ನು ಶುದ್ಧ ಬ್ರಹ್ಮನ ಲಕ್ಷಣಗಳು:—

ಈ ನಿರ್ಮಲ ಬ್ರಹ್ಮನಲ್ಲಿ ಎಲ್ಲ ಉಪಾಧಿಗಳೆ ಅಂತವಾಗುವದು ಹೀಗೆ ನಿರುಪಾಧಿಯುಂಟಾಗಲು ಆಗ ಆ ವಸ್ತುವಿಗೆ ಸಹಜ ಸಮಾಧಿ ಯುಂಟಾಗುವದು ಆಗ ಭವ ದುಃಖಗಳ ಆಧಿ ವ್ಯಾಧಿಗಳು ದೂರಾಗು

ವವು ಉಪಾಧಿಗಳೆ ಅಂತವಾದೊಡನೆ ಸಿದ್ಧಾಂತ ಸ್ಥಾಪಿತವಾಗುವದು ಸಿದ್ಧಾಂತ ಹಾಗು ವೇದಾಂತಗಳಿಂದ ಆತ್ಮಾನಾತ್ಮ ವಿವೇಕ ಹುಟ್ಟುವದು ಪರಬ್ರಹ್ಮವಸ್ತು ದೊರಕುವದು

ಇಂತು ಶಾಶ್ವತ ಬ್ರಹ್ಮ ಉಂಟಾದನಂತರ ಮಾಯಾ ಭ್ರಮೆ ಉಳಿಯದು ಇದೇ ಆದರ ಗುಟ್ಟು ಇದು ಸ್ವಾನುಭವದಿಂದಲೇ ತಿಳಿಯುವದು

ತನ್ನ ಅನುಭವದಿಂದ ಕಲ್ಪನೆಗಳನ್ನೆಲ್ಲ ಕಳೆದು ಅನುಭವದ ಯೋಗ್ಯ ಕಾಲದಲ್ಲಿ ಪ್ರವೇಶಿಸಬೇಕು ನಿರ್ವಿಕಲ್ಪವನ್ನೇ ಕಲ್ಪಿಸಬೇಕು- ಭಾವನಯಲ್ಲಿಯ ಕಲ್ಪನೆಗಳನ್ನೆಲ್ಲ ಮುರಿದು ಹಾಕಬೇಕು ಕಲ್ಪನೆಗೆ ಒಂದೇ ಮುಖವಿಲ್ಲ, ಆ ಕಲ್ಪನೆಯನ್ನು ಎತ್ತ ಹೊರಳಿಸಿದತ್ತ, ಎತ್ತ ಒಯ್ದತ್ತ ಹೋಗುವದು ಹೀಗೆ ಅದರ ಸ್ಥಿತಿಯಿರುವದು ಆದ್ದರಿಂದ ಅದನ್ನು ನಿರ್ವಿಕಲ್ಪದತ್ತ ಸಾಗಿಸುವದು ಯುಕ್ತವಾದದ್ದು ಒಮ್ಮೆ ನಿರ್ವಿಕಲ್ಪಕ್ಕೆ ಬಂದು ಮುಟ್ಟಲು ಬೇರೆ ಕಲ್ಪನೆಗಳೇ ಉಳಿಯಲಾರವು ಆಗ ನಿಸ್ಸಂಗತೆಯುಂಟಾಗುವದು ಬ್ರಹ್ಮನು ಪದಾರ್ಥವಲ್ಲ, ಸದ್ಗುರು ಮುಖದಿಂದ ಅನುಭವಿಸಿ ಆ ಬ್ರಹ್ಮನನ್ನು ಸಹಜವಾಗಿ ಕೈವಶ ಮಾಡಿಕೊಳ್ಳಬೇಕು

ಮುಂದೆ ಇದರ ಅನ್ವಯದಿಂದಲೇ ಏನೊಂದು ನಿಶ್ಚಿತ ಅನುಭವ ಮಾಡಿಕೊಂಡು ಬ್ರಹ್ಮನನ್ನು ಅರಿತು ಕೊಳ್ಳಬೇಕು

ಶ್ರೀ ರಾಮ || ೪ ವಿಮಲ ಬ್ರಹ್ಮ | "ಬ್ರಹ್ಮನು ಆಕಾಶದಂತೆ ನಿರ್ಮಲನು, ಅದರಂತೆ ಅವಕಾಶವುಳ್ಳವನು, ರೂಪವಿಲ್ಲದವನು, ಮತ್ತು ಅತ್ಯಧಿಕ ವಿಶಾಲನು ೨೧ ಸ್ವರ್ಗಗಳು ಮತ್ತು ೭ ಪಾತಾಳಗಳು ಕೂಡಿ ಒಂದು ಬ್ರಹ್ಮಗೋಲವಾಗಿದೆ ಇಂಥ ಅಖಂಡ ಬ್ರಹ್ಮಗೋಲಗಳಿದ್ದು ಅವೆಲ್ಲವನ್ನು ವ್ಯಾಪಿಸಿದ ಬ್ರಹ್ಮನು ಒಬ್ಬನು ಅವನೇ ನಿರ್ಮಲನು

ಕೆಳಗೆ ಅನಂತ ಬ್ರಹ್ಮಾಂಡಗಳೂ ಮೇಲೆ ಅನಂತ ಬ್ರಹ್ಮಾಂಡಗಳೂ ಇರುವವು ಆದರೆ ಎಲ್ಲವುಗಳಲ್ಲಿ ಬ್ರಹ್ಮನಿಲ್ಲದ ಸ್ಥಾನವು ಒಂದು ರವಷ್ಟು ಕೂಡ ಎಲ್ಲಿಯೂ ಇಲ್ಲ ಜಲಚರ ಪ್ರಾಣಿಗಳನ್ನೂ ಒಳಗೂ ಹೊರಗೂ ನೀರು ವ್ಯಾಪಿಸಿ ತುಂಬಿಬಿಟ್ಟಿರುವದು ಅದರಂತೆ ಪಂಚಭೂತಾ

ತ್ಮಕ ಜಗತ್ತನ್ನೂ ಜೀವಮಾತ್ರಗಳನ್ನೂ ಬ್ರಹ್ಮನು ಅಂತರ್ಬಾಹ್ಯವಾಗಿ ವ್ಯಾಪಿಸಿರುವನು ನೀರಿನ ಹೊರಗೆ ಇನ್ನೊಂದು ಸ್ಥಾನವಿಲ್ಲ ಬ್ರಹ್ಮನ ಹೊರಗೆ ಹೋಗಲು ಬರುವದಿಲ್ಲ ಆದ್ದರಿಂದಲೇ ಬ್ರಹ್ಮನಿಗೆ ಜಲವನ್ನು ಹೋಲಿಸುವದು ಸರಿಯೊಗಲಾರದು ಅವನು ಆಕಾಶದಂತೆ ಸರ್ವವ್ಯಾಪಿಯು ಅವನು ನಮ್ಮನ್ನು ಅಖಂಡವಾಗಿಯೇ ಹೊಂದಿಕೊಂಡು ಇರುವನು ನಮ್ಮ ಸರ್ವಾಂಗಗಳಿಗೂ ಆತನು ಸವರಿದಂತಾಗಿರುವನು ಇಂತು ಆತನು ಪ್ರಾಣಿಯ ಸರ್ವಾಂಗವನ್ನೆಲ್ಲ ತುಂಬಿ ಬಿಟ್ಟಿದ್ದರೂ ಆ ಪ್ರಾಣಿಯು ಅವನನ್ನು ತಿಳಿಯಲು ಅಸಮರ್ಥವು ಅವನು ಹುಟ್ಟದಿದ್ದರೂ ಆ ಬ್ರಹ್ಮನ ಭಾಸವು ಹುಟ್ಟುವದು ಇಲ್ಲಿ ಭಾಸನೆಂದರೆ ಜಗತ್ತು ಅಗತ್ಯವಾದುದು ಹಾಗು ದೃಶ್ಯವಾದುದು ಆಕಾಶದಲ್ಲಿ ಮೋಡಗಳು ಬರುವವು ಆದ್ದರಿಂದಲೇ ಅದು ಮೋಡಗಳಿಂದ ಆಚ್ಛಾದಿತವಾದಂತೆ ತೋರುವದು ಆದರೆ ವಸ್ತುತ ಹಾಗಲ್ಲ, ಆಕಾಶವು ನಿರ್ಮಲವಾಗಿರುವದು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಲು ಅನೇಕ ಚಕ್ರಗಳು ಕಂಡು ಬರುವವು ಇಂಥ ದೃಶ್ಯವನ್ನು ಜ್ಞಾನಿಗಳು ಒಪ್ಪುವದಿಲ್ಲ, ಅವರು ಅದರಲ್ಲಿ ಮಿಥ್ಯತ್ವವನ್ನೇ ಕಾಣುವರು, ನಿದ್ರಸ್ಥನಾದವನು ಎಚ್ಚರಾದ ನಂತರ ಅವನಿಗೆ ನಿದ್ರೆಯಲ್ಲಿ ಬಿದ್ದ ಸ್ವಪ್ನವನ್ನು ಅವನು ಮಿಥ್ಯವೆಂದು ತಿಳಿಯುವನು, ಇಂಥ ಬ್ರಹ್ಮಾನುಭವವನ್ನು ಪಡೆದು ಜ್ಞಾನ ಜಾಗೃತಿಯಲ್ಲಿ ಬರಬೇಕು ಅಂದರೆ ದೃಶ್ಯದ ಮಿಥ್ಯತೆ ತಿಳಿಯುವದು

ಇನ್ನು ಬ್ರಹ್ಮಾಂಡದ ಆಚೆಗಿರುವ ಶುದ್ಧಬ್ರಹ್ಮನು ಹೇಗೆ ಇರುವನೆಂಬದನ್ನು ತಿಳಿಯೋಣ ಬ್ರಹ್ಮನು ಬ್ರಹ್ಮಾಂಡದಲ್ಲಿ ಕೂಡಿಕೊಂಡು ಇರುವನು ಅವನು ಎಲ್ಲ ಪದಾರ್ಥಗಳನ್ನು ಅಂಶಮಾತ್ರದಿಂದ ವ್ಯಾಪಿಸಿರುವನು ಎಲ್ಲದರಲ್ಲಿ ವಿಸ್ತಾರವಾಗಿ ಇರುವನು ಬ್ರಹ್ಮನಲ್ಲಿ ಸೃಷ್ಟಿಯು ಭಾಸವಾಗುವದು ಅದರಂತೆ ಸೃಷ್ಟಿಯಲ್ಲಿ ಬ್ರಹ್ಮನಿರುವನು ಈ ಸಂಗತಿಯು ಅನುಭವದಿಂದ ಅಂಶಮಾತ್ರವಾಗಿ ಆಭಾಸವಾಗುವದು ಸೃಷ್ಟಿಯ ಒಳಗೂ ಹೊರಗೂ ಅಂಶಮಾತ್ರವಾಗಿ ಇರುವ ಆ ಬ್ರಹ್ಮನ ಮರ್ಯಾದೆಯು ಅದಾರಿಗೂ ತಿಳಿಯದು ಬ್ರಹ್ಮಾಂಡಕ್ಕಿಂತಲೂ ಬ್ರಹ್ಮನು ದೊಡ್ಡವನಿ

ರುವದರಿಂದ ಅವನು ಬ್ರಹ್ಮಾಂಡದಲ್ಲಿ ಅಟ್ಟಿಸುವದೆಂತು? ತೀರ್ಥ ಕಲಶ ದಲ್ಲಿ ಇಡೀ ಆಕಾಶವನ್ನು ತುಂಬುವ ಪ್ರಯಾಸವು ವ್ಯರ್ಥ ಅದರಂತೆ ಬ್ರಹ್ಮಾಂಡದಲ್ಲಿ ಇಡೀ ಬ್ರಹ್ಮನಿಗೆ ಸಾಕಾಗುವಷ್ಟು ಅವಕಾಶವಿಲ್ಲೆಂದಾ ಯಿತು ಬ್ರಹ್ಮನು ಬ್ರಹ್ಮಾಂಡದಲ್ಲಿ ಬೆರೆತಿದ್ದರೂ ಅವನು ಅತ್ತಿತ್ತ ಸರಿದಾಡುವದಿಲ್ಲ, ಎಲ್ಲದರಲ್ಲಿ ಅವನು ತುಂಬಿರುವನು ಬ್ರಹ್ಮನು ಪಂಚಭೂತಾತ್ಮನೂ ಅಹುದಾಗಿದ್ದರೂ ಪಂಚ ಭೂತಾತೀತನು. ಇದಕ್ಕೆ ದೃಷ್ಟಾಂತವೆಂದರೆ ಕೆಸರಲ್ಲಿಯ ಆಕಾಶವು ಆ ಆಕಾಶದಂತೆ ಬ್ರಹ್ಮನು ಪಂಚಭೂತಗಳಿಂದ ಅಲಿಪ್ತನಾಗಿರುವನು ಬ್ರಹ್ಮನಿಗೆ ಬೇರೆ ದೃಷ್ಟಾಂತಗ ಳನ್ನು ಕೊಡುವದು ಅಸಾಧ್ಯ, ಯಾಕಂದರೆ ಅವನಂಥಹದು ಇನ್ನೊಂದಿಲ್ಲ ಅದಕ್ಕಾಗಿಯೇ ಸಾಹಿತಿಗಳು ವಿಚಾರ ಮಾಡಿ 'ಆಕಾಶ'ದ ದೃಷ್ಟಾಂತ ವೊಂದೇ ಬ್ರಹ್ಮನಿಗೆ ಸರಿಯಾಗುವದೆಂದು ತಿಳಿದರು ಶ್ರುತಿಗಳಲ್ಲಿ ಖಂಬ್ರಹ್ಮ' [ಆಕಾಶವು ಬ್ರಹ್ಮನು]ಸ್ಮೃತಿಗಳಲ್ಲಿ 'ಗಗನಸದೃಶಂ' [ಆಕಾಶಕ್ಕೆ ಸರಿಯಾ ದವ] ಎಂದು ಹೇಳಿದ್ದರಿಂದ ಬ್ರಹ್ಮನಿಗೆ ಆಕಾಶದ ದೃಷ್ಟಾಂತವು ರೂಢ ವಾಯಿತು ಹಿತ್ತಾಳೆಯು ತುಕ್ಕು ಹಿಡಿದು ಕಪ್ಪಾಗದಿದ್ದರೆ ಅದು ಕೇವಲ ಬಂಗಾರವೆಂದು ಹೇಳಬಹುದು ಅದರಂತೆ ಆಕಾಶಕ್ಕೆ ಶೂನ್ಯತೆಯಿರದಿದ್ದರೆ ಅದೂ ಬ್ರಹ್ಮವಾಗುತ್ತಿತ್ತು ಬ್ರಹ್ಮನು ಗಗನ ದೃಷ್ಟಾಂತ ಹೊಂದಿದರೆ ಮಾಯೆಯು ವಾಯುವಿನ ದೃಷ್ಟಾಂತಕ್ಕೆ ಸರಿಯಾಗುವದು ಬ್ರಹ್ಮನು ಆಕಾಶ ದೃಷ್ಟಾಂತ ಹೊಂದಿದರೂ ಅವನು ದೃಶ್ಯನಲ್ಲ ಶಬ್ದ ಸೃಷ್ಟಿಯ ರಚನೆಯು ಕ್ಷಣಕ್ಷಣಕ್ಕೆ ಉಂಟಾಗುವದು ಆದರೆ ಅದು ವಾಯುವಿನಂತೆ ಚಂಚಲವುಳ್ಳದ್ದು ಇಂತು ದೃಶ್ಯಗಳೆಲ್ಲ ಮಾಯೆಯ ಸಂಬಂಧವಾದವು ಮತ್ತು ಬ್ರಹ್ಮನು ಶಾಶ್ವತನೊಬ್ಬನು ಹಾಗು ಸರ್ವವ್ಯಾಪಕನು ಆ ಬ್ರಹ್ಮನ ಪೃಥ್ವಿಯನ್ನು ಭೇಧಿಸಿ ಇದ್ದರೂ ಅದರಂತೆ ಕಠಿಣನಲ್ಲ, ಅವ ನಲ್ಲಿ ಮೃದುತ್ವ ಸರಿಗಟ್ಟುವ ಇನ್ನಾವ ಮೃದ್ವಿಹಿತ ವಸ್ತುಗಳಿಲ್ಲ ಪೃಥ್ವಿ ಗಿಂತಲೂ ನೀರು ಮೃದುತ್ವವಾಗಿರುವದು, ನೀರಿಗಿಂತಲೂ ಅಗ್ನಿಯು ಮೃದು, ಬೆಂಕಿಗಿಂತ ವಾಯುವು ಕೋಮಲವು, ವಾಯುವಿಗಿಂತ ಗಗನವು ಅತ್ಯಂತ ಮೃದುವು ಆ ಗಗನಕ್ಕಿಂತ ಮೃದುತ್ವದ ಪೂರ್ಣತೆಯು ಬ್ರಹ್ಮ ನಲ್ಲಿ ಉಂಟು ವಜ್ರದಿಂದ ಆ ಪೂರ್ಣ ಮೃದುತ್ವದ ಬ್ರಹ್ಮನನ್ನು ಭೇದಿ

ಸಲು ಆ ಬ್ರಹ್ಮನಲ್ಲಿಯ ಮೃದುತ್ವವು ನಷ್ಟವಾಗದೆ ಹೇಳಕೂಡದಷ್ಟು ಮೃದುತ್ವವು ಆತನಲ್ಲಿ ಉಳಿದೇ ಉಳಿಯುವದು

ಬ್ರಹ್ಮನು ಜಗತ್ತನ್ನು ವ್ಯಾಪಿಸಿರುವನು ಜಗತ್ತು ನಾಶವಾದರೂ ಈ ಬ್ರಹ್ಮನಿಗೆ ನಾಶತ್ವವಿಲ್ಲ ಅವನು ನೀರಿನಲ್ಲಿದ್ದರೂ ಒಣಗುವದಿಲ್ಲ ನೀರು ಮಾತ್ರ ಶೋಷಣೆಹೊಂದುವದು ಬ್ರಹ್ಮನಿಗೆ ಆ ಸ್ಥಿತಿಯಿರುವದಿಲ್ಲ ಆ ಪರಬ್ರಹ್ಮನು ತೇಜದಲ್ಲಿದ್ದರೂ ಸುಡುವ ಕ್ರಿಯೆಯು ಆತನಲ್ಲಿಲ್ಲ ಆಕಾಶದಲ್ಲಿದ್ದರೂ ತಿಳಿಯಲಸಾಧ್ಯ ಅವನು ಶರೀರವನ್ನೆಲ್ಲ ವ್ಯಾಪಿಸಿ ಬಿಟ್ಟಿದ್ದರೂ ಅವನು ಎಲ್ಲಿಯೂ ತೋರುವದಿಲ್ಲ ಹತ್ತರದಲ್ಲಿದ್ದರೂ ದೂರವಾಗಿಯೇ ಇರುವನು ಇದು ಬಲು ಸೋಜಿಗವು, ಅವನು ಎದುರಿನಲ್ಲಿ ಇದ್ದರೂ ನಾಲ್ಕೂ ನಿಟ್ಟಿನಲ್ಲಿ ಇರುವನು, ಮತ್ತು ಒಳಗೂ ಹೊರಗೂ ಇದ್ದೇ ಇರುವದು ಸಿದ್ಧವಾದ ಮಾತು ಅವನು ನಟ್ಟ ನಡುವೆ ಇದ್ದರೂ ಹೊರಗೇ ಇರುವನು ದೃಶ್ಯದಿಂದ ಬೇರೆಯಿದ್ದರೂ ಆಕಾಶದಂತಿರುವನು ಇಲ್ಲೆನ್ನುವಲ್ಲಿ ಅವನು ಇದ್ದೇ ಇರುವನು ಅವನು ಕಣ್ಣಿಗೆ ಕಾಣದಿದ್ದರೂ ನಮ್ಮ ಧನ-ದ್ರವ್ಯದಂತಿರುವನು ನಮ್ಮ ದೃಷ್ಟಿಗೆ ಬೀಳುವ ಪದಾರ್ಥಗಳ ಆಚೆಗೇ ಇರುವನೆಂಬುದನ್ನು ಅನುಭವದಿಂದ ಕಾಣಬಹುದು ಹಿಂದೆ-ಮುಂದೆ ಆಕಾಶವಿದ್ದು ನಡುವೆ ಏನಿಲ್ಲೆಂದರೂ ಅಲ್ಲಿ ಬ್ರಹ್ಮನ ವಾಸ್ತವ್ಯ ಇದ್ದೇ ಇರುವದು ಪೃಥ್ವಿಯು ಇಲ್ಲದೆ ಹೋದರೂ ಅಲ್ಲಿ ಇವನೊಬ್ಬನೇ ವಿಸ್ತಾರವಾಗಿರುವನು ಜಗತ್ತು ನಾಮ-ರೂಪಾತ್ಮಕವಾದದ್ದು ಹಾಗು ಭ್ರಮೆಯ ರೂಪವಾದದ್ದು ಹೀಗಿದ್ದರೂ ಅದನ್ನು ವ್ಯಾಪಿಸಿದ ಈ ಬ್ರಹ್ಮನು ನಾಮರೂಪಾತೀತನಾಗಿರುವ ಗುಟ್ಟನ್ನು ಅನುಭವದಿಂದ ತಿಳಿಯತಕ್ಕದ್ದು ಆಕಾಶದಲ್ಲಿ ಹೊಗೆಯು ದೊಡ್ಡ ದೊಡ್ಡ ಗುಡ್ಡಗಳನ್ನು ಎತ್ತಿ ಹಿಡಿದಂತೆ ಮಾಯಾದೇವಿಯು ತನ್ನ ಘನವಾದ ಆಡಂಬರಗಳನ್ನು ತೋರಿಸುತ್ತಿರುವಳು ಇಂಥ ಹೆಚ್ಚಿನ ಮಾಯಾದೇವಿಯೂ ಅಶಾಶ್ವತಳು

ಹಾಗು ಬ್ರಹ್ಮನು ಶಾಶ್ವತನು ಮತ್ತು ಈ ಬ್ರಹ್ಮನು ಎಲ್ಲ ಸ್ಥಳಗಳಲ್ಲಿ ತುಂಬಿ ಇರುವನು ಓದುವ ಪುಸ್ತಕದಲ್ಲಿ ಬರೆಯುವ ಅಕ್ಷರಗಳಲ್ಲಿ, ಕಣ್ಣುಗಳಲ್ಲಿ ಮೃದುವಾಗಿ ಆತನು ಇರುವನು ಕಿವಿಯಿಂದ ಶಬ್ದ

ಕೇಳುವಾಗ, ಮನಸಿನಿಂದ ವಿಚಾರ ಮಾಡುವಾಗ ಆ ಪರಬ್ರಹ್ಮನು ಮನಸ್ಸಿನ ಒಳಗೂ ಹೊರಗೂ ಇರುವನು ಕಾಲಿನಿಂದ ನಡೆಯುವಾಗ, ಕೈಯಿಂದ ಕೊಳ್ಳುವಾಗ, ಕೈಕಾಲುಗಳಲ್ಲಿ ಅಷ್ಟೇ ಏಕೆ? ಎಲ್ಲ ಇಂದ್ರಿಯಗಳಲ್ಲಿ ಆ ಪರಬ್ರಹ್ಮನು ತುಂಬಿಕೊಂಡಿರುವನಲ್ಲದ ಇಂದ್ರಿಯಗಳು ವಿಷಯದತ್ತ ಹರಿದಾಡುವ ಹಂಬಲವನ್ನು ಕುಗ್ಗಿಸುವನು ಆ ಪರಬ್ರಹ್ಮನು ಸನಿಹದಲ್ಲಿದ್ದರೂ ಕಾಣುವದಿಲ್ಲ ಏನೊಂದು ಕಾಣದಿದ್ದರೂ ಅಲ್ಲಿ ಇವನೊಬ್ಬನೇ ಆದರೂ ಇರುವನು ಈ ಪರಬ್ರಹ್ಮನನ್ನು ಅನುಭವದಿಂದ ಕಾಣಬೇಕು ದೃಶ್ಯಗಳನ್ನೆಲ್ಲ ಮರೆತು ತನ್ನ ಅನುಭವದಿಂದಲೇ ಬ್ರಹ್ಮನನ್ನು ಹೊಂದಬೇಕು ಇವನನ್ನು ಕಾಣುವಲ್ಲಿ ಜ್ಞಾನದೃಷ್ಟಿ ಇರಬೇಕಲ್ಲದೆ ಚರ್ಮದೃಷ್ಟಿಗೆ ಆತನು ಕಾಣುವದಿಲ್ಲ ಸಂತರ ಅಂತರ್ವೃತ್ತಿಯು ಸ್ಥಿತಿಯನ್ನು ಅಂತರ್ಮುಖರಾದ ಸಂತರೇ ತಿಳಿದುಕೊಳ್ಳುವರು ಬ್ರಹ್ಮ-ಮಾಯೆಯರನ್ನು ಕಾಣುವಲ್ಲಿ ಸರ್ವಸಾಕ್ಷಿಯಾಗಿರುವ ಅವಸ್ಥೆ ಅಂದರೆ ತೂರ್ಯಾ ಸಾಕ್ಷಿತ್ವದಿಂದ ಈ ಪರಬ್ರಹ್ಮನು ಕಾಣುವನು

ಸಾಕ್ಷತ್ವ ವೃತ್ತಿಗೆ ಉನ್ಮನೀ ವೃತ್ತಿಯನ್ನು ದೂರ ಮಾಡುವದೇ ಕಾರಣವು ಅಲ್ಲಿ ಬುದ್ಧಿಯು ಕುಂಠಿತವಾಗುವದು ಇದೇ ವಿಜ್ಞಾನವು ಅಜ್ಞಾನ ಕಳೆದು ಹೋಗಿ ಜ್ಞಾನವೂ ಉಳಿಯದಂತಾದ ಸ್ಥಿತಿಯಲ್ಲಿ ಪರಬ್ರಹ್ಮನಲ್ಲಿ ವಿಜ್ಞಾನ ವೃತ್ತಿಯು ಇರಬೇಕು

ಇಂಥ ಶಾಶ್ವತ ಬ್ರಹ್ಮನಲ್ಲಿ ಕಲ್ಪನೆಗಳೆಲ್ಲ ಲಯವಾಗುವವು ಯೋಗಿಗಳ ಹೃದಯವನ್ನು ಅನುಭವದಿಂದ ತಿಳಿಯಬೇಕು

ಶ್ರೀ ರಾಮ ॥ ೫ ದ್ವೈತಕಲ್ಪನಾನಿರಸನ ॥ ಶಿಷ್ಯನು ಗುರುಗಳನ್ನು ಕುರಿತು—"ನೀವು ಕೇವಲ ಬ್ರಹ್ಮನ ವಿಷಯಕ್ಕೆ ಬೋಧೆ ಮಾಡಿದುದು ಅನುಭವಕ್ಕೆ ಬಂದಿತು, ಮತ್ತು ಮಾಯೆಯ ರೂಪದ ಬಗೆಗೂ ತಿಳಿದುಕೊಂಡೆನು ಅಂತಃಸ್ಥದಲ್ಲಿ ಬ್ರಹ್ಮಪ್ರಕಾಶವೂ ಬಹಿರಂಗದಲ್ಲಿ ಮಾಯೆಯ ಪ್ರಾತ್ಯಕ್ಷಿಕೆಯೂ ನನಗಾಯಿತು, ಇದರಿಂದ ಬ್ರಹ್ಮ ಮತ್ತು ಮಾಯೆಗಳೆಂಬ ದ್ವೈತಭಾವವು ನನ್ನಲ್ಲಿ ಉದಿಸಿತು ಇದಾವ ಬಗೆಯಿಂದ ನಿರಸನವಾಗುವದು?" ಎಂದು ಕೇಳಿದನು ಆಗ ಗುರುಗಳು ಉತ್ತರರೂಪವಾಗಿ ಹೇಳಿದ್ದೇನೆಂದರೆ—

'ಮಾಯಾ ಬ್ರಹ್ಮನನ್ನು ಅದಾರು ತಿಳಿಯುವರೆಂಬುದನ್ನು ವಿಚಾರ ಮಾಡು ಬ್ರಹ್ಮನ ಬಗೆಗೆ ಸತ್ಯಸಂಕಲ್ಪವನ್ನು ಮಿಥ್ಯಾ ಮಾಯೆಯ ವಿಕಲ್ಪವನ್ನೂ ಕುರಿತು ಮಾಯೆಯೇ ಕಲ್ಪನೆ ಮಾಡವದು ಬ್ರಹ್ಮನ ಬಗೆಗೆ ಮಾಡುವ ಕಲ್ಪನೆಯು ಶುದ್ಧವಾದದ್ದು ಹಾಗು ಮಾಯೆಯ ಬಗೆಗಿನ ಕಲ್ಪನೆಯು ಅಶುದ್ಧವಾದದ್ದು, ಈ ಎರಡೂ ಕಲ್ಪನೆಗಳಿಗೆ ಆಸ್ಪದವಾದ ಮನಸ್ಸಿನ ಸ್ಥಿತಿಯು ತುರ್ಯಾವಸ್ಥೆಯೆನ್ನಿಸುವದು ತುರ್ಯಾವಸ್ಥೆಯೆಂದರೆ ಎಲ್ಲವನ್ನು ತಿಳಿಯುವದು ಅಥವಾ ಸರ್ವಸಾಕ್ಷಿಣಿಯು ಆದರೆ ಎಲ್ಲವೂ ಇಲ್ಲ ಅಂದರೆ ಬ್ರಹ್ಮನ ಹೊರತು ಇನ್ನೊಂದಿಲ್ಲ ಎಂದ ಮೇಲೆ ಅಲ್ಲಿ ತಿಳಿದುಕೊಳ್ಳುವದಾವುದು? ಸಂಕಲ್ಪ ವಿಕಲ್ಪಗಳೆರಡೂ ಮನಸ್ಸಿನ ಕ್ರಿಯೆಗಳೆಂದು ಹೇಳುವರು, ಆದರೆ ಆ ಮನವೇ ಅಸತ್ಯವೆಂದು ಹೇಳುವಾಗ ಅಲ್ಲಿ ಮನದ ಸರ್ವಸಾಕ್ಷಿಣಿಯ ಅವಸ್ಥೆ ಹೇಗೆ ಗೊತ್ತಾಗುವದು? ಸಾಕ್ಷಿತ್ವವು, ಚೈತನ್ಯತ್ವವು ಹಾಗು ಸತ್ತೆಯು ಈ ಗುಣಗಳು ಮಾಯೆಯಿಂದಲೇ ಬ್ರಹ್ಮನಿಗೆ ಆರೋಪಿಸಲಾಗಿವೆಂಬುದು ಸರಿಯಾದುದಲ್ಲ ಯಾಕೆಂದರೆ ಮೂಲತಃ ನಿರ್ಗುಣನಾಗಿಯೇ ಇರುವನು ಘಟ, ಮಠಗಳ ಉಪಾಧಿಯಿಂದ ಘಟಾಕಾಶ, ಮಠಾಕಾಶ ಎಂಬ ಶಬ್ದಗಳುಂಟಾಗಿವೆ ವಸ್ತುತ ಆಕಾಶದಲ್ಲಿ ಎರಡು ಕಲ್ಪನೆಗಳು ಮಿಥ್ಯಾರೋಪಿತವಾಗಿವೆ ಅದರಂತೆ ಮಾಯೆಯು ಬ್ರಹ್ಮನಲ್ಲಿ ಗುಣಗಳ ವೃಥಾರೋಪವನ್ನು ಮಾಡುತ್ತದೆ ಬ್ರಹ್ಮನು ನಿರ್ಗುಣನೂ ಧರ್ಮರಹಿತನೂ ಆಗಿರುವನು ಮಾಯೆಯು ಸತ್ಯವು ಎಂದು ಭ್ರಮೆಯಿರುವವರೆಗೆ ಬ್ರಹ್ಮನು ಸಾಕ್ಷಿಯಾಗಿ ಇರುವನೆಂದು ಹೇಳುವರು ಆದರೆ ಮಾಯಾ, ಅವಿದ್ಯಾ ಈ ಕಲ್ಪನೆಗಳು ದೂರಾದ ಬಳಿಕ ಒಬ್ಬನೇ ಬ್ರಹ್ಮನು ಉಳಿಯುವನು ಅಂದ ಮೇಲೆ ದ್ವೈತಕ್ಕೆ ಆಸ್ಪದ ಉಳಿಯುವದೆಲ್ಲಿ? ಅಂತೆಯೇ ಸರ್ವಸಾಕ್ಷಿ ಮನಸು ಅಂದರೆ ತುರ್ಯಾವಸ್ಥೆಯು ಇದರ ಮುಂದಿನ ಉನ್ಮನೀ ಅವಸ್ಥೆಯ ಸುಖದಲ್ಲಿ ಲೀನವಾಯಿತೆಂದರೆ ತುರ್ಯಾರೂಪ ಜ್ಞಾನವು ಅಸ್ತವಾಗಿ ಬಿಡುವದು ದ್ವೈತದ ಕಲ್ಪನೆಯನ್ನು ತಂದುಕೊಳ್ಳುವ ಮನಸ್ಸು ಉನ್ಮನಾವಸ್ಥೆ ಪಡೆದ ನಂತರ ದ್ವೈತವೂ ಅದ್ವೈತವೂ ಉಳಿಯಲಾರವು ಹೀಗೆ ದ್ವೈತ, ಅದ್ವೈತಗಳ ಕಲ್ಪನೆ ದೂರಾಗಿ ವೃತ್ತಿಯು ನಿವೃತ್ತವಾದ ನಂತರ ದ್ವೈತ

ವೆಲ್ಲಿ? ವೃತ್ತಿರಹಿತ ಜ್ಞಾನವೇ ಸಮಾಧಾನವು ಅಲ್ಲಿ ಮಾಯಾ, ಬ್ರಹ್ಮ ಎಂಬ ದ್ವೈತಾನುಸಂಧಾನವು ದೂರಾಗುವದು ಬ್ರಹ್ಮನು ಕಲ್ಪನಾತೀತನು ಹಾಗು ನಿರ್ವಿಕಲ್ಪನಾಗಿರುವನು ಮತ್ತು ಮನ, ಬುದ್ಧಿಗಳ ಆಚೆಗೆ ಇರುವನು ಇಂದ ಮೇಲೆ ಅಲ್ಲಿ ದ್ವೈತವೆಲ್ಲಿ? ದ್ವೈತದ ವಿಚಾರ ನೋಡಲು ಬ್ರಹ್ಮನಿಲ್ಲ, ಬ್ರಹ್ಮನ ವಿಚಾರ ನೋಡಲು ದ್ವೈತವಿಲ್ಲ ದ್ವೈತಾದ್ವೈತಗಳು ಕೇವಲ ಕಲ್ಪನೆಯಲ್ಲಿಯವು ಕಲ್ಪನೆಯೇ ಮಾಯೆಯನ್ನು ದೂರ ಮಾಡುವದು, ಕಲ್ಪನೆಯೇ ಬ್ರಹ್ಮನನ್ನು ಸಿದ್ಧಗೊಳಿಸುವದು, ಆ ಕಲ್ಪನೆಯೇ ಸಂಶಯಗಳನ್ನು ಹುಟ್ಟಿಸುವದು ಹಾಗು ನಿವಾರಣೆ ಮಾಡುವದು ಇದರಂತೆ ಬಂಧ-ಮೋಕ್ಷಗಳು, ಸಮಾಧಾನವು, ಬ್ರಹ್ಮನ ಬಗೆಗೆ ಚಿಂತನವು ಇವೆಲ್ಲ ಕಲ್ಪನೆಯಿಂದಲೇ ಒದಗುವವು ಮತ್ತು ಈ ಕಲ್ಪನೆಯು ದ್ವೈತಕ್ಕೆ ತಾಯಿಯು ಕಲ್ಪನೆಯಿಂದಲೇ ಜ್ಞಾನವು ಸಬಲ ಕಲ್ಪನೆಯು ಮಿಥ್ಯಾ ಬ್ರಹ್ಮಗೋಲಗಳನ್ನು ತೋರಿಸುವದು

ಶುದ್ಧ ಕಲ್ಪನೆಯು ಕ್ಷಣದಲ್ಲಿ ನಿರ್ಮಳಸ್ವರೂಪ ದರ್ಶಿಸುವದು ಸಬಲ ಕಲ್ಪನೆಯಿಂದ ಪರತತ್ವವೂ ಶುದ್ಧ ಕಲ್ಪನೆಯಿಂದ ಸಮಾಧಾನವೂ ದೊರೆಯುವವು ಆದ್ದರಿಂದ ಕಲ್ಪನೆಯೇ ಬಂಧ ಮೋಕ್ಷಗಳಿಗೆ ಕಾರಣವಾಗಿರುವದು ಶ್ರವಣ-ಮನನ ನಿಧಿಧ್ಯಾಸಗಳ ಅಭ್ಯಾಸದಿಂದ ಮಾಯೆಯ ಮಿಥ್ಯಾ ಕಲ್ಪನೆಗಳೆಲ್ಲ ಹಾರಿ ಹೋಗುವವು ಶುದ್ಧಬ್ರಹ್ಮನ ನಿಶ್ಚಯಯುಂಟಾದ ಕೂಡಲೇ ಕಲ್ಪನೆಯಿಂದ ಜನಿಸಿದ ಸಂಶಯಗಳೆಲ್ಲ ನಿವರಿಸುವವು ಸೂರ್ಯನ ಮುಂದೆ ಕತ್ತಲೆಯ ಆಟ ನಡೆಯದಂತೆ ಸಂಶಯಗಳ ಸ್ಥಿತಿಯಾಗುವದು ಅದರಂತೆ ಶುದ್ಧ ಬ್ರಹ್ಮನ ನಿಶ್ಚಿತತೆಯಿಂದ ದ್ವೈತ ಕಲ್ಪನೆ ಲೋಪವಾಗುವದು ಬ್ರಹ್ಮನ ಬಗೆಗಿರುವ ಶುದ್ಧ ಕಲ್ಪನೆಯಿಂದ ಮಾಯೆಯ ಮಿಥ್ಯತ್ವದ ಕಲ್ಪನೆಯೂ ಇಲ್ಲದಾಗುತ್ತದೆ ಒಂದು ಮೃಗವು ಇನ್ನೊಂದು ಮೃಗವನ್ನು ಹಿಡಿಯುವಂತೆ ಇಲ್ಲವೆ ಬಾಣದಿಂದ ಬಾಣವು ತುಂಡರಿಸಲ್ಪಡುವಂತೆ ಕಲ್ಪನೆಯಿಂದ ಕಲ್ಪನೆ ನಾಶವಾಗುವದು 'ಶುದ್ಧ ಕಲ್ಪನೆಯ ಬಲವು ಅಧಿಕವಾಗಲು ಸಬಲಗಳ ನಾಶಗೊಳ್ಳುವವು ಈ ವಚನ ನಂಬಿರಿ ಶುದ್ಧ ಕಲ್ಪನೆಯ ಗುರುತೆಂದರೆ —ನಿರ್ಗುಣನನ್ನು ತನ್ನಲ್ಲಿ ತಿಳಿದುಕೊಂಡು ಸತ್‌ಸ್ವರೂಪವನ್ನು ಮರೆಯದೆ ಇರುವದು ಯಾವಾಗಲೂ ಸ್ವರೂಪದ ಅನು

ಸಂಧಾನದಿಂದೆ ದ್ವೈತನಿರಸನಾಗುವದು, ಅದ್ವಯದ ನಿಶ್ಚಯದ ಜ್ಞಾನ ವುಂಟಾಗುವದು ಇದೇ ಶುದ್ಧ ಕಲ್ಪನೆಯ ಲಕ್ಷಣವು ಅದ್ವೈತದ ಕಲ್ಪನೆಯನ್ನು ಬೆಳಕಿಗೆ ತರುವದು ಆ ಕೂಡಲೇ ದ್ವೈತ ನಾಶವಾಗುವದು ಕಲ್ಪನೆಯಿಂದ ಕಲ್ಪನೆಯು ದೂರಾಗುವದೆಂದು ಜಾಣರು ಅರಿಯಬೇಕು ಶುದ್ಧ ಕಲ್ಪನೆಯ ರೂಪವನ್ನು ಸ್ವರೂಪವಾಗಿ ಕಲ್ಪಿಸಿದರೆ ಆ ಸ್ವರೂಪವನ್ನೇ ತಾನು ಹೊಂದುವನು ಅದೇ ಅಶುದ್ಧ ಕಲ್ಪನೆಯಿಂದ ಅಜ್ಞಾನ ಪ್ರಬಲವಾಗುವದು ಇದಾಗಬಾರದೆಂದು ಅಖಂಡ ಶ್ರವಣ ಮಾಡುತ್ತಿರಬೇಕು" ಎಂದು ಹೇಳಿ ಗುರುಗಳು ಶಿಷ್ಯನಿಗೆ ಮುಂದೆ ಬೋಧಿಸಹತ್ತಿದರು

ಶ್ರೀ ರಾಮ ||೬ ಬದ್ಧಮುಕ್ತ ಲಕ್ಷಣ|| ಶಿಷ್ಯನು ಗುರುಗಳನ್ನು ಕುರಿತು "ಅದ್ವೈತ ಬ್ರಹ್ಮವು ಕಲ್ಪನೆರಹಿತವಾದುದು ಎಂಬ ಬೋಧೆಯಿಂದ ನಾನು ತದಾಕಾರ ವೃತ್ತಿಯವನಾದೆನು ಸದಾ ಬ್ರಹ್ಮನಾಗಿ ಇರಬೇಕು, ಪುನ ಸಂಸಾರಕ್ಕೆ ಬರಬಾರದು ಈ ಬಗೆಗೆ ಉಪಾಯ ಹೇಳಬೇಕು ಮತ್ತು ನಿರ್ವಿಕಲ್ಪ ಬ್ರಹ್ಮನಾಗಿ ಅಲ್ಲಿಂದ ವೃತ್ತಿಯನ್ನು ಅನುಸರಿಸುವದು ಬೇಕಾಗಿಲ್ಲ, ಯಾಕೆಂದರೆ ಆ ವೃತ್ತಿಯಲ್ಲಿ ಜನ್ಮ-ಮೃತ್ಯುಗಳ ಚಕ್ರವಿದೆ, ಸುಖದು ಖಗಳ ತೊಂದರೆಯಿದೆ ಆದ್ದರಿಂದಲೇ ವೃತ್ತಿರೂಪದ ಸಂಸಾರ ಬೇಡ ಒಂದು ಪತಂಗದ ಕಾಲಿಗೆ ದಾರವನ್ನು ಕಟ್ಟಿ ಅದನ್ನು ಮೇಲೆ ಹಾರಿಸುವದೂ ಕೂಡಲೇ ದಾರವನ್ನು ಜಗ್ಗಿ ಅದನ್ನು ನೆಲಕ್ಕೆ ಕೆಡವುವದೂ ಈ ಆಟದಲ್ಲಿ ಪತಂಗದಂತೆ ನನ್ನ ಸ್ಥಿತಿಯಾಗುವದು ಹೀಗಾಗಬಾರದು ಅದ್ವೈತ ಬ್ರಹ್ಮ ಬೋಧೆಯನ್ನು ಕೇಳುತ್ತಿರುವಾಗಲೇ ನನ್ನ ದೇಹ ಬೀಳಲಿ, ಮರಣವುಂಟಾಗಲಿ, ಮತ್ತು ಅಹಂವೃತ್ತಿಯು ನಿಶ್ಶೇಷವಾಗಲಿ ಬ್ರಹ್ಮನಾಗಿ ಸಂಸಾರನೇರುವದು ಲಜ್ಜಾಸ್ಪದವು ಬ್ರಹ್ಮಪ್ರಾಪ್ತಿಯ ನಂತರ ವೃತ್ತಿಯನ್ನನುಸರಿಸಿ ಸಂಸಾರವನ್ನೇಕೆ ಮಾಡಬೇಕು? 'ಪ್ರಬಲವಾದ ಜ್ಞಾನಬೋಧೆಯಾಗಬೇಕು, ಅದು ಕೂಡಲೇ ಲುಪ್ತವಾಗಬೇಕು' ಈ ಸ್ಥಿತಿಯು ನನ್ನಲ್ಲಿ ಉಂಟಾಗಬಾರದು ಸದ್ಯ ಹೀಗಾಗಹತ್ತಿದೆ ಅಖಂಡ ಬ್ರಹ್ಮಾಕಾರ ಗತಿಯು ನನಗಾಗಿರುವದಿಲ್ಲ ಬ್ರಹ್ಮಸುಖವನ್ನು ಪಡೆಯುತ್ತಿರುವಾಗ ಸಂಸಾರವು ಹಿಂದೆ ಎಳೆಯುವದು, ಸಂಸಾರದಲ್ಲಿರುವಾಗ ಚಿತ್ತವು ಮತ್ತೆ ಬ್ರಹ್ಮನ ಕಡೆಗೆ ಎಳೆಯುವದು ಇಂಥ ಸ್ಥಿತಿಯು ನನಗೆ ಬೇಕಾ

ಗಿಲ್ಲ ಇದರಿಂದ ನಾನು ಬೇಜಾರುಗೊಂಡಿರುವೆನು ಒಟ್ಟಿನ ಮೇಲೆ— ಬ್ರಹ್ಮನಿರೂಪಣೆಯಾಗುವಾಗಲೇ ನನ್ನ ದೇಹ ಬೀಳಬೇಕು ಮತ್ತೆ ಸಂಸಾರಕ್ಕೆ ಬರಬಾರದು ಇಷ್ಟಕ್ಕೆ ಮಾತ್ರ ನಿಶ್ಚಿತ ಉಪಾಯವನ್ನು ನನಗೆ ಹೇಳುವದಾಗಬೇಕು ಸದ್ಯ ನನ್ನ ಮನಸ್ಸು ಚಂಚಲವಾದುದರಿಂದ ಅದು ಎರಡೂ ಕಡೆಯಿಂದ ಜಗ್ಗಲ್ಪಡುತ್ತಿರುವದು ಏನೊಂದು ನಿಶ್ಚಿತಕ್ಕೆ ಬರಲೊಲ್ಲದು. ಆದ್ದರಿಂದ ನನ್ನ ಮತಿಯು ಅಖಂಡ ಬ್ರಹ್ಮಾಕಾರವಾಗುವ ಉಪಾಯವನ್ನು ಹೇಳಿರಿ" ಎಂದು ಬೇಡಿಕೊಂಡನು.

ಆಗ ಗುರುಗಳು ಶಿಷ್ಯನು ಪ್ರಶ್ನೆ ಪ್ರಶ್ನೆ ಮಾಡಿದಂಥ ಉತ್ತರವನ್ನು ಹೇಳಿದರು ಅವರು ಶಿಷ್ಯನಿಗೆ— "ಬ್ರಹ್ಮತ್ವ ಪಡೆದವರಷ್ಟೇ ಮುಕ್ತರಾಗುವರೇ? ಹಾಗಿದ್ದರೆ ಉಳಿದ ವ್ಯಾಸ ಮೊದಲಾದವರು ಮುಕ್ತರಾಗಲಿಲ್ಲವೇ? ಪ್ರಪಂಚದಲ್ಲಿದ್ದುಕೊಂಡು ಕರ್ಮ ಮಾಡುವವರಿಗೆ ಮುಕ್ತಿಯಾಗುವದಿಲ್ಲವೇ?" ಎಂದ ಹೇಳಲು ಶಿಷ್ಯನು ಮತ್ತೆ ಗುರುಗಳನ್ನು ಕುರಿತು "ಶ್ರುತಿಯಲ್ಲಿ —'ಶುಕೋ ಮುಕ್ತೋ ವಾಮ ದೇವೋ ವಾ' ಎಂಬ ವಚನವಿದೆ ಆದರಿಂದ ಆ ಶುಕ ಮತ್ತು ವಾಮದೇವ ಇವರಿಬ್ಬರೇ ಮಾತ್ರ ಮುಕ್ತರು ಉಳಿದವರು ಬದ್ಧರು ಎಂಬುದರಲ್ಲಿ ವಿಶ್ವಾಸಡಬೇಕಾಗುವದಲ್ಲವೇ?" ಎಂದು ಕೇಳಿದನು

ಆಗ ಶಿಷ್ಯನಿಗೆ ಪ್ರತ್ಯುತ್ತರವಾಗಿ ಗುರುಗಳು —'ಇದು ವರೆಗೆ ಶುಕ-ವಾಮದೇವ ಇವರಿಬ್ಬರ ಹೊರತು ಯಾರೂ ಮುಕ್ತರಾಗಿಲ್ಲ, ಇನ್ನು ಮುಂದೆಯೂ ಆಗುವದಿಲ್ಲ ಹೀಗೆ ನಿನ್ನ ತಿಳುವಳಿಕೆಯಿರುವದಾದರೆ ಅದು ಸರಿಯಲ್ಲ, ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ, ಅಂಬರೀಷ, ಶೌನಕ, ಭೀಷ್ಮ, ದಾಲ್ಭ್ಯ, ರುಕ್ಮಾಂಗದ, ಅರ್ಜುನ, ವಸಿಷ್ಠ, ವಿಶ್ವಾಮಿತ್ರ ಮುಂತಾದವರು ಹಾಗು ಮಹಾಭಾರತ-ಭಾಗವತಗಳಲ್ಲಿ ವರ್ಣಿಸಲಾಗಿದ್ದ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ ಈ ಒಂಭತ್ತು ಜನ ಯೋಗಿಗಳು ಇವರ ಹೊರತು ಹರಿ–ಹರ-ಬ್ರಹ್ಮರು, ವಿದೇಹಾದಿ ರಾಜರ್ಷಿಗಳು, ಒಟ್ಟಿನ ಮೇಲೆ ಅದೆಷ್ಟೋ ಋಷಿಗಳು, ಬಹುಜನ ಮುನಿಗಳು ಸಿದ್ಧರು, ಯೋಗಿಗಳು, ಆತ್ಮಜ್ಞಾನಿಗಳು ಹೀಗೆ ಬಹು ಜನರು ಮುಕ್ತ

ರಾಗಿರುವಾಗ ಶುಕ-ವಾಮದೇವರಿಬ್ಬರೇ ಮುಕ್ತರು ಉಳಿದವರೆಲ್ಲ ಬದ್ಧರು ಎನ್ನುವದು ತಿಳಿದಂಥ ಮೂರ್ಖರುಗಳಿಗೆ ಒಪ್ಪುವದೇ ಹೊರತು ಇತರರಾರೂ ಈ ಮಾತಿನಲ್ಲಿ ವಿಶ್ವಾಸವಿಡಲಾರರು'' ಎಂದು ಹೇಳಿದರು ಆಗ ಶಿಷ್ಯನು ಮತ್ತೆ—

''ಅಂದ ಮೇಲೆ ವೇದ ವಚನಗಳು ಮಿಥ್ಯವಾದವುಗಳೇನು?'' ಎಂದು ಕೇಳಿದನು ಆಗ ಗುರುಗಳು—'ವೇದವನ್ನು ಪೂರ್ವಪಕ್ಷವಾಗಿಟ್ಟುಕೊಂಡು ಮೂರ್ಖರು ಅದರಲ್ಲಿಯೇ ಲಕ್ಷವನ್ನು ಇಡುವರು ಅವರು ಸಾಧುಗಳನ್ನು ವ್ಯುತ್ಪನ್ನಮತಿ-ದಕ್ಷರುಗಳನ್ನೂ ಒಪ್ಪುವದಿಲ್ಲ ಒಂದು ವೇಳೆ ಒಪ್ಪಿ ಕೊಂಡರೂ ವೇದಸಾಮರ್ಥ್ಯವನ್ನು ಹೀಗಳೆಯುವ ಅವರು ವೇದಗಳಿಂದ ಉದ್ಧೃತರಾದರೆಂಬುದನ್ನು ಯಾರೂ ಹೇಳಲಾರರು ವೇದದಲ್ಲಿ ಅಂಥ ಸಾಮರ್ಥ್ಯವು ಇಲ್ಲದಿದ್ದರೆ ಆ ವೇದಗಳನ್ನು ಯಾರು ಮನ್ನಿಸುತ್ತಿದ್ದರು? ಲೋಕೋದ್ಧಾರದ ಸಾಮರ್ಥ್ಯವು ವೇದಗಳಲ್ಲಿದ್ದುದರಿಂದಲೇ ಅವು ಸರ್ವ ಮಾನ್ಯವಾಗಿವೆ ವೇದಾಕ್ಷರದ ಸಂಸ್ಕಾರ ಹೊಂದಿದವನು ಪುಣ್ಯರಾಸಿಯು ವೇದಶಾಸ್ತ್ರ ಪುರಾಣಗಳ ಶ್ರವಣ ಸಾಧಿಸಿದವನೇ ಭಾಗ್ಯವಂತನು ಅವನೇ ಪಾವನನು ಇಂತು ಸಾಧುಗಳ ವಚನವಿದೆ, ಆ ವೇದ-ಶಾಸ್ತ್ರ ಪುರಾಣಗಳಲ್ಲಿಯ ಒಂದಾಗಲಿ, ಅರ್ಧವಾಗಲಿ ಕೊನೆಗೆ ಒಂದೇ ಚರಣ ವಾಗಲಿ ಬಹಳೇಕೆ? ಒಂದೇ ಶಬ್ದವನ್ನಾಗಲಿ ಶ್ಲೋಕಶ್ರವಣದಿಂದೆ ಹಲವು ಪಾಪಗಳ ಲೇಪನವು ಲೋಪವಾಗುವದು ವೇದ-ಶಾಸ್ತ್ರ ಪುರಾಣಗಳಿಗೆ ಇಂಥ ವಾಕ್ಯಗಳೇ ಮಾತೃಸ್ವರೂಪವಾಗಿರುವವೆಂದು ಶ್ರೀ ವ್ಯಾಸರ ವಚನ ವಿದೆ ಒಂದಕ್ಷರ ಶ್ರವಣದಿಂದ ಆ ಕೂಡಲೆ ಮಾನವನು ಪಾವನನಾಗು ವನೆಂದ ಮೇಲೆ ಈ ಗ್ರಂಥಗಳ ಮಹತ್ತತೆಯು ಅಲ್ಲಲ್ಲಿಗೆ ಹೇಳಲ್ಪಟ್ಟದೆ ವೇದಗಳಿಂದ ಶುಕ ವಾಮದೇವರಿಬ್ಬರೇ ಉದ್ಧೃತರಾದರೆ ಉಳಿದವರ ಉದ್ಧಾ ರವೆಂತಾಗುವದು? ಒಳ್ಳೇದು ಶಿಷ್ಯನೆ! ಕಟ್ಟಿಗೆಯಾಗಿ ಬಿದ್ದರೆ ಮುಕ್ತನಾ ದಂತೆಂಬ ನಿನ್ನ ಗ್ರಹಿಕೆಯ ನಿರಾಕರಣೆಗಾಗಿ ಪರೀಕ್ಷಿತರಾಜನ ಉದಾಹರಣೆ ಸಾಕು ಆ ಪರೀಕ್ಷಿತ ರಾಜನಿಗೆ ಶುಕ ಮುನಿಗಳು ತಮ್ಮ ಮುಖದಿಂದಲೇ ಭಾಗವತ ಶ್ರವಣ ಮಾಡಿಸಿದರು ಆಗ ಪರೀಕ್ಷಿತ ರಾಜನು ಕಟ್ಟಿಗೆಯಂತೆ ಚೇತನಾರಹಿತನಾಗಿ ಬೀಳಲಿಲ್ಲವಷ್ಟೇ? ಶುಕಮುನಿಯು ಮುಕ್ತನೆಂದು

ವೇದ ವಚನವಿದೆ ಆಪರೀಕ್ಷಿತ ರಾಜನು ಕಟ್ಟಿಗೆಯಂತೆ ನಿರ್ಜೀವನಾಗಿ ಬೀಳ ಲಿಲ್ಲ ಅದರಂತೆ ಆ ರಾಜನಿಗೆ ಬೋಧೆ ಮಾಡುವಾಗ ಶುಕನೂ ಕಟ್ಟಿಗೆ ಯಂತೆ ಅಚೇತನನಾಗಿ ಬಿದ್ದಿರಲಿಲ್ಲ 'ಕಟ್ಟಿಗೆಯಂತೆ ನಿಶ್ಚಲನಾಗಿ ಬೀಳು ವದು ಮುಕ್ತಿ' ಎಂದು ವೇದಾಭಿಪ್ರಾಯವಿಲ್ಲ ಭಾಗವತ ನಿರೂಪಣೆಯಲ್ಲಿ ಸಾರಾಸಾರ ವಿಚಾರ ತುಂಬಿದೆ ಸಾರಾಸಾರ ವಿಚಾರಗಳನ್ನು ಹೇಳುವಲ್ಲಿ ದೃಷ್ಟಾಂತಕ್ಕಾಗಿ ಚರಾಚರ ಸೃಷ್ಟಿಯನ್ನೆಲ್ಲ ಹುಡುಕಾಡಬೇಕಾಗುವದು ಕೆಲವೊಮ್ಮೆ ಬ್ರಹ್ಮನಾಗುವದು, ಕೆಲವೊಮ್ಮೆ ದೃಶ್ಯವನ್ನು ಕಾಣುವದು ಮತ್ತು ಇಂಥದರಲ್ಲಿಯೇ ದೃಷ್ಟಾಂತವನ್ನು ತೆಗೆದುಕೊಂಡು ಸಿದ್ಧಾಂತವನ್ನು ಮಂಡಿಸುವದು, ಈ ಪ್ರಕಾರದ ವಕ್ತೃತ್ವತೆಯಿರಬೇಕು ಇದು ಉಪದೇ ಶಕರ ಹಾಗು ಗ್ರಂಥಕಾರರ ಅನುಭವವಾಗಿರುವದು ಶುಕಮುನಿಗಳು ನಿರೂ ಪಣೆಯ ಪ್ರಸಂಗದಲ್ಲಿ ಇದೇ ಕ್ರಮವನ್ನು ಅನುಸರಿಸಿದರೆಂದು ಅವರನ್ನು ಬದ್ಧರೆಂದು ತಿಳಿಯುವದು ಯೋಗ್ಯವಾಗಲಾರದು ಒಟ್ಟಿನ ಮೇಲೆ ನಡೆ ಯಲ್ಲಿಯೂ ನುಡಿಯಲ್ಲಿಯೂ ಕಟ್ಟಿಗೆಯಂತೆ ನಿಶ್ಚೇತನನಾಗಿ ಬೀಳದಿ ದ್ದರೂ ಮುಕ್ತಸ್ಥಿತಿಯು ಸದ್ಗುರು ಕೃಪೆಯಿಂದ ಅಂತರಿಸಲಾರದು

ಇನ್ನು ಜೀವಂತವಾಗಿರುವಲ್ಲಿ ಜ್ಞಾನವುಂಟಾಗಿದ್ದರೂ ವ್ಯವಹಾರಮಾಡುವವ ರಿಗೆ ಜೀವನ್ಮುಕ್ತರೆನ್ನುವದು ಮತ್ತು ದೇಹದ ಮೇಲಿನ ಪರಿವೆಯಿಲ್ಲದವನು ವಿದೇಹ ಮುಕ್ತನೆನ್ನಿಸುವನು ಸ್ವರೂಪಬೋಧೆಯಿಂದ ತಾಟಸ್ಥ್ಯವೂ ಸ್ತಬ ತೆಯೂ ಪ್ರಾಪ್ತವಾಗುವದು ದೇಹಧರ್ಮವಾಗಿರುವದು ಅದಕ್ಕೂ ಸ್ವರೂಪ ಬೋಧೆಗೂ ಏನೊಂದು ಸಂಬಂಧವಿಲ್ಲ ಆತ್ಮಾನುಭವವು ಮುಖ್ಯವು ಅದ್ಕು ಉಂಟಾದ ಬಳಿಕ ಕೆಲವರು ಸ್ತಬ್ಧರಾಗುವರು, ಕೆಲವರು ಸಂಚಲರಾಗಿ ವ್ಯವ ಹಾರ ಮಾಡುವವರು ವ್ಯವಹಾರ ಮಾಡುವರೆಂದಿಷ್ಟರಿಂದಲೇ ಅಜ್ಞಾನಿಗಳಿಗೆ ಬದ್ಧರೆಂದೆನ್ನುವದು ಯೋಗ್ಯವಲ್ಲ ಒಬ್ಬನು ಆಕಂಠಪರಿಯಂತ ತೃಪ್ತ ಭೋಜನ ಮಾಡಿದವನನ್ನು ಕಂಡು ಇನ್ನೊಬ್ಬನು ಅವನಿಗೆ—'ನೀನು ಉಂಡಿ ರುವದಿಲ್ಲ, ಹಸಿದಿರುವಿ' ಎಂದರೆ ಆ ಮನುಷ್ಯನಿಗಾಗಿದ್ದ ಭೋಜನತೃಪ್ತಿಯು ನಾಶವಾದಂತಾಯಿತೇ? ಇಲ್ಲ ತಾಟಸ್ಥ್ಯವು ಇಲ್ಲವೆ ಸಂಚಲನವು ಇವೆ ರಡೂ ದೇಹಸಂಬಂಧಿತವಾದವುಗಳು ಮತ್ತು ಸ್ವರೂಪ ಪಡೆದವನಲ್ಲಿ ದೇಹ ವಿಲ್ಲ ಅಂದರೆ ಅವನು ಸ್ವರೂಪಾಕಾರನಾಗಿರುವನು, ಅರ್ಥಾತ್ ದೇಹಾಭಿ

ಮಾನದಿಂದ ಬಿಡುಗಡೆಯಾಗಿರುವನು ಅವನು ಬದ್ಧತೆ-ಮುಕ್ತತೆ ಇವೆರಡರಿಂದ ಹೊರತಾಗಿರುವನು 'ನಾನು ಮುಕ್ತನು' ಎಂದು ತಿಳಿದುಕೊಳ್ಳುವದು ಬದ್ಧ-ಸ್ವರೂಪ ಬದ್ಧ-ಮುಕ್ತ ಇವಾವವೂ ಆಗಿರುವದಿಲ್ಲ ಬದ್ಧತೆಯು ದೇಹಬುದ್ಧಿಯಿಂದಾದುದು ಇದು ಹೋದ ಮೇಲೆ ಅವನು ಮೂಕನೇ ಇರಲಿ ವಾಚಾಳನೇ ಆಗಿರಲಿ, ಅವನು ಮುಕ್ತನೇ ಆಗುವನು 'ನಾನು ಮುಕ್ತನು' ಎಂಬ ದೇಹಬುದ್ಧಿಯ ಕಲ್ಲನ್ನು ಹೊಟ್ಟೆಗೆ ಕಟ್ಟಿಕೊಂಡದ್ದಾದರೆ ಆವನು ಮುಕ್ತತ್ವದಿಂದ ಬದ್ಧನು, ಯಾಕಂದರೆ ದೇಹಬುದಿಯನ್ನು ಒಪ್ಪುವನು, ಸ್ವರೂಪಾಕಾರತೆ ಹೊಂದುವದಿಲ್ಲ ಬದ್ಧ ಹಾಗು ಮುಕ್ತ ಇವೆರಡೂ ಮಾಯೆಗೆ ಸಂಬಂಧಿಸಿದ ಮಾತುಗಳು, ಸ್ವರೂಪದೊಡನೆ ಬದ್ಧತೆ-ಮುಕ್ತತೆಗಳ ಏನೊಂದು ಸಂಬಂಧವಿಲ್ಲ ಹಾಗೂ ಸ್ವರೂಪಾಕಾರ ಹೊಂದಿದ ಜ್ಞಾನಿಗೂ ಕೂಡ ಸಂಬಂಧವಿಲ್ಲ ನಾಮರೂಪಾತ್ಮಕ ಮಾಯೆಯು ಇಲ್ಲದಂತಾದ ಮೇಲೆ ಮುಕ್ತತ್ವದ ಕಲ್ಪನೆಯು ಉಳಿಯುವವದಿಲ್ಲ ನಿಜವಾಗಿ ಮುಕ್ತತೆಯನ್ನು ಹೊಂದುವವನು 'ಬದ್ಧ' 'ಮುಕ್ತ' ಈ ಎರಡೂ ಕಲ್ಪನೆಗಳನ್ನು ಮರೆತು ಬಿಡುವನು ಈ ಬದ್ಧತೆ ಮುಕ್ತತೆಗಳು ಆತ್ಮಗಳೆಲ್ಲ, ದೇಹಕ್ಕೆ ಸಂಬಂಧವಾದವು ದೇಹವೂ ಕೂಡ ಆತ್ಮನಲ್ಲ 'ನಾನು' ಎಂಬ ಭಾವನೆಗೆ ಇವು ಬಂಧನಕಾರಿಗಳಾಗುವವು ಈ ಅಹಂತ್ವವು ಮಾಯಾತೀತವಾದ ವಿಶ್ರಾಂತಿ-ಸ್ಥಾನವೆನ್ನಿಸಿದ ಪರಬ್ರಹ್ಮವು ಪ್ರಾಪ್ತವಾಗದವರೆಗೆ ಇರುವದು, ಕಲ್ಪನೆಗಳಾದ ಬದ್ಧತೆ, ಮುಕ್ತತೆಗಳೂ ಕೂಡ ನಿಜವಲ್ಲ ಬಿಸಿಲ್ಗುದುರೆಯಂತೆ ಇಲ್ಲವೆ ಮೋಡಗಳಂತೆ ಮಿಥ್ಯವಾದವುಗಳಾಗಿರುವವು ಸ್ವಪ್ನದಲ್ಲಿ ಕಂಡ ಬದ್ಧತೆ ಮುಕ್ತತೆಗಳು ಎಚ್ಚರಾದ ಕೂಡಲೇ ಉಳಿಯಲಾರವು, 'ಆಗ ಏನೇನೋ ಆಯಿತು, ಏನೂ ತಿಳಿಯಲಿಲ್ಲ' ಇಷ್ಟೇ ಹೊಳೆಯುತ್ತದೆ ಕೇವಲ ಶುದ್ಧ ಆತ್ಮಜ್ಞಾನವಾದ ಜೀವನೇ ಮುಕ್ತವು, ಬದ್ಧತೆ-ಮುಕ್ತತೆ ಎಂಬ ಸಂದೇಹಗಳು ಕಲ್ಪನೆಯಿಂದಲೇ ದೇಹಕ್ಕೆ ಸಂಬಂಧಿಸುವವು ಸಾಧುಗಳು ಸರ್ವಕಾಲವೂ ನಿಸ್ಸಂದೇಹರು, ಅವರೇ ದೇಹಾತೀತವಸ್ತುಗಳು

ಇನ್ನು ಮುಂದೆ ಈ ವಿಷಯದಲ್ಲಿ ಯಾವ ಬಗೆಯನ್ನನುಸರಿಸಿಬೇಕೆಂಬುದನ್ನು ಸಾವಧಾನವಾಗಿ ಶ್ರವಣ ಮಾಡಬೇಕು" ಎಂದು ಗುರುಗಳು ಹೇಳಿದರು,

ಶ್ರೀ ರಾಮ ॥ ೭ ಸಾಧನ ಪ್ರತಿಷ್ಠೆ ಶಿಷ್ಯನು ಗುರುಗಳನ್ನು ಕುರಿತು ಪ್ರಶ್ನ ಮಾಡಿದನೆಂತೆಂದರೆ - "ಬ್ರಹ್ಮವಸ್ತುವು ನಿರ್ವಿಕಾರವಿದ್ದುದಾದರೆ ಅದರ ಕಲ್ಪನೆಯನ್ನು ಹೇಗೆ ಮಾಡುವದು ? ಒಂದು ವೇಳೆ ಕಲ್ಪನೆ ಮಾಡಹತ್ತಲು ಆಗ ಅದರ ಪರಿಚಯವುಂಟಾಗದೆ ಲಕ್ಷ್ಯವು ಭ್ರಮೆ ಯುಕ್ತವಾಗಿ ಜೇರೊಂದೆಡೆಗೆ ಸಾಗುವದು ಕಣ್ಣಿಗೆ ಕಾಣದಂಥ ಹಾಗು ಮನಕ್ಕೆ ಭಾಸವಾಗದಂಥ ಬ್ರಹ್ಮನನ್ನು ತಿಳಿಯುವ ಬಗೆ ಹೇಗೆ ? ಕಲ್ಪನೆಯನ್ನು ಮಾಡಹತ್ತಲು ಕತ್ತಲೆ ತುಂಬಿದ ಹಾಗಾಗುತ್ತದೆ ಆ ಬ್ರಹ್ಮನಿಗೆ ವರ್ಣ ರೂಪಗಳಿಲ್ಲ ಗುಣಗಳಿಲ್ಲ ಅವನು ಅಚಿಂತ್ಯನು ಎನ್ನಿಸುವನು ಆದರೆ ಆ ನಿರ್ಗುಣನನ್ನು ಕಾಣುವ ಬಗೆ ಹೇಗೆ ? ಅವನು ಸಂಗರಹಿತನು, ಆಧಾರವಿಲ್ಲದವನು, ನಿಃಶಬ್ದನು ಆಗಿರುವನು ಆ ಅದ್ವೈತನ ಧ್ಯಾನ ಮಾಡಬೇಕು ಆದರೆ ಮನಸ್ಸಿನಲ್ಲಿ ದ್ವೈತವು ನೆರೆಯೂರುವದು ಅನುಸಂಧಾನವನ್ನು ಹಿಡಿಯದಿದ್ದರೆ ಮನಸ್ಸು ಸಂಶಯದಲ್ಲಿ ಬೀಳುವದು ಅದ್ವೈತದ ಧ್ಯಾನ ನಿರತನಾಗಲು ದ್ವೈತವುಂಟಾಗುವದೆಂಬ ಭಯದಿಂದ ಬ್ರಹ್ಮನನ್ನು ನೋಡದಿದ್ದರೆ ಸಮಾಧಾನ ಸುಖವು ದೊರೆಯುವದಿಲ್ಲ ಅವನ ಧ್ಯಾನದಲ್ಲಿ ನಿರತನಾದರೆ ಅದೇ ರೂಢಿಯುಂಟಾಗುವದು ಮತ್ತು ಸಹಜ ವಸ್ತುವಿನ ಲಾಭವುಂಟಾಗುವದು ಇದು ಸತ್ಯವಿದ್ದರೂ ವಸ್ತುವಿನ ಚಿಂತನದಿಂದ ದ್ವೈತವು ಉದಿಸುವದು, ಇಲ್ಲದಿದ್ದರೆ ಇಲ್ಲ ಈ ಪ್ರಕಾರ ಮನಸ್ಸು ನಿರರ್ಥಕ ಸಂದೇಹಗೊಳ್ಳುವದು ಆದ್ದರಿಂದಲೇ ವಿವೇಕವನ್ನು ಹಿಡಿಯಬೇಕು, ಜ್ಞಾನದಿಂದ ಪ್ರಪಂಚವನ್ನು ನಿವಾರಿಸಬೇಕು, ಹಾಗು ಅಹಂಭಾವವನ್ನು ತ್ಯಾಗ ಮಾಡಬೇಕು ಈ ಅಹಂಭಾವನ್ನು ಹೇಗೆ ಬಿಡಬೇಕು?" ಎಂಬದಾಗಿ ಪ್ರಶ್ನೆ ಮಾಡಿದನು. ಆಗ ಗುರುಗಳು—

"ಪರಬ್ರಹ್ಮನು ಅದ್ವೈತನಾಗಿರುವನು ಅವನ ಕಲ್ಪನೆ ಮಾಡಲು ದ್ವೈತವು ಹುಟ್ಟುವದು ಎಂಬ ನಿನ್ನ ಹೇಳಿಕೆಯು ಇದೇನೂ ಸುಳ್ಳಲ್ಲ ಬ್ರಹ್ಮಸ್ವರೂಪವು ಹೀಗಿರುವದೆಂದು ಹೇಳಲು ಬರಲಾರದು ಅಲ್ಲಿ ಕಾರ್ಯ ಕಾರಣ ಸಂಬಂಧವನ್ನಿಡಲು ಬರುವದಿಲ್ಲ ಮತ್ತು ಆ ಬ್ರಹ್ಮಸ್ವರೂಪದಂಥ ಸ್ವರೂಪವು ಇನ್ನೊಂದಿಲ್ಲ ಅದು ಒಂದೇ ಆದುದರಿಂದ ಅದನ್ನು ದೃಷ್ಟಾಂತಗಳಿಂದಲೂ ಹೇಳಲಿಕ್ಕೆ ಬರಲಾರದು ಅದನ್ನು ನೆನಪಿಗೆ ತಂದುಕೊಳ್ಳುವಷ್ಟರಲ್ಲಿಯೇ

ಮರೆತು ಹೋಗುತ್ತದೆ ಅದರ ಸ್ಮರಣೆಗೆ ಸಿದ್ಧವಾಗಲು ತ್ರಿಪುಟೀಗಳು ತಲೆ ಯೆತ್ತಿ ಅದರ ವಿಸ್ಮರಣೆಯಾಗುವದು ಮತ್ತು ಮರೆತು ಹೋದದ್ದು ನೆನಪಿಗೆ ಬರುವದು ಅದನ್ನು ತಿಳಿಯುವಲ್ಲಿ ಅರಿವು ಉಳಿಯುವದಿಲ್ಲ, ತಿಳಿದೂ ತಿಳಿ ಯದಂತಿರಬೇಕು. ಅಂದರೆ ಸಹಜವಾಗಿ ಬ್ರಹ್ಮರೂಪ ವಿಳಿಯುವದು ಅದನ್ನು ಬಿಟ್ಟೂ ಬಿಡದೆ ದರ್ಶನ ತೆಗೆದುಕೊಳ್ಳುತ್ತ ಹೋಗಲು ದೂರಾಗು ವದು ಈ ಆಶ್ಚರ್ಯಕರ ಸಂಗತಿಯು ನುಡಿಯಲು ಬಾರದಂತಹದಾಗಿರುವದು ಅದನ್ನು ಸಾಧಿಸಿಕೊಳ್ಳುವದಕ್ಕೆ ಹೋಗಲು ಸಾಧ್ಯವಿಲ್ಲ ಬಿಡಬೇಕೆಂದರೆ ಬಿಡುವದೂ ಶಕ್ಯವಿಲ್ಲ ಯಾಕೆಂದರೆ ಅದರ ನಿತ್ಯಸಂಬಂಧವು ಇದ್ದೇ ಇರು ವದು ಆ ಬ್ರಹ್ಮಸ್ವರೂಪ ಪ್ರಾಪ್ತಿಯ ಉಪಾಯ ಕೈಕೊಳ್ಳಲು ಅದು ಅಪಾ ಯವಾಗಿ ಪರಿಣಮಿಸುವದು ಮತ್ತು ಅಪಾಯವೂ ಉಪಾಯವಾಗುವದು ಅದು ಹುಟ್ಟದಿದ್ದರೆ ಹುಟ್ಟುವದು ಮತ್ತು ಹುಟ್ಟಿದರೂ ಹುಟ್ಟುವದಿಲ್ಲ ದೃಷ್ಟಾ ದೃಷ್ಟವೃತ್ತಿಯನ್ನು ಬಿಟ್ಟುಬಿಟ್ಟರೆ ಮಾತ್ರ ನಿವೃತ್ತಿಪದವು ಪ್ರಾಪ್ತ ವಾಗುವದು ಆ ಪದವು ಧ್ಯಾನ ಹಾಗು ಚಿಂತನಗಳ ವಿಷಯವಾಗುವದಿಲ್ಲ ಮನಸಿನಲ್ಲಿ ಕೂಡುವದಿಲ್ಲ ಅದಕ್ಕೆ ನೀರಿನ ದೃಷ್ಟಾಂತದಿಂದ ಹೋಲಿಸಿದರೆ ಅದು ನಿರ್ಮಲವೂ ನಿಶ್ಚಲವೂ ಆಗಿರುವದು ಆದರಂತೆ ನೀರಲ್ಲ ಬ್ರಹ್ಮಾಂಡ ವನ್ನೆಲ್ಲ ನೀರಲ್ಲಿ ಮುಳುಗಿಸಿದರೆ ಸಹ ಅದು ಮುಳುಗಲಾರದು ಅದನ್ನು ಬೆಳಕು ಕತ್ತಲೆಗಳಿಗೆ ಯಾವ ಬಗೆಯಿಂದಲೂ ದೃಷ್ಟಾಂತವನ್ನಿಡಲು ಬರಲಾ ರದು” ಎಂದರು

ಅಷ್ಟರಲ್ಲಿ ಶಿಷ್ಯನು – “ನಿರಂಜನನಾದ ಇಂಥ ಬ್ರಹ್ಮನು ಮನ,ಬುದ್ಧಿ, ಮಾತುಗಳಿಗೆ ದೃಶ್ಯಮಾನ ಸಾಗುವದಿಲ್ಲೆಂದು ತಿಳಿದಮೇಲೆ ಅವನ ಅನು ಸಂಧಾನವೇಕೆ ? ವ್ಯರ್ಥವಾಗಿ ಅದೆಲ್ಲಿ ನೋಡಬೇಕು ? ಪರಬ್ರಹ್ಮನೆಂದರೆ ಅವನು ಸತ್ಯ ಸ್ವರೂಪನಿರುವನೆಂದೇನೂ ಅನ್ನಿಸುವದಿಲ್ಲ ಅವನ ಆಭಾಸವ ತ್ವದ ಸಂಶಯುವು ಮನಸ್ಸಿನಲ್ಲಿ ಆರೂಢವಾಗಿದೆ” ಎಂದನು

ಗುರುಗಳು ಶಿಷ್ಯನಿಗೆ ಉತ್ತರವಾಗಿ—‘ ಬ್ರಹ್ಮನ ಬಗೆಗೆ ನೀನು ತಳೆದಿ ರುವ ಅಭಾವತ್ವದ ಕಲ್ಪನೆಯು ನಿಜವಾದುದಾದರೆ ವೇದ-ಶಾಸ್ತ್ರಗಳೂ ವ್ಯಾಸಾದಿಮಹರ್ಷಿಗಳುಹೇಳಿದಜ್ಞಾನೋಪಾಯಗಳೂ ಮಿಥ್ಯವಾದವುಗಳೆಂದು ಅನ್ನಬೇಕಾಗುವದು ನೀನು ಅಹಂಕಾರದ ಪ್ರೌಢಿಯಿಂದ ಮಿಥ್ಯವೆಂದುನುಡಿ

ಯುವದು ಸರಿಯಲ್ಲ ಗುರುಗೀತೆಯೆಂಬ ಗ್ರಂಥದಲ್ಲಿ ಶ್ರೀ ಶಂಕರನ್ನ ಅದ್ವೈತ ಜ್ಞಾನದ ಬೋಧೆ ಮಾಡಿರುವನು, ಅವಧೂತ ಗೀತೆಯಲ್ಲಿ ಗೋರಖನಾಥ ನಾಥನಿಗೆ ಜ್ಞಾನೋಪದೇಶ ಮಾಡಲಾಗಿದೆ, ಹಂಸ ಗೀತೆಯಲಿ ಭಗವಾನ್ ವಿಷ್ಣುವು ರಾಜಹಂಸ ರೂಪದಿಂದ ಬ್ರಹ್ಮದೇವನಿಗೆ ಅದನ್ನೇ ಉಪದೇಶಿಸಿರುವನು. ಭಾಗವತದ ಪುರಾಣದಲ್ಲಿ ಬ್ರಹ್ಮದೇವನಿಂದ ನಾರದರಿಗೆ ಚತುಃಶ್ಲೋಕೀ ಭಾಗವತವು ನಿರೂಪಿಸಲ್ಪಟ್ಟಿದೆ ಇದನ್ನೇ ಮುಂದೆ ವ್ಯಾಸರು ವಿಸ್ತರಿಸಿ ಮಹಾಭಾಗವತದ ರೂಪಕ್ಕೆ ಇಳಿಸಿದರು, ಯೋಗವಾಸಿಷ್ಠವೆಂಬ ಗ್ರಂಥದಲ್ಲಿ ಪ್ರಭು ರಾಮಚಂದ್ರನಿಗೆ ವಶಿಷ್ಠ ಋಷಿಗಳೂ ಭೀಷ್ಮ ಪರ್ವದಲ್ಲಿ ಅರ್ಜುನನಿಗೆ ಶ್ರೀ ಕೃಷ್ಣನೂ ಇದೇ ಅದ್ವೈತ ಜ್ಞಾನದ ಉಪದೇಶ ಮಾಡಿರುವರು ಇದರಂತೆ ಇನ್ನೂ ಎಷ್ಟೋ ಮಹಾತ್ಮರು ಅದ್ವೈತದ ಸತ್ಯತೆಯನ್ನು ಸಿದ್ಧಮಾಡಿ ತೋರಿಸಿರುವರು ಇದೆಲ್ಲ ವಿವರಣೆಯಿಂದ ತಿಳಿಸುವದೇನಂದರೆ, ಶ್ರದ್ಧೆಯಿಲ್ಲದೆ ಯಾರಾದರೂ ಆತ್ಮಜ್ಞಾನವನ್ನು ಮಿಥ್ಯವೆಂದು ಹೇಳಿದ್ದಾದರೆ ಅವರು ಪತಿತರೆಂದೇ ಹೇಳಬಹುದು ಮಂದ ಬುದ್ಧಿಯವರಿಗೆ ಇದು ತಿಳಿಯಲಾರದು ಆತ್ಮಜ್ಞಾನದ ನಿಜತ್ವವನ್ನು ಹೇಳುವಲ್ಲಿ ಶೇಷನು ಅಶಕ್ಯನಾದನು, ಶ್ರುತಿಗಳು 'ನೇತಿ ನೇತಿ' ಎಂದು ಬ್ರಹ್ಮಸ್ವರೂಪವನ್ನು ವರ್ಣಿಸಲು ಬರಲಾರದೆಂದು ಮೌನತ್ವ ತಾಳಿದವು ಆ ಆತ್ಮಜ್ಞಾನದ ಸ್ವರೂಪ ಸ್ಥಿತಿಗಳನ್ನರಿಯುವ ಅಭಿಮಾನದಿಂದ 'ನನಗೆ ಸರಿಯಾಗಿ ಅದರ ಸ್ವರೂಪ ಸ್ಥಿತಿಗಳ ತಿಳಿಯದ್ದರಿಂದ ಮಿಥ್ಯವು' ಎಂದು ನುಡಿಯುವವರಿಗೇನೆನ್ನಬೇಕು? ಬ್ರಹ್ಮನು ಸತ್ಯವಾಗಿದ್ದು ಅವನು ಮಿಥ್ಯವಾಗಿರುವನೆಂದೂ ಮಾಯೆಯು ಮಿಥ್ಯವುಳ್ಳದ್ದಾಗಿ ಅದು ಸತ್ಯವಿರುವದೆಂದೂ ಸಂದೇಹ ಸಮುದ್ರದಲ್ಲಿ ಮಾತ್ರ ಮುಳುಗಿ ಇರಬೇಕಾಗುವದು ಮನಸ್ಸು ಕಲ್ಪನೆಯನ್ನು ಮಾಡುವದು ಹಾಗು ತನ್ನ ಕಲ್ಪನೆಯಲ್ಲಿ ಬರುವದಷ್ಟೇ ನಿಜವೆಂದು ತಿಳಿಯುವದು ಇದು ಅದಕ್ಕೆ ರೂಢವಾಗಿರುವ ಸಂಗತಿಯು ಮನಸ್ಸು ಉಳಿದವುಗಳಂತೆ ಬ್ರಹ್ಮನ ಕಲ್ಪನೆಯನ್ನು ಮಾಡುವದಕ್ಕೆ ಹವಣಿಸುವದು ಆದರೆ ಅದಕ್ಕೆ ಸ್ವರೂಪದ ಕಲ್ಪನೆಯಿರದ್ದರಿಂದ ಅದು ತೊಂದರೆಗೊಳಗಾಗಿ ತನ್ನಲ್ಲಿಯ ನ್ಯೂನತೆಯನ್ನು ಮರೆಮಾಜುವದಕ್ಕಾಗಿ ಸಂಶಯಯುಕ್ತವಾಗುವದು ಮತ್ತು ಅಹಂಕಾರದ ಮಾರ್ಗವನ್ನುಹಿಡಿಯುವದು ಆದ್ದರಿಂದಲೇ ಅಹಂಕಾ

ರದ ಮೂಲವನ್ನು ಮುರಿದು ಸತ್ಸಂಗತಿಯಲ್ಲಿ ತನಗುಂಟಾದ ಸಂಶಯವನ್ನು ಸತ್ಸಂಗತಿಯಿಂದ ಛೇದನ ಮಾಡಿಕೊಂಡು ಪರಮಾತ್ಮನನ್ನು ಹೊಂದಬೇಕು ಅಹಂಕಾರವು ಬಹು ದುಸ್ತರವಾದದ್ದು ಅದು ಶಸ್ತ್ರದಿಂದ ಭಿನ್ನವಾಗುವದಿಲ್ಲ ಒಡೆದರೆ ಒಡೆಯುವದಿಲ್ಲ, ಏನು ಮಾಡಿದರೂ ಬಿಡುವದಿಲ್ಲ, ಅಹಂತತೆ ಯಿಂದ ಬ್ರಹ್ಮಸ್ವರೂಪ ತಿಳಿಯುವದಿಲ್ಲ ಇದರಿಂದ ಭಕ್ತಿಯು ಲುಪ್ತವಾಗು ವದು, ವೈರಾಗ್ಯವು ಸಿಥಿಲತೆ ಹೊಂದುವದು, ಪ್ರಪಂಚವು ಸರಿಯಾಗಿ ಸಾಗದು, ಪರಮಾರ್ಥವು ಮುಳುಗಿ ಹೋಗುವದು, ಯಶ–ಕೀರ್ತಿ ಪ್ರತಾಪ ಗಳೆಲ್ಲ ಮಣ್ಣುಗೂಡುವವು, ಸ್ನೇಹತ್ವವು ಸ್ಥಿರವಾಗಿ ಉಳಿಯದು, ಪ್ರೇಮವು ಹರಿಯುವದು, ನಿರರ್ಥಕವಾದ ಅಭಿಮಾನವು ಹೆಚ್ಚಾಗುವದು, ಕಲಹಗಳು ಹುಟ್ಟುವವು, ವಿಕಲ್ಪಗಳ ಪ್ರಾಬಲ್ಯವಾಗುವದು, ಒಕ್ಕಟ್ಟು ಮುರಿಯುವದು ನಾನೆಂಬುವ ಗರ್ವವು ಯಾರಿಗೂ ಫಲಕಾರಿಯಲ್ಲ, ಅದು ಯಾರಿಗೂ ಸಹನ ತೆಯನ್ನುಂಟು ಮಾಡುವದಿಲ್ಲ ಅಂದ ಮೇಲೆ ಭಗವಾನ್ ವಿಷ್ಣುವು ಅದ ನ್ನೆಂತ ಸಹನೆ ಮಾಡುವನು ? ಆದ್ದರಿಂದ ಅಹಂಕಾರವನ್ನು ಬೇರು ಸಹಿತ ವಾಗಿ ಕಿತ್ತೊಗೆದು ಆತ್ಮ ಸಮಾಧಾನ ಸುಖವನ್ನು ಭೋಗಿಸಬೇಕು" ಎಂದು ಗುರುಗಳು ಹೇಳಿದರು ಆಗ ಶಿಷ್ಯನು ಮತ್ತೆ—

"ಅಹಂಕಾರವನ್ನು ಹೇಗೆ ಬಿಡಬೇಕು ? ಬ್ರಹ್ಮನನ್ನು ಅನುಭವಿಸು ವದು ಹೇಗೆ ? ಸಮಾಧಾನ ಸುಖವನ್ನು ಹೇಗೆ ಹೊಂದಬೇಕು ?" ಎಂದು ಕೇಳಿದ್ದಕ್ಕೆ ಗುರುಗಳು– "ಅಹಂಕಾರವನ್ನು ತಿಳುವಳಿಕೆಯಿಂದ ತ್ಯಾಗ ಮಾಡಬೇಕು, ಬ್ರಹ್ಮನನ್ನು ಬ್ರಹ್ಮನಾಗಿಯೇ ಅನುಭವಿಸಬೇಕು, ಸಂಗ ರಹಿತನಾಗಿ ಸಮಾಧಾನ ಸುಖವನ್ನು ಹೊಂದಬೇಕು ಅಹಂಕಾರದ ಸಂಗವನ್ನು ಬಿಟ್ಟು ಸಾಧನ ಮಾಡುವವನೇ ಧನ್ಯನು. 'ನಾನು ಬ್ರಹ್ಮ ನಾದೆನು ಈಗ ನನಗೆ ಸಾಧನಗಳೇತಕ್ಕೆ" ಈ ಕಲ್ಪನೆಯಿಂದ ಕಲ್ಪನೆಗಳು ವರ್ಧಿಸುತ್ತ ಹೋಗಿ ಕೊನೆಗೆ ಜೀವವು ಸಂಶಯದಲ್ಲಿ ಬೀಳುವದು ಬ್ರಹ ರೂಪದಲ್ಲಿ ಕಲ್ಪನೆಯು ಅಸಹನೀಯವಾಗುವದು ಆ ಕಲ್ಪನೆಯೇ ದುರ್ಬಲ ವಾಗಿ ಬಿಡುವದು ಕಲ್ಪನೆಯನ್ನು ಶೋಧಿಸುವವನೇ ಸಾಧುವು ಇನ್ನು ಕಲ್ಪನೆಯು ಮೊದಲು ಹೇಗೆ ಹುಟ್ಟುವದೆಂಬದನ್ನು ನೋಡೋಣ 'ನಾನು' ಇದು ಕಲ್ಪಿತವು ಹೀಗೆ ಭಿನ್ನತ್ವದ ಸಂಗವನ್ನು ಬಿಟ್ಟು ನಿರ್ವಿಕಲ್ಪವನು

ಕಲ್ಪಿಸಬೇಕು ಇದೇ ನಾನೆಂಬ ಭಾವನೆಯನ್ನು ದೂರಮಾಡುವ ಮಾರ್ಗ ವಾಗಿರುವದು ಕಲ್ಪನೆಯಲ್ಲಿ ಒರುವ ರೂಪವು ತನ್ನದಲ್ಲ ತಾನು ಅದ ಕ್ಕಿಂತಲೂ ಶ್ರೇಷ್ಠ ಅದೇ ಅನುಭವವು ನಾನೆಂಬ ಭಾವನೆಯ ತ್ಯಾಗದಿಂದ ಬರುವದು ಪ್ರಪಂಚವನ್ನು ಮುಂದೆ ಮಾಡಿ ತಾನು ಹಿಂದೆ ಅಡಗಿಕೊಳ್ಳುವ ಈ ಬ್ರಹ್ಮವಿದ್ಯೆಯ ಮುಚ್ಚಾಟದಲ್ಲಿ ಇದ್ದೂ ಇಲ್ಲದಂತೆ ಇರುವನು ದಕ್ಷನು ಹಾಗು ಸಮಾಧಾನಿಯು. ಇದನ್ನು ಅವನೇ ತಿಳಿಯುವನು. 'ಕಲ್ಪನೆ ಯಿಂದ ತಿಳಿಯುವ ಬ್ರಹ್ಮನೇ ನಾನು' ಎಂದು ಅರಿತರೆ ಕಲ್ಪನೆಯೇ ಶೂನ್ಯ ವಾಗುವದು ಸ್ವರೂಪವನ್ನು ಬಿಡದೆ ಪ್ರಯತ್ನದಿಂದ ಸಾಧನ ಮಾಡಿಕೊಳ್ಳ ಬೇಕು. ರಾಜ್ಯಪದದಲ್ಲಿ ಇರುವಾಗ ತಾನು ಏನನ್ನೂ ಮಾಡದೆ ಇದ್ದರೂ ಅವನ ಸತ್ತೆಯಿಂದ ಎಲ್ಲ ಕಾರಭಾರಗಳು ನಡೆಯುತ್ತಿರುವವು ಅದರಂತೆ ಬ್ರಹ್ಮಸ್ವರೂಪದ ಆಸನದ ಮೇಲೆ ಸ್ಥಿರನಾಗಿ ಇದ್ದುಕೊಂಡು ಸಾಧನಗಳನ್ನು ಮಾಡಬೇಕು ಸಾಧ್ಯವಾಗುವದಕ್ಕಾಗಿ ಸಾಧನಗಳು ಅವಶ್ಯ ದೇಹ ವಿಷ ಯದ ಬಗೆಗೆ ಸಾಧನ ಮಾಡುತ್ತಿದ್ದರೆ ತಾನು ದೇಹನಾಗುವದಿಲ್ಲ ಈ ಪ್ರಕಾರ ಮಾಡಿದರೂ ನಿಷ್ಕ್ರಿಯಾ ಕರ್ತೃತ್ವವು ಸ್ವಾಭಾವಿಕನಾಗಿ ಬರುವದು. 'ದೇಹವೇ ತಾನು' ಎಂಬ ಕಲ್ಪನೆ ಮಾಡಿದ್ದಾದರೆ ಸಾಧನ ತ್ಯಾಗ ಮಾಡ ಬೇಕು ಆದರೆ ತಾನು ದೇಹಾತೀತ ವಸ್ತುವಾಗಿರುವೆನು ದೇಹವಿಲ್ಲೆಂದು ತಿಳದು ಸಾಧನ ಮಾಡಿದರೆ 'ನಾನು ದೇಹವೂ ಅಲ್ಲ, ಸಾಧನವೂ ಅಲ್ಲ' ಹೀಗೆ ನಿಶ್ಚಿತವಾಗುವದು ಇದಕ್ಕೆ ವಿದೇಹ ಸ್ಥಿತಿ ಎಂದೆನ್ನುವರು," ಎಂದು ಗುರು ಗಳು ಹೇಳಿದರು ಆಗ ಶಿಷ್ಯನು—''ಸಾಧ್ಯ ವಸ್ತುವು ಪ್ರಾಪ್ತವಾದ ನಂತರ ಸಾಧನಗಳ ಉಪಯೋಗವೇನು ?'' ಎಂದು ಕೇಳಿದನು ಅದಕ್ಕೆ ಗುರುಗಳು–

''ಸಾಧ್ಯವಾದ ನಂತರ ಸಾಧನಗಳನ್ನು ಬಿಟ್ಟರೆ ದೇಹಮತ್ವವು ಉಂಟಾಗುವ ಸಂಭವವಿದೆ ಬ್ರಹ್ಮಜ್ಞಾನದ ಆಶೆಯಿಂದ ಆಲಸ್ಯ ಬೆಳೆಯು ವದು ಪರಮಾರ್ಥದ ಆಶೆಯಿಂದ ಸ್ವಾರ್ಥ ಜನಿಸುವದು ಧ್ಯಾನದಾಶೆ ಯಿಂದ ನಿದ್ರೆಯೂ, ಮುಕ್ತತ್ವದ ಬಯಕೆಯಿಂದ ಸಮಾನತೆಯೂ ನಿರೂಪ ಣದ ಬಯಕೆಯಿಂದ ನಿಂದೆಯೂ, ಸಂವಾದದಾಶೆಯಿಂದ ಇತ್ತಂಡವಾದವೂ, ಉಪಾಧಿಯ ಆಶೆಯನ್ನು ಗರ್ವವೂ, ಬ್ರಹ್ಮಜ್ಞಾನದ ಆಶೆಯಿಂದ ಆಲಸ್ಯತ ನವೂ ಪ್ರಾಪ್ತವಾಗುವವು 'ಎಲ್ಲಿಗೆ ಹೋಗಲಿ ? ಏನು ಮಾಡಲಿ ?'' ಎಂಬ

ಮಾತು ಆತ್ಮನಿಷ್ಠತೆಯನ್ನು ವ್ಯಕ್ತಪಡಿಸುವ ಮಾತನ್ನು ಆಧಾರವಾಗಿ ಇಟ್ಟುಕೊಂಡು ತನ್ನ ಶಸ್ತ್ರದಿಂದಲೇ ತನ್ನ ಕೊರಳನ್ನು ಕೊಯ್ದುಕೊಂಡಂತೆ ಘಾತಮಾಡಿಕೊಳ್ಳುವನು ಸಾಧನಗಳನ್ನು ಬಿಟ್ಟವನು ಮುಕ್ತತೆಯಿಂದ ಬದ್ಧ ಸ್ಥಿತಿಗೆ ಬರುವನು ಮತ್ತು 'ನಾನು ಮುಕ್ತನು' ಎಂಬ ಅಹಂಕಾರ ದಿಂದ ಬೆಳೆಯುವದು ಜನರು ತನ್ನನ್ನು ಸಾಧಕನೆಂದು ಕರೆಯುವರೆಂಬ ಬಯದಿಂದ ನಾಚಿಕೆಗೊಳ್ಳುವನು ಆದರೆ ಇಂಥವರಿಗೆ ಬ್ರಹ್ಮಾದಿ ದೇವತೆ ದೇವತೆಗಳೂ ಕೂಡ ಸಾಧನದಲ್ಲಿ ತತ್ಪರರೆಂಬುವದು ತಿಳಿದಿರುವದಿಲ್ಲ ವಿದ್ಯೆಯು ಅಭ್ಯಾಸ ಬಲದಿಂದ ಲಭಿಸುವದೆಂಬ ಸಾಮಾನ್ಯ ತತ್ವವಾಗಿರುವದು ಎಂದು ಗುರುಗಳು ಹೇಳಲು ಶಿಷ್ಯನು ಯಾವ ಅಭ್ಯಾಸವನ್ನು ಮಾಡಬೇಕು ? ಎಂಬದಾಗಿ| ಪರಮಾರ್ಥದ ಸಾಧನವನ್ನು ಹೇಳಬೇಕು" ಎಂಬದಾಗಿ ಬೇಡಿ ಕೊಂಡರು ಗುರುಗಳು ಇದರ ಉತ್ತರವನ್ನು ಮುಂದಿನ ಸಮಾಸದಲ್ಲಿ ನಿರೂಪಿಸಿರುವರು.

ಶ್ರೀ ರಾಮ || ೮ ಶ್ರವಣ ನಿರೂಪಣ ಗುರುಗಳು ಶಿಷ್ಯರಿಗೆ —

'' ಇನ್ನು ಪರಮಾರ್ಥದ ಸಾಧನವನ್ನು ಕೇಳತಕ್ಕದ್ದು ಅದರಿಂದ ಸಮಾಧಾನವಾಗುವದು. ಆ ಸಾಧನಗಳಲ್ಲಿ ಶ್ರವಣವೇ ಮುಖ್ಯವಾದದ್ದು ಹೇಗೆಂದರೆ—

ಶ್ರವಣದಿಂದ ಭಕ್ತಿಯು ಸ್ಥಿರವಾಗುವದು, ವಿರಕ್ತಿ ಹುಟ್ಟುವದು, ವಿಷಯಾಸಕ್ತಿಯು ದೂರಾಗುವದು, ಚಿತ್ತ ಶುದ್ಧತೆಯೂ, ದೃಢ ಬುದ್ಧಿ ಯೂ, ಅಭಿಮಾನದ ಉಪಾಧಿ ಸಾಹಿತ್ಯತೆಯೂ, ಉಂಟಾಗುವವು ಶ್ರವಣದಿಂದ ನಿಶ್ಚಯವುಂದಗುವದು, ಮಮತ್ವ ದೂರಾಗುವದು, ಅಂತಸ್ಥ ದಲ್ಲಿ ಸಮಾಧಾನವುಂಟಾಗುವದು- ಶಂಕೆಗಳ ನಿರಸನವೂ ಸಂಶಯಗಳ ಉಚ್ಛೇದವೂ ಉಂಟಾಗಿ ತನ್ನ ಮೊದಲಿನ ಗುಣಗಳು ಬದಲಿಸುವವು ಶ್ರವಣದಿಂದ ಮನಃ ಸಂಯಮನವೂ, ದೇಹಬುದ್ಧಿಯ ಬಂಧನ ನಿವೃ ತ್ತಿಯೂ, ಅಹಂತತೆಯ ನಾಶವೂ, ಗಂಡಾಂತರಗಳ ಪರಿಹಾರವೂ ಆಗುವವಲ್ಲದೆ ಹಲವು ಅಪಾಯಗಳು ದಹಿಸಿ ಹೋಗುವವು ಇದಲ್ಲದೆ ಕಾರ್ಯಸಿದ್ಧಿ, ಸಮಾಧಿ ಸ್ಥಿತಿ, ಸಾಧನಗಳ ಸರ್ವ ಸಿದ್ಧಿ ಇವೆಲ್ಲವು ಸಾಧಿ ಸುವವು ಸತ್ಸಹವಾಸದಿಂದ ಶ್ರವಣ ಮಾಡುವವನಿಗೆ ಜ್ಞಾನಬೋಧೆ

ಯಾಗುವದು ಹಾಗು ಅವನು ತದಾಕಾರಿ ವೃತ್ತಿಯನ್ನು ಹೊಂದುವನು.

ಶ್ರವಣದಿಂದ ಪ್ರಬೋಧ ಪ್ರಜ್ಞೆಗಳ ಹೆಚ್ಚಳವೂ, ವಿಷಯಗಳ ನಿರ್ನಾಮವೂ, ವಿಚಾರ ಪ್ರಚೋದನೆಯೂ, ಜ್ಞಾನ ವರ್ಧನೆಯೂ ಸಾಧಕರಿಗೆ ಸಾಧ್ಯ ಪ್ರಾಪ್ತಿಯೂ ಉಂಟಾಗುವವು ಶ್ರವಣದಿಂದ ಸದ್ಬುದ್ಧಿ ಹೆತ್ತುವದು, ವಿವೇಕವು ಎಚ್ಚರಾಗುವದು, ಮನಸ್ಸು ಭಗವಂತನಲ್ಲಿ ಹಾತೊರೆಯುವದು ಕೆಟ್ಟ ಸಂಗತಿ ದೂರಾಗುವದು, ಕಾಮಾದಿ ವಿಕಾರಗಳು ನಷ್ಟವಾಗುವವು ಸ್ಫೂರ್ತಿ ಪ್ರಕಾಶಿತವಾಗುವದು, ಸದ್ವಸ್ತುವಿನ ಬಗೆಗೆ ನಿಶ್ಚಿತ ಭಾಸ ಹುಟ್ಟುವದು ಉತ್ತಮ ಗತಿಯೂ, ಪರಮ ಶಾಂತಿಯೂ, ನಿವೃತ್ತಿಯೂ ಅಚಲ ಪದ ಪ್ರಾಪ್ತಿಯೂ ದೊರಕುವವು ಶ್ರವಣವು ಬಹು ಸತ್ವವುಳ್ಳದ್ದು. ಭವನಾಗರೋತ್ತರಣಕ್ಕೆ ಇದರಂಥ ಉಪಾಯವು ಇನ್ನೊಂದಿಲ್ಲ ಇದು ಭಜನಕ್ಕೆ ಆದ್ಯವು, ಎಲ್ಲಕ್ಕೂ ಪ್ರಥಮಾರಂಭವು ಎಲ್ಲದರಲ್ಲಿ ಸ್ವಯಂಭುವು ಆಗಿರುವದು ಪ್ರವೃತ್ತಿ ನಿವೃತ್ತಿಗಳ ಮಾರ್ಗದಲ್ಲಿ ಸುಗಮತೆಯು ಶ್ರವಣದಿಂದಲೇ ಉಂಟಾಗುವದೆಂಬುದು ಎಲ್ಲರಿಗೆ ತಿಳದ ಹಾಗು ಕಂಡ ಸಂಗತಿಯಾಗಿದೆ ಕೇಳದ ಹೊರತು ತಿಳಿಯುವದಿಲ್ಲ ಎಂಬಮಾತು ಎಲ್ಲರಿಗೂ ಗೊತ್ತಿದ್ದದ್ದು ಆದ್ದರಿಂದ ಮೊದಲನೆಯ ಪ್ರಯತ್ನವೆಂದರೆ ಶ್ರವಣವೆಂಬದನ್ನು ಅರಿತುಕೊಳ್ಳತಕ್ಕದ್ದು

ಈ ಜನ್ಮದಲ್ಲಿ ನಾವು ಎಂದೂ ಕೇಳದೆ ಇರುವ ವಿಷಯದಲ್ಲಿ ಸಂದೇಹ ಹುಟ್ಟುವದು ಸಹಜ- ಆ ಸಂದೇಹ ದೂರಾಗಿ ನಿಶ್ಚಯಾತ್ಮಕ ಜ್ಞಾನವುಂಟಾಗುವದಕ್ಕೆ ಶ್ರವಣದಂಥ ಸಾಧನವು ಇನ್ನೊಂದಿಲ್ಲ ನವವಿಧದ ಭಕ್ತಿಗಳು, ಚತುರ್ಮುಕ್ತಿಗಳು, ಸತ್ಕರ್ಮಾಚರಣೆಯು, ಉಪಾಸನೆಯು, ವ್ರತ-ತಪ-ತೀರ್ಥ ಸಂಚಾರಗಳು, ಯೋಗಯಾಗಗಳು, ಶರೀರ ಜ್ಞಾನ, ತತ್ವಜ್ಞಾನ, ಸಹಜ ಸಮಾಧಿ ಸ್ಥಿತಿ ಇವೆಲ್ಲವೂ ಶ್ರವಣದ ಹೊರತು ತಿಳಿಯಲಾರವು ವನಸ್ಪತಿಗಳೆಲ್ಲ ಒಂದೇ ನೀರಿನಿಂದ ಬೆಳೆಯುವವು ಸಕಲ ಜೀವಗಳ ಉತ್ಪತ್ತಿಯು ಒಂದೇ ರಸದಿಂದಾಗುತ್ತದೆ ಆಕಾಶವು ಎಲ್ಲ ವಸ್ತುಗಳಿಗೆ ಒಂದೇ ಆಗಿರುತ್ತದೆ.

ಎಲ್ಲರಿಗೂ ಒಂದೇ ಜಗತ್ತು, ಒಬ್ಬನೇ ಸೂರ್ಯ, ಒಂದೇ ವಾಯು, ಮತ್ತು ಎಲ್ಲರಿಗೂ ಒಂದೇ ವಾಸವು ಈ ವಾಸವು ಒಬ್ಬನೇ ಪರ ಬ್ರಹ್ಮನ ಅಧಿಷ್ಠಾನವಾಗಿದೆ ಅದರಂತೆ ಎಲ್ಲ ಜೀವಿಗಳಿಗೆ ಸಾರ ಭೂತವಾದ ಸಾಧನವೇ ಶ್ರವಣವೊಂದಾಗಿದೆ ಜಗತ್ತಿನ ಮೇಲೆ ಹಲವು ದೇಶಗಳು, ಹಲವು ಭಾಷೆಗಳು, ಮತ್ತು ಹಲವು ಮತಗಳು ಇದ್ದರೂ ಎಲ್ಲರಿಗೂ ಶ್ರವಣವನ್ನು ಬಿಟ್ಟು ಇನ್ನೊಂದು ಸಾಧನವಿಲ್ಲ

ಶ್ರವಣದಿಂದ ಬದ್ಧರು ಉಪರತಿಯುಳ್ಳವರಾಗಿ ಮುಮುಕ್ಷುಗಳೆನ್ನಿಸುವರು ಈ ಮುಮುಕ್ಷುಗಳಿಗೆ ಶ್ರವಣವೇ ಸಾಧಕವಾಗಿದೆಯಲ್ಲದೆ ನಿಯಮದಿಂದ ನಡೆಯುತ್ತದೆ ಮತ್ತು ಅವರು ಜ್ಞಾನವನ್ನು ದೊರಕಿಸಿದ ಸಾಧಕರ ಸಿದ್ಧರೆನ್ನಿಸುವರು ಶ್ರವಣವೊದಗುವದರಿಂದ ನೀಚರೂ ಅಸ್ಪೃಶ್ಯರೂ ಕೂಡ ಪುಣ್ಯ ಶೀಲರಾಗುವರು, ಪಾಪಾತ್ಮನು ಮಹಾತ್ಮನೆನ್ನಿಸುವನು ಇಂತು ಶ್ರವಣ ಸಾಧನದ ಮಹಿಮೆದೊಡ್ಡದಾಗಿರುವದು, ತೀರ್ಥ—ವ್ರತಗಳ ಪುಣ್ಯ ಫಲವು ಕಾಲಾಂತರದಿಂದ ಪ್ರಾಪ್ತವಾದರೆ ಶ್ರವಣದಿಂದ ಆ ಕೂಡಲೆ ಫಲ ಸಿದ್ಧಿಸುವದು. ಹಲವು ಬೇನೆ ಬೇಸರಿಕೆಗಳು ಸಿದ್ಧೌಷಧಿಂದ ತತ್ಕಾಲದಲ್ಲಿಯೇ ದೂರಾಗಿ ಶರೀರಕ್ಕೆ ಗುಣ ಕೊಡುವಂತೆ ಈ ಶ್ರವಣ ಸಿದ್ಧಿಯಿದೆ ಇದು ಅನುಭವಿಗಳಿಗೆ ಅರಿತಮಾತಾಗಿರುವದು ಶ್ರವಣದ ವಿಚಾರ ಬಲದಿಂದಲೇ ಭಾಗ್ಯಶ್ರೀಯು ಬಲಸಡುವದು ಮುಖ್ಯವಾಗಿ ಶ್ರವಣದಿಂದ ಸ್ವಾನುಭವವುಂಟಾಗಿ ಪರಮಾತ್ಮ ದೊರಕುವದು ಇದಕ್ಕೇ ಮನನವೆಂದು ಹೇಳುವರು ಅರ್ಥಕ್ಕೆ ಸಾವಧಾನವಿದ್ದರೆ ಅದಕ್ಕೂ ಮನನವೆನ್ನುವರು ಶ್ರವಣ, ಮನನ, ನಿದಿಧ್ಯಾಸ ಮತ್ತು ಸಾಕ್ಷಾತ್ಕಾರ ಈ ಪ್ರಕಾರ ಸಾಧನ ಕ್ರಮಗಳಿರುವವು ಮಾತಿನ ಅರ್ಥ ತಿಳಿದರೆ ಸಮಾಧಾನವುಂಟಾಗುವದು ಮತ್ತು ಜೀವವು ನಿಸ್ಸಂದೇಹವಾಗುವದು ಸಂದೇಹ ಜನ್ಮದ ಮೂಲವು ಶ್ರವಣದಿಂದ ನಿರ್ಮೂಲನವಾಗುವದು, ಆ ಬಳಿಕ ಸಮಾಧಾನವು ಸಹಜವಾಗಿ ಉಂಟಾಗುವದು. ಶ್ರವಣ ಮನನಗಳಿಲ್ಲದಲ್ಲಿ ಸಮಾಧಾನವಿರುವದಿಲ್ಲ, ' ನಾನು ಮುಕ್ತನು ನನಗೆ ಶ್ರವಣಾದಿ ಸಾಧನೆಗಳ ಅವಶ್ಯಕತೆಯಿಲ್ಲ ' ಹೀಗೆ ಯಾರಾದರೂ ನುಡಿದರೆ ಅವರ ಮುಕ್ತತೆಯು ಅವರಿಗೇ ಬಂಧನವಾಗುವದು ಮುಮುಕ್ಷು, ಸಾಧಕ, ಸಿದ್ಧ ಈ

ಮೂವರಿಗೂ ಈ ಶ್ರವಣ ಮನನಗಳ ಅಭ್ಯಾಸವಿರಲೇಬೇಕು ಅದರಿಂದ ಚಿತ್ತ ಶುದ್ಧಿಯಾಗುವದು ಈ ಅಭ್ಯಾಸವೇ ನಿದಿಧ್ಯಾಸವು ಇದಿಲ್ಲದವನು ಅಬದ್ಧನು ಅಂದರೆ ಅನರ್ಗಳನು ನಿರಂತರ ಶ್ರವಣ ನಡೆಯದ ಸ್ಥಾನ ದಲ್ಲಿ ಸಾಧಕನು ಸ್ವಲ್ಪ ಹೊತ್ತು ಸಹ ಕುಳ್ಳಿರಬಾರದು ಶ್ರವಣವನ್ನು ಮನ್ನಿಸದವನ ಪರಮಾರ್ಥವೆಂತಹದು? ಆದ್ದರಿಂದ ಶ್ರವಣ ಮಾಡ ತಕ್ಕದ್ದು, ಮನಸಿನಲ್ಲಿ ಸಾಧನಗಳನ್ನು ಅವಲಂಬಿಸಬೇಕು, ಮತ್ತು ನಿತ್ಯ ನಿಯಮದಿಂದ ನಡೆದು ಸಂಸಾರದಿಂದ ಉದ್ಧೃತರಾಗಬೇಕು ದೇಹ ಪೋಷಣೆಗೆ ನಿತ್ಯವೂ ಅನ್ನೋದಕ ಸೇವಿಸುವೆವು ಅದರಂತೆ ಆತ್ಮನಿಶ್ಚ ಯದ ದೃಢತೆಗಾಗಿ ದಿನಂಪ್ರತಿ ಶ್ರವಣ ಮನನಗಳನ್ನು ಅನುಸರಿಲೇ ಬೇಕು ಶ್ರವಣದ ಬಗೆಗೆ ಉದಾಸೀನತೆ ತಾಳಲು ಸ್ವಹಿತಕ್ಕೆ ಬಾಧೆ ಬರುವದು ಆಲಸ್ಯತನ ವಿರಬಾರದು, ಮತ್ತು ಪರಮಾರ್ಥ ಬುದ್ಧಿಯು ಸತತ ಜಾಗೃತವಾಗಿರಬೇಕು ಈ ಉದ್ದೇಶದಿಂದಲೇ ನಿತ್ಯ ಶ್ರವಣ ಮಾಡ ತಕ್ಕದ್ದು ''ಎಂದು ಹೇಳಿದರು

ಶ್ರೀ ರಾಮ ॥ ೯ ಶ್ರವಣ ನಿರೂಪಣ ॥ ಇನ್ನು ಶ್ರವಣವನ್ನು ಮಾ ಡುವ ಬಗೆ ಹೇಗೆ? ಅದಕ್ಕಾಗಿ ಯಾವ ಗ್ರಂಥಗಳನ್ನು ನೋಡತಕ್ಕ ದ್ದೆಂಬದನ್ನು ಹೇಳುವೆವು ಏಕ ಚಿತ್ತದಿಂದ ಶ್ರವಣ ಮಾಡತಕ್ಕದು

'' ಕೆಲವರ ವಕ್ತೃತ್ವವನ್ನು ಶ್ರವಣ ಮಾಡಲು ಇದ್ದಂಥ ಸ್ವಲ್ಪ ಸಮಾಧಾನವೂ ಕೂಡ ಗತಿಸಿಹೋಗುವದು ಕೆಲವರ ವಕ್ತೃತ್ವ ಶ್ರವಣ ದಿಂದ ಆದರಲ್ಲಿ ನಿಶ್ಚಯಾತ್ಮಕ ಜ್ಞಾನವಿರದೆ ಎಲ್ಲವೂ ಮಾಯೆಯ ಅಂದರೆ ಸಂಶಯದ ಭಾಷ್ಯವಿದ್ದುದು ಕಂಡು ಬರುವದು ಇಂಥವರ ವಕ್ತೃತ್ವಗಳನ್ನು ಕೇಳಲೇಬಾರದು ಗ್ರಂಥಗಳಲ್ಲಿಯಾದರೂ ಒಂದು ಗ್ರಂಥವು ಸಿದ್ಧಾಂತವನ್ನು ಮಂಡಿಸಿದರೆ ಇನ್ನೊಂದು ಆ ಸಿದ್ಧಾಂತವನ್ನು ಖಂಡಿ ಸುವದು ಇದರಿಂದ ಆ ಎರಡೂ ಗ್ರಂಥಗಳನ್ನು ಓದುವವರೂ ಕೇಳುವ ವರೂ ಹೆಚ್ಚೆಚ್ಚು ಸಂಶಯ ಗ್ರಸ್ತರಾಗುವರು ಆದ್ದರಿಂದ ಸಂಶಯಗಳು ದೂರಾಗಿ ಸರ್ವ ಶಂಕೆಗಳ ನಿರಸನ ಮಾಡುವಂಥ ಅದ್ವೈತ ಗ್ರಂಥಗ ಳನ್ನೇ ಪಾರಮಾರ್ಥಿಕ ಅಭಿಲಾಷೆಯುಳ್ಳವರು ಶ್ರವಣ ಪಠಣ ಮಾಡ ತಕ್ಕದ್ದು, ಮೋಕ್ಷಕ್ಕೆ ಅಧಿಕಾರವುಳ್ಳವನು ಪರಮಾರ್ಥ ಮಾರ್ಗದಲ್ಲಿರು

ವನು ಅಂಥವನೇ ಅದ್ವೈತ ಗ್ರಂಥವನ್ನು ಪ್ರೀತಿಸುವನು, ಇಹ ಲೋಕ ವನ್ನು ಹೊರತುಪಡಿಸಿ ಪರಲೋಕ ಸಾಧನೆಗಾಗಿ ಯತ್ನಿಸುವವನು ವಿವೇಕ ಪೂರ್ವಕವಾಗಿ ಅದ್ವೈತ ಶಾಸ್ತ್ರವನ್ನು ಲಕ್ಷಿಸುವನು ಅದ್ವೈತವನ್ನು ಬಯ ಸುವವನೆದುರಿನಲ್ಲಿ ದ್ವೈತ ಗ್ರಂಥಗಳನ್ನಿರಿಸಲು ಅವು ಆವನಿಗೆ ರುಚಿ ಸುವದಿಲ್ಲ ತನ್ನ ಇಚ್ಛೆಗೆ ಸರಿಯಾದದ್ದು ದೊರೆತರೆ ಆವನಿಗೆ ಸುಖ ಸಮಾಧಾನವೆನ್ನಿಸುವದು. ಇಲ್ಲದಿದ್ದರೆ ಅವನ ಮನಸ್ಸು ತಲ್ಲಣ ಗೊಳ್ಳು ವದು ಉಪಾಸಕನ ಬಯಕೆಯಂತೆ ಉಪಾಸನೆಗಳು ನಡೆಯಬೇಕು, ಇನ್ನಿತರ ಉಪಾಸನೆಗಳಿಂದ ಆವನ ಮನಸ್ಸು ಪ್ರಸನ್ನತೆಯನ್ನು ಪಡೆಯ ಲಾರದು ನೀರು ಕಾಲುವೆಯಿಂದ ಸಹಜವಾಗಿ ಹರಿದು ಹೋಗುವಂತೆ ಹೃದಯದಿಂದ ಪ್ರೀತಿಯು ನಿರಾಯಾಸವಾಗಿ ಹುಟ್ಟುವದು. ಇದೇ ಪ್ರೀತಿಯಲಕ್ಷಣವು ಇದರಂತೆ ಆತ್ಮ ಜ್ಞಾನಿಗೆ ಪರಮಾರ್ಥದ ಹೊರತು ಇನ್ನಾವವೂ ಸೇರುವದಿಲ್ಲ ಅವನಿಗೆ ಸಾರಾಸಾರ ವಿಚಾರಣೆಯು ಅಗತ್ಯ ವಿರುವದು, ಕುಲ ದೇವತೆಯಾಗಿರುವ ಉಪಾಸಕರಲ್ಲಿ ಸಪ್ತ ಶತಿಯ ಹೊ ರತು ಬೇರೆ ದೇವತೆಗಳ ಸ್ತೋತ್ರಗಳು ನಡೆಯಲಾರವು, ಅದರಂತೆ ಅನಂತನ ವ್ರತಸ್ಥರಿಗೆ ಭಗವದ್ಗೀತೆಯೂ, ಸಾಧು ಜನರಿಗೆ ಫಲಾಶಿ ಯನ್ನು ತೋರಿಸುವ ಸಂಗತಿಗಳೂ ವೀರ ಕಂಕಣವನ್ನು ಮೂಗಿನಲ್ಲಿ ಆಭ ರಣವೆಂದು ಇರಿಸುವದೂ ಶೋಭಿಸಲಾರವು ಪ್ರತಿಯೊಂದು ವಸ್ತುವು ಅದಕ್ಕಿರುವ ಸ್ಥಾನದಲ್ಲಿಯೇ ಇರುವದು ಅದಕ್ಕೆ ಒಪ್ಪುವದು, ಪ್ರತಿ ಯೊಂದು ದೇವತೆಯ ಹಾಗು ಪ್ರತಿಯೊಂದು ತೀರ್ಥ—ಕ್ಷೇತ್ರಗಳ ಮಹಾತ್ಮ್ಯಗಳು ಆವವುಗಳಿಗೆ ಅನುಸರಿಸಿಯೇ ಇರುವವು, ಅವು ಅಲ್ಲ ಲ್ಲಿಯೇ ಮಾನ್ಯವಾಗುವವು ಆದರೆ ಅವುಗಳನ್ನು ವಿಪರೀತವಾಗಿ ಓದು ವದು ವಿಲಕ್ಷಣವೆನ್ನಿಸುವವು

ಮಲ್ಹಾರೀ ಮಹಾತ್ಮ್ಯವನ್ನು ದ್ವಾರಕೆಗೆ ಒಯ್ದು, ದ್ವಾರಕಾ ಮಹಾತ್ಮ್ಯವನ್ನು ಕಾಶಿಗೆ, ಕಾಶೀಮಹಾತ್ಮ್ಯವನ್ನು ತಿರುಪತಿಗೆ ಹೀಗೆ ಅನನ್ವಿತವಾಗಿ ಒಯ್ದು ಪುರಾಣ ಶ್ರವಣ ಮಾಡುವದು ಒಪ್ಪತಕ್ಕ ಸಂಗ ತಿಯಲ್ಲ ಇದನ್ನು ಹೇಳುವ ತಾತ್ಪರ್ಯವೇನೆಂದರೆ— ಯಾವುದು ಎಲ್ಲಿ ಯದೋ ಅಲ್ಲಿಯೇ ಅದಕ್ಕೆ ಮಹತ್ವ ಹಾಗು ರುಚಿಯುಂಟು ಇದ

ರಂತೆ ಜ್ಞಾನಿಗಳಿಗೆ ಅದ್ವೈತ ಗ್ರಂಥವೇ ಮಹತ್ವ ಹಾಗು ರುಚಿಕರ ವಾಗುವದು ಯೋಗಿಯ ಸಮ್ಮುಖದಲ್ಲಿ ಅನ್ಯ ದೇವತೆಗಳನ್ನು ಕುರಿತು ಹೊಗಳಿಕೆಯು, ರತ್ನ ಪರೀಕ್ಷಕನ ಎದುರು ಕಲ್ಲು, ವಿದ್ವಾಂಸನ ಮುಂದೆ ಜನಪದ ವಾದ್ಯ—ಗಾನಗಳು ಶೋಭಿಸಲಾರವು ಅದರಂತೆ ವೇದ ಬಲ್ಲ ವನ ಮುಂದೆ ಸಂಸಾರಿಕನು, ನಿಸ್ಪೃಹಿಯ ಮುಂದೆ ಫಲಶ್ರುತಿಯು, ಜ್ಞಾನಿಯ ಮುಂದೆ ಕೋಕಶಾಸ್ತ್ರ ಗ್ರಂಥವು. ಬ್ರಹ್ಮಚಾರಿಯ ಎದುರು ವಾರ ನಾರಿಯರ ಕುಣಿತವು, ರಾಸ ಕ್ರೀಡೆಯಲ್ಲಿರುವವರ ಮುಂದೆ ಬ್ರಹ್ಮ ನಿರೂಪಣೆಯು, ರಾಜಹಂಸ ಪಕ್ಷಿಯ ಮುಂದೆ ಇಟ್ಟ ನೀರು ಇವೆಲ್ಲ ನಿರುಪಯೋಗವಾಗುವಂತೆ ಅಂತರ್ನಿಷ್ಠ ಜ್ಞಾನಿಯ ಮುಂದೆ ಶೃಂಗಾರಿಕ ಕಥಾ ಕಾದಂಬರಿಗಳನ್ನು ಇಟ್ಟರೆ ಅವುಗಳಿಂದ ಸಮಾಧಾನ ವುಂಟಾಗಲಾರದು ದರಿದ್ರನಿಗೆ ಒಪ್ಪುವ ಕ್ಷುದ್ರ ಆಶೆಗಳನ್ನು ಅರಸನಿಗೆ ತೋರಿಸುವದೂ, ಅಮೃತಕ್ಕೆ ಮಜ್ಜಿಗೆಯ ನೈವೇದ್ಯ ತೋರಿಸುವದೂ, ಸಂನ್ಯಾಸಿಗೆ ನೀಚ ಹೊಲತಿಯ ವರ್ಣನೆಯನ್ನು ಹೇಳುವದೂ, ಕರ್ಮ ನಿಷ್ಠರಿಗೆ ವಶೀಕರಣ ಮಂತ್ರ ಹೇಳುವದೂ ಪಂಚಾಕ್ಷರಿಗಳಿಗೆ ವೇದಾಂತ ಬೋಧಿಸುವದೂ, ಸರಿಯಾದುದಲ್ಲ ಅದರಿಂದ ಅವರವರ ಅಂತಃಕರಣ ಗಳು ಅಲ್ಲಿಯೇ ಕೊರಗುವವು ಆದರಂತೆ ಪಾರಮಾರ್ಥಿಕದ ಹಂಬ ಲವು ಇದ್ದವರಲ್ಲಿ ಆತ್ಮಜ್ಞಾನವಿಲ್ಲದೆ ಗ್ರಂಥಗಳನ್ನು ಓದುವದರಿಂದ ಅವ ರಿಗೆ ಸಮಾಧಾನವಾಗಲಾರದು, ಇದೆಲ್ಲವೂ ಇಂತಿರಲಿ

ಆತ್ಮೋನ್ನತಿಯನ್ನು ಬಯಸುವವನು ನಿತ್ಯವೂ ಅದ್ವೈತ ಗ್ರಂಥಗ ಳನ್ನು ಪರಿಶೀಲನ ಮಾಡಬೇಕು ಆತ್ಮಜ್ಞಾನಿಯು ದೃಢ ಚಿತ್ತವುಳ್ಳವ ನಾಗಿ ಏಕಾಂತದಲ್ಲಿ ಅದ್ವೈತ ಗ್ರಂಥ ನಿರೀಕ್ಷಿಸಲು ಸಮಾಧಾನ ಹೊಂದುವನು ಹಲವು ಬಗೆಯಿಂದ ವಿಚಾರಿಸಲು ಅದ್ವೈತ ಗ್ರಂಥದಂಥ ಮಹತ್ವ ಗ್ರಂಥವು ಇನ್ನೊಂದಿಲ್ಲ ಆ ಗ್ರಂಥವು ಪರಮಾರ್ಥಕ್ಕೆ ಒಂದು ನೌಕೆಯಂತಿರುವದು ಇನ್ನುಳಿದ ಎಷ್ಟೋ ಪ್ರಾಪಂಚಿಕ, ಹಾಸ್ಯ—ವಿನೋದ—ರಸಭರಿತ ಪುಸ್ತಕಗಳು ಪರಮಾರ್ಥ ಜ್ಞಾನಕ್ಕೆ ಒಳಿತಾಗ ಲಾರವು ಗ್ರಂಥದಿಂದ ಪರಮಾರ್ಥ ಜ್ಞಾನವು ವರ್ಧಿಸಬೇಕು, ತನ್ನಲ್ಲಿ ಪಶ್ಚಾತ್ತಾಪವು ಹೆಚ್ಚಬೇಕು, ಭಕ್ತಿ ಸಾಧನಗಳ ಬಗೆಗೆ ಪ್ರೀತಿಯುಂಟಾ

ಗಬೇಕು ಹೀಗಿದ್ದರೆ ಅದು ಗ್ರಂಥವೆನ್ನಿಸಿಕೊಳ್ಳಲು ತಕ್ಕದ್ದಾಗುವದು ಇಂಥ ಗ್ರಂಥದ ಶ್ರವಣದಿಂದ ಅಹಂಕಾರವು ದೂರಾಗುವದು, ಭ್ರಾಂತಿಯು ಲಯವಾಗುವದು, ಇಲ್ಲವಾದರೆ ಮನಸ್ಸು ಒಮ್ಮೆಲೇ ಭಗವಂತನಲ್ಲಿ ಸುತ್ತಾಡಬೇಕು ಇನ್ನೂ ಗ್ರಂಥ ಲಕ್ಷಣವನ್ನು ಹೇಳುವದಾದರೆ—

ಇಂಥ ಗ್ರಂಥದಿಂದ ಉಪರತಿಯಾಗುವದು, ಅವಗುಣಗಳ ಪರಿವರ್ತನವಾಗುವದು, ಅಧೋಗತಿಯು ತಪ್ಪುವದು, ಧೈರ್ಯವು ಹೆಚ್ಚುವದು, ಕೈಲಾದ ಮಟ್ಟಿಗೆ ಪರೋಪಕಾರವೂ ಒದಗುವದು, ವಿಷಯವಾಸನೆಗಳ ಹಿಮ್ಮೋಡವಾಗುವದು, ಮೋಕ್ಷ ಸಾಧನವೂ, ಜ್ಞಾನ-ಪಾವಿತ್ರ್ಯಗಳೂ, ದೊರೆಯುವವು ಈ ಎಲ್ಲ ಲಕ್ಷಣಗಳುಳ್ಳ ಗ್ರಂಥವೇ ಗ್ರಂಥವೆನ್ನಿಸುವದು ಇನ್ನು ಗ್ರಂಥಗಳು ಹಲವು ಇರುವವು ಅವುಗಳ ಫಲಶ್ರುತಿ ವಿಧಾನಗಳು ಸಾಕಷ್ಟು ಇರುವವು ಮಾತ್ರ ಅವುಗಳಿಂದ ವಿರಕ್ತಿಯೂ, ಭಕ್ತಿಯೂ, ಹುಟ್ಟದಿದ್ದರೆ ಅವು ಗ್ರಂಥಗಳೇ ಆಗಿರಲಾರವು ಮೋಕ್ಷದ ಹೊರತು ಫಲಶ್ರುತಿಗಳುಳ್ಳ ಗ್ರಂಥಗಳು ದುರಾಶೆಯ ಪುಸ್ತಕಗಳಾಗಿರುವವು, ಆ ಪುಸ್ತಕಗಳಲ್ಲಿಯ ವಿಷಯಗಳನ್ನು ಶ್ರವಣ—ಪಠಣ ಮಾಡಿದ ಹಾಗೆ ಮುಂದೆ ಮುಂದೆ ದುರಾಶೆಗಳೇ ಹೆಚ್ಚಾಗುತ್ತ ಹೋಗುವವು. ಗ್ರಂಥ ಶ್ರವಣದಿಂದ ಲೋಭವು ಹುಟ್ಟದಲ್ಲಿ ವಿವೇಕವು ಆದೆಂತು ಇರುವದು? ಸಾಧ್ಯವಿಲ್ಲ ಆ ಪುಸ್ತಕಗಳಲ್ಲಿ ಕೇವಲ ದುರಾಶೆಯೆಂಬ ಭೂತಗಳೇ ನಲಿದಾಡುವವು ಕೊನೆಗೆ ಅವುಗಳಿಂದ ಅಧೋಗತಿಯು ಪ್ರಾಪ್ತವಾಗುವದು, ಈ ಫಲಶ್ರುತಿಯನ್ನು ಕೇಳಿಕೊಂಡು ಮುಂದಾದರೂ ಇಂಥ ಫಲಗಳನ್ನು ಹೊಂದುವೆನೆಂದು ನುಡಿಯುವವನ ಜನ್ಮದ ಅಧೋಗತಿಯು ಸಹಜವಾಗಿ ಉಂಟಾಗುತ್ತದೆ ವನದಲ್ಲಿ ಹಲವು ಪಕ್ಷಿಗಳು ಅನೇಕ ಬಗೆಯ ಹಣ್ಣುಗಳನ್ನು ತಿನ್ನುವವು ಅದರಿಂದಲೇ ಆ ಪಕ್ಷಿಗಳಿಗೆ ತೃಪ್ತಿಯುಂಟಾಗುವದು ಇಂತು ಎಲ್ಲ ಪಕ್ಷಿಗಳು ತಿಂದುಂಡು ತೇಗಿದರೂ ಚಕ್ರವಾಕ ಪಕ್ಷಿಯು ತಾನು ಪಕ್ಷಿಯಾಗಿದ್ದರೂ ಯಾವಾಗಲೂ ಅದ್ಭುತವನ್ನೇ ಬಯಸುವದು

ಅದರಂತೆ ಸಂಸಾರಿಕ ಮಾನವನು ಸಂಸಾರಲ್ಲಿ ಇರುತ್ತಿದ್ದರೂ ಆತನು ಭಕ್ತಿಯಿಂದ ಭಗವಂತನನ್ನೇ ಸ್ಮರಿಸಬೇಕು

ಜ್ಞಾನಿಗಳಿಗೆ ಜ್ಞಾನವು ಅವಶ್ಯ ಅದರಂತೆ ಭಕ್ತರಿಗೆ ಭಜನವೂ ಸಾಧಕರಿಗೆ ಅವರ ಮನೋಬಯಕೆಯಂತೆ ಸಾಧನಗಳೂಬೇಕು ಇದೇ ಪ್ರಕಾರ ಪಾರಮಾರ್ಥಿಕನಿಗೆ ಪರಮಾರ್ಥ, ಸ್ವಾರ್ಥಾಭಿಲಾಷಿಗೆ ಸ್ವಾರ್ಥ, ಲೋಭಿಗೆ ದ್ರವ್ಯ ಇವು ಅವರವರ ಬಯಕೆಯ ಬೇಡಿಕೆಗಳು

ಯೋಗಿಗಳಿಗೆ ಯೋಗ, ಭೋಗಿಗಳಿಗೆ ಭೋಗ, ರೋಗಿಗಳಿಗೆ ಆರೋಗ್ಯ ಕವಿಗಳಿಗೆ ಪ್ರಬಂಧ ತಾರ್ಕಿಕರಿಗೆ ತರ್ಕವಾದ, ಭಾವಿಕರಿಗೆ ಸಂವಾದ, ವಿದ್ವಾಂಸರಿಗೆ ವ್ಯುತ್ಪತ್ತಿ, ವಿದ್ಯಾರ್ಥಿಗಳಿಗೆ ಅಭ್ಯಯನ ಪ್ರೀತಿ, ಕಲಾ ಕೋವಿದರಿಗೆ ಹಲವು ಕಲೆಗಳು, ಹರಿದಾಸರಿಗೆ ಕೀರ್ತನವು, ಮಡಿವಂತರಿಗೆ ಗಂಗಾಸ್ನಾನ, ಕರ್ಮಠರಿಗೆ ವಿಧಿ ವಿಧಾನ, ದಯಾವಂತರಿಗೆ ಅಂತ ಕರಣ, ದಕ್ಷತೆಯುಳ್ಳವರಿಗೆ ವಿಚಕ್ಷಣೆ, ಜಾಣರಿಗೆ ಚತುರತೆ, ಭಕ್ತರಿಗೆ ಇಷ್ಟ ಮೂರ್ತಿ ಧ್ಯಾನ, ಗಾಯಕರಿಗೆ ತಾಳಜ್ಞಾನ, ರಾಗಜ್ಞಾನಿಗಳಿಗೆ ತಾನಮಾನ, ಇಂತು ಆ ಆ ವೃತ್ತಿಯವರಿಗೆ ತಕ್ಕವಾದ ಆ ಆ ಸಂಗತಿಗಳೇ ಅವಶ್ಯ

ಈ ಮೇಲಿನವಲ್ಲದೆ ಇನ್ನೂ ಹೇಳುವದಾದರೆ —

ಯೋಗಾಭ್ಯಾಸಿಗಳು ಪಿಂಡಜ್ಞಾನದಲ್ಲಿ, ತತ್ವಜ್ಞಾನಿಗಳು ತಾತ್ವಿಕಗಳಲ್ಲಿ, ನಾಡೀ ಜ್ಞಾನಿಗಳು ಮಾತ್ರಾ ಜ್ಞಾನದಲ್ಲಿ ತಮ್ಮ ತಮ್ಮ ವಿಚಾರ ದೃಷ್ಟಿಯನ್ನಿರಿಸುವರು ಕಾಮುಕನು ಕೋಕಶಾಸ್ತ್ರದಲ್ಲಿ ಚಾಟಕ ಮಾಟಕ ಮಾಡುವವನು ತತ್ಸಂಬಂಧಮಂತ್ರಗಳಲ್ಲಿ ಯಾಂತ್ರಿಕನು ಅನೇಕಯಂತ್ರ ನಿರೀಕ್ಷಿಸುವಲ್ಲಿ ಪ್ರೀತಿ—ಲವಲವಿಸುವಿಕೆ ಯುಳ್ಳವರಾಗಿರುವರು

ಯಾವಾಗಲೂ ಹರಟ ಕೊಚ್ಚುವವನು ವಿನೋದಗಳನ್ನು ಮೆಚ್ಚುವನು ನಿಂದಕನು ಅನ್ಯರ ಹುಳುಕುಗಳನ್ನು ಹುಡುಕುವನು, ಪಾಪಿಷ್ಠನು ಪಾಪ ಕರ್ಮಕ್ಕೆ ಎಳೆಸುವನು, ಒಬ್ಬನು ರಸಗ್ರಹಣ ಮಾಡುವನು, ಇನ್ನೊಬ್ಬನು ವಿಸ್ತಾರಕ್ಕೆ ಬಯಸುವನು, ಇವರಂತೆ ಭಜಕನು ಭಕ್ತಿಯಲ್ಲಿ ಲೋಲುಪನಾಗಲು ಆಶಿಸುವನು, ವೈದಿಕನು ವೇದ ನಿರೀಕ್ಷಿಸುವದು, ಶೂರನು ಯುದ್ಧ ಸಂಗ್ರಾಮಕ್ಕಾಗಿ ಆತುರಗೊಳ್ಳುವನು ಧರ್ಮಿಷ್ಠನು, ಧರ್ಮ ಪ್ರವೃತ್ತಿಯ ಕಡೆಗೂ ಮುಮುಕ್ಷುವು ಮುಕ್ತಿಗಳಿಸುವನು ಬಹು

ಶ್ರುತನು ಅನೇಕ ವಿಷಯುಗಳನ್ನು ನಿರೀಕ್ಷಿಸುವನು, ಜ್ಯೋತಿಷಿಯು ಭವಿಷ್ಯ, ಶಕುನ, ಮುಹೂರ್ತ ಹೇಳುವಲ್ಲಿ ಯತ್ನಿಸುವನು

ಹೀಗೆ ಪ್ರತಿಯೊಬ್ಬರು ತಮಗೆ ಪ್ರಿಯಕರವಾದ ವಿಷಯಗಳನ್ನೇ ಮೆಚ್ಚುವರು ತಮ್ಮ ವಿಷಯು ಸಂಗ್ರಾಹ್ಯತೆಗೆ ಆವಶ್ಯಕ ಗ್ರಂಥಗಳನ್ನು ಕಲಿ ಹಾಕಿ ಓದುವರು, ಆದರೂ ಮೋಕ್ಷ ಸಾಧನವನ್ನು ಹೇಳದಿರುವ ಗ್ರಂಥಗಳ ಶ್ರವಣವು ನಿರರ್ಥಕವು ಅಂಥವುಗಳಿಂದ ಆತ್ಮ ಜ್ಞಾನವಾಗುವದಿಲ್ಲ ಅವು ಕೇವಲ ಮನರಂಜನೆಯು ಮಸ್ತಕಗಳೆಂದೇ ಹೇಳಬಹುದು ಸವಿಯಾಗಿದ್ದರೆ ಬೆಲ್ಲ, ಮೂಗಿದ್ದರೆ ಚೆಲುವಕೆ, ಅದರಂತೆ ಜ್ಞಾನವಿದ್ದರೆ ಬೋಧೆ ಒಟ್ಟಾರೆ ಹೇಳುವದೇನೆಂದರೆ— ಪರಮಾರ್ಥ ಬೋಧನೆಯು ಗ್ರಂಥಗಳ ಹೊರತು ಉಳಿದ ಗ್ರಂಥಗಳೆಲ್ಲ ನಿರರ್ಥಕವು ನಿತ್ಯಾನಿತ್ಯ ವಿವೇಕವೂ, ಸಾರಾಸಾರ ವಿಚಾರವೂ ಇವು ಸ್ಫೂರ್ತಿಗೊಳ್ಳುವಂತೆ ಬರೆದ ಗ್ರಂಥಗಳೇ ಉತ್ತಮ ಹಾಗು ಉದ್ಧಾರಕ ಗ್ರಂಥಗಳು

ಶ್ರೀ ರಾಮ ॥ ೧೦ ದೇಹಾಂತ ನಿರೂಪಣ ॥ 'ಮಾಯಾ ವಿಭ್ರಮೆಯಿಂದ ಜಗತ್ತು ಸತ್ಯವಾಗಿದ್ದರೂ ಅಸತ್ಯವಾಗಿಯೂ ಬ್ರಹ್ಮನು ಸತ್ಯನಾಗಿದ್ದರೂ ಅಸತ್ಯವಾಗಿಯೂ ಭಾಸವಾಗುವದು ಸತ್ಯದ ಬಗ್ಗೆ ತಿಳವಳಿಕೆ ಮಾಡಿಕೊಡುವದಕ್ಕೆ ಹಲವುಬೋಧೆಗಳನ್ನು ಮಾಡಿದರೂ ಒಮ್ಮೆ ಚಿತ್ತದಲ್ಲಿ ಬೇರೂರಿದ್ದ ಅಸತ್ಯವು ಬೇಗ ದೂರಾಗುವದಿಲ್ಲ ವೇದ ಶಾಸ್ತ್ರ ಪುರಾಣಗಳೆಲ್ಲ ಬ್ರಹ್ಮಸತ್ಯತೆಯನ್ನು ನಿಶ್ಚಿತವಾಗಿ ಹೇಳಿರುವವು ಆದರೂ ಮಾಯೆಯು ವಿಪರೀತ ಕೃತಿಯಿಂದ ಸತ್ಯವನ್ನು ಮಿಥ್ಯೆಯಂ ಮುಚ್ಚಿ ಹಾಕಿ ತಾನು ಸತ್ಯವೆಂದು ಭಾಸವಾಗುವದು ಇದೆಲ್ಲವು ಸತ್ಸಂಗ, ಸದ್ಬೋಧಗಳಿಂದ ತಿಳಿದು ಬರುವದು ತನ್ನ ನಿಜತ್ವವನ್ನು ತಾನು ಅರಿತರೆ ಸಮಾಧಾನವಾಗುವದು, ತನ್ನ ನಿಜತ್ವವನ್ನು ತಾನು ಅರಿತರೆ ಸಮಾಧಾನವಾಗುವದು, ಅದರಿಂದಲೇ ಚಿತ್ತವು ಚೈತನ್ಯವಾಗಿ ಪ್ರವೃತ್ತಿಗೊಳ್ಳುವದು, ಈ ಅನುಭವವು ಕೇವಲ ನಿಜವಸ್ತುವಿನ ನೈಜ ಸ್ವರೂಪವನ್ನು ಅರಿಯುವದರಿಂದ ಉಂಟಾಗುವದು ಒಂದುವೇಳೆ ಸತ್ಯಸ್ವರೂಪವನ್ನರಿತು ದೇಹವನ್ನು ಪ್ರಾರಬ್ಧಕ್ಕೆ ಒಪ್ಪಿಸಿ ಬೋಧೆಯಿಂದ ಸಂದೇಹ ದೂರ ಮಾಡಿಕೊಂಡನೆಂದು ತಿಳಿದರೆ ಅಜ್ಞಾನಿಯು ಶರೀರವು ಎಲ್ಲಿ ಬಿದ್ದರೇನು ? ಎಲ್ಲಿ ಹಾಳಾದರೇನು ? ಅದು ಎಲ್ಲಿ ಬೀಳುವದೋ ಅದೇ ಪುಣ್ಯ ಭೂಮಿಯು

ಸಾಮಾನ್ಯವಾಗಿ ಜನರು "ಪುಣ್ಯ ಕ್ಷೇತ್ರದಲ್ಲಿ ಮರಣ ಹೊಂದಿದರೆ ಮುಕ್ತಿ" ಎಂಬದಾಗಿ ನಂಬುವರು, ದೇಹ ಬಿಡುವ ಕ್ರಿಯೆಗೆ ಉತ್ತರಾಯಣ ಕಾಲವು ಉತ್ತಮವೆಂದು ಹೇಳಲ್ಪಡುತ್ತದೆ ಅದರಲ್ಲಿಯೂ ಆಗ ಶುಕ್ಲ ಪಕ್ಷವಿರಬೇಕು, ಮನೆಯಲ್ಲಿ ದೀಪವಿರುವಾಗ [ಅಂದರೆ ಉತ್ತರಾಧಿಕಾರಿ ಮಗನು ಹುಟ್ಟಿದ ಮೇಲೆ] ಹಗಲು ಹೊತ್ತಿನಲ್ಲಿ, ಸಾವು ಬರಬೇಕು. ಅಂತ್ಯದಲ್ಲಿ ರಾಮಸ್ಮರಣೆಯಿರಬೇಕು, ಅಂದರೆ ಮೃತನಿಗೆ ಸದ್ಗತಿ ದೊರಕುವದು ಹೀಗೆ ಅವರ ವಿಶ್ವಾಸವಿರುವದು ಆದರೆ ಜ್ಞಾನಿಯಾದ ಭಕ್ತನಿಗೆ ಈ ಸಾಮಾನ್ಯರ ತಿಳುವಳಿಕೆಗಳು ಕೂಡುವದಿಲ್ಲ ಯಾಕಂದರೆ ಅವನು ಜೀವಿಸಿರುವಾಗಲೇ ಮುಕ್ತನಾಗಿರುವ ಪುಣ್ಯವಂತನು ಅಂತ್ಯದಲ್ಲಿ ಭಗವದ್ದರ್ಶನವಾಗಬಹುದೆಂಬ ಕಲ್ಪನೆಯಿಂದ ಜೀವಿಸಿರುವಾಗ ದೇಹ ಸಾರ್ಥಕತೆ ಮಾಡಿಕೊಳ್ಳದಿದ್ದರೆ ದೇವ ದರ್ಶನವಾಗುವದೇ? ಇಲ್ಲ ಬೀಜ ಬಿತ್ತದೆ ಬೆಳೆ ಬರಲಾರದು ದೇಹ ಸಾರ್ಥಕತೆಯು ದೇವಸ್ಮರಣೆಯಿಂದಲಾಗುವದು ಜೀವಿಸಿರುವಾಗ ಭಗವದ್ಭಕ್ತಿಯನ್ನು ಕೈಕೊಳ್ಳದವನು ತಾನು ಸತ್ತ ಮೇಲೆ ಮುಕ್ತಿಯಾಗಲೆಂದು ಅಪೇಕ್ಷಿಸುವವನು ಮಹಾ ಮೂರ್ಖನು 'ಕರ್ಮಕ್ಕೆ ತಕ್ಕ ಫಲವು' ಎಂಬಂತೆ ಅವನು ತಾನು ಮಾಡಿದ ಕರ್ಮಕ್ಕನುಸಾರವಾಗಿದ್ದ ಫಲವನ್ನೇ ಹೊಂದುವನಲ್ಲದೆ ಮುಕ್ತಿಯನ್ನು ಪಡೆಯಲಾರನು ಜೀವನ್ಮುಕ್ತ ಜ್ಞಾನಿಯ ಶರೀರವು ಅರಣ್ಯದಲ್ಲಿ ಬೀಳಲಿ, ಸ್ಮಶಾನದಲ್ಲಿ ದಹಿಸಲಿ, ಅದು ಛಿನ್ನ ಭಿನ್ನಾವಸ್ಥೆ ಹೊಂದಲಿ, ಇಷ್ಟೇ ಏಕೆ? ನಾಯಿ ನರಿಗಳೂ ಕೂಡ ಆ ದೇಹವನ್ನು ಹರಿದು ತಿನ್ನಲಿ, ಆ ದೇಹ ತೊರೆದು ಹೋದವನು ಧನ್ಯನು! ತಿಳುವಳಿಕೆಯಿಲ್ಲದವರು ಮಾತ್ರ ಆ ದೇಹದ ವೈಕಲ್ಯ-ವಿದ್ರೂಪತೆಗಳನ್ನು ಧಿಕ್ಕಾರ ದೃಷ್ಟಿಯಿಂದ ನೋಡುವರು

ಇನ್ನು ವಿಚಾರದಿಂದ ಹೇಳುವದಾದರೆ—

ಮೂಲತಃ ಜನ್ಮವಿಲ್ಲದವನಿಗೆ ಮರಣವೆಲ್ಲಿಯದು? ಆತ್ಮ ಸ್ವರೂಪದ ಸರಿಯಾದ ಜ್ಞಾನ ಮಾಡಿಕೊಂಡವನ ಆತ್ಮಜ್ಞಾನದ ಬಲದ ಮುಂದೆ ಮಾಯೆಯ ಆಟಗಳು ಏನೊಂದು ನಡೆಯವು ಇಂಥವನಿಗೆ ಜನನ ಮರಣಗಳ ಅಂಜಿಕೆಯಿರಲು ಸಾಧ್ಯವೇ ಇಲ್ಲ 'ಅವನು ಜೀವವಿರುವಾಗಲೇ

ಸತ್ತನು, ಮರಣವನ್ನು ಕೊಂದು ಜೀವಿಸಿದನು' ಎಂದು ಹೇಳುವಲ್ಲಿ ಅವನ ವಿವೇಕ ಬಲದಿಂದ ಅವನಿಗೆ ಜನನ ಮರಣಗಳ ಸ್ಮರಣೆಯೇ ಇಲ್ಲೆಂದು ತಿಳಿಯುವದು ಅವನು ಜನರಲ್ಲಿದ್ದಂತೆ ಕಂಡು ಬಂದರೂ ಜನರಿಂದ ಬೇರೆಯೇ ಇರುವವನಂತೆ ಭಾವಿಸುವನು ನಿರ್ಮಲನಾದ ಆತನನ್ನು ದೃಶ್ಯ ವಸ್ತುಗಳು ಸ್ಪರ್ಶ ಮಾಡವು ಇಂಥವರೇ ಸಾಧುಗಳು ಇವರ ಭಜನೆ ಯಿಂದ ಉಳಿದ ಜನರು ಪಾವನರಾಗುವರು

ಸಾಧಕರು ಸದ್ಗುರುವಿನ ಸೇವೆ ಕೈಕೊಂಡು ಆತ್ಮಾನಾತ್ಮ ವಿವೇಕ ವನ್ನು ಮಾಡಬೇಕು ಆ ಸದ್ಗುರುವಿನ ಬೋಧೆಯಿಂದ ಅವನು ವಿವೇಕ ದಿಂದ ಕಂಡು ಹಿಡಿದ ತರ್ಕ ಸಂಶಯಗಳು ದೂರಾಗಿ ಹೋಗುವವು ಈ ಸಾಧಕರಿಗೆ ಅರ್ಥಾತ್ ಸಚ್ಛಿಷ್ಯರಾದ ನಿಮಗೆ ಹೇಳುವ ಕೊನೆಯ ಮಾತೆಂದರೆ ಸಂತರಿಗೆ ಶರಣು ಹೋಗತಕ್ಕದ್ದು, ಅವರ ಪ್ರಸನ್ನ ಮುಖ ದಿಂದ ಆಧ್ಯಾತ್ಮವನ್ನು ಶ್ರವಣ ಮಾಡತಕ್ಕದ್ದು ಅಂದರೆ ನೀವೂ ಸಂತ ರಾಗಿಯೇ ಬಿಡುವಿರಿ ಮತ್ತು ಲೋಕೋದ್ಧಾರ ಮಾಡುವ ಸಾಮರ್ಥ್ಯವು ನಿಮ್ಮಲ್ಲಿ ಬರುವದು ಸತ್ಸಂಗದಂತಹ ಸಾಧನವು ಇನ್ನೊಂದಿಲ್ಲ ಗುರು ಭಕ್ತಿಯ ಆಧಾರದಿಂದ, ಉಪದೇಶ ಪಡೆದ ವಿಚಾರದಿಂದ, ಮತ್ತು ಕ್ರಿಯಾ ಶುದ್ಧ ನಿರ್ಧಾರದಿಂದ ನೀವು ಸ್ವರೂಪಿಗಳಾಗುವಿರಿ, ಸದ್ಗುರು ಸ್ಮರಣೆ ಯಿಂದ ಪರಮಾರ್ಥ ಬುದ್ಧಿಯು ಪ್ರಫುಲ್ಲಿತವಾಗುವದು, ಸಹಜ ಸಮಾ ಧಾನತೆಯು ಪ್ರಾಪ್ತವಾಗುವದು, ನೀವು ದೇಹವು ನಶ್ವರವಾಗಿದ್ದರೂ ಅದು ಇರುವ ವರೆಗೆ ಅದನ್ನು ಒಳಿತಾಗಿ ಉಪಯೋಗ ಮಾಡಿಕೊಂಡು ಗುರುಸೇವೆಯಲ್ಲಿ ತೊಡಕಿಸಿರಿ ಗುರುವನ್ನು ಸಂತೋಷಪಡಿಸಿರಿ ತಾಯಿಯು ಹಲವು ಬಗೆಯಿಂದ ಮಕ್ಕಳನ್ನು ಜೋಪಾನ ಮಾಡಿ ಬೆಳಿಸುವಳು ಅದ ರಂತೆ ಸದ್ಗುರುವು ತನ್ನನ್ನು ಸೇರಿದ ಅನನ್ಯ ಭಕ್ತರ ಬಗೆಗೆ ಚಿಂತೆಯನ್ನು ವಹಿಸುವನು ಆದ್ದರಿಂದಲೇ ಸದ್ಗುರು ಸ್ಮರಣೆಯಲ್ಲಿ ಸದಾನಿರತನಾದವನೇ ಧನ್ಯನು ಸದ್ಗುರು ಸ್ಮರಣೆಯಂಥ ಇನ್ನೊಂದು ಸಮಾಧಾನವಿಲ್ಲ ಇಷ್ಟೆಲ್ಲ ವನ್ನು ನಿಮಗೆ ಶಬ್ದಗಳಿಂದ ಹೇಳುವದು ಮುಗಿಯಿತು ಇನ್ನು ಈ ಗ್ರಂಥದ ಸಪ್ತಮ ದಶಕದ ಕೊನೆಯ ಪ್ರಸಂಗವುಂಟಾಯಿತು ಅದನ್ನೇ ಸದ್ಗುರು

ಸ್ಮರಣೆ ಶ್ರೇಷ್ಠವೆಂದು ಸ್ಪಷ್ಟವಾಗಿ ಹೇಳಿ ಮುಕ್ತಾಯಗೊಳಿಸುವೆವು ಸದ್ಗುರು ಭಜನಕ್ಕೆ ಸರಿಯಾದ ಮೋಕ್ಷದಾಯಕ ಸಾಧನವು ಬೇರೊಂದಿಲ್ಲ ಇದನ್ನು ಗುರುಗೀತೆಯೆಂಬ ಗ್ರಂಥದಲ್ಲಿ ಅವಲೋಕಿಸಿ ಮನದಟ್ಟು ಮಾಡಿಕೊಳ್ಳಬೇಕು ಶ್ರೀ ಸದಾಶಿವನು ಪಾರ್ವತಿದೇವಿಯನ್ನು ಕುರಿತು ಸದ್ಗುರು ಸ್ಮರಣೆಯ ಮಹತ್ವವನ್ನು ಕುರಿತು ಉಪದೇಶ ಮಾಡಿರುವನು ಆ ಗ್ರಂಥದಲ್ಲಿಯ ವಿವೇಕವನ್ನು ಸಾಧಕರು ವಿವೇಚಿಸಿ ಅವಲೋಕಿಸಿದ್ದಾದರೆ ಅವರಿಗೆ ಕಂಡು ಬರುವದೇನಂದರೆ– ಆತ್ಮನಿಶ್ಚಯದ ಮಹತ್ವವು

ಅದ್ವೈತವನ್ನು ಬೋಧಪರದಲ್ಲಿ ಉಲ್ಲೇಖಿಸಿದ ಗ್ರಂಥಗಳು ಯಾವ ಭಾಷೆಯಲ್ಲಿಯೇ ಇರಲಿ ಅವನ್ನು ಧಿಕ್ಕರಿಸಕೂಡದು ಅವು ಸಂಸ್ಕೃತದಲ್ಲಿ ಇರದಿದ್ದರೆ ಸಂಸ್ಕೃತದಲ್ಲಿಲ್ಲ ಎಂದು ಆ ಗ್ರಂಥಗಳ ಶ್ರವಣ–ಪಠಣ ಬಿಡಕೂಡದು ಯಾವ ಭಾಷೆಯಲ್ಲಿದ್ದರೂ ವೇದಾಂತದ ಅರ್ಥ ವಿಷಯದಲ್ಲಿ ಸತ್ಯತೆ ಯಿದ್ದೇ ಇರುವದು ವೇದಾಂತದ ಸಂಪೂರ್ಣ ರಹಸ್ಯವನ್ನು ಸ್ಫುಟಗೊಳಿಸಿದ, ಶ್ರುತಿ-ಶಾಸ್ತ್ರಗಳಿಗೆ ಅನುಸರಿಸಿ ಬರೆದ, ಅವುಗಳ ಪರಿಶೀಲನದಿಂದ ಆತ್ಮಬೋಧೆಯ ಸಮಾಧಾನವನ್ನುಂಟು ಮಾಡುವಗ್ರಂಥಗಳು ಯಾವ ಭಾಷೆಯಲ್ಲಿದ್ದರೇನು? ಭಾಷೆ-ಭಾಷೆಗಳಲ್ಲಿ ನ್ಯೂನಾಧಿಕ್ಯತೆಯನ್ನು ಕಲ್ಪಿಸದೆ ತಮಗೆ ಸರಿಯಾಗಿ ಅವಗತವಾಗುತ್ತಿರುವ ಭಾಷೆಗಳಲ್ಲಿಯ ಗ್ರಂಥಗಳ ಶ್ರವಣ–ಪಠಣ ಮಾಡುವದು ಯೋಗ್ಯ ಸಾಧಕರ ಲಕ್ಷಣವು- ಜ್ಞಾನ ಸಾಧನೆಯ ಉಪಾಯಗಳು 'ಮಂಗನ ಕೈಯಲ್ಲಿ ಕೊಟ್ಟ ತೆಂಗಿನಕಾಯಿ'ಯಂತೆ ಮೂರ್ಖನಿಗೆ ಎಂದೂ ತಿಳಿಯಲಾರವು

ಇನ್ನು ಇದಿರಲಿ ಸಮುದ್ರ ಸಿಂಪಿನಲ್ಲಿ ಹುಟ್ಟಿದ ಮುತ್ತನ್ನು ತುಚ್ಛವೆಂದು ಯಾರೂ ಎಣಿಸುವದಿಲ್ಲ. ಜಾಣನಾದವನು ಅದನ್ನು ಕೂಡಲೇ ಸ್ವೀಕರಿಸುವನು

ಪಾರಮಾರ್ಥಿಕದ ಬಗಗೆ ವೇದಶ್ರುತಿಗಳು 'ನೇತಿ' 'ನೇತಿ' ಎಂದು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸುತ್ತಿರುವಾಗ ಭಾಷೆಯ

ವ್ಯುತ್ಪತ್ತಿಯ ಅಭಿಮಾನವನ್ನು ತಾಳುವದು ಕೆಲಸದ್ದಲ್ಲ. ಪರಬ್ರಹ್ಮನು ಆದಿಯಲ್ಲಿಯೂ ಅಂತ್ಯದಲ್ಲಿಯೂ ಅನಿರ್ವಾಚ್ಯನಾಗಿರುವನು ಹಾಗು ಶಬ್ದಾತೀತನಾಗಿರುವನು" ಎಂದು ನಿರೂಪಣ ಮಾಡಿದರು.

ಇತಿ ದಾಸಬೋಧೆಯ ೭ನೆಯ ದಶಕ ಮುಗಿದುದು





|| ಜಯ ಜಯ ರಘುವೀರ ಸಮರ್ಥ ||

ಆನೆಯ ದಶಕ (ಜ್ಞಾನ ದಶಕ–ಮಾಯೋದ್ಭವ)

ಶ್ರೀ ರಾಮ ॥ ೧ನೇ ದರ್ಶನ || ಶ್ರೋತೃಗಳು ನಾವಧರಾಗಬೇಕು ಮಂದ ಬುದ್ಧಿಯುವರಿಗಾಗಿ ವಿಮಲಜ್ಞಾನವನ್ನು ಇಲ್ಲಿ ಹೇಳುವೆವು ಶಾಸ್ತ್ರಗಳು ಅನಂತವಾಗಿಯೂ ಅಪಾರವಾಗಿಯೂ ಇರುವವು ಅವೆಲ್ಲವನ್ನು ನಿರೀಕ್ಷಿಸುವದಕ್ಕೆ ಮಾತ್ರ ಇಡೀ ಆಯುಷ್ಯದ ಕಾಲವು ಸಾಕಾಗುವದಿಲ್ಲ ಆದರೆ ಮಾಡ ವದೇನು ? ಮನಸ್ಸಿನಲ್ಲಿ ಸಂಶಯಗಳ ಬಾಧೆ ಹೆಚ್ಚಾಗುತ್ತಲೇ ಇರುವದು ಜಗತ್ತಿನಮೇಲೆ ದೊಡ್ಡದೊಡ್ಡ ತೀರ್ಥಗಳು ಲೆಕ್ಕವಿಲ್ಲದಷ್ಟುಇರುವವು, ಅವು ಪುಣ್ಯಪ್ರದವಾಗಿದ್ದರೂ ಅವುಗಳಲ್ಲಿ ಎಷ್ಟೋ ಸುಗಮಗಳಾಗಿರುವವು ಅದೆಷ್ಟೋ ದುರ್ಗಮಗಳಾಗಿರುವವು ಇನ್ನೂ ಹಲವು ಅತ್ಯಂತ ದುಸ್ತರಗಳಾಗಿರುವವು, ಈ ಎಲ್ಲ ತೀರ್ಥಗಳನ್ನು ಆಚರಿಸುವ ಸಂಸಾರಿಯು ಜಗತ್ತಿನ ಮೇಲೆ ಆದಾವನಿರುವನು ? ಒಂದು ವೇಳೆ ಎಲ್ಲವನ್ನೂ ಸಂಚರಿಸಬೇಕೆಂದರೆ ಇಡೀ ಆಯುಷ್ಯವೇ ಸಾಕಾಗುವದಿಲ್ಲ ದೇವರ ಸಂಬಂಧವಾಗಿ ಹಲವು ತಪಗಳು, ಹಲವು ದಾನಗಳು, ಅನೇಕ ಯೋಗಗಳು, ಸಾಧನಗಳು ಇವೆಲ್ಲವನ್ನು ಕೈಕೊಳ್ಳಬೇಕಾಗುವದು ದೇವಾಧಿ ದೇವನನ್ನು ಸಾಕ್ಷಾತ್ಕರಿಸಿಕೊಳ್ಳುವದಕ್ಕಾಗಿ ಬಹಳ ಪ್ರಕಾರದಿಂದ ಶ್ರಮ ಮಾಡಬೇಕಾಗುವದು. ಹೀಗಾದರೆ ಮಾತ್ರ ದೇವ ದೊರಕುವನೆಂದು ಎಲ್ಲರ ಮತವು ಹಲವು ಪಂಥಗಳೂ, ಹಲವು ಮತಗಳೂ ದೇವ ಸಾಕ್ಷಾತ್ಕಾರದ ಬಗೆಗೆ ಒಂದೇ ಅಭಿಪ್ರಾಯ ಪಡುವವು ಆದರೆ ದೇವನ ಸ್ವರೂಪವು ಹೀಗೆಯೇ ಇರುವದೆಂದು ನಿಶ್ಚಿತವಿಲ್ಲ ಜಗತ್ತಿನ ಮೇಲೆ ಅಸಂಖ್ಯ ದೇವತೆಗಳಿರುವವು ಯಾವ ದೇವನೂ ಹೀಗಿರುವನೆಂದು ಗೊತ್ತಾಗಿರುವದಿಲ್ಲ ಉಪಾಸನೆಗಳೂ ಹಲವು ಉಂಟು ಆದರೆ ದೇವನು ಹೇಗೆ ದೊರಕುವನು ? ಅನೇಕ ಉಪಾಸನೆಗಳು, ಅನೇಕ ಪಂಥಗಳು, ಅನೇಕ ದೇವತೆಗಳು, ಅನೇಕ ಭಕ್ತರು, ಒಂದೊಕ್ಕೊಂದು ಹೋರಾಡುವ ಅನೇಕ ಶಾಸ್ತ್ರಗಳು, ಅನೇಕ ಋಷಿಗಳು, ಅನೇಕ ಮತಗಳು ಈ ಪ್ರಕಾರವಿರುವ ಸ್ಥಿತಿಯಲ್ಲಿ ಒಬ್ಬ ದೇವನ ನಿಶ್ಚಯವೆಂತಾಗುವದು ? ಸಾವಿರಾರು ಜನರಲ್ಲಿ ಒಬ್ಬನು ಮಾತ್ರ ದೇವನ ಸಂಬಂಧವಾಗಿ ವಿಚಾರ

ಮಾಡುವನು ಆದರೆ ಅವನಿಗೂ ಕೂಡ ದೇವನ ಕೌತುಕವು ತಿಳಿಯುವದು ದುರ್ಘಟವು, ಹೀಗೆ ಹೇಳಿದ ಮಾತ್ರದಿಂದ ಅಹಂಕಾರ ಉದಿಸುವದು, ಅದ ರಿಂದ ದೇವನು ದೂರವೇ ಉಳಿಯುವನು ಇನ್ನು ದೇವನೆಂದರೆ ಯಾರು ? ಅವನನ್ನು ತಿಳಿಯುವದು ಹೇಗೆ ? ಇದನ್ನೇ ಹೇಳುವೆವು.

ದೇವನೆಂದರೆ— ಚರಾಚರ ಸೃಷ್ಟಿಯ ನಿರ್ಮಾಪಕನೂ, ಸೃಷ್ಟ್ಯಾದಿ ವ್ಯಾಪಾರಗಳನ್ನು ನಿರಂತರ ಸಾಗಿಸುವ ಸರ್ವಕರ್ತಾರನೂ, ಮೇಘ ಮಾಲೆ ಗಳನ್ನು ವಿರಚಿಸಿದವನೂ, ಚಂದ್ರಬಿಂಬದಲ್ಲಿ ಅಮೃತ ಕಲೆಗಳನ್ನಿರಿಸಿದವನೂ, ರವಿಮಂಡಲಕ್ಕೆ ತೇಜವನ್ನಿಟ್ಟವನೂ, ಸಮುದ್ರವನ್ನು ಮರ್ಯಾದೆಗೊಳಿಸಿದ ವನೂ ಭೂಗೋಲವನ್ನು ಶೇಷನಫಣಿಯಮೇಲಿರಿಸಿದವನೂ, ಗ್ರಹ ನಕ್ಷತ್ರಗಳಿಗೆ ಅಂತರಿಕ್ಷದಲ್ಲಿ ಸ್ಥಾನ ನೀಡಿದವನೂ, ಚತುರ್ವಿಧ ಪ್ರಾಣಿಕೋಟಿಯನ್ನು ಹುಟ್ಟಿಸಿದವನೂ, ತ್ರೈಲೋಕ್ಯಗಳನ್ನು ನಿರ್ಮಾಣ ಮಾಡಿ ತಾನು ಹರಿಹರ ಬ್ರಹ್ಮರ ರೂಪದಿಂದ ಅವತರಿಸಿದವನೂ ಅವನೇ ದೇವನು

ಮನೆಯಲ್ಲಿ ಪೂಜಿಸುವ ದೇವ ವಿಗ್ರಹಗಳು ಎದ್ದು ಬಂದು ಜೀವಗ ಳನ್ನು ಹುಟ್ಟಿಸಲಾರವು. ಅವಕ್ಕೆ ಅನಂತ ಬ್ರಹ್ಮಾಂಡಗಳ ಗೋಲಗಳನ್ನು ವಿರಚಿಸಲು ಬರಲಾರದು ಜಗತ್ತಿನಲ್ಲಿ ಅಲ್ಲಲ್ಲಿಗೆ ಶೋಭಾಯಮಾನವಾ ಗಿದ್ದ ಹಲವು ದೇವರುಗಳಲ್ಲಿ ಯಾವ ದೇವನಿಗೂ ಕೂಡ ಈ ಕಾರ್ಯವು ಸಾಧ್ಯ ವಿಲ್ಲ ಚಂದ್ರ, ಸೂರ್ಯ, ನಕ್ಷತ್ರ, ಮೋಡಗಳು ಬೇರೆ ಯಾವ ದೇವನ ಕೃತಿಯಿಂದ ಉತ್ಪನ್ನವಾದವುಗಳಲ್ಲ ಇವೆಲ್ಲವೂ ಸರ್ವಕರ್ತಾರನೆನ್ನಿಸಿದ ದೇವನ ಕೃತಿಯಲ್ಲಿಯವು ಇನ್ನು ಆ ಸರ್ವಕರ್ತಾರನೆಂಥವನೆಂದು ತಿಳಿಯು ವದಾದರೆ— ಆ ಸರ್ವಕರ್ತಾರನು ನಿರಾಕಾರನು ಅಂದರೆ ಅವಯವ ರಹಿತ ನಾಗಿರುವನು ಅವನಿಗೆ ವಿಸ್ತಾರ ಅವಕಾಶಗಳಿಲ್ಲ ಅವನು ಶೂನ್ಯನು ನಿರ್ಮಲಾಕಾಶನು, ಆ ಆಕಾಶದಿಂದ ವಾಯುವು ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಜಲವು, ಜಲದಿಂದ ಪೃಥ್ವಿಯು ಈ ಪ್ರಕಾರ ಅಘಟಿತ ಘಟನೆ ಗಳುಂಟಾಗಿರುವದು ಆತನಿಂದಲೇ ಸೃಷ್ಟಿಯು ಜಲದಿಂದ ಸಿದ್ಧವಾಗಿ ಸ್ತಂಭ ರಹಿತವಾಗಿ ಅಂದರೆ ನಿರಾಧಾರವಾಗಿ ನಿಂತಿದೆ ಇದನ್ನು ಮಾಡಿದವನು ಆ ದೇವನು ಅವನಿಂದಲೇ ಸೃಷ್ಟಿಯು ನಿರ್ಮಿತವಾಯಿತು ಸೃಷ್ಟಿಯಲ್ಲಿ ಕಲ್ಲು ಗಳು ಉತ್ಪನ್ನವಾದವು ಮೂಢರು ಆ ಕಲ್ಲುಗಳನ್ನೇ ದೇವರೆಂದು ನಂಬು

ವರು ಸೃಷ್ಟಿಯನ್ನು ಉಂಟುಮಾಡುವವನು ಸೃಷ್ಟಿಗಿಂತಲೂ ಮೊದಲಿಗೆ ಇದ್ದಿರಬೇಕಲ್ಲವೇ? ಘಟವನ್ನು ಸಿದ್ಧಪಡಿಸುವ ಕುಂಬಾರನು ಆ ಕೊಡಕ್ಕಿಂತ ಮೊದಲಿಗಿದ್ದವನಲ್ಲವೇ? ಅದರಂತೆ ಸೃಷ್ಟಿಯ ಹೊಟ್ಟೆಯಲ್ಲಿರುವ ಕಲ್ಲುಗಳಿಗಿಂತ ಸೃಷ್ಟಿಕರ್ತನು ಮೊದಲಿಗನೇ ಎಂದಂತಾಯಿತು ಮಣ್ಣಿನ ಸೈನ್ಯವನ್ನು ಮಾಡುವವನು ಆ ಸೈನ್ಯದಿಂದ ಹೊರತಾಗಿರುವನು ಅದರಂತೆ ಸೃಷ್ಟಿಕರ್ತ ದೇವನು ಸೃಷ್ಟಿಯಿಂದ ಬೇರೆಯೇ ಇರುವನು ಕಾರ್ಯವೂ ಕಾರಣವೂ ಇವೆರಡೂ ಒಂದೇ ಎಂದು ಹೇಳಲು ಬರಲಾರದು ಮತ್ತು ಅವೆರಡೂ ಪಂಚ ಭೂತಾತ್ಮಕಗಳಾಗಿರುವವು. ಈ ಮೂಲಕವಾಗಿ ಮಾತ್ರ ಅವು ಒಂದೇ ಎಂದು ಭಾವಿಸಬಹುದು ಆದರೆ ಕಾರ್ಯ ಕಾರಣ ಸಂಬಂಧಗಳನ್ನು ಪಂಚಭೂತಗಳನ್ನು ಹೊರತುಪಡಿಸಿ ನಿರ್ಗುಣ ಬ್ರಹ್ಮನ ಕಡೆಗೆ ಒಯ್ಯಲು ಬರಲಾರದು ಸೃಷ್ಟಿಕರ್ತನು ಸೃಷ್ಟಿಯ ಆಚೆಗಿರುವನೆಂಬದರಲ್ಲಿ ಸಂಶಯವಿಲ್ಲ ಸೂತ್ರ ಗೊಂಬೆಯ ಆಟದಲ್ಲಿ ಗೊಂಬೆಗಳು ಬೇರೆ, ಅವುಗಳನ್ನು ಕುಣಿಸುವ ಚಾಲಕನು ಬೇರೆ ಅದರಂತೆ ಕಿಳ್ಳೀಕೇತನ ಆಟದಲ್ಲಿ ಕಟ್ಟಿರುವ ಅರಿವೆಯ ಪರದೆಯ ಮೇಲೆ ತೋರುವ ಸೈನ್ಯವು ನಿಜವಾದ ಸೈನ್ಯದಂತೆ ಚಲನವಲನ ನಡೆಯಿಸುವದು, ಆದರೆ ಆ ಚಲನವಲನ ಕರ್ತಾರನಾದ ಕಿಳ್ಳೀಕೇತನು ಆ ಸೈನ್ಯದಿಂದ ಹೊರತಾಗಿಯೇ ಇರುವನು ಈ ದೃಷ್ಟಾಂತಗಳಂತೆ ಸೃಷ್ಟಿಕರ್ತಾರನಾದ ದೇವನು ಸೃಷ್ಟಿಭಾವದಲ್ಲಿಯವನಲ್ಲ ಹಲವು ಜೀವಗಳನ್ನು ನಿರ್ಮಿಸುವ ಆತನು ತಾನು ಜೀವನೆಂತಾಗುವನು? ಕರ್ತೃವು ಕರ್ಮದಿಂದ ಬೇರೆಯಿರುವನು ಗೋಪುರವನ್ನು ನಿರ್ಮಿಸುವ ಕಲಾವಿದನು ಗೋಪುರನಲ್ಲ. ಅದರಂತೆ ಜಗತ್ತನ್ನು ನಿರ್ಮಾಣ ಮಾಡುವವನು ಅಂದರೆ ಜಗದೀಶನು ಜಗತ್ತಿನಿಂದ ಬೇರೆಯೇ ಇರುವನು ಅವನು ಜಗತ್ತಲ್ಲ ಕೆಲವು ಮೂಢರು ಜಗವೇ ಜಗದೀಶನು ಎಂದೆನ್ನುವರು ಹೀಗೆ ಜಗದೀಶನು ಬೇರೆ ಜಗತ್ತನ್ನು ನಿರ್ಮಾಣ ಮಾಡುವ ಆತನಕಲೆಯು ಎಲ್ಲದರಿಂದಲು ಬೇರೆ ಆದ್ದರಿಂದಲೇ ಪಂಚಭೂತಾತ್ಮಕ ಸೃಷ್ಟಿಯೆಂಬ ಕಲಸಿದ ಮಣ್ಣಿನಿಂದ (ಕೆಸರಿನಿಂದ) ಆತ್ಮಾರಾಮನು ಅಲಿಪ್ತನಾಗಿಯೇ ಇರುವನು ಅವಿದ್ಯೆಯಿಂದ ಮಾಯಾಭ್ರಮೆಯು ಸತ್ಯವೆಂದು ಭಾಸವಾಗುವದು ಆದರೆ ಮಾಯೆಯ ಉಪಾಧಿಗಳು ಲೋಕಪ್ರಸಿದ್ಧವಾಗಿ ಸತ್ಯವೆಂದು ಎಲ್ಲಿಯೂ

ಹೇಳರುವದಿಲ್ಲ ಅಂತೆಯೇ ಬ್ರಹ್ಮಸತ್ಯ-ಜಗನ್ಮಿಥ್ಯೆ ಎಂದು ಹೇಳ ಲ್ಪಡುತ್ತದೆ ಆ ಪರಮಾತ್ಮನು ಸರ್ವಶ್ರೇಷ್ಠನು ಅವನು ಸೃಷ್ಟಿಯನ್ನೂ ಅಂತರಾತ್ಮನನ್ನೂ ವ್ಯಾಪಿಸಿರುವನು, ಅವನಿಗೇ ದೇವನೆನ್ನುವರು ಅವನ ಹೊರತು ಅನ್ಯ ದೇವರಿಲ್ಲ ಈ ಪ್ರಕಾರ ವೇದಾಂತಿಗಳ ಅಂತರ್ಭಾವ ವಿರುವದು

ಪದಾರ್ಥ ಹಾಗು ವಸ್ತುಗಳು ನಶ್ವರವಾದವುಗಳು ಈ ಕಾರಣದಿಂದ ಭಗವಂತನು ಪದಾರ್ಥಗಳಿಂದ ಭಿನ್ನವಾಗಿರುವನು ದೇವನು ವಿಮಲನು, ಅಚಲನು ಹೀಗೆಂದು ಸಕಲಶಾಸ್ತ್ರಗಳು ಹೇಳುವವು ಆದ್ದರಿಂದ ನಿಶ್ಚಲನಾದ ಆ ದೇವನಿಗೆ ಚಂಚಲನೆಂದು ಎಂದೂ ಅನ್ನಕೂಡದು ಇನ್ನು ಜನರಾಡುವ ಮಾತುಗಳಲ್ಲಿ ದೇವನು ಬಂದನು, ದೇವರು ಹೋದರು, ದೇವನು ಹುಟ್ಟಿ ದನು, ದೇವನು ಗತಿಸಿದನು ಹೀಗೆಲ್ಲ ಆಡುವ ನುಡಿಗಳು ನಿರರ್ಥಕವಾದವು ಗಳು ಇಷ್ಟೇ ಅಲ್ಲ ಈ ಪ್ರಕಾರ ಮಾತಿನಲ್ಲಿ ಬಳಸುವವರು ಪಾಪಿಗಳೆನ್ನಿ ಸುವರು ಆ ದೇವನಿಗೆ ಜನನ ಮರಣಗಳು ಎಂದಿಗೂ ಕೂಡುವದಿಲ್ಲ ಯಾಕಂದರೆ ಅಮರತ್ವವು ಆವನ ಅಧಿಕಾರಕ್ಕೆ ಒಳಪಟ್ಟುದುದು ಅಂದಮೇಲೆ ಆ ದೇವನಿಗೆ ಮೃತ್ಯುವೆಲ್ಲಿಯದು? ಹುಟ್ಟು ಸಾವುಗಳೂ, ದುಃಖ ಭೋಗವೂ. ಇವೆಲ್ಲವು ದೇವನ ಕೃತಿಗೆ ಸಂಬಂಧಿತವಾದವುಗಳು ಆದರೆ ಅವನ ಕೃತಿಯು ಕಾರಣಗಳಿಂದ ಬೇರೆಯಿರುವದು ಅರ್ಥಾತ್ ದೇವನಿಗೆ ಇವಾವೂ ಸಂಬಂಧಿ ಸುವದಿಲ್ಲ ಅಂತಃಕರಣಗಳು, ಪಂಚಪ್ರಾಣಗಳು, ಪಿಂಡಸಂಬಂಧವಾದ ಅನೇಕ ತತ್ವಗಳು ಇವೆಲ್ಲವು ದೇವರಲ್ಲ ಇದರಂತೆ ದೇವನ ಕಲ್ಪನೆಯಿಲ್ಲದೆ ಭಗವಂತ ಭಗವಂತನೆಂದು ಸಂಬೋಧಿಸುವಲ್ಲಿ ದೇವತ್ವವು ಇರಲಾರದು" ಎಂದು ಗುರುಗಳು ಹೇಳಿದರು ಆಗ ಶಿಷ್ಯನು—

"ನೀವು ಕರ್ತಾರನನ್ನು ಕಾರ್ಯದಲ್ಲಿ ತೊಡಗಿಸಿದಿರಿ ನಿರ್ಗುಣನನ್ನು ಕರ್ತೃವೆಂದು ತಿಳಿದರೆ ದ್ರಷ್ಟಾರನು ದ್ರಷ್ಟತೆಯಿಂದ ದೃಶ್ಯದಲ್ಲಿ ಕೂಡಿಕೊಳ್ಳು ವನು ಅಂದಮೇಲೆ ಬ್ರಹ್ಮಾಂಡ ಕರ್ತಾರನಾದ ದೇವನು ಸಗುಣನೋ ? ಮತ್ತು ಅನು ನಿರ್ಗುಣನಾದರೆ ನಿರ್ಗುಣ ಬ್ರಹ್ಮನಲ್ಲಿ ಮಾಯೆಯ ಕೂಡುವಿಕೆ ಹೇಗಾಯಿತು ?" ಎಂದು ಪ್ರಶ್ನೆ ಮಾಡಿದನು

ಈ ಪ್ರಶ್ನೆಯ ಉತ್ತರವನ್ನೇ ಮುಂದೆ ನಿರೂಪಣ ಮಾಡುವೆವು ಶ್ರೋತೃಗಳು ಸಾವಧಾನದಿಂದ ಶ್ರವಣ ಮಾಡತಕ್ಕದ್ದು - ಮುಂದೆ ಇದೇ ನಿರೂಪಣೆಯನ್ನು ವಿಶದವಾಗಿ ಹೇಳುವೆವು ಅದರ ಶ್ರವಣದಿಂದ ಸಾಧಕರಿಗೆ ಸಮಾಧಾನವೆನ್ನಿಸುವದು ಎಂದು ಹೇಳಿದರು

ಶ್ರೀ ರಾಮ ‖ ೨ ಸೂಕ್ಷ್ಮ ಆಶಂಕೆ ‖ "ಈ ಮೊದಲು ನಿರಾಕಾರ ನಿರ್ಗುಣ ಬ್ರಹ್ಮನಿಂದ ಸಗುಣ–ಸಾಕಾರ ಮಾಯೆಯು ಅದೆಂತು ನಿರ್ಮಿತವಾಯಿತೆಂದು ಶಿಷ್ಯನು ಕೇಳಿದ ಪ್ರಶ್ನೆಗೆ ಶ್ರೀ ಗುರುಗಳು–'ಪರಬ್ರಹ್ಮವಸ್ತುವು ಮೂಲತಃ ಒಂದೇ, ಅವನು ನಿತ್ಯ ಮುಕ್ತನು, ಅಕ್ರಿಯನು ಅಂಥವನಿಂದ ಮೂಲ ಮಾಯೆಯು ಅನ್ಯಾಹತವಾಗಿ ಸೂಕ್ಷ್ಮ ರೂಪದಿಂದಜನಿಸಿತು'ಎಂದು ಹೇಳಿದರು ಈ ಉತ್ತರದಿಂದ ಶಿಷ್ಯನಿಗೆ ಹಲವು ಸಂಶಯಗಳು ಉದಿಸುವವು ಅವನ್ನು ಅವನು ತನ್ನ ಗುರುಗಳ ಎದುರಿಟ್ಟನು ಅವನ ಸಂಶಯಗಳೆಂತೆಂದರೆ—

"ಬ್ರಹ್ಮನು ಒಬ್ಬನೇ ಅವನಿಗೆ ಆಕಾರವಿಲ್ಲ, ಹಾಗೂ ಅವನು ಮುಕ್ತನು, ವಿಕಾರರಹಿತನು ಅಂದಮೇಲೆ ಅವನಲ್ಲಿ ಮಾಯೆಯ ಆಡಂಬರವು ಹೇಗೆ ಉಂಟಾಯಿತು ? ಮತ್ತು ಆ ಬ್ರಹ್ಮನು ಖಂಡರಹಿತನು, ಗುಣರಹಿತನು ಇಂಥವನಲ್ಲಿ ಸೃಷ್ಟಿರಚನೆಯ ಬಯಕೆಯುಂಟಾಯಿತೆಂದುಹೇಳುವಿರಿ ಆದರೆ ನಿರ್ಗುಣನಾದವನಿಗೆ ಅದೇಕೆ ಬಯಕೆಯುಂಟಾಯಿತು? ಸಗುಣಕ್ರಿಯೆಯು ಅವನಿಂದ ಅದೇಕೆ ಒದಗಿತು ? ನಿರ್ಗುಣತ್ವವೇ ಸುಗುಣತ್ವವಾಗಿ ಪರಿವರ್ತಿಸಿತೆಂದು ಹೇಳುವದು ತಿಳಿಗೇಡಿತನದ್ದಾಗುವದಲ್ಲವೇ ? ಆ ಬ್ರಹ್ಮನು ಅವಯವರಹಿತನು, ಕ್ರಿಯಾರಹಿತನು, ಎಂದು ಅರಿತರೂ 'ಈ ಸೃಷ್ಟಿ ರಚನೆಯು ಕೇವಲ ದೇವನ ಲೀಲೆಯು' ಎಂದು ಅದೇಕೆ ಹೇಳುವರು? ಪರಮಾತ್ಮನೆನಿಸಿದ್ದ ಆ ಬ್ರಹ್ಮನ ಮಹಿಮೆಯು ಜೀವಾತ್ಮನಾದ ಪ್ರಾಣಿಗೆ ಅದೆಂತು ತಿಳಿಯುವದು ? ಹೀಗೆ ನಿರ್ಗುಣ ಹಾಗು ಕ್ರಿಯಾರಹಿತನನ್ನು ಬಲವಂತಿಕೆಯಿಂದ ವಿಪರೀತವಾಗಿ ತಿಳಿಸುವದರಿಂದ ಶಾಸ್ತ್ರಾರ್ಥಕ್ಕೆ ಬಾಧೆ ಬರುವದಿಲ್ಲವೇ ? ನಿರ್ಗುಣನಲ್ಲಿ ಕ್ರಿಯಾ ಸಾಮರ್ಥ್ಯವಿರಲಾರದು ಅಂದಮೇಲೆ ಅವನು ಸೃಷ್ಟಿರಚನೆ ಮಾಡುವ ಆಶೆಯನ್ನು ಏಕೆ ಅವಲಂಬಿಸಿದನು? ದೇವನ ಹೊರತು ಸೃಷ್ಟಿಯು ರೂಪಗೊಂಡಿತೆಂದು ಹೇಳಿದರೆ ದೇವತ್ವದ ಅಭಾವವಾಗುವದು ಒಂದು ವೇಳೆ ದೇವನೇ ಸೃಷ್ಟಿಕರ್ತನು' ಎಂದು ಹೇಳಿ

ದರೆ ಅವನು ಸಗುಣನೆಂದು ತಿಳಿಯಬೇಕಾಗುವದು ಆದರ ದೇವನು ನಿರ್ಗು ಣನೆಂದು ವೇದ-ಶಾಸ್ತ್ರಗಳೂ ಎಲ್ಲ ಸಂತರೂ ಹೇಳುವರು ದೇವನು ಸಗುಣ ನೆಂದು ತಿಳಿದರೆ 'ಸುಗುಣವೆಲ್ಲವೂ . ನಾಶವಾಗುವವು' ಈ ನ್ಯಾಯದಂತೆ ದೇವನ ಅವಿನಾಶತ್ವಕ್ಕೆ ಕುಂದನ್ನಿಟ್ಟಂತಾಗು-ದಲ್ಲವೇ ? 'ದೇವನಿಂದ ಸೃಷ್ಟಿಯುಂಟಾಗಿಲ್ಲ ಎಂದು ಹೇಳಿದರೆ ದೇವನ ಅಭಾವತ್ವವನ್ನು ತಿಳಿಯ ಬೇಕಾಗುವದು ಆದಾಗದಿದ್ದರೂ ಆತನಲ್ಲಿ ಅಂಥ ಮಹತ್ವವಿಲ್ಲೆಂದು ಹೇಳ ಬೇಕಾಗುವದು, ಮಾಯೆಯ ನಿರ್ಮಾಣವು ಯಾರಿಂದಲೂ ಆಗಿರದೆ ಅದು ಸ್ವತಂತ್ರ ನಿರ್ಮಿತವೆಂದು ಬಗೆದರೆ ದೇವ ಹಾಗು ಮಾಯೆಯರ ಸಂಬಂಧವಿ ಲ್ಲೆಂದು ಹೇಳಿದಂತಾಗುವದು. ಇದರಿಂದ ದೇವನ ಸುದ್ದಿಯೇ ಇಲ್ಲದಂತಾ ಗುವದು ಹಾಗಾದ ಮೇಲೆ ಭಕ್ತರ ಉದ್ಧಾರವೆಂತಾಗುವದು ? ಇವೆಲ್ಲ ಸಂದೇಹಾಪತ್ತಿಗಳು ಹುಟ್ಟುವವು ಅಂತೆಯೇ ಮಾಯೆಯು ಸ್ವತಂತ್ರವಿರ ಕೂಡದು ಮಾಯೆಯು ಸ್ವತಂತ್ರವಿರದಿದ್ದರೆ ಅದನ್ನು ಹುಟ್ಟಿಸುವ ದೇವ ನಾವನು ?'' ಅವನೆಲ್ಲಿರುವನು ಎಂದು ಶಿಷ್ಯನು ತನ್ನ ಸಂದೇಹ ಶಂಕೆಗಳನ್ನು ನಿವೇದಿಸಿದನು ಶ್ರೀ ಗುರುಗಳು ಶಿಷ್ಯನ ಆಕ್ಷೇಪಣೆಗಳ ನಿರಸನ ಮಾಡುವ ಕುರಿತು ಆತನಿಗೆ-

''ನೀನು ತಳದಿರುವ ಆಕ್ಷೇಪಣೆಯಂತೆ ಬೇರೆ ಬೇರೆ ಜನರಲ್ಲಿ ಬೇರೆ ಆಕ್ಷೇಪಣೆಯ ಭಾವಗಳಿರುವವು ಅವನ್ನೆಲ್ಲ ಮೊದಲು ಹೇಳುವೆವು ಆ ಬಳಿಕ ನಿಶ್ಚಿತವನ್ನು ತಿಳಿಸುವೆವು" ಎಂದು ಹೇಳಹತ್ತಿದರು 'ಒಬ್ಬನು ದೇವನಿಂದಲೆ ಮಾಯೆಯ ಜನನವು ಆ ದೇವನ ಇಚ್ಛೆಯಿರದಿದ್ದರೆ ಮಾಯೆಯು ಹುಟ್ಟು ತ್ತಿದ್ದಿಲ್ಲ " ಎಂದೆನ್ನುವರು ಇನ್ನೊಬ್ಬನು ' ದೇವನು ನಿರ್ಗುಣ ಸ್ವರೂಪ ನಾದುದರಿಂದ ಅವನಲ್ಲಿ ಇಚ್ಛೆಯು ಇರಲಾರದು ಆದ್ದರಿಂದ ಮಿಥ್ಯವಾದ ಮಾಯೆಯು ಅವನಿಂದ ಉದಿಸುವದಿಲ್ಲ' ಎಂದೆನ್ನುವರು ಮೂರನೆಯ ಪಂಡಿತನು— 'ಮಾಯೆಯು ದೇವನಿಂದ ಉದಿಸುವದಿಲ್ಲೆಂದು ಹೇಗೆ ಹೇಳು ವದು ? ಪ್ರತ್ಯಕ್ಷ ತೋರುವದಕ್ಕೆ ಇಲ್ಲೆಂದು ಹೇಳುವದು ಸರಿಯಾಗಲಾ ರದು ಈ ಮಾಯೆಯು ಈಶ್ವರನ ಅನಾದಿ ಶಕ್ತಿಯಾಗಿದೆ' ಎಂದು ಹೇಳುವನು ನಾಲ್ಕನೆಯವನು— 'ಮಾಯೆಯು 'ಸತ್' ಎಂದು ತಳೆದರೆ ಅದು ಜ್ಞಾನದಿಂದ ಅದೇಕೆ ದೂರಾಗುವದು ? ಆದ್ದರಿಂದು ಅದು ಸದ್ವಸ್ತುವಿ

ನಂತೆ ತೋರಿದರೂ ಮಿಥ್ಯೆಯೇ ಆಗಿರುವದು' ಎಂದೆನ್ನುವನು. ಐದನೆಯ ಗೃಹಸ್ಥನೊಬ್ಬನು-'ಅಜ್ಞಾನ ಭ್ರಮೆಯಿಂದ ಮಾಯೆಯ ಭಯತೋರುವದು ಆ ಭಯ ನಿವಾರಣೆಯು ಸಾಧನ'ದಿಂದಾಗುವದು ಕಡೆಗೆ ದೃಶ್ಯ ಮಾಯೆಯು ಮಿಥ್ಯವೆಂದು ಗೊತ್ತಾಗುವದು' ಎಂದನು ೬ನೆಯವನು— 'ಮಾಯೆಯ ಉಚ್ಚಾಟನೆಗಾಗಿ ಹಲವು ಸಾಧನಗಳು ಗ್ರಂಥಾಂತರಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ ಅನೇಕ ಮತವಾದಿಗಳು ಅನೇಕ ಬಗೆಯಲ್ಲಿ ಪ್ರತಿಪಾದಿಸಿ ಪ್ರಯತ್ನಮಾಡಿದರೂ ಕೊನೆಗೆ ಮಾಯೆಯ ತ್ಯಾಗವಾಗುವದಿಲ್ಲ ಅಂದ ಮೇಲೆ ಆ ಮಾಯೆಗೆ ಮಿಥ್ಯತ್ವವನ್ನು ಕಲ್ಪಿಸಬಾರದು" ಎಂದೆನ್ನುವನು

೭ನೆಯವನು — ''ಮಾಯೆಯ ಮಿಥ್ಯತ್ವವನ್ನು ವೇದ ಶಾಸ್ತ್ರಪುರಾಣಗಳೆಲ್ಲ ಸ್ಪಷ್ಟವಾಗಿ ಹೇಳಿದ್ದರೂ ಅದರ ಮಿಥ್ಯತ್ವದ ಬಗೆಗೆ ಸಂಶಯ ಪಡುವದು ಸರಿಯಾಗಲಾರದು'' ಎನ್ನುವನು

೮ನೆಯವನು — ''ಮಾಯೆಗೆ ಮಿಥ್ಯೆ ಮಿಥ್ಯೆಯೆಂದು ಅದೇಕೆ ಹೇಳುವದು ? ಹೀಗೆಂದ ಮಾತ್ರಕ್ಕೆ ಅದು ದೂರಾಗಲಾರದು ಇದಕ್ಕೆ ವಿಪರೀತವಾಗಿ 'ಮಿಥ್ಯ' ಎಂದ ಕೂಡಲೆ ಸಮಾಗಮವುಂಟಾಗುವದು'' ಎನ್ನುವನು

೯ನೆಯ ಪಂಡಿತನು –''ಜ್ಞಾನ ಹಾಗು ಸತ್ಸಂಗಗಳಿಲ್ಲದವನು ಮಾಯೆಯ ಮಿಥ್ಯತೆಯನ್ನು ಸತ್ಯವೆಂದು ಭಾವಿಸಿಕೊಳ್ಳುವನು" ಎಂದು ನುಡಿಯುವನು

೧೦ನೆಯವನುಃ — "ಸುಮ್ಮಸುಮ್ಮನೆ ವಾದವೇಕೆ ? ನಿಶ್ಚಿತ ಜ್ಞಾನವೇ ಫಲದ್ರೂಪವಾಗುವದು ಮಾಯೆಯು 'ಕನ್ನಡಿಯ ತೋರುವ ಪ್ರತಿಬಿಂಬದಂತಿರುವದು ಅರ್ಥಾತ್ ಅದು ಮಿಥ್ಯವಾಗಿರುವದು" ಎಂದೆನ್ನುವನು

೧೧ನೆಯವನು – ''ಎಲ್ಲವೂ ಬ್ರಹ್ಮಮಯವೆಂದಮೇಲೆ ಮಾಯೆಯು ಅದೆಲ್ಲಿ ಉಳಿಯುವದು? ಆರಿ ಗಟ್ಟಿಯಾಗಿ ಹೆರೆತ ತುಪ್ಪವನ್ನು ಕಾಸಿ ಅದರ ಗಟ್ಟಿತನವನ್ನು ಕೆಡಿಸಬಾರದು" ಎಂದೆನ್ನುವನು

೧೨ನೆಯವನು – 'ನಿರ್ಗುಣ ದೇವನು ಒಬ್ಬನೇ ಇರುವನು ಅಂಥಲ್ಲಿ ಹಲವು ಬ್ರಹ್ಮರುಗಳನ್ನು ಹೇಳುವದು ಸರಿಯಲ್ಲ" ಎಂದನು

ಹೀಗೆ ಮಾಯೆಯ ಸತ್ಯತೆ ಅಸತ್ಯತೆಗಳ ಬಗೆಗೆ ಹಲವು ವಾದಗಳು ಹೊರಡುವವು ಆವೆಲ್ಲವುಗಳ ಕೊನೆಯ ನಿಶ್ಚಿತವೆಂದರೆ 'ಮಾಯೆಯು ಮಿಥ್ಯವಾದದ್ದು' ಎಂಬುವದೇ ಸಾಮಾನ್ಯವಾಗುವದು ಹೀಗೆ ಮಾಯೆಯ ಮಿಥ್ಯ

ತೆಯು ತಿಳಿದು ಬಂದರೂ ಅದು ಬ್ರಹ್ಮನಲ್ಲಿ ಇದ್ದು ಹೇಗ ಹೊಂದುಗೂಡಿತು? ಈ ಪ್ರಶ್ನೆಗೆ ಉತ್ತರವೆಂದು ಹೇಳುವದಾದರೆ—

ನಿರ್ಗುಣ ಬ್ರಹ್ಮನನ್ನು ಕರ್ತಾರನೆಂದು ಹೇಳಲು ಬರಲಾಗದು ಮತ್ತು 'ಮಾಯೆಯು ಮಿಥ್ಯ' ಈ ಪ್ರಕಾರ ಹೇಳುವದರಿಂದ 'ಆ ಮಾಯೆಯು ಏನೂ ಇಲ್ಲ' ಎಂದು ಸ್ಪಷ್ಟವಾಗುವದು ಅಂದ ಮೇಲೆ ಮೂಲತಃ ಇಲ್ಲದ ವಸ್ತುವಿನ ಕರ್ತಾರನು ಯಾರು ? ಎಂದು ಕೇಳ ವಿ ಆ ಕರ್ತಾರನು ರೂಪ ರಹಿತನು, ಅವನೇ ಮಿಥ್ಯಾರೂಪವನ್ನು ಹುಟ್ಟಿಸುವನು ಇಂಥ ಕರ್ತಾರನಿಗೆ ಮೂಲತಃ ನಾಮ-ರೂಪ-ಕ್ರಿಯೆಗಳನ್ನು ಹೇಳುವದು ಮಿಥ್ಯೆಯೇ ಆಗಿರುವದು ಈ ಮಾತಿಗೂ ನೀನು ಆಕ್ಷೇಪವೆನ್ನಿತ್ತಿದರೆ ಅದಕ್ಕೂ ಉತ್ತರ ಕೊಡುವೆವು" ಎಂದು ಗುರುಗಳು ಹೇಳಿದರು

ಶ್ರೀ ರಾಮ || ೩ ಸೂಕ್ಷ್ಮ ಆಶಂಕೆ || ಶ್ರೀ ಗುರುಗಳು ಶಿಷ್ಯನನ್ನು ಕುರಿತು —'ಮೂಲತಃ ಜನ್ಮವಾಗದಿದ್ದುದರ ಬಗೆಗೆ ಹಲವು ಸಂಗತಿಗಳನ್ನು ಕೇಳುವಿ ಆದರೂ ನಿನಗೆ ಉಂಟಾಗಿರುವ ಸಂಶಯಗಳ ನಿವಾರಣೆಯಾಗುವಂತಹ ಉತ್ತರ ಕೊಡುವೆನು' ಎಂದು ಹೇಳಹತ್ತಿದರು

'ಹಗ್ಗವು ಹಾವಿನಂತೆ ತೋರುವದು' 'ನೀರಿನಲ್ಲಿ ಗುಳ್ಳೆಗಳು ಏಳುವವು' 'ಸೂರ್ಯನಿಂದ ಮೃಗಜಲವು ಭಾಸಿಸುವದು' 'ಕಲ್ಪನೆಯಿಂದ ಕನಸು ಹುಟ್ಟುವವು' 'ಸಿಂಪು ಬೆಳ್ಳಿಯಂತೆ ಹೊಳೆಯುವದು' 'ನೀರಿನಿಂದ ಆಣೆಕಲ್ಲು' 'ಮಣ್ಣಿನಿಂದ ಗೋಡೆ' 'ನಾಗರದಲ್ಲಿಯ ತೆರೆಗಳು' ಕನೀನಿಕೆಯಲ್ಲಿ ಮೂಡಿದ ಪ್ರತಿಮೆ' 'ಬಂಗಾರ-ಅಲಂಕಾರ' 'ಎಳೆ-ಅರಿವೆ' 'ಆನೆ-ಉದ್ಭವದ ಅದರ ಕೈಕಾಲು' 'ಕರಗಿದ ತುಪ್ಪ-ಹೆರೆತ ತುಪ್ಪ' 'ಸಮುದ್ರಕರಾವಳಿ-ಉಪ್ಪು' 'ಬಿಂಬ-ಪ್ರತಿಬಿಂಬ' 'ನೆಲ-ಗಿಡ' 'ಗಿಡ-ನೆರಳು' 'ಧಾತು ತರತರದ ಬಣ್ಣ'

ಮೇಲಿನ ಇವೆಲ್ಲ ದೃಷ್ಟಾಂತಗಳು ದಾರ್ಷ್ಟಾಂತ್ಯಕ್ಕೆ ಸ್ಪಷ್ಟ ಅಂದರೆ ದ್ವೈತ ದೃಷ್ಟಾಂತಗಳಿಂದ ಅದ್ವೈತ ಸಿದ್ಧಾಂತವನ್ನು ಸ್ಥಾಪಿಸುವದಕ್ಕೆ ಬೇಕಾಗಿಲ್ಲ ಆದರೂ ದ್ವೈತವನ್ನು ಹೊರತು ಪಡಿಸಿ ಅದ್ವೈತವನ್ನು ಹೇಳಲಿಕ್ಕೆ ಬಡಲಾರದು ಕಲ್ಪನೆಯಿಂದ ಕಲ್ಪನೆಗಳು, ಅದರಂತೆ ದೃಷ್ಟಿಯಿಂದ ದೃಶ್ಯವು ತೋರುವದು ಅದರೆ ಅದೃಶ್ಯಕ್ಕೆ ಮಾತ್ರ ಮೇಲಿನವು

ಗಳಂತೆ ಉಪಮೆಗಳಿಲ್ಲ ಆ ಮೂಲಕವಾಗಿಯೇ ಅದೃಶ್ಯ ಬ್ರಹ್ಮನಿಗೆ ನಿರುಪಮೇಯನೆನ್ನುವರು ಕಲ್ಪನೆಯನ್ನು ಬಿಟ್ಟು ಉದ್ದೇಶವನ್ನು ಹೇಳಲಿಕ್ಕೆ ಬರುವದಿಲ್ಲ, ಅದರಂತೆ ದೃಶ್ಯವನ್ನು ಹೊರತು ಪಡಿಸಿ ದೃಷ್ಟಾಂತಕೊಡಲಿಕ್ಕಾಗುವದಿಲ್ಲ ಈ ಎಲ್ಲವುಗಳಂತೆ ದ್ವೈತವನ್ನು ಒಪ್ಪಿಕೊಳ್ಳದೆ ಈ ದ್ವೈತರೂಪಸೃಷ್ಟಿಯ ಸ್ಥಿತಿಯನ್ನು ಹೇಳಲಿಕ್ಕೆ ಬರುವದಿಲ್ಲ ಭಗವಂತನ ವಿಚಿತ್ರ ಕ್ರಿಯಾಶಕ್ತಿಯನ್ನು ಬಣ್ಣನೆ ಮಾಡುವದು ಸಹಸ್ರಮುಖದ ಶೇಷನಿಗೂ ಕೂಡ ಅಸಾಧ್ಯವು ಈ ಅನಂತ ಬ್ರಹ್ಮಾಂಡಗಳನ್ನು ವಿರಚಿಸಿದ ಪರಮಾತ್ಮನು ಅವನೇ ಪರಮೇಶ್ವರನು, ಸರ್ವಕರ್ತೃವು ಈಶ್ವರನು ಅವನಿಂದಲೇ ಎಲ್ಲ ವಿಸ್ತಾರವು ಅವನಿಗೆ ಅನಂತ ನಾಮಗಳು ಅವನೇ ಅನಂತ ಶಕ್ತಿಗಳನ್ನು ನಿರ್ಮಿಸುವ ಚತುರ ಮೂಲಪುರುಷನು ಆ ಮೂಲ ಮಾಯಾದಿಗಳೆಲ್ಲಕ್ಕೂ ಕರ್ತಾರನಾದ ಆ ಮೂಲ ಪುರುಷನನ್ನು ಇಂತು ಗುರುತಿಸಿಕೊಳ್ಳಬೇಕು ಆತನ ಕಾರ್ಯ-ಕಾರಣ-ಕರ್ತೃತ್ವಗಳೇ ಮಾಯೆಗಾಗಿ ಅವನ ಉದ್ದೇಶವಾಗಿರುವವು ಇದನ್ನು ಸ್ಪಷ್ಟ ಹೇಳಲು ಬಾರದಿದ್ದರೂ ಉಪಾಯದಿಂದ ಆ ಮಾಯೆಯನ್ನು ಮುರಿಬಡಿಯುವನಲ್ಲವೆ ಅದನ್ನು ಇನ್ನೊಂದು ದೃಷ್ಟಿಯಿಂದ ಅವನು ಕಾಣುವದಿಲ್ಲ. ಅಂದ ಮೇಲೆ ಮಾಯೆಯು ಸತ್ಯವೆಂದೂ ಆಗಲಾರದು ಎಲ್ಲವೂ ದೇವನಿಂದ ನಿರ್ಮಿತವು ಇದು ಎಲ್ಲರಿಗೂ ತಿಳಿದ ಮಾತು ಆದರೂ ಆ ದೇವನನ್ನು ಅರಿತುಕೊಳ್ಳಬೇಕು

ಸಿದ್ಧರ ಉಪದೇಶವು ಸಾಧಕರಿಗೆ ಸೇರುವದಿಲ್ಲವಾದರೆ ಅದಕ್ಕೆ ಆ ಸಾಧಕರ ಅಪಕ್ವ ಅಂತಃಕರಣವೇ ಕಾರಣವು ಅವರಿಗೆ ಸಿದ್ಧಾನುಭವವಾಗುವದಿಲ್ಲ

ಜೀವನು ಅವಿದ್ಯಾಯುತನು, ಶಿವನು ಮಾಯಾಗುಣಾನ್ವಿತನು, ಹಾಗು ದೇವನು ಮೂಲ ಮಾಯೆಯ ಗುಣವಿಶಿಷ್ಟನು, ಎಂದು ತಿಳಿಯಲ್ಪಡುತ್ತಾರೆ. ಆದ್ದರಿಂದ ಸೃಷ್ಟಿರಚನೆ ಮೊದಲಾದ ಕಾರ್ಯಗಳಿಗೆ ಬೇಕಾಗುವ, ಅನಂತ ಶಕ್ತಿಗಳನ್ನು ಧಾರಣ ಮಾಡುವ ಮೂಲಮಾಯೆಯೇ ಎಲ್ಲಕ್ಕೂ ಮೂಲವಾಗಿದೆ ಆ ಮೂಲ ಪುರುಷನೇ ಈಶನು ಅವನೇ ಜಗದೀಶನು ಎಲ್ಲ ಜಗತ್ತು ಮೂಲ ಮಾಯೆಯಿಂದ ತುಂಬಿ ವಿಸ್ತ್ರತವಾ

ಗಿದೆ ಆದರೂ ಅದು ಮೂಲತಃ ಮಿಥ್ಯೆಯೇ ಆಗಿದೆಂಬುದು ಸ್ವಾನುಭವಿಯಾದ ಮಹಾತ್ಮನಿಗೆ ತಿಳಿಯುವದು ಇಲ್ಲವೆ ಆ ಮಾಯೆಯ ಅನಿರ್ವಚನೀಯತ್ವವು ಸತ್ಸಂಗತಿಯಿಂದ ಭಾಗ್ಯವಂತನಿಗೆ ಅರಿವಾಗುವದು ಮಾಯೆಯೇ ಮೂಲಪುರುಷನೆಂಬುದನ್ನು ಸಾಧಕರು ಚನ್ನಾಗಿ ತಿಳಿಯಲಾರರು ಆದರೂ ಈ ಮಾತು ಸತ್ಯವೆಂದ ಮೇಲೆ ಈ ವಿಷಯಕ್ಕೆ ಆಕ್ಷೇಪಗೊಳ್ಳುವ ಕಾರಣವಿಲ್ಲ ಇನ್ನು ಇದಿರಲಿ ಮೂಲ ಮಾಯೆಯು ನಿರಾಕಾರಿ ಹೇಗಾಯಿತೆಂಬುವದು ಮೊದಲಿನ ಆಕ್ಷೇಪವು ಕಣ್ಕಟ್ಟಿನ ಚಮತ್ಕಾರ ವಿದ್ಯೆಯು ಎಲ್ಲವೂ ಮಿಥ್ಯವು ಆದರೂ ಆ ಆಟವು ಹೇಗಾಯಿತೆಂಬುದು ಸ್ಪಷ್ಟ ಪಡಿಸುವೆವು ಆಕಾಶವು ನಿಶ್ಚಲವು ಆದರಲ್ಲಿ ಚಂಚಲ ವಾಯುವು ಪ್ರವಹಿಸುವದು, ಇದರಂತೆ ಮೂಲ ಮಾಯೆಯನ್ನು ಅರಿತುಕೊಳ್ಳತಕ್ಕದ್ದು ಮೂಲ ಮಾಯೆಯ ರೂಪವು ವಾಯುವಿನಂತಿರುವದು_ ವಾಯುವು ಭಾಸವಾದರೂ ಅದು ಕೈಗೆ ಸಿಗಲಾರದು ಆದರಂತೆ ಮೂಲ ಮಾಯೆಯು ಭಾಸವಾಗುವದು ಮಾತ್ರ ಕಾಣಿಸುವದಿಲ್ಲ ಶಿವನ ಉಪಾಧಿಯಾದ ಮಾಯೆಯೂ ಜೀವನಉಪಾಧಿಯಾದ ಅವಿದ್ಯೆಯೂ ಈ ರೂಪಗಳಿಂದ ಮೂಲ ಮಾಯೆಯು ವಿಸ್ತ್ರತವಾಗಿದೆ ವಾಯುವಿನ ಯೋಗದಿಂದ ಗಗನ ಮಾರ್ಗದಲ್ಲಿ ದೃಶ್ಯ ತೋರುವಂತೆ ಮೂಲ ಮಾಯೆಯಿಂದ ಜಗತ್ತು ಕಾಣುತ್ತದೆ ಆಕಾಶದಲ್ಲಿ ಇರದಂಥ ಮೋಡಗಳು ಒಮ್ಮಿಂದೊಮ್ಮೆಲೇ ಹುಟ್ಟುವಂತೆ ಬ್ರಹ್ಮನಲ್ಲಿ ಮಿಥ್ಯಾಮಾಯೆಯು ಉತ್ಪನ್ನವಾಗುತ್ತದೆ ಮೋಡಗಳ ಅಲೆದಾಟ ಹೊಯ್ದಾಟದಿಂದ ನಿಶ್ಚಲವಾದ ಗಗನವು ಹೊಯ್ದಾಡಿದಂತೆ ತೋರಿದರೂ ನಿಜವಾಗಿ ಆದು ಹೊಯ್ದಾಡದೆ ಅದು ನಿಶ್ಚಲವಾಗಿರುತ್ತದೆ ಆದರಂತೆ ಸಗಣ, ಚಂಚಲ ಮಾಯೆಯ ಯೋಗದಿಂದ ನಿರ್ಗುಣ ಹಾಗು ನಿಶ್ಚಲ ಬ್ರಹ್ಮನು ಸಗುಣ ಹಾಗು ಚಂಚಲನಾದಂತೆ ಭಾಸವಾಗುವದು ಸತ್ಯವಲ್ಲ ಅವನು ನಿರ್ಗುಣನೇ ಅಹುದು, ನಿಶ್ಚಲನೇ ಅಹುದು ಆಕಾಶವು ತಲೆಗೆ ತಾಕಿದಂತೆ ತೋರುವದು ಆದರೆ ಅದು ಅಲಿಪ್ತವಿರುವದು ಅದರಂತೆ ಬ್ರಹ್ಮನು ಮಾಯೆಯಿಂದ ಅಲಿಪ್ತನು ಆಕಾಶವು ನೀಲವರ್ಣದ್ದಾಗಿ ತೋರುವದೂ ಸತ್ಯವಲ್ಲ, ಆಕಾಶವು ನೀರಲ್ಲಿ ಅಂಗಾತಾಗಿ ಇದ್ದಂತೆ ತೋರಿದರೂ ಅದು

ಇದ್ದಂತೆಯೇ ಇರುವದು ಪರ್ವತದ ಮೇಲೆ ನೀಲ ವರ್ಣ ತೋರಿದರೂ ಆ ಆಕಾಶವು ಅದಕ್ಕೆ ಸ್ಪರ್ಶಿಸಿರುವದಿಲ್ಲ ರಥವು ವೇಗದಿಂದ ಹೋಗುವಾಗ ಒಳಗೆ ಕುಳಿತವನ ದೃಷ್ಟಿಗೆ ಪೃಥ್ವಿಯೇ ಓಡುತ್ತಿರುವಂತೆ ಭಾಸವಾಗುವದು ಆದರೆ ಅದು ಹಾಗೆ ಓಡುವದಿಲ್ಲ ಅಲ್ಲಾಡುವದಿಲ್ಲ ಆದರಂತೆ ಪರಬ್ರಹ್ಮನು ನಿಶ್ಚಲನಾಗಿರುವನು ಚಂದ್ರನು ಮೋಡಗಳ ಗೂಡ ಓಡಿ ಓಡಿ ಹೋದಂತೆ ಕಾಣುವನು ಆದರೆ ಈ ನೋಟವು ನಿಜವಾದುದಲ್ಲ ಹವೆಯು ಉಷ್ಣತೆಯಿಂದ ಕಾದು ನೆಲದಿಂದ ಅಂತರಿಸಿ ನಡುಗಿದಂತೆ ತೋರುವದು ಆದರಂತೆ ಬ್ರಹ್ಮನು ಸಗುಣನಾಗಿ ತೋರುವನು ಆದರೆ ಅವನು ಅಖಂಡ ನಿರ್ಗುಣನಾಗಿಯೇ ಇರುವನು ಮಾಯೆಯ ಚಂಚಲತೆಯು ಕಣ್ಕಟ್ಟಿನ ಆಟದಂತೆ ಇರುವದು ಆದರೆ ಪರಬ್ರಹ್ಮನು ನಿರ್ಗುಣ ಹಾಗು ನಿಶ್ಚಲವಾಗಿಯೇ ಇರುವನು ಪರಬ್ರಹ್ಮ ವಸ್ತುವು ನಿರವಯುವಿರುವದು ಆದರೆ ಮಾಯೆಯ ಮೂಲಕವಾಗಿ ಸಾವಯುವಾಗಿ ತೋರುವದು ಮಿಥ್ಯಾ ಮಾಯೆಯ ಸ್ವಭಾವವೇ ಹಾಗಿರುವದು ಆಕಾಶದಲ್ಲಿ ಮೋಡಗಳು ಬರುವವು ಮತ್ತೆ ಹೋಗುವವು ಆದರಂತೆ ಮಾಯೆಯು ಇರದೆ ಸತ್ಯವಾಗಿರುವಂತೆ ಭಾಸವಾಗುವದು ನಿರ್ಗುಣ ವಸ್ತುವಿನೊಡನೆ ಬೆರೆತು ಅಹಂಕಾರ ವೃತ್ತಿಯುಳ್ಳದ್ದಾಗುವದು ನಿರ್ಗುಣನಲ್ಲಿ ಇದು ಇರುವದಿಲ್ಲ ಆದರೆ ಮಾಯೆಯ ಗುಣಯೋಗದಿಂದ ಉಂಟಾದರೂ ಸಸ್ವರೂಪದಲ್ಲಿ ಮುಳುಗುವದು ಆಕಾಶದಲ್ಲಿ ಸೈನ್ಯ ಕಂಡು ಒಂದರೂ ಅದು ಅಲ್ಲಿ ಇರುವದಿಲ್ಲ ಮಾಯೆಯ ಹಾಗು ಅದರ ಮಾಯಾ ಗುಣಗಳ ಮತ್ತು ಅವುಗಳ ತತ್ವಗಳ ವಿಸ್ತೀರ್ಣತೆಯನ್ನು ಹೇಳಲು ಅವೆಲ್ಲವು ಮಿಥ್ಯಾಮಾಯೆಯ ಆಟವಿದ್ದಂತೆಯೇ ಸರಿ ಮೂಲ ಮಾಯೆಯಲ್ಲಿ ತತ್ವಗಳಿರುತ್ತವೆ ಅಂದರೆ ಆ ತತ್ವಗಳು ಮೊದಲಿಗೇ ಇರುವವು 'ಓಂಕಾರ'ವು ವಾಯುವಿನ ಗತಿಯಾಗಿರುವದು ಜ್ಞಾನದಕ್ಷರು ಅದರ ಅರ್ಥವನ್ನು ತಿಳಿದುಕೊಳ್ಳುವರು ಮೂಲ ಮಾಯೆಯ ಚಂಚಲತೆಯೇ ವಾಯುವಿನ ಲಕ್ಷಣವು ಸೂಕ್ಷ್ಮ ತತ್ವಗಳು ಅಲ್ಲಿಯೇ ಬೀಜರೂಪದಿಂದ ಇದ್ದುಕೊಂಡು ಜಡರೂಪ ಹೊಂದುವವು ಈ ಜಡರೂಪವಾದ ಪಂಚ ಮಹಾ ಭೂತಗಳು ಮೊದಲು ಅವ್ಯಕ್ತವಾಗಿದ್ದವು ಮುಂದೆ ಸೃಷ್ಟಿ ರಚನೆಯಲ್ಲಿ ವ್ಯಕ್ತವಾದವು ಈ ಪಂಚಭೌತಿ

ಕವೇಮೂಲ ಮಾಯೆಯ ಲಕ್ಷಣವು ಇದನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಬೇಕು ಆಕಾಶ-ವಾಯುಗಳಿಲ್ಲದೆ ಶಬ್ದದ ಇಚ್ಛೆಯುಂಟಾಗುವದಿಲ್ಲ ಆ ಇಚ್ಛಾಶಕ್ತಿಯೇ ತೇಜಸ್ವರೂಪವೆಂದು ತಿಳಿಯಬೇಕು. ಜಲದಲ್ಲಿಯ ಮೃದುತ್ವವೂ, ಪೃಥ್ವಿಯ ಜಡತ್ವವೂ ಹೀಗೆ ಆಕಾಶ, ವಾಯು, ತೇಜ, ಜಲ, ಮತ್ತು ಪೃಥ್ವಿ ಇವೆಲ್ಲವು ಮೂಲಮಾಯೆಯಲ್ಲಿಯ ಪಂಚಭೂತಗಳಾಗಿವೆ ಈ ಒಂದೊಂದು ಭೂತದಲ್ಲಿ ಐದೂ ಭೂತಗಳ ಭ್ರಮಣವು ಇರುವದೆಂಬದು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಿದಲ್ಲಿ ಕಂಡುಬರುವದು ಮುಂದೆ ಈ ಭೂತಗಳು ಜಡತ್ವ ಹೊಂದಿ ಒಂದುಗೂಡುವವು ಈ ಪ್ರಕಾರ ಮೂಲ ಮಾಯಯ ಸಂಬಂಧಿತವಾಗಿ ಪಂಚಭೂತಗಳು ವಿಸ್ತರಿತವಾದವು. ಮೂಲ ಮಾಯೆಯು ಮೊದಲೇ ಪಂಚಭೌತಿಕವಾದದ್ದು ಅದೇ ಅವಿದ್ಯೆಯ ರೂಪದಿಂದ ಅವತರಿಸಿದರೂ ಅದೂ ಪಂಚಭೌತಿಕವಾಗಿಯೇ ಇರುವದು ತ್ರಿಲೋಕಗಳನ್ನೂ ಚರಾಚರ ಜಗತ್ತನ್ನೂ ಸ್ವಲ್ಪವೂ ಕೂಡ ಬಿಡದೆ ಶೋಧಿಸಲು ಕಂಡವೆಲ್ಲವೂ ಪಂಚಭೂತಾತ್ಮಕವಾಗಿರುವವು ಇವುಗಳ ಹೊರತು ಆರನೆಯದು ಕಂಡು ಬರುವದಿಲ್ಲ ಸತ್ಯಸ್ವರೂಪದ ತುದಿಮೊದಲಲ್ಲಿ ಹಾಗು ಮಧ್ಯದಲ್ಲಿ ಪಂಚಭೂತಗಳೇ ಇರುವವು ಈ ಪ್ರಕಾರ ಶ್ರೋತೃಗಳು ಪಂಚಭೂತಗಳ ವಿಷಯವನ್ನು ತಿಳಿದುಕೊಳ್ಳತಕ್ಕದ್ದು

ಇನ್ನು ಈ ವಿಷಯದಲ್ಲಿ ಒಂದು ಆಕ್ಷೇಪವುದಿಸುವದು ಏನೆಂದರೆ ಪಂಚಭೂತಗಳೆಲ್ಲ ತಮೋಗುಣದಿಂದ ಉದ್ಭೂತವಾದವು ಆದರೆ ಮೂಲ ಮಾಯೆಯು ಮೂರು ಗುಣಗಳಿಂದ ಹೊರತಾಗಿರುವದು ಎಂದ ಮೇಲೆ ಅಲ್ಲಿ ಆ ಭೂತಗಳು ಅದೆಂತು ಹುಟ್ಟುವವು?

ಈ ಆಕ್ಷೇಪವು ಈ ಮೊದಲೇ ಶ್ರೋತೃಗಳಿಂದ ಬಂದಿತ್ತು ಅವರ ಸಂಶಯಕ್ಕೆ ಉತ್ತರ ರೂಪವಾಗಿ ಮುಂದಿನ ಸಮಾಸದಲ್ಲಿ ವಿವರಿಸುವೆವು" ಎಂದರು

ಶ್ರೀ ರಾಮ ॥ ೪ ಸೂಕ್ಷ್ಮ ಪಂಚಭೂತ ನಿರೂಪಣೆ ॥ ಶ್ರೀ ಗುರುಗಳು ಶಿಷ್ಯನನ್ನು ಕುರಿತು – ಈ ಮೊದಲು ಸ್ವೀಕರಿಸಿದ ಆಕ್ಷೇಪದ ನಿರಸನ ಮಾಡಲಾಗುವದು ಚಿತ್ತಗೊಟ್ಟು ಅವಧರಿಸಬೇಕು.

''ಬ್ರಹ್ಮನಿಂದ ಮೂಲ ಮಾಯೆಯುಂಟಾಯಿತು ಆ ಮೂಲ ಮಾಯೆಯಿಂದ ಗುಣ ಮಾಯೆಯು ಉದಿಸಿ ಗುಣಗಳುತ್ಪತ್ತಿಯಾಯಿತು. ಇದರಿಂದಲೇ ಮೂಲ ಮಾಯೆಗೆ ಗುಣಕ್ಷೋಭಿಣಿ ಎಂಬ ಹೆಸರುಂಟಾಯಿತು. ಮುಂದೆ ಸತ್ವ-ರಜ-ತಮ ಗುಣಗಳ ನಂತರ ಪಂಚಭೂತಗಳ ಪ್ರಾದುರ್ಭಾವವಾಯಿತು ಈ ಪಂಚಭೂತಗಳು ತಮೋಗುಣದಿಂದ ನಿರ್ಮಾಣವಾಗಿ ವಿಸ್ತಾರಗೊಂಡವು '' ಅಲ್ಲಿ ಶ್ರೋತೃಗಳಿಂದ ಮೂಲ ಮಾಯೆಯು ಗುಣಗಳಿಂದ ಹೊರತಾಗಿ ಇರುವದರಿಂದ ಅಲ್ಲಿ ಭೂತಗಳೆಂತು ತಲೆದೊರಿದವು ? ' ಎಂಬ ಸಂಶಯವು ಪ್ರಕಟವಾಯಿತು ಅದಕ್ಕೆ ಗುರ್ವೆಗಳು – ''ಈ ಆಕ್ಷೇಪವು ಹಿಂದೆ ಬಂದಿತ್ತು ಇನ್ನು ಪಂಚಭೂತಗಳಲ್ಲಿ ಪ್ರತಿಯೊಂದರಲ್ಲಿಯೂ ಐದೈದು ಪಂಚಭೂತಗಳು ಇರುವವು ಆ ಪಂಚಭೂತಗಳ ಸ್ಥಿತಿಯು ಹೇಗೆ ಹೇಗೆ ಇರುವದೆಂಬದನ್ನು ಹೇಳುವೆವು ಶ್ರೋತೃಗಳು ಸೂಕ್ಷ್ಮದೃಷ್ಟಿ ಹಾಗು ವಿವೇಕಗಳನ್ನು ಉಪಯೋಗಿಸಿಕೊಂಡು ಮೂಲ ಮಾಯೆಯ ಕೌತುಕವನ್ನು ತಿಳಿದುಕೊಳ್ಳತಕ್ಕದ್ದು ಮೊದಲು ಪಂಚಭೂತಗಳನ್ನು ತಿಳಿದುಕೊಳ್ಳತಕ್ಕದ್ದು, ಅವುಗಳ ರೂಪವೆಂತೆಂಬುದನ್ನು ತಿಳಿದು ಸೂಕ್ಷ್ಮ ದೃಷ್ಟಿಯಿಂದ ಶೋಧಿಸತಕ್ಕದ್ದು ಗೊತ್ತಾಗದಿದ್ದರೆ ಚಾತರ್ಯದಿಂದ ಮತ್ತೊಮ್ಮೆ ಅರತುಕೊಳ್ಳಬೇಕು

ಪೃಥ್ವಿಯು ಜಡ ಮತ್ತು ಕಠಿಣವಾದದ್ದು, ನೀರು ಮೃದುತ್ವ ಹಾಗು ರಸವುಳ್ಳದ್ದು ಅಗ್ನಿಯು ಉಷ್ಣ ಹಾಗು ಪ್ರಕಾಶಯುಕ್ತವಾದದ್ದು, ವಾಯುವು ಚೇತನ ಚಂಚಲತೆಗಳುಳ್ಳದ್ದು, ಮತ್ತು ಆಕಾಶವು ಶೂನ್ಯ ಹಾಗು ನಿಶ್ಚಲತೆಯುಳ್ಳದ್ದು ಈ ಪ್ರಕಾರ ಪಂಚಭೂತಗಳ ಲಕ್ಷಣಗಳನ್ನು ಲಕ್ಷ್ಯದಲ್ಲಿಟ್ಟುಕೊಳ್ಳತಕ್ಕದ್ದು ಇನ್ನು ಪ್ರತಿಯೊಂದು ಭೂತದಲ್ಲಿ ಉಳಿದ ಭೂತಗಳು ಎಂತಿರುವದೆಂಬದನ್ನು ನೋಡೋಣ ಮೂಲ ಮಾಯೆಯು ಸತ್ವ, ರಜ, ತಮಗಳಿಗೆ ಹೊರತಾಗಿರುವದರಿಂದ ಈ ವಿಚಾರವು ಅತಿ ಸೂಕ್ಷ್ಮವಾಗಿರುವದು

ಆಕಾಶದ ಪಂಚಭೂತಗಳು:– ಆಕಾಶವೆಂದರೆ ಅವಕಾಶವುಳ್ಳದ್ದು, ಶೂನ್ಯವಾದದ್ದು, ಶೂನ್ಯವೆಂದರೆ ಅಜ್ಞಾನವು ಅಜ್ಞಾನವೆಂದರೆ ಜಡತ್ವವು, ಇದೇ ಪೃಥ್ವಿಯು ಆಕಾಶವು ಸ್ವಯಂ ಮೃದುತ್ವವುಳ್ಳದ್ದು ಈ ಮೃದುತ್ವವು ನೀರಿನ ಲಕ್ಷಣವಿರುವದರಿಂದ ಆಕಾಶದಲ್ಲಿ ಜಲವಿರುವದು ಅಜ್ಞಾನದಿಂದ

ಭಾಸವಾಗುವ ಭಾಸವೇ ತೇಜದ ಪ್ರಕಾಶವು ಹೀಗೆ ಹೇಳುವದರಿಂದ ಆಕಾದಲ್ಲಿ ತೇಜವಿರುವಂತಾಯಿತು ವಾಯು ಆಕಾಶಗಳಲ್ಲಿ ಭೇದವಿಲ್ಲ ಎರಡೂ ಆಕಾಶದಷ್ಟೇ ಸ್ಥಬ್ಧವಾಗಿರುವವು ಆದರೂ ಆಕಾಶದ ನಿರೋಧವೇ ವಾಯುವೆಂದು ಹೇಳುವದು. ಆಕಾಶದಲ್ಲಿ ಆಕಾಶಕೂಡಿದೆಎಂಬುದನ್ನು ಹೇಳಬೇಕಾಗಿಲ್ಲ ಈ ಪ್ರಕಾರವಾಗಿ ಆಕಾಶದಲ್ಲಿ ಐದೂ ಭೂತಗಳೂ ಇರುವವು

ವಾಯುವಿನ ಪಂಚ ಭೂತಗಳು – ವಾಯುವಿನಲ್ಲಿ ಪಂಚ ಭೂತಗಳ ಕ್ರಮವು ಹೇಗೆಂದರೆ— ವಾಯುವಿನಲ್ಲಿ ಮಾಂದ್ಯತೆ, ವಿಸ್ತ್ರತಿ ಹಾಗು ಜಡತ್ವಗಳಿರುವವು ಮಂದವಾಯುವು ಸಾಂದ್ರವಾಗಿರುವದು ವಾಯುವಿನ ಬಲವಾದ ಬೀಸಿಕೆಯಿಂದ ಗಿಡ ಮರಗಳು ಉರುಳುವವು ಅಲ್ಲಾಡದೆ ಗಿಡವು ಮುರಿಯುವದಿಲ್ಲ ಅಲ್ಲಾಡುವ ಕ್ರಿಯೆಯು ಪೃಥ್ವಿಯ ಅಂಶವು, ಅಥವಾ ವಾಯುವಿನಲ್ಲಿ ಶಕ್ತಿಯುಂಟು, ಶಕ್ತಿಯೆಂದರೆ ಕಾಠಿಣ್ಯವು, ಇದೇ ಪೃಥ್ವಿಯ ಅಂಶವು ಸೂಕ್ಷ್ಮದರಲ್ಲಿಯ ಈ ಜಡತ್ವವನ್ನು ಸೂಕ್ಷ್ಮರೂಪವಾಗಿಯೇ ಸ್ವೀಕರಿಸಬೇಕಾಗಿದೆ ವಾಯುವಿನಲ್ಲಿ ಮೃದುತ್ವವಿರುವದರಿಂದ ಅದು ಜಲವು ವಾಯುವು ಭಾಸವಾಗುವದರಿಂದ ಅದು ತೇಜವು ವಾಯುವಿಗೆ ಚಂಚಲತೆಯು ಸಹಜರೂಪವಾಗಿದೆ ಇವೆಲ್ಲವು ಆಕಾಶದಿಂದೊಡಗೂಡಿರುವವು.

ತೇಜಸ್ಸಿನ ಪಂಚಭೂತಗಳು - ತೇಜವು ಭಾಸವಾಗುವದಾದರೂ ಕಠಿಣವಾಗಿದೆ ತೇಜದಂತೆ ಪೃಥ್ವಿಯನ್ನು ಗುರುತಿಸಿಕೊಳ್ಳುವದು ತೇಜವು ಮೃದುತ್ವವಾಗಿ ಭಾಸಿಸುವದರಿಂದ ಜಲವೆಂದು ಗುರುತಿಸಿಕೊಳ್ಳುವದು ತೇಜದಲ್ಲಿ ತೇಜವು ಸಹಜವಾಗಿ ಇರುವದು ಹಾಗು ಅದರಲ್ಲಿ ವಾಯುವಿನ ಚಂಚಲತೆಯೂ, ಆಕಾಶದ ನಿಶ್ಚಲತೆಯೂ ಇರುವವು ಇಂತು ತೇಜದಲ್ಲಿರುವ ಪಂಚಭೂತಗಳು

ಜಲದ ಪಂಚಭೂತಗಳು – ನೀರು ಮೃದುತ್ವವುಳ್ಳದ್ದು ಮೃದುತ್ವದಿಂದ ಕಠಿಣತೆಯು ಆ ಕಠಿಣತೆಯು ಪೃಥ್ವಿಯು ನೀರಿನಲ್ಲಿ ನೀರು ಸಹಜವಿರುವದು ತೇಜವು ಮೃದುತ್ವವಾಗಿ ಇದರಲ್ಲಿ ತೋರುವದು ವಾಯುವು ಮೃದುತ್ವದಲ್ಲಿ ಸ್ತಬ್ಧವಾಗಿ ಕಂಡುಬರುವದು. ಆಕಾಶವು ಇವೆಲ್ಲಕ್ಕೂ ವ್ಯಾಪಕವಾಗಿರುವದು ಇಂತು ಜಲದಲ್ಲಿರುವ ಪಂಚಭೂತಗಳು

ಪೃಥ್ವಿಯ ಪಂಚಭೂತಗಳು – ಪೃಥ್ವಿಯು ಕಠಿಣತೆಯುಳ್ಳದ್ದು, ಕಠಿಣತ್ವದ ಮೃದುತ್ವವೇ ಜಲವು, ಕಠಿಣತ್ವದ ಭಾಸವೇ ತೇಜವು, ಕಠಿಣತ್ವದಲ್ಲಿಯ ನಿರೋಧಾಂಶವೇ ಆದು ವಾಯುವು ಇವೆಲ್ಲಕ್ಕೂ ಆಕಾಶವು ವ್ಯಾಪಕವಾಗಿರುವದು ಆಕಾಶವು ಹರಿಯುವದಿಲ್ಲ, ಒಡೆಯುವದಿಲ್ಲ. ಆಕಾಶವನ್ನು ಬಿಟ್ಟು ಇನ್ನೊಂದಿಲ್ಲ

ಪ್ರತಿಯೊಂದು ಭೂತದಲ್ಲಿ ಪಂಚಭೂತಗಳು ಎಂತಿರುವದೆಂಬುದನ್ನು ಹೇಳಲಾಯಿತು ಇದು ಪಂಚಭೂತಗಳ ಸೂಕ್ಷ್ಮ ನಿರೂಪಣೆಯಾಯಿತು ಈ ಪಂಚಭೂತಗಳ ಬಿಡುಗಡೆಯಾಗುವಂತಿಲ್ಲ ಇದರಲ್ಲಿ ಸಂದೇಹಗೊಂಡರೆ ಭ್ರಾಂತಿ ರೂಪದ ಆಕಸ್ಮಾತ ಅಹಂಕಾರ ಜನಿಸುವದುಂಟು ವಾಯುವನ್ನು ಸೂಕ್ಷ್ಮ ಒಗೆಯಿಂದ ನಿರೀಕ್ಷಿಸಲು ಇದು ಪಂಚ ಭೂತಾತ್ಮಕವಾಗಿರುವದು ಅದೇ ಮೂಲ ಮಾಯೆಯು ಸೂಕ್ಷ್ಮವಾದ ಮೂರು ಗುಣಗಳು ಮತ್ತು ಸೂಕ್ಷ್ಮ ಪಂಚಭೂತಗಳು ಈ ಎಂಟುಗಳ ಮಿಶ್ರಿತದಿಂದ ಮೂಲಮಾಯೆಯು ಅಷ್ಟಧಾಪ್ರಕೃತಿಯೆನಿಸುವದು ಇದನ್ನು ಸೂಕ್ಷ್ಮ ದೃಷ್ಟಿಯಿಂದ ವಿಚಾರ ಮಾಡಲು ಮೂಲ ಮಾಯೆಯಲ್ಲಿ ಪಂಚಭೂತಗಳು ಸೂಕ್ಷ್ಮ ರೂಪದಿಂದ ಇರುವವೆಂಬುದು ತಿಳಿಯುವದು ಇದರಲ್ಲಿ ಸಂದೇಹಗೊಳ್ಳುವದು ಮೂರ್ಖತನವಾಗುವದು

ಗುಣಗಳಿಂದ ಭೂತಗಳು ಸ್ಪಷ್ಟದಶೆಯನ್ನು ಹೊಂದಿಧವು ಅವೆಲ್ಲವು ಜಡತ್ವ ಹೊಂದಿ ತತ್ವಗಳೆನ್ನಿಸಿದವು ಮುಂದೆ ಅನೇಕ ತತ್ವಗಳು ನಿರ್ಮಾಣವಾಗಿ ಪಿಂಡ ಬ್ರಹ್ಮಾಂಡಾತ್ಮಕ ಸ್ಥೂಲ ಸೃಷ್ಟಿಯು ರಚನೆಯಾಯಿತು ಮೂಲ ಮಾಯೆಯಲ್ಲಿ ಪಂಚಭೂತಗಳ ಕಲಕುಮಲುಕಾಗುವದನ್ನು ಸೂಕ್ಷ್ಮ ಸಂಕೇತದಿಂದ ಮೊದಲು ತೋರಿಸಿದೆ ಅದಕ್ಕೂ ಮೊದಲೇ ಬ್ರಹ ಗೋಲಗಳ ನಿರ್ಮಿತವಾಗಿದೆ ಅಗ ಸಪ್ತ ಕಂಚುಕ (ಅಂದರೆ ಸಪ್ತಸಮುದ್ರ ಸಪ್ತಲೋಕ ಇತ್ಯಾದಿ) ಬ್ರಹ್ಮಾಂಡವು ನಿರ್ಮಿತವಾಗಿರಲಿಲ್ಲ ಮಾಯಾ ಅವಿದ್ಯಾ, ಜೀವ-ಶಿವ, ಬ್ರಹ್ಮ–ವಿಷ್ಣು–ಹರ, ಅನೇಕ ಲೋಕಗಳು, ಅನೇಕ ಸ್ಥಾನಗಳು, ಸಪ್ತ ಪಾತಾಳಗಳು, ಇಪ್ಪತ್ತೊಂದು ಸ್ವರ್ಗಗಳು, ಮೂವತ್ತೂರು ಕೋಟಿ ದೇವತೆಗಳು (೮ದಿಕ್ಪಾಲಕರು+೧೨ ಸೂರ್ಯರು+೧೧ರುದ್ರರು+೧ಬ್ರಹ್ಮ+೧ವಷಟ್ಕಾರ), ಮೇಘ, ಮನು, ಹಲವು ದೇವತೆಗಳ ಅವತಾರಗಳು

ಹಲವು ಪ್ರಕಾರದ ಜೀವಗಳು ಇವೆಲ್ಲವು ಇತ್ತೀಚೆಯವು ಆಗ ನಿರ್ಮಾಣ ವಾದವುಗಳಲ್ಲ

ಇನ್ನು ಈ ವಿಸ್ತಾರವು ಸಾಕು ಈ ಎಲ್ಲ ವಿಸ್ತಾರಕ್ಕೆ ಮೂಲ ಮೂಲಮಾಯೆಯೇ ಕಾರಣವು. ಹಿಂದೆ ಹೇಳಿದ ಪಂಚಭೂತಗಳು, ಸೂಕ್ಷ್ಮ ಭೂತಗಳು, ಇವೆಲ್ಲವು ಆ ಮೂಲ ಮಾಯೆಯು ಮುಂದೆ ಜಡತ್ವವನ್ನು ಹೊಂದಿದವು ಇದನ್ನೆಲ್ಲ ಮುಂದಿನ ಸಮಾಸದಲ್ಲಿ ಹೇಳುವೆವು ಈ ಪಂಚ ಭೂತಗಳ ಬೇರೆ ಬೇರೆ ಆಕಾರಗಳನ್ನು ಮುಂದೆ ವಿಸ್ತೃತವಾಗಿ ನಿರೂಪಿಸುವೆವು ಆದರಿಂದ ಶ್ರವಣ ಮಾಡಬೇಕು ಪಂಚಭೌತಿಕ ಬ್ರಹ್ಮಾಂಡ ವಿಚಾರ ವನ್ನು ಅರಿತುಕೊಂಡು ದೃಶ್ಯವನ್ನು ಬಿಟ್ಟು ಪರಮಾತ್ಮವಸ್ತುವನ್ನು ಹೊಂದ ಬೇಕು ದೇವಾಲಯದ ಮಹಾದ್ವಾರವನ್ನು ದಾಟಿ ಒಳನೇರಿ ದೇವದರ್ಶನ ಪಡೆಯುವಂತೆ ದೃಶ್ಯವನ್ನು ದಾಟಿ ಅಂದರೆ ಮೂಲ ಮಾಯೆಯ ಆಚೆಕಡೆಗೆ ಹೋಗಿ ಪರಮಾರ್ಥವನ್ನು ಹೊಂದಬೇಕು ದೃಶ್ಯದ ಹೊಟ್ಟೆಯಲ್ಲಿ ಪಂಚ ಭೂತಗಳ ದಟ್ಟಣೆಯು ತುಂಬಿದೆ ದೃಶ್ಯ ಹಾಗು ಪಂಚಭೂತಗಳು ಒಂದೇ ಇರುವವು ಇಂತು ಪಂಚಭೂತಗಳ ದೃಶ್ಯವೇ ಸಾವಕಾಶವಾಗಿ ಸೃಷ್ಟಿಯನ್ನು ನಿರ್ಮಾಣಗೊಳಿಸಿತು ಇದನ್ನು ಶ್ರೋತೃಗಳು ಸಾವಧಾನವುಳ್ಳವರಾಗಿ ಶ್ರವಣ ಮಾಡಬೇಕು" ಎಂದರು

ಶ್ರೀ ರಾಮ ॥ ೫ ಸ್ಥೂಲ ಪಂಚ ಮಹಾಭೂತ ಸ್ವರೂಪಾಕಾಶ ಭೇದ ॥

ಗುರುಗಳನ್ನು ಶಿಷ್ಯನನ್ನು ಕುರಿತು –" ಇನ್ನು ಪಂಚ ಮಹಾಭೂ ತಗಳನ್ನು ವರ್ಣಿಸಿ ಅದರಲ್ಲಿಯೇ ಆಕಾಶ ಮತ್ತು ಸ್ವರೂಪಗಳಲ್ಲಿಯ ಭೇದವಿರುವದನ್ನು ತೋರಿಸುವೆವು ಪಂಚ ಭೂತಗಳ ಹಾಗೂ ಮೂಲ ಮಾಯೆಯು ಕಲಕುಮಲಕದಾಗ ಸ್ಥೂಲ ಪಂಚ ಮಹಾಭೂತಗಳಲ್ಲಿ ಅದು ಉಂಟಾಯಿತೆಂಬುದನ್ನು ಹೇಳಬೇಕಾಗಿಲ್ಲ ಯಾವ ಭೂತವೂ ತೀರ ಬೇರೆಯಾಗಿ ದೊರೆಯಲಾರದು ಆದರೂ ಸಾಮಾನ್ಯರು ಒಪ್ಪುವ ಹಾಗೆ ಐದು ಭೂತಗಳನ್ನು ವರ್ಣಿಸಿ ಹೇಳುವೆವು

ಪೃಥ್ವಿ— ಜಡತ್ವ ಹಾಗು ಕಠಿಣತ್ವಗಳುಳ್ಳ ಜಗತ್ತಿನ ಭಾಗ ಗಳು— ಪರ್ವತ, ಕಲ್ಲುಗಳ ಶಿಖರಗಳು, ಪಾಷಾಣಗಳು, ಹಲವು

ಜಾತಿಯ ಸಣ್ಣ ದೊಡ್ಡ ಬಂಡೆ ಗುಂಡುಗಳು, ನಾನಾ ಪ್ರಕಾರದ ಮಣ್ಣು-ಉಸುಕುಗಳು, ಪುರಗಳು, ರಮ್ಯ ನಗರಗಳು, ಮಂದಿರಗಳು, ಕೊಳ್ಳಗಳು, ದೇವಾಲಯ ಗೋಪುರಗಳು, ಸಪ್ತದ್ವೀಪ-ನವ ಖಂಡಗಳು, ಹಲವು ದೇವ ವಿಗ್ರಹಗಳು, ಅನೇಕ ಜನ ರಾಜರುಗಳು, ಎಷ್ಟೋ ಭಾಷೆಗಳು, ಮಾನ ವೀಕೃತಿಯ ವಸ್ತುಗಳು, ಸುವರ್ಣ ಮೊದಲಾದ ಧಾತುಗಳು, ಹಲವು ಪ್ರಕಾರದ ರತ್ನಗಳು, ಅನೇಕ ಬಗೆಯ ಕಟ್ಟಿಗೆ- ಮರ-ವೃಕ್ಷಗಳು, ಇವೆಲ್ಲವೂ ಕೂಡಿ ಒಂದು ಪೃಥ್ವಿಯ ರೂಪು ಹುಟ್ಟಿಸಿರುವವು. ಇದರಲ್ಲಿ ವಿಶ್ವಾಸವನ್ನಿರಿಸಬೇಕು. ಇದು ಪೃಥ್ವಿಯ ಸ್ವರೂಪವಾಯಿತು. ಇನ್ನು ಜಲದ ಸ್ವರೂಪವನ್ನು ಕೇಳತಕ್ಕದ್ದು-

ಜಲ — ನಾಳಿ-ಕೂಪಗಳು, ನದಿ-ಸರೋವರಗಳು, ಮೋಡಗಳು, ಏಳು ಸಮುದ್ರಗಳು ಇವೆಲ್ಲವುಗಳು ಕೂಡಿ ಜಲ ತತ್ವವಾಗಿದೆ ಸಮುದ್ರಗಳಲ್ಲಿ ಕ್ಷಾರ ಸಮುದ್ರವಿದೆ. ಅದರ ಜಲದಿಂದ ಲವಣವುಂಟಾಗುವದು ಎರಡನೆಯದು ಕ್ಷೀರಸಾಗರವು ಈ ಸಮುದ್ರವು ಉಪಮನ್ಯುವಿನ ಭಕ್ತಿಗೆ ಮೆಚ್ಚಿ ದೇವತೆಗಳು ಪೃಥ್ವಿಗೆ ನೀಡಿದ್ದು ಮೂರನೆಯದು ಮದಿರಾ ಸಾಗರವು ೪ನೆಯದು ಘೃತ ಸಮುದ್ರವು ಐದನೆಯದು ಶ್ರೇಷ್ಠವಾದ ಮೊಸರಿನ ಸಮುದ್ರವು ೬ನೆಯದು ಇಕ್ಷುರಸದ್ದು ಮತ್ತು ಏಳನೆಯದು ಪವಿತ್ರ ಜಲ ಸಾಗರವು ಇಂತು ಸಪ್ತ ಸಮುದ್ರಗಳಿಂದ ಪೃಥ್ವಿಯು ಸುತ್ತುಗಟ್ಟಲ್ಪಟ್ಟಿರುವದು ಇಡೀ ಭೂಮಂಡಲದಲ್ಲಿಯ ಅನೇಕ ಸ್ಥಳಗಳಲ್ಲಿ ಸಂಚಿತ ಜಲವೆಲ್ಲ ಕೂಡಿ ಭೂಗರ್ಭದಲ್ಲಿಯ ಹಾಗೂ ಭೂಪೃಷ್ಠದ ಮೇಲಿರುವ ಮತ್ತು ಮೂರೂ ಲೋಕಗಳಲ್ಲಿಯ ನೀರು ಇದೆಲ್ಲ ಒಟ್ಟಾಗಿ ಜಲ ತತ್ವದಲ್ಲಿ ಕೂಡಿದೆ ಹಲವು ಬಳ್ಳಿ ಹಾಗು ಗಿಡಗಳಲ್ಲಿಯ ರಸವು, ಜೇನುತುಪ್ಪ, ಪಾಂಜ, ಅಮೃತ, ವಿಷಗಳಲ್ಲಿಯ ರಸವೂ, ಸ್ನಿಗ್ಧ — ರಸಗಳೂ, ಇವಲ್ಲದೆ ಇನ್ನೂ ಹಲವು ರಸ ಪದಾರ್ಥಗಳಲ್ಲಿಯ ರಸವೂ ಜಲ ತತ್ವದಲ್ಲಿ ಬರುವವು ಆರ್ದ್ರತೆಯಲ್ಲಿಯ ಶೀತಲ ವಸ್ತುಗಳಲ್ಲಿಯ ಅದೃಶ್ಯ-ಸೂಕ್ಷ್ಮ ರಸವೂ ಶುಕ್ಲ-ಶೋಣಿತ ರಕ್ತ-ಮಾಂಸಗಳಲ್ಲಿಯ ತಿಳಿರಸವೂ, ಮೂತ್ರ, ಜೊಲ್ಲುಗಳ ರಸವೂ ಜಲ ತತ್ವಕ್ಕೆ ಬರುವವು ನೀರಿನ ಸಂಪರ್ಕ ಭಾವವುಳ್ಳ ಮೆತ್ತಗಿನ

ಹಾಗು ಜಿರಿ ಜಿರಿಯೆನ್ನಿಸುವ ಪದಾರ್ಥಗಳಲ್ಲಿಯ ರಸವೂ,ಬೆವರು,ಉಗುಳು, ಕಣ್ಣೀರು ಮೊದಲಾದವುಗಳಲ್ಲಿಯ ರಸವೂ, ಇವೆಲ್ಲವೂ ಜಲ ತತ್ವದಲ್ಲಿ ಸಮಾವೇಶವಾಗುವವು

ತೇಜಃ— ಚಂದ್ರ–ಸೂರ್ಯ–ನಕ್ಷತ್ರಗಳು, ದಿವ್ಯ ಪ್ರಕಾಶಿತ ಶರೀರ ಗಳು, ಆಕಾಶದಲ್ಲಿಯ ವಿದ್ಯುಲ್ಲತೆಗಳು, ಸಮುದ್ರದ ವಡವಾಗ್ನಿಯು, ಅಗ್ನಿ ವರ್ಷಾವವು, ಶಂಕರನ ಮೂರನೆಯ ಕಣ್ಣು, ಭೂಗೋಲವನ್ನು ಸುತ್ತಿದ ಅಗ್ನಿ ಪರೀಘವು, ಇವೆಲ್ಲವು ತೇಜ ತತ್ವ ಸಂಬಂಧಿತಗಳು. ಪ್ರಕಾಶ ರೂಪವಾಗಿ ತೋರುವವೆಲ್ಲವೂ ತೇಜದ ಸ್ವರೂಪಗಳು ಶೋಷಕ ಉಷ್ಣತೆಯು ತೇಜವು

ವಾಯು — ವಾಯುವು ಚಂಚಲವುಳ್ಳದ್ದು ಅದು ಸ್ಥಿರವಾಗಿರುವಲ್ಲಿ ಚೇತನವನ್ನುಂಟು ಮಾಡುವದು ಅಲ್ಲಾಡುವದು, ತೂಗಾಡುವದು, ಹೊಯ್ದಾಡುವದು ಇವೆಲ್ಲವು ವಾಯುವಿನ ಕ್ರಿಯೆಗಳು ಸಂಚಲನವೂ ವಕ್ರ ಗತಿಯೂ, ಪ್ರಸರಣವೂ, ನಿರೋಧನ–ಆಕುಂಚನಗಳೂ, ಇವೆಲ್ಲ ಚಂಚಲ ರೂಪದ ವಾಯುವಿನ ಧರ್ಮಗಳು ಪ್ರಾಣ, ಅಪಾನ, ವ್ಯಾನ,ಉದಾನ ಹಾಗು ಸಮಾನ ಈ ಪಂಚ ಪ್ರಾಣಗಳೂ, ನಾಗ, ಕೂರ್ಮ, ಕರ್ಕಶ, ದೇವದತ್ತ ಧನಂಜಯವೆಂಬ ಉಪಪ್ರಾಣ ಪಂಚಕಗಳೂ, ಎಲ್ಲ ಬಗೆಯ ಚಲನಗಳೂ, ಇವೆಲ್ಲ ವಾಯುವಿನ ಲಕ್ಷಣಗಳು. ಚಂದ್ರ, ಸೂರ್ಯ, ನಕ್ಷತ್ರಗಳನ್ನು ಧಾರಣ ಮಾಡುವದು ವಾಯುವು

ಆಕಾಶಃ– ಅವಕಾಶವುಳ್ಳದ್ದು, ನಿರ್ಮಲ ಹಾಗು ನಿಶ್ಚಲವಾದದ್ದು ಆಕಾಶವು ಮೇಲಿನ ನಾಲ್ಕು ಭೂತಗಳ ಕೌತುಕಗಳನ್ನು ಆಕಾಶದಲ್ಲಿ ಕಾಣಬಹುದು ಆಕಾಶದಂಥ ಶ್ರೇಷ್ಠವಿನ್ನೊಂದಿಲ್ಲ ಆಕಾಶದ ವಿಚಾರ ವನ್ನು ನೋಡಲು ಅದರ ಸ್ವರೂಪ ಭಿನ್ನತೆಯಿಲ್ಲ" ಎಂದು ಗುರುಗಳು ಹೇಳಿದರು ಆಗ ಶಿಷ್ಯನು–ಆಕ್ಷೇಪಯುಕ್ತ ಪ್ರಶ್ನೆ ಮಾಡಿದನು ಎಂತೆಂದರೆ–

"ಆಕಾಶವು ಪರಬ್ರಹ್ಮ ವಸ್ತುವಿನಂತೆ ಅಚಲವೂ ನಿರ್ಮಳವೂ, ಪುರಾತನವೂ ಮುಂತಾದ ಸಪ್ತ ಗುಣವುಳ್ಳದ್ದೆಂದು ಶಾಸ್ತ್ರಗಳಲ್ಲಿ ಹೇಳಿದೆ ಎಂದಮೇಲೆ ಅದಕ್ಕೇ ಪರಬ್ರಹ್ಮನೆಂದು ಯಾಕೆ ಅನ್ನಬಾರದು?"

ಗುರುಗಳು ಉತ್ತರವಾಗಿ— ‘ ಆಕ್ಷೇಪದಂತೆ ಆಕಾಶದಲ್ಲಿ ವಸ್ತು ನಿರ್ಗುಣತ್ವ ಮುಂತಾದ ೭ ಗುಣಗಳಿರುವದು ನಿಜ ಆದರೆ ಆಕಾಶದಲ್ಲಿ ಕಾಮ, ಕ್ರೋಧ, ಶೋಕ, ಮೋಹ, ಭಯ, ಅಜ್ಞಾನ ಹಾಗೂ ಶೂನ್ಯತ್ವ ಈ ಏಳು ಸ್ವಭಾವಗಳೂ ಇರುವವೆಂದು ಅವೇ ಶಾಸ್ತ್ರಗಳು ಹೇಳುವವು ಈ ಸ್ವಭಾವಗಳಿಂದ ಆಕಾಶವು ಭೂತವಾದಂತಾಯಿತಲ್ಲವೇ? ಹೀಗೆ ಸ್ವರೂಪ ನಿರ್ವಿಕಾರದಲ್ಲಿ ಭೇದ ಕಂಡು ಬರುವದರಿಂದ ಆಕಾಶಕ್ಕೆ ಬ್ರಹ್ಮನೆಂದು ಅನ್ನಲಿಕ್ಕೆ ಬರಲಾರದು ಕಾಜಿನ ನೆಲಗಟ್ಟು ಹಾಗು ನೀರಿನ ಸಾತಳಿ ಇವು ಒಂದೇ ತೋರಿದರೂ ಒಂದು ಕಾಜು,ಇನ್ನೊಂದು ನೀರು ಎಂಬುದು ಸಹಜ ತಿಳಿಯುವದಲ್ಲವೇ? ಅದರಂತೆ ಅರಳೆಯ ರಾಶಿಯಲ್ಲಿ ಸ್ಫಟಿಕವನ್ನು ಇಟ್ಟರೆ ಆವೆರಡೂ ಒಂದೇ ಕಾಣುವವು ಆದರೆ ಅರಳೆ ಹಾಗು ಸ್ಫಟಿಕಗಳು ಕಾಠಿಣ್ಯದಿಂದ ಬೇರೆ ಬೇರೆಯೇ ಆಗಿರುವವು

ಇನ್ನೂ ಉದಹರಿಸುವದಾದರೆ— ಅಕ್ಕಿ ಹಾಗು ಅದರಲ್ಲಿಯ ಬಿಳಿಯಕಲ್ಲಿನ ಚೂರು, ಬೆಲ್ಲ ಹಾಗು ಬೆಲ್ಲದ ಕಲ್ಲು, ಬಂಗಾರ ಹಾಗು ಅದರ ವರ್ಣದ ಹಿತ್ತಾಳಿ, ಇವುಗಳಲ್ಲಿಯ ವಿಷಮತೆಗಳನ್ನು ಅರಿತು ಕೊಳ್ಳಬಹುದು ಆಕಾಶವು-ಪಂಚ ಭೂತಗಳಲ್ಲೊಂದಾಗಿದೆ ಎಂದಮೇಲೆ ಅದು ಪರಬ್ರಹ್ಮನ ಅನಂತತ್ವಕ್ಕೆ ಹೇಗೆ ಸರಿಯಾಗುವದು? ಇದಲ್ಲದೆ ಪರಬ್ರಹ್ಮವಸ್ತುವಿಗೆ ವರ್ಣವಿಲ್ಲ ನೀಲ ವರ್ಣದ ಆಕಾಶವು ಅದಕ್ಕೆ ಸಮವಾಗಲಾರದು ಇದಕ್ಕೂ ಮೀರಿ ‘ ಆಕಾಶಕ್ಕೆ ವರ್ಣ ವ್ಯಕ್ತಿ ವಿಕಾರಗಳಿಲ್ಲ, ಅದು ಶಾಶ್ವತವಾಗಿದೆ,’ ಎಂದೂ ಯಾರಾದರೂ ಪ್ರತಿ ಪಾದಿಸಿದರೆ ಅವರಿಗೆ ನಮ್ಮ ಉತ್ತರವೇನೆಂದರೆ—

“ ಆಕಾಶವು ಮೂಲತಃ ತಮೋ ಗುಣದಿಂದುಂಟಾಗಿದೆ, ಅದರಿಂದ ಅದಕ್ಕೆ ಕಾಮ ಕ್ರೋಧಗಳು ಸುತ್ತಿವೆ ಅಜ್ಞಾನತ್ವ, ಶೂನ್ಯತ್ವ ಇವು ಅದರ ಸ್ವಭಾವನಾಗಿವೆ ಅದು ಸ್ತಬ್ಧವುಳ್ಳದ್ದಾಗಿ ಅಜ್ಞಾನ, ಕಠಿಣತೆಗಳು ಅದಕ್ಕೆ ಸಮವರ್ತಿಸಿವೆ ಈ ಪ್ರಕಾರ ಶೂನ್ಯವಿಕಾರಯುಕ್ತ ಆಕಾಶದ ವಿಚಾರವಿದೆ. ಎಂದಮೇಲೆ ‘ ಅನಂತ ’ ಬ್ರಹ್ಮನೊಡನೆ ಅದರ ಸಮತ್ವವನ್ನು ಒಪ್ಪುವದು ತಪ್ಪಾಗುವದು.

ವಸ್ತು ಸ್ವಭಾವ ನಿರೀಕ್ಷಣೆಯು ಹೀಗಿದೆ ಆಕಾಶವನ್ನು ಭಿನ್ನತೆಯಿಂದೆ ಕಾಣಬೇಕು ಪರಬ್ರಹ್ಮನ ಸ್ವರೂಪದಲ್ಲಿ ಐಕ್ಯವಾಗಿ ಅವನ ಸ್ವರೂಪವನ್ನೇ ತಿಳಿಯಬೇಕು."

ಈ ಪ್ರಕಾರ ಗುರುಗಳು ಬೋಧಿಸಿದ ನಂತರ ಆಕ್ಷೇಪಣೆ ದೂರಾಯಿತು ಸಂದೇಹನಡಗಿ ನೈಜವಾದ ಸ್ವರೂಪ ಸ್ಥಿತಿಯುಂಟಾಯಿತು

"ಆಕಾಶವು ಅನುಭವಕ್ಕೆ ತಿಳಿಯುವದು ಬ್ರಹ್ಮ ಸ್ವರೂಪವು ಅನುಭವವನ್ನು ಮೀರಿ ಆಚೆಗಿರುವದು ಇದರಿಂದ ಬ್ರಹ್ಮ-ಆಕಾಶಗಳಲ್ಲಿ ಸಾಮ್ಯತೆ ಕೂಡಲಾರದು ಸಂತರು ರಾಜಹಂಸದಂತಿರುವರ ಹಂಸವು ನೀರ ಕ್ಷೀರಗಳನ್ನು ವಿಂಗಡಿಸಿ ಕೇವಲ ಹಾಲನ್ನಷ್ಟೇ ಸ್ವೀಕರಿಸುವದು ಸಂತರಾದರೂ ಆಕಾಶ ಹಾಗು ಸತ್ ಸ್ವರೂಪಗಳ ಸಂದೇಹ ತಳಕು ಮುಲಕುಗಳಲ್ಲಿಂದ ಸ್ವರೂಪವನ್ನೇ ಗ್ರಹಿಸುವರು ಆ ಬ್ರಹ್ಮನ ಸ್ವರೂಪವನ್ನು ಭಿನ್ನತ್ವದಿಂದ ತಿಳಿಯಲಿಕ್ಕೆ ಬರಲಾರದೆಂಬದು ಸಂತರಿಗೆ ಅವಗತವಾಗಿರುವದು ಇಂಥ ಸಂತರ ಸತ್ಸಹವಾಸದಿಂದ ಮಾಯೆಯನ್ನು ನೀಗಿಕೊಂಡು ಮೋಕ್ಷ ಪದವನ್ನು ಹೊಂದಬೇಕು "ಎಂದರು

ಶ್ರೀ ರಾಮ ॥ ೬ ದುಶ್ಚಿತ ನಿರೂಪಣ ॥ ಗುರುಗಳನ್ನು ಕುರಿತು ಶಿಷ್ಯನು—

'ಸತ್ಸಂಗದ ಮಹಿಮೆ ಎಂತಹದು? ಮೋಕ್ಷ ದೊರೆಯುವ ಕಾಲಾವಧಿ ಎಷ್ಟು?'

ಎಂದು ಕೇಳಿದ್ದಕ್ಕೆ ಗುರುಗಳು—'ವಿಶ್ವಾಸ ಪೂರ್ವಕವಾಗಿ ಬೋಧೆಯನ್ನು ಶ್ರವಣ ಮಾಡುವದರಿಂದ ಮೋಕ್ಷವಾಗುವದು ಆದರೆ ಸಂಶಯಿತ ವೃತ್ತಿಯಿಂದ ಕೂಡಿ ಶ್ರವಣ ಮಾಡುವದರಿಂದ ಹಾನಿಯೊದಗುವದು' ಎಂದು ಹೇಳುವಷ್ಟರಲ್ಲಿಯೇ ಶಿಷ್ಯನು ಮತ್ತೆ- 'ಶ್ರವಣದಲ್ಲಿ ಏಕಾಗ್ರತೆಯಿದ್ದಾಗಲೆ ನಡುವೆ ಚಿತ್ತ ಭಂಗವಾಗುವದು. ಇದನ್ನು ತಡೆಯುವ ಉಪಾಯವೇನು?' ಎಂದು ಪ್ರಶ್ನೆ ಮಾಡಿದನು

ಆಗ ಗುರುಗಳು:—

" ಮನೋ ನಿಗ್ರಹ ಮಾಡಿಕೊಂಡು ಪ್ರೀತಿಯಿಂದ ಶ್ರವಣ ಮಾಡತಕ್ಕದ್ದು ಮತ್ತು ಶ್ರವಣದ ಪ್ರತಿಯೊಂದು ಕ್ಷಣದಲ್ಲಿ ಲಕ್ಷಣವನ್ನು

ಸಾವರಿಸಿಕೊಂಡು ಮುಂದೆ ಶ್ರವಣ ಮಾಡಬೇಕು. ಹೀಗಾದರೆ ಶ್ರವಣ ಕಾಲವು ಸಾರ್ಥಕವಾಗುವದು ಶ್ರವಣ ಮಾಡಿದುದೆಲ್ಲವನ್ನು-ಮನನ ಮಾಡಿ ಕೊಂಡು ಮನಸಿನಲ್ಲಿ ಅರ್ಥ ಭಾವವನ್ನು ತಂದುಕೊಳ್ಳಬೇಕು ಚಿತ್ತ ಚಂಚಲತೆಯುಂಟಾದಲ್ಲಿ ಮತ್ತೆ ಶ್ರವಣ ಮಾಡಬೇಕು ಮನನವಿಲ್ಲದೆ ಮುಂದೆ ಮುಂದೆ ಹಾಗೇ ಬೋಧೆಯನ್ನು ಶ್ರವಣ ಮಾಡುವವನು ಶ್ರೋತೃವೆಂದು ತಿಳಿಯಬಾರದು ಅಂಥವನು ಕೇವಲ ಮನುಷ್ಯ ರೂಪದ ಒಂದು ಬಂಡೆಗಲ್ಲು ಆಗಿರುವನು ಇಲ್ಲಿ ಕಲ್ಲಿನ ಉಪಮೆಯು ಆತನಿಗೆ ಯೋಗ್ಯವೇ ಸರಿ ಹೇಗೆಂದರೆ ಕಲ್ಲನ್ನು ಒಡೆಯಲು ಅದು ಅಡ್ಡ ತಿಡ್ಡಾಗಿ ಒಡೆಯುವದು, ಬಳಿಕ ಅದರ ಬಾಗಗಳನ್ನು ಯಾವ ಬಗೆ ಯಿಂದಲೂ ಒಂದು ಗೂಡಿಸುವದು ಶಕ್ಯವಿಲ್ಲ ಅದರಂತೆ ಮಾನವನು ಒಮ್ಮೆ ದುರ್ಬುದ್ಧಿಗಿಳಿಯಲು ಅವನ ಮುಂದೆ ನೀತಿವಂತನಾಗುವದು ಕಷ್ಟವು ಈ ಬಗೆಯ ವಿಚಾರದಿಂದ ಕಲ್ಲು ಮತ್ತು ಇಂಥ ಮಾನವ ಇವರಲ್ಲಿ ಕೆಲವೊಂದು ದೃಷ್ಟಿಯಿಂದ ಕಲ್ಲಿಗೇ ಶ್ರೇಷ್ಠತೆ ಕೊಡಬಹುದು ಯಾಕಂದರೆ ಕಲ್ಲಿನಲ್ಲಿ ಮುತ್ತು, ಪಚ್ಚೆ, ವೈಢೂರ್ಯ, ವಜ್ರನೀಲ,ಚಂದ್ರ ಕಾಂತ, ಸೂರ್ಯಕಾಂತ, ಔಷಧೀ ರತ್ನ ಇತ್ಯಾದಿ ಮೇಲ್ತರದ ವಸ್ತುಗಳಿ ರುವವು ಕಲ್ಲಿನಿಂದ ಶಿಲಾ ಪತ್ರಿಮೆ- ದೇವ ವಿಗ್ರಹಗಳನ್ನು ರಚಿಸುವರು ಕೆರೆ ಭಾವಿ ಕಟ್ಟೆಗಳನ್ನು ಕಟ್ಟಲು ಕಲ್ಲನ್ನು ಉಪಯೋಗಿಸುವರು ಇವೆಲ್ಲ ದೃಷ್ಟಿಯಿಂದ ಕಲ್ಲಿನಂತಹ ಜನೋಪಯುಕ್ತ ವಸ್ತುವು ಇನ್ನೊಂದಿ ಲ್ಲವೆಂದು ಹೇಳಬಹುದು ಈ ಕಲ್ಲುಗಳ ಸಾರ್ಥಕತೆಯ ಮುಂದೆ ಮಾನ ವನು ಹೀನನೇ ಸರಿ ಶ್ರವಣಾದಿಗಳಲ್ಲಿ ದುಶ್ಚಿತ್ತನಾದ ಮಾನವನು ಈ ಕಲ್ಲಿಗಿಂತ ತೀರ ಕಡಿಮೆಯವನು ಅಪವಿತ್ರ ಸ್ಥಳದಲ್ಲಿ ಯೋಜಿಸಿದ ಕಲ್ಲಿನ ಹೋಲಿಕೆಯು ಇಂಥವನ ಶರೀರಕ್ಕೆ ಕೊಡಬಹುದು. ಇವರಿಂದ ಪ್ರಪಂಚ—ಪರಮಾರ್ಥಗಳಾವವೂ ಸಾಧಿಸುವದಿಲ್ಲ ಈ ದುಶ್ಚಿತ್ತ ಮಾನ ವನ ಚಿತ್ತ ವಿಚಲತೆಯಿಂದ ಕೈಕೊಂಡ ಕಾರ್ಯಗಳು ನಾಶವಾಗುವವು ಅವರಿಗೆ ನಿಶ್ಚಯ ಬುದ್ಧಿ ಲಭಿಸದು, ಜಯವಾಗುವದಿಲ್ಲ, ಆತ್ಮ ಕಲ್ಯಾ ಣವು ಕ್ಷಯವಾಗುವದು; ಅವರಲ್ಲಿ ಶ್ರವಣ ಭಕ್ತಿಯುಂಟಾಗುವದಿಲ್ಲ, ಬುದ್ಧಿ ವಿಸ್ತೃತವಾಗುವದಿಲ್ಲ, ಉಪದೇಶ ಬೋಧೆಗಳು ಫಲಿತವು ಅವರಿಗೆ

ಸಿಗುವದಿಲ್ಲ ಅಂಥವರ ಮನಸ್ಸು ಚಂಚಲತೆ ಹೊಂದುವದು, ಚಿತ್ತವು ಸಂಶಯ ಚಕ್ರಕ್ಕೆ ಸಿಲುಕುವದು, ಅಂಥವನ ಸ್ಥಿತಿಯು ಹುಚ್ಚು ಹಿಡಿದಂತೆ, ಪಿಶಾಚ ಬಾಧೆಯಾದಂತೆ, ಕುರುಡ—ಕಿವುಡ—ಮೂಕರಂತೆ ಹಸೆಗೆಟ್ಟು ಹೋಗುವದಲ್ಲದೆ ಅವರ ಸಂಸಾರವೂ ಅದೇ ಸ್ಥಿತಿಯನ್ನು ಹೊಂದುವದು ಲಕ್ಷ್ಯ ಗೊಟ್ಟರೂ ಅವರಿಗೆ ಶ್ರವಣ ಜ್ಞಾನವಾಗುವದಿಲ್ಲ ಕಿವಿಯಿದ್ದರೂ ಕೇಳಲು ಅವರಿಗೆ ಮನಸ್ಸಾಗುವದಿಲ್ಲ ಅವರಲ್ಲಿ ಜ್ಞಾನವಿದ್ದರೂ ಅದು ಸಾರಾಸಾರ ವಿಚಾರ ಕ್ಷೇತ್ರಕ್ಕಿಳಿಯುವದಿಲ್ಲ ಇಂಥವರಲ್ಲಿ ಸೋಮಾರಿತನವು ಮನೆ ಮಾಡುವದು ಅವರ ಜೀವವು ಸತತವೂ ಆಲಸ್ಯತೆಯಿಂದ ಮಂದತ್ವ ತಾಳುವದರಿಂದ ಅವರಿಗೆ ಪರಲೋಕ ಮಾರ್ಗವೆಂತು ಸಿಗುವದು? ಒಂದು ವೇಳೆ ಇಂಥ ದುಶ್ಚಿತ್ತನೂ ಸೋಮಾರಿಯೂ ಆದವನು ತನ್ನಲ್ಲಿಯ ದುಶ್ಚಿತ್ತತೆಯನ್ನು ತ್ಯಾಗ ಮಾಡಿದರೂ ಅವನು ತನ್ನನ್ನು ಅಂಟಿಕೊಂಡಿದ್ದ ಆಲಸ್ಯದ ಹಿಡಿತದಿಂದ ಪಾರಾಗಲಾರನು ಆಲಸ್ಯದಿಂದ ವಿಚಾರವಳಿಯುವದು ಆಚರಣೆ ಕೆಡುವದು,ಏನು ಮಾಡಿದರೂ ಓದು–ಬರಹಗಳು ಸಾಧಿಸಲಾರವು, ಶ್ರವಣ ಹಾಗು ಬೋಧೆಗಳು ಆಲಸ್ಯದಿಂದ ಸಾಧಿಸಲಾರವು ಪರಮಾರ್ಥದ ಬಯಕೆ ದೂಷಿತವಾಗುವದು, ಆಲಸ್ಯದಿಂದ ನಿತ್ಯ ನೇಮಗಳಿಗೆ ಬಾಧೆ ಬರುವದು,ಅಭ್ಯಾಸ ಹಾಳಾಗುವದು, ಆಲಸ್ಯದಿಂದ ಎಂದೂ ಒದಗದಿದ್ದ ಆಲಸ್ಯವು ಉಂಟಾಗುವದು ಆಲಸ್ಯದಿಂದ ಧಾರಣಾವೃತ್ತಿಯೂ ಧೈರ್ಯವೂ ಕುಂದುವವು, ವೃತ್ತಿ ದೂಷಿತವಾಗುವದು, ವಿವೇಕದ ವೇಗವು ಕುಂಠಿತವಾಗುವದು, ನಿದ್ದೆ ಹೆಚ್ಚುವದು, ವಾಸನೆಗಳು ವಿಸ್ತಾರವಾಗುವವು, ಸದ್ಬುದ್ಧಿಯೂ ನಿಶ್ಚಯವೂ ಆಲಸ್ಯದಿಂದ ಲೋಪವಾಗುವವು ಹೀಗೆ ದುಶ್ಚಿತ್ತದೊಡನೆ ಬಂದ ಆಲಸ್ಯದಿಂದ ದುಷ್ಪರಿಣಾಮಗಳು ಇವಾಗಿರುವವು ಈ ಆಲಸ್ಯದಿಂದ ನಿದ್ದೆಯ ವಿಲಾಸ ಬೆಳೆಯುವದು ನಿದ್ದೆಯ ವಿಲಾಸದಿಂದ ಆಯುಷ್ಯ ನಾಶವಾಗುವದು ನಿದ್ದೆ, ಆಲಸ್ಯ ಹಾಗು ದುಶ್ಚಿತ್ತ ಇವು ಮೂರರಿಂದ ಮೂರ್ಖರ ಲಕ್ಷಣವು ಕಂಡು ಬರುವದು ಆದ್ದರಿಂದಲೇ ಆ ಮೂರ್ಖರಲ್ಲಿ ಬೋಧೆಯು ನೆಲೆಗೊಳ್ಳುವದಿಲ್ಲ ಈ ಮೂರು ಲಕ್ಷಣಗಳಿದ್ದಲ್ಲಿ ವಿವೇಕೋದಯವು ಸಾಧ್ಯವೇ ಇಲ್ಲ ವಿವೇಕವಿದ್ದಲ್ಲಿಯೇ

ಸುಖವು. ಆದರೆ ಅಜ್ಞಾನವಿದ್ದಲ್ಲಿ ಸುಖವು ತಿಲಮಾತ್ರವೂ ಉಂಟಾಗಲಾರದು

ಹೊಟ್ಟೆ ಹಸಿದ ಕೂಡಲೆ ಉಣ್ಣುವದು ಉಂಡು ಎದ್ದ ಕೂಡಲೆ ಆಲಸ್ಯ ಬರುವದು ಆಲಸ್ಯ ಬಂದೊಡನೆಯೇ ನಿದ್ದೆ ಬರುವದು ಮಲಗಿ ಎದ್ದ ಕೂಡಲೆ ಮತ್ತಿತ್ತ ಜಾಗ್ರತೆ ಗೊಳ್ಳುವದೇ ಹೊರತು ಒಳ್ಳೆಯ ಚಿತ್ತವು ತಲೆದೋರಲಾರದು ಇಂಥವರಿಗೆ 'ಆತ್ಮಹಿತವನ್ನು ಸಾಧಿಸಿ ಕೊಳ್ಳಿರಿ' ಎಂದು ಬೋಧೆ ಮಾಡಿದರೆ ಉಂಟಾಗುವ ಪರಿಣಾಮವೇನು? ವ್ಯರ್ಥವೇ ಸರಿ ಆಗ ಅವರಿಗೆ ಮಾಡಿದ ಉಪದೇಶದ ಪರಿಣಾಮವೆಂತಾಗುವದೆಂದರೆ ಮಂಗನ ಕೈಯಲ್ಲಿ ಮಾಣಿಕ ಕೊಟ್ಟಂತೆ ಅಥವಾ ದೆವ್ವಿನ ಕೈಗೆ ಸಂಪತ್ತ ಸ್ವಾಧೀನಮಾಡಿದಂತೆ ನಿರುಪಯುಕ್ತವಾಗುವದು

ಇನ್ನು ಇದಿರಲಿ ಮೋಕ್ಷವು ಉಂಟಾಗುವ ಕಾಲಾವಧಿಯ ಬಗೆಗೆ ವಿಚಾರಿಸೋಣ ಸಜ್ಜನ ಸಹವಾಸದಿಂದ ಮುಕ್ತಿಯುಂಟಾಗುವಲ್ಲಿ ಮೊದಲು ಸಂತ ಸಹವಾಸದ ಬಗೆಗೆ ವಿಚಾರವಿಂತಿದೆ ಕಬ್ಬಿಣವು ಸ್ಪರ್ಶಗಲ್ಲಿಗೆ ತಗಲುವದರಿಂದ, ನೀರಿನ ಹನಿಯು ಸಾಗರಕ್ಕೆ ಕೂಡುವದರಿಂದ, ಚಿಕ್ಕ ಪ್ರವಾಹವು ಗಂಗಾನದಿಗೆ ಸಂಗಮವಾಗುವದರಿಂದ ಹೀಗೆ ಇವೆಲ್ಲವೂ ಆ ಕೂಡಲೆ ಒಂದು ಇನ್ನೊಂದರಲ್ಲಿ ತದ್ರೂಪ್ಯತೆಯನ್ನು ಹೊಂದಿ ಶ್ರೇಷ್ಠತೆ ಪಡೆಯುವವು. ಇವೆಲ್ಲವುಗಳಂತೆಯೇ ಆತ್ಮೋದ್ಧಾರವನ್ನು ಬಯಸುವವರು ಉದ್ಯೋಗ ನಿರತರೂ ದಕ್ಷರೂ ಆದಂಥ ಸಂತಸಜ್ಜನರ ಸಹವಾಸವನ್ನು ಪಡೆದುದಾದರೆ ಆಗಲೇ ಮೋಕ್ಷವಾಗುವದು ಇನ್ನು ಇದಕ್ಕೆ ಬೇಕಾಗುವ ಕಾಲಾವಧಿಯೆಂದರೆ — ಕಬ್ಬಿಣವು ಸ್ಪರ್ಶಗಲ್ಲಿಗೆ ತಗಲಿ ಬಂಗಾರವಾಗಲು ಹಿಡಿಯುವ ವೇಳೆಯಷ್ಟೇ ವೇಳೆಯು ಮೋಕ್ಷಕ್ಕೆ ಬೇಕಾಗುವದು ಇದರಂತೆ ಉಳಿದ ದೃಷ್ಟಾಂತಗಳಿಂದಲೂ ತಿಳಿದು ಕೊಳ್ಳಬಹುದು

ಸತ್ಸಂಗದಿಂದ ಮೋಕ್ಷಗಳಿಸಲು ಯೋಗ್ಯವಾದ ಜೀವನಿಗೆ ಕೂಡಲೆ ಮೋಕ್ಷ ದೊರಕುವದು ಮೋಕ್ಷಾಧಿಕಾರವಿಲ್ಲದ ಜೀವನು ಅಲಕ್ಷ್ಯ ವಸ್ತುವಿನಲ್ಲಿ ಲಕ್ಷ್ಯವಿಟ್ಟರೂ ಅವನಿಗೆ ಮೋಕ್ಷವಿಲ್ಲ ಶಿಷ್ಯನು ಪ್ರಾಜ್ಞನಾಗಿದ್ದರೆ, [ತಿಳುವಳಿಕೆಯುಳ್ಳವನಾಗಿದ್ದರೆ] ಹಾಗು ಅನನ್ಯ ಭಕ್ತನಾಗಿ

ದ್ದರೆ ಅವನಿಗೆ ಮೋಕ್ಷಕ್ಕೆ ಒಂದು ಕ್ಷಣವೂ ಸಹ ಹಿಡಿಯುವದಿಲ್ಲ ಪ್ರಜ್ಞೆಯಿಲ್ಲದೆ ಅರ್ಥ ತಿಳಿಯುವದಿಲ್ಲ ಅನನ್ಯತೆಯಿಲ್ಲದೆ ವಸ್ತುವಿನ ಜ್ಞಾನವಾಗುವದಿಲ್ಲ ಪ್ರಜ್ಞೆ ಹಾಗು ವಿಶ್ವಾಸ ಇವೆರಡೂ ಇದ್ದುದಾದರೆ ದೇಹಾಭಿಮಾನವು ಗಳಿಸಿ ಹೋಗುವದು ಕೂಡಲೆ ಬ್ರಹ್ಮಪ್ರಾಪ್ತಿಯುಂಟಾಗುವದು ಸತ್ಸಂಗತಿಯಿಂದ ಸದ್ಗತಿಯುಂಟಾಗುವದಕ್ಕೆ ಕಾಲಾವಧಿ ಬೇಕಾಗಿಲ್ಲ ಹಾಗು ಕಷ್ಟವನ್ನೂ ಪಡಬೇಕಾಗಿಲ್ಲ ಭಾವಿಕರು ತಮ್ಮ ಹೃದ್ಗತ ನಿಶ್ಚಿತ ಸಾಧನಗಳಿಂದ ಕೊನೆಗೆ ಮೋಕ್ಷವನ್ನು ಹೊಂದುವರು ಸತ್ಸಂಗದಿಂದ ವಿವೇಕ ದೃಷ್ಟಿಯು ಕೂಡಲೇ ತೆರೆಯುವದು, ಆದರೂ ಸಾಧನಗಳನ್ನು ಬಿಡದೆ ಬೋಧೆಯ ಮಾರ್ಗದಲ್ಲಿಂದ ಪರಮಾರ್ಥ ಪಡೆಯುವದು ಸುಲಭವಾಗುವದು

ಇನ್ನು ಮೋಕ್ಷದ ಸ್ವರೂಪವೇನು? ಬ್ರಹ್ಮನೆಂದರೇನು? ಅದನ್ನು ಪಡೆಯುವದಕ್ಕಾಗಿ ಸತ್ಸಂಗವನ್ನು ಆದೆಂತು ನಂಬಬೇಕು? ಇವೆಲ್ಲವನ್ನು ಹೇಳುವೆವು ಅವಗುಣಗಳನ್ನು ತ್ಯಾಗ ಮಾಡುವದಕ್ಕಾಗಿ ನೈತಿಕ ದೃಷ್ಟಿಗೆ ಯೋಗ್ಯ ತೋರಿದ್ದನ್ನೇ ಹೇಳಬೇಕಾಗುವದು ಅದಕ್ಕಾಗಿ ಶ್ರೋತೃಗಳು ಕ್ಷಮಿಸತಕ್ಕದ್ದು " ಎಂದರು

ಶ್ರೀ ರಾಮ ॥ ೭ ಮೋಕ್ಷ ಲಕ್ಷಣ ॥ ಗುರುಗಳು ಶಿಷ್ಯನನ್ನು ಕುರಿತು 'ಮೋಕ್ಷವು ಎಷ್ಟು ದಿನಕ್ಕೆ ಆಗುವದು?'' ಎಂದು ಕೇಳಿದ ಪ್ರಶ್ನೆಯ ಉತ್ತರವನ್ನು ಚಿತ್ತಗೊಟ್ಟು ಕೇಳಬೇಕು' ಎಂದು ಹೇಳಹತ್ತಿದರು

ಮೋಕ್ಷವೆಂದರ ಬಂಧನ ನಿವೃತ್ತಿಯು ಜೀವನು ತನ್ನ ಸಂಕಲ್ಪದಿಂದ ಬಂಧನಕ್ಕೆ ಗುರಿಯಾಗುವನು ಜೀವತ್ವದಿಂದ ಬದ್ಧವಾಗುವನು ಇಂತಾದ ಆತನನ್ನು ಸಾಧುಗಳು ಆತನಲ್ಲಿರುವ ವಿವೇಕವನ್ನು ಜಾಗೃತಗೊಳಿಸಿ ಮುಕ್ತನನ್ನಾಗಿ ಮಾಡುವರು 'ನಾನು ಜೀವನು' ಎಂಬ ಜನ್ಮಜನ್ಮಾಂತರದ ಸಂಕಲ್ಪದಿಂದ ಈ ಜೀವನದಲ್ಲಿ ದೇಹಬುದ್ಧಿಯು ಬೆಳೆದು ಕೀಳ್ದೆಸೆಯನ್ನು ಉಂಟು ಮಾಡುವದು 'ನಾನು ಜೀವನು, ನನಗೆ ಬಂಧನವಿದೆ, ಜನನ ಮರಣಗಳಿವೆ, ಕೃತಕರ್ಮಗಳ ಸುಷ್ಟ-ದುಷ್ಟ ಫಲಗಳನ್ನು ನಾನು ಅನುಭವಿಸಬೇಕಾಗುತ್ತದೆ, ಈ ಮೊದಲಾದ ಕಲ್ಪನೆಗಳಿಂದಲೇ ಸ್ವಯಂಬಂಧನ ಕ್ಕೊಳಗಾಗುವನು ರೇಶಿಮೆಯ ಹುಳುವು ತನ್ನ ಮೈಸುತ್ತಲೂ ತಾನೇ

ಮನೆಯನ್ನು ರಚಿಸಿಕೊಳ್ಳುವದು, ತಾನು ಅದರಿಂದ ಹೊರಬೀಳದೆ ಇದ್ದಲ್ಲಿಯೇ ಇದ್ದು ಆ ಆವರಣದ ಒಳಗೇ ಸತ್ತು ಹೋಗುವದು. ಅದರಂತೆ ಜೀವನು, ತನ್ನ ಕಲ್ಪನೆಯಿಂದಲೇ ತನ್ನನ್ನು ಬಂಧಿಸಿಕೊಂಡು ಜನನ–ಮರಣಗಳ ಚಕ್ರದಲ್ಲಿ ಸಿಕ್ಕು ಸುತ್ತಾಡುತ್ತದೆ. ಆ ಜೀವವು ಇಂಥ ಅಜ್ಞಾನಿಯು. ಆದಕ್ಕೆ ಭಗವದ್ವಿಷಯಕ ಜ್ಞಾನವಿರುವದಿಲ್ಲ. 'ಇಹ ಜನ್ಮದಲ್ಲಿ ನಾನು ದಾನ ಮಾಡಿದರೆ ಮುಂದಿನ ನನ್ನ ಜನ್ಮಕ್ಕೆ ಅದು ಆಧಾರವಾಗಬಹುದು, ಅದರಿಂದ ನನ್ನ ಸಂಸಾರವು ಸುಖಮಯವಾಗಬಹುದು, ಮೊದಲಿನ ಜನ್ಮದಲ್ಲಿ ನಾನು ದಾನ ಮಾಡಿರಲಿಕ್ಕಿಲ್ಲ. ಅಂತೆಯೇ ಈಗ ದರಿದ್ರನಾಗಿರುವೆನು ಇನ್ನಾದರೂ ನಾನು ಏನನ್ನು ಮಾಡಬೇಕು? ಈಗ ಹಳೆಯ ಅರಿವೆ ಅಂಚಡಿಗಳನ್ನು ಇಲ್ಲವೆ ದುಡ್ಡು ದುಗ್ಗಾಣಿಯನ್ನು ನಾನು ದಾನ ಮಾಡಿದರೆ ಅದರ ಫಲವಾಗಿ ಕೋಟಿ ಪಟ್ಟು ಪುಣ್ಯ ಪಡೆಯಬಹುದು, ಈ ಮನೋಭಾವನೆಯಿಂದ ತನ್ನನ್ನು ತಾನು ಬಂಧಿಸಿಕೊಳ್ಳುವದು ಮತ್ತು ದುಡ್ಡು ಪೈ, ಅದ್ದೇಲಿ ಇಲ್ಲವೆ ಬಕ್ಕರಿಯ ಚೂರು ಇವನ್ನು ದಾನ ನೀಡಿದರೆ ಮರು ಜನ್ಮದಲ್ಲಿ ನಾನು ಕೋಟಿ ಪಡಿಯಾಗಿ ಸುಖ ಪಡುವೆನು ಎಂಬ ನಿಶ್ಚಯದ ವಾಸನೆಯನ್ನು ತಾಳುವದು, ಈ ಬಗೆಯ ವಾಸನಾಯುಕ್ತವಾದ ಜೀವನವೇ 'ಬದ್ಧ' ಎಂದು ಹೇಳಲ್ಪಡುವದು. ಹಲವು ಜನ್ಮಗಳನ್ನು ನೀಗಿದ ನಂತರ ಮಾನವ ಜನ್ಮವೊದಗುವದು. ಈ ಮಾನವ ದೇಹವಿರುವಾಗಲೇ ಜ್ಞಾನ ಹಾಗು ಸದ್ಗತಿಯುಂಟಾಗದಿದ್ದರೆ ಗರ್ಭವಾಸವು ತಪ್ಪಲಾರದು. ಅದರಂತೆ ಜನನ-ಮರಣಗಳೂ ಬಿಡಲಾರವು. ಪಾಪಕರ್ಮಗಳ ಹೆಚ್ಚುವಿಕೆಯಿಂದ ಬರುವ ಜನ್ಮದಲ್ಲಿ ನೀಚಯೋನಿಯಲ್ಲಿ ಹುಟ್ಟಬೇಕಾಗುವದು. ಈ ಬಗೆಗೆ ಶಾಸ್ತ್ರಗಳಲ್ಲಿ ನಿಶ್ಚಿತ ಮತ ವ್ಯಕ್ತಗೊಳಿಸಲ್ಪಟ್ಟಿದೆ. ವ್ಯಾಸ ಮಹರ್ಷಿಗಳು 'ಸಂಸಾರದಲ್ಲಿ ನರದೇಹ ಪ್ರಾಪ್ತಿಯು ಪರಮದುರ್ಲಭವೆಂದೂ, ಪಾಪ-ಪುಣ್ಯಗಳ ಸಮಾಂಶಗಳಿಂದ ಆ ನರದೇಹ ದೊರಕುವದೆಂದೂ ಭಾಗವತದಲ್ಲಿ ಸ್ಪಷ್ಟವಾಗಿ ವಿದಿತಪಡಿಸಿರುವರು. ಅವರ ಬೋಧ ವಚನದ ಸಾರಾಂಶವು ಹೀಗಿದೆ. ಏನೆಂದರೆ—'ನರದೇಹವು ಶ್ರೇಷ್ಠ ಹಾಗು ಸುಲಭವಾದುದು. ಮತ್ತು ಅದು ಸುಲಭವಾದಷ್ಟೇ ದುರ್ಲಭವಾಗಿಯೂ ಇರುವದು. ಈ ದೇಹದಿ ಗುರೂಪದೇಶ ಉಂಟಾಗಲು ಆ ಮಾನ

ವನು ಸ್ವಯಂಸುಖವನ್ನು ಅನುಭವಿಸುವನು. ದೈವರಹಿತನಾದ ಪಾಪಾತ್ಮನು ತನ್ನ ದುರ್ದೈವದಿಂದ ಭವಸಾಗರದಿಂದ ಪಾರಾಗಲಾರನು. ಅಂತೆಯೇ ಆ ಪ್ರಾಣಿಯು 'ಆತ್ಮಘಾತಕಿ'ಎಂದೆನ್ನಿಸಿಕೊಳ್ಳುವನು. ಜ್ಞಾನರಹಿತನಾದ ಆ ಜೀವನು ೮೪ ಲಕ್ಷ ಯೋನಿಗಳಲ್ಲಿರುವ ಕಷ್ಟದಾಯಕ ಯೋನಿಗಳಲ್ಲಿ ಜನ್ಮ ತಾಳುವನು. ಹಾಗು ಅವನು ಜನ್ಮ ತಾಳಿದಷ್ಟು ಸಂಖ್ಯೆಗೆ ಸರಿಯಾಗಿರುವಷ್ಟು ನಾರೆ ಆತ್ಮಘಾತುಕತನವು ಆತನಿಗೆ ಉಂಟಾಗುತ್ತದೆ. ಕರಡಿ ಮಂಗ, ನಾಯಿ, ಕಾಗೆ, ಕೋಳಿ, ಕುದುರೆ, ಎತ್ತು, ಎಮ್ಮೆ, ಹಂದಿ ಮುಂತಾದ ನೀಚಯೋನಿಗಳಲ್ಲಿ ಜ್ಞಾನವು ದೊರಕುವದಿಲ್ಲ. ಇದು ಅವಗತವಿದ್ದರೂ ಮೂಢ–ಮಂದಮತಿಗಳು— 'ನರದೇಹವು ಅಳಿದು ಹೋದರೂ ಮರುಜನ್ಮದಲ್ಲಿ ನರದೇಹವೇ ಒದಗುವದು' ಎಂಬದಾಗಿ ಆಶೆಯಿಂದ ಬದ್ಧರಾಗುವರು. ಈ ಪ್ರಕಾರದ ವಿಶ್ವಾಸದಿಂದ ಆಶೆಪಡುವವರಿಗೆ ಲಜ್ಜೆಯಿಲ್ಲವೆಂದೇ ಹೇಳಬಹುದು. 'ನಾನು ಪರ್ವತಪ್ರಾಯವಾಗಿ ಪುಣ್ಯ ಗಳಿಸಿರುವೆನು, ಪುನಃ ಮರುಜನ್ಮದಲ್ಲಿ ನಾನು ಮನುಷ್ಯ ದೇಹಧಾರಿಯಾಗಿಯೇ ಜನಿಸುವೆನು' ಎಂಬ ದುರಾಶೆಯಿಂದ ಕೂಡಿ ತನ್ನ ಸಂಕಲ್ಪದಿಂದ ತನ್ನನ್ನೇ ಬಂಧಿಸಿಕೊಂಡು ತನಗೆ ತಾನೇ ವೈರಿಯಾಗುವನು. ಹೀಗೆ ಉಂಟಾದ ಸಂಕಲ್ಪ ಬಂಧನವು ಸತ್ಸಹವಾಸದಿಂದ ಪಡೆದ ಜ್ಞಾನ-ವಿವೇಕಗಳಿಂದ ಮಾತ್ರ ಹರಿದು ಹೋಗುವದು. ಪಂಚಭೌತಿಕಗಳೆಲ್ಲ ಚರಾಚರಗಳು ಜಗದಾಕಾರವು ಪ್ರಕೃತಿಸ್ವಭಾವಕ್ಕನುಸರಿಸಿ ಇರುವದು. ದೇಹ,ಅವಸ್ಥೆ, ಅಭಿಮಾನ, ಸ್ಥಾನ, ಭೋಗ, ಮಾತ್ರಾ, ಗುಣ, ಶಕ್ತಿ ಈ ಎಂಟು ತತ್ವಗಳು ಪ್ರತಿಯೊಂದು ದೇಹದಲ್ಲಿರುವವು. ನಾಲ್ಕು ದೇಹಗಳಿಗೆ ಒಟ್ಟು ೩೨ ತತ್ವಗಳು. ಈ ತತ್ವಗಳ ಸಂಖ್ಯೆಯ ಬಗಗೆ ಹಲವು ಮತಬೇಧಗಳು ಇರಬಹುದು. ಆದರೆ ಐಕ್ಯತೆಯ ವಿಷಯಕ್ಕೆ ಮಾತ್ರ ಸಂತರು ಸಂವಾದ ಮಾಡುತ್ತಿರುವರು. ದೇಹದಲ್ಲಿ ಪಂಚಭೂತಗಳಿದ್ದು ಆತ್ಮನು ಬೇರೆಯಾಗಿಯೇ ಇರುವನು. ಈ ಬಗ್ಗೆ ಒಂದೇ ಮತವಿದೆ. ಇಷ್ಟನ್ನೇ ಆ ಸಂತರು ಸ್ವೀಕರಿಸುವರು. ತತ್ವಗಳ ಸಂಖ್ಯೆಗಾಗಿ ವಾದವಿವಾದವು ವ್ಯರ್ಥ. ಯಾಕೆಂದರೆ ತತ್ವಗಳು ನಾಶವಾಗುವವು. ಆತ್ಮನಿಗೆ ನಾಶವಿಲ್ಲ. ಅವನು ಶಾಶ್ವತನು. ಶರೀರವೆಂದರೆ ಹಲವು ತತ್ವಗಳ ಗುಂಪು. ಸೂಕ್ಷ್ಮದೇಹದಲ್ಲಿ

೫ ಅಂತಃಕರಣಗಳು+೫ ಪ್ರಾಣಗಳು+೫ ವಿಷಯಗಳು+೧೦ ಇಂದ್ರಿಯಗಳು ಹೀಗೆಒಟ್ಟುಗೂಡಿದ ತತ್ವಗಳು ಸೂಕ್ಷ್ಮದೇಹದ ವಿವೇಕವಾಯಿತು. ಸೂಕ್ಷ್ಮ ದೇಹವನ್ನು ಕುರಿತು ಆಳವಾಗಿ ವಿಚಾರಿಸಿ ನೋಡಲು ತತ್ವಗಳೆಲ್ಲ ಬೇರೆ, ಆತ್ಮನೊಬ್ಬನು ಅವುಗಳಿಂದ ಬೇರೆ ಹೀಗೆ ನಿಶ್ಚಿತವಾಗುವದು. ಸ್ಥೂಲ ದೇಹ, ಸೂಕ್ಷ್ಮದೇಹ, ಕಾರಣದೇಹ ಮತ್ತು ಮಹಾಕಾರಣ ದೇಹ ಹೀಗೆ ನಾಲ್ಕು ಶರೀರಗಳು ಇರುವವು. ಇವೆಲ್ಲವು ಪಿಂಡದಲ್ಲಿ ವಿರಾಟ, ಹಿರಣ್ಯ ಅವ್ಯಾಕೃತ, ಮೂಲಪ್ರಕೃತಿ ಈ ನಾಲ್ಕು ಶರೀರಗಳು ಬ್ರಹ್ಮಾಂಡದಲ್ಲಿ ಹೀಗ ಒಟ್ಟು ಎಂಟು ಶರೀರಗಳು. ಇವುಗಳ ಜೊತೆಗೆ ಪ್ರಕೃತಿ ಹಾಗು ಪುರುಷ ಇವರಡು ಕೂಡಿದರೆ ಒಟ್ಟು ಹತ್ತು ದೇಹಗಳಾಗುವವು. ಈ ಎಲ್ಲ ತತ್ವಗಳು ನಾಶವಾಗುವಂಥವುಗಳಾಗಿವೆ. ಇವಕ್ಕೆ ಆತ್ಮನು ಸಾಕ್ಷೀಭೂತ ನಾಗಿ ಅವನು ಬೇರೆಯೇ ಇರುವನು. ಅವನ ಸಾಕ್ಷಿತ್ವವು ವಿಲಕ್ಷಣವಾದುದು. ಕಾರ್ಯ, ಕಾರಣ ಇವುಗಳು ಅವನ ದೃಶ್ಯಗಳಾಗಿವೆ. ಜೀವ-ಶಿವ, ಪಿಂಡ-ಬ್ರಹ್ಮಾಂಡ, ಮಾಯಾ–ಅವಿದ್ಯಾ ಹೀಗೆ ಹಲವು ವಿಷಯಗಳಿದ್ದರೂ ಆತ್ಮನು ಅವುಗಳಿಂದ ಬೇರೆಯೇ ಇರುವನು. ಈವೆಲ್ಲ ವಿಷಯಗಳು ಪಂಚೀಕರಣಕ್ಕೆ ಸಂಬಂಧಿತವಾದವು.

ಇನ್ನು ಆತ್ಮನ ಬಗೆಗೂ ನಾಲ್ಕು ಆತ್ಮಗಳೆಂದು ಹೇಳಬಹುದು. ಜೀವಾತ್ಮನು, ಶಿವಾತ್ಮನು, ಪರಮಾತ್ಮನು ಹಾಗು ನಿರ್ಮಲಾತ್ಮನು ಇವರೇ ನಾಲ್ವರು ಆತ್ಮರುಗಳು. ಉಪಾದಿ ಭಿನ್ನತೆಯಿಂದ ಇವರಲ್ಲಿ ಉಚ್ಚನೀಚತ್ವವನ್ನು ಎಣಿಸಲಾಗುವದು. ಇವು ನಾಲ್ಕೂ ಒಂದೇ ಆಗಿರುವವು. ಘಟದಲ್ಲಿ ವ್ಯಾಪಿಸಿದ ಆಕಾಶವು ಘಟಾಕಾಶವು. ಮಠದಲ್ಲಿ ವ್ಯಾಪಕ ಆಕಾಶವು ಮಠಾಕಾಶವು. ಮಠದ ಹೊರಗಿನ ಆಕಾಶವೇ ಮಹದಾಕಾಶವು. ಮತ್ತು ಉಪಾದಿಯಿಂದ ಹೊರತಾದ ಆಕಾಶವು ಚಿದಾಕಾಶವು. ಈ ಪ್ರಕಾರ ಆಕಾಶದಲ್ಲಿ ನಾಲ್ಕು ಭೇದಗಳನ್ನು ಹೇಳಿದ್ದರೂ, ಆಕಾಶವು ಒಂದೇ ಇರುವದು. ಇದರಂತೆ ಪಿಂಡದಲ್ಲಿ ವ್ಯಾಪಿಸಿದ ಬ್ರಹ್ಮಾಂಶಕ್ಕೆ ಜೀವ ಎಂಬ ಸಂಜ್ಞೆಯು. ಬ್ರಹ್ಮಾಂಡದಲ್ಲಿ ವ್ಯಾಪಿಸಿದ ಬ್ರಹ್ಮಾಂಶಕ್ಕೆ ಶಿವಾತ್ಮಾ ಎಂದೆನ್ನುವರು. ಬ್ರಹ್ಮಾಂಡದ ಹೊರಗಿನ ಬ್ರಹ್ಮಾಂಶಕ್ಕೆ ಪರಮಾತ್ಮನೆನ್ನುವರು. ಮತ್ತು ಎಲ್ಲ ಉಪಾಧಿಗಳಿಂದ ಹೊರತಾದ ಬ್ರಹ್ಮನಿಗೆ ನಿರ್ಮ

ಲಾತ್ಮ ಎಂದು ಹೆಸರು ಈ ಪ್ರಕಾರ ಬ್ರಹ್ಮನೊಬ್ಬನ ಬಗೆಗೆ ನಾಲ್ಕು ಪ್ರಕಾರಗಳನ್ನು ಹೇಳಿದೆ ಆದರೂ ಆತ್ಮನು ಮಾತ್ರ ಒಬ್ಬನೇ ಇರುವನು ಉಪಾಧಿಭೇದದಿಂದ ಆಕಾಶವು ಭಿನ್ನವಾಗಿ ತೋರಿದರೂ ಆಕಾಶವು ಒಂದೇ ಇರುವದು ಅದರಂತೆ ಉಪಾಧಿಭೇದದಿಂದ ಜೀವಶಿವಾದಿ ನಾಲ್ಕು ಪ್ರಕಾರಗಳನ್ನು ತಿಳುವಳಿಕೆಗಾಗಿ ಬೇರೆ ಬೇರೆ ಮಾಡಿ ಹೇಳಿದರೂ ಆತ್ಮನು ಒಬ್ಬನೇ ಈ ಆತ್ಮನು ಸ್ವಾನಂದಘನನಾಗಿರುವನು ಅವನು ತತ್ವಾದಿಗಳಿಲ್ಲದರಿಂದ ಬೇರೆ ಇರುವನು ಆತ್ಮನು ಒಳಹೊರಗೂ ದೃಶ್ಯನಾಗಿರುವನು ಅವನ ವರ್ಣನೆಯು ಶೇಷನಿಗೂ ಕೂಡ ಹೊಗಳಲಿಕ್ಕೆ ಬರದಂಥಾದ್ದಾಗಿದೆ ಉಪಾಧಿಯನ್ನು ಬಿಟ್ಟು ನೋಡಲು ಆತ್ಮನು ಒಬ್ಬನೇ ಹಾಗು ಭಿನ್ನರಹಿತನು ಎಂಬುದು ತಿಳಿಯುವದು ಜೀವಾತ್ಮನೊಬ್ಬನು ಒಂದರಲ್ಲಿಯ ಅಹಂಕಾರ ಯೋಗದಿಂದ ಜನನ-ಮರಣಗಳ ಚಕ್ರದಲ್ಲಿ ಸಿಕ್ಕಿರುವನು ಆದರೆ ವಿವೇಕದಿಂದ ನೋಡಲು ಅವನಿಗೆ ಜನನ-ಮರಣಗಳಿಲ್ಲ ತತ್ವಗಳ ಶೋಧ ಮಾಡಿ ತತ್ವಾತೀತನೂ, ಜನ್ಮ-ಮರಣರಹಿತನೂ, ನಿರಂಜನನೂ ಆದನಾಗಿರುವನು ಆತ್ಮನನ್ನು ಕಂಡು ಹಿಡಿಯುವಲ್ಲಿ 'ಅವನೇ ನಾನು' ಎಂಬ ಮಹಾವಾಕ್ಯದ ಅರ್ಥವನ್ನು ನಿಸ್ಸಂದೇಹವಾಗಿ ತಿಳಿದುಕೊಂಡರೆ ಅದೇ ಮೋಕ್ಷವೆನ್ನಿಸುವದು ಸಾಧುಗಳು 'ಆ ನಿರಂಜನವಸ್ತುವೇ ನೀನು' ಎಂಬ ಮಹಾವಾಕ್ಯ ಬೋಧಿಸುವರು ಅವರ ಅನುಗ್ರಹವು ಉಂಟಾದ ಕೂಡಲೇ ಮೋಕ್ಷವು. ಆತ್ಮನಿಗೆ ಬಂಧನವುಂಟೆಂದು ಮನಸಿನಲ್ಲಿ ತರತಕ್ಕದ್ದಲ್ಲ ಈ ಪ್ರಕಾರವಾಗಿ ಸತ್ಸಂಗದಿಂದ ಮೋಕ್ಷವಾಗುವದು. ಸ್ವಪ್ನದಲ್ಲಿ 'ನಾನು ಬಂಧನಕ್ಕೆ ಒಳಗಾದೆನು' ಎಂದು ಒದರುವವನು ಆ ಸ್ವಪ್ನ ನಿವೃತ್ತಿಯಾದ ನಂತರ ಅದನ್ನೇನೂ ನಿಜವೆಂದು ತಿಳಿಯುವದಿಲ್ಲ ಅದರಂತೆ ಸಂಸಾರ ಸ್ವಪ್ನದಿಂದ ಜೀವನನ್ನು ಸಂತರು ಜ್ಞಾನವಿವೇಕೋಪದೇಶಗಳಿಂದ ಸ್ವರೂಪ ಜಾಗೃತಿಗೆ ತರುವರು ಆಗ ಈ ಸ್ವರೂಪಜಾಗೃತಿಗೆ ಬಂದ ಜೀವನಿಗೆ ಮೋಕ್ಷವಾಯಿತೆಂದು ಹೇಳುವರು ಅಜ್ಞಾನವೆಂಬ ರಾತ್ರಿಯು ತೀರಿದ ಕೂಡಲೇ ಸಂಕಲ್ಪದು ಖಗಳು ನಾಶವಾಗುವವು. ಆಗ ಜೀವಿಯು ಕೂಡಲೇ ಮುಕ್ತವಾಗುವದು ಸ್ವಪ್ನ ಬಂಧನದ ನಿವೃತ್ತಿಗೆ ಜಾಗೃತಿಯ ಹೊರತು ಮುಕ್ತಮಾಡುವ ಇನ್ನೊಂದು ಸಾಧನವಿಲ್ಲ ಸಂಕ

ಲ್ಪದಿಂದ ಬಂಧನಕ್ಕೆ ಸಿಕ್ಕ ಜೀವಿಯನ್ನು ವಿವೇಕದಿಂದ ಮುಕ್ತವನ್ನಾಗಿ ಮಾಡಲು ಬರುವದು ಹೀಗೆ ಮುಕ್ತನನ್ನಾಗಿ ಮಾಡುವ ಅಧಿಕಾರಕ್ರಿಯೆಯು ಸ್ವತಃ ಮುಕ್ತರಾಗಿದ್ದ ಸಂತರಿಂದ ಪೂರ್ಣವಾಗುವದು ಮಾತ್ರ ಸಾಧ್ಯ ಆತ್ಮ ವಿವೇಕದ ಹೊರತು ಉಳಿದ ಉಪಾಯಗಳು ವ್ಯರ್ಥ ಆತ್ಮನಲ್ಲಿ ಬದ್ಧ ಹಾಗು ಮುಕ್ತ ಇವೆರಡು ಇರುವದಿಲ್ಲ ಆ ಆತ್ಮನು ಜನನ-ಮರಣಗಳ ಕಲ್ಪನೆಯನ್ನು ಮೀರಿ ಇರುವನು ಅಂದರೆ ಆತ್ಮನಿಗೆ ಜನನ ಮರಣಗಳಿಲ್ಲ" ಎಂದು ಹೇಳಿದರು

ಶ್ರೀ ರಾಮ || ೨ ಆತ್ಮದರ್ಶನ || ಗುರುಗಳು ಶಿಷ್ಯನನ್ನು ಕುರಿತು:— "ಈ ಮೊದಲು ನಿನಗೆ 'ನೀನೇ ಪರಮಾತ್ಮನೆಂದು ತಿಳಿ' ಎಂದು ನಿರೂಪಣೆ ಮಾಡಿದೆವು ಈಗ ನಿನಗೆ ಆ ಪರಮಾತ್ಮನ ಲಕ್ಷಣವನ್ನು ಹೇಳುವೆವು

"ಆ ಪರಮಾತ್ಮನಿಗೆ ಜನ್ಮ ಮೃತ್ಯುಗಳಿಲ್ಲ, ಬದ್ಧ-ಮೋಕ್ಷಗಳಿಲ್ಲ, ಅವನು ನಿರ್ಗುಣನು, ನಿರಾಕಾರನು, ಅನಂತನು, ಅಪಾರನು, ನಿತ್ಯನು, ನಿರಂತರನು ಆದರಂತ ಅವನು ಸರ್ವವ್ಯಾಪಿಯು, ಹಲವುಗಳಲ್ಲಿ ಅವನೇ ಒಬ್ಬನು ಅವನಲ್ಲಿ ಊಹಿಸಲು ಬಾರದಷ್ಟು ವಿವೇಕವಿದೆ ಈ ಪ್ರಕಾರ ಆ ಪರಮಾತ್ಮನ ಸ್ಥಿತಿಯನ್ನು ವೇದ-ಶ್ರುತಿಗಳು ಸಾರಿ ಹೇಳುತ್ತವೆ ಇಂಥ ಪರಮಾತ್ಮನನ್ನು ಭಕ್ತಿಯಿಂದ ಹೊಂದತಕ್ಕದ್ದು ಇನ್ನು ಆ ಭಕ್ತಿ ಹೇಗಿರಬೇಕೆಂದರೆ—

ಭಕ್ತಿಯು ಒಂಭತ್ತು ಪ್ರಕಾರವಿರುವದು ಅದೆಷ್ಟೋ ಭಕ್ತರು ಈ ನವವಿಧ ಭಕ್ತಿಯಿಂದ ಪುನೀತರಾಗಿರುವರು ಈ ಒಂಭತ್ತರಲ್ಲಿ ಆತ್ಮ ನಿವೇದನೆಯೆಂಬ ಭಕ್ತಿಯು ಶ್ರೇಷ್ಠವಾದದ್ದು ಅದನ್ನು ಸ್ವಾನುಭವದಿಂದ ತನ್ನಲ್ಲಿಯೇ ತಾನು ವಿಚಾರ ಮಾಡಬೇಕು ತನ್ನ ಅನುಭವವನ್ನು ತನಗೇ ಹೇಳಿಕೊಳ್ಳಬೇಕು ಈ ಆತ್ಮ ನಿವೇದನೆಯ ಮಹತ್ವವು ಮಹತ್ ಪೂಜೆಯ ಕೊನೆಯಲ್ಲಿ ದೇವನಿಗೆ ಮಸ್ತಕವನ್ನು ಅರ್ಪಿಸುವದರಿಂದ ಪ್ರಾಪ್ತವಾಗುವ ಫಲ ಮಹತ್ವದಂತೆ ಇರುವದು. ದೇವನಲ್ಲಿ ಸ್ವಲ್ಪ ಭಕ್ತಿಯನ್ನಿರಿಸಿದರೂ ಸಹ ಆ ಭಕ್ತನಿಗೆ ಪರಮಾತ್ಮನು ಕೂಡಲೆ ಮುಕ್ತಿಯನ್ನು ಕೊಡುವನು" ಎಂದು ಗುರುಗಳು ಹೇಳಲು ಶಿಷ್ಯನು—

'ನಾನು ತಮಗೆ ಹೇಗೆ ನಿವೇದಿಸಬೇಕು ? ಎಲ್ಲಿಯೊದರೂ ಹೋಗಿ ಬೀಳಲೋ ? ಅಥವಾ ದೇವನಿಗೆ ನನ್ನ ಶಿರಸ್ಸನ್ನು ಕತ್ತರಿಸಿಕೊಂಡು ಅರ್ಪಿಸಲೋ ?' ಎಂದು ಕೇಳಿದನು. ಅದಕ್ಕೆ ಗುರುಗಳು—

" 'ನಾನು ಯಾರು?' ಎಂಬ ದನ್ನು ಮೊದಲು ತಿಳಿದುಕೊಳ್ಳುವದು ಆತ್ಮ ನಿವೇದನೆಯ ಲಕ್ಷಣವು ಆ ಬಳಿಕ ನಿರ್ಗುಣ ಪರಮಾತ್ಮನನ್ನು ಅರಿತುಕೊಳ್ಳಬೇಕು ದೇವ ಹಾಗು ಭಕ್ತರನ್ನು ಶೋಧಿಸುವದರಿಂದ ಆತ್ಮನಿವೇದನವಾಗುವದು ದೇವನು ಪುರಾತನನೆಂಬುದನ್ನು ಭಕ್ತನು ತಿಳಿಯಬೇಕು ದೇವನನ್ನು ತಿಳಿಯಲು ಹೋದಾಗ ಆಗಲೇ ತದ್ರೂಪತೆಯುಂಟಾಯಿತೆಂದರೆ ಆ ದೇವ ಹಾಗು ಭಕ್ತರನ್ನು ವಿಂಗಡಿಸಲು ಬರಲಾರದು ಹೀಗೆ ದೇವನಿಂದ ವಿಂಗಡಿತನಾಗದವನೇ ಭಕ್ತನು, ಬದ್ಧನಾಗದವನೇ ಮುಕ್ತನು, ಈ ಮಾತುಗಳು ಯೋಗ್ಯವಾದವುಗಳು ಮತ್ತು ಶಾಸ್ತ್ರ ಸಮ್ಮತವಾದವುಗಳು ದೇವ ಹಾಗು ಭಕ್ತರ ಮೂಲವನ್ನು ನಿರೀಕ್ಷಿಸಲು ಅವರಲ್ಲಿ ಉಂಟಾಗಿದ್ದ ಭೇದವು ನಿರ್ಮಲವಾಗುವದು ಕೊನೆಗೆ ಎಲ್ಲ ದೃಶ್ಯಗಳಿಂದ ಹೊರತಾದ ಪರಮಾತ್ಮನೊಬ್ಬನೇ ತೋರುವನು ಆ ಪರಮಾತ್ಮನಲ್ಲಿ ಹೊಂದಿಕೆಯಾದರೆ ದ್ವೈತವು ಉಳಿಯಲಾರದು. ಹಾಗು ದೇವನು, ಭಕ್ತನು ಎಂಬ ವಿಂಗಡಿತ ತಿಳಿವು ದೂರಾಗಿ ಹೋಗುವದು ಇನ್ನು ಆತ್ಮ ನಿವೇದನೆಯ ಕೊನೆಯಲ್ಲಿ ಉಂಟಾಗುವ ಅಬೇಧ ಭಕ್ತಿಯೇ ಸಾಯುಜ್ಯ ಮುಕ್ತಿಯೆಂದು ಹೇಳಲ್ಪಡುವದು ಇದನ್ನು ಸತ್ಯವೆಂದು ಭಾವಿಸು ಸಂತರಿಗೆ ಶರಣಾಗತನಾದವನೂ ಅದ್ವೈತ ಬೋಧೆಯನ್ನು ಮನನ ಮಾಡಿಕೊಂಡವನೂ ಆಗಿರುವ ಭಕ್ತನನ್ನು ಹಿಂದಿನಿಂದ ಅವನನ್ನು ದೇವರಿಂದ ವಿಂಗಡಿಸಲು ಬರಲಾರದು ದೃಷ್ಟಾಂತವೆಂದರೆ- ನದಿಯು ಸಮುದ್ರಕ್ಕೆ ಕೂಡಿದ ಮೇಲೆ ಅದನ್ನು ಸಮುದ್ರದಿಂದ ಬೇರೆಮಾಡಿ ಹೇಳಲು ಸಾಧ್ಯವಿಲ್ಲ ಅದರಂತೆ ಸ್ಪರ್ಶಕಲ್ಲಿಗೆ ತಗುಲಿದ ಕಬ್ಬಿಣವು ಬಂಗಾರವಾದ ಮೇಲ ಪುನಃ ಅದು ಕಬ್ಬಿಣವಾಗಿ ಮಾರ್ಪಟಿಸಲಾರದು ಇವುಗಳಂತೆ ಒಮ್ಮೆ ಭಗವಂತನಲ್ಲಿ ಒಂದುಗೂಡಿದ ಬಳಿಕ ಆ ಭಕ್ತನು ದೇವನಿಂದ ಬೇರೆಯಾಗುವದು ಸಾಧ್ಯವಿಲ್ಲ ಅಂದರೆ ಅವನೇ ದೇವನು, ದೇವನೇ ಅವನು ಈ ಅವಿಭಕ್ತ ಸ್ವರೂಪನಾಗಿಬಿಡುವನು ದೇವ–ಭಕ್ತರು ಒಂದೇ

ಎಂಬ ವಿವೇಕವು ಸಾಧು ಜನರಲ್ಲಿ ಇರುವದು ಆ ಸಾಧು ಜನರೇ ಮೋಕ್ಷ ದಾಯಕರು ಇನ್ನು ಇದಿರಲಿ

ದೇವನನ್ನು ತಾನು ಭಕ್ತನಾಗಿಯೇ ಕಾಣಬೇಕು ಅಂದರೆ ಮಾತ್ರ ದೇವಸಂಪತ್ತು ಕೂಡಲೆ ಆ ಭಕ್ತನಿಗೆ ಲಭಿಸುವದು ,ಶರೀರವನ್ನೇ ನಂಬಿ ಕೊಂಡಿರುವವನು ದೇಹ ದುಃಖಗಳನ್ನು ಅನುಭವಿಸಬೇಕಾಗುವದು ಅದೇ ದೇಹಾತೀತನಾದ ಭಕ್ತನು ಪರಬ್ರಹ್ಮನನ್ನು ಹೊಂದುವನು" ಎಂದು ಗುರುಗಳು ಬೋಧಿಸಲು ಶಿಷ್ಯನು—

ದೇಹಾತೀತನೆಂತಾಗುವದು ? ಅದರಿಂದ ಪರಬ್ರಹ್ಮನನ್ನು ಹೊಂದು ವದು ಹೇಗೆ ? ದೇವ ಸಂಪತ್ತಿನ ಲಕ್ಷಣಗಳೇನು ? ಎಂದು ಕೇಳಲು ಗುರುಗಳು—

"ಪರಬ್ರಹ್ಮ ದೇಹಾತೀತ ವಸ್ತುವಾಗಿರುವನು ಆ ಪರಬ್ರಹ್ಮನನ್ನು ನೀನು ಕಾಣು ವಿದೇಹ ಸ್ಥಿತಿಯನ್ನು ಒಂದು ಹುಟ್ಟಿದ ನಿನಗೆ ದೇಹ ಸಂಗವು ಸಹನವಾಗುವದಿಲ್ಲ ವಿದೇಹ ಸ್ಥಿತಿಗಿಳಿದವರ ಬುದ್ಧಿಯನ್ನನುಲಕ್ಷಿ ಸಿಯೇ ವೇದಗಳೂ ಶಾಸ್ತ್ರಗಳೂ ಪರಮಾತ್ಮನನ್ನು ವರ್ಣಿಸಿರುವವು ಉಳಿದ ವರಿಗೆ ಉಪಯೋಗವಿಲ್ಲ

ದೈವೀ ಸಂಪತ್ತಿಗಾಗಿ ದೇಹ ಬುದ್ಧಿಯನ್ನು ಬಿಟ್ಟು ನಂತರ ತಾನೇ ದೇಹವೆಂದು ಭಾವಿಸುವವನಿಗೆ ಅಧೋಗತಿಯು ತಪ್ಪಿದ್ದಲ್ಲ ಆದ್ದರಿಂದಲೇ ಸಾಧುಗಳ ವಚನವನ್ನು ಅಪ್ರಮಾಣಗಳೆಂದು ತಿಳಿಯತಕ್ಕದ್ದಲ್ಲ ಆ ವಚನ ಗಳು ಅಸತ್ಯವೆಂದರೆ ಪಾಪವುಂಟಾಗುವದು ಇನ್ನು ಸಾಧು ವಚನಗ ಳೆಂಥವು? ಅವುಗಳನ್ನೇಕೆ ನಂಬಬೇಕು? ಎಂದು ನೀನು ಕೇಳಿದಲ್ಲಿ ಅವನೇ ನಾನು, ಆತ್ಮನು ಸ್ವಾನಂದಘನನು ಹಾಗು ಜನ್ಮರಹಿತನು' ಇದನ್ನು ನೀನು ತಿಳಿದುಕೊಳ್ಳು ಹಾಗು ಸಾಧುಗಳ ವಚನವನ್ನು ದೃಢವಾಗಿ ನಂಬು ಮಹಾ ವಾಕ್ಯವು 'ನೀನೇ ನಿರಂತರ ಬ್ರಹ್ಮನು ಎಂದು' ಎಂದು ಆ ವಾಕ್ಯದ ಇಂಗಿತವನ್ನು ತಿಳಿದುಕೊಳ್ಳು ಈ ವಚನವನ್ನು ಎಂದೂ ಮರೆಯಬೇಡ 'ದೇಹವು ಎಂದಾದರೂ ನಾಶವಾಗತಕ್ಕದ್ದು ಅದು ನಾಶವಾದ ನಂತರ ನಾನು ಅನಂತನನ್ನು ಸೇರುವೆನು,' ಎಂದು ಹೇಳುವದು ಹುಚ್ಚತನವುಮಾತು ಹಾಗೆ ತಿಳಿಯಬೇಡ ಇನ್ನೊಬ್ಬ— ಮೂರ್ಖನು 'ಮಾಯೆಯು ಕಲ್ಪಾಂತ್ಯ

ದಲ್ಲಿ ನಾಶವಾಗುವದು' ಆ ಬಳಿಕ ನನಗೆ ಬ್ರಹ್ಮಪ್ರಾಪ್ತಿಯು ಅನಾಯಾಸ ವಾಗಿಯೇ ಆಗುವದು' ಎಂದೆನ್ನುವನು ಆದರೆ ಅವನಿಗೆ ನಮ್ಮ ಉತ್ತರವೇ ನೆಂದರೆ— ಮಾಯೆಗೆ ಕಲ್ಪಾಂತವಾದಾಗ ಅಥವಾ ದೇಹವು ಮರಣಾಂತವಾ ದಾಗ ನಾನು ಪರಬ್ರಹ್ಮನನ್ನು ಹೊಂದುವೆನೆನ್ನುವ ಮಾತು ಅಪ್ರಮಾಣವಾ ದದ್ದು ಇದು ಸಮಾಧಾನಯುತವಾದದ್ದಲ್ಲ ಸಮಾಧಾನದ ಲಕ್ಷಣವೇ ಬೇರೆಯಿರುವದು ಸೈನ್ಯವೆಲ್ಲವು ಸತ್ತು ಹೋದನಂತರ ರಾಜ್ಯಪದವುಪ್ರಾಪ್ತ ವಾಗುವದು ಯೋಗ್ಯವೋ ? ಸೈನ್ಯವಿರುವಾಗಲೇ ರಾಜ್ಯಪದವನ್ನು ಅನುಭ ವಿಸುವದು ಯೋಗ್ಯವೋ ? ಇದಾವುದು ತಿಳಿಯುವದಿಲ್ಲ ಮಾಯೆಯು ಇದ್ದರೂ ಅದು ಮಿಥ್ಯವೆಂದು ತಿಳಿಯಬೇಕು ದೇಹದಿಂದ ಇದ್ದರೂ ವಿದೇಹಿತ್ವವನ್ನು ಭೋಗಿಸಬೇಕು ಇದರಲ್ಲಿಯೇ ನಿಜವಾದ ಸಮಾಧಾನವಿ ರುವದು. ರಾಜ್ಯಪದವು ದೊರೆತ ಮೇಲೆ ಸೈನ್ಯ–ಪರಿವಾರಗಳಿದ್ದರೆ ಅದೇನು ಹಾನಿಯಲ್ಲ, ಸೈನ್ಯಪರಿವಾರವು ಕಣ್ಣೆದುರಿನಲ್ಲಿ ಬಂದರೆ ರಾಜ್ಯಪದವು ನಾಶ ವಾಗುವದೆಂಬದು ಸರಿಯಲ್ಲ ಇದರಂತೆ ಆತ್ಮಜ್ಞಾನವು ಪ್ರಾಪ್ತವಾದಮೇಲೆ ದೃಶ್ಯ ಪ್ರಪಂಚದ ಭಯವಿಲ್ಲ ಆ ದೃಶ್ಯ ಪ್ರಪಂಚವು ಆತ್ಮ ಸಮಾಧಾನ ವನ್ನು ತಾನು ಸೆಳೆದುಕೊಳ್ಳುವದಿಲ್ಲ ಹೋಗ ಹೋಗುತ್ತ ಹಾದಿಯಲ್ಲಿ ಹಾವಿನಾಕಾರದ ಬೇರನ್ನು ಕಂಡಕೂಡಲೆ ಹಾವು ಎಂಬ ಭಯ ಹುಟ್ಟುವದು ಆದರೆ ಅದು ಹಾವಾಗಿರದೆ ಬೇರು ಇರುವದೆಂದು ನಿಶ್ಚಿತವಾದಮೇಲೆ ಅದಕ್ಕೆ ಅಂಜುವ ಕಾರಣವೇ ಉಳಿಯುವದಿಲ್ಲ ಅದರಂತೆ ಮಾಯೆಯು ಭಯಾನ ಕವಾಗಿ ತೋರಿದರೂ ಅದರ ಮಿಥ್ಯತ್ವವು ಗೊತ್ತಾದ ಮೇಲೆ ಮೊದಲಿನ ಯವು ಉಳಿಯುವದಿಲ್ಲ ಮೃಗಜಲವನ್ನುಕಂಡು ಅದು ನದಿಯ ಮಹಾಪೂರ್ರ ಎಂದು ಭಾವಿಸಿ ದಾಟುವದೆಂತು ? ಎಂದು ಭಯ ಪಡುವವನಲ್ಲಿ ಮೃಗಜ ಲದ ನಿಜವಾದ ವಿವೇಕ ಹುಟ್ಟಲು ಮಹಾಪೂರ ದಾಟುವ ಭಯವು ಉಳಿಯ ಲಾರದು ಭಯಂಕರವಾದ ಸ್ವಪ್ನದಲ್ಲಿ ಬೆದರಿದ ಜೀವನು ಸ್ವಪ್ನನಿವೃತ್ತಿ ಯಾಗಿ ಎಚ್ಚರಾದ ನಂತರ ಬೆದರಿಕೆ ಉಳಿಯದು ಕಲ್ಪನೆಯಿಂದ ಮಾಯೆಯು ನಾನು ಕಲ್ಪನಾತೀತ ನಿರ್ವಿಕಲ್ಪ ವಸ್ತುವು ಅಂದ ಮೇಲೆ ನನಗೆ ಕಲ್ಪನೆಯಿಂದಾಗುವದೇನು? ಕೊನೆಯಲ್ಲಿ ತಲೆದೋರಿದ ಬುದ್ಧಿಯೇ ಗತಿದಾಯಕವು ಅದಕ್ಕನುಸರಿಸಿ ನಿನ್ನ ಅಂತ್ಯದಲ್ಲಿ ನಿನ್ನ ಪ್ರಾಪ್ತಿಯೇ

ನಿನಗೆ ಸಹಜವಾಗಿ ಉಂಟಾಯಿತು ನಿನ್ನ ನಾಲ್ಕೂ ದೇಹಗಳೂ, ಜನ್ಮ ಮೂಲವಾದ ಅಹಂಕಾರವೂ, ಇವುಗಳ ಅಂತ್ಯವಾದರೂ ಅವುಗಳಿಂದ ಆತ್ಮನು ಅಲಿಪ್ತನಾಗಿಯೇ ಇರುವನು ಈ ತಿಳುವಳಿಕೆಯಿದ್ದರೆ ಮಾತ್ರ ಗತಿ ( ಮೋಕ್ಷ ) ಉಂಟಾಗುವದು ಆತ್ಮನು ಈಗತಿ ಅವಗತಿ ಅಂದರೆ ಬಂಧ ಮೋಕ್ಷಗಳಿಂದ ಹೊರತಾಗಿರುವನು ಅಲ್ಲಿ ಆತ್ಮ, ಶಾಸ್ತ್ರ, ಗುರು ಈ ಮೂರರ ಅನುಭವಗಳು ಒಂದೇ ರೂಪವಾಗುವದು ಸದ್ಗುರುವಿನ ಬೋಧೆಯಿಂದ ನಾಲ್ಕೂ ಶರೀರಗಳ ಅಂತವಾಗಿ ಸ್ವರೂಪದ ನಿಧಿಧ್ಯಾಸ ಹತ್ತುವದು ಮತ್ತು ಜೀವನು ಧ್ಯೇಯ ವಸ್ತುವಾಗುವನು ಒಳ್ಳೇ ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸಲು ಆತ್ಮನು ಶಾಶ್ವತನು ಮತ್ತು ದೃಶ್ಯವಂತೂ ಮೊದಲಿಗೇ ಇಲ್ಲ ಮಾಯೆಯು ಮಿಥ್ಯತ್ವದ ಅರಿಕೆಯಾಗುವದೂ ಅದರಂತೆ ಅದು ಅನುಭವಕ್ಕೆ ಬರುವದೂ ಇದೇ ಮೋಕ್ಷಸನ್ನಿಸುವದು ಸದ್ಗುರು ವಚನಗಳನ್ನು ಹೃದಯದಲ್ಲಿರಿಸಿಕೊಂಡು ಶ್ರವಣ-ಮನನಗಳ ಅಭ್ಯಾಸವನ್ನು ಇಟ್ಟುಕೊಂಡದ್ದಾದರೆ ಮೋಕ್ಷಾಧಿಕಾರ ಬರುವದು ಬಂಧ-ಮೋಕ್ಷ-ಮಾಯಾ-ಬ್ರಹ್ಮ ಲಕ್ಷ್ಯ ಅಲಕ್ಷ್ಯ, ಧ್ಯಾನ-ಧ್ಯಾತಾ ಇತ್ಯಾದಿ ದ್ವಂದ್ವಗಳು ಆತ್ಮನಲ್ಲಿ ಲೀನವಾಗುವವು ಆ ಆತ್ಮನೇ ಮೋಕ್ಷ ಸ್ವರೂಪನು ಆ ನಿರ್ವಿಕಲ್ಪನಲ್ಲಿ ಕಲ್ಪನೆಗಳು ಅಡಗುವವು ಆಗ ಕೇವಲ ಜ್ಞಪ್ತಿ ಮಾತ್ರ ಸೂಕ್ಷ್ಮ ಬ್ರಹ್ಮ ಉಳಿಯುವದು ಭವವೆಂಬ ಮೃಗಜಲವು ಬತ್ತಿಹೋಯಿತು, ಕಲ್ಪಿತ ಬಂಧನವು ಬಿಡುಗಡೆಯಾಯಿತು, ಜನ್ಮವಾಗದವನು ಜನ್ಮದು ಖದಿಂದ ಮುಕ್ತನಾದನು, ಅದ್ವೈತದ ದ್ವೈತವು ಹರಿಯಿತು, ನಿಸ್ಸಂಗದ ತರುವಾಯ ಸಂಗದ ಬೇನೆಯು ವಾಸಿಯಾಯಿತು, ನಿಷ್ಪ್ರಪಂಚದ ಪ್ರಪಂಚವು ಬಿಟ್ಟಿತು, ಏಕಾಂತವು ಏಕಾಂತದೊಡನೆ ಬೆರೆಯಿತು, ಅನಂತನಿಗೆ ಅನಂತದ ಅಂತವು ದೊರಕಿತು ಅಮೃತವು ಅಮರವಾಯಿತು, ನಿರ್ಗುಣವು ನಿರ್ಗುಣವಾಯಿತು, ಸಮೀಪದಲ್ಲಿದ್ದು ತಪ್ಪಿಸಿಕೊಂಡಿತ್ತು ಅದು ಈಗ ಸಿಕ್ಕಿತು ದುಃಸ್ವಪ್ನದಲ್ಲಿ ಕುಲಗೆಟ್ಟ ಬ್ರಾಹ್ಮಣನು ಬ್ರಾಹ್ಮಣತ್ವ ಪಡೆದನು

ಇವೆಲ್ಲ ಹೇಳಿಕೆಗಳು 'ತನಗೆ ತಾನೇ ಸಿಕ್ಕನು' ಎಂಬದರ ಜ್ಞಾನವಾಗುವದು ಇಂಥ ಪುರುಷನ ಅಂದರೆ ತನಗೇ ತಾನೇ ಸಿಗುವಂಥವನ ಲಕ್ಷಣಗಳನ್ನು ಮುಂದಿನ ಸಮಾಸದಲ್ಲಿ ನಿರೂಪಿಸುವೆವು" ಎಂದು ಗುರುಗಳು ಹೇಳಿದರು

ಶ್ರೀ ರಾಮ ॥ ೯ ಸಿದ್ಧಲಕ್ಷಣ ॥ ಗುರುಗಳು ಶಿಷ್ಯನಿಗೆ—"ಸಿದ್ಧನನ್ನು ತಿಳಿಯಲಿಕ್ಕೆ ಒರುವ ಸಿದ್ಧಲಕ್ಷಣಗಳನ್ನು ಹೇಳುವೆವು

ವೇಹದಒಳಸೇರಿದ ಅಮೃತದಿಂದ ಪುರುಷನಬಾಹ್ಯಾಂಗದಮೇಲೆಯೂ ಆತನ ಲಕ್ಷಣಗಳು ಎದ್ದು ಕಾಣುವವು ಅವನು ದಿವ್ಯದೇಹಿಯಾಗುವನು 'ಸಿದ್ಧ' ಎಂದರೆ ಬ್ರಹ್ಮಸ್ವರೂಪನು ಬ್ರಹ್ಮ-ಸಿದ್ಧರಲ್ಲಿ ಭೇದವಿಲ್ಲ ಅದು ಹೀಗೆ ಅನಿರ್ವಾಚನೀಯವಾದರೂ ತಿಳಿಯುವದಕ್ಕಂದು ಹೇಳುವೆವು ಸಾಧು ಪುರುಷನ ಮುಖ್ಯ ಲಕ್ಷಣವೆಂದರೆ— 'ಅಖಂಡ ಸಾವಧಾನವು' ಅವನು ಜನರಲ್ಲಿ ಇದ್ದರೂ ಜನರಿಂದ ಹೊರತಾಗಿಯೇ ಇರುವನು ಅವನಿಗೆ ಪ್ರಾಪಂಚಿಕ ಚಿಂತೆಯಿರುವದಿಲ್ಲ ಬೋಧೆಯ ವಿಷಯದಲ್ಲಿ ಪ್ರೇಮವನ್ನು ತಾಳುವನು ಸಿದ್ಧನ ಬಾಹ್ಯವರ್ತನೆಯು ಸಾಧಕನಂತೆಯೇ ಇರುವದು ಅವನ ಶರೀರವು ಚಂಚಲಕ್ರಿಯೆಗಳನ್ನು ಅನುಸರಿಸಿದರೂ ಅದು ಅಲ್ಲಾಡಿದರೂ, ನಡೆದರೂ ಕಡೆಗೆ ಅದು ನಿಜವಾಗಿ ನಿಶ್ಚಲವಾಗಿರುವದು ಅವನ ಅಂತಸ್ಥಿತಿಯು ಮುಖ್ಯವಾಗಿರುವದು ಭಗವಂತನಲ್ಲಿ ಚಿತ್ತವನ್ನಿರಿಸಿದವನೇ ಸಾಧುವು ಹೊರಗೆ ಹೇಗೆ ವರ್ತಿಸಿದರೂ ಸಾಧುವಿನ ಹೃದಯವು ಸ್ವರೂಪದಲ್ಲಿ ಮಿಲನಗೊಂಡಿರುವದು ಅರಸನು ರಾಜ್ಯದ ಮೇಲೆ ಇದ್ದರೆ ಅವನು ರಾಜ್ಯೈಶ್ವರ್ಯದಿಂದ ಯುಕ್ತನಾಗಿರುವನು ಅದರಂತೆ ಸಾಧುವು ಸ್ವರೂಪಾಕಾರ ಹೊಂದಿದರೂ ಅವನಲ್ಲಿ ಸಿದ್ಧಲಕ್ಷಣಗಳು ಒಡಮೂಡಿರುವವು ಸ್ವರೂಪಾನುಸಂಧಾನವನ್ನು ಬಿಟ್ಟು ಇನ್ನಿತರ ಸಾಧನಗಳ ಅಭ್ಯಾಸಮಾಡಿಕೊಂಡು ಸಿದ್ಧಲಕ್ಷಣಗಳನ್ನು ತಂದುಕೊಳ್ಳುವದು ಅತಿ ಕಠಿಣವಾದುದು ಅಭ್ಯಾಸಗಳಗಳಲ್ಲಿ ತಾನು ನಿರ್ಗುಣ ಸ್ವರೂಪ ಹೊಂದಿಕೊಂಡಿರುವ ಅಭ್ಯಾಸವೇ ಶ್ರೇಷ್ಠ ತರವೆಂದು ಹೇಳಬಹುದು ಇದೇ ಮುಖ್ಯವಾದ ಅಭ್ಯಾಸವು ಸಾಧಕನು ಶ್ರವಣಾದಿಗಳಿಂದ ಸ್ವರೂಪಾಕಾರಹೊಂದಿ ಈ ಸಿದ್ಧಲಕ್ಷಣಗಳ ಅಭ್ಯಾಸವನ್ನು ಮಾಡಬೇಕು ಈ ಸಾಧುಲಕ್ಷಣಗಳನ್ನು ಕೇಳಿ ಸಾಧಕನಲ್ಲಿ ಸಮಾಧಾನವುಂಟಾಗುವದು ಸಾಧುವಿನ ಎಲ್ಲ ಬಯಕೆಗಳು ಸ್ವರೂಪದ ಕಡೆಗೆ ತುಂಬಿರುವದರಿಂದ ಅವನಲ್ಲಿ ಕಾಮವಿರುವದಿಲ್ಲ ಕೈಬಿಟ್ಟು ದ್ರವ್ಯ ಹೋದರೆ ಕ್ರೋಧ ಬರುವದು ಆದರೆ ಸಾಧುವಿನಲ್ಲಿದ್ದ ಶಾಶ್ವತನಿಧಿಯು ಎಂದೂ ಹೋಗುವದಿಲ್ಲ ಅಂದ ಮೇಲೆ ಅವನಿಗೆ ಕ್ರೋಧವುಂಟಾಗುವದು

ಲಕ್ಷ್ಯವಿಲ್ಲ ನಾಶವಾಗುವ ಪದಾರ್ಥಗಳ ವಿಷಯದಲ್ಲಿ ವಿಚಾರವಂತನಿಗ ಕಾಮ-ಕ್ರೋಧಾದಿಗಳ ವಿಕಾರವಾಗುವದಿಲ್ಲ ಸಾಧುಗಳಲ್ಲಿ– 'ತನ್ನಹೊರತು ಇನ್ನೊಂದಿಲ್ಲ' ಎಂಬ ಅದ್ವಯ ಭಾವನೆಯಿರುವದ ಇದರಿಂದಲೇ ವಾದ ವಿವಾದಗಳು ಹರಿದು ಹೋಗುವವು ಸಾಧುವು ಸ್ವರೂಪದಿಂದ- ನಿರ್ವಿಕಾರನು ಆದ್ದರಿಂದ ಅವನಲ್ಲಿ ತಿರಸ್ಕಾರ, ಮಾತ್ಸರ್ಯ, ದಂಭ ಮುಂತಾದ ವಿಕಾರಗಳು ಇರುವದಿಲ್ಲ ದೃಶ್ಯವಾದವೆಲ್ಲ ಮಿಥ್ಯಗಳೆಂಬ ಬೋಧೆಯು ಸಾಧುವಿನಲ್ಲಿ ದೃಢತೆಗೊಂಡಿರುವದರಿಂದ ಮತ್ತು ಬ್ರಹ್ಮಾಂಡವೇ ಆತನ ಮನೆಯಾಗಿರುವದರಿಂದ ಅವನಿಗೆ ಪ್ರಪಂಚ ಹಾಗು ಪಂಚಭೂತಗಳ ಜೊಂಜಾಟವು ಇರುವದಿಲ್ಲ ಇದಕ್ಕಾಗಿಯೇ ಸಾಧುವು ನಿಷ್ಪ್ರಪಂಚನು ದೃಶ್ಯಗಳೆಲ್ಲ ಮಿಥ್ಯಗಳೆಂದು ಅರಿತವನಾದ. ತನ್ನ ವಾಸನೆಯನ್ನು ಶುದ್ಧಸ್ವರೂಪದಲ್ಲಿ ಸಮರಸವಾಗಿ ಬೆರಸಿದವನಾದ ಆ ಸಾಧುವಿಗೆ ಇದಕ್ಕಿಂತಲೂ ಹೆಚ್ಚಿನ ಲಾಭದ ಆಶೆಯೇಸಿದೆ? ಅವನಲ್ಲಿ ಸ್ವಾರ್ಥವಿರುವದಿಲ್ಲ ವಿವೇಕದಿಂದ ದೃಶ್ಯವನ್ನು ಬಿಟ್ಟು ಸ್ವರೂಪದಲ್ಲಿ ಸ್ಥಿರತಗೊಂಡ ಸಾಧುವಿಗೆ ಶೋಕವೆಂತಿರಬೇಕು? ಶೋಕದಿಂದ ವೃತ್ತಿಗ ವ್ಯಥೆಯುಂಟು ಸಾಧುವು ನಿವೃತ್ತಿಪುರುಷನಾದುದರಿಂದ ಅವನಿಗೆ ಶೋಕಗಳಿಲ್ಲ ಸಾಧುವು ಮೋಹಕ್ಕೆ ಸಿಲುಕದ ನಿರ್ಮೋಹನು ಅದ್ವಯನು ಹೀಗೆಂದ್ವಯನಾದವನಿಗೆ ದ್ವೈತವಿಲ್ಲ ಆದ್ದರಿಂದ ಭಯವೂ ಇಲ್ಲ ಅವನು ಸತತವೂ ನಿರ್ಭಯನು ಎಲ್ಲ ಚರಾಚರಗಳು ನಾಶವಾದರೂ ಪರಬ್ರಹ್ಮ, ಅನಂತ ಅಪಾರ ಹಾಗು ಅನಂತ ಸ್ವರೂಪವುಳ್ಳವನು ಇಂಥ ಸಾಧುವು ಶಾಶ್ವತನಾಗಿಯೇ ಇರುವನು ತಾನು ತನ್ನಲ್ಲಿ ಅಭೇದನೆಂದು ಅರಿತ ಸಾಧುವಿಗೆ ದ್ವಂದ್ವಗಳ ಭೇದವಿಲ್ಲ ಮತ್ತು ದೇಹಬುದ್ಧಿಯ ಸಂತಾಪವೂ ಇಲ್ಲ ಮೂರೂ ಗುಣಗಳ ಬಾಧೆಯು ಇವನಿಗಿಲ್ಲ ಸಾಧುವು ಗುಣಾತೀತನು ದೃಶ್ಯವಿಲ್ಲ. 'ತನಗೆ ತಾನೇ ಒಬ್ಬನು' ಎಂದ ಮೇಲೆ ಇವನಿಗೆ ಸ್ವಾರ್ಥ ದ ಖ, ಶೋಕ ಅವಿವೇಕ ಇವು ಇರಲಾರವು ಅವನಲ್ಲಿ ಯಾವಾಗಲೂ ಪಾರಮಾರ್ಥಿಕ ಬಯಕೆಯಿರುವದು ಅದರಿಂದಲೇ ಅವನಲ್ಲಿ ದುರಾಶೆಗಳಿರದೆ ನೈರಾಶೆಯೇ ಕಂಡು ಬರುವದು ಇದೇ ಸಾಧುಗಳನ್ನರಿಯುವದರ ಗುಟ್ಟು ಸಾಧುವನ್ನು ಗಗನಕ್ಕೆ ಹೋಲಿಸಬಹುದ ಯಾಕೆಂದರೆ ಅವನು ಗಗನದಂತೆ ಮೃದವಾಗಿರುವನು ವ್ಯಾಪಕನಾಗಿರು

ವನು, ಹಾಗು ಸಂಗರಹಿತನಾಗಿರುವನು ಅವನು ಸದಾ ಸ್ವರೂಪದಲ್ಲಿ ನಿರತನಾಗಿರುವದರಿಂದ ಅವನು ವೀತರಾಗಿ ಅಂದರೆ ವಿಷಯಗಳಲ್ಲಿ ರಾಗ ರಹಿತನು ಆಗಿರುವನು ದೇಹ ಬುದ್ಧಿಯನ್ನೇ ಬಿಟ್ಟಿದ್ದ ಮೇಲೆ ಅವನಿಗೆ ಚಿಂತೆ ಯಾತರದು? ಅವನು ಸದಾ ಸ್ವರೂಪದಲ್ಲಿರುವದರಿಂದ ಅವನಿಗೆ ಏನೊಂದು ಉಪಾಧಿಯಿಲ್ಲ ಸಾಧುವು ಸತತವೂ ಉಪಾಧಿರಹಿತನು ಸಂಗ ರಹಿತನು, ಅಲಕ್ಷ್ಯ ವಸ್ತುವನ್ನು ನಿರಂತರವಾಗಿ ಲಕ್ಷಿಸುವವನು, ಅವನಿ ಗಿಂತಲೂ ಹೆಚ್ಚಿನ ದಕ್ಷರಿಲ್ಲ ಆ ಸಾಧುವೇ ಪಾರಮಾರ್ಥಿಕ ವಿಚಾರದಲ್ಲಿ ಕೇಂದ್ರಸ್ಥನು. ಸ್ವರೂಪ ನಿರ್ಮಲನಲ್ಲಿ ಸ್ವರೂಪಗೊಂಡಿರುವ ಸಾಧುವು ನಿರ್ಮಲನೇ ಆಗಿರುವನು 'ಸ್ವರೂಪದಲ್ಲಿರುವದು' ಇದೇ ಎಲ್ಲ ಧರ್ಮಗ ಳಲ್ಲಿ ಶ್ರೇಷ್ಠ ಧರ್ಮವಾಗಿರುವದು ಸಾಧುಗಳನ್ನು ತಿಳಿಯುವದಕ್ಕೆ ಇದು ಉತ್ತಮ ಗುರುತಾಗಿದೆ ಸಾಧಕನು ಇಂಥ ಸಾಧುವಿನ ಸಹವಾಸ ಕೈಕೊಂಡರೆ ಮಾತ್ರ ಆ ಸಾಧಕನಲ್ಲಿ ತನಗೆ ತಾನೇ ಸ್ವರೂಪಸ್ಥಿತಿಯು ಉಂಟಾಗುವದು ಶ್ರವಣ, ನಿರೂಪಣೆ, ಅಭ್ಯಾಸದಿಂದ ಈ ಮೇಲಿನ ಎಲ್ಲ ಲಕ್ಷಣಗಳು ಸಾಧಕನಲ್ಲಿಸೇರುವವು ಆದರೆ ಸ್ವರೂಪಾಕಾರವಾಗಿದ್ದುಕೊಂಡು ಸ್ವರೂಪಾಕಾರ ಪಡೆದ ಸಾಧುವಿನ ಸಹವಾಸ ಕೈಕೊಳ್ಳುವದು ಉತ್ತಮವು ಸ್ವರೂಪದಲ್ಲಿರುವಾಗಲೇ ನಿರಾಯಾಸವಾಗಿ ಸ್ವರೂಪ ಸ್ಥಿತಿಯು ಉಂಟಾ ಗಿಯೇ ಬಿಡುವದು

ಇನ್ನು ಸ್ವರೂಪವು ಒಂದೇ. ಹಾಗು ಅದರ ಅನುಭವವೂ ಒಂದೇ ಈ ವಿಷಯುವನ್ನೇ ಮುಂದಿನ ಸಮಾಸದಲ್ಲಿ ಹೇಳುವೆವು' ಎಂದರು

ಶ್ರೀ ರಾಮ || ೧೦ ಶೂನ್ಯತ್ವ ನಿರಸನ || ಶ್ರೀ ಗುರುಗಳು ಶಿಷ್ಯನನ್ನು ಕುರಿತು—"ಬೇರೆ ಬೇರೆ ಜನರ ಅನುಭವಗಳನ್ನು ಅವುಗಳಲ್ಲಿರುವ ವ್ಯತ್ಯಾ ಸಗಳನ್ನು ಕೌತುಕದಿಂದ ಕೇಳಬೇಕು" ಎಂದು ಹೇಳಹತ್ತಿದರು ಈ ಜನ ರುಗಳಲ್ಲಿ ಸುಜ್ಞರು ಅಜ್ಞರು ಹೀಗೆ ಎರಡು ವರ್ಗ ಕಲ್ಪಿಸಿಕೊಂಡು ಮೊದಲು ಬೇರೆ ಬೇರೆ ಅಜ್ಞರ [ಪ್ರಾಪಂಚಿಕರ] ಮತಗಳನ್ನು ಬೇರೆ ಬೇರೆಯಾಗಿ ಹೇಳುವೆವು ನಂತರ ಸುಜ್ಞಾನಿಗಳ ಅನುಭವಗಳನ್ನು ವಿವರಿಸುವೆವು ಅಜ್ಞಾನಿಗಳಲ್ಲಿ—

೧ನೆಯವನು—ಸಂಸಾರದಿಂದಲೇ ಪರಮಾರ್ಥ ದೊರಕುವದು ಹೆಂಡಿರು ಮಕ್ಕಳುಗಳೆಲ್ಲ ದೇವನ ಜೀವನಾಗಿರುವದು ಅಂದ ಮೇಲೆ ಅವರ ಸೇವೆಯೇ ದೇವರ ಸೇವೆಯು

೨ನೆಯವನು—ಈ ವಿಚಾರವು ತಪ್ಪು ಹೊಟ್ಟೆಯ ಪಾಡಿಗಾಗಿ ಲೋಭ ಹುಟ್ಟಿ ಆದ ಕುಟುಂಬದ ಸೇವೆಗೆ ಪ್ರವೃತ್ತರನ್ನಾಗಿ ಮಾಡು ವದು

೩ನೆಯವನು—ಸಂಸಾರವನ್ನು ಸುಖದಿಂದ ಸಾಗಿಸಬೇಕು ಏನಾ ದರೂ ದಾನ-ಪುಣ್ಯಗಳನ್ನು ಮಾಡಿ ಸದ್ಗತಿ ದೊರಕಿಸಬೇಕು

೪ನೆಯವನು—ಸಂಸಾರವು ಸುಳ್ಳು ಬೈರಾಗಿಯಾಗಿ ದೇಶಾಟನ ಮಾಡಬೇಕು ಇದರಿಂದ ಸ್ವರ್ಗಲೋಕದ ಮಾರ್ಗವು ಸುಗಮವಾಗುವದು

೫ನೆಯವನು—ಎಲ್ಲಿಗೂ ಹೋಗಬಾರದ ವ್ಯರ್ಥವಾಗಿ ಸಂಚರಿಸ ಬಾರದು ತನ್ನ ಆಶ್ರಮದಲ್ಲಿಯೇ ಇದ್ದುಕೊಂಡು ಆಶ್ರಮ ಧರ್ಮವನ್ನಾ ಚರಿಸಬೇಕು

೬ನೆಯವನು—ಎಲ್ಲಿಯ ಧರ್ಮ? ಈ ಸಂಸಾರದಲ್ಲಿದ್ದುಕೊಂಡು ಹಲವು ಕರ್ಮಗಳನ್ನಾಚರಿಸುವದರಿಂದ ಅಧರ್ಮವೇ ಪ್ರವರ್ತಿಸುವದು

೭ನೆಯವನು—ಮಾನವನಲ್ಲಿ ಸದ್ವಾಸನೆಯಿರಬೇಕು ಇದೇ ಒಳಿತು ಇದರಿಂದಲೇ ಸಂಸಾರದಿಂದ ಅನಾಯಾಸವಾಗಿ ಪಾರಾಗಲು ಬರುವದು

೮ನೆಯವನು—ಸಾಂಸಾರಿಕ ಕ್ರಿಯೆಗಳಿಗೆಲ್ಲ ಭಾವವೇ ಕಾರಣವು ಸದ್ಭಾವದಿಂದ ದೇವನನ್ನು ಪಡೆಯಬೇಕು ಇದರ ಹೊರತು ಉಳಿದವೆಲ್ಲ ವ್ಯರ್ಥ

೯ನೆಯವನು—ಹಿರಿಯರಾದವರಲ್ಲಿ ದೇವತ್ವಭಾವವನ್ನು ತಿಳಿಯ ಬೇಕು ತಾಯಿತಂದೆಗಳನ್ನು ಒಂದೇಭಾವದಿಂದ ಪೂಜಿಸುತ್ತ ಹೋಗಬೇಕು

೧೦ನೆಯವನು—ದೇವ-ಬ್ರಾಹ್ಮಣರನ್ನು ಪೂಜಿಸಬೇಕು ಸಾಕ್ಷಾತ್ ನಾರಾಯಣನು ವಿಶ್ವಜನಕ್ಕೆಲ್ಲ ಪ್ರೀತಿಯ ತಂದೆಯಾಗಿರುವನು

೧೧ನೆಯವನು—ಶಾಸ್ತ್ರಗಳನ್ನು ಅವಲೋಕಿಸಬೇಕು ಅವು ದೇವ ರಿಂದ ಬೋಧಿತ ವಚನಗಳು ಆ ಶಾಸ್ತ್ರವಿಧಿಯಂತಾಚರಿಸಿದರೆ ಪರಲೋಕ ಪ್ರಾಪ್ತಿ

೧೨ನೆಯವನು — ಕೇವಲ ಶಾಸ್ತ್ರಾವಲೋಕನ ಮಾಡುವದರಿಂದ ಉಪಯೋಗವಾಗುವದಿಲ್ಲ ಆ ಶಾಸ್ತ್ರಗಳ ಜೊತೆಗೆ ಸಾಧು ಜನರಿಗೆ ಶರಣು ಹೋಗಬೇಕು

೧೩ನೆಯವನು — ಎಲ್ಲರಿಗೂ ಹೊಟ್ಟೆಯಿದೆ ಕೇವಲ ನಿನ್ನ ಸಾಡಿಗಾಗಿ ಪ್ರಯತ್ನಿಸದೆ ಎಲ್ಲರನ್ನು ದಯೆಯಿಂದ ಕಾಣು ಗತಿದಾಯಕವಾದ ಈ ಭೂತದಯೆಯನ್ನು ಸಂಗ್ರಹಿಸು

೧೪ನೆಯವನು:— ಯಾವಾಗಲೂ ಒಂದೇ ಆಚರಣೆಯಿರಬೇಕು ಅಂತ್ಯಕಾಲದಲ್ಲಿ ಸರ್ವೋತ್ತಮ ದೇವನ ನಾಮ ಸ್ಮರಿಸಬೇಕು ಇದೇ ಒಳ್ಳೆಯದು

೧೫ನೆಯವನು:— ಪುಣ್ಯ ಸಂಚಿತವಿದ್ದರೆ ಮಾತ್ರ ನಾಮಸ್ಮರಣೆಯ ಫಲ ಸಿಗುವದು ಇಲ್ಲವಾದರೆ ಅಂತ್ಯಕಾಲದಲ್ಲಿ ಮೋಸಹೋಗಬೇಕಾಗುವದು

೧೬ನೆಯವನು:— ಚಿರಜೀವಿಯಾಗಿಯೇ ಇರಬೇಕು ತೀರ್ಥ ಸಂಚರಣೆಯಿಂದ ಸಾರ್ಥಕರಾಗತಕ್ಕದ್ದು

೧೭ನೆಯವನು:— ತೀರ್ಥಾಟನವೆಂದು ಕಲ್ಲು-ನೀರುಗಳ ದರ್ಶನ ತೆಗೆದುಕೊಳ್ಳುತ್ತ ಒಂದೆಡೆಯಿಂದ ಇನ್ನೊಂದೆಡೆಗೆ ಅಡ್ಡಾಡುವದು ಕಷ್ಟದಾಯಕವಲ್ಲದೆ ನಿರುಪಯುಕ್ತವು

೧೮ನೆಯವನು:— ಬಹಳ ಮಾತಿನಿಂದ ಪ್ರಯೋಜನವಿಲ್ಲ ಜಗತ್ತಿನ ಮೇಲೆ ಅಗಾಧ ಮಹಿಮೆಯುಳ್ಳ ಸ್ಥಾನಗಳಿರುವವು ಕೇವಲ ಅವುಗಳ ದರ್ಶನದಿಂದ ಪಾಪಗಳು ದಹಿಸುವವು

೧೯ನೆಯವನು:— ತೀರ್ಥ ಸಂಚಾರಣೆಗೆ ಮನಸ್ಸು ಹಾಕದೆ ದೇವ ಕೀರ್ತನ ಭಕ್ತಿಯನ್ನು ಅನುಸರಿಸಬೇಕು

೨೦ನೆಯವನು:— ಯೋಗಾಭ್ಯಾಸವು ಶ್ರೇಷ್ಠವಾಗಿರುವದು ಮುಖ್ಯವಾಗಿ ಅದನ್ನೇ ಸಾಧಿಸಿಕೊಂಡು ದೇಹವನ್ನು ಅಮರಸ್ಥಿತಿಗೆ ಉಂಟುಮಾಡಿಕೊಳ್ಳಬೇಕು

೨೧ನೆಯವನು— ಇಷ್ಟೆಲ್ಲ ಏತಕ್ಕೆ ? ಯೋಗಸಾಧನೆಗೆ ದೀರ್ಘ ಕಾಲವು ಹಿಡಿಯುವದು ಆದ್ದರಿಂದ ಭಕ್ತಿ ಮಾರ್ಗವನ್ನೇ ಅನುಸರಿಸಿ ಸಾಧ್ಯ ದೊರಕಿಸಿಕೊಳ್ಳಬೇಕು

೨೨ನೆಯವನು —ಎಲ್ಲ ಮಾರ್ಗಗಳಲ್ಲಿ ಜ್ಞಾನ ಮಾರ್ಗವು ಶ್ರೇಷ್ಠ ವಾದುದು ಸಾಧನದಿಂದ ನಿರಂತರ ಮುಕ್ತಿಯನ್ನು ಪಡೆಯಬೇಕು

೨೩ನೆಯವನು:—ಪಾಪದಾಯಕಗಳಾದ ನಿಂದೆ, ದ್ವೇಷ, ದುಷ್ಟಸಂಗ ಇವುಗಳನ್ನು ತ್ಯಾಗ ಮಾಡಿದರೆ ಮುಂದಿನ ಮಾರ್ಗ ಸುಗಮವಾಗುವದು

೨೪ನೆಯವನು—ನಿಂದಾ ದ್ವೇಷಗಳಿರಬಾರದು ದುಷ್ಟರ ಸಂಗವನ್ನು ನಾವಕಾಶವಾಗಿ ಬಿಟ್ಟು ಬಿಡಬೇಕು

೨೫ನೆಯವನು:—ನಮಗೆ ತುತ್ತು ನೀಡಿ ಸಲುಹಿದವನ ನಮ್ಮುಖದ ಲ್ಲಿಯೇ ಸತ್ತು ಹೋಗಬೇಕು ಅದರಿಂದ ಕೂಡಲೇ ಉಂಟಾಗುವ ಮೋಕ್ಷ ಪದವನ್ನು ಹೊಂದಬೇಕು

೨೬ನೆಯವನು —ಮೊದಲು ಆಹಾರ ಸಂಗ್ರಹವಿರಬೇಕು ನಂತರ ಭಕ್ತಿ-ಮುಕ್ತಿ ಇಂತು ಪ್ರಾಪಂಚಿಕ ಜೀವನದ ಬಗೆಗೆ ಹಲವು ಮತಗಳು ವ್ಯಕ್ತಗೊಳಿಸಲ್ಪಡುತ್ತವೆ

ಇನ್ನು ಸುಜ್ಞನರಾದವರ ಅಭಿಪ್ರಾಯಗಳು ಭಿನ್ನ ಭಿನ್ನವಾಗಿ ಇಂತಿ ರುವವು ಒಬ್ಬನು ತಪಸನ್ನಾಚರಿಸಬೇಕೆಂದರೆ ಇನ್ನೊಬ್ಬನು ಮೊದಲು ಇಂದ್ರ ಪದವನ್ನು ದೊರಕಿಸಿಕೊಳ್ಳಬೇಕೆನ್ನುವನು ಮೂರನೆಯವನು ವೇದಗಳನ್ನೋದಬೇಕು ಎಂದರೆ ೪ನೆಯವನು ವೇತಾಳವನ್ನು ಒಲಿಸಿಕೊಂಡರೆ ಸ್ವರ್ಗದ ದೇವತೆಗಳು ಒಲಿಯುವರು ಎನ್ನುವನು

ಇದರಂತೆ ಮುಂದೆ ಹಲ-ಕೆಲವರು ತಮ ತಮಗೆ ತಿಳಿದಂತೆಅಘೋರ ಮಂತ್ರ, ಮೃತ್ಯುಂಜಯ ಜಪ, ವಟುಭೈರವ ಸ್ಮರಣೆ, ಭದ್ರಕಾಳಿಯ ಪೂಜೆ, ಗಣೇಶ ಪೂಜೆ, ಹರಿಹರ ಪೂಜೆ ಹೀಗೆ ತಮ್ಮ ಮತ ಹೇಳುವರು ಮತ್ತೂ ಕೆಲವರು 'ಪ್ರಯತ್ನ ಮಾಡಬೇಕು' 'ದೇವರ ಮೇಲೆ ಭಾರ ಹಾಕಬೇಕು' 'ಜ್ಞಾನಿಗಳ ಅಂತವನ್ನು ನೋಡುವ ದೇವನೆಂಥವನು?' 'ಕಲಿಯುಗವು' ಈ ಅಜ್ಞಾನಯುಕ್ತ ಮಾತುಗಳಿಂದ ತಮ್ಮ ಮತ ಪ್ರದರ್ಶನ ಮಾಡುವರು

ಮತ್ತೆ ಕೆಲವರು ಜ್ಞಾನಿಗಳು—

'ಶ್ರೀಹರಿ ಭಕ್ತಿಯಿಂದ ಸದ್ಗತಿ'
'ಕರ್ಮ ಮಾರ್ಗದಿಂದ ಬ್ರಹ್ಮಪ್ರಾಪ್ತಿ'
'ಭೋಗದಿಂದ ಜನನ-ಮರಣ ಬಿಡುವದಿಲ್ಲ'

'ಎಲ್ಲವೂ ಬ್ರಹ್ಮಮಯವು'
'ಧರ್ಮಾಲಂಡತನದ ಮಾತು ಆಡಕೂಡದು'
'ಎಲ್ಲ ನಾಶವಾದ ಮೇಲೆ ಉಳಿಯುವದೇ ಬ್ರಹ್ಮ'
'ಸರ್ವ ಬ್ರಹ್ಮ ಹಾಗು ಕೇವಲ ಬ್ರಹ್ಮ ಹೀಗೆ ಭೇದವಿರುವದ ರಿಂದ ಅನುಭವಗಳೂ ಬೇರೆ ಬೇರೆ'
'ನಾನು ಸಾಕ್ಷಿತ್ವದಿಂದ ಇರಬೇಕು'
'ದೃಶ್ಯದಿಂದ ದೃಷ್ಟಾರನು ಬೇರೆ'
'ಆತ್ಮನು ಪದಾರ್ಥಗಳ ಆಚೆಗೆ ಇರುವನು'
'ಆತ್ಮನು ದೇಹದಿಂದ ಅಲಿಪ್ತನು, ಅಕರ್ತನು'
'ಪರಮಾತ್ಮ ವಸ್ತುವು ಒಂದೇ ಒಂದು'
'ಪ್ರಪಂಚವೆಲ್ಲ ಅಳಿಯಲು ಉಳಿಯುವ ಶೂನ್ಯವೇ ಬ್ರಹ್ಮನು"
'ಶೂನ್ಯವು ಬ್ರಹ್ಮನಲ್ಲ"

ಈ ಪ್ರಕಾರ ಬೇರೆ ಬೇರೆ ಜ್ಞಾನಿಗಳು ತಮ್ಮ ತಮ್ಮ ಮತ ಪ್ರದರ್ಶನ ಮಾಡುವರು

ಕೊನೆಗೆ ಹೇಳುವದೇನೆಂದರೆ—ಶೂನ್ಯವು ಪರಬ್ರಹ್ಮನಲ್ಲ ತಾನು ವಸ್ತುರೂಪನಾಗಿ ಸ್ವಾನುಭವದಿಂದ ವಸ್ತು ನಿರೀಕ್ಷಣೆ ಮಾಡಬೇಕು "ನಾನೇ ಮನಸ್ಸು" ಎಂಬ ಕಲ್ಪನೆಯನ್ನು ಬಿಟ್ಟು ಕೊಡಬೇಕು ಮತ್ತು 'ಆತ್ಮನೇ ನಾನು" ಎಂಬ ಸಾಧೂಭಕ್ತಿಯನ್ನು ಹಿಡಿದು "ತಾನು ವಸ್ತುವೆಂಬದು ಸಿದ್ಧ" ಎಂಬ ನಿಶ್ಚಯ ಮಾಡಿಕೊಳ್ಳಬೇಕು "ನಾನೇ ಮನಸ್ಸು" ಎಂದು ಯಾವ ಸಂತನೂ ಹೇಳಿಕೊಳ್ಳಲಾರನು ಅಂದ ಮೇಲೆ "ನಾನು ಮನಸ್ಸು" ಎಂದು ಹೇಳಿಕೊಳ್ಳಲು ಆಧಾರವಿಲ್ಲ ಸಂತ ವಚನದಲ್ಲಿ ವಿಶ್ವಾಸವಿಡುವದೇ ಸ್ವಾನುಭವವು, ಮನಸ್ಸು ನಡುವೇ ಬಂದು 'ನಾನು ವಸ್ತುವು" ಎಂದು ಹೇಳುತ್ತ ಒಡಾಡುವದು ಆದರೆ ತಾನು ಮಾತ್ರ ನಿರಾಕಾರನು, ನಿರ್ಗುಣನು, ನಿರಂಜನದ ಅನುಭಾವಿಯು ಇಂತಾಗಬೇಕು ಕೃಪಣನು ತನ್ನ ಧನದ ಮೇಲಿನ ಧ್ಯಾಸದಿಂದ ಧನವೇ ಆಗುವನು ಅದು ಅವನಿಗೆ ನಿರುಪಯೋಗವಾದರೂ ಅನ್ಯರ ಉಪಯೋಗಕ್ಕೆ ಬರುವದು ಅದರಂತೆ ತಾನು

ಆತ್ಮರೂಪ ಹೊಂದಿ ಜನ ಕಾರ್ಯದಲ್ಲಿ ಉಳಿಯಬೇಕು 'ನಾನು ವಸ್ತುವಾಗಿರುವೆನೆಂಬುದೇ ಜ್ಞಾನದ ವಿವೇಕವು.

ಇಲ್ಲಿಗೆ ಜ್ಞಾನದಶಕವೆಂಬ ೮ನೆಯ ದಶಕವು ಮುಗಿದುದು ನಮಗೆ ಮತಿಯುದ್ದಷ್ಟರ ಬಗೆಗೆ ನಿರೂಪಿಸಿದೆವು. ಕುಂದು ಕೊರತೆಗಳನ್ನು ಕ್ಷಮಿಸಬೇಕು.' ಎಂದು ಗುರುಗಳು ಹೇಳಿದರು.

ಇತಿ ದಾಸಬೋಧೆಯ ೮ನೆಯ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೯ನೆಯ ದಶಕ [ ಗುಣ ನಿರೂಪಣ ದಶಕ]

ಶ್ರೀ ರಾಮ ॥ ೧ ಆಶಂಕೆಗಳು ॥ ಶಿಷ್ಯನು ಗುರುಗಳನ್ನು ಕುರಿತು:–

" ನಿರಾಕಾರ ವೆಂದರೇನು ? ನಿರಾಧಾರವೆಂದರೇನು? ಹಾಗು ನಿರ್ವಿಕಲ್ಪ ವೆಂದರೇನು ? " ಮೊದಲಾಗಿ ಪ್ರಶ್ನೆ ಮಾಡಿದನು ಅದಕ್ಕೆ ಗುರುಗಳು:—

" ನಿರಾಕಾರವೆಂದರೆ ಆಕಾರ ರಹಿತವು, ನಿರಾಧಾರವೆಂದರೆ ಆಧಾರ ವಿಲ್ಲದ್ದು, ನಿರ್ವಿಕಲ್ಪವೆಂದರೆ ಕಲ್ಪನೆ ರಹಿತವು ಆ ಪರಬ್ರಹ್ಮನು ಜಲ ಮಯನಲ್ಲ, ಆಭಾಸವಾತನಿಗಿಲ್ಲ, ಅವನು ಇಂದ್ರಿಯ ರಹಿತನು, ಸಂಸಾರ ರಹಿತನು, ದೋಷ ವಿಲ್ಲದವನು ಆ ಪರಮಾತ್ಮನು ಉಪಾಧಿಗಳಿಲ್ಲದವನು, ಇನ್ನೊಂದರ ಹೋಲಿಕೆಯಿಲ್ಲದವನು, ಇನ್ನೊಂದರ ಅವಲಂಬನೆ ಯಿಲ್ಲದವನು, ಅಪೇಕ್ಷೆ ರಹಿತನು, ಜನರಿಲ್ಲದವನು, ಅಂತರವಿಲ್ಲದವನು, ಗುಣ ವರ್ಜಿತನು, ಯಾವದರ ಸಂಗವಿಲ್ಲದವನು, ಸ್ವಚ್ಛನು, ಸ್ಥಿರನು, ಶಬ್ದ ರಹಿತನು, ಪಾಪವಿಲ್ಲದವನು, ವ್ರತವಿಲ್ಲದವನು, ಮಾತುಗಳಿಲ್ಲದವನು ಆಗಿರುವನಲ್ಲದೆ ಆ ಪರಬ್ರಹ್ಮನು— ಆಶೆಯಿಲ್ಲ, ಲೇಪನವಿಲ್ಲ, ಕರ್ಮಗಳಿಲ್ಲ, ಅವನಿಗ ಹೆಸರುಗಳಿಲ್ಲ, ಜನನವಿಲ್ಲ, ಆತನು ಪ್ರತ್ಯಕ್ಷ ವಿರುವದಿಲ್ಲ, ಅವನ ಮಹಿಮೆಗಳಿಗೆ ಲೆಕ್ಕವಿಲ್ಲ, ಅವನಿಗೆ ಕರ್ತವ್ಯಗಳಿರುವದಿಲ್ಲ, ಅವನಿಗೆ ಕ್ಷಯವಿಲ್ಲ, ರೂಪವಿಲ್ಲ, ಲಕ್ಷವಿಲ್ಲ, ಅವನ ಅಂತವೇ ತಿಳಿಯುವದಿಲ್ಲ, ಪಾರವೂ ಅವನಿಗಿಲ್ಲ, ಅಲೆದಾಟವು ಅವನಲ್ಲಿಲ್ಲ, ಆ ಪರಬ್ರಹ್ಮನು ಊಹೆಗೆ ನಿಲುವದಿಲ್ಲ, ದ್ವೈತವಾತನಿಗಿಲ್ಲ, ದೃಷ್ಟಿಗೆ ಕಾಣುವದಿಲ್ಲ, ಅವನನ್ನು ಸೇರಿದವರಿಗೆ ಬಿಡುಗಡೆಯಿಲ್ಲ, ಅವನು ಅದ್ವೈತನೆನ್ನಿಸುವನು, ಅವನು ಖಂಡ ರಹಿತನು, ಅಗ್ನಿಯ ಕ್ರಿಯೆಯು ಆತನ ಮೇಲೆ ನಡೆಯುವದಿಲ್ಲ, ಜಲ ಕ್ರಿಯೆಯೂ ಸಾಗುವದಿಲ್ಲ,

ಇಂಥ ಪರಬ್ರಹ್ಮನು ಎಲ್ಲವುಗಳಿಂದ ವಿಶಿಷ್ಟನಾಗಿರುವನು ಅವನ್ನು ಕಾಣುವದಾದರೆ ತನ್ನಲ್ಲಿಯೇ ಶೋಧಿಸಬೇಕು ಸದ್ಗುರು ಕೃಪೆಯಿಂದ ಅವನನ್ನು ಅನುಭವದಿಂದ ಕಂಡುಕೊಳ್ಳಬೇಕು ಇಲ್ಲದೆ ಹೋದರೆ

ಸಾಧ್ಯವಿಲ್ಲ ಆದಕ್ಕಾಗಿಯೇ ಶ್ರುತಿಗಳು 'ನೇತಿ' 'ನೇತಿ' ಎಂದು ಕೈಚೆಲ್ಲಿ ಕೊಟ್ಟಿರುವವು " ಎಂದು ಶಿಷ್ಯರು ಕೇಳಿದರು.

ಶ್ರೀ ರಾಮ ॥ ೬ ಬ್ರಹ್ಮ ನಿರೂಪಣ । ಶ್ರೀ ಗುರುಗಳು ಬೋಧಿಸಿ ದ್ದೆಂತೆಂದರೆ—

ಸಾಕಾರಗಳೆಲ್ಲವೂ ದೃಷ್ಟಿ ಗೋಚರವು ಅವೆಲ್ಲ ಕಲ್ಪಾಂತ್ಯದಲ್ಲಿಯೂ ಕೂಡ ನಾಶವಾಗುವವು ಆದರೆ ಎಲ್ಲವುಗಳಲ್ಲಿ ಸತ್ತ್ವವೆನ್ನಿಸಿದ ಭಗವಂತನ ನಿಜ ರೂಪವು ಅಂದರೆ ಸ್ವರೂಪವು ಸದಾಸ ಕಾಲದಲ್ಲಿಯೂ ಇರುವದು ಈ ಸ್ವರೂಪವು ನಿಜಕ್ಕೂ ಮಿಥ್ಯವಾದುದಲ್ಲ ಅದು ನಿತ್ಯವೂ ಆಹುದು, ನಿರಂತರವೂ ಆಹುದು ಭಗವಂತನ ನಿಜ ರೂಪವೇ ಸ್ವರೂಪವೆಂದು ಹೇಳಿದರೂ ಆವನಿಗೆ ಈ ಸ್ವರೂಪ ನಾಮದ ಹೊರತು ಹಲವು ನಾಮ ಗಳಿರುವವು ಅವೆಲ್ಲವನ್ನು ಸಂಕೇತ ಮಾಡಿಕೊಳ್ಳ ಹೋಗಲು ಅವನು ನಾಮತೀತನೆಂಬುದು ಸತ್ಯವಾಗಿ ತಿಳಿಯುವದು ಈ ಬಗೆಗೆ ದೃಷ್ಟಾಂತ ದಿಂದ ಬೋಧೆ ಮಾಡಿಕೊಳ್ಳಲು ಹೋಗಲು ಆತನು ದೃಶ್ಯದ ಒಳಗೂ ಹೊರಗೂ ಇದ್ದುದು ಮಾನವನ ದೃಷ್ಟಿಗೆ ಅರಿಯದಾಗುವದು ಅಂದರೆ ಅವನು ಸಮೀಪದಲ್ಲಿ ಇದ್ದೂ ಇಲ್ಲದವನಂತಾಗುವನು ಇಂತು ಇದು ಆ ದೇವನ ವರ್ಣನೆಯಾಯಿತು ಈ ವರ್ಣನೆಯಿಂದ ದೃಷ್ಟಿಯ ಪರಿಣಾ ಮವೆಂತಾಗುವದೆಂಬದನ್ನು ನೋಡಿದರೆ ಗೊತ್ತಾಗುವದು ದೃಷ್ಟಿಗೆ ವಿಷಯವಾದ ದೃಶ್ಯವು ಅದರೊಡನೆ ಸಾದೃಶ್ಯತೆಯನ್ನು ಹೊಂದಿದ ಬಳಿಕ ಆ ದೃಷ್ಟಿಯು ಸಂತೋಷ ಪಡೆಯುವದು

ಆದರೂ ಅದು ದರ್ಶನವಲ್ಲ, ಶ್ರುತಿಗಳು ಯದ್ದೃಷ್ಟಂ ತನ್ನಷ್ಟಂ ಎಂದು ಸಾರಿರುವದರಿಂದ ಕಂಡದ್ದೆಲ್ಲ ನಾಶವಾಗುವದು ಎಂದಮೇಲೆ ಅದು ಸ್ವರೂಪವಲ್ಲ ವೇದಾಂತ ಶಾಸ್ತ್ರದಲ್ಲಿ- ' ಸ್ವರೂಪವು ನಿರಾಭಾಸ ವಾದದು, ದೃಶ್ಯವು ಆಭಾಸ ಯುಕ್ತವಾದುದು-' ಎಂದು ಹೇಳಿರು ವದು.

ಸ್ವಾನುಭವದಿಂದಲೂ ಬ್ರಹ್ಮನು ದೃಶ್ಯದಿಂದರ ಹೊರತಾಗಿರುವ ನೆಂಬದು ತಿಳಿಯುವದು ನಿರಾಭಾಸನೂ, ನಿರ್ಗುಣನೂ ಆದವನನ್ನು ನಿಕಟವರ್ತಿಯಾದ ಸ್ವರೂಪದಿಂದಲೇ ಗುರುತಿಸಬೇಕು ಬ್ರಹ್ಮನು ಆಕಾಶ

ದಂತೆ ಎಲ್ಲವುಗಳಿಂದ ಅಲಿಪ್ತನಾಗಿ ಇರುವನು ಮತ್ತು ಒಳಹೊರಗೂ ವ್ಯಾಪಕನಾಗಿರುವನು ಅವನು ನೀರಿನಿಂದ ನೆನೆಯುವದಿಲ್ಲ, ಭೂಮಿಯಿಂದ ಸವೆಯುವದಿಲ್ಲ, ಗಾಳಿಯಿಂದ ಹಾರಿಸಲ್ಪಡುವದಿಲ್ಲ, ಅವನು ಬೆಂಕಿಯಿಂದ ಸುಡಲ್ಪಡಲಾರನು, ತೇಜದ ಪ್ರದೀಪ್ತಿಯು ಅವನ ಮೇಲೆ ನಡೆಯಲಾರದು ಅವನು ಬಂಗಾರದಲ್ಲಿ ಇದ್ದರೂ ಬಂಗಾರವನ್ನು ತುಂಡರಿಸಿ ಬೇರೆ ಬೇರೆ ಅಲಂಕಾರಗಳನ್ನು ರೂಪಿಸುವಂತೆ ಇವನನ್ನು ಮಾಡಲಿಕ್ಕೆ ಬರಲಾರದು ಇಂತು ಆ ಬ್ರಹ್ಮನು ಎಲ್ಲವುಗಳಲ್ಲಿ ವ್ಯಾಪಿಸಿ ತುಂಬಿರುವನು ಆದರೂ ಆತನು ಎಂದೂ ಗೊತ್ತಾಗಲಾರನು ಅವನು ಅಭಿನ್ನತೆಯಲ್ಲಿ ಅಹಂಕಾರ ಭಿನ್ನತೆಯನ್ನು ಹೆಚ್ಚಿಸುವನು ಇನ್ನು ಆ ಅಹಂಕಾರದ ಸ್ವರೂಪ ಬೋಧೆಯನ್ನು ಶ್ರವಣ ಮಾಡಬೇಕು ಅಹಂಕಾರವು ನಿರಾಕಾರ ಸ್ವರೂಪನಲ್ಲಿ ಸೇರಿ 'ನಾನೇ ಬ್ರಹ್ಮನು ನಾನೇ ಬ್ರಹ್ಮ ಸ್ವರೂಪನು' ಹೀಗೆ ಹೇಳಿಕೊಂಡರೂ ಕಡೆಗೆ ತನ್ನಿಂದ ತಾನೇ ಆ ನಿರಾಕಾರ ವಸ್ತುವಿನಿಂದ ಹೊರತಾಗುವದು 'ನಾನೇ ಬ್ರಹ್ಮನಾಗಿರುವೆನು' ಎಂಬದಾಗಿರುವ ಅಹಂಕಾರ ಭ್ರಮೆಯು ಸೂಕ್ಷ್ಮನಾದ ಆ ಬ್ರಹ್ಮನನ್ನು ಸೂಕ್ಷ್ಮ ರೀತಿಯಿಂದ ಕಾಣಲು ತಿಳಿದು ಬರುವದು 'ನಾನು ಬ್ರಹ್ಮನು' ಎಂದು ಕಲ್ಪನೆಯ ಮಾತಿನ ಉದ್ದೇಶವು ಕಲ್ಪನೆಯಿಂದಲೇ ತಿಳಿಯುವದು ಆದರೆ ಬ್ರಹ್ಮನು ಕಲ್ಪನಾತೀತನು ಆದ್ದರಿಂದ ಅವನ ಪಾರಾವಾರವು ತಿಳಿಯುವದಿಲ್ಲ ಹೀಗೆ ಅವನ ಅಂತವು ತಿಳಿಯದ್ದರಿಂದಲೇ ಅವನಿಗೆ 'ಅನಂತ' ಎಂದು ಹೆಸರುಂಟಾಗಿದೆ ಶಬ್ದಗಳಲ್ಲಿ ಅನ್ವಯ, ವ್ಯತಿರೇಕಗಳೆಂಬ ಭೇದಗಳುಂಟು ಇವನ್ನೇ ಪಿಂಡ ಬ್ರಹ್ಮಾಂಡಗಳ ಸ್ಥಿತಿ-ಲಯಗಳೆಂದೆನ್ನಬಹುದು ಈ ಶಬ್ದ ಭೇದವನ್ನು ನಿಶ್ಶಬ್ದ ವಸ್ತುತನ ಅಂತರ್ವಿವೇಕದಿಂದ ಕಂಡು ಹಿಡಿದು ಅನುಭವಕ್ಕೆ ತಂದುಕೊಳ್ಳಬೇಕು ಶಬ್ದಾರ್ಥ ಹಾಗೂ ವಾಚ್ಯಾರ್ಥಗಳನ್ನುಳಿದು ಲಕ್ಷ್ಯಾರ್ಥದಿಂದ ಅರಿಯಬೇಕು. 'ಸರ್ವ ಬ್ರಹ್ಮ' ಹಾಗು 'ವಿಮಲ ಬ್ರಹ್ಮ' ಹೀಗೆ ಬ್ರಹ್ಮ ಸಂಬಂಧದ ಎರಡು ಪಕ್ಷಗಳು. ಆದರೆ ಇವೆರಡೂ ವಾಚ್ಯಾಂಶಗಳು. ಇವನ್ನು ಲಕ್ಷ್ಯಾರ್ಥದಿಂದ ಅರಿತು ನೋಡಲು ಉದ್ಭೂತವಾದ ತತ್ವಕ್ಕೆ ಶಬ್ದ ಹಾಗು ಶಬ್ದಗಳ ಸಂಬಂಧವೇ ಉಳಿಯಲಾ

ರದು ಲಕ್ಷ್ಯಾಂಶದಿಂದ ಅನುಭವವುಂಟಾಗಲು ಬಳಿಕ ವಾಚ್ಯಾಂಶದ ಮಾತೇ ಉಳಿಯಲಾರದು. ಯಾಕಂದರೆ ಪ್ರಾಧಾನ್ಯವಾದ ಅನುಭವ ವುಂಟಾಗಲು ಆಗ ಶಬ್ದದ ಉಪಯೋಗವೇ ಆಗುವದಿಲ್ಲ –ಪರಾ, ಪಶ್ಯಂತೀ, ಮಧ್ಯಮಾ ಹಾಗು ವೈಖರೀ ಹೀಗೆ ನಾಲ್ಕು ವಾಕ್ಪ್ರಕಾರಗಳಿರುವವು ಇವೆಲ್ಲವುಗಳ ಆಟ ನಡೆಯದಂತಾಗಡಾಗ ಹಾಗು ನಡೆಯದಿರುವಲ್ಲಿ ವಾಕ್ಚಾತುರ್ಯದ ಪ್ರೌಢಿ ಮೆರೆಯುವದಿಲ್ಲ ಶಬ್ದವು ಹುಟ್ಟುವದು ಕೂಡಲಿ ಇಲ್ಲದಾಗುವದು ಅಂದಮೇಲೆ ಅದು ಅಶಾಶ್ವತವು ಈ ಮೂಲಕವಾ ಗಿಯೇ 'ಸರ್ವ ಬ್ರಹ್ಮ' 'ವಿಮಲ ಬ್ರಹ್ಮ' ಹೀಗೆ ಪಕ್ಷಗಳ ಉದಯ ವಾಗುವದು ಅನುಭವ ಸ್ವರೂಪ ಬ್ರಹ್ಮನಲ್ಲಿ ಹೀಗೆ ಪಕ್ಷೋದಿತದ ಅನುಭವವು ಸರಿಯಾಗಲಾರದು

ಇನ್ನು ಅನುಭವದ ಲಕ್ಷಣವೆಂದರೆ– ಅನುಭವವೆಂದರ ಅನನ್ಯವು, ಅನನ್ಯವೆಂದರೆ ಇನ್ನೊಂದಿಲ್ಲದ್ದು ಇದಕ್ಕೆ ಆತ್ಮನಿವೇದನೆ ಎನ್ನುವರು ಇದರಿಂದ ಸರ್ವಸಂಗ ಇಲ್ಲದಾಗುವದು ಮತ್ತು ಆತ್ಮವು ಆತ್ಮತ್ವದಲ್ಲಿಯೇ ಉಳಿಯುವದು ಆತ್ಮನಿಗೆ ಆತ್ಮತ್ವವಿಲ್ಲೆಂಬುವದು ನಿಸ್ಸಂಗಪಣದ ಲಕ್ಷಣವೆಂಬು ವದು ಲಕ್ಷ್ಯಾಂಶದಿಂದ ಹೇಳಲಿಕ್ಕೆ ಬರುವದಿಲ್ಲ ಇದರ ಹೊರತು ವಾಚ್ಯಾಂಶ ದಿಂದ ಲಕ್ಷ್ಯಾಂಶವನ್ನು ಹೇಳಲಿಕ್ಕೆ ಬರುವದಿಲ್ಲ ಆದರೆಬೋಧೆಗಾಗಿ ಹೀಗೆ ಹೇಳ ಬೇಕಾಗುತ್ತದೆ ತತ್ವ ವಿಚಾರಮಾಡಬೇಕು, ನಿರ್ಗುಣ ಬ್ರಹ್ಮನನ್ನು ಶೋಧಿ ಸಬೇಕು ಹಾಗು ತನ್ನಲ್ಲಿ ತಾನು ಕಾಣಬೇಕು ಬಗೆಯಾದರೆ ಮಾತ್ರ ಬೋಧೆ ಯಾಗುತ್ತದೆ ಇದನ್ನು ಶಬ್ದದಿಂದ ಹೇಳದೆ ವಿವರಿಸಿ ನೋಡಬೇಕು

ಮಹಾತ್ಮರೆನ್ನಿಸುವವರು ಬ್ರಹ್ಮನ ಬಗೆಗೆ ಮೌನತ್ವ ತಾಳುವರು ಯಾಕಂದರೆ ಶಬ್ದವು ಅವರಲ್ಲಿ ಕುಂಠಿತವಾಗುತ್ತದೆ ಇದನ್ನು ಸಂಶಯ ಗೊಳ್ಳದೆ ಅನುಭವ ತಿಗೆದು ಕೊಳ್ಳಬೇಕು. ಪ್ರತ್ಯಕ್ಷ ಅನುಭವಕ್ಕೆ ಬಂದರೂ ಅನುಮಾನ ಗೊಂಡದ್ದಾದರೆ ಅದು ಪ್ರತ್ಯಕ್ಷ ದುರಭಿಮಾನ ವಾಗುವದು ಆದರೂ 'ಈಗ ನಾನು ಅಜ್ಞಾನಿಯು' 'ನನಗೇನೊಂದೂ ತಿಳಿಯುವದಿಲ್ಲ' 'ನಾನೂ ನನ್ನ ಮಾತುಗಳೂ ವ್ಯರ್ಥವು' ಅದರಂತೆ ನನ್ನ ಗತಿಯೂ ವ್ಯರ್ಥ' 'ನನ್ನ ಸಂಬಂಧವಾಗಿ ಕಾಲ್ಪನಿಕವೆಲ್ಲವೂ ವ್ಯರ್ಥ' 'ಈ ಸಂಬಂಧದಲ್ಲಿ ನನಗೇನೊಂದು ಸ್ಥಾನವಿಲ್ಲ' 'ನನ್ನ ಹೇಳಿಕೆ ನಿರರ್ಥ

ಕವು' 'ಬ್ರಹ್ಮನು ಒಬ್ಬನೇ ಎನ್ನುವದು ಪ್ರಕೃತಿಯ ನುಡಿಯು' ಇವೆಲ್ಲ ವಿಚಾರಗಳನ್ನು ಬಾಯಿಂದ ಒಡನುಡಿಸದೆ 'ನಾನು' ಎಂಬುದನ್ನು ಬಿಟ್ಟು ಬ್ರಹ್ಮನಲ್ಲಿ ಲೀನನಾಗಬೇಕು. ಪ್ರಕೃತಿ ಹಾಗು ಪುರುಷ ಇವು ಬ್ರಹ್ಮ ಸ್ವರೂಪದಲ್ಲಿಂದ ಇಲ್ಲದಂತೆ ಆದಮೇಲೆ 'ನಾನು' ಎಂಬುದೂ 'ಶಬ್ದವೂ' ಉಳಿಯುವದು ಸಾಧ್ಯವಿಲ್ಲ ಅಲ್ಲಿ ಎಲ್ಲವೂ ಇಲ್ಲದಾಗುವವು ಏನೊಂದು ವಿಶಿಷ್ಟತೆಯು ಇರದಾಗುವದು 'ನಾನು ಮೌನತ್ವ ಧರಿಸಿ ರುವೆನು' ಎಂದು ನುಡಿಯುವವನಲ್ಲಿ ಮೌನತ್ವವು ಇರಲಾರದೆಂಬದು ಯಾರಿಗಾದರೂ ತಿಳಿಯುವಂಥ ಮಾತು ಇನ್ನು ಕೊನೆಯದಾಗಿ ಬೋಧಿ ಸುವದೇನಂದರೆ— ಮೌನತ್ವವನ್ನು ಬಿಡಬಾರದು- ಮಾಡಿಯೂ ಮಾಡ ದಂತಿರಬೇಕು, ಇದ್ದೂ ಇಲ್ಲದ್ದಂತೆ ಇರಲಾರದು ಇವೆಲ್ಲಕ್ಕೂ ವಿಚಾರ ಸಾಮರ್ಥ್ಯವು ಅವಶ್ಯವು" ಎಂದರು

ಶ್ರೀರಾಮ || ೩ ನಿಸ್ಸಂಗ ದೇಹ ನಿರೂಪಣ || ಶ್ರೀ ಗುರುಗಳು ಬ್ರಹ್ಮ ನಿರೂಪಣೆ ಮಾಡಿದ ತರುವಾಯ ಶಿಷ್ಯನು— "ಏನೊಂದು ಇಲ್ಲದ್ದು ಒದ ಗುವದೆಂತು ? ಎಲ್ಲವನ್ನೂ ಮಾಡಿದವನು ಅಕರ್ತನೆಂತಾಗುವನು ? ಎಲ್ಲ ವನ್ನು ಭೋಗಿಸಿದವನು ಅಭೋಕ್ತನೆಂದು ಹೇಳುವದು ಹೇಗೆ ? ಎಲ್ಲದರಲ್ಲಿರು ವವನು ಅಲಿಪ್ತನೆಂತು ? ಆದರೂ ನಿಮ್ಮ ಹೇಳಿಕೆಯ ವಿರುದ್ಧವಾಗಿ ನಾನು ಅನುಮಾನಿಸುವದೇನಂದರೆ—'ಸಾಕಷ್ಟು ಪಾಪಾಚರಣೆ ಕೈಕೊಳ್ಳುವದರಲ್ಲಿ ಆತಂಕವಿಲ್ಲ' ಎಂದಂತಾಯಿತು ಇದೇ ನ್ಯಾಯದಿಂದ ಜನನ-ಮೃತ್ಯುಗ ಳನ್ನು ಭೋಗಿಸಿ ಭೋಗ ಮಾಡದವನಂತೆ, ಪಾಪ ಮಾಡಿಯೂ ಮಾಡದವ ನಂತೆ, ಸ್ವರ್ಗ ಇಲ್ಲವೆ ನರಕಗಳನ್ನು ಹೊಂದಿಯೂ ಹೊಂದದವರಂತೆ, ಇರ ಬೇಕೆಂಬುದು ಕಂಡುಬರುತ್ತದೆ ಒಟ್ಟಿನ ಮೇಲೆ ಯಾವ ಕ್ರಿಯೆಗಳೊದಗಿ ದರೂ ಒದಗಲಿಲ್ಲವೆಂಬದಾಗಿ ಯೋಗೀಶ್ವರರಾದ ತಾವು ಹೇಳುವಿರಿ ಅಂದ ಮೇಲೆ ಇದೆಂಥ ಬ್ರಹ್ಮಜ್ಞಾನವು ?" ಎಂದು ಕೇಳಿದನು ಆಗ ಗುರುಗಳು ತಮ್ಮ ಮನಸಿನಲ್ಲಿ—"ಈ ಶಿಷ್ಯನು ಈ ವಿಷಯದಲ್ಲಿ ಕಟ್ಟಡವಿಯನ್ನು ಸೇರಿ ದಂತಾಗಿಬಿಟ್ಟಿರುವನು ಇನ್ನು ಇವನನ್ನು ಸಮರ್ಪಕ ಉತ್ತರದಿಂದ ಇವರ ಸಂಶಯ ದೂರ ಮಾಡಿ ಸಮಾಧಾನಗೊಳಿಸತಕ್ಕದ್ದು" ಎಂದು ನಿರ್ಧರಿಸಿ ಶಿಷ್ಯನನ್ನು ಕುರಿತು—

"ಈಗ ನನ್ನ ಮುಂದೆ ಬಂದ ನಿನ್ನ ಪ್ರಶ್ನೆಗಳೆಲ್ಲವು ಒಳಿತಾಗಿರುವವು ನೀನು ಕೇವಲ ಶಬ್ದ ಜ್ಞಾನದ ಬಲದಿಂದ ವ್ಯರ್ಥವಾಗಿ ಕಟ್ಟೆಡವಿಯನ್ನು ಸೇರಿರುವಿ ಪ್ರತಿಯೊಬ್ಬರು ತಮ್ಮತಮ್ಮ ಅನುಭವಗಳಂತೆ ಮಾತಾಡಹತ್ತಿರುವರು ಸಂಪತ್ತಿಲ್ಲದವನ ಬುದ್ಧಿವಂತಿಕೆಯು ನಿರರ್ಥಕವೆಂಬಂತೆ ಈ ಮಾತಾಗುತ್ತದೆ ಜ್ಞಾನೈಶ್ವರ್ಯವಿಲ್ಲದವನು ಅಜ್ಞಾನ ದಾರಿದ್ರ್ಯದಿಂದ ಆಪತ್ತನ್ನು ಅನುಭೋಗಿಸುವದು ಕೇವಲ ಶಬ್ದಜ್ಞಾನದಿಂದ ಯೋಗಿಯು ಯೋಗೀಶ್ವರನನ್ನೂ ಜ್ಞಾನಿಯು ಜ್ಞಾನೇಶ್ವರನನ್ನೂ ಚತುರನು ಮಹಾ ಚತುರನನ್ನೂ ಗುರುತಿಸಿ ತಿಳಿದುಕೊಳ್ಳಬೇಕು ಆದರಂತೆ ಅನುಭವಿಯು ಅನುಭವಿಗಳಿಂದ, ಅಲಿಪ್ತನು ಅಲಿಪ್ತತೆಯಿಂದ ಹಾಗು ವಿದೇಹಿಯು ದೇಹ ಭಾವವನ್ನಳಿದ ವಿದೇಹಸ್ಥಿತಿಯಿಂದ ಜ್ಞಾನ ಮಾಡಿಕೊಳ್ಳಬೇಕು ಬದ್ಧನಂತೆ ಸಿದ್ಧನು, ಸಿದ್ಧನಂತೆ ಬದ್ಧನು ಎಂಬದಾಗಿ ಒಂದೇ ಭಾವನೆಯನ್ನು ತಂದುಕೊಳ್ಳುವವು ಅಬದ್ಧವೆಂದು ಹೇಳಲಿಕ್ಕೆ ಬೇಕಾಗಿಲ್ಲ ಭೂತ ಪಿಶಾಚ್ಚ ಬಾಧೆಗೊಳಗಾದವನೂ ಹಾಗೂ ಆ ಬಾಧೆಯನ್ನು ನಿವಾರಿಸುವ ಮಾಂತ್ರಿಕನೂ ದೇಹಧಾರಿಗಳಾಗಿದ್ದರೂ ಅವರಿಬ್ಬರೂ ಒಂದೇ ಎಂದು ಹೇಳಲಿಕ್ಕೆ ಬರಲಾಗದು ಆದರಂತೆ ಅಜ್ಞಾನಿಯಾದ ಪತಿತನೂ ಜೀವನ್ಮುಕ್ತನೂ ಒಂದೇ ಎಂದು ಹೇಳಲಾಗದು ಇದಿರಲಿ ಇನ್ನು ಅನುಭವಿಕ ಸಂಗತಿಯನ್ನು ಹೇಳುವೆನು "ಎಂದು ಗುರುಗಳು ಮುಂದುವರಿಸಿ ಹೇಳಹತ್ತಿದರು

' ಜ್ಞಾನದಿಂದ ಗುಪ್ತವಾದ, ವಿವೇಕದಿಂದ ಸ್ವರೂಪಗೂಡಿದ ಹಾಗು ಬ್ರಹ್ಮನಲ್ಲಿ ಅನನ್ಯನಾಗಿ ದೇಹಬುದ್ಧಿಯನ್ನು ತ್ಯಾಗಮಾಡಿ ಆ ಬ್ರಹ್ಮನನ್ನು ಒಂದುಗೂಡಿದ ಇಂಧನವನ್ನು ಶೋಧ ಮಾಡಬೇಕು ಅಂದರೆ ಅವನನ್ನು ಶೋಧಿಸುವವನು ಅವನ ರೂಪವನ್ನೇ ಹೊಂದಿಬಿಡುವನು ಇಷ್ಟಾದಬಳಿಕ ಆ ಶೋಧಕನ ಯಾವ ಅನುಮಾನಕ್ಕೂ ಆಸ್ಪದ ಉಳಿಯಲಾರದು ಬ್ರಹ್ಮಮಯ ಸಾಧುವು ಕಾಣುವದು ದುಸ್ತರವು ಯಾಕೆಂದರೆ ಅಂಧನನು ದೇಹದಿಂದ ಕಾಣಿಸುವದಿಲ್ಲ, ತತ್ವಗಳಲ್ಲಿ ದೊರಕುವದಿಲ್ಲ, ಬ್ರಹ್ಮನಿಂದ ಅವನನ್ನು ವಿಂಗಡಿಸಲೂ ಬರುವದಿಲ್ಲ, ಅವನು ನೋಡುವದಕ್ಕೆ ದೇಹಧಾರಿಯಾಗಿ ಕಂಡರೂ ಅಂತಸ್ಥದಲ್ಲಿ ಅವನು ಏನೊಂದಿಲ್ಲದವನಂತಾಗಿರುವ ಮೂಲಕ ಕಂಡುಬರುವದಿಲ್ಲ ಅವನ ಅಂತರವನ್ನು ಶೋಧಿಸಬೇಕೆಂದರೆ ಆತನು ನಿರಂತರನಾಗಿರು

ವನು ಅವನನ್ನು ಕ್ರೋಧಾದಿ ವಿಕಾರ ಸಾಹಿತ್ಯಗಳೊಂದಿಗೆ ಹುಡುಕಲು ಯತ್ನಿಸಿದರೆ ಆ ವಿಕಾರಗಳೆಲ್ಲ ಅವನಿಂದ ನಷ್ಟತೆ ಹೊಂದಿ ಅವನು ನಿರ್ವಿಕಾರನೇ ಆಗಿರುವನು ಅವನು ಕೇವಲ ಪರಮಾತ್ಮನೇ ಅವನಿಗೆ ಮಾಯೆಯ ದೂಷಿತವು ಸಂಬಂಧಿತವಿರುವುದಿಲ್ಲ ಅಖಂಡ ಉದ್ದೇಶವೆಂಬ ವೈಲಿಗೆಯು ಅವನಿಗಿಲ್ಲ ಇಂಥವನೇ ಯೋಗಿರಾಜನೆಂದು ಅರಿತುಕೊಳ್ಳಬೇಕು ಅವನ ಆತ್ಮವು ಸಹಜವಾಗಿವೇದಬೀಜವಾದ ಪೂರ್ಣಬ್ರಹ್ಮತೆಯಲ್ಲಿಒಂದಾಗಿರುವದು ಅವನು ದೇಹಾಕಾರದಿಂದ ಕಾಣಿಸಲಾರನು ದೇಹವನ್ನು ಕಲ್ಪನೆ ಮಾಡಿದರೆ ದೇಹವೇ ಕಾಣುವದು ಆದರೆ ಅವನ ಅಂತಸ್ಥಿತಿಯು ಬೇರೆಯಾಗಿರುವದು ಜನನ ಮರಣಗಳು ಅವನನ್ನು ತಟ್ಟಲಾರವು ಜನನ ಮರಣಗಳುಳ್ಳವನು ಅಂಥವನಾಗಲಾರನೆಂಬದು ಸಹಜವು

ಇನ್ನು ನಿರ್ಗುಣನಾದವನಿಗೆ ಜನ್ಮವೆಂದು ಕಲ್ಪಿಸುವದು ಅಥವಾ ಅವನಲ್ಲಿಯ ನಿರ್ಗುಣತ್ವವನ್ನೇ ಒಪ್ಪದೇ ಇರುವದು ಇವು ಎಂದಿಗೂ ಸರಿಯಾಗವು ಯಾಕಂದರೆ ಜನ್ಮವೂ ನಿರ್ಗುಣರಾಹಿತ್ಯತೆಯೂ ಇವು ಕಲ್ಪಿಸುವವನಿಗೇ ಇರುವವು. ಅವನ ಈ ಸ್ಥಿತಿಯು ಸೂರ್ಯನ ಕಡೆಗೆ ಮಣ್ಣು ತೂರಿ ತನ್ನ ಕಣ್ಣಲ್ಲಿ ತುಂಬಿಕೊಂಡಂತಾಗುವದು. ಅನ್ಯರ ಹಿತಾಹಿತಗಳನ್ನು ಬಯಸುವವನು ಅವುಗಳ ಫಲವನ್ನು ತಾನೇ ಅನುಭವಿಸುವನು ಅರಸನ ಸಿರಿಸಂಪತ್ತನ್ನು ಕಂಡು ಬೊಗಳುವ ನಾಯಿಗೆ ಏನನ್ನಬೇಕು ? ಕಡೆಗೆ ಅದು ನಾಯಿಯೇ ಎನ್ನಿಸುವದು ಜ್ಞಾನಿಯು ಸತ್ಯ ಸ್ವರೂಪನು, ಅಜ್ಞಾನಿಯು ಮಾನವರೂಪನು ಭಾವನೆಯಂತೆ ಫಲವು ನಿಶ್ಚಿತವು ದೇವನು ನಿರಾಕಾರ ನಿರ್ಗುಣನಾಗಿರುವನೆಂಬ ಭಾವನೆಯುಳ್ಳವರಿಗೆ ಆತನು ದೇವನಾಗಿಯೇ ಇರುವನು ಅದೇ ದೇವನು ಕಲ್ಲಿನ ಸ್ವರೂಪನೆಂದು ತಿಳಿಯುವವನಿಗೆ ಆ ದೇವನು ಕಲ್ಲಾಗಿಯೇ ತೋರುವನು ಕಲ್ಲು ಒಡೆದು ನಾಶವಾಗುವಂತೆ ನಿರ್ಗುಣನಿಗೆ ನಾಶತ್ವವಿರುವದಿಲ್ಲ ದೇವನು ಸರ್ವ ವ್ಯಾಪಿಯು ಆದರೆ ಜನರು ಹಲವು ಬಗೆಯಾಗಿ ಅವನ ಸ್ವರೂಪಗಳನ್ನು ಬೇರೆಬೇರೆಕಲ್ಪಿಸಿಕೊಳ್ಳುವದರಿಂದ ಆ ಜನರ ತಿಳುವಳಿಕೆಯಂತ ಆ ದೇವನು ತನ್ನ ಏಕತ್ವದಿಂದ ಹೊರತಾಗಿ ಅನೇಕ ಸ್ವರೂಪಗಳಾಗುವದು ಶಕ್ಯವಿಲ್ಲ ಪೂರ್ಣ ಬೋಧೆಯಿಂದ ಸಮಾಧಾನ ಹೊಂದಿದ ಸಾಧುವಾದರೂ ಹಾಗೆಯೇಇರುವನು. ಕಟ್ಟಿಗೆಸುಡು

ತ್ತಿರುವಾಗ ಅಗ್ನಿಯು ಕಟ್ಟಿಗೆಯ ಆಕಾರದಂತೆ ತೋರಿದರೂ ಅದು ಪುನ ಕಟ್ಟಿಗೆಯ ಸ್ವರೂಪವನ್ನು ಹೊಂದಲಾರದು ಕಪ್ಪುರವು ಉರಿಯುವವರಿಗೆ ಮಾತ್ರ ತೋರುವದು ಅಂತೆಯೇ ಜ್ಞಾನಿಯ ದೇಹವು ಆವನ ದೇಹವು ಪುನಃ ಜನ್ಮ ಸ್ಥಿತಿಯನ್ನು ಹೊಂದುವದಿಲ್ಲ ಹುರುಪುಳಿಸಿದ ಬೀಜವು ಪುನಃ ಅಂಕುರಿಸುವದಿಲ್ಲ, ಕಿಡಿಬಿದ್ದು ಸುಟ್ಟ ಅರಿವೆ ಮೊದಲಿನ ಸ್ಥಿತಿಯಲ್ಲಿ ಉಳಿಯುವದಿಲ್ಲ ದೊಡ್ಡ ಪ್ರವಾಹದಲ್ಲಿ ಮಿಲನವಾಗಿರುವ ಚಿಕ್ಕ ಪ್ರವಾಹಗಳನ್ನು ಬೇರ್ಪಡಿಸಲು ಬರುವದಿಲ್ಲ ಇದರಂತೆ ಸಾಧುವು ಆತ್ಮ ಸ್ವರೂಪಾಕಾರ ಹೊಂದಿದನೆಂದರೆ ಪರಾವರ್ತಿತನಾಗುವದಿಲ್ಲ ಒಮ್ಮೆ ಬಂಗಾರವಾದದ್ದು ಪುನಃ ಕಬ್ಬಿಣವಾಗದು ಅದರಂತೆ ಸ್ವರೂಪಾಕಾರ ಪಡೆದ ಸಾಧುವು ಪುನಃ ಜನ್ಮ ತಾಳುವದಿಲ್ಲ ಈ ವಿಚಾರವು ಮಂದಮತಿಗಳಿಗೆ ಉಂಟಾಗುವದಿಲ್ಲ ಕುರುಡನೊಬ್ಬನು ಜನರೆಲ್ಲರೂ ತನ್ನಂತೆಯೇ ಚಕ್ಷುರಹಿತರಾಗಿರುವರೆಂನು ತಿಳಿದುಕೊಳ್ಳುವಂತೆ ಈ ಅಜ್ಞಾನಿಗಳ ಸ್ಥಿತಿಯಾಗಿರುವದು ಸ್ವಪ್ನ ಭಯವು ಜಾಗ್ರತವಾದನಂತರ ಉಳಿಯಲಾರದು, ಸರ್ಪ ರಜ್ಜುವಿನ ಭ್ರಾಂತಿ ದೂರಾದನಂತರ ಸರ್ಪಭಯಉಳಿಯಲಾರದು ಅಂದರೆ ಮೊದಲಿನಅಜ್ಞಾನವು ಹಿಂದುಗಡೆ ಉಂಟಾದ ಜ್ಞಾನವೂ ಒಂದೇ ಆಗಿರಲಾರವು ಹಾವು ಚೇಳುಗಳ ದಂಶನದಿಂದ ಒಬ್ಬನಿಗಾದ ವ್ಯಥೆಯು ಉಳಿದವರಿಗಾಗುವದು ಶಕ್ಯವಿಲ್ಲ ಇದರಂತೆಯೇ ಅಜ್ಞಾನಿಯಲ್ಲಿ ಜ್ಞಾನವೊಂದು ಮಾತ್ರವಿಲ್ಲದ್ದರಿಂದ ಆವನು ಕಷ್ಟಕ್ಕೆ ಗುರಿಯಾಗಿ ಜನನ-ಮೃತ್ಯುಗಳನ್ನು ತಪ್ಪಿಸಿಕೊಳ್ಳಲು ಅಸಮರ್ಥನಾಗುವನು ಜ್ಞಾನ ಪಡೆಯುವದಕ್ಕಾಗಿ ಹವಣಿಸುವವನು ಅನುಮಾನ ಸಂಶಯಗಳಿಂದ ಯುಕ್ತನಾದಲ್ಲಿ ಅವನಿಗೆ ಏನೊಂದೂ ತಿಳಿಯದೆ ಜನನ ಮರಣ ಚಕ್ರದಲ್ಲಿ ಸಿಕ್ಕಬೀಳುವನು ಇದನ್ನೇ ಮುಂದೆ ವಿಶದವಾಗಿ ಹೇಳುವೆವು" ಎಂದು ಗುರುಗಳು ಬೋಧಿಸಿದರು

ಶ್ರೀ ರಾಮ ॥ ಆಜ್ಞಾನತ್ವ ನಿರೂಪಣ ॥ ಶಿಷ್ಯನು ಗುರುಗಳನ್ನು ಕುರಿತು —

'ಜಗತ್ತಿನ ಜನರಲ್ಲಿ ಒಬ್ಬನು ಸಬಲನು, ಇನ್ನೊಬ್ಬನು ದುರ್ಬಲನು, ಒಬ್ಬನು ಸುಂದರನು ಇನ್ನೊಬ್ಬನು ಕುರೂಪಿಯು, ಒಬ್ಬನು ಸಜ್ಜನನಾಗಿದ್ದರೆ ಮತ್ತೊಬ್ಬನು ದುರ್ಜನನಾಗಿರುವನು ಒಬ್ಬನು ಅರಸ

ನಾಗಿದ್ದರೆ ಇನ್ನೊಬ್ಬನು ದರಿದ್ರನಾಗಿರುವನು ಈ ಪ್ರಕಾರ ಭಿನ್ನ ಭಿನ್ನ ಸ್ಥಿತಿ–ಸ್ವರೂಪಗಳು ಜನತೆಯಲ್ಲಿ ಕಂಡು ಬರುವವು ಇದಕ್ಕೆ ಕಾರಣವೇನು?" ಎಂದು ಪ್ರಶ್ನ ಮಾಡಿದನು

ಆಗ ಗುರುಗಳು —

"ಇವೆಲ್ಲ ಭೇದಗಳು ಗುಣಗಳ ಮೂಲಕವಾಗಿ ಉಂಟಾಗಿರುವವು ಸದ್ಗುಣಿಯು ಸಂಪತ್ತನ್ನು ಅನುಭೋಗಿಸುವನು ಆದರೆ ದುರ್ಗುಣಿಯು ದಾರಿದ್ರ್ಯದಿಂದ ಪೀಡಿತನಾಗುವನು ಇದರಲ್ಲಿ ಸಂಶಯವಿಲ್ಲ ತನ್ನ ಉದ್ಯೋಗದ ಮಹತಿಯನ್ನರಿತು ಅದನ್ನು ಕೈಕೊಂಡು ಮುಗಿಸುವವನು ಕರ್ತವ್ಯದಕ್ಷನೆನ್ನಿಸುವನು ಕೆಲಸದ ತಿಳುವಳಿಕೆಯಿದ್ದವನೇ ಕೆಲಸ ಮಾಡಿ ಹೊಟ್ಟೆ ತುಂಬಿಕೊಳ್ಳುವನು ಅದಿಲ್ಲದವನು ಬಿಕ್ಕೆ ಬೇಡುವನು ವಿದ್ಯಾವಂತನು ಐಶ್ವರ್ಯವಂತನಾಗುವನು ಆದೇ ವಿದ್ಯೆಯಿಲ್ಲದವನು ಕಂಗಾಲನಾಗುವನು ಇದರಿಂದ "ವಿದ್ಯೆಯೇ ಸಿರಿಯು" ಎಂದು ಧ್ವನಿತವಾಗುತ್ತದೆ ಈಗಿನ ಹಿರಿಯರು ಕಿರಿಯರಿಗೆ ಬುದ್ಧಿ ಹೇಳುವಾಗ– 'ವಿದ್ಯೆ ಕಲಿಯಲಿಕ್ಕೆ ಮನಸ್ಸಿಲ್ಲದ ನೀನು ಬಿಕ್ಕೆ ಬೇಡುವಿ" ಎಂದು ಸ್ಪಷ್ಟವಾಗಿ ಹೇಳುವರು ವಿದ್ಯೆಯ ಮಹತ್ವವೆಂದರೆ ತಂದೆಯು ಅಶಿಕ್ಷಿತನಾಗಿದ್ದರೆ ವಿದ್ಯೆ ಕಲಿತ ಮಗನು ವಿದ್ಯಾವಂತನಾಗುವನು ವಿದ್ಯಾಬುದ್ಧಿಗಳೂ, ವಿವೇಕಸಾಕ್ಷೇಪತೆಗಳೂ, ವ್ಯಾಪ-ಕುಶಲತೆಗಳೂ ಇಲ್ಲದ ಪ್ರಾಣಿಯು ಅಶಿಕ್ಷಿತವಾದದ್ದು ಇವೆಲ್ಲವೂ ಉಳ್ಳವನ ವೈಭವಕ್ಕೆ ನ್ಯೂನತೆಯಿಲ್ಲ ಸಿರಿವಂತಿಕೆಯು ಆತನ ಬೆನ್ನು ಬಿಡುವದಿಲ್ಲ, ತಂದೆಯ ಉದ್ದೇಶವು ಮಗನಿಂದ ಈಡೇರದಿದ್ದರೆ ಆ ಮಗನು ಅಶಿಕ್ಷಿತನೆನ್ನಿಸುವನು ವಿದ್ಯೆಯಿದ್ದ ಪ್ರಮಾಣದಲ್ಲಿಯೇ ಮಾನವನಿಗೆ ಉತ್ಕರ್ಷೆಯ ಹಂಬಲವಿರುವದು ಈ ಹಂಬಲದಿಂದಲೇ ಪ್ರಮಾಣಂದಲೇ ಆ ಮಾನವನ ವೈಭವಿರುವದು ಇಂಥ ವೈಭವಯುತನನ್ನು ಜನರು ಗೌರವಿಸುವರು ಪಶು-ಪಕ್ಷಿಗಳಲ್ಲಿಯೂ ಕೂಡ ಅವಕ್ಕನುಸರಿಸಿದ ಬುದ್ಧಿಯಿದ್ದರೆ ಅವುಗಳ ಬಗೆಗೆ ಸಮರ್ಥರಲ್ಲಿ, ಭೂತದಯೆಯುತ್ಪನ್ನವಾಗುವದು ಒಟ್ಟಿನ ಮೇಲೆ ಯಾವ ಪ್ರಾಣಿಗಳಿಗಾದರೂ ಗುಣವೇ ಪ್ರಾಧಾನ್ಯವು ಗುಣ-ಗೌರವಗಳು, ಬಲ-ಮಹತ್ವಗಳು, ವ್ಯಾಪ–ವೈಭವಗಳು ಇಲ್ಲದ ಪ್ರಾಣಿಯ ಜೀವನವು ವ್ಯರ್ಥವು ಆದ್ದರಿಂದಲೇ ಉತ್ತಮ

ಗುಣಗಳು ಐಶ್ವರ್ಯದ ಲಕ್ಷಣವೆಂದು ಹೇಳಲ್ಪಡುತ್ತವೆ ಈ ಲಕ್ಷಣವಿಲ್ಲದೆ ಹೋದಲ್ಲಿ ಅವಲಕ್ಷಣವೆಂದು ಬೇರೆ ಹೇಳಬೇಕಾಗಿಲ್ಲ.

ಜನರಲ್ಲಿ ಜ್ಞಾನಿಯಾದವನಿಗೇ ಮಾನ-ಮರ್ಯಾದೆಗಳುಂಟು ಕೇವಲ ಯಾವದೊಂದು ವಿದ್ಯೆಯಿದ್ದರೂ ಆ ಮಾನವನಿಗೆ ಮಹತ್ವವುಂಟಾಗುವದು. ಪ್ರಪಂಚ-ಪಾರಮಾರ್ಥಗಳೆರಡನ್ನೂ ಅರಿತವನು ಸಮರ್ಥನು ಅದನ್ನು ಅರಿಯದವನ ಜೀವನ ವ್ಯರ್ಥವೆಂದು ಹೇಳಬಹುದು ಹಾವು-ಚೇಳುಗಳು ನಮಗೆ ತಿಳಿಯದೆ ಕಚ್ಚುವವು, ನಮಗೆ ತಿಳಿಯದೆ ಗಂಡಾಂತರವೊದಗುವದು, ನಮ್ಮ ಯಾವದೊಂದು ಕಾರ್ಯವು ನಮಗೆ ತಿಳಿಯದಲೇ ಕೆಟ್ಟು ಹೋಗುವದು ಇದಲ್ಲದೆ ನಮಗೆ ಜ್ಞಾನವಾಗದೆ ಅದೆಷ್ಟೋ ಕ್ರಿಯೆಗಳು ಒದಗುವವು ಸುಳ್ಳು, ಮೋಸಗಾರಿಕೆ, ಅಪಜಯ, ಅಪಾಯ, ಜೀವನಾಶ ಅಹಿತ ಇವೆಲ್ಲವುಗಳ ದುಷ್ಪರಿಣಾಮಗಳು ನಮ್ಮ ಅಜ್ಞಾನ ಸ್ಥಿತಿಯಿಂದಲೇ ಪ್ರಾಪ್ತವಾಗುವವು ಸ್ವಹಿತವನ್ನು ತಿಳಿಯದ ಮಾನವನು ಕಷ್ಟವನ್ನನುಭವಿಸುವನು ಜ್ಞಾನವಿಲ್ಲದುದೇ ಅಜ್ಞಾನವು, ಅಜ್ಞಾನದಿಂದ ಅಧೋಗತಿಯು ಮಾಯೆ ಹಾಗು ಬ್ರಹ್ಮ, ಜೀವ ಮತ್ತು ಶಿವ, ಭಾವ–ಅಭಾವ ಇವುಗಳ ಬಗೆಗಿರುವ ಜಟಿಲ ಸಮಸ್ಯೆಗಳನ್ನು ಸಾರಾಸಾರ ವಿಚಾರ ತಿಳಿದುಕೊಳ್ಳುವದರಿಂದ ಜನನ–ಮರಣಗಳು ದೂರಾಗುವವು ನಿಜವಾದ ಕರ್ತೃವು ಯಾವನು? ಬಂಧ–ಮೋಕ್ಷಗಳ ಸ್ವರೂಪವೆಂತು? ನಿರ್ಗುಣ ದೇವನಾವನು? ಅವನನ್ನು ತಿಳಿಯುವಂಥವನಾದ ನಾನು ಯಾರು? ಈ ಉಭಯತರಲ್ಲಿಯ ಅನನ್ಯತೆಯು ಹೇಗಿರುವದು? ಇವೆಲ್ಲವುಗಳನ್ನು ಅರಿತವನೇ ಮುಕ್ತನು ಅವನಿಗೆ ಮುಕ್ತಿಯೊಗುವದು ಅವನಿಗೆ ಜ್ಞಾನವಾಗುತ್ತ ಹೋದಂತೆ ಅವನು ದೃಶ್ಯ ಬಂಧನಗಳಿಂದ ನಿವೃತ್ತನಾಗುವನು ಕೊನೆಗೆ ನಿಜವಾದ ಜ್ಞಾನವಾಗಲು ಅವನಲ್ಲಿಯ "ನಾನು" ಎಂಬ ಅಹಂತತೆಯ ಅಳಿದು ಹೋಗುವದು ಜ್ಞಾನವಿಲ್ಲದೆ ಕೋಟಿಗಟ್ಟಲೆ ಸಾಧನಗಳನ್ನು ಉಪಯೋಗಿಸಿ ಪರಿಶ್ರಮ ಮಾಡಿದರೂ ಆತನು ಮೋಕ್ಷ ಪಡೆಯಲು ಅರ್ಹನಾಗುವದಿಲ್ಲ ಮಾಯಾ–ಬ್ರಹ್ಮರನ್ನು ತಿಳಿದುಕೊಳ್ಳಬೇಕು ಹಾಗು ತನ್ನನ್ನು ತಾನು ಅರಿತುಕೊಳ್ಳಬೇಕು ಇಷ್ಟೇ ಆದರೂ ಜನನ-ಮರಣ ತಪ್ಪುವದು ಸಮರ್ಥರ ಹೃದ್ಗತವನ್ನು ಅರಿತು

ಕೊಂಡು ಆ ನೇಲೆ ಪ್ರಸಂಗಾನುಸಾರವಾಗಿ ವರ್ತಿಸಿದರೆ ಅಪಾರವಾದ ಸಿರಿ ಸಂಪತ್ತು ಪ್ರಾಪ್ತವಾಗುವದು ಆದರೆ ಹೀಗೆ ಅರಿತುಕೊಳ್ಳುವದು ಸಾಮಾನ್ಯ ಸಂಗತಿಯಲ್ಲ ಅರಿತರೆ ಸರ್ವಮಾನ್ಯವಾಗುವನು ಏನೊಂದನ್ನು ತಿಳಿಯ ದಿದ್ದರೆ ಎಲ್ಲರಿಂದ ಅಮಾನ್ಯನೆನ್ನಿಸಿಕೊಳ್ಳುವನು ಯಾವದೊಂದು ಪದಾರ್ಥವನ್ನು ಕಂಡು ಅಜ್ಞಾನದಿಂದ 'ಇದು ಭೂತಪಿಶಾಚವು" ಎಂಬದಾಗಿ ಭಾವಿಸಿ ಪ್ರಾಣಕ್ಕೆ ಎರವಾಗುವ ಅಜ್ಞಾನಿಗಳ ಉದಾಹರಣೆಗಳುಂಟು ಆದರೆ ಭೂತ ಪಿಶಾಚಗಳ ನಿಜಸಂಗತಿಯನ್ನರಿತವನು ಅವುಗಳ ಮಿಥ್ಯತೆಯನ್ನು ನಂಬಿ ಭಯ ಪಡಲಾರನು ಎಲ್ಲ ವಸ್ತುಗಳ ಧರ್ಮಾಧರ್ಮಗಳು ಜ್ಞಾನವುಳ್ಳವರಿಗೇ ಗೊತ್ತು ಅಜ್ಞಾನಿಗಳಿಗೆ ತಿಳಿಯಲಾರದು ಅಜ್ಞಾನಿಗುಂಟಾಗುವ ಯಮಯಾತನೆಗಳು ಜ್ಞಾನಿಗೇನೊಂದೂ ಸಂಬಂಧಿಸುವದಿಲ್ಲ ಇದೆಲ್ಲವುಗಳನ್ನರಿತು ವಿವೇಚನೆ ಮಾಡುವವನೇ ಮುಕ್ತನು ರಾಜಕಾರಣದಲ್ಲಿ ಅಜ್ಞಾನದಿಂದ ವರ್ತಿಸಿದವನು ಅಪಮಾನ ಹೊಂದಿ ಪ್ರಾಣಕ್ಕೆ ಎರವಾಗುವನು ಅಜ್ಞತೆಯಿಂದಲೇ ಕಠಿಣ ಪ್ರಸಂಗಗಳೊದಗುವವು ಒಟ್ಟಿನ ಮೇಲೆ ಅಜ್ಞಾನವು ಕೆಟ್ಟದಾದದ್ದು ಜ್ಞಾನರಹಿತ ಪ್ರಾಣಿಯು ನಿರರ್ಥಕವು ಆದ್ದರಿಂದಲೇ ಜ್ಞಾನವನ್ನು ಸಂಪಾದಿಸಿಕೊಳ್ಳುವದೇ ಇದಕ್ಕೆ ಉತ್ತಮ ಉಪಾಯವು ತಿಳಿದವನಿಗೆ ಪ್ರಪಂಚವೂ ರಾಜಕಾರಣವೂ ಹಾಗು ಪರಮಾರ್ಥವೂ ಇವೆಲ್ಲ ಸಾಧ್ಯವಾಗುವವು ಎಲ್ಲ ಕಾರ್ಯಗಳನ್ನು ಮಾಡಿ ಅಲಿಪ್ತನಾಗಿರಬೇಕೆಂಬುವದು ಬುದ್ಧಿವಂತನಿಗೇ ಗೊತ್ತು ಜ್ಞಾನವಿಲ್ಲದೆ ಬಂಧನವನ್ನು ಹರಿದೊಗೆಯುವ ಸಮರ್ಥನಾವನೂ ಇರುವದಿಲ್ಲ ತಿಳುವಳಿಕೆಯೇ ಆತ್ಮಸ್ವರೂಪದ ಸ್ಮರಣೆಯು ಅಜ್ಞಾನವೇ ಅದರ ವಿಸ್ಮರಣವು ಈ ಸ್ಮರಣೆ-ವಿಸ್ಮರಣೆಗಳಲ್ಲಿಯ ಪ್ರಮಾಣವು ಬಲ್ಲ ಬುದ್ಧಿವಂತನಿಗೇ ಗೊತ್ತು. ತಿಳಿದವನೇ ಜಾಣನು, ತಿಳಿಯದವನೇ ದೀನದರಿದ್ರನು ತಿಳುವಳಿಕೆಯಿಂದಲೇ ಜ್ಞಾನದ ವಿಜ್ಞಾನವು ಅಂದರೆ ಸ್ವರೂಪ ಸ್ಥಿತಿಯು ಉಂಟಾಗುವದು ಬ್ರಹ್ಮಸ್ವರೂಪವುಂಟಾದಾಗ ಜ್ಞಾನವು ನಿರುಪಯುಕ್ತವಾಗುವದು, ಶಬ್ದವು ನಿಂತು ಹೋಗುವದು ಹಾಗು ಸಮಾಧಾನವು ಉದ್ದೇಶವಿಹೀನವಾಗುವದು ಈ ಪ್ರಕಾರ ಗುರುಗಳು ಶಿಷ್ಯನಿಗೆ ಬೋಧೆ ಮಾಡಿದರು

ಇದಾದ ಬಳಿಕ ಶಿಷ್ಯನು— "ಈ ಪ್ರಮಾಣ ಶ್ರವಣದಿಂದ ನನಗೆ ಪರಮ ಸಮಾಧಾನವಾಯಿತು ಇನ್ನು ನನಗೆ ಪಿಂಡ-ಬ್ರಹ್ಮಾಂಡಗಳ ಐಕ್ಯ ಲಕ್ಷಣವನ್ನು ಬೋಧಿಸುವದಾಗಬೇಕು ಪಿಂಡವೇ ಬ್ರಹ್ಮಾಂಡವು, ಮತ್ತು ಪಿಂಡದಂತೆ ಬ್ರಹ್ಮಾಂಡ ರಚನೆಯು ಎಂದು ಹೇಳಲ್ಪಡುವದು ಇದರ ಸರಿಯಾದ ಮರ್ಮವನ್ನು ನನಗೆ ತಿಳಿಸುವದಾಗಬೇಕು" ಎಂದು ಕೇಳಿದನು

ಶ್ರೀ ರಾಮ || ೩ ಅನುಮಾನ ನಿರಸನ || ಶಿಷ್ಯನು ಈ ಮೊದಲು ಪಿಂಡ ಬ್ರಹ್ಮಾಂಡ ವಿಷಯಕ್ಕೆ ಮಾಡಿದ ಪ್ರಶ್ನೆಗೆ ಗುರುಗಳು ಉತ್ತರ ರೂಪವಾಗಿ:—

"ಪಿಂಡ ವಿಷಯಕವಾಗಿ ಸ್ಥೂಲ ದೇಹ, ಸೂಕ್ಷ್ಮ ದೇಹ, ಕಾರಣ ದೇಹ ಹಾಗು ಮಹಾಕಾರಣ ದೇಹ ಹೀಗೆ ನಾಲ್ಕು ಶರೀರಗಳುಂಟು ಅದರಂತೆ ಬ್ರಹ್ಮಾಂಡಕ್ಕೆ ಸಂಬಂಧಿಸಿ ವಿರಾಟ, ಹಿರಣ್ಯ, ಅವ್ಯಾಕೃತ ಮತ್ತು ಮೂಲ ಪ್ರಕೃತಿ ಹೀಗೆ ನಾಲ್ಕು ಶರೀರಗಳುಂಟು ಇದೆಲ್ಲವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವದು ಆದರೂ ಪ್ರಮಾಣ ಭೂತವಾಗಿ ಅನುಭವಕ್ಕೆ ತಂದುಕೊಳ್ಳಬೇಕು

| | | | |
|---|---|---|---|
| ಪಿಂಡದಲ್ಲಿ | ಅಂತಃಕರಣ | ಬ್ರಹ್ಮಾಂಡದಲ್ಲಿ | ವಿಷ್ಣುವೂ ಇರುವನು |
| ,, | ಮನವು | ,, | ಚಂದ್ರನು ,, |
| ,, | ಬುದ್ಧಿಯು | ,, | ಬ್ರಹ್ಮನು ,, |
| ,, | ಚಿತ್ತವು | ,, | ನಾರಾಯಣನು ,, |
| ,, | ಅಹಂಕಾರವು | ,, | ರುದ್ರನು |

ಈ ಪ್ರಕಾರವಾಗಿ ಶಾಸ್ತ್ರಗಳಲ್ಲಿ ಹೇಳಿದೆ ಎಂದು ಗುರುಗಳು ಹೇಳಿದರು. ಆಗ ಶಿಷ್ಯನು— "ವಿಷ್ಣುವಿಗೆ ಅಂತಃಕರಣವು, ಚಂದ್ರನಿಗೆ ಮನವು ಇತ್ಯಾದಿಯಾಗಿ ಹೇಳುವ ಸಂಬಂಧಗಳ ಲಕ್ಷಣಗಳನ್ನು ನನಗೆ ಹೇಳುವದಾಗಬೇಕು" ಎಂದು ತನ್ನ ಆನುಮಾನಿಕ ಪ್ರಶ್ನೆಗಳನ್ನು ಮತ್ತೂ ಮುಂದುವರಿಸಿ—

"ನಿಶ್ಚಿತ ಅನುಭವಕ್ಕೆ ಅನುಮಾನವು ಸಿಂಹದ ಮುಂದಿರುವ ಶ್ವಾನದಂತೆಯೂ ಸತ್ಯದ ಎದುರಿದ್ದ ಅಸತ್ಯದಂತೆಯೂ ಪ್ರಮಾಣ ಭೂತವಾಗಲಾರದು ಆದರೂ ಇದರ ನಿಷ್ಕರ್ಷೆಯಾಗಿ ಯಾವದೊಂದು ನಿಶ್ಚ

ಯಕ್ಕೆ ಬರಬೇಕು ಇವರ ಪರೀಕ್ಷೆಯಾಗದಿದ್ದರ ಅನುಮಾನ ಸಂಶಯ ಗಳಲ್ಲಿರಬೇಕಾಗುವದು ಸ್ವಾಮಿ: ಅಂತ:ಕರಣ ಪಂಚಕಗಳಿಗೆ ವಿಷ್ಣು ಚಂದ್ರ, ಬ್ರಹ್ಮ, ನಾರಾಯಣ ಹಾಗು ರುದ್ರ ಇವರ ಸಂಬಂಧವನ್ನು ತಿಳಿಸುವದಾಗಬೇಕು " ಎನ್ನಲು ಇಲ್ಲಿ ಪ್ರತ್ಯಕ್ಷಾನುಭವವು ಪ್ರಮಾಣ ವಾಗಿರಲು ಶಾಸ್ತ್ರಗಳ ಅನುಮಾನವು ನಿರುಪಯುಕ್ತವು ಹೀಗಿದ್ದು ಶಾಸ್ತ್ರ ದಿಂದ ಅನುಭವವೆಂತಾಗಬೇಕು? ಅನುಭವವಿಲ್ಲದ ಮಾತುಗಳು ತಲೆ ಚಿಟ್ಟೆನ್ನಿಸುವವು ಬಾಯ್ದೆರೆದು ಬೊಗಳುವ ನಾಯಿಯ ಬೊಗಳಿಕೆ ಯಂತಾಗುವದು ಅಂದರೆ ಅನುಭವವು ಶೂನ್ಯಾಕಾರ ಹೊಂದುವದು ಅನುಭವ ದೃಷ್ಟಿಯು ಕಾಣದಂತಾಗಲು ಅಜ್ಞಾನವೆಂಬ ಅಂಧಕಾರವೇ ತೋರುವದು ಇನ್ನು 'ಪಿಂಡದಂತೆ ಬ್ರಹ್ಮಾಂಡವು' ಎಂದು ಕಲ್ಪಿಸಲು ಅದು ಅನುಭವಕ್ಕೆ ಹೇಗೆ ಬರುವದು? ಎಂಬ ಪ್ರಶ್ನೆಯು ಕೇವಲ ಅನುಮಾನ ಯುಕ್ತವು ಮತ್ತು ಕಲ್ಪನೆ ಎಂಬ ಅಡವಿಯಂತಾಗಿರು ದದು ಹೀಗೆ ತುಡುಗನಂತೆ ಅಡವೀ ನೇರುವದು ಒಳಿತಲ್ಲ

ಇನ್ನೊಂದು ವಿಚಾರವು– ದೇವ ಪ್ರತಿಷ್ಠಾಪನೆಯನ್ನು ಮಂತ್ರಗ ಳನ್ನುಚ್ಚರಿಸುತ್ತ ಮಾಡುವರು ಆ ದೇವನೂ ಮಂತ್ರಗಳೂ ಕಲ್ಪನೆಗಳು ಹೀಗೆ ತಿಳಿಯುವದರಿಂದ ದೇವನು ಸ್ವತಂತ್ರನಾಗಿರದೆ ಮಂತ್ರಾಧೀನನಾ ಗಿರುವನೆಂಬದನ್ನು ಹೇಳಿದಂದಾಗುತ್ತದೆ ಈ ಪ್ರಕಾರ ಹೇಳಕೂಡದು ಹೇಳುವದಾದಲ್ಲಿ ವಿವೇಕದಿಂದ ನುಡಿಯಬೇಕು ಕುರುಡನು ಕೋಲ ನ್ನಾಡಿಸಿ ಹೆಜ್ಜೆಯನ್ನಿಡುವಂತೆ ವರ್ತಿಸತಕ್ಕದ್ದು ಕವಿಗಳು ತಮ ತಮಗೆ ತಿಳಿದಂತೆ ಕವಿತ್ವ ಮಾಡಿದರೂ ಅನುಭವದಿಂದ ಅವುಗಳಲ್ಲಿ ಯೋಗ್ಯಾ ಯೋಗ್ಯಗಳನ್ನು ಅನುಭವದಿಂದ ಕಂಡು ಆರಿಸಿಕೊಳ್ಳಬೇಕು ಬ್ರಹ್ಮನು ಸಕಲವನ್ನೂ ನಿರ್ಮಿಸಿದನು ಅಂದಮೇಲೆ ಆ ಬ್ರಹ್ಮನನ್ನು ಅದಾರು ನಿರ್ಮಿಸಿದರು? ವಿಷ್ಣುವು ಜಗತ್ತನ್ನು ರಕ್ಷಿಸುವನೆಂದಮೇಲೆ ಆ ವಿಷ್ಣುವನ್ನು ಸಲಹುವವರಾರು? ರುದ್ರನಿಂದ ವಿಶ್ವ ಸಂಹರಣೆಯು ಆದರೆ ಆ ರುದ್ರನು ಯಾರಿಂದ ಸಂಹಾರನಾಗುವನು? ಕಾಲನು ಸರ್ವರ ನಿಯಂತ್ರಕನೆಂದ ಮೇಲೆ ಅವನನ್ನು ನಿಯಂತ್ರಿಸುವವರಾರು? ಇವೆಲ್ಲವೂ ಬೋಧೆಯಾಗಬೇಕು ಇದು ತಿಳಿಯದಿದ್ದರೆ ಅಂಧಃಕಾರವಿಡುಗುವದು,

ಇದರ ನಿವಾರಣೆಯು ಸಾರಾಸಾರ ವಿಚಾರದಿಂದಾಗುವದು ಬ್ರಹ್ಮಾಂಡವು ಸ್ವಭಾವ ಸಿದ್ಧವಾದದ್ದು ಆದರೆ ಪಿಂಡಾಕಾರವು ಕಲ್ಪಿತವಾಗಿರುವದು ಕಲ್ಪಿತವಾದರೂ ಎಂದೂ ಅನುಭವಕ್ಕೆ ಬರಲಾರದು ಬ್ರಹ್ಮಾಂಡದ ಅನುಭವವನ್ನು ನಿರೀಕ್ಷಿಸಲು ಹಲವು ಸಂಶಯಗಳು ಹುಟ್ಟುವವು ಆದರೆ ಅವೆಲ್ಲ ಸಂಶಯಗಳು ಕಾಲ್ಪನಿಕಗಳೆಂದು ತಿಳಿದುಕೊಳ್ಳಬೇಕು ' ಪಿಂಡದಂತೆಯೇ ಬ್ರಹ್ಮಾಂಡ ರಚನೆಯು ' ಎಂಬ ಅನುಮಾನವನ್ನು ಯಾರಾದರೂ ಸಂಕಿಸಿದಲ್ಲಿ— ಬ್ರಹ್ಮಾಂಡದಲ್ಲಿ ಹಲವು ಪದಾರ್ಥಗಳಿರುವವು- ಆದರೆ ಪಿಂಡದಲ್ಲಿ ಅವೆಲ್ಲವೂ ಎಲ್ಲಿರುವವು? ಮೂರುವರೆ ಕೋಟಿ ಭೂತಾವಳಿಗಳೂ, ಅಷ್ಟೇ ತೀರ್ಥಗಳ ಸಮುದಾಯವೂ ಹಾಗು ಅಷ್ಟೇ ಸಂಖ್ಯೆಯ ಮಂತ್ರಗಳೂ ಬ್ರಹ್ಮಾಂಡದಲ್ಲಿರುವಂತೆ ಪಿಂಡದಲ್ಲಿ ಎಲ್ಲಿರುವವು? ಮೂವತ್ಮೂರು ಕೋಟಿ ದೇವತೆಗಳೂ, ೮೮ ಸಾವಿರ ಋಷಿ ವರ್ಯರೂ ಒಂಭತ್ತು ಕೋಟಿ ಕಾತ್ಯಾಯಣಿಗಳೂ ಪಿಂಡಾಂಡದಲ್ಲಿ ಎಲ್ಲಿರುವರು? ಐವತ್ತಾರು ಕೋಟಿ ಚಾಮುಂಡಿಯರೂ, ಕೋಟ್ಯಾನುಕೋಟಿ ಜೀವ ರಾಶಿಗಳೂ ಎಂಭತ್ನಾಲ್ಕು ಲಕ್ಷ ಯೋನಿಗಳ ದಟ್ಟಣೆಯೂ ಪಿಂಡದಲ್ಲಿ ಎಲ್ಲಿ ಕಂಡು ಬರುವವು? ಬ್ರಹ್ಮಾಂಡದಲ್ಲಿ ಬೇರೆಬೇರೆ ಸ್ವರೂಪಗಳಿಂದ ನಿರ್ಮಿತವಾದವೆಲ್ಲವೂ ಪಿಂಡದಲ್ಲಿ ಇರಬೇಕಲ್ಲವೇ ? ಹಾಗೆಲ್ಲಿರುವವು ? ಎಷ್ಟೋ ಔಷಧಿಗಳು, ರಸಭರಿತವಾದ ಹಲವು ಪ್ರಕಾರದ ಫಲಗಳು ಅನೇಕ ಬೀಜಗಳು, ಎಲ್ಲ ಧಾನ್ಯಗಳು ಇವೆಲ್ಲವುಗಳು ಪಿಂಡದಲ್ಲಿ ಎಲ್ಲಿ ಇರುವವು? ಇದೆಲ್ಲವನ್ನು ನಿರೋಪಿಸಿರಿ " ಎಂದು ಕೇಳಲು " ಇನ್ನು ಹೇಳಕೂಡದಷ್ಟು ಇರುವದೆಂಬದನ್ನು ವ್ಯರ್ಥವಾಗಿ ಹೇಳಲಾಗದು ಹೇಳಲಿಕ್ಕೆ ಬಾರದೆ ಇದ್ದರೂ ಅನುಮಾನ ಪಡುವದು ಲಜ್ಜಾಸ್ಪದವಾದದ್ದು

ಆದರೂ ಇದೊಂದು ಹೊಸದನ್ನು ನಿರೋಪಿಸಿದೆವು ವ್ಯರ್ಥವಾಗಿ ಹೇಳುವದರಿಂದ ಪ್ರಯೋಜನವೇನು? ಆ ಮೂಲಕ ಅನುಮಾನಕ್ಕೆ ಆಸ್ಪದವನ್ನು ಕೊಟ್ಟಿಲ್ಲ ಬ್ರಹ್ಮಾಂಡದಲ್ಲಿ ಪಂಚ ಭೂತಗಳಿರುವಂತ ಪಿಂಡಾಂಡದಲ್ಲಿಯೂ ಇರುವವೆಂಬದು ನಿಶ್ಚಿತವಾದ ಅನುಭವವು ಬ್ರಹ್ಮಾಂಡವು ಪಂಚಭೂತಗಳುಳ್ಳದ್ದು ಮತ್ತು ಪಿಂಡವು ಪಂಚಭೂತಾ

ತ್ಮಕವಾದದ್ದು ಈ ಮಾತಿನ ಹೊರತು ಉಳಿದ ಮಾತುಗಳೆಲ್ಲ ಅನುಮಾ ನಿಕ ಮಾತುಗಳೇ ಆಗಿರುವವು ಅನುಮಾನವುಳ್ಳ ಜ್ಞಾನವನ್ನು ವಮನ (ಕಾರಿಕೆ)ಯಂತೆ ಯಾವಾಗಲೂ ತ್ಯಾಜ್ಯವೆಂದು ತಿಳಿಯತಕ್ಕದ್ದು ಪಿಂಡ ಬ್ರಹ್ಮಾಂಡಗಳಲ್ಲಿಯ ದೇಹಗಳ ಸ್ಥಾನಮಾನವೂ, ರಚನೆಯೂ ಅವುಗಳ ಲ್ಲಿರುವ ಪದಾರ್ಥಗಳೂ, ದೇವತೆಗಳೂ ಮುಂತಾಗಿ ಇವೆಲ್ಲವುಗಳ ಬಗೆಗೆ ಹೇಳಿದ ಮಾತುಗಳೆಲ್ಲ ಅನುಮಾನಯುಕ್ತವಾದವುಗಳು ಪರಮಾರ್ಥ ವಿಷಯದಲ್ಲಿ ಇವಕ್ಕೆ ಮಹತ್ವವಿಲ್ಲ ಬ್ರಹ್ಮಾಂಡದಂತೆಯೇ ಪಿಂಡಾಂಡವು ಪಂಚಭೂತಾತ್ಮಕವಾಗಿರುವದು ಆದರೆ—ಪಿಂಡ—ಬ್ರಹ್ಮಾಂಡಗಳೆರಡೂ ನಶ್ವರವಾದವುಗಳು ಎಂಬದನ್ನು ಅರಿತುಕೊಂಡು ಸಮಾಧಾನವನ್ನು ಕಂಡು ಕೊಳ್ಳಬೇಕು ಇದೇ ಮುಖ್ಯವಾದದ್ದು" ಎಂದರು

ಶ್ರೀ ರಾಮ || ೬ ಗುಣ ನಿರೂಪಣ ||

"ನಿರಾಕಾರವಾದ ಆಕಾಶದಲ್ಲಿ ವಾಯುವಿನ ವಿಕಾರವಿರುವಂತೆ ನಿರ್ಗುಣ ಬ್ರಹ್ಮನಲ್ಲಿ ಮೂಲ ಮಾಯೆಯ ವಿಕಾರವಿರುವದೆಂದು ಹಿಂದೆ ಜ್ಞಾನ ದಶಕದಲ್ಲಿ ಹೇಳಿದೆ ಹಾಗು ಮೂಲ ಮಾಯೆಯು ಪಂಚಭೌತಿ ಕವಾದದ್ದೆಂದು ತೋರಿಸಿರುತ್ತದೆ ಈಗ ಮೂಲ ಮಾಯೆಯಲ್ಲಿ ಸತ್ವ, ರಜ, ತಮ ಈ ಮೂರು ಗುಣಗಳು ಸೂಕ್ಷ್ಮ ರೂಪದಿಂದ ಇರುವ ವೆಂಬದನ್ನು ಕಾಣಬೇಕು ಪಿಂಡದ ಮಹಾಕಾರಣ ದೇಹದಲ್ಲಿಯ ಸರ್ವ ಸಾಕ್ಷಿಣಿ ತೂರ್ಯಾವಸ್ಥೆಯಂತೆ ಬ್ರಹ್ಮಾಂಡದ ಮಹಾಕಾರಣದಲ್ಲಿ ಮೂಲ ಮಾಯೆಯಿರುವದು ತೂರ್ಯಾವಸ್ಥೆಯಂತೆಯೇ ಮೂಲ ಮಾಯೆಯ ಲ್ಲಿಯೂ ಅರಿವು ಇರುವದು ಮೂಲ ಮಾಯೆಯಲ್ಲಿ ಮೂರೂ ಗುಣ ಗಳು ಗುಪ್ತವಾಗಿ ಇದ್ದರೂ ಅವು ಸ್ಪಷ್ಟವಾಗಲು ಆ ಮೂಲ ಮಾಯೆಗೆ ಗುಣಕ್ಷೋಭಿಣಿ ಅಥವಾ ಗುಣಮಾಯೆಯೆನ್ನುವರು ದಂಟಿನಲ್ಲಿಯ ಕದರ ಹೊಡೆಯು ಮುಂದೆ ಹೊಡೆಬಿಚ್ಚಿ ಹೊರಬೀಳುವಂತೆ ಮೂಲಮಾಯೆ ಯಿಂದ ಗುಣಗಳು ಪ್ರಕಟವಾಗುವವು ಅಂದರೆ ವಾಯು ಸ್ವರೂಪದ ಮೂಲ ಮಾಯೆಯ ಹೆಚ್ಚಿನ ವ್ಯಕ್ತ ಸ್ವರೂಪವು ವ್ಯಕ್ತವಾಗುವದು ಈ ಸ್ವರೂಪವೇ ಗುಣ ಮಾಯೆಯೆಂದೆನ್ನಿಸಿ ಕೊಳ್ಳುವದು ಈ ಗುಣ ಮಾಯೆ ಯಿಂದ ಸತ್ವ, ರಜ, ತಮಗಳ ಏಕತ್ರಿತ ಸ್ವಭಾವವು ನಡೆಯುವದು

ಆಗ ಆ ಗುಣ ಳಿಂದ ಆಕಾರ, ಉಕಾಗ, ಮಕಾರ ಹೀಗೆ ಒಟ್ಟುಗೂಡಿ 'ಓಂ' ಎಂಬ ಮಾತ್ರಾಯುಕ್ತ ಶಬ್ದ ಧ್ವನಿಯು ಉತ್ಪನ್ನವಾಗುವದು ಈ ಶಬ್ದ ಗುಣವು ಆಕಾಶದ್ದು ಈ ಶಬ್ದದಿಂದಲೇ ವೇದಗಳು—ಶಾಸ್ತ್ರಗಳು ಮೂರ್ತಗೊಂಡವು ಶಬ್ದವು ಆಕಾಶದ ಗುಣವಾದುದರಿಂದ ಅಲ್ಲಿ 'ಓಂ' ಎಂಬ ಮಾತ್ರಾಮಯ ಶಬ್ದವು ಉತ್ಪನ್ನವಾಯಿತು ಅರ್ಥಾತ್ ಆಕಾಶದಿಂದ ವಾಯುವು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಜಲವು, ಜಲದಿಂದ ಪೃಥ್ವಿಯು ಈ ಕ್ರಮದಿಂದ ಪಂಚ ಭೂತಗಳ ಉತ್ಪತ್ತಿಯಾಯಿತು ಈ ಐದು ಭೂತಗಳು ಹಾಗು ಮೂರು ಗುಣಗಳು ಕೂಡಿ ಅಷ್ಟಧಾ ಪ್ರಕೃತಿಯೆನ್ನಿಸುವದು ಈ ಆಷ್ಟಧಾ ಪ್ರಕೃತಿಯು ಮೂಲತ ವಾಯು ಸ್ವರೂಪವಾಗಿರುವದು ವಾಯುವಿನ ಚಲನ ವಲನದಿಂದ ಸತ್ವಗುಣ ರಜೋಗುಣ ಹಾಗು ತಮೋ ಗುಣಗಳು ಹೀಗೆ ಮೂರೂ ಗುಣಗಳು ವಾಯುವಿನ ಚಲನ–ವಲನದಿಂದ ಕಂಡು ಬರುವವು ಆಕಾಶದಿಂದ ವಾಯುವು, ಇತ್ಯಾದಿಯಾಗಿ ಪಂಚ ಭೂತಗಳ ಕ್ರಮವು ಕಂಡು ಬರುವದು ಆದರೆ ಈ ಮೂರೂ ಗುಣಗಳು, ಪಂಚ ಭೂತಗಳು ಕೂಡಿ ಉಂಟಾದ ಅಷ್ಟಧಾ ಪ್ರಕೃತಿಯು ಹಾಗು ಅವರ ಸ್ವರೂಪವು ಮೂಲದಲ್ಲಿಯೇ ಅಂದರೆ ವಾಯುರೂಪ ಮೂಲ ಮಾಯೆಯಲ್ಲಿಯೇ ಕಂಡು ಬರುವದು ಹೀಗೆ ತ್ರಿಗುಣ ಪಂಚ ಭೂತಗಳ ಮಿಲನವು ಮೂಲ ಮಾಯೆಯಲ್ಲಿಯೇ ಇರುವದು. ಇನ್ನೂ ಹೇಳುವದಾದರೆ—

"ಬೀಜದಲ್ಲಿಯೇ ವೃಕ್ಷವು" ಎಂಬ ನ್ಯಾಯದಂತೆ ಮೂಲ ಮಾಯೆಯಲ್ಲಿಯೇ ಪಂಚ ಭೂತಗಳು ಮಿಶ್ರಿತವಾಗಿರುವವು ಆದರಿಂದ ಮುಂದೆ ಆಕಾಶಾದಿ ಪ್ರತಿಯೊಂದು ಭೂತದಲ್ಲಿ ಉಳಿದ ನಾಲ್ಕು ಭೂತಗಳ ಅಂತರ್ಭಾವ ವಿರುವದರಿಂದ ಐದು ಭೂತಗಳ ಮಿಶ್ರಣವು ಭರದಿಂದ ನಾಗುವದು ಪಂಚ ಭೂತಗಳಿಗಾದರೂ ಅರಿವು ಉಂಟು ಅವು ಕೆಲವೆಡೆ ಸೂಕ್ಷ್ಮವೂ ಕೆಲವೆಡೆ ಸ್ಥೂಲವೂ ಆಗಿರುವವು ಆದರೂ ಅವು ಇಲ್ಲೆಂದು ಅನ್ನಲಿಕ್ಕೆ ಬರಲಾರದು. ಕಟ್ಟಿಗೆಯಲ್ಲಿ ಅಗ್ನಿಯು ತೋರುವದಿಲ್ಲ ಇಲ್ಲವೆ ನಿಶ್ಚಲ ವಾಯುವು ಭಾಸವಾಗುವದಿಲ್ಲ. ಎಂದಮೇಲೆ ಅವು ಇಲ್ಲೆಂದು

ಅನ್ನಲಿಕ್ಕೆ ಬರಲಾರದು ಈ ರೀತಿಯಂತೆ ಪಂಚ ಭೂತಗಳಲ್ಲಿ ಸತ್ವ ಗುಣಾದಿಗಳು ತೋರದಿದ್ದರೂ ಅವು ಇಲ್ಲೆನ್ನಲಾಗದು ಮತ್ತು ಪ್ರತಿಯೊಂದು ಭೂತದಲ್ಲಿ ಉಳಿದ ಭೂತಗಳ ಅಂಶಗಳು ಇರುವವು ಹಾಗು ಮೂರೂ ಗುಣಗಳೂ ಇರುವವು ಭೂತಗಳು ಭಿನ್ನ ಭಿನ್ನ ಪ್ರಕಾರವಾಗಿ ತೋರುವವು ಆದರೆ ವಿಚಾರದಿಂದ ನೋಡಲು ಭಿನ್ನತೆಯಿಲ್ಲ ಬ್ರಹ್ಮನಿಂದ ಮೂಲ ಮಾಯೆಯು, ಮೂಲ ಮಾಯೆಯಿಂದ ಗುಣ ಮಾಯೆಯು, ಆ ಗುಣ ಮಾಯೆಯಿಂದ ತ್ರಿಗುಣಗಳು, ಆ ಗುಣಗಳಿಂದ ಪಂಚ ಭೂತಗಳು ಸ್ಪಷ್ಟವಾಗಿ ತೋರುವವು ಇದರ ಮೇಲಿಂದ ಗುಣಗಳಿಂದ ಭೂತಗಳುಂಟಾದವೆಂದೆನ್ನಬಹುದು ಇದರಿಂದ ಆಕಾಶವಾದರೂ ಗುಣದಿಂದ ಉತ್ಪನ್ನವಾಯಿತೆಂದು ತಿಳಿಯಕೂಡದು ಯಾಕೆಂದರೆ ಆಕಾಶದ ಗುಣವು ಶಬ್ದವೆಂದು ಶಾಸ್ತ್ರವು ಹೇಳುವದು ಆದ್ದರಿಂದ ಅದುವೇ ನಿಜವಾಗಿರುವದೆಂದು "ಶಿಷ್ಯನು ನುಡಿದನು ಆಗ ಗುರುಗಳು—

" ಒಂದು ಬಗೆಯಾಗಿ ಹೇಳಿದ್ದನ್ನು ಬೇರೊಂದು ಬಗೆಯಾಗಿ ತಿಳಿದು ಕೊಳ್ಳುವ ಶ್ರೋತೃಗಳನ್ನು ಸಮಾಧಾನಗೊಳಿಸುವದು ಕಠಿಣವು ಬೋಧೆಯಾಗುವಂತೆ ಹೇಳಿದ ಮೇಲೆಯೂ ತಿಳಿದುಕೊಳ್ಳಲಾರದ ಹಾಗು ದೃಷ್ಟಾಂತಗಳಿಂದ ಹೇಳಿದರೂ ತರ್ಕಿಸಲಾರದ ಮಂದ ಬುದ್ಧಿಗಳಿಗೆ ಉಪದೇಶ ಮಾಡುವದೆಂತು? ಪಂಚ ಭೂತಗಳು ಒಂದಕ್ಕಿಂತಲೂ ಒಂದು ಹೆಚ್ಚು ಎಂದು ಹೇಳಿರುವೆವು. ಆದರೆ ಆ ಭೂತಗಳಿಗಿಂತ ವರಿಷ್ಠರು ಯಾರಿರುವರು? ಮೂಲತಃ ಮೂಲ ಮಾಯೆಯು ಪಂಚ ಭೂತಾತ್ಮಕವು ಆದ್ದರಿಂದ ಅದು ಮಿಥ್ಯವಾಗಿರುವದು ಮತ್ತು ಆ ಮೂಲ ಮಾಯೆಯ ಆಚಗೆ ನಿರ್ಗುಣ ಬ್ರಹ್ಮನೊಬ್ಬನೇ ಇರುವನು ಬ್ರಹ್ಮನಲ್ಲಿಂದಲೇ ಮೂಲ ಮಾಯೆಯು ಈ ವಿಚಾರದಿಂದ ನೋಡಲು ಆ ಮೂಲ ಮಾಯೆಯು ಭೂತಗಳನ್ನೂ ತ್ರಿಗುಣಗಳನ್ನೂ ಕರಗಿಸಿ ಒಂದಾಗಿಸುವ 'ಮುಸಿ'ಯಾಗಿದೆ ಎಂದು ಹೇಳಬಹುದು ಈಗ ಪೃಥ್ವಿ, ಆಪ, ತೇಜ ಹಾಗು ವಾಯು ಈ ನಾಲ್ಕು ಭೂತಗಳು ವಿಕಾರವುಳ್ಳವಾಗಿವೆ ಮತ್ತು ಆಕಾಶವು ನಿರ್ವಿಕಾರವು ಆ ಆಕಾಶವು ಭೂತವೆಂಬ ವಿಚಾರವನ್ನು ಉಪಾಧಿಗಾಗಿ ಸ್ವೀಕೃತ ಮಾಡಿಕೊಂಡಿದೆ ಜೀವವು ಪಿಂಡದ ಉಪಾಧಿಯೆಂದೂ

ಶಿವನು ಬ್ರಹ್ಮಾಂಡದ ಉಪಾಧಿಯೆಂದೂ ಹೇಳಿರುವದರಿಂದ ' ಜೀವ ' 'ಶಿವ'ಗಳ ಸತ್ಯಾರ್ಥವನ್ನು ನಿರೀಕ್ಷಿಸುವ ಹವ್ಯಾಸವು ಕುಂಚಿತನದ್ದಾಗುವದು ಅದರಂತೆ ಆಕಾಶವನ್ನು ಉಪಾಧಿಗಾಗಿ ಭೂತವೆಂದು ಎಣಿಸಿದರೂ ಕೂಡ ಉಳಿದ ನಾಲ್ಕು ಭೂತಗಳಂತೆ ಅದು ಗುಣದಿಂದಾಯಿತೆಂದು ಬಗೆಯುವದು ತಪ್ಪಾಗುತ್ತದೆ ಉಪಾಧಿಯಿಂದಲೂ, ಭಾಸರೂಪದಿಂದಲೂ ಅದು ಭೂತಗಳಲ್ಲಿ ಗಣಿಸಲ್ಪಡುತ್ತದೆ ಆಕಾಶವೆಂದರೆ ಅವಕಾಶವುಳ್ಳದ್ದು. ಹಾಗು ಭಾಸರೂಪವಾಗಿ ತೋರತಕ್ಕಂಥದ್ದು ಇಲ್ಲಿ ಭಾಸ ರೂಪವೆಂದರೆ 'ಶೂನ್ಯ' ಎಂಬರ್ಥ ಆಕಾಶವು ಭಾಸರೂಪವಾದಂತೆ ಬ್ರಹ್ಮನು ನಿರಾಭಾಸನಾಗಿರುವನು ಉಪಾಧಿ ನಿಮಿತ್ತವಾಗಿಯೇ ಆಕಾಶವು ಭೂತಗಳಲ್ಲಿ ಎಣಿಕೆಯಾಗುವದು ಆ ಉಪಾದಿಯಿಲ್ಲದಿದ್ದರೆ ಅದೇ ಆಕಾಶವು ಉಪಾಧಿ ರಹಿತ ಬ್ರಹ್ಮನೆನ್ನಿಸಿ ಕೊಳ್ಳುತ್ತಿತ್ತು ಸತ್ವ, ರಜ, ತಮ ಇವು ಗುಣಗಳಿಗೆ ಆಧರಿಸಿದವುಗಳು ಇವುಗಳಲ್ಲಿಯಾದರೂ ಗುಣ ರೂಪಗಳು ಬಂದಿರುವವೆಂದು ತಿಳಿಯಬೇಕು ಅಷ್ಟಧಾ ಪ್ರಕೃತಿಯು ಹೇಳಿಕೇಳಿ ವಿಕಾರವಂತವು ಆ ಪ್ರಕೃತಿಯೊಂದರಿಂದ ಅನೇಕ ಪ್ರಕೃತಿಗಳು ಉಂಟಾದರೆ ಅವುಗಳಲ್ಲಿ ತಾಳುಮೇಳುಗೂಡುವದು ಶಕ್ಯವಿಲ್ಲದಾಗುವದು ನೀಲಿ ಬಣ್ಣದಲ್ಲಿ ಬಿಳಿಯು ಕೂಡಲು ಬೂದೀ ಬಣ್ಣವಾಗುವದು, ಹಳದೀ ಬಣ್ಣವನ್ನು ಕೂಡಿಸಲು ಹಸರು ಬಣ್ಣವಾಗುವದು ಹೀಗೆ ಬೇರೆ ಬೇರೆ ಮಿಶ್ರಣದಿಂದ ಬೇರೆ ಬೇರೆ ಬಣ್ಣಗಳುಂಟಾಗುವವು ಇದರಂತೆ ದೃಶ್ಯ ವಸ್ತು [ಪಕೃತಿ] ಗಳು ಹಲವು ವಿಕಾರಗಳನ್ನು ಹುಟ್ಟಿಸುವವು ನೀರು ಇದೊಂದರಿಂದಲೇ ಹಲವು ಹಲವು ತೆರೆಗಳು ಹುಟ್ಟಿ ಹಲವು ಬಣ್ಣದವಾಗಿ ತೋರುವವು ಹಾಗು ಬದಲಾಗುವವು ಅಂದಮೇಲೆ ಸತತವೂ ಬದಲಾವಣೆ ಹೊಂದುವ ಈ ವಿಕಾರಯುಕ್ತ ದೃಶ್ಯ [ಪ್ರಕೃತಿ]ಗಳ ಸಂಬಂಧವಾಗಿ ಏನೊಂದು ಹೇಳಬೇಕು? ಒಂದೇ ನೀರಿನಲ್ಲಿಂದ ಅನೇಕ ವಿಕಾರಗಳುದಿಸುವಂತೆ ಪಂಚಭೂತಗಳಲ್ಲಿಂದ ಎಂಭತ್ನಾಲ್ಕು ಲಕ್ಷ ಯೋನಿಗಳು ಉದಿಸುವವು, ಹಲವು ದೇಹಗಳ ಬೀಜಗಳು ನೀರಿನಿಂದ ಹುಟ್ಟುವವು ಕ್ರಿಮಿ-ಕೀಟಕಗಳು ಇರಿವೆ, ಪಶು ಮೊದಲಾದ ಎಲ್ಲ ಜೀವಗಳು ಒಂದೇ ನೀರಿನಿಂದ ಹುಟ್ಟುವವು ಪುರುಷನ ಶುಕ್ಲವೂ ಸ್ತ್ರೀಯ ಶೋಣಿತವೂ ನೀರೇ ಆಗಿರುವದು

ಇದರಿಂದ ಮನುಷ್ಯ ಯೋನಿಯು ನೀರಿನಿಂದಾಯಿತೆಂಬುದು ಸ್ಪಷ್ಟವು ಉಗುರು, ಹಲ್ಲು, ಎಲವುಗಳೆಲ್ಲ ನೀರಿನಿಂದಲೇ ಹುಟ್ಟುವವು ಬೇರಿನ ಮಧ್ಯದಲ್ಲಿಯ ತಂತುರೂಪದ ನಳಿಕೆಯಲ್ಲಿ ನೀರು ತುಂಬಿ ಅದ ರಿಂದಲೇ ಗಿಡ ಮರಗಳ ನಿರ್ಮಾಣವಾಗುವದು. ಮಾವಿನ ಮರಗಳಿಗೆ ಚಿಗುರುತ್ಪನ್ನವಾಗುವದು ಎಲೆ, ಹೂ, ಹಣ್ಣು—ಕಾಯಿಗಳಾಗುವದೂ ಇವೆಲ್ಲವೊ ನೀರಿನ ವಿಕಾರಗಳೇ ಆಗಿರುವವು ಮಾವಿನ ಹಣ್ಣನ್ನು ಕೊಯ್ದು ನೋಡಲು ಇಲ್ಲವೆ ಅದರ ಟೊಂಗೆಗಳನ್ನು ಸೀಳಿ ನೋಡಲು ಇಷ್ಟೇ ಏಕೆ? ಅದನ್ನು ಬೇರಿನಿಂದ ತುದಿವರೆಗೆ ಪರೀಕ್ಷಿಸಲು ಎಲ್ಲವೂ ಜಲರೂಪವೇ ಕಂಡು ಬರುವದು ಅದೇ ನೀರು ವೃಕ್ಷದಲ್ಲಿ ಕ್ರಮ ಕ್ರಮದಿಂದ ಮೇಲೇರಲು ಹಣ್ಣುಗಳು, ಎಲೆಗಳು, ಮುಂತಾದ ಹಲವು ಭಾಗಗಳೆಲ್ಲವೂ ಒಂದರಿಂದ ಹಲವಾಗಿ ತೋರುವವು ಇದು ಕೌತು ಕಾಸ್ಪದವಾಗುವದು ಒಂದೇ ನೀರಿನಿಂದ ಎಲೆ, ಹೂವು, ಹಣ್ಣು ಮೊದ ಲಾಗಿ ಎಷ್ಟು ಪ್ರಕಾರಗಳು ತೋರುವವು? ಇವೆಲ್ಲವೂ ಸೂಕ್ಷ್ಮ ದೃಷ್ಟಿ ಯಿಂದ ವಿಚಾರಿಸಲು ತಿಳಿದು ಬರುವದು ಇದರಂತೆ ಭೂತಗಳು ಕ್ಷಣ ಕ್ಷಣಕ್ಕೆ ವಿಕಾರಗೊಳ್ಳುವದನ್ನು ಎಷ್ಟೆಂದು ಹೇಳಬಹುದು? ಓಂಕಾರ ವೊಂದರಿಂದಲೇ ಅನೇಕ ವರ್ಣಗಳ ಉತ್ಪತ್ತಿಯಾಗುವದೆಂಬುದೂ ಇದೇ ಆಗಿರುವದು

ತಾತ್ಪರ್ಯವೇನಂದರೆ ಈ ಎಲ್ಲ ಅದಲು ಬದಲುಗಳೂ, ಪ್ರಯತ್ನ ಗಳೂ ತ್ರಿಗುಣಗಳ ಹಾಗು ಪಂಚ ಭೂತಗಳ ಪರಿಣಾಮುಗಳಾಗಿರುವವು ವರ್ಣ—ರೂಪಗಳೆದೆಷ್ಟೋ ಬದಲಾವಣೆಗೊಳ್ಳುವವು ಇದೆಲ್ಲವು ಅಷ್ಟಧಾ ಪ್ರಕೃತಿಯ ಲೀಲೆಯಾಗಿರುವದು ವಿವೇಕದಿಂದ ಆ ಪ್ರಕೃತಿಯನ್ನು ದೂರಮಾಡಿ ಅದನ್ನು ಅಳಿಯಬೇಕು, ನಿರ್ಗುಣ ಹಾಗು ನಿರಾಭಾಸ ಪರಮಾತ್ಮನನ್ನು ಅನನ್ಯ ಭಾವದಿಂದ ಸ್ಮರಿಸಬೇಕು ಎಂದು ಗುರುಗಳು ಬೋಧಿಸಿದರು

ಶ್ರೀ ರಾಮ || ೭ ವಿಕಲ್ಪ ನಿರಸನ || ಶಿಷ್ಯನು ಶ್ರೀ ಗುರುಗಳನ್ನು ಕುರಿತು—

ಅಂತಃಕರಣವು ಸ್ಥೂಲ ದೇಹವನ್ನು ಆಶ್ರಯಿಸಿಕೊಂಡಿರುವದು, ಇದನ್ನು ನಾವು ಪ್ರತ್ಯಕ್ಷ ನೋಡಿದ್ದಾದರೆ ಮೊದಲು ಸ್ಥೂಲ ದೇಹವು ಬಳಿಕ ಅಂತ ಕರಣವು ನಿರ್ಮಾಣವಾಯಿತೆಂದು ತಿಳಿಯುವದು ಅದ ರಂತೆ ಮೊದಲು ಬ್ರಹ್ಮಾಂಡವು ತರುವಾಯ ಮೂಲ ಮಾಯೆಯು ಏಕೆ ತಿಳಿಯಬಾರದು?" ಎಂದು ಕೇಳಿದನು ಅದಕ್ಕೆ ಗುರುಗಳು—
"ಸೃಷ್ಟಿಯಲ್ಲಿ ಮೊದಲು ಸೂಕ್ಷ್ಮನಿರ್ಮಾಣವಾದ ನಂತರ ಸ್ಥೂಲವು ನಿರ್ಮಾಣವಾಗುವ ಪ್ರಕಾರವು ಕಂಡು ಬರುವದು ರೇಶ್ಮೆಯ ಹುಳುಗಳಂಥ ಹುಳುಗಳು ತಮ್ಮ ಸುತ್ತಲೂ ಆವರಣರೂಪವಾದ ಮನೆಯನ್ನು ಮಾಡಿಕೊಳ್ಳುವವು ಬಸವನ ಹುಳುಗಳಂಥ ಹುಳುಗಳು ತಮ್ಮ ಬೆನ್ನಿನ ಮೇಲೆಯೇ ತಮ್ಮ ಮನೆಗಳನ್ನು ಸಿದ್ಧಮಾಡಿಕೊಳ್ಳುವವು ಇದರಂತೆ ಶಂಖದಹುಳು, ಸಿಂಪೆಯ ಹುಳು, ಕವಡಿಯಲ್ಲಿಯ ಹುಳು ಮುಂತಾದವೆಲ್ಲವೂ ತಮ್ಮ ತಮ್ಮ ಮನೆಗಳನ್ನು ತಮ್ಮ ಸುತ್ತಲೂ ಮಾಡಿಕೊಂಡಿರುವವು ಇವೆಲ್ಲವುಗಳಿಂದ ಆ ಪ್ರಾಣಿಗಳ ಮನೆಗಳು ಮೊದಲು ನಿರ್ಮಿತವಾದವೋ ಇಲ್ಲವೆ ಆ ಪ್ರಾಣಿಗಳೇ ಮೊದಲು ನಿರ್ಮಿತವಾದವೋ? ಇದನ್ನು ಮೊದಲು ವಿಚಾರ ಮಾಡತಕ್ಕದ್ದು ಮೊದಲು ಪ್ರಾಣಿಯು ನಿರ್ಮಿತವಾಗುವದು ನಂತರ ಅದರಮನೆ ಸಿದ್ಧವಾಗುವದು ಈ ಬಗೆಯು ಪ್ರತ್ಯಕ್ಷ ಅನುಭವಕ್ಕೆ ಬರುವದೆಂದುಹೇಳಲಿಕ್ಕೆ ಬೇಡ ಈ ದೃಷ್ಟಾಂತಕ್ಕನುಸರಿಸಿ ಮೊದಲು ಸೂಕ್ಷ್ಮವುತದನಂತರ ಸ್ಥೂಲವು ನಿರ್ಮಾಣವಾಗುವದೆಂದು ಸಿದ್ಧವ ಗುವದು "ಎಂದು ಗುರುಗಳು ಹೇಳಿದರು ಆ ಬಳಿಕಶಿಷ್ಯನು''ನನಗೆ ಜನ್ಮ ಮೃತ್ಯುಗಳ ವಿಚಾರವನ್ನು ಬೋಧಿಸಬೇಕು ನಮಗೆ ಜನ್ಮ ಕೊಡುವವರಾರು? ಬಳಿಕ ಜನ್ಮವನ್ನು ಕೊಳ್ಳುವವರಾರು? ಇದರ ಅನುಭವವು ಯಾವ ಪ್ರಕಾರದಿಂದ ಹೇಗೆ ಅನುಭವಕ್ಕೆ ಬರುವದು? ಬ್ರಹ್ಮ-ವಿಷ್ಣು-ರುದ್ರರು ಕ್ರಮವಾಗಿ ಸೃಷ್ಟಿ-ಸ್ಥಿತಿ-ಲಯ ಕರ್ತರೆಂದು ರೂಢಿಯ ಮಾತಾಗಿದೆ ಆದರೂ ಅನುಭವಕ್ಕೆ ಬರುವದಿಲ್ಲ ಆದರೆ ಬ್ರಹ್ಮನನ್ನು ಹುಟ್ಟಿಸಿದವರಾರು? ವಿಷ್ಣುವನ್ನು ಪ್ರತಿಪಾಲಿಸುವರಾರು? ಹಾಗು ಸಂಹಾರಕರ್ತ ರುದ್ರನನ್ನು ಸಂಹರಿಸುವರಾರು? ಈ ಎಲ್ಲ ಸೃಷ್ಟಿ ಸ್ವಭಾವವು ಮಾಯೆಯ ಸ್ವಭಾವವೆಂದಂತಾಯಿತು ಸೃಷ್ಟಿ ಕರ್ತೃತ್ವವನ್ನು ದೇವನೇ ವಹಿಸಿರುವನೆಂದರೆ ಆತನು ನಿರ್ಗುಣನ್ನು ಹಾಗು ನಿರ್ವಿಕಾರಿಯು

ಅಂದ ಮೇಲೆ ಅವನಿಗಿದು ಸಾಧ್ಯವಿಲ್ಲ ಮಾಯೆಯಿಂದಲೇ ಇದೆಲ್ಲ ವರ್ತಿಸುವದೆಂದರೆ ಆ ಮಾಯೆಯು ತನಗೆ ತಾನೇ ವಿಸ್ತ್ರತವಾಗುವಂತಹದೂ, ಅಸ್ಥಿರವೂ, ಅಶಾಶ್ವತವೂ ಆಗಿರುವದು ಅಂದ ಮೇಲೆ ಈ ಸೃಷ್ಟಿ ಕರ್ತೃತ್ವವು ಮಾಯೆಯಿಂದಲೂ ಸಾಧ್ಯವಿಲ್ಲ. ಹಾಗಾದರೆ-ಜನ್ಮಕರ್ತೃವು ಯಾರು? ಅವನನ್ನು ಗುರುತಿಸುವದು ಹೇಗೆ? ಸಂಚಿತ ಕರ್ಮಗಳ ಲಕ್ಷಣಗಳೇನು? ಪುಣ್ಯದ ಸ್ವರೂಪವೆಂತು? ಪಾಪದ ಸ್ವರೂಪವಾದರೂ ಹೇಗಿರುವದು? ಮತ್ತು ಈ ಬಗೆಯಾಗಿ ಶಾಬ್ದಿಕ ಅನುಮಾನಗೊಳ್ಳುವ ನಾನಾರು? ವಾಸನೆಯೇ ಜನ್ಮ ತಾಳುವದೆಂಬದರಲ್ಲಿ ಏನೊಂದು ಸಂಶಯವಿಲ್ಲ ಆದರೂ ಆ ವಾಸನೆಯು ಕಣ್ಣಿಗೆ ಕಾಣಿಸುವದಿಲ್ಲ. ಕೈಯಿಂದ ಹಿಡಿಯಲೂ ಬರುವದಿಲ್ಲ ಇದಲ್ಲದೆ ಆ ವಾಸನೆಯು ಅಂತ ಕರಣದ ವೃತ್ತಿಗಳಲ್ಲೊಂದಾಗಿದೆ ಅಂತಃಕರಣ ಪಂಚಕಕ್ಕೆ ವಾಸನಾ, ಕಾಮನಾ, ಕಲ್ಪನಾ, ಉದ್ದೇಶ ಭಾವನಾ ಇತ್ಯಾದಿಯಾಗಿ ಅನಂತ ವೃತ್ತಿಗಳಿರುವವು ಈ ವಾಸನೆಯು ಅದರಲ್ಲಿ ಬರುವದು ಇದು ಅರವಿನ ಯಂತ್ರವಾಗಿರುವದು, ಅರಿವು ಎಂದರೆ ಸ್ಮರಣವು, ಈ ಸ್ಮರಣಕ್ಕೆ ಜನ್ಮಸೂತ್ರದ ಸಂಬಂಧವೆಂತಾಗುವದು? ದೇಹವು ಪಂಚಭೂತಾತ್ಮಕವು ಅಂದರೆ ಅವುಗಳಿಂದಲೇ ನಿರ್ಮಾಣವಾಗಿರುವದು ವಾಯುವು ಆ ದೇಹದ ಚಾಲಕನಾಗಿರುವನು ಆ ವಾಯುವನ್ನು ತಿಳಿಯುವದು ಮನಸ್ಸಿನ ಭಾವವು ಇಷ್ಟೆಲ್ಲ ಸಹಜ ಬಗೆಯಿಂದ ಆ ದೇಹವು ತತ್ವಗಳುಳ್ಳ ಒಂದು ಗಂಟು ಆಗಿ ಬಿಟ್ಟದೆ ಅಂದ ಮೇಲೆ ಯಾರು ಯಾರನ್ನು ಯಾವ ಪ್ರಕಾರದಿಂದ ಹುಟ್ಟಿಸಿದರು? ಇದು ತಿಳಿಯುವದಿಲ್ಲ 'ಯಾರಿಗೂ ಜನ್ಮವಿಲ್ಲ' ಎಂದು ಅನ್ನುವ ಕೆಲವರು ಇರುವರು ಯಾರಿಗೂ ಜನ್ಮವಿಲ್ಲವೆಂದ ಮೇಲೆ ಸತ್ಸಂಗ ಮೊದಲಾದ ಸಾಧನೋಪಾಯಗಳ ಅವಶ್ಯಕತೆಯೇನು? ಹಿಂದಿನ ಅರಿವು ಮರೆವುಗಳೇನೂ ಇಲ್ಲ ಅಂತ.ಕರಣದ ಅರಿವಿನ ಲಕ್ಷಣವು ನಡುವೇ ಬಂದಿದೆ ಅದರ ಜೀವನಮಾನದ ವರೆಗೆ ಅರಿವಿನ ಕಾರ್ಯ ನಡೆಯುತ್ತಿರುವದು ಅದರಿಂದಲೇ 'ಜನ್ಮವಿಲ್ಲ' 'ಮರಣವಿಲ್ಲ' ಮತ್ತು 'ಪುನರ್ಜನ್ಮವಿಲ್ಲ' ಅಂದರೆ ಯಾರಿಗೂ ಜನ್ಮವಿಲ್ಲ, ಮರಣ ಹೊಂದಿದವರಾರೂ ಪುನಃ ಜನ್ಮಕ್ಕೆ ಬರುವದಿಲ್ಲ' ಹೀಗೆ ಅನ್ನಬೇಕೇ ಹೇಗೆ? ಗಡಿಗೆಯು ಆಕಸ್ಮಾತ್ತಾಗಿ ಬಿದ್ದು ಒಡೆಯು

ವಂತೆ ಮಾನವನು ಸತ್ತು ಹೋದರ ಅವನು ಮತ್ತ ಹುಟ್ಟುವದಿಲ್ಲವೇ? ಸಿಡಿಹಾಯ್ದ ಕಟ್ಟಿಗೆಯು ಪುನಃ ಅಂಕುರಿಸುವದಿಲ್ಲ, ಉದುರಿ ಬಿದ್ದ ಹಣ್ಣು ಪುನಃ ಮರಕ್ಕೆ ಹೊಂದಿಕೊಳ್ಳುವದಿಲ್ಲ ಈ ಉದಾಹರಣೆಗಳಂತೆ ಒಮ್ಮೆ ಮೃತಿ ಹೊಂದಿದ ಶರೀರವು ಮತ್ತೆ ಜನ್ಮ ತಾಳುವದಿಲ್ಲ ಹೀಗೆನ್ನುವದು ಸರಿಯಾಗುವದೇ? ಸರಿಯೆಂದು ಹೇಳುವದರಿಂದ ಅಜ್ಞಾನ, ಸಜ್ಞಾನಗಳೆರಡೂ ಒಂದೇ ಎಂದು ಹೇಳುವದರಲ್ಲಿ ಬಾಧಕವೇನು?" ಎಂದು ಕೇಳಿದನು ಈ ಪ್ರಕಾರವಾಗಿ ಶಿಷ್ಯನ ಸಂಶಯಯುಕ್ತ ಪ್ರಶ್ನಮಾಲಿಕೆಯನ್ನು ಕೇಳಿ ಗುರುಗಳು—

"ಇದೇನು ನಿನ್ನ ಪ್ರಶ್ನಗಳ ಮಾಲಿಕೆ? ಉತ್ತರವನ್ನು ಹೇಳುವೆನು ನಿನ್ನಲ್ಲಿ ಪಾಖಂಡತ್ವಕ್ಕೆ ಎಡೆಗೊಡದೆ ವಿಚಾರಕ್ಕೆ ಆಸ್ಪದವನ್ನು ಕೊಡು" ಎಂದು ಶಿಷ್ಯನ ಸಂಶಯಗಳನ್ನು ದೂರ ಮಾಡಲು ಬೋಧಿಸಹತ್ತಿದರು. ಹೇಗೆಂದರೆ—"ಪ್ರಯತ್ನವಿಲ್ಲದೆ ಕಾರ್ಯ ಒದಗುವದಿಲ್ಲ, ಅದರಂತೆ ಊಟ ಮಾಡದೆ ಹೊಟ್ಟೆ ತುಂಬುವದಿಲ್ಲ ಈ ದೃಷ್ಟಾಂತಗಳಂತೆ ಜ್ಞಾನವಿಲ್ಲದೆ ಮುಕ್ತಿಯಾಗುವದಿಲ್ಲ ಇದನ್ನು ತಿಳಿದುಕೊಳ್ಳು 'ನಾನು ಉಂಡೆನು ಆದರಿಂದ ಜನರೆಲ್ಲ ಢರ್ರನೆ ತೇಗಿದರು' ಈ ಮಾತಿನಿಂದ ಜನರ ಹೊಟ್ಟೆ ತುಂಬಿದಂತಾಗುವದಿಲ್ಲ ಇದರಂತೆ ಜ್ಞಾನವನ್ನು ಹೊಂದಿದವನು ಮಾತ್ರ ತಾನು ಉದ್ಧಾರನಾಗುವನು, ಜನನ-ಮರಣದಿಂದ ದೂರಾಗುವನು, ಕಲ್ಪನೆಗಳ ಬಾಧೆಯಿಂದ ದೂರಾಗುವನು, ಆದರೆ ಜ್ಞಾನಪಡೆಯದವನಿಗೆ ಹೀಗಾಗಲು ಶಕ್ಯವಿಲ್ಲ ಈಜು ಕಲಿತವನು ಮಾತ್ರ ನೀರಲ್ಲಿ ತೇಲುವನು, ಕಲಿಯದವನು ಮುಳುಗುವನು ತನ್ನಷ್ಟಕ್ಕೆ ತಾನು ಮುಕ್ತನಾದವನು 'ಬಂಧನವಿಲ್ಲ' ಎಂದು ನುಡಿಯುವದರಿಂದ ಎಲ್ಲರೂ ಮುಕ್ತರೆಂದು ಹೇಗೆ ಹೇಳುವದು? ಹಾಗೆ ಹೇಳುವವನ ಜ್ಞಾನವು ಅಷ್ಟೇ ಎನ್ನಬಹುದು ಇದು ಪೂರ್ಣಜ್ಞಾನದ ಲಕ್ಷಣವಲ್ಲ ಅಜ್ಞಾನ-ಸಜ್ಞಾನಗಳೆರಡೂ ಸಮಾನವೆಂದೂ ಆಗಲಾರವು ಉಚ್ಚ-ನೀಚ ಎಲ್ಲವೂ ಸಮಾನವೆನ್ನುವದು ಯೋಗ್ಯವಲ್ಲ ನಿಜಜ್ಞಾನದಿಂದ ಜನನ-ಮರಣಗಳು ತಪ್ಪುವವು ಜ್ಞಾನವಿಲ್ಲದವರಿಗಾಗಿ ವೇದ-ಶಾಸ್ತ್ರ-ಪುರಾಣಗಳಿರುವವು ಒಟ್ಟಿನ ಮೇಲೆ 'ಜ್ಞಾನಿಯು ಜ್ಞಾನದಿಂದ ಮುಕ್ತನಾಗುವನು ಅಜ್ಞಾನದಿಂದ ಬಂಧನವಾಗುವದು' ತನ್ನ ಕಲ್ಪನೆಯಿಂದ

ನಿಜವಾಗಿ ಬಂಧನವಿಲ್ಲ ಆದರೆ ಇದು ತಿಳಿಯದೆ ಹೊರತು ಉಪಾಯ ವಿಲ್ಲ ಬಂಧನವಿಲ್ಲ ಎಂಬ ನಿಶ್ಚಿತ ಬುದ್ಧಿಯಾದವನೇ ಜ್ಞಾನಿಯು 'ಸಾಧು ಭಾವನೆಯಿಂದ ಸಿದ್ಧಿ' ಎಂಬ ಮಾತು ಜ್ಞಾನ ದೊರಕುವ ವಿವೇಕ ವಿಲ್ಲದ ಮಾರ್ಗವು ಆದರೆ ವಿವೇಕದಿಂದಲೇ ತೀವ್ರ ಮೋಕ್ಷವೆಂಬುವದು ಸಯುಕ್ತಿಕವು ಜ್ಞಾನವಿಲ್ಲದೆ ಮೋಕ್ಷವಿಲ್ಲ ಜ್ಞಾನವಿದ್ದರೇ ಮಾತ್ರ ಬಂಧನ ದೂರಾಗುವದು ಜ್ಞಾನವಿದ್ದರೇ ಮಾತ್ರ ಮುಕ್ತಿ ದೊರಕುವದು ಅಜ್ಞಾನವೆಂದರೆ— ಏನನ್ನೂ ತಿಳಿಯದಿರುವದು ಎಲ್ಲವನ್ನೂ ಅರಿತಿರು ವದೇ ಜ್ಞಾನವು ತನ್ನರವಿನಿಂದ ಸ್ವಸ್ವರೂಪ ಹೊಂದುವದೇ ವಿಜ್ಞಾ ನವು ಅಮೃತ ಸೇವನೆ ಮಾಡಿದವನು' ಮಾನವರಿಗೆ ಮೃತ್ಯು ಹೇಗೆ ಬರು ವದು? ಬರಲಾರದು' ಎಂದೆನ್ನುವನು ಜ್ಞಾನಿಯು ಬದ್ಧನಿಗೆ ಜನ್ಮವೆಂತು ಬರುವದು? ಬರಲಾರದು ಎನ್ನುವನು ಪಿಶಾಚಪೀಡಿತನನ್ನು ಕಂಡು ಪೀಡಿತನಾಗದವನು 'ದೆವ್ವ ಹೇಗೆ ಬಡಿಯುವದು' ಎಂದೆನ್ನುವನು ವಿಷದ ಬಾಧೆಗೊಳಗಾದವನಿಗೆ ವಿಷಸಂಪರ್ಕವಿಲ್ಲದವನು 'ವಿಷವು ಹೇಗೆ ಏರುವದು'' ಎಂದು ಕೇಳುವನು ಇವೆಲ್ಲಕ್ಕೂ ಉತ್ತರವೆಂದರೆ ಪ್ರತಿ ಯೊಂದರ ಪ್ರಚ್ಛಕರು ಅವರಂತೆ ಪೀಡಿತರಾದರೆ ಅಪ್ರುಚ್ಛಕರಿಗೆ ತಾನೇ ತಿಳಿಯುವದು ಕೆಲವೊಮ್ಮೆ ವಿವೇಕವನ್ನು ಬದಿಗಿರಿಸಿ ಬದ್ಧಲಕ್ಷಣ ಕಾಣ ಬೇಕು. ನಿದ್ದೆಯಿಂದ ಹೊರಳಾಡುವವನನ್ನು ಕಂಡು ಎಚ್ಚರಿದ್ದವನು 'ಇವನೆಷ್ಟು ಹೊರಳಾಡುವನು'' ಎಂದು ಸುಮ್ಮ ಸುಮ್ಮನೆ ಒಟಗುಟ್ಟು ವನು ಆದರೆ ಅವನು ಇದರ ಅನುಭವವನ್ನು ಕಾಣಬೇಕಾದರೆ ತಾನೂ ನಿದ್ದೆ ಮಾಡಿ ನೋಡಬೇಕು

ಒಟ್ಟಿನ ಮೇಲೆ ಹಸಿದವನಿಗೆ ತೃಪ್ತಿಯ ತೇಗನ್ನು ಕೊಡುವವನಿಗೇ ತೃಪ್ತಿಯಿಲ್ಲ ಇದೇ ಸ್ಥಿತಿಯು ಬದ್ಧನಿಗೆ ಉಂಟಾಗಿರುವ ಪಾಶವು (ಬಂಧ ನವು ಮುಕ್ತನಿಗಿರುವದಿಲ್ಲ" ಎಂದು ಗುರುಗಳು ಹೇಳಿದರು

ಇಷ್ಟರಿಂದ ಶಿಷ್ಯನ ಸಂಶಯ ನಿವಾರಣೆಯಾಯೀತು ಜ್ಞಾನದಿಂದ ಮೋಕ್ಷವಾಯಿತು, ವಿವೇಕದಿಂದ ನೋಡುತ್ತಿರಲು ಅವನಲ್ಲಿ ಆತ್ಮ ಸ್ಥಿತಿಯು ರೂಪುಗೊಂಡಿತು

ಶ್ರೀ ರಾಮ॥ ಬದೇಹಾಂತ ನಿರೂಪಣ ಶಿಷ್ಯನು ಗುರುಗಳನ್ನು ಕುರಿತು:-
"ಜ್ಞಾನಿಯು ಜನ್ಮದಿಂದ ಮುಕ್ತನಾಗುವನು ಆದರೆ ಬದ್ಧನಿಗೆ ಪುನರ್ಜನ್ಮವು ಹೇಗಾಗುತ್ತದೆ? ಅಂತ್ಯಕಾಲದಲ್ಲಿ ಬದ್ಧನಿಗೆ ಉಂಟಾಗುವದೇನು? ಅವನು ಮರಣ ಹೊಂದಿದ ನಂತರ ಏನೂ ಉಳಿಯುವದಿಲ್ಲ ಸಾಯುವ ಮೊದಲೇ ಅವನಿಗೆ ಜ್ಞಾನದ ವಿಸ್ಮರಣವಾಗುವದಲ್ಲವೆ?" ಎಂಬದಾಗಿ ಸಂಶಯಯುಕ್ತ ಪ್ರಶ್ನೆ ಕೇಳಿದನು ಅದಕ್ಕೆ ಗುರುಗಳು—

"ಮರಣವು ಉಂಟಾಗುವ ಮೊದಲು ದೇಹದಲ್ಲಿಯ ಪಂಚಪ್ರಾಣಗಳು ತಮ್ಮತಮ್ಮ ಸ್ಥಳಗಳನ್ನು ಬಿಡುವವು ಪ್ರಾಣರೂಪ ವಾಸನಾವೃತ್ತಿಯು ಅಂದರೆ ವಾಸನೆಯಿಂದ ಕೂಡಿದ ಪ್ರಾಣವು ದೇಹದಿಂದ ದೂರಾಗುವದು ವಾಯುವಿನ ಸಂಗಡ ಹೋದ ವಾಸನೆಯು ವಾಯು ರೂಪವನ್ನೇ ಹೊಂದುವದು ಆ ವಾಯುರೂಪ ಹೊಂದಿದ ವಾಸನೆಯೇ ಪುನರ್ಜನ್ಮಕ್ಕೆ ಕಾರಣವಾಗಿರುವದು ಎಷ್ಟೋ ಪ್ರಾಣಿಗಳು ನಿಶ್ಚೇಷ್ಟಿತವಾಗಿ ಬಿದ್ದು ಸಾಯುವವು ಅಂದರೆ ಮೃತ ಪಾದಂತೆ ತೋರುವವು ಆದರೆ ಪುನ ಸಜೀವಗೊಂಡು ಪರಲೋಕದಿಂದ ಭೂಲೋಕಕ್ಕೆ ಬರುವವು ಅದರ ಗುರುತಾಗಿ ಅವುಗಳ ಕೈಕಾಲು ಮುರಿದಂತೆ ತೋರುವವು. ಎಷ್ಟೋ ಪ್ರಾಣಿಗಳು ಹಾವು ಕಡಿದು ಸತ್ತು ಮೂರು ದಿನಗಳ ನಂತರ ವೈದ್ಯರ ಪ್ರಯತ್ನದಿಂದ ಸಜೀವಗೊಳ್ಳುವವು ಕೆಲಜನರು ಸಾಯುವರು ಮತ್ತೆ ಯಮಲೋಕದಿಂದ ತಿರುಗ ವರು, ಕೆಲವರು ಶಾಪಿತರಾಗಿ ಶಾಪ ದೇಹ ಹೊಂದುವರು ಉಶ್ಯಾಪದಿಂದ ಪುನ ಪೂರ್ವದೇಹ ಹೊಂದುವರು ಕೆಲವರು ಹಲವು ಶರೀರ ಹೊಂದುವರು, ಕೆಲವರು ಪರಕಾಯ ಪ್ರವೇಶ ಮಾಡುವರು ಇದರಂತೆ ಎಷ್ಟೋ ಜನರ ಆಗು ಹೋಗುಗಳಾಗಿವೆ ಬಾಯಿಯಿಂದ ಊದಿದ ಹಾಗೆ ಪ್ರಾಣವಾಯುವು ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ ಹೋಗುವದು ಅಂದಮೇಲೆ ವಾಯುರೂಪವಾದ ವಾಸನೆ ಜನ್ಮವುಂಟೆಂದಾಯಿತು ಮನಸ್ಸಿನ ಹಲವುವೃತ್ತಿಗಳಲ್ಲಿ ವಾಸನೆಯೊಂದಾಗಿ ಜನ್ಮ ತಾಳುವದು ಈ ವಾಸನೆಯು ದೃಷ್ಟಿಗೆ ತೋರದಿದ್ದರೂ ಇದ್ದೇ ಇರುತ್ತದೆ. ವಾಸನೆಯೆಂದರೆ ಅದು ಆವಿಗೆ ಉದ್ದೇಶವಾಗಿದೆ ವಾಸನೆಯು ವಾಯುರೂಪವಾಗಿದೆ, ವಾಸನೆಯ ಅರಿವಿನ ಮೂಲ ಮಾಯೆಯಲ್ಲಿ ಕಾರಣರೂಪದಿಂದ ಮಿಶ್ರಿತವಾಗಿದೆ ಅದು ಬ್ರಹ್ಮಾಂಡದಲ್ಲಿ ಕಾರಣ

ರೂಪವಾಗಿಯೂ ಪಿಂಡದಲ್ಲಿ ಕಾರ್ಯರೂಪವಾಗಿಯೂ ಇರುವದೆಂದು ಅನು ಮಾನಿಸುವದು ಕಠಿಣವು ಆದರೂ ವಾಯು ಸ್ವರೂಪದಂತೆ ಸೂಕ್ಷ್ಮವಾಗಿ ಇದ್ದೇ ಇರುವದು ಸಕಲ ದೇವತೆಗಳೂ ಭೂತ ಸೃಷ್ಟಿಯೂ ವಾಯುರೂಪ ವಾಗಿರುವವು, ವಾಯುವು ಹಲವು ವಿಕಾರಗಳುಳ್ಳದ್ದು, ಆದರೂ ದೃಷ್ಟಿಗೆ ಕಾಣದಂತಹದು ಇದರಂತೆಯೇ ಅರವಿನ ವಾಸನೆಯು ಅತಿ ಸೂಕ್ಷ್ಮವಾಗಿ ರುವದು ಮೂರೂ ಗುಣಗಳೂ ಪಂಚಭೂತಗಳೂ ವಾಯುವಿನಲ್ಲಿ ಮಿಶ್ರಿತ ವಾಗಿರುವವು ಇದು ಅನುಮಾನದಿಂದ ತಿಳಿಯದಿದ್ದರೂ ಮಿಥ್ಯವೆಂದು ತಿಳಿ ಯಲಾಗದು ವಾಯುವಿನ ಸಹಜ ಸಂಚಲನದಿಂದ ಸುಗಂಧ ದುರ್ಗಂಧ ಗಳು ತಿಳಿಯುವವು ಚಳಿಯೂ ಉಷ್ಣತೆಯೂ ಗೊತ್ತಾಗುವವು, ಪದಾ ರ್ಥವು ಕಾಯ್ದಿರುವದೂ, ತಂಪಾಗಿರುವದೂ ಪ್ರತ್ಯಕ್ಷ ತೋರುವದು ವಾಯುವಿನಿಂದ ಮೋಡಗಳು ಚದುರಿಸಲ್ಪಡುವವು, ನಕ್ಷತ್ರಗಳಲ್ಲಿ ಚಲನೆ ದೋರುವದು ಸಕಲ ಸೃಷ್ಟಿಯಲ್ಲಿ ಗತಿಯಿರುವದೆಂದು ಕಂಡು ಬರುವದು ದೇವತೆಗಳೂ ಭೂತಪಿಶಾಚ್ಚಗಳೂ ವಾಯು ರೂಪವದಿಂದ ಶರೀರದಲ್ಲಿ ಅಕ ಸ್ಮಾತ್ತಾಗಿ ಸೇರ್ಪಡೆಯಾಗುವವು. ಒಮ್ಮೊಮ್ಮೆ ಮಂತ್ರಾಗ್ನಿ ವಿಧಿಯು ಮುಗಿ ದಿದ್ದ ಪ್ರೇತವೂ ಕೂಡ ವಾಯುವಿನ ಮೂಲಕ ಎದ್ದು ಕೂಡುವದು ಶರೀರ ದಲ್ಲಿ ಸೇರ್ಪಡೆಯಾಗಿದ್ದ ದೇವತೆಯೂ, ಬ್ರಹ್ಮಸಂಬಂಧವೂ ವಾಯುವಿನಿಂದ ದೂರಾಗುವವು ವಾಯು ವಿನಿಯೋಗದಿಂದುಟಾದ ದೈವ ಬಲದಿಂದ ಎಷ್ಟೋ ಸಂಗತಿಗಳ ಜ್ಞಾನವಾಗುವದು ಎಷ್ಟೋ ಸಂಗತಿಗಳ ಗುಹ್ಯವು ಪ್ರಕಟವಾಗುವವು ವಾಯುವು ಸ್ವತಂತ್ರವಾಗಿ ಏನನ್ನೂ ನುಡಿಯುವದಿಲ್ಲ ದೇಹವನ್ನು ಆಶ್ರಯಿಸಿಕೊಂಡು ಮಾತಾಡುತ್ತದೆ ಹಾಗು ಆ ದೇಹವನ್ನು ಅಲ್ಲಾಡಿಸುತ್ತದೆ ವಾಯುವಿನ ಅಭಿಮಾನ ಗ್ರಹಿಸಿ ಎಷ್ಟೋ ಪ್ರಾಣಿಗಳು ಜನ್ಮತಾಳುವವು ಇವೆಲ್ಲವೂ ವಾಯುವಿನ ವಿಕಾರಗಳು. ಈ ವಾಯುವಿನ ಮೂಲಕವಾಗಿ ಎಲ್ಲ ಚರಾಚರ ಸೃಷ್ಟಿಯ ವಿಸ್ತಾರವೂ ಕೂಡ ತಿಳಿಯದಾಗಿದೆ ವಾಯುವು ಸ್ತಬ್ಧರೂಪವಾಗಿ 'ವಿಷ್ಣು'ವೆಂದೆನಿಸಿಕೊಳ್ಳುವದು ಚಂಚಲ ರೂಪವಾಗಿ ಬ್ರಹ್ಮ'ನೆನಿಸಿಕೊಳ್ಳುವದು

ಮೂಲ ಮಾಯೆಯಿಂದ ಕೊನೆಯ ಸ್ಥೂಲದ ವರೆಗೆ ಎಲ್ಲ ಕ್ರಿಯೆಗಳು ವಾಯುವಿನಿಂದಲೇ ಜರುಗುವವು ವಾಯುವಿನ ಹೊರತು ಕರ್ತೃತ್ವದಲ್ಲಿ

ಚಾತುರ್ಯವುಳ್ಳವರಾರು ? ಯಾರೂ ಇಲ್ಲ ನೀರು ನೆಲೆಯ ರೂಪದಿಂದ ಒಗ್ಗೆಯ ರೂಪದಿಂದ ಹೀಗೆ ಅನೇಕರೂಪದಿಂದ ಭೂಮಿಯ ಮೇಲೆ ಗುಪ್ತ ಪ್ರಕಟವಾಗುತ್ತ ಕೊನೆಗೆ ಮಹಾನದಿಯ ರೂಪದಿಂದ ಹರಿಯುವದು ಅದ ರಂತೆ ಮೂಲ ಮಾಯೆಯ ಸ್ವರೂಪವಿರುವದು ಇದು ವಿಶ್ವದಲ್ಲಿ ಗುಪ್ತ ಹಾಗು ಪ್ರಕಟವಾಗಿ ವರ್ತಿಸುವದು ಇದರಂತೆ ಗುಪ್ತತೆ ಪ್ರಕಟತೆಗಳು ವಾಯುವಿನಲ್ಲಿಯೂ ಇರುವವು ವಾಯುವು ಮೈಗೆ ತಟ್ಟುವದರಿಂದ ಕೈಕಾಲುಗಳು ಒಣಗುವವು, ವಾಯುವಿನಿಂದ ಬೆಳೆಯು ಮಾಗಿಬರುವದು, ಹಲವು ರೋಗಗಳ ವಿಷಯುಕ್ತ ಗಾಳಿಗಳು ಭೂಮಿಯ ಮೇಲೆ ಬೀಸುವವು ವಾಯುವಿನಿಂದ ಬೀಜಗಳು ಮೊಳಕೆಯೊಡೆದು ಗಿಡ ಮರಗಳು ಫಲಿಸುವವು ವಾಯುವಿನಿಂದ ಹಲವು ರಾಗ-ಸ್ವರಗಳ ಜ್ಞಾನವಾಗುವದು ವಾಯುಜನಿತ ರಾಗದಿಂದ ದೀವಗಳು ಬೆಳಗುವವು, ಮೋಡಗಳು ಮಳೆಯುದುರಿಸುವವು ಇವೆಲ್ಲ ಚಮತ್ಕಾರಗಳು ಕಂಡುಬರುವವು ವಾಯುವಿನಿಂದ ಅನೇಕ ಮಂತ್ರ ಸಿದ್ಧಗಳಾಗುವವು ಶರೀರದಲ್ಲಿ ನೇರಿದ ಭೂತ ಪಿಶಾಚಗಳು ತೊಲಗುವವು ಇಂದ್ರಜಾಲ ಮೊದಲಾದ ವಿದ್ಯೆಗಳು ಮಂತ್ರದಿಂದಲೇ ನಡೆಯುವವು ಹುಚ್ಚನು ಜಾಣನಾಗುವದೂ, ಜಾಣನು ಹುಚ್ಚನಾಗುವದೂ ವಾಯುವಿನಿಂದಲೇ, ಸ್ತಂಭನ, ಮೋಹನ ಮೊದಲಾದವುಗಳು, ಅಸ್ತ್ರವಿದ್ಯೆಯಲ್ಲಿಯ ಮಂತ್ರಗಳು ಪಶು–ಪಕ್ಷಿ ವಶೀಕರಣ ಮಂತ್ರಗಳೂ, ಹಾವು ಚೇಳಿನ ಮಂತ್ರಗಳೂ, ಧನಲಾಭವೂ ಇವೆಲ್ಲವು ವಾಯುವಿನ ವಿಕಾರ ಲೀಲೆಗಳು ಇದೆಲ್ಲ ವಿವರದಿಂದ ಬದ್ಧನ ಜನ್ಮ ವಿಷಯವು ಅನುಭವಕ್ಕೆ ಬರುವದು

ಶ್ರೀ ರಾಮ || ೯ ಸಂದೇಹ ನಿವಾರಣೆ || ಶಿಷ್ಯನು ಗುರುಗಳನ್ನು ಕುರಿತು - ''ಬ್ರಹ್ಮನು ಒಂದೇ ಸ್ಥಿತಿಯಲ್ಲಿರುವವನು, ಆವನನ್ನು ಹಿಂದ ಮುಂದೆ ದೂಡಲಿಕ್ಕೆ ಬರಲಾರದು, ಭೇದಿಸಲಿಕ್ಕೆ ಬರಲಾರದು, ಅಖಂಡ ಸ್ವರೂಪದ ಆತನನ್ನು ತುಂಡರಿಸಿ ಚೂರು ಮಾಡಲೂ ಬರಲಾರದು ಅಂದ ಮೇಲೆ ಅವನಲ್ಲಿ ಈ ಬ್ರಹ್ಮಾಂಡವು ಅದೆಂತು ಪ್ರವೇಶವಾಯಿತು ? ಪರ್ವತ್ಮಗಳು ಕಲ್ಲು ಶಿಲೆಗಳು, ಗಿರಿ ಶಿಖರಗಳು, ಹಲವು ಸ್ಥಲ ಸ್ಥಲಾಂತರಗಳು ಇವೆಲ್ಲವುಗಳಿಂದ ಯುಕ್ತವಾದ ಭೂಗೋಲ ಚಪಕಯು ಬ್ರಹ್ಮನಲ್ಲಿ ಅದೆಂತಾಯಿತು ? ಭೂಗೋಲವನ್ನೇ ಬ್ರಹ್ಮನು ತನ್ನಲ್ಲಿರಿಸಿಕೊಂಡನೋ

ಅಥವಾ ಬ್ರಹ್ಮನನ್ನೇ ಭೂಗೋಲವು ಭೇದಿಸಿತೋ ! ಭೂಗೋಲದಲ್ಲಿ ಬ್ರಹ್ಮ ನಿದ್ದಂತೆಯೂ ಬ್ರಹ್ಮನಲ್ಲಿ ಭೂಗೋಲವಿದ್ದಂತೆಯೂ ಪ್ರತ್ಯಕ್ಷ ಕಾಣುವದು ಬ್ರಹ್ಮನೇ ಬ್ರಹ್ಮಾಂಡವನ್ನು ಭೇದಿಸಿರುವನೆಂಬ ಮಾತು ಸಯುಕ್ತಿವು ಆದರೆ ಬ್ರಹ್ಮಾಂಡವೇ ಬ್ರಹ್ಮನನ್ನು ಭೇದಿಸಿತೆನ್ನುವದು ವಿಪರೀತವಾಗುವದು ಬ್ರಹ್ಮನು ಬ್ರಹ್ಮಾಂಡವನ್ನು ಭೇದಿಸಿಲ್ಲವೆಂದುದಾದರೆ ಬ್ರಹ್ಮಾಂಡದಸ್ವಭಾವವು ಬ್ರಹ್ಮನಲ್ಲಿ ಕಂಡುಬರುವದೆಲ್ಲಿ? ಆದರೆ ಇದು ಹೇಗಾಯಿತು? ಇದರ ವಿಚಾರ ವನ್ನು ಹೇಳುವದಾಗಬೇಕು " ಎಂಬದಾಗಿ ಆಕ್ಷೇಪಗಳನ್ನಿಟ್ಟನು ಅದಕ್ಕೆ ಗುರುಗಳು ಉತ್ತರ ರೂಪವಾಗಿ—

"ಇಲ್ಲಿ ನಿನ್ನ ಪ್ರಶ್ನೆಯ ಬಗೆಗೆ ಸಂದೆಹ ಜನಿಸಿದೆ ಏನೆಂದರೆ— ಬ್ರಹ್ಮಾಂಡವಿಲ್ಲೆಂದರೆ ಅದು ಪ್ರತ್ಯಕ್ಷ ಕಾಣುವದು ಇನ್ನು ಪ್ರತ್ಯಕ್ಷಕಾಣುವ ದೆಂದ ಮೇಲೆ ನಾಶವಾಗತಕ್ಕದ್ದೇ ಎಂದೆನ್ನಿಸುವದು ಆದರೆ ಇದನ್ನು ತಿಳಿ ಯುವ ಬಗೆಯೆಂತು ?" ಈ ಪ್ರಕಾರದ ಸಂಶಯವನ್ನು ತಾವೇ ಹೊರಡಿಸಿ ಗುರುಗಳು ಸಮಾಧಾನ ಹೇಳಿದ್ದೆಂತೆದರೆ—

"ದೀಪವನ್ನು ಹಚ್ಚಿ ಆಕಾಶದ ಕಡೆಗೆ ಇಡಲು ಆ ದೀಪವು ಆಕಾಶ ಶವನ್ನು ಹಿಂದೂಡಿದಂತಾಯಿತೆ ? ಇದೆಂದಿಗೂ ಸಾಧ್ಯವಿಲ್ಲ ಜಲ, ತೇಜ ಹಾಗು ವಾಯು ಇವು ಯಾವವೂ ಆಕಾಶವನ್ನು ಹಿಂದೂಡುವ ಸಾಮರ್ಥ್ಯವು ಳ್ಳವಲ್ಲ ಯಾಕಂದರೆ ಗಗನವು ಸಘನ (ಅಂದರೆ ಮೋಡಯುಕ್ತ ಅಥವಾ ದಾರ್ಢ್ಯತೆಯುಳ್ಳದ್ದು ಎಂಬರ್ಥ) ವಾದುದರಿಂದ ಈ ಜಲಾದಿಗಳ ಬಲವು ಅದರ ಮೇಲೆ ಸಾಗದು ಪೃಥ್ವಿಯು ಕಠಿಣವಾಗಿದ್ದರೂ ಆಕಾಶವು ಅದರ ಸರ್ವಾಂಗಗಳನ್ನು ಭೇದಿಸಿ ಚೆಲ್ಲಿ ತಾನು ಆಕಾಶರೂಪವಾಗಿ ನಿಂತುಬಿಟ್ಟಿತು. ಅಂದರೆ ಅದು ಜಡತ್ವ (ಭಾರ) ವುಳ್ಳದ್ದಾಯಿತು ಜಡತ್ವವುಳ್ಳದ್ದೆಲ್ಲ ನಾಶ ವಾಗುವವು ಆಕಾಶಕ್ಕೆ ಚಲನವಲನವಿಲ್ಲ ಬ್ರಹ್ಮನಿಂದ ಹೊರತು ಪಡಿಸಿ ನೋಡಿ ಅದಕ್ಕೆ ಆಕಾಶವೆನ್ನಬೇಕು. ಆದರೆ ಅಭಿನ್ನತೆಯಿಂದ ತಿಳಿಯಲು ಅದು ಆಕಾಶ ಬ್ರಹ್ಮಸ್ವಭಾವದ್ದಾಗುವದು ಅಂದರೆ ಆಕಾಶವೇ ಬ್ರಹ್ಮ ವಾಗುವದು

ಆಕಾಶವು ಕಲ್ಪನೆಯಿಂದ ಭಾಸಿಸುವದು ಆದರೆ ಪರಬ್ರಹ್ಮನು ನಿರಾಭಾಸನೂ ನಿರ್ವಿಕಲ್ಪನೂ ಅಗಿರುವನು 'ಭೂತಾತ್ಮಕವಾಗಿದ್ದ

ಬ್ರಹ್ಮಾಂಶವೇ ಆಕಾಶವು' ಪೃಥ್ವಿ ಮೊದಲಾದ ನಾಲ್ಕು ಭೂತಗಳು ಅಚಲವಾದವುಗಳಲ್ಲ ಆದರೆ ಆಕಾಶವು ಪ್ರತ್ಯಕ್ಷ ಕಂಡರೂ, ಪಂಚ ಭೂತಗಳಲ್ಲಿ ಅದನ್ನು ಒಂದಾಗಿ ಎಣಿಸಲ್ಪಟ್ಟರೂ ಅದು ಅಚಲವೇ ಆಗಿದೆ ಪೃಥ್ವಿಯು ಕರಗಿ ನೀರು ಉಂಟಾಗುವವು, ನೀರು ಆಟ್ಟಿಸಲು ಅಗ್ನಿ ಹುಟ್ಟುವದು ಅಗ್ನಿಯು ಆರಲು ವಾಯು ಹುಟ್ಟುವದು ಈ ವಾಯುವೂ ಆವೆಲ್ಲವುಗಳಂತೆ ನಾಶವಾಗತಕ್ಕದ್ದೇ ಆಗಿರುವದು 'ಈ ಭೂತಗಳ ಆಗಮನ ನಿರ್ಗಮನಗಳು ಮಿಥ್ಯವಾಗಿಯೇ ಪರಿಣಮಿಸಿದವು.' ಹೀಗೆ ಹೇಳುವದರಿಂದ ಸತ್ಯತೆಗೆ ನಾಶವುಂಟಾಯಿತೆಂಬ ಅನುಭವವು ಹೇಗೆ ಉಂಟಾಗ ವದು ? ಭ್ರಮೆಯಿಂದ ಪ್ರತ್ಯಕ್ಷವಾಗಿ ತೋರಿದ್ದು ವಿಚಾರದಿಂದ ಉಳಿಯಲಾರದು ಅಂದಮೇಲೆ ಭ್ರಮೆ ಮೂಲವಾದ ಈ ಜಗತ್ತು ಸತ್ಯವೆಂದು ಹೇಗೆ ಹೇಳಬೇಗು ? ಜಗತ್ತು ಭ್ರಮರೂಪವಾಗಿರುವದರಿಂದ ಅದನ್ನು ಯಾರು ಎಲ್ಲಿ ಭೇದಿಸಿದರೂ ಉಂಟಾಗುವದೇನು ? ವಸ್ತು ಸ್ಥಿತಿಯು ಹೀಗಿದ್ದು 'ಜಗತ್ತು ಬ್ರಹ್ಮನನ್ನು ಭೇದಿಸುವದು' ಎಂದೆನ್ನುವದರಿಂದ ಇನ್ನಿಷ್ಟು ಮಿಥ್ಯತೆಯು ತೋರುವದು ಅಸತ್ಯವನ್ನೇ ಮೇಲು ಮಾಡಿ ಹೇಳುವದರಿಂದ ನಮಗೇನು ಪ್ರಯೋಜನವು? ಅದರ ಸ್ವರೂಪವನ್ನು ಬುದ್ಧಿವಂತರು ಅರಿತುಕೊಳ್ಳುವರು

ಸಮುದ್ರದಲ್ಲ ಬಿದ್ದ ಒಂದು ಕಸಕಸಿಯ ಕಾಳಿನಂತೆ ಪರಬ್ರಹ್ಮನಲ್ಲಿ ಈ ದೃಶ್ಯ ಬ್ರಹ್ಮಾಂಡದ ಪ್ರಮಾಣ ಸ್ಥಿತಿಯಿರುವದು ಇನ್ನಿಷ್ಟು ಮತ್ತಿಷ್ಟು ವಿಚಾರ ಮಾಡಿದಂತೆ ಬ್ರಹ್ಮಗೋಲವು ಪರಬ್ರಹ್ಮನ ಹಸ್ತದಲ್ಲಿಯ ತುತ್ತಿನಷ್ಟು ಇಲ್ಲವೆ ಬಾರಿಯ ಹಣ್ಣಿನಷ್ಟು ಅಷ್ಟೇಯೇಕೆ ! ತೀರ ಸೂಕ್ಷ್ಮ ಆಲದ ಬೀಜದಂತೆ ಕಾಣುವದ ಇಂತು ಪಿಂಗಡಿತ ದೃಷ್ಟಿಯಿಂದ ನೋಡಲು ಕಂಡಬರುವದು ಬ್ರಹ್ಮಾಕಾರ ಹೊಂದಿ ನೋಡಲು ಏನೊಂದೂ ಕಂಡುಬರುವದಿಲ್ಲ ನಾವು ಲಘು ಶರೀರಧಾರಿಗಳು ಹೀಗಿದ್ದೂ ಭ್ರಮೆಯಿಂದ ಬ್ರಹ್ಮಾಂಡವನ್ನು ತುತ್ತಾಗಿ ನುಂಗಲು ಹವಣಿಸಿದರೆ ಅದು ಸಾಧ್ಯವೇ ಇಲ್ಲ ನಮ್ಮ ವೃತ್ತಿಯನ್ನು ಉತ್ತರೋತ್ತರ ಬೆಳಿಸಿ ಮೇರೆ ಮಿಕ್ಕಿಸಬೇಕು ಒಂದು ಬಂಗಾರದ ತಗಡನ್ನು ವಿಸ್ತರಿಸಿ ಅದರಿಂದ ಬ್ರಹ್ಮಾಂಡವನ್ನು ಆಚ್ಛಾದಿಸುವವದು ಶಕ್ಯವೇ ? ಇದನ್ನು ವಿಚಾರದಲ್ಲಿ ತಂದುಕೊಳ್ಳಬೇಕು ವಸ್ತುವೆಂಬ ತುತ್ತು ವೃತ್ತಿಗೆ ದೊಡ್ಡದಾದಲ್ಲಿ ವೃತ್ತಿಯು ಹರಿದು ಹೋಗುವದು ಮತ್ತು

ವಸ್ತುವು ಬ್ರಹ್ಮನಲ್ಲಿ ಲೀನವಾಗಿ ಕೊನೆಗೆ ನಿರ್ಗುಣ ಆತ್ಮನೇ ಉಳಿಯುವನು

ಈ ವಿವರದಿಂದ ನಿನ್ನ ಸಂದೇಹ ದೂರಾಗುವದು. ಇನ್ನೂ ಅನುಮಾನವಿದ್ದುದಾದರೆ ವಿವೇಕ ದೃಷ್ಟಿಯಿಂದ ಅವಲೋಕಿಸಬೇಕು ವಿವೇಕದಿಂದ ಅನುಮಾನಗಳು ದೂರಾಗುವವು ವಿವೇಕದಿಂದ ಸಮಾಧಾನವಾಗುವದು ಮತ್ತು ವಿವೇಕದಿಂದ ಆತ್ಮನಿವೇದನವಾಗಿ ಮೋಕ್ಷವು ಲಭಿಸುವದು

ಮೋಕ್ಷವನ್ನು ಕಡೆಗಣಿಸಿದರೆ ವಿವೇಕ ದೂರಾಗಿ ಸಂಶಯಗಳು ಉತ್ಪನ್ನವಾಗುವವು ಇವೆಲ್ಲವನ್ನು ವಿವೇಕದಿಂದ ನೆನಪಿಗೆ ತಂದುಕೊಳ್ಳು ಮೋಕ್ಷವು ಪೂರ್ವ ಪಕ್ಷದಲ್ಲಿ ಹೋಯಿತು ಮತ್ತು ಸಿದ್ಧಾಂತ ರೂಪವಾದ ಆತ್ಮನು ಪ್ರತ್ಯಕ್ಷನಾದನು ಪ್ರತ್ಯಕ್ಷಕ್ಕೆ ಪ್ರಮಾಣಗಳ ಅವಶ್ಯಕತೆಯಿಲ್ಲ ಸಾರಾಸಾರ ವಿಚಾರದಿಂದಲೂ ಮನನ ನಿದಿಧ್ಯಾಸದಿಂದಲೂ ಪವಿತ್ರವಾದ ಸಾಕ್ಷಾತ್ಕಾರವಾಗುವದು'' ಎಂದರು

ಶ್ರೀ ರಾಮ || ೧೦ ಸ್ಥಿತಿನಿರೂಪಣ || ಗುರುಗಳು ಶಿಷ್ಯನನ್ನು ಕುರಿತು

ದೇವಾಲಯದ ಶಿಖರದ ಮೇಲೆ ಕುಳಿತ ಕಾಗೆಯು ಗರ್ಭಗುಡಿಯಲ್ಲಿರುವ ದೇವನಿಗಿಂತಲೂ ಶ್ರೇಷ್ಠವೆ? ರಾಜಮಂಟಪದ ತುದಿಗೇರಿ ಕುಳಿತ ಮಂಗವು ರಾಜಸಭೆಯಲ್ಲಿಯ ಚತುರರಿಗಿಂತ ಹೆಚ್ಚಿನದೇ? ಇದರಂತೆ ಬಕ ಧ್ಯಾನವು ಬ್ರಾಹ್ಮಣನು ಮಾಡುವ ಜಪಕ್ಕಿಂತ ಹೆಚ್ಚಿನದಲ್ಲ ಧ್ಯಾನಸ್ಥ ನಾಯಿಯು ಅವ್ಯವಸ್ಥಿತ ಬ್ರಾಹ್ಮಣನಿಗಿಂತ ಹೆಚ್ಚಿನ ಯೋಗ್ಯತೆಯದಲ್ಲ, ಲಕ್ಷ ಮುದ್ರೆಯನ್ನು ತಿಳಿಯದ ಬ್ರಾಹ್ಮಣನಿಗಿಂತ ಹೊಂಚು ಹಾಕಿ ಕುಳಿತಿದ್ದ ಬೆಕ್ಕು ಶ್ರೇಷ್ಠವಲ್ಲ ಭೇದಾಭೇದವನ್ನರಿಯುವ ಬ್ರಾಹ್ಮಣನು ಅಭೇದವನ್ನರಿಯುವ ನೊಣಕ್ಕಿಂತ ಕೇವಲನೇ? ದಿವ್ಯಾಡಂಬರವನ್ನಿಟ್ಟ ನೀಚನೊಬ್ಬನು ದಿಗಂಬರ ಸ್ವರೂಪಿನ ಸಾಧುವಿನಿಗಿಂತ ಶ್ರೇಷ್ಠನಾಗುವನೇ ?

ಇವೆಲ್ಲ ಹೊರಗಿನ ಡೌಲುಗಳು ಲೌಕಿಕ ಭ್ರಮೆಯೆನ್ನಬಹುದು ಆದರೆ 'ಅಂತರನಿಷ್ಠೆ'ಯೇ ಮುಖ್ಯವಾಗಿರಬೇಕಾಗುವದು ಅಂತಸ್ಥದಲ್ಲಿ ತಳಮಳವನ್ನಿಟ್ಟುಕೊಂಡು ಬಹಿರಂಗದಲ್ಲಿ ಜನಮೆಚ್ಚುಗೆಯನ್ನು ಪಡೆದುಕೊಳ್ಳುವದು ಯುಕ್ತವಲ್ಲ, ಇದರಂತೆ ಮುಖ್ಯ ದೇವನನ್ನು ಬಿಟ್ಟ ಆತ್ಮಘಾತುಕ ಮಾನವನ ಸ್ಥಿತಿಯಾಗುವದು. ದೇವನನ್ನು ಸ್ಮರಿಸಿದರೆ ದೇವಲೋಕವು, ಪಿತೃಗಳಿಗೆ ತರ್ಪಣ ನೀಡಲು ಪಿತೃಲೋಕವು, ಭೂತಗಳನ್ನು

ಆರಾಧಿಸಲು ಭೂತ ಜಗತ್ತು ಪ್ರಾಪ್ತವಾಗುವವು ಇದರಿಂದ ನಾವು ಪಡೆ ಯುತಕ್ಕ ಲೋಕಗಳಿಗಾಗಿ ನಿರ್ದಿಷ್ಟ ಸ್ಮರಣೆ ಕೈಕೊಳ್ಳಬೇಕಾಗುವದೆಂದು ತಿಳಿಯುವದು ಇದರಂತೆ ನಿರ್ಗುಣ ಸ್ಮರಣೆಯಿಂದ ಸ್ವಯಂ ನಿರ್ಗುಣತ್ವ ಪಡೆಯುವನು ನಿರ್ಗುಣ ಸ್ಮರಣೆಯನ್ನು ಕೈಕೊಳ್ಳುವದೆಂತೆಂದರೆ— ನಿರ್ಗುಣನಲ್ಲಿ ಅನನ್ಯನಾಗಿರಬೇಕು ಹೀಗೆ ಅನನ್ಯವಾಗುವದರಿಂದ ಧನ್ಯ ತೆಯೊದಗುವದು ನಿಶ್ಚಯ ದೇವನೊಬ್ಬನನ್ನು ತಿಳಿಯುವದರಿಂದ ಎಲ್ಲ ಕ್ರಿಯೆಗಳು ಸಾರ್ಥಕವಾಗುವವು ಆದ್ದರಿಂದ ದೇವನನ್ನು ತಿಳಿಯುವ ವಿಚಾರವನ್ನು ಮಾಡಬೇಕು ಜನ್ಮ ಸಫಲವನ್ನಾಗಿ ಮಾಡಿಕೊಳ್ಳಬೇಕು. ನಮ್ಮ ಮಾಯಿಕ ವಿಚಾರಗಳೆಂದರೆ ದೇಹಬುದ್ಧಿಯನ್ನು ಬಿಟ್ಟು ನಿರಾ ಕಾರ ನಿರ್ಗುಣ ಪರಬ್ರಹ್ಮನೊಡನೆ ''ಸೋಹಂ ಆತ್ಮಾ" ಎಂಬ ನಿರ್ಧಾರ ದಿಂದ ಸಮರಸವಾಗಬೇಕು ದೇಹವು ನಾನಲ್ಲ ಅಂದ ಮೇಲೆ ದೇಹ ಭಾವವೆಲ್ಲಿ? ಪ್ರತಿಯೊಂದೆಡೆಯಲ್ಲಿ ವಸ್ತುವಿರುವದು ಸಿದ್ಧ-ಸಾಧನ, ಬಂಧನ-ಮುಕ್ತ ಇವೆಲ್ಲವು ಅನುಮಾನಿಕ ವಿಷಯಗಳು ಸಾಧನಗಳಿಂದ ಏನನ್ನಾದರೂ ಸಾಧಿಸುವದಿದ್ದರೆ ಅವನ್ನು ನಾವು ನಮ್ಮ ಭಾವನೆಯಲ್ಲಿ ತಂದುಕೊಳ್ಳಬೇಕು, ಅಂದರೆ ಇಲ್ಲಿ ಸಾಧಕರ ಹೆಸರು ಶೂನ್ಯದ ಹೊರತು ಇನ್ನೊಂದಿಲ್ಲ ಕುಂಬಾರನು ಅರಸೊತ್ತಿಗೆಯನ್ನು ಹೊಂದಿದ ಮೇಲೆ ಅವನು ಕತ್ತೆಗಳನ್ನು ಕಾಯುವ ಆವಶ್ಯಕತೆಯೇನು? ಅವನ ಕುಂಬಾರಿ ಕೆಯ ವರ್ತನಗಳು ಇನ್ನೇತಕ್ಕೆ ಬೇಕು? ಇದರಂತೆ—

ಎಲ್ಲ ಸಾಧನಗಳು ವೃತ್ತಿಯಲ್ಲಿಯವು ನಿವೃತ್ತಿ ಪದವು ಸಾಧ್ಯವಾದ ಮೇಲೆ ಅಂದರೆ ದೊರಕಿದ ಮೇಲೆ ಸಾಧನಗಳು ಅದೆಲ್ಲಿ ಉಳಿಯುವವು? ನಿತ್ಯನೇಮಾದಿ ಸಾಧನಗಳನ್ನು ಸಾಧಿಸಿಕೊಳ್ಳಬೇಕಾಗುವದಿಲ್ಲ ಇನ್ನು ಮೇಲೆ ವಸ್ತು ಸಾಧನಗಳಿಗಾಗಿ ಚಿಂತೆ ಮಾಡಬೇಕಾಗುವದಿಲ್ಲ, ಶರೀರವು ಪಂಚಭೂತಾತ್ಮಕವಾದದ್ದು ಜೀವವು ಬ್ರಹ್ಮಾಂಶವು ಇದನ್ನರಿತು ಪರ ಬ್ರಹ್ಮನಲ್ಲಿ ಅನನ್ಯನಾಗಬೇಕು ಆತ್ಮನು ಆತ್ಮತ್ವದಿಂದ ಜೀವನು ಜೀವ ತ್ವದಿಂದ ಹಾಗು ಮಾಯೆಯು ಮಾಯತ್ವದಿಂದ ಇರುವವು. ಪರಮಾತ್ಮ ನನ್ನು ವಿವೇಕವಿಲ್ಲದೆ ನೋಡಲು ಅಹಂಕಾರ ತೋರುವದು, ವಿವೇಕ ಪೂರ್ಣತೆಯಿಂದ ನೋಡಲು ಏನೂ ಇರುವದಿಲ್ಲ ತತ್ವಗಳು ತತ್ವದಲ್ಲಿ

ಹೊಂದಿಕೆಯಾಗಲು ಮುಂದೆ ನಿರ್ಗುಣ ಆತ್ಮನೇ ಉಳಿಯುವನು ಆತ್ಮವೂ ಜೀವತ್ವ ಹಾಗು ಮಾಯತ್ವ ಇವೆಲ್ಲವುಗಳಿಂದ ನಾನೂ ಏನೊಂದಾಗಿ ರುವೆನು' ಎಂದು ಶೋಧಿಸಿ ನೋಡುವವನು ಜ್ಞಾನಿಯೆನ್ನಿಸುವನು ಎಲ್ಲ ವನ್ನು ಶೋಧಿಸುವ, ಆದರೆ ತನ್ನನ್ನು ಕಾಣದ, ವೃತ್ತಿಯನ್ನು ಉಳಿಸಿ ಕೊಂಡು ಬ್ರಹ್ಮನನ್ನು ಕಾಣುವ ಆತುರತೆಯು ಜ್ಞಾನಿಗಳು ಹಲವರಿರು ವರು ಆದರೆ ಅವರು ತಮ್ಮ ಸಾಕ್ಷಿತ್ವ ವೃತ್ತಿಯನ್ನು ಸಹ ಬಿಡಲಿಕ್ಕೆ ಬೇಕು ವೃತ್ತಿಯ ಕಡೆಗೆ ನೋಡಲು ಏನೂ ಉಳಿಯುವದಿಲ್ಲ. ಅದರಂತೆ ಪ್ರಕೃತಿ ನಿರಾಕಶಕ್ಕಾಗಿ ಹಾಗು ನಿರ್ಗುಣ ಬ್ರಹ್ಮನಿಗಾಗಿ ಆ ಬ್ರಹ್ಮನೊಡನೆ ಅನನ್ಯವಾಗಬೇಕು ಇದೇ ಪಾರಮಾರ್ಥಿಕ ಗುಹ್ಯವಾದ ಗುರುತಾಗಿದೆ ಇದು ಅಗಾಧವಾಗಿದೆ ಫಲವು ಒಂದು,ಹಾಗು ತಾನು ಬೇರೊಂದು ಹೀಗೆ ಪಾರಮಾರ್ಥಿಕ ಗುಹ್ಯವಾದ ಗುರುತಾಗಿದೆ ಇದು ಅಗಾಧವಾಗಿದೆ ಫಲವು ಒಂದು ಹಾಗು ತಾನು ಬೇರೊಂದು ಹೀಗೆ ಅರಿಯು ವದು ವಿವೇಕವೆನ್ನಿಸಲಾರದು. ಬಡವನು ಬಲ್ಲಿದನಾಗುವದು ಕಂಡು ಅನು ಭವ ಪಡೆಯುವದು ಆವನು ಬಲ್ಲಿದನಾದ ಮೇಲೆ ತನ್ನ ದಾರಿದ್ರ್ಯವನ್ನು ಅದೇಕೆ ತೋರ್ಪಡಿಸುವನು? ತೋರಿಸಲಾರನು ವೇದ-ಶಾಸ್ತ್ರ–ಪುರಾ ಣಗಳು, ಹಲವು ಸಾಧನಗಳು, ಬೋಧೆಗಳು, ಸಿದ್ಧ–ಸಾಧುಗಳು ಕಷ್ಟ ಪಡುವ ಅನೇಕ ಸಾಧನಗಳು ಇವೆಲ್ಲವು ಬ್ರಹ್ಮರೂಪವು ತನ್ನಲ್ಲಿರುವ ದೆಂದು ಅನುಭವವನ್ನು ತೋರಿಸುವವು ಈ ಅನುಭವವು ಸಾರಾಸಾರ ವಿಚಾರ ಪ್ರಸಂಗದಿಂದ ಉಂಟಾಗುವದು. ಇನ್ನು ಮಾಡುವದು, ಮಾಡ ದಿರುವದು ಇವು ಏನೂ ಉಳಿಯುವದಿಲ್ಲ

ಬಡವನು ರಾಜಾಜ್ಞೆಗೆ ಬೆದರುವನು ಅವನೇ ಮುಂದೆ ಅರಸ ನಾದ ಮೇಲೆ ಬಡವನಾಗಿದ್ದಾಗಿನ ಭಯವು ಉಳಿಯಲಾರದು ವೇದ ಗಳಿಗೆ ವೇದಾಜ್ಞೆಗಳೇಕೆ ಬೇಕು? ಬ್ರಹ್ಮವಿದ್ಯೆಗೆ ಬ್ರಹ್ಮವಿದ್ಯೆಯ ಅಭ್ಯಾ ಸವೇತಕ್ಕೆ ಬೇಕು? ತೀರ್ಥವು ಆತ್ಮಶುದ್ಧಿಗಾಗಿ ತಾನು ತೀರ್ಥಯಾತ್ರೆ ಯನ್ನೇಕೆ ಮಾಡಬೇಕು? ಅಮೃತವು ಅಮೃತವನ್ನು ಕುಡಿಯುವದೂ, ಅನಂತವೂ ಅನಂತನೆನ್ನು ಕಾಣುವದೂ, ಭಗವಂತನು ಭಗವಂತನನ್ನು ಲಕ್ಷಿಸುವದೂ ಇವೆಲ್ಲವೂ ನಿಷ್ಪ್ರಯೋಜಕವು ಸಜ್ಜನನು ದುರ್ಗುಣ

ಬಿಡಬೇಕಾಗಿಲ್ಲ ಅಂದರೆ ಅವರು ಮೂಲತಃ ಸುಗುಣವುಳ್ಳವರೇ ಆಗಿರುವರು. ಅದರಂತೆ ನಿರ್ಗುಣನಿಗೆ ನಿರ್ಗುಣ ಪದದ ಹಸಿವೆ ಬೇಕಾಗುವದಿಲ್ಲ ಸ್ವರೂಪವುಳ್ಳವನಿಗೆ ಸ್ವರೂಪ ಶೃಂಗಾರದ ಅವಶ್ಯಕತೆಯಿಲ್ಲ ಅದರಂತೆ ಅಂಜನಕ್ಕೆ ಅಂಜನವೂ, ಧನಕ್ಕೆ ಧನವೂ, ನಿರಂಜನನಿಗೆ ನಿರಂಜನವೂ ಅನಾವಶ್ಯವು. ಇದೇ ರೀತಿಯಾಗಿ ಸಾಧ್ಯಕ್ಕೆ ಸಾಧನಗಳು, ಧ್ಯೇಯಕ್ಕೆ ಧ್ಯಾನವು, ಉನ್ಮನಕ್ಕೆ ಮನೋನಿಗ್ರಹವು ಇವು ಏನೊಂದೂ ಅವಶ್ಯವಿಲ್ಲ" ಎಂದರು.

ಇತಿ ದಾಸಬೋಧೆಯ ೯ನೆಯ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೧೦ನೆಯ ದಶಕ[ಜಗಜ್ಯೋತಿ ದಶಕ]

ಶ್ರೀ ರಾಮ ॥ ೧ ಅಂತ ಕರಣ ॥ ಶಿಷ್ಯನು ಗುರುಗಳನ್ನು ಕುರಿತು—ಜಗತ್ತಿನ ಎಲ್ಲ ಪ್ರಾಣಿಗಳ ಅಂತಃಕರಣಗಳೆಲ್ಲ ಕೂಡಿ ಒಂದೇ ಆಗಿರುವದೇ ಇಲ್ಲವೆ ಪ್ರತಿಯೊಂದು ಪ್ರಾಣಿಯ ಅಂತ ಕರಣವು ಪ್ರತಿಯೊಂದರಿಂದ ಬೇರೆ ಆಗಿರುವದೇ? ಇದರ ನಿಶ್ಚಯಾತ್ಮಕವನ್ನು ನನಗೆ ಬೋಧಿಸುವದಾಗಬೇಕು" ಎಂದನು ಆದಕ್ಕೆ ಗುರುಗಳು —"ಎಲ್ಲ ಪ್ರಾಣಿಗಳ ಅಂತಃಕರಣವು ಒಂದೇ ಆಗಿರುವದೆಂದು ನಿಶ್ಚಯುವಾಗಿ ತಿಳಿ"ಎಂದರು ಆಗ ಶಿಷ್ಯನು ಮತ್ತೆ ಗುರುಗಳನ್ನು ಕುರಿತು — "ಎಲ್ಲರ ಅಂತಃಕರಣವು ಒಂದೇ ಆಗಿದ್ದರೆ ಅವರೆಲ್ಲರು ಒಬ್ಬರಿಗೊಬ್ಬರು ಕೂಡುವದಿಲ್ಲವೇಕೆ? ಮತ ಭಿನ್ನತೆ, ರುಚಿ ಭಿನ್ನತೆ ಇತ್ಯಾದಿ ಭೇದಗಳು ಅದೇಕೆ ಉತ್ಪನ್ನವಾಗುವವು? ಒಬ್ಬನು ಊಟ ಮಾಡಿದರೆ ಎಲ್ಲರ ಹೊಟ್ಟೆಗಳು ತುಂಬಬಾರದೇಕೆ? ಒಬ್ಬನು ತೃಪ್ತನಾಗಿ ತೇಗಿದರೆ ಎಲ್ಲರೂ ಥರ್‍ರನೆ ತೇಗಬೇಕಲ್ಲವೆ? ಒಬ್ಬನು ಸತ್ತ ಕೂಡಲೆ ಎಲ್ಲರೂ ಸಾಯಬೇಕಲ್ಲವೇ? ಆದರೆ ಹೀಗಾಗುವದಿಲ್ಲ ಒಬ್ಬನು ಸುಖಪಟ್ಟರೆ ಇನ್ನೊಬ್ಬನು ಕಷ್ಟವನ್ನು ಪಡುವದು ಕಂಡು ಬರುತ್ತದೆ ಮತ್ತು ಜನರಲ್ಲಿ ಬೇರೆ ಬೇರೆ ಭಾವನೆಗಳು ತೋರಿ ಬರುವವು ಅವೆಲ್ಲ ಭಾವನೆಗಳು ಒಂದಕ್ಕೊಂದು ಕೂಡುವದಿಲ್ಲ ಇದರಿಂದ ಎಲ್ಲರ ಅಂತಃಕರಣಗಳು ಒಂದೇ ಎನ್ನುವ ಮಾತು ಒಪ್ಪಿಗೆಯಾಗುವದಿಲ್ಲ ಒಂದು ವೇಳೆ ಅದು ಒಂದೇಯಾಗಿದ್ದರೆ ಒಬ್ಬನ ವಿಚಾರವು ಇನ್ನೊಬ್ಬನಿಗೆ ಅರಿಕೆಯಾಗುತ್ತಿತ್ತು ಮತ್ತು ಯಾವನೂ ಇನ್ನೊಬ್ಬನಿಂದ ಏನೊಂದು ಸಂಗತಿಯನ್ನು ಗುಪ್ತವಾಗಿ ಇಡುತ್ತಿದ್ದಿಲ್ಲ ಪ್ರಾಣಿ–ಪ್ರಾಣಿಗಳಲ್ಲಿ ಪರಸ್ಪರ ವಿರೋಧ ತೋರುತ್ತಿದ್ದಿಲ್ಲ ಹಾವು ಕಚ್ಚಲು ಬರುವದನ್ನು ಕಂಡು ಪ್ರಾಣಿಯು ಅಂಜಿ ಓಡುವದು ಈ ವಿರೋಧವು ಅಂತ ಕರಣವು ಒಂದೇ ಇದ್ದರೆ ಕಂಡು ಬರುತ್ತಿದ್ದಿಲ್ಲ ಒಟ್ಟಿನ ಮೇಲೆ ಎಲ್ಲರ ಅಂತ ಕರಣ ಒಂದೇ ಎನ್ನುವ ಮಾತು ನನಗೆ ಒಪ್ಪದಂತಾಗಿದೆ" ಎಂದನು ಆದಕ್ಕೆ ಗುರುಗಳು—"ಅಂತಃಕರಣವೆಂದರೆ ಅರಿವು, ಅರಿವನ್ನು ತಿಳಿಯುವ ಸ್ವಭಾವವು, ಹಾಗು

ದೇಹರಕ್ಷಣೆಯ ಉಪಾಯವನ್ನು ಸೂಚಿಸುವ ಇಂಗಿತ ಲಕ್ಷಣವು ಹಾವು ಕಚ್ಚುವ ಬುದ್ಧಿಯಿಂದಲೇ ಬರುವದು, ಪ್ರಾಣಿಯು ಅದರ ದಂಶನದಿಂದ ತಪ್ಪಿಸಿಕೊಳ್ಳುವ ಬುದ್ಧಿಯಿಂದಲೇ ಓಡಿ ಹೋಗುವನು ಇಂತು ಹಾವಿನಲ್ಲಿಯೂ ತಪ್ಪಿಸಿಕೊಳ್ಳುವವನಲ್ಲಿಯೂ ಬುದ್ಧಿಯು ಸಾಮಾನ್ಯವಾಗಿ ಇರುವದು ಅಂದ ಮೇಲೆ ವಿಚಾರದಿಂದ ನೋಡಲು ಹಾವು ಮತ್ತು ತಪ್ಪಿಸಿಕೊಳ್ಳುವವನು ಇವರಿಬ್ಬರ ಅಂತಃಕರಣವು ಒಂದೇಯಾಗಲಿಲ್ಲವೇ? ಅಂತಃಕರಣ ಬುದ್ಧಿಯು ಸರ್ವರಲ್ಲಿ ಒಂದೇ ಎಂಬ ಆಧಾರದಿಂದ ಜೀವಮಾತ್ರಗಳಿಗೆಲ್ಲ ಅರಿವು ಒಂದೇ ಇರುವದೆಂದಂತಾಯಿತು ಎಲ್ಲವೂ ಒಂದೇ ದೃಷ್ಟಿಯಿಂದ ನೋಡುವವು, ಒಂದೇ ನಾಲಗೆಯಿಂದ ರುಚಿ ನೋಡುವವು ಇದರಂತೆ ಸ್ಪರ್ಶ ಜ್ಞಾನವೂ ವಾಸನೆ ನೋಡುವದೂ ಎಲ್ಲ ಪ್ರಾಣಿಗಳಿಗೆ ಒಂದೇ ಬಗೆಯಾಗಿರುವದು ಪಶು-ಪಕ್ಷಿಗಳು, ಇರಿವೆ ಮೊದಲಾದ ಕ್ರಿಮಿ–ಕೀಟಕಗಳು ಇವೆಲ್ಲ ಜೀವಮಾತ್ರವಾಗಿ ಜಗತ್ತಿನಲ್ಲಿ ನಿರ್ಮಾಣವಾಗುವವು ಆದರೆ ಎಲ್ಲಕ್ಕೂ ಬುದ್ಧಿಯ ಅರಿವು ಒಂದೇ ಆಗಿರುವದು ನೀರು ಎಲ್ಲರಿಗೂ ತಂಪೆನ್ನಿಸುವದು ಅಗ್ನಿಯು ಎಲ್ಲರಿಗೂ ಉಷ್ಣತೆ ಹಾಗು ಪ್ರಕಾಶಗಳಿಂದ ವ್ಯಕ್ತವಾಗುವದು ಇದರಂತೆ ಎಲ್ಲರ ಅಂತಃಕರಣವು ಒಂದೇ ಬುದ್ಧಿಯ ಅರಿವಾಗಿರುವದು ರುಚಿ-ಭಿನ್ನತೆಗಳು ದೇಹಸ್ವಭಾವಗಳಂತೆ ಭಿನ್ನಭಿನ್ನವಿದ್ದರೂ ಅಂತ ಕರಣ ಯೋಗದಿಂದ ಒಂದೇ ತೋರಿಬರುವವು ಎಲ್ಲರ ಅಂತ ಕರಣವು ಒಂದೇ ಎಂಬ ನಿಶ್ಚಯವು ನಿಶ್ಚಯತ್ಮಕವಾಗಿದೆ

ಇಷ್ಟರಿಂದ ನಿನ್ನ ಸಂಶಯ ದೂರಾಗಬಹುದು ಇನ್ನು ಮೇಲೆ ಅನುಮಾನಗೊಳ್ಳಬೇಡ ಅರಿವುಗಳೆಲ್ಲವೂ ಒಂದೇ ಅಂತಃಕರಣದವೆಂಬುದನ್ನು ನಂಬು ಜೀವವು ಅರವಿನಿಂದ ಉಣ್ಣುವದು, ತಿನ್ನುವದು, ಅಂಜುವದು ಮತ್ತು ಓಡುವದು ಇತ್ಯಾದಿ ಕ್ರಿಯೆಗಳೆಲ್ಲ ಜೀವನ ಅರವಿನಿಂದಲೇ ಸಾಗುವವು ಇರಿವೆ ಕೀಟಕ ಮೊದಲು ಮಾಡಿ ಬ್ರಹ್ಮನ ವರೆಗೆ ಎಲ್ಲವುಗಳಲ್ಲಿ ಒಂದೇ ಅಂತಃಕರಣವಿರುವದು ಕೌತುಕವಾದದ್ದು ಇದನ್ನು ಅನುಭವದಿಂದ ತಿಳಿಯಬೇಕು ಸಣ್ಣ ಕಿಡಿಯಿದ್ದರೂ ದೊಡ್ಡ ಉರಿಯಿದ್ದರೂ ಅದು ಅಗ್ನಿಯಲ್ಲವೇ? ಸ್ವಲ್ಪವಿದ್ದರೂ ಬಹಳವಿದ್ದರೂ

ನೀರು ನೀರಲ್ಲವೇ? ಇಂತು ಎಲ್ಲ ಪ್ರಾಣಿಗಳು ಹೆಚ್ಚು ಕಡಿಮೆಗಳನ್ನು ಅಂತ ಕರಣದಿಂದ ತಿಳಿಯುತ್ತದೆ ವಸ್ತುಗಳ ನ್ಯೂನ್ಯಾಧಿಕ್ಯತೆಗಳನ್ನು ಸ್ಥಾವರ ಜಂಗಮಗಳನ್ನೂ ತಿಳಿಯುವ ಬದ್ಧಿಯೊಂದು ಸಾಮಾನ್ಯವಾಗಿ ಒಂದೇ ಅಂತ ಕರಣರೂಪದಿಂದ ಎಲ್ಲ ಪ್ರಾಣಿಗಳಲ್ಲಿರುವದು ಅರವೆಂದರೆ ಅಂತಃಕರಣವು, ಅಂತಃಕರಣವು ವಿಷ್ಣುವಿನ ಅಂಶವು ಆ ವಿಷ್ಣುವೇ ಪಾಲನಕರ್ತನು ಆದರಂತೆ ತಮೋಗುಣವು, ಅದು ಅಜ್ಞಾನವೆಂದು ಹೇಳಲ್ಪಡುವದು ಈ ತಮೋಗುಣದಿಂದಲೇ ಪ್ರಾಣಿಗಳ ನಾಶವು ಈ ಈ ತಮೋಗುಣದಿಂದಲೇ ರುದ್ರನು ಜಗತ್ಸಂಹರಿಸುವನು ಅಂಶವು ಅಜ್ಞಾನಗಳಿಂದ ಕೂಡಿರುವದೇ ರಜೋಗುಣದ ಸ್ವಭಾವವು ಈ ಗುಣವು ಜನ್ಮಕ್ಕೆ ಕಾರಣವಾಗುವದು ಆದ್ದರಿಂದಲೇ ಬ್ರಹ್ಮನು ನಿರ್ಮಾಣಕರ್ತ ನೆಂದು ಹೇಳುವರು ಅರವಿನಿಂದ ಸುಖವೂ ಅಜ್ಞತೆಯಿಂದ ದುಃಖವೂ ಉಂಟಾಗುವವು, ಇವೆರಡರ ಕೂಡುವಿಕೆಯಿಂದ ಸುಖದುಃಖಗಳೂ ಸಮ ವರ್ತಿಯಾಗುವವು ಅರವು ಹಾಗು ಅಜ್ಞತೆ ಇವುಗಳಿಂದ ಉಂಟಾದ ಮಿಶ್ರಬುದ್ಧಿಗೇ ನಮ್ಮ ದೇಹದಲ್ಲಿಯ ಬ್ರಹ್ಮನೆಂದು ತಿಳಿಯಬೇಕು ಸ್ಥೂಲ ದೇಹದ ನಿರ್ಮಿತಿಯು ನಿಶ್ಚಯವಾಗಿ 'ತ್ರಿಶುದ್ಧಿ ಬ್ರಹ್ಮ'ನಿಂದ ಉಂಟಾಗುವದು ಅಂತಃಕರಣವೆಂದರೆ ಬುದ್ಧಿಯು, ಈ ಬುದ್ಧಿಯು [ಅರವು]ಎಲ್ಲರಲ್ಲಿ ಒಂದೇ ಎಂದು ಹೇಳುವ ಪ್ರಸಂಗದಿಂದ ತ್ರಿಮೂರ್ತಿ ಗಳನ್ನು ನಮ್ಮ ಶರೀರದಲ್ಲಿ ತಿಳಿಯುವ ಉಪಾಯ ಹೇಳಿತು ಆತ್ಮವಿಚಾ ರದಿಂದ ಅನುಭವ ಪಡೆಯಬೇಕು

ಶ್ರೀ ರಾಮ || ೨ ದೇಹ ಆಶಂಕೆ || ಶಿಷ್ಯನು ಗುರುಗಳನ್ನು ಕುರಿತು–

ಈ ಮೊದಲು ಹೇಳಿದ ವಿಚಾರದಿಂದ ವಿಷ್ಣುವಿನ ಅಭಾವವು ಕಂಡು ಬರುವದು ಮತ್ತು ದೇವತೆಗಳಾದ ತ್ರಿಮೂರ್ತಿಗಳೇ ತಮ್ಮ ತಮ್ಮ ಕ್ರಿಯಾತತ್ಪರರಾಗಿರುವದರಿಂದ ಆ ಮೂವರ ಅಭಾವವು ಕಂಡು ಬರುವದು. ನಾಲ್ಕು ಮುಖದ ಬ್ರಹ್ಮನು, ನಾಲ್ಕು ಭುಜಗಳುಳ್ಳ ವಿಷ್ಣುವು ಹೀಗೆ ನಾನು ಕೇಳಿ ತಿಳಿದಿರುವೆನು ಲಿಂಗ ಮಹಾ ಪುರಾಣದಲ್ಲಿ ಶಂಕರನ ಮಹಿಮೆಯು ಇದಕ್ಕೆ ವ್ಯತ್ಯಸ್ತವಾಗಿ ಹೇಳಿದೆ ಮೂಲ ಮಾಯೆಯಿಂದ

ಗುಣಮಾಯೆಯು, ಆ ಗುಣಮಾಯೆಯಿಂದ ತ್ರಿಗುಣಾತ್ಮಕರಾದ ಮೂವರು ದೇವತೆಗಳು ಹೀಗೆ ಶಾಸ್ತ್ರಕಾರರು ಹೇಳುವರು ಅವರಂತೆ ಪರಂಪರೆಯಿಂದ ಜನರು ಹೇಳುತ್ತ ಬಂದಿರುವರು ಆದರೆ ಮೂಲ ಮಾಯೆಯನ್ನು ಯಾರು ಮಾಡಿದರೆಂಬುದನ್ನು ಯಾರೂ ಹೇಳಿರುವದಿಲ್ಲ ಹಾಗೂ ಅನುಭವದಿಂದಲೂ ಯಾರೂ ತಿಳಿಯುವದಿಲ್ಲ 'ಈ ಬಗೆಗೆ ಅನುಭವವಿರುವದೇ? ಎಂದು ನಾನು ಯಾರನ್ನಾದರೂ ಕೇಳಿದರೆ ಅವರು ತಿರುಗಿನ್ನು ಹರಿಹಾಯು ವವರು ಅವರಿಗೆ ಅನುಭವವಿಲ್ಲದ್ದರಿಂದಲೇ ಅವರು ಈ ರೀತಿ ವರ್ತಿಸುವರು ಅನುಭವರಹಿತವಾದ ಜೊಳ್ಳು ಮಾತುಗಳಿಂದ ಪ್ರಯೋ ಜನವೇನು? ಒಬ್ಬಾನೊಬ್ಬ ಮೋಸಗಾರ ವೈದ್ಯನು ಔಷಧಗಳ ಅನುಭವ ವಿಲ್ಲದೆ ವ್ಯರ್ಥವಾಗಿ ಆಡಂಬರ ತೋರಿಸಿ ವೈದ್ಯಕಿಯನ್ನು ಮಾಡಹತ್ತಲು ಜನರು ಅವನ ಅನನುಭವವನ್ನು ಕಂಡು ಅವನ ಮೋಸಗಾರಿಕೆಯನ್ನು ಬೈಲಿಗೆಳೆಯದೆ ಬಿಡುವರೇ? ಅದರಂತೆ ಇದಾಗಿರುವದು ಅನುಭವವಿಲ್ಲದ ಗುರು ಮತ್ತು ಶಿಷ್ಯ ಇಬ್ಬರೂ ಕಗ್ಗತ್ತಲೆಯಲ್ಲಿ ಬೀಳುವರು ಇದಕ್ಕೆ ಇನ್ನುಳಿದವರ ಮಾತೇಕೆ? ಸ್ವಾಮಿ ನೀವು ನನಗೆ ಸಮರ್ಥರಾದ ಗುರು ಗಳಾಗಿರುವಿರಿ ನನ್ನ ಸಂಶಯ ದೂರ ಮಾಡಬೇಕು ತಮ್ಮನ್ನು ಇನ್ನೂ ಕೇಳುವದಾದರೆ—ಮಾಯೆಯನ್ನು ಯಾರು ಮಾಡಿದರು ದೇವರಿಂದ ಮಾಯೆಯ ನಿರ್ಮಿತಿಯಾಗಿದ್ದರೆ ದೇವನ ರೂಪವು ಮಾಯೆಯಲ್ಲಿ ಬರು ತ್ತಿತ್ತು ಒಂದು ವೇಳೆ ಮಾಯೆಯಿಂದ ಮಾಯೆಯ ಜನ್ಮವಾಗಿದ್ದರ ಇನ್ನೊಂದು ಮಾಯೆಯೆಲ್ಲಿದೆ? ಭೂತಗಳಿಂದ ಮಾಯೆಯ ನಿರ್ಮಿತ ವೆಂದರೆ ಅದು ಭೂತಗಳಲ್ಲಿ ಎಣಿಸಲ್ಪಡಬೇಕಾಗುವದು, ಪರಬ್ರಹ್ಮನಿಂದ ನಿರ್ಮಿತವೆಂದರೆ ಬ್ರಹ್ಮನಲ್ಲಿ ಕರ್ತೃತ್ವವಿಲ್ಲ ಇದರ ಹೊರತು ಮಾಯೆಯು ಸತ್ಯವಾಗಿದ್ದರೆ ಅದರ ಕರ್ತೃತ್ವವು ಬ್ರಹ್ಮನ ಕಡೆಗೆ ಬರುತ್ತಿತ್ತೋ ಇಲ್ಲೋ ಎಂಬ ವಿಚಾರವುಂಟಾಗುತ್ತಿತ್ತು ಆದರೆ ಆ ಮಾಯೆಯು ಮೂಲತ ಮಿಥ್ಯವಾಗಿರುವದರಿಂದ ಅದರ ಕರ್ತೃತ್ವವನ್ನು ಯಾರ ಕಡೆಗೆ ಒಪ್ಪಿಸ ತಕ್ಕದ್ದು?" ಆದ್ದರಿಂದ ಗುರುಗಳೇ ಈ ಎಲ್ಲ ನನ್ನ ತೊಡಕಿನ ಪ್ರಶ್ನೆ ಗಳಿಗೆ ಸರಿಯಾದ ಉತ್ತರವನ್ನು ನೀಡಿ ನನ್ನ ಸಂಶಯ ಪರಿಹಾರ ಮಾಡು ವದಾಗಬೇಕು ಇಷ್ಟೇ ಅಲ್ಲದೆ ಇನ್ನೂ ನನ್ನ ಕೇಳಿಕೆಗಳೆಂದರ—

ಶಬ್ದವು ಮಾತೃಕಗಳಿಲ್ಲದೆ ಇರುವದಿಲ್ಲ, ಮಾತೃಕಗಳು ದೇಹವಿಲ್ಲದೆ ಇರುವದಿಲ್ಲ ದೇಹವಿಲ್ಲದೆ ದೇಹ ನಿರ್ಮಾಣವಾಗುವದಿಲ್ಲ. ಇಂತಿರುವ ದೇಹಗಳಲ್ಲಿ ನರದೇಹವು ಶ್ರೇಷ್ಠವು ಆ ನರದೇಹಗಳಲ್ಲಿ ಬ್ರಾಹ್ಮಣ ಶರೀರವು ಹೆಚ್ಚಿನದು, ಆ ಬ್ರಾಹ್ಮಣ ದೇಹಕ್ಕೆ ವೇದಾಧಿಕಾರವು ಹೊಂದಿಕೊಂಡಿರುವದು ಇದೆಲ್ಲ ಇರಲಿ, ವೇದಗಳೆಲ್ಲಿಂದ ಉಂಟಾದವು? ದೇಹನಿರ್ಮಾಣದ ಉದ್ದೇಶವೇನು? ದೇಹವು ಅದೆಂತು ಪ್ರಕಟವಾಯಿತು?

ಈ ಬಗೆಯಾಗಿ ನನ್ನಲ್ಲಿ ಅನುಮಾನಗಳು ಉದಿಸಿರುವವು ಹಾಗು ಅವು ಬಲವತ್ತರವಾಗಿರುವವು ಅವನ್ನೆಲ್ಲ ತಾವು ದೂರ ಮಾಡಿ ನನಗೆ ಸಮಾಧಾನವನ್ನುಂಟು ಮಾಡಬೇಕು" ಎಂದು ಕೇಳಿಕೊಂಡನು ಅದಕ್ಕೆ ಗುರುಗಳು—

"ಇನ್ನು ನಿನ್ನ ಕೇಳಿಕೆಗಳ ಉತ್ತರವನ್ನು ಕೇಳು ತಿಳುವಳಿಕೆ ಹಾಗು ಶಾಸ್ತ್ರ ನಿರ್ಣಯು ಇವು ಒಂದೇ ತೆರನಾಗಿ ಇರುವದಿಲ್ಲ ಮತ್ತು ಸತ್ಯವಾದಅನುಭವವು ಯಾವಾಗಲೂ ಒಂದೇ ಇರುವದು ಆದ್ದರಿಂದ ಯಾವನಿರ್ಣಯವನ್ನು ಹೇಳಬೇಕೆಂಬುದು ದುಸ್ತರವಾಗುತ್ತದೆ ಶಾಸ್ತ್ರಗಳ ಒಲವನ್ನು ಬಿಡದೆ ಅನುಭವವನ್ನು ಹೇಳಬಾರದೆಂದರೆ ಈ ತೊಂದರೆ ಬಿಡ್ರುವದಿಲ್ಲ 'ಯಾಕೆಂದರೆ ಶಾಸ್ತ್ರಗಳಲ್ಲಿಯೂ ಹಲವು ಮತಗಳಿರುವವು ಶಾಸ್ತ್ರಕ್ಕೆ ಬಾಧೆ ತಾರದೆ ಅನುಭವವನ್ನು ತಂದುಕೊಂಡರೆ ಪೂರ್ವ ಪಕ್ಷವನ್ನು ಬಿಟ್ಟು ಸಿದ್ಧಾಂತದ ಕಡೆಗೆ ಲಕ್ಷ್ಯ ಕೊಟ್ಟಂತಾಗುವದು ಇದರಿಂದ ಪಂಡಿತ–ಪಾಮರರನ್ನು ಒಂದೇ ಶಬ್ದದಿಂದ ಸಮಾಧಾನಗೊಳ್ಳಿಸಲು ಬರುವದು ಶಾಸ್ತ್ರದಲ್ಲಿ ಪೂರ್ವ ಪಕ್ಷವನ್ನು ಮಂಡನೆ ಮಾಡಿರುವದು ಪೂರ್ವ ಪಕ್ಷವೆಂದರೆ ಸುಳ್ಳು ಹಾಗು ಸಂಶಯಯುಕ್ತ ಮಾತುಗಳು ಮೂರ್ಖರು ಈ ಪೂರ್ವಪಕ್ಷವನ್ನೇ ಲಕ್ಷಿಸಿಕೊಂಡು ಅವಕ್ಕೇ ಅಂಟಿಕೊಂಡು ಕುಳಿತಿರುವರು ವಿಚಾರವನ್ನ ಉಪಯೋಗಿಸಿ ಅನುಭವವನ್ನು ಕಾಣುವವರು ತೀರ ಸ್ವಲ್ಪ ಜನರಿರುವರು ವಿಚಾರದಿಂದ ನೀನು ತಿಳಿದದ್ದಾದರೆ ನೀನು ನಮಗೆ ದೋಷವನ್ನಿಡಲಾರೆ ಇರಲಿ' ಇನ್ನು ಶಾಸ್ತ್ರವನ್ನು ರಕ್ಷಿಸಿಕೊಂಡು ಹೇಳತಕ್ಕ ಸಂಗತಿಗಳನ್ನು ನಾವು ಹೇಳುವೆವು ವಿಚಾರಪೂರ್ವಕವಾಗಿ ತಿಳಿದುಕೊಳ್ಳಬೇಕು

ಶ್ರೀ ರಾಮ. || ೩. ದೇಹ ಆಶಂಕಾ ಶೋಧನ || ಶ್ರೀ ಗುರುಗಳು ಶಿಷ್ಯನನ್ನು ಕುರಿತು – "ಉಪಾಧಿರಹಿತವಾದ ಆಕಾಶವೆಂದರೆ ನಿರಾಭಾಸಬ್ರಹ್ಮನು ಆ ನಿರಾಭಾಸನಲ್ಲಿಯೇ ಮೂಲ ಮಾಯೆಯುಂಟಾಯಿತು ವಾಯುವಿನ ಸ್ವರೂಪವೇ ಮೂಲ ಮಾಯೆಯ ಲಕ್ಷಣವು ಪಂಚಭೂತಗಳು ಮತ್ತು ಮೂರೂ ಗುಣಗಳು ವಾಯುವಿನಲ್ಲಿರುವವು ಆಕಾಶದಿಂದ ವಾಯುವು ಉತ್ಪನ್ನವಾಗಿ ವಾಯುದೇವ ಎಂದು ಕರೆಯಲ್ಪಡಹತ್ತಿತು ವಾಯುವಿನಿಂದ ಅಗ್ನಿಯುಂಟಾಯಿತು ಅದೂ ಅಗ್ನಿದೇವ ಎಂದು ಹೆಸರುಗೊಂಡಿತು ಅಗ್ನಿಯಿಂದ ನೀರು ಹುಟ್ಟಿ ಅದು ನಾರಾಯಣ ಸ್ವರೂಪ ಹೊಂದಿತು ಆ ನೀರಿನಿಂದ ಬೀಜಾಕಾರವಾಗಿ ಪೃಥ್ವಿಯು ರೂಪ ತಾಳಿತು ಆ ಪೃಥ್ವಿಯ ಗರ್ಭದಲ್ಲಿ ಪಾಷಾಣಗಳು, ಅಲ್ಲಿ ಅನೇಕ ದೇವರುಗಳು ಜನರಿಗೆ ಕಂಡುಬರುವವು ಹಲವು ವೃಕ್ಷ–ಪಾಷಾಣ-ಮೃತ್ತಿಕೆಗಳ ಅನೇಕ ದೇವಮೂರ್ತಿಗಳಿರುವವು ಮತ್ತು ಆ ಆ ದೇವತೆಗಳು ಅವರವರ ಉಪಾಸಕರಿಗೆ ಕಂಡು ಬರುತ್ತಿರುತ್ತವೆ ಆದರೂ ಅವೆಲ್ಲ ದೇವತೆಗಳು ವಾಯು ಸ್ವರೂಪವಾಗಿಯೇ ಇರುವವು ಹಲವು ದೇವತೆಗಳು ಯಕ್ಷರು, ಚಾಮುಂಡಿ ಕಾತ್ಯಾಯನಿಗಳು ದೇಶ–ಸ್ಥಲ ಪರತ್ವದಿಂದ ಹಲವು ದೇವತೆಗಳಿರುವವು ದೇವರುಗಳು ಪುರುಷವಾಚಕ ನಾಮಗಳಿಂದ ಉಲ್ಲೇಖಿಸಲ್ಪಡುವವು ಭೂತಗಳೂ ದೈವತಗಳೂ ನಪುಂಸಕವಾಚಕ ನಾಮಗಳಿಂದ ಹೇಳಲ್ಪಡುವವು ದೇವ, ದೈವತ, ಭೂತಗಳೆಲ್ಲವೂ ವಾಯು ಸ್ವರೂಪವಾಗಿರುವವು ಆದರೂ ಪ್ರಸಂಗ ವಿಶೇಷದಲ್ಲಿ ಉಪಾಸಕರ ನಿಮಿತ್ತವಾಗಿ ಹಲವು ದೇಹ ಧರಿಸುವವು ಹಾಗು ಗುಪ್ತವಾಗಿಯೂ ಪ್ರಕಟವಾಗಿಯೂ ತೋರುವವು ಇಂತು ದೇವಾದಿಗಳೆಲ್ಲ ವಾಯು ಸ್ವರೂಪದಲ್ಲಿರುವವು ವಾಯುವಿನಲ್ಲಿ ಅರವು ವಾಸನೆ, ವೃತ್ತಿ ಮುಂತಾದ ರೂಪಗಳಿಂದ ಜಗಜ್ಜ್ಯೋತಿಯು ಇರುವದು ಆಕಾಶದಿಂದ ವಾಯುವು ಎರಡು ಪ್ರಕಾರಗಳಿಂದ ಉಂಟಾಗುವದು ಅವುಗಳಲ್ಲಿ ಒಂದು ವಾಯುವು ಎಲ್ಲವನ್ನು ಜ್ಞಾನ ಮಾಡಿಕೊಳ್ಳುವದು ಇನ್ನೊಂದು ಜಗಜ್ಜ್ಯೋತಿಯು, ದೇವ ದೇವತೆಗಳ ಅನಂತ ಮೂರ್ತಿಗಳು ಜಗಜ್ಜ್ಯೋತಿಯಿಂದ ತೋರುವವು ಇಂತು ವಾಯುವಿಗೆ ಹಲವು ವಿಕಾರಗಳಿದ್ದರೂ ಇಲ್ಲಿ ಎರಡೇ ಪ್ರಕಾರಗಳನ್ನು ಹೇಳಿದೆವು ಇನ್ನು ತೇಜದಲ್ಲಿಯ ಪ್ರಕಾರಗಳನ್ನು ತಿಳಿಯಬೇಕು

ತೇಜವು ವಾಯುವಿನಿಂದಾದದ್ದು ಅದರಲ್ಲಿ ಉಷ್ಣ ಹಾಗು ತಂಪು ಈ ಪ್ರಕಾರ ಎರಡು ಪ್ರಕಾರಗಳಿರುವವು ಉಷ್ಣ ತೇಜದಿಂದ ಪ್ರಕಾಶರೂಪ ನಾದ ಸೂರ್ಯನೂ, ಸರ್ವಭಕ್ಷಕ ಅಗ್ನಿಯೂ ಮತ್ತು ವಿದ್ಯುತ್ತೂ ಹೀಗೆ ಮೂರು ಉಂಟಾದವು ಮತ್ತು ತಂಪು ತೇಜದಿಂದ ನೀರು,ಅಮೃತ,ಚಂದ್ರ ನಕ್ಷತ್ರಗಳು, ತಾರಕೆಗಳು, ಬರ್ಫ ಮುಂತಾದವೆಲ್ಲ ಉಂಟಾದವು ಈಗ ನೀರಿನಲ್ಲಿಯೂ ನೀರು ಹಾಗು ಅಮೃತಗಳೆಂಬ ಎರಡು ಪ್ರಕಾರಗಳಾದವು ಪೃಥ್ವಿಯಲ್ಲಿ ಕಲ್ಲುಮಣ್ಣುಗಳು ಒಂದು ಪ್ರಕಾರವು ಬಂಗಾರ, ಸ್ಪರ್ಶಗಲ್ಲು ರತ್ನ ಇವು ಇನ್ನೊಂದು ಪ್ರಕಾರವು ಹೀಗೆ ಎರಡು ಪ್ರಕಾರಗಳು. 'ಬಹು ರತ್ನಾವಸಂಧರಾ' ಎಂಬದರ ಸತ್ಯಾಸತ್ಯತೆಗಳು ವಿಚಾರದಿಂದ ತಿಳಿಯುವವು ಇನ್ನು ಮಾನವನು ಎಲ್ಲಿಂದ ಬಂದನು ? ಈ ಮುಖ್ಯ ಸಂಶಯ ನಿವಾರ ಣೆಯ ಬಗೆಗೆ ಹೇಳುವೆವು '' ಎಂದು ಗುರುಗಳು ಹೇಳಿದರು

ಶ್ರೀ ರಾಮ ‖ ೪ ಬೀಜ ಲಕ್ಷಣ ‖ ಶ್ರೀ ಗುರುಗಳು ಶಿಷ್ಯನನ್ನು ಕುರಿತು – ಪ್ರಾಣಿಗಳ ಉತ್ಪತ್ತಿಯ ಬಗೆಗೆ ಸ್ಥೂಲವಾಗಿ ವಿಚಾರ ಮಾಡಲು ಮನುಷ್ಯರಿಂದ ಮನುಷ್ಯರು, ಪಶುಗಳಿಂದ ಪಶುಗಳು, ಜನ್ಮ ತಾಳುವವು ಅದರಂತೆ ಖೇಚರಗಳೂ(ಗಗನವಿಹಾರಿ),ಭೂಚರಗಳು,ಜಲಚರಗಳುಇತ್ಯಾದಿ ಅನೇಕ ಪ್ರಕಾರದ ಪ್ರಾಣಿಗಳು, ತಮ್ಮ ತಮ್ಮ ಜಾತಿಯ ಪ್ರಾಣಿಗಳಿಂದಲೇ ಜನ್ಮತಾಳುವವು ಇದು ಪ್ರತ್ಯಕ್ಷವೆಂದು ಹೇಳಬೇಕಾಗಿಲ್ಲ ಸಂಶಯಕ್ಕೆ ಆಸ್ಪದವಿಲ್ಲ ಇದಕ್ಕೆ ವಿಪರೀತವಾಗಿ ಜನ್ಮಕ್ರಿಯೆಗಳು ನಡೆಯುವದಿಲ್ಲ ಅಂದರೆ ಶರೀರವನ್ನು ಬಿಟ್ಟು ಶರೀರವು ಹುಟ್ಟುವದಿಲ್ಲೆಂಬದು ನಿಶ್ಚಿತವು ಇನ್ನು ಈ ಉತ್ಪತ್ತಿಗಳು ಹೇಗಾದವು ? ಯಾರಿಂದಾದವು ? ಯಾರು ಶರೀ ರವನ್ನು ಮಾಡಿದರು ? ಇವೆಲ್ಲವುಗಳ ವಿಚಾರ ಮಾಡುತ್ತ ಹೋಗಲು ಅತಿ ವಿಸ್ತೃತವಾಗುವದು ಮುಖ್ಯವಾಗಿ ಅನುಭವದಿಂದ ತಿಳಿಯಬೇಕು ಮೊದ ಲಿನ ಸಾಧುಗಳ ಅನುಭವಿಕ ಶಬ್ದಗಳ ಮೇಲೆ ವಿಶ್ವಾಸವಿಡಬೇಕು ಬ್ರಹ್ಮನಲ್ಲಿ ಮೂಲ ಮಾಯೆಯುಂಟಾಗುವದು ಅದಕ್ಕೆ ಅಷ್ಟಧಾಪ್ರಕೃತಿ ಎನ್ನುವರು ಎಂದರೆ ಅದರಲ್ಲಿ ಪಂಚಭೂತಗಳೂ ತ್ರಿಗುಣಗಳೂ ಮಿಶ್ರಿತವಾಗಿವೆ ಈ ಪ್ರಕೃತಿಯು ವಾಯು ಸ್ವರೂಪವಾಗಿದೆ ವಾಯುವಿನಲ್ಲಿಯ ಅರವಿಗೇ ಇಚ್ಛೆ ಅಥವಾ ಸಂಕಲ್ಪವೆನ್ನುವರು ಆದರೆ ಇದು ಬ್ರಹ್ಮನಿಗೆ ಸಂಬಂಧಿಸಿರುವದಿಲ್ಲ

ಬ್ರಹ್ಮನಿಗೆ ಸಂಬಂಧವಿದೆ ಎಂದು ನುಡಿದರೆ ಆ ನುಡಿಯು ವ್ಯರ್ಥವು ನಿರ್ಗುಣ ಬ್ರಹ್ಮನು ಶಬ್ದಾತೀತನಾಗಿ ಕೂಡಿರುವನು ಎಲ್ಲ ನಾಮ ಮಾತ್ರ ಗಳು ಭ್ರಮ ರೂಪವಾಗಿವೆ ಆಕಾಶಕ್ಕೆ ಕಲ್ಲನ್ನು ಬೀಸಿ ಒಗೆದರೆ ಅದು ಆಕಾಶಕ್ಕೆ ತಗಲುವದಿಲ್ಲ ಅದರಂತೆ ನಿರ್ವಿಕಾರ ಬ್ರಹ್ಮನಿಗೆ ನಾವ ರೂಪ ವಿಕಾರಗಳೇನೊಂದೂ ಸಂಬಂಧಿಸುವದಿಲ್ಲ ಪ್ರತ್ಯಯವನ್ನರಿತು ನಿರ್ಧಾರ ಕೈಕೊಂಡರೆ ಮಾತ್ರ ಅನುಭವ ಬರುವದು ವಾಯುರೂಪವಾದ ಮಾಯೆ ಯಲ್ಲಿರತಕ್ಕ ಅರವಿನ ಚೇತನಕ್ಕೇ ಈಶ್ವರ, ಸರ್ವೇಶ್ವರನೆನ್ನುವರು ಆ ಈಶ್ವ ರನು ಗುಣಗಳಿಗೆ ಸಂಬಂಧಿಸಿ ಮೂರು ಗುಣಗಳ ಭೇದ ವ್ಯಕ್ತವಾಗಲು ಆಗ ಬ್ರಹ್ಮ-ವಿಷ್ಣು-ಮಹೇಶ್ವರರು ಹುಟ್ಟಿದರು ಸತ್ವ-ರಜ-ತಮಸ್ಸುಗಳು ಈ ಮೂವರ ಸ್ವರೂಪಗಳೆಂದು ಈ ಮೊದಲೇ ಹೇಳಿದೆ ಅರವಿನ ತಾರತಮ್ಯ ದಿಂದ ಈ ಮೂವರ ಸೃಷ್ಟಿಸ್ಥಿತಿಯಾಗಿದೆ ತ್ರಿಗುಣಗಳಾದರೂ ಮೂಲತಃ ಒಂದರಲ್ಲೊಂದು ಮಿಶ್ರಿತವಾಗಿವೆ ಆದರೆ ಕೇವಲ ವೈಶಿಷ್ಟ್ಯ ಗುಣಗನ್ನಾ ಯ್ದುಕೊಂಡು ಹೀಗೆ ಹೇಳಿದೆ ಸತ್ವಗುಣಾತ್ಮಕ ವಿಷ್ಣುವು ಮೊದಲು ವಾಯುವಿನಲ್ಲಿ ಅರವಿನ ರೂಪದಿಂದ ಇದ್ದನು. ಅವನೇ ಚತುರ್ಭುಜ ಶಾಮ ಸುಂದರನೆಂದು ದೇಹಧಾರಿಯಾದನು ಈ ವಿಷ್ಣುವಿನ ಹಾಗೆಯೇ ಬ್ರಹ್ಮ ಮಹೇಶ್ವರರಿಗೆ ಗುಪ್ತವಾಗಲಿಕ್ಕೂ ಪ್ರಕಟವಾಗಲಿಕ್ಕೂ ವೇಳೆ ಹಿಡಿ ಯುವದಿಲ್ಲ ಈಗಲಾದರೂ ಯೋಗೀಶ್ವರರು ಗುಪ್ತ ಹಾಗು ಪ್ರಕಟ ರೀತಿ ಯಿಂದ ವರ್ತಿಸುವರು ಇದು ಬಹು ಜನರಿಗೆ ಪ್ರತ್ಯಕ್ಷವಾದ ಮಾತು ಅಂದ ಮೇಲೆ ಮಾನವರಲ್ಲದೆ ಸಮರ್ಥ ದೇವರೂ ದೇವತೆಗಳು ಭೂತಗಳು ಇವರಿಗೆಲ್ಲಮನುಷ್ಯರಿಗಿಂತ ಹೆಚ್ಚಿನಸಾಮರ್ಥ್ಯವಿರುವದು ರಾಕ್ಷಸರಿಗಾದರೂ ಅದರಂತೆ ಹೆಚ್ಚಿನ ಬಲವಿರುವದು ವಾಯು ರೂಪದಿಂದ ಇರುವ ಪಿಶಾಚ ಸೃಷ್ಟಿಯ ವ್ಯಕ್ತಿಗಳು ಭರಭರನೆ ನಡೆದು ಹೋಗುವದು ಅನುಭವಕ್ಕೆ ಬರು ವದು ಅವರು ಉತ್ತತ್ತಿ-ಕೊಬ್ಬರಿಗಳನ್ನು ಚಟ್ಟನೆ ಚಲ್ಲುವದು ಬಹುಜನರ ನಿದರ್ಶನಕ್ಕೆ ಬಂದಿರುವದು ಇವೆಲ್ಲವು ಸುಳ್ಳೆಂದು ಹೇಳಲಿಕ್ಕೆ ಬರಲಾರದು ಯಾಕೆಂದರೆ ಬಹುಜನರ ಅನುಭವಕ್ಕೆ ತೋರಿದ ಸಂಗತಿಗಳು ಇವಾಗಿರು ವವು ಮಾನವನಾದರೂ ಹಲವು ಶರೀರ ಧರಿಸುವನು, ಅಂದಮೇಲೆ ಜಗದಾತ್ಮನಿಗೆ ಪರಕಾಯ ಪ್ರವೇಶವನ್ನೂ ಮಾಡುವರು ಅವ

ನಿಗೆ ಅವಶ್ಯಕ ದೇಹ ಧರಿಸಲಿಕ್ಕೆ ಬರಲಾಗದೇ ? ಗಸ್ತ ಪ್ರಕಟತೆಗ ಳಳನ್ನು ಸರಿಸುವದು ಅವನಿಗೆ ಅಸಾಧ್ಯವೇ ? ಒಟ್ಟಿನ ಮೇಲೆ ಈಶ್ವರನೇ ತಾನು- ಗುಣಮಾಯೆಯನ್ನು ಅಂಗೀಕರಿಸಿ ಬ್ರಹ್ಮ-ವಿಷ್ಣು-ಮಹೇಶ್ವರ ದೇಹ ಧಾರಣ ಮಾಡಿರುವನು ಅನನು ಅಂತಸ್ಥದಲ್ಲಿ ಸ್ತ್ರೀಯರನ್ನು ಕಲ್ಪಿಸಿ ದನು ಹಾಗೆ ಕಲ್ಪಿಸಿದ ಕೂಡಲೇ ಅವನು ತನ್ನ ಸಂಕಲ್ಪ ಸಾಮರ್ಥ್ಯದಿಂದ ಸ್ತ್ರೀಯರ ನಿರ್ಮಾಣವಾಯಿತು ಜಾರಜ, ಅಂಡಜ ಮೊದಲಾದ ಅನಂತ ಜೀವಜಂತುಗಳು ಈಶ್ವರನ ಇಚ್ಛೆಯ ಮಾತ್ರದಿಂದಲೇ ನಿರ್ಮಾಣಗೊಂಡವು ಬೆವರು ಮೊದಲಾದ ನೀರಿನಿಂದ ಸ್ವೇದಜಗಳು ಜನಿಸಿದವು ವಾಯುವಿ ನಿಂದ ಉದ್ಭಿಜ್ಜಗಳು ಉದಿಸಿದಿವು ಮಾನವನ ಗೌಡಬಂಗಾಲೀ ವಿದ್ಯೆಯು ರಾಕ್ಷಸರ ಮಾಯಾವಿವಿದ್ಯೆಯೂ ಇವುಗಳಿಗಿಂತ ಬ್ರಹ್ಮದೇವನ ಸೃಷ್ಟಿರಚನೆಯು ಅಗಾಧ ವಿದ್ಯೆಯು ಅತ್ಯಂತ ಶ್ರೇಷ್ಠತರಗತಿಯ ವಿದ್ಯೆಯಾಗಿದೆ ಮುಂದೆ 'ಶರೀರದಿಂದ ಶರೀರಗಳು' ಎಂಬ ನ್ಯಾಯದಂತೆ ಕ್ರಮವಾಗಿ ಅನಂತ ಸೃಷ್ಟಿ ನಿರ್ಮಾಣವಾಯಿತು ಈ ಬಗೆಯಾಗಿ ಸೃಷ್ಟಿ ವಿಸ್ತ್ರತಗೊಳ್ಳಲು ವಿಷ್ಣುವು ಮೂಲ ರೂಪದಿಂದ ಪರಿಪಾಲಿಸಹತ್ತಿದನು ಮತ್ತು ಸ್ಥೂಲ ರೂಪವಾಗಿ ಅಂದರೆ ಕಾಲ ಕಾಲಕ್ಕೆ ಅವಶ್ಯಕ ಅವತಾರಗಳನ್ನುತಾಳಿ ಧರ್ಮ ಸ್ಥಾಪನೆಯನ್ನು ಮಾಡುತ್ತ ಬಂದನು ಶ್ರೀ ವಿಷ್ಣುವಿನ ಜನ್ಮವು ಕೇವಲ ದುಷ್ಟ ಸಂಹರಣೆ ಹಾಗೂ ಧರ್ಮ ಸ್ಥಾಪನೆಗಾಗಿಯೇ ಆಯಿತು ಆದ್ದ ರಿಂದಲೇ ಧರ್ಮಸ್ಥಾಪನೆ ಮಾಡಿದ ಮಾನವನು ವಿಷ್ಣುವಿನ ಅವತಾರವೆಂದು ತಿಳಿಯಲ್ಪಡಹತ್ತಿದದು ಅಭಕ್ತರೂ ದುರ್ಜನರೂ ಆದವರೇ ರಾಕ್ಷಸರೆಂದು ಪರಿಗಣಿಸಲ್ಪಡಹತ್ತಿದರು

ಇನ್ನು ಜನ್ಮ ಹೊಂದಿದ ಪ್ರಾಣಿಗಳನ್ನು ರುದ್ರನು ಮೂಲರೂಪದಿಂದ ಸಂಹಾರ ಮಾಡುವದು ಮತ್ತು ಆತನು ಸ್ಥೂಲರೂಪ (ಶರೀರ) ಧರಿಸಿ ರೊಚ್ಚಿಗೆದ್ದು ಎಲ್ಲ ಬ್ರಹ್ಮಾಂಡವನ್ನು ಜೀವಸೃಷ್ಟಿ ಸಹಿತವಾಗಿ ಸುಟ್ಟು ಭಸ್ಮ ಮಾಡುವನು,

ಈ ಪ್ರಕಾರ ಉತ್ಪತ್ತಿ ಸ್ಥಿತಿ ಲಯಗಳ ವಿಚಾರ ವಿವೇಚನೆಯಾಯಿತು ಇನ್ನೂ ಇದರ ವಿಚಾರವನ್ನು ಲಕ್ಷಗೊಟ್ಟು ಅವಧರಿಸಬೇಕು ಇನ್ನು ಮುಂದೆ

ಕಲ್ಪಾಂತ್ಯವಲ್ಲಾಗ ಪ್ರಳಯದ ಬಗೆಗೆ ಹೇಳುವೆವು ಆ ಪ್ರಳಯದ ಐದು ಪ್ರಕಾರಗಳನ್ನು ಅರಿತವನೇ ಜಾಣನಿಯು'' ಎಂದು ಹೇಳಿದರು

ಶ್ರೀ ರಾಮ ॥ ೫ ಪಂಚ ಪ್ರಳಯ ನಿರೂಪಣ ॥ ಶ್ರೀ ಗುರುಗಳು ಶಿಷ್ಯನನ್ನು ಕುರಿತು —

'' ಇನ್ನು ಪ್ರಳಯದ ಲಕ್ಷಣಗಳನ್ನು ಕೇಳು ಪ್ರಳಯದಲ್ಲಿ ಐದು ಪ್ರಕಾರಗಳಿವೆ ಪಿಂಡದಲ್ಲಿ ಎರಡು ಪ್ರಳಯಗಳು, ಬ್ರಹ್ಮಾಂಡದಲ್ಲಿ ಎರಡು ಪ್ರಳಯಗಳು, ಹಾಗು ವಿವೇಕ ಪ್ರಳಯವೆಂಬ ಇನ್ನೊಂದು ಹೀಗೆ ಒಟ್ಟು ಐದೇ ಪ್ರಳಯಗಳು ಪಿಂಡದಲ್ಲಿ ನಿದ್ರಾ ಪ್ರಳಯ, ಮರಣ ಪ್ರಳಯ ಇವಾಗಿರುವವು ಬ್ರಹ್ಮ - ವಿಷ್ಣು — ಮಹೇಶ್ವರರು ನಿದ್ರಿತರಾಗಿರುವ ಕಾಲದಲ್ಲಿ ಉಂಟಾಗುವ ಪ್ರಳಯವು ಬ್ರಹ್ಮಾಂಡದ ನಿದ್ರಾ ಪ್ರಳಯವು ಇನ್ನು ಬ್ರಹ್ಮಾಂಡವು ಕಲ್ಪಾಂತ ಹೊಂದಿದಾಗ ಬ್ರಹ್ಮಾದಿ ಮೂರು ಮೂರ್ತಿಗಳ ಅಂತವಾಗುವದು ಆಗ ಉಂಟಾಗುವ ಪ್ರಳಯವು ಬ್ರಹ್ಮ ಪ್ರಳಯವೆನ್ನಿಸುವದು ಈ ಪ್ರಕಾರವಾಗಿ ನಿದ್ರಾ ಪ್ರಳಯ, ಮರಣ ಪ್ರಳಯ, ಬ್ರಹ್ಮಾಂಡದ ನಿದ್ರಾ ಪ್ರಳಯ ಹಾಗು ಬ್ರಹ್ಮ ಪ್ರಳಯ ಇವು ನಾಲ್ಕು ಪ್ರಳಯಗಳು ನವ ಖಂಡಗಳಿಗೆಲ್ಲ ಅನ್ವಯಿಸುವವು ಇನ್ನು ಐದನೆಯದಾದ ವಿವೇಕ ಪ್ರಳಯವು ಇವೆಲ್ಲವುಗಳನ್ನು ಕ್ರಮವಾಗಿ ವಿವರಿಸುವೆವು

೧ ನಿದ್ರಾ ಪ್ರಳಯವು:— ನಿದ್ದೆಯು ಸಂಚರಿಸಿದ ಕಾಲದಲ್ಲಿ ಜಾಗೃತಿಯ ವ್ಯವಹಾರಗಳೆಲ್ಲ ಕುಂಠಿತವಾಗಿರುವವು ಆಗ ಅಕಸ್ಮಾತ್ತಾಗಿ ಸುಷುಪ್ತಿ ಅಥವಾ ಸ್ವಪ್ನವು ಬಂದು ಸೇರುವವು ಇದೇ ನಿದ್ರಾ ಪ್ರಳಯವು

೨ ಮರಣ ಪ್ರಳಯವು — ಜಾಗೃತಿಯ ಕ್ಷಯವುಂಟಾಗಲು ಆಗ ದೇಹಾಂತ ಸಮಯವೊದಗಿರಲು ಅದಕ್ಕೆ ಮೃತ್ಯು ಪ್ರಳಯವೆನ್ನುವರು ದೇಹದಲ್ಲಿ ರೋಗಗಳ ವರ್ಧನೆಯಾದಾಗ ಇಲ್ಲವೆ ದುರಂತ ಗಂಡಾಂತರ ಪ್ರಸಂಗಗಳು ಒದಗಿದಾಗ ದೇಹದಲ್ಲಿಯ ಪಂಚ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳನ್ನು ತ್ಯಜಿಸಿ ಹೋಗುವವು. ಆಗ ವಾಯು ಸ್ವರೂಪದ ಮನಸು ಪ್ರಾಣಗಳೊಡನೇ ಹೋಗಿ ಬಿಡಲು ಕೇವಲ ಪ್ರಾಣ ರಹಿತ ಶರೀರವೊಂದೇ

ಇಲ್ಲಿ ಉಳಿಯುವದು ಇಂತು ಮರಣ ಪ್ರಳಯವು ಇದರಲ್ಲಿ ಅನು ಮಾನವೆಷ್ಟು ಇರುವದಿಲ್ಲ

೩ ಬ್ರಹ್ಮಾಂಡ ನಿದ್ರಾ ಪ್ರಳಯ — ಬ್ರಹ್ಮನು ನಿದ್ರಿಸ್ಥನಾಗಲು ಮೃತ್ಯು ಲೋಕದಲ್ಲಿಯ ಪ್ರಾಣಿ ಮಾತ್ರರೆಲ್ಲರ ವ್ಯಾಪಾರಗಳೆಲ್ಲ ಕುಂಠಿತ ವಾಗಿ ಬಿಡುವದು ಆಗ ಈ ಲೋಕದ ಸ್ವರೂಪ ವ್ಯತ್ಯಸ್ತವಾಗುವದು ಪ್ರಾಣಿಗಳ ಸೂಕ್ಷ್ಮಾಂಶ ಪ್ರಾಣಗಳು ವಾಯುವಿನ ಚಕ್ರದಲ್ಲಿ ವಾಸ ವಾಗುವವು ಮುಂದೆ ಕೆಲಕಾಲದ ನಂತರ ಬ್ರಹ್ಮನು ನಿದ್ದೆ ತಿಳಿದೇಳಲು ಅಂದರೆ ಅವನು ಎಚ್ಚರಗೊಂಡು ಮತ್ತೆ ಸೃಷ್ಟಿಯ ರಚನೆಗೆ ಆರಂಭಿ ಸುವನು ವಾಯು ಚಕ್ರದಸ್ತ ಗತಿಸಿದ ಜೀವಗಳೆಲ್ಲ ಪುನ ಬಂದು ಒಟ್ಟು ಗೂಡುವವು ಇಂತು ಈ ಬ್ರಹ್ಮಾಂಡ ನಿದ್ರಾ ಪ್ರಳಯದ ಆಯುಷ್ಯ ಮುಗಿದಮೇಲೆ ಬ್ರಹ್ಮ ಪ್ರಳಯ ರಚಿತವಾಗುವದು

೪ ಬ್ರಹ್ಮ ಪ್ರಳಯ — ಈ ನಾಲ್ಕನೆಯದಾದ ಬ್ರಹ್ಮ ಪ್ರಳಯದ ಮೊದಲು ಒಂದೇ ಸವನೆ ಒಂದು ನೂರು ವರುಷ ಪರಿಯಂತ ಮೋಡ ಗಳು ಹುಟ್ಟಲಾರವು ಮತ್ತು ಮಳೆ ಸುರಿಸಲಾರವು ಇಂತಾದ ದುರ ವಸ್ಥೆಯಿಂದ ಪ್ರಾಣಿಗಳೆಲ್ಲ ಸತ್ತು ಬೀಳುವವು ಕಲ್ಪನೆ ಮೀರಿ ಭೂಮಿಯು ಕಂಪನ ಹೊಂದುವದು, ಇಡೀ ಹನ್ನೆರಡೂ ತಾಸು ಸೂರ್ಯನುತಪ್ತನಾಗಿ ಸಂಚ ರಿಸುವನು ಇದರಿಂದ ಪೃಥ್ವಿಯೆಲ್ಲ ದಗ್ಧನವಾಗಿ ಹೋಗುವದು ಅಗ್ನಿ ಯು ಪಾತಾಳದಲ್ಲ ಸೇರಿಕೊಳ್ಳುವದು ಆ ತಾಪಕ್ಕೆ ಶೇಷನು ವಿಷ ಕಾರು ವನು ಹೀಗೆ ಆಕಾಶದಿಂದ ಸೂರ್ಯನ ಪ್ರಖರ ಜ್ವಾಲೆಗಳು ಪಾತಾಳ ದಿಂದ ಶೇಷನ ವಿಷಮಯ ಕಾರಿಕೆಯ ಗರಲವು ಈ ಪ್ರಕಾರದ ಇಕ್ಕ ಟ್ಟಿನಲ್ಲಿ ಭೂಗೋಲವು ಸಿಕ್ಕು ಧ್ವಂಸವಾಗುವದೆಂದ ಮೇಲೆ ಅದು ಉಳಿಯುವದೆಂತು? ಸೂರ್ಯನ ಪ್ರಖರತೆಯು ಮಿತಿ ಮೀರುವದು ಭೂಗೋ ಲದ ಎಲ್ಲ ಕಡೆಯಲ್ಲಿ ಅಲ್ಲೋಲ ಕಲ್ಲೋಲವಾಗುವದು. ಮೇರು ಪರ್ವತವು ಶಿಖರದಿಂದ ಕತ್ತರಿಸಿ ಬೀಳುವದು ಎಲ್ಲ ಕಡೆಗೆ ಭೂಕಂಪ ನದ ಗರ್ಜನೆಗಳ ಗುಡುಗು ಕೇಳಬರುವವು ಇಂದ್ರನ ಅಮರಾವತಿಯೂ ಇಡೀ ಸತ್ಯ ಲೋಕವೂ ವೈಕುಂಠ—ಕೈಲಾಸಗಳೂ ಇವುಗಳ ಹೊರತು ಉಳಿದ ಹಲವು ಲೋಕಗಳೂ ಎಲ್ಲವೂ ಹುರುಪುಳಿಸಿ ಭಸ್ಮಗೊಳ್ಳು

ವವು ಮೇರು ಗಿರಿಯು ಸ್ಥಾನ ಭ್ರಷ್ಟವಾಗಿ ಉಕ್ಕರಿಸಿ ಬೀಳಲು ಆದ ಕ್ಕಿರುವ ಮಹತ್ವವೆಲ್ಲ ಹಾಳಾಗಿ ಹೋಗುವದು

ಅಲ್ಲಿಯ ದೇವ ಸಮುದಾಯವೆಲ್ಲ ಸ್ಥಾನ ವರ್ಜಿತರಾಗಿ ವಾಯು ಮಂಡಲವನ್ನು ಸೇರುವರು ಜಗತ್ತೆಲ್ಲವೂ ಉರಿದು ಬೂದಿಯಾಗಿ ಬೀಳು ವದು ಅನಂತರ ಮುಂದೆ ಗಜ ಶುಂಡಾಲ ಪ್ರಮಾಣದ ಹನಿಗಳಿಂದ ಕೂಡಿದ ಮಳೆಯು ತೆರಪಿಲ್ಲದೆ ಬೀಳುವದು ಭೂಮಿಯೆಲ್ಲ ಆಗ ಅರೆ ನಿಮಿಷದಲ್ಲಿಯೇ ನೀರಲ್ಲಿ ಮುಳುಗುವದು ಮತ್ತು ಕರಗಿ ಹೋಗುವದು ಮುಂದೆ ನೀರಷ್ಟೇ ಎಲ್ಲ ಕಡೆಗೆ ಉಳಿಯುವದು ಅದನ್ನು ಪಾತಾಳ ದಲ್ಲಿದ್ದ ಅಗ್ನಿಯು ಹೀರಿಕೊಳ್ಳುವನು ತನ್ನ ಜ್ವಾಲೆಗಳನ್ನೆಲ್ಲ ಒಂದು ಗೂಡಿಸಿ ಮರ್ಯಾದೆಗೆ ಮಿಕ್ಕಿಸುವನು ಆಗ ಸಮುದ್ರದ ವಡವಾಗ್ನಿಯು, ಶಿವನ ಕಿಡಿಗಣ್ಣಿನಿಂದ ಒಸರುವ ಅಗ್ನಿಯು, ಪಂಚ ಭೂತಗಳು ಅಹಂಕಾ ರವು ಮಹತ್ತತ್ವವು ಹೀಗೆ ಏಳು ಹೊದಿಕೆಗಳಲ್ಲಿಂದ ಹುಟ್ಟುತ್ತಿರುವ ಅಗ್ನಿಯು ಸೂರ್ಯರ ಪ್ರಖರ ಕಿರಣಗಳು ಹಾಗು ವಿದ್ಯುಲ್ಲತೆಗಳು ಇವೆಲ್ಲ ಒಟ್ಟುಗೂಡಿ ಮಹಾ ಜ್ವಾಲೆ ರೂಪುಗೊಂಡು ಉರಿಯಹತ್ತಲು ದೇವ ತೆಗಳು ತಮ್ಮ ತಮ್ಮ ದಿವ್ಯ ದೇಹಗಳನ್ನು ತ್ಯಾಗಮಾಡುವರು ಹಾಗು ಅವರೆಲ್ಲ ವಾಯು ಮಂಡಲದಲ್ಲಿ ಮೊದಲಿನ ರೂಪದಿಂದ ಕೂಡಿಕೊಳ್ಳು ವರು ಆಗ ಆ ವಾಯುವು ಮಹಾ ಪ್ರಭಂಜನ ಸ್ವರೂಪ ತಾಳಿ ಅಗ್ನಿಯೊ ಡನೆ ಹೋರಾಟ ನಡೆಯುವದು ಇಂತು ಗಾಳಿ - ಬೆಂಕಿಗಳ ಹೊಯ್ದಾಟ ಹೊಡೆದಾಟದಿಂದ ಅಗ್ನಿಯು ಒಂದೇ ಸವನೇ ಆರಹತ್ತುವದು ಆಗ ವಾಯುವು ತತ್ತರಗೊಳ್ಳುತ್ತ ಹೋಗಿ ಪರಬ್ರಹ್ಮನಲ್ಲಿ ಸೇರಿಕೊಳ್ಳು ವದು

ಆಗ ಹೊಗೆ ಮುಸುಕಿದ ಆಕಾಶವೆಲ್ಲ ನಿರ್ಧೂಮ್ರವಾಗುವದು ಅದರಂತೆ ವಾಯುವಾದರೂ ವಿರಳತೆಯಿಂದ ಹೆಚ್ಚಾಗಿ ಲಯವಾಗುವದು ವಾಯುವಿನ ಲಘುದಲ್ಲಿಯೇ ಸೂಕ್ಷ್ಮಾಂಶಕ್ಕಿಳಿದ ಪಂಚ ಭೂತಗಳು, ತ್ರಿಗುಣಗಳು ಇವುಗಳಿಂದ ಬಲಗೊಂಡ ಅಷ್ಟಧಾ ಪ್ರಕೃತಿಯು ನಿರ್ವಿ ಕಲ್ಪ ಸಮಾಧಿ ಸ್ಥಿತ ಈಶ್ವರನಿಂದ ದೂರಾಗುವದು ಆಗ ಅಲ್ಲಿ ಅರಿವು ಉಳಿಯುವದು ಜಗಜ್ಯೋತಿಯು ಆರುವದು ಸ್ವರೂಪ ಸ್ಥಿತಿಯ ಶುದ್ಧ

ಸತ್ವಾಂಶವು ಉಳಿಯುವದು ಪ್ರಕೃತಿಯ ಗುಣಗಳಿಂದ ಪ್ರಕೃತಿಗೆ ಅನೇಕ ಹೆಸರುಗಳು ಬರವವು ಆದರೆ ಪ್ರಕೃತಿಯು ಇಲ್ಲದಾಗಲು ನಾಮ ರೂಪ ಶಬ್ದಗಳೆಲ್ಲಿ?

೫ ವಿವೇಕ ಪ್ರಳಯಃ— ಪ್ರಕೃತಿಯಿರುವಾಗಲೇ ವಿವೇಕಕ್ಕೆ ಆಸ್ಪದ ಕೊಡಬೇಕು ಆ ವಿವೇಕದಿಂದ ಪಂಚ ಪ್ರಳಯಗಳನ್ನು ತಿಳಿದುಕೊಳ್ಳಬೇಕು ಹಾಗು ಸ್ವರೂಪಾಕಾರ ಹೊಂದಬೇಕು ಇದೇ ಮೋಕ್ಷದಾಯಕವಾದ ಜನೆಯ ಪ್ರಳಯವು ಇದನ್ನೇ ವಿವೇಕ ಪ್ರಳಯವೆಂದು ತಿಳಿಯತಕ್ಕದ್ದು

ಇಂತು ಐದು ಪ್ರಳಯಗಳನ್ನು ನಿನಗೆ ಹೇಳಿದೆನು ಎಂದು ಗುರುಗಳು ನುಡಿದರು

ಶ್ರೀ ರಾಮ ॥ ೬ ಭ್ರಮ ನಿರಸನ ॥ ಗುರುಗಳಿನ್ನು ಶಿಷ್ಯನನ್ನು ಕುರಿತು —

“ಇದು ವರೆಗೆ ಉತ್ಪತ್ತಿ—ಸ್ಥಿತಿ—ಸಂಹಾರಗಳ ವ್ಯವಹಾರ ಹೇಳಿದೆವು ಪರಮಾತ್ಮನ ನಿರ್ಗುಣ-ನಿರಾಕಾರತ್ವವನ್ನು ತಿಳಿಸಿದೆವು ತ್ರಿಕಾಲಗಳ ಸಂಬಂಧವು ಆ ಪರಮಾತ್ಮನಿಗಿಲ್ಲ ತುದಿ ಮೊದಲು ನಡುವಿನಲ್ಲಿ ಆತನೇ ತುಂಬಿರುವನು, ಆ ಪರಬ್ರಹ್ಮನು ಅಸತ್‌ನೆಂದು ನಡುವೇ ಭಾಸವಾದ ಭ್ರಮೆಯು ಕಾಲಾಂತರದಿಂದ ನಾಶವಾಗುವದ ಭಾಸವಾಗುವದೆಲ್ಲವೂ ನಾಶವಾಗುವದೆಂಬುದು ಸ್ಪಷ್ಟವು ಸತತವೂ ಪಿಂಡ-ಬ್ರಹ್ಮಾಂಡಗಳ ಸ್ಥಿತಿ-ಲಯಗಳು ನಡೆದೇ ಇರುವವು ಆದರೂ ಕಲ್ಪಾಂತ್ಯದಲ್ಲಿ ಸರ್ವಕ್ಕೂ ನಾಶವುಂಟು ವಿವೇಕಿಯಾದ ಪುರುಷನು ಪ್ರಕೃತಿಯಲ್ಲಿದ್ದರೂ ಇದನ್ನು ಸಾರಾಸಾರ ವಿಚಾರದಿಂದ ಮೊದಲಿಗೇ ತಿಳಿದುಕೊಂಡು ಸ್ವಸ್ಥವಾಗಿರುವನು

ಆದರೆ ಇಂಥ ವಿಚಾರಿಗಳು ತೀರ ವಿರಳ ಅವರ ಹೊರತು ಉಳಿದವರೆಲ್ಲ ಭ್ರಮಾನ್ವಿತರಾಗಿರುವ ಮೂಲಕ ಆ ವಿವೇಕಿಗಳದೇನೂ ನಡೆಯುವದಿಲ್ಲ ವಿವೇಕೋದಯಿಗಳ ಲಕ್ಷಣವನ್ನು ಸ್ವಲ್ಪದರಲ್ಲಿ ಹೇಳುವದಾದರೆ—

ಅವರಲ್ಲಿ ಭ್ರಮೆಯು ಇರುವದಿಲ್ಲ ನಿಜವಾಗಿ ಅಂಥವರು ಮಹಾ ಪುರುಷರು ಇನ್ನು ಭ್ರಮೆಗಳೆಂದರೆ ಯಾವವೆಂಬದನ್ನು ಹೇಳುವೆವು ಕೇಳು ಸರ್ವ ವ್ಯಾಪಿಯಾದ ನಿರಾಕಾರ ಪರಬ್ರಹ್ಮನ ಹೊರತು ಉಳಿದ ವೆಲ್ಲವೂ ಭ್ರಮ ರೂಪಗಳು ಅಂದರೆ ಅಷ್ಟಧಾ ಪ್ರಕೃತಿಗಳೆಲ್ಲವೂ ಭ್ರಮ ರೂಪಗಳು 'ನೀನು' 'ನಾನು' ಎಂಬವೂ ಭ್ರಮೆಗಳು ಉಪಾಸನೆಗಳೂ ಈಶ್ವರ ಭಾವನೆಯೂ ಭ್ರಮೆಗಳೆಂಬದು ನಿಶ್ಚಯವು ಈ ಜಗತ್ತೆಲ್ಲವೂ ಭ್ರಮ ಮೂಲವು 'ಭ್ರಮೇಣಾಹಂ ಭ್ರಮೇಣ ತ್ವಂ ಭ್ರಮೇಣೋಪಾಸಕಾ ಜನಾಃ। ಭ್ರಮೇಣೇಶ್ವರ ಭಾವತ್ವಂ ಭ್ರಮ ಮೂಲಮಿದಂ ಜಗತ್ ॥ ಈ ಶ್ಲೋಕದ ಅರ್ಥವೇ ಆದಾಗಿರುವದು ಇನ್ನು ದೃಷ್ಟಾಂತ ಗಳಿಂದ ಭ್ರಮೆಯ ವಿಚಾರವನ್ನು ಸ್ಪಷ್ಟಗೊಳಿಸುವಧಾದರೆ— ದೇಶಾಟ ನದಿಂದ ದಿಕ್ಕೆಟ್ಟವನು ' ನನ್ನ ಇಷ್ಟ ಮಿತ್ರರು ನನ್ನಿಂದ ದೂರಾದರು ' ಎಂದು ಭಾವಿಸಿ ನುಡಿಯುವದು ಭ್ರಮೆಯು ಉನ್ಮತ್ತಗೊಳಿಸುವ ಪದಾರ್ಥಗಳನ್ನು ಸೇವಿಸುವದು ಭ್ರಮೆಯು ಹಲವು ವೇದನೆಗಳ ಭಾವ ನೆಗಳನ್ನು ತಂದುಕೊಳ್ಳುವದು ಭ್ರಮೆಯು ಭೂತ ಬಾಧೆಯ ಕಲ್ಪನೆಯು ಭ್ರಮೆಯು ಆಟದಲ್ಲಿ ಪುರುಷ—ಸ್ತ್ರೀಯರು ಸ್ತ್ರೀಪುರುಷರ ಸೋಗು ಹಾಕಿಕೊಂಡು ನರ್ತಿಸುವದನ್ನು ಕಂಡು ನಿಜವಾದ ಸ್ತ್ರೀ ಹಾಗು ಪುರು ಷರೆಂದು ಭಾವಿಸುವದು ಭ್ರಮೆಯು ಇವಲ್ಲದೆ ಐಂದ್ರಜಾಲಿಕ ಕೃತಿ ಗಳು ನಿಜವೆಂದು ತಿಳಿಯುವದೂ, ಸತ್ಯ ವಸ್ತುವಿನ ಬಗ್ಗೆ ಸಂದೇಹ ತಾಳುವದೂ, ಇಟ್ಟದ್ದನ್ನು ಇಟ್ಟಲ್ಲಿಯೇ ಮರೆಯುವದೂ, ಹೋಗ ಹೋಗುತ್ತ ಹಾದೀ ತಪ್ಪಿ ಪಟ್ಟಣ ಪ್ರವೇಶ ಮಾಡುವದೂ, ಪದಾರ್ಥವನ್ನು ತನ್ನ ಬಳಿಯಲ್ಲಿಟ್ಟುಕೊಂಡು ಅನ್ಯತ್ರದಲ್ಲಿ ಹುಡಿಕಾಡುವದೂ ಕಲಿತ ವಿಷಯಗಳನ್ನು ಮರೆಯುವದೂ, ಕನಸು ಕಂಡು ಭಯ ಪಡುವದೂ, ಭಾವಿಕತನದಿಂದ ಅಪಶಕುನ-ದುಶ್ಚಿಹ್ನಗಳನ್ನು ನಂಬುವದೂ, ಸುಳ್ಳು ಸುದ್ದಿಗಳಿಂದ ಮನಸ್ಸಿಗೆ ಭಂಗತಂದು ಕೊಳ್ಳುವದೂ, ದೆವ್ವ ಭೂತಗಳ ಕಲ್ಪನೆಯಿಂದ ಬೆದರುವದೂ, ನೀರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಕೊಳ್ಳುವದೂ, ಕನ್ನಡಿಯಲ್ಲಿ ತೋರುವ ಗಂಟನ್ನು ಕೈಯಿಕ್ಕಿ ತೆಗೆದು ಕೊಳ್ಳಲು ಪ್ರಯತ್ನಿಸುವದೂ, ಬಾಗಿಲವನ್ನು ತಪ್ಪಿ ಬಿಟ್ಟು ಒಳಗೆ

ಪ್ರವೇಶ ಮಾಡುವದೂ, ಒಂದನ್ನು ಬೇರೊಂದನ್ನಾಗಿ ತಿಳಿಯುವದೂ, ಒಂದನ್ನು ಬಾಯಿಯಿಂದ ನುಡಿಯುವಾಗ ಇನ್ನೊಂದು ಶಬ್ದ ಕೇಳುವ ದಕ್ಕೆ ಕಿವಿ ಗೊಡುವದೂ, ಕಂಡದ್ದನ್ನು ಬಿಟ್ಟು ಕಾಣದ ವಸ್ತುವಿಗೆ ಕೈನೀಡುವದೂ ಇವೆಲ್ಲವೂ ಭ್ರಮೆಯ ಬಗೆಯನ್ನು ವ್ಯಕ್ತಗೊಳಿಸುವ ದೃಷ್ಟಾಂತಗಳು ಇನ್ನೂ ಭ್ರಮೆಯ ಉದಾಹರಣೆಗಳು—

ಈಗ ಕೊಟ್ಟದ್ದೇ ಮುಂದೆ ಸಿಗುವದೆಂಬ ನಿಶ್ಚಿತವೂ, ಮೃತ ಮನುಷ್ಯನು ಊಟಕ್ಕೆ ಬರುವನೆಂಬ ಭಾವನೆಯೂ, ಒಂದು ಜನ್ಮದ ಫಲವು ಮುಂದಿನ ಜನ್ಮಕ್ಕೆ ಸಿಗುವದೆಂಬ ವಿಶ್ವಾಸವೂ, ಮಾನವನೊಬ್ಬನ ಹೆಸರನ್ನು ಜಪಿಸುವ ಶ್ರದ್ಧೆಯೂ, ಕನಸಿನಲ್ಲಿ ಕಂಡ ಮೃತ ಮಾನವನಿಂದ ಸ್ವೀಕರಿಸಿದ ದಾನವನ್ನು ನಿಜವೆಂದು ಮನಸಿನಲ್ಲಿ ತಂದು ಕೊಳ್ಳುವದೂ, ವೈಭವವು ಅಶಾಶ್ವತವು ಹಾಗು ಮಿಥ್ಯವು ಎಂಬ ತಿಳುವಳಿಕೆಯನ್ನು ವ್ಯಕ್ತಪಡಿಸಿ ಅದನ್ನು ಪಡೆಯುವದಕ್ಕೆ ಸತತವೂ ಮನಸ್ಸಿನಿಂದ ಹಾತೊರೆಯುವದೂ ಇವೆಲ್ಲವೂ ಭ್ರಮೆಗಳು ಮತ್ತು—

ಕೇವಲ ಹಟದಿಂದ ಜ್ಞಾನವನ್ನು ಹೀಯಾಳಿಸುವದೂ, ಬುದ್ಧಿವಂತಿಕೆಯಿದ್ದು ತನ್ನ ಬಲವನ್ನು ನಷ್ಟಪಡಿಸಿಕೊಳ್ಳುವ ವಿಚಾರ ಮಾಡುವದೂ ಮರ್ಯಾದೆ ಮೀರಿ ವರ್ತಿಸುವದೂ, ಇವು ಭ್ರಮೆಗಳಾಗಿವೆ ದೇಹ, ಕರ್ಮ—ಜಾತಿ – ಕುಲ—ಜ್ಞಾನ—ಮೋಕ್ಷ ಇವುಗಳಲ್ಲಿ ಹೆಮ್ಮೆ ತಾಳುವದು ಭ್ರಮೆಯು ನ್ಯಾಯವನ್ನರಿಯದೆ, ಅನ್ಯಾಯಗಳನ್ನು ಬಿಡದೆ ನಿರರ್ಥಕವಾದ ಅಭಿಮಾನ ತಾಳುವದು ಭ್ರಮೆಯು ಔಷಧ ತೆಗೆದುಕೊಳ್ಳುವಲ್ಲಿ ಪಥ್ಯೆ ಮಾಡುವಲ್ಲಿ ಹಾಗು ಜ್ಞಾನ ಬೋಧಿಸುವಲ್ಲಿ ಅನುಭವವಿಲ್ಲದೆ ವರ್ತಿಸುವದು ಭ್ರಮೆಯ ನಿಷ್ಫಲಿತ ಪ್ರಯೋಗವು, ಜ್ಞಾನವಿಲ್ಲದೆ ಯೋಗ ಸಾಧನವು, ಭೋಗಗಳಿಂದ ದೇಹವನ್ನು ಪರಾಮರ್ಶಿಸುವದು ಇವೆಲ್ಲ ಭ್ರಮೆಗಳು ಅದೃಷ್ಟ, ದೈವ, ನಶೀಬ, ಹಣೆ ಬರೆಹಗಳೆಂದು ನಂಬುವದು ಭ್ರಮೆಯು

ಭ್ರಮೆಯ ಬಗೆಯನ್ನು ತಿಳಿಸುವದಕ್ಕೆ ಹೇಳಿದೆವು ಇಷ್ಟಾದರೂ ಇವು ಸ್ವಲ್ಪವೇ ಅಜ್ಞಾನಿಗಳಿಗೆ ಭ್ರಮೆಯ ಬಗೆಗೆ ನಿಜವಾದ ಬೋಧೆಯಾಗಲೆಂಬ ಉದ್ದೇಶವಿದರಲ್ಲಿರುವದು

ಸ್ವಭಾವತ ಇಡೀ ವಿಶ್ವವೇ ಭ್ರಮ ರೂಪವಾಗಿದೆ ಎಂದಮೇಲೆ ಏನೆಂದು ಹೇಳಬೇಕು? ಆದರೆ ತಿಳಿದು ಕೊಳ್ಳುವ ಮುಖ್ಯ ಸಂಗತಿ ಯೆಂದರೆ-' ನಿರ್ಗುಣ ಬ್ರಹ್ಮನೊಬ್ಬನು ಮಾತ್ರ ಭ್ರಮ ರೂಪದಿಂದ ಹೊರ ತಾಗಿರುವನು' ಇದಾಗಿರುವದು

ಹಲವು ಹೇಳುವದೇನೆಂದರೆ- ' ಜ್ಞಾನಿಯು ಸಂಸಾರದಿಂದ ಹೊರ ತಾಗಿರುವನು ' ಎಂದು ಅತಿಯಾಗಿ ಹೇಳುವರು ಹೀಗೆ ಹೇಳುವದೂ ಒಂದು ಭ್ರಮೆಯು " ಎಂದು ಗುರುಗಳು ಶಿಷ್ಯನಿಗೆ ಬೋಧಿಸಿದರು ಆಗ ಶಿಷ್ಯನು—

" ಬಹಳ ಕಡೆಯಲ್ಲಿ ಸತ್ಪುರುಷರ ಸ್ಮಾರಕವೆಂದು ಅನೇಕ ಸಮಾಧಿಗಳು ಕಟ್ಟಲ್ಪಟ್ಟಿವೆ ಹಾಗು ಅವು ಭಾವುಕರಿಂದ ಪೂಜೆಗೊಳ್ಳುತ್ತ ಬಂದಿವೆ ಇದರಂತೆ ಎಷ್ಟೋ ಅವತಾರಿಕ ಪುರುಷರ ಕ್ರಿಯಾ ಸಾಮರ್ಥ್ಯಗಳು ಅವರ ನಂತರವೂ ನಡೆಯುತ್ತ ಬಂದಿವೆ ಅಂದಮೇಲೆ ಆ ಸತ್ಪುರುಷರು ಹಾಗು ಅವತಾರಿಕ ಪುರುಷರು ವಾಸನಾಂತಕರಾಗಿಯೇ ಬಾಳಿದರೆಂದು ಹೇಳುವದರಲ್ಲಿ ಸಂಶಯವಿಲ್ಲವೆಂದಂತಾಯಿತು ಈ ನನ್ನ ವಿಚಾರವು ಸರಿಯಾಗಿರದಿದ್ದರೆ ಅಂದರೆ ತಮಗೆ ನನ್ನ ಕೇಳಿಕೆ ಸಂಶಯವೆಂದು ಕಂಡದ್ದಾದರೆ ಸಮರ್ಥ ಗುರುಗಳಾದ ತಾವು ನನ್ನ ಸಂದೇಹವನ್ನು ದೂರಮಾಡಬೇಕು "ಎಂದನು-

ಶ್ರೀ ರಾಮ || ೭ ಸಗುಣ ಭಜನ ನಿರೂಪಣ|| ಶಿಷ್ಯನು ಗುರುಗಳನ್ನು ಕುರಿತು — "ದೇವಾವತಾರರೂ ಮತ್ತು ಸಾರಾಸಾರ ವಿಚಾರಗಳಿಂದ ಮುಕ್ತರಾದ ಜ್ಞಾನಿಗಳೂ ಸಂತರೂ ಇವರೆಲ್ಲರ ವಿದ್ಯಮಾನದ ನಂತರದಲ್ಲಿಯೂ ಅವರ ಸಾಮರ್ಥ್ಯಗಳು ವ್ಯಕ್ತವಾಗುತ್ತಲಿರುವವು ಅಂದ ಮೇಲೆ ಅದು ಹೇಗೆ ?" ಎಂದು ಕೇಳಿದನು ಆಗ ಗುರುಗಳು ಉತ್ತರರೂಪವಾಗಿ ಹೇಳಿದ್ದೇನೆಂದರೆ—

"ಅವತಾರಿಕ ಮಹಾಪುರುಷರ ಸಾಮರ್ಥ್ಯವು ಅವರ ತರುವಾಯದಲ್ಲಿ ನಡೆಯುವದು ಅವರ ವಾಸನೆಯು ಉಳಿದಿರುವದೆಂದು ಬಗೆಯಲಾರದು ಭಾವುಕರಿಗೆ ಅವರ ಲೋಕೋತ್ತರ ಚಮತ್ಕಾರಗಳಲ್ಲಿ ವಿಶ್ವಾಸವಿರುತ್ತದ ಸಂತಾದಿಗಳು ಜೀವಂತವಿರುವಾಗ ಅವರ ಪವಾಡ ಕೃತ್ಯಗಳು ಜನರಲ್ಲಿ ಒಳ್ಳೇ

ಕೌತುಕವಾಗಿ ಪರಿಣಮಿಸಿ ಪ್ರಕಟವಾಗುವವು ಆದರೆ ಈ ಬಗೆಗೆ ವಿಚಾರ ಮಾಡುವದು ಅವಶ್ಯವು ಸತ್ಪುರುಷರು ವಾಸನೆಯಿಂದ ಯುಕ್ತರಾಗಿ ಜನ್ಮ ತಾಳುವದಿಲ್ಲವಾದರೂ ಅವರು ಜನರಿಗೆ ಆವರು ಪ್ರತ್ಯಕ್ಷ ತೋರುವರು ಇದಕ್ಕೇನನ್ನಬೇಕು? ಆದರೆ ಇದು ಭಾವುಕ ಜನರ ನಂಬುಗೆಯ ಒಂದು ಪ್ರಕಾರವಾಗಿದೆ. ದೇವರ ನಿಜತ್ವದ ಬಗೆಗೆ ಅವರು ಕೆಟ್ಟ ಹಾಗು ಇಲ್ಲದ ಕಲ್ಪನೆಗಳನ್ನು ತಂದುಕೊಳ್ಳುವದು ನಿರರ್ಥಕದೆಂದು ತಿಳಿಯುವರು ನಾವು ಕನಸಿನಲ್ಲಿ ನಮ್ಮ ಪ್ರೀತಿಯ ಪದಾರ್ಥಗಳನ್ನು ಅದೆಷ್ಟೋ ಸಾರೆ ಕಾಣುತ್ತಿರುವೆವು ಆದರೆ ಈ ದೃಶ್ಯವು ದೇವರಿಂದ ನಮಗೆ ಉಂಟಾಗುವದಿಲ್ಲ ನಮ್ಮ ಸ್ಮೃತಿಯ ಮೂಲಕವಾಗಿಯೇ ಅವು ನಮಗೆ ಸ್ವಪ್ನದಲ್ಲಿ ಪ್ರತ್ಯಕ್ಷದಂತೆ ತೋರುವವು ಇಷ್ಟೇ ಮಾತ್ರ ತಿಳಿದುಕೊಳ್ಳತಕ್ಕದ್ದು ಇವೆಲ್ಲವು ಕೇವಲ ಕಲ್ಪನೆಗೆ ಸಂಬಂಧಿಸಿದವು ಕಲ್ಪನೆಯಿಂದ ಸ್ವಪ್ನದಲ್ಲಿ ಹಲವು ಪದಾರ್ಥಗಳು ತೋರುವವು ಆದರೆ ಅವು ಎಲ್ಲಿಂದ ಬರುವವೆಂಬುದರ ಸ್ಮರಣೆ ಸಹ ಉಳಿಯುವದಿಲ್ಲ ಒಟ್ಟಿನ ಮೇಲೆ ಸಂತರು ಜನ್ಮ ತಾಳಿ ಬರುವರೆಂಬ ಕಲ್ಪನೆ ಮಾಡಬೇಡ ಇದು ನಿನಗೆ ತಿಳಿಯದಿದ್ದರೆ ಚೆನ್ನಾಗಿ ವಿಚಾರ ಮಾಡು ಜ್ಞಾನಿಗಳು ಪುಣ್ಯಮಾರ್ಗಾವಲಂಬಿಗಳಾಗಿ ಗತಿಸುವದರಿಂದ ಅವರು ಮುಕ್ತರಾಗಿ ಹೋದ ಮೇಲೆಯೂ ಆವರ ಸಾಮರ್ಥ್ಯವು ನಡೆಯುತ್ತಿರುವದು. ಆದ್ದರಿಂದ ಪುಣ್ಯಮಾರ್ಗ ಬಿಡಬಾರದು ದೇವ ಸ್ಮರಣೆಯನ್ನು ಹೆಚ್ಚಾಗಿ ಮಾಡಬೇಕು ನ್ಯಾಯವನ್ನವಲಂಬಿಸಿ ವರ್ತಿಸಬೇಕು ಅನ್ಯಾಯ ಪಥದಲ್ಲಿ ಚಲಿಸಕೂಡದು ಹಲವು ಮಂತ್ರ ಪುರಶ್ಚರಣ ಕೈಕೊಂಡು ಮುಗಿಸಬೇಕು ತೀರ್ಥ ಸಂಚಾರ ಮಾಡಬೇಕು, ವೈರಾಗ್ಯ ಬಲದಿಂದ ಹಲವು ಸಾಮರ್ಥ್ಯಗಳನ್ನು ವರ್ಧಿಸಿಕೊಳ್ಳಬೇಕು ಪರಬ್ರಹ್ಮನಲ್ಲಿ ನಿಶ್ಚಯವಿಡಬೇಕು ಜ್ಞಾನ ಮಾರ್ಗದಿಂದ ಬಲವನ್ನು ಬೆಳಿಸಿಕೊಳ್ಳಬೇಕು. ಯಾವ ಬಗೆಯಿಂದಲೂ ಏಕಾಂತಕ್ಕೆ ಭಂಗ ತಂದುಕೊಳ್ಳಬಾರದು ಒಬ್ಬ ಗುರುವಿನಲ್ಲಿ ಹಾಗು ಒಬ್ಬ ದೇವನಲ್ಲಿನಿಶ್ಚಿತವಾದ ಭಕ್ತಿವಿಶ್ವಾಸಗಳನ್ನಿಡಗಬೇಕು ವಿಶ್ವಾಸವಿಲ್ಲದೆ ಎಲ್ಲವೂ ನಿರುಪಯೋಗವು ನಿರ್ಗುಣ ಜ್ಞಾನವುಂಟಾಯಿತೆಂದು ಸಗುಣ ಭಜನವನ್ನು ದೂರಿಕರಿಸಿದವನು ಜ್ಞಾನ ಪಡೆದಿದ್ದರೂ ಅವನು ಎರಡೂದರಿಂದ ಹೊರತಾಗುವನು ಅಂದರೆ ಅವನಿಗೆ ಜ್ಞಾನವೂ ಉಂಟಾಗುವದಿಲ್ಲ ಭಕ್ತಿಯೂ

ದೊರಕೊಳ್ಳುವದಿಲ್ಲ ಹೀಗಾಗಿ ಆತನು ಸಂದೇಹ ಸ್ಥಿತಿಯಲ್ಲಿ ದಿಕ್ಕೆಡುವನು ಆದ್ದರಿಂದ ಜಪ ಧ್ಯಾನಗಳ ಅಭ್ಯಾಸವನ್ನು ಬಿಡಬಾರದು ಸಗುಣೋಪಾಸನೆಯನ್ನು ಬಿಟ್ಟವನು ಜ್ಞಾನವಂತನಾಗಿದ್ದರೂ ಅಪಕೀರ್ತಿಗೊಳಗಾಗುವನು ಕಾರಣ ಸಗುಣ ಭಕ್ತಿಯನ್ನು ಎಂದೂ ಬಿಡಬಾರದು ಸಕಾಮ ಭಕ್ತಿಯಿಂದ ಈಪ್ಸಿತಗಳೆಲ್ಲವೂ ಸಾಧಿಸುವವು ಆದರೆ ನಿಷ್ಕಾಮ ಭಕ್ತಿಯಿಂದ ಪರಮಾರ್ಥ ಪ್ರಾಪ್ತವಾಗುವದು ಇಂತು ಇವೆರಡರಲ್ಲಿಯ ಅಂತರವುಂಟು ಭಗವಂತನು ಫಲದಾಯಕನು ಅವನ ಹೊರತು ಯಾರಿಗೂ ಸಾಧ್ಯವಿಲ್ಲ ಆದರೆ ಫಲೇಚ್ಛೆಯನ್ನಿಟ್ಟುಕೊಂಡು ವರ್ತಿಸಿದರೆ ಮಾತ್ರ ಆ ಭಗವಂತನು ದೂರಾಗುವನು ಆದ್ದರಿಂದ ನಿಷ್ಕಾಮ ಭಕ್ತಿಯಿಂದ ದೇವರನ್ನು ದೊರಕಿಸಿಕೊಳ್ಳಬೇಕು ಈ ಭಕ್ತಿಯ ಮಹತ್ವವು ಅತಿ ದೊಡ್ಡದಾಗಿರುವದು. ಅಂದರೆ ಇದರಿಂದ ದೇಹದಲ್ಲಿ ಅಪರಿಮಿತ ಸಾಮರ್ಥ್ಯ ಬೆಳೆಯುವದು ಹೀಗೆ ಬೆಳೆಯುವದರಿಂದ ಸಕಾಮ ಭಕ್ತಿಯಿಂದ ಪ್ರಾಪ್ತವಾಗುವ ಫಲಗಳು ಆ ಸಾಮರ್ಥ್ಯದ ಮುಂದೆ ತುಚ್ಛಗಳೆನ್ನಿಸುವವು ನಿಷ್ಕಾಮ ಭಕ್ತಿಯುತನ ಬಯಕೆಗಳೇನಿದ್ದರೂ ದೇವನು ಆ ಕೂಡಲೇ ಪೂರೈಸುವನು ಇಂಥ ಭಕ್ತ ಹಾಗು ಭಗವಂತನು ಒಂದೇ ಯಾಗುವರು ಅವರಲ್ಲಿ ದ್ವೈತ ತೋರದು ಈ ಪ್ರಕಾರ ಭಕ್ತಿ ಹಾಗು ಭಗವಂತನ ಸಾಮರ್ಥ್ಯಗಳ ಮಿಲನವಾಗಿ ಒಂದಾದರೆ ಅದರ ಮುಂದೆ ಕಲಿ ಪ್ರಾಬಲ್ಯವೆಷ್ಟೂ ಸಾಗುವದಿಲ್ಲ ಅಂದ ಮೇಲೆ ಹುಳಗಳಂತಿರುವ ಇನ್ನಿತರರ ಪಾಡೇನು? ನಿಷ್ಕಾಮ ಭಕ್ತಿಯೂ ವಿಮಲಬ್ರಹ್ಮಜ್ಞಾನವೂ ಇವೆರಡೂ ಒಂದಾದ ಮೇಲೆ ಅದರ ಮುಂದೆ ತ್ರಿಲೋಕವು ಹೀನವೇ ಸರಿ ಮತ್ತು ಅಲೌಕಿಕ ಬುದ್ಧಿವಂತನ ತೇಜಸ್ಸು ಅದರ ಮುಂದೆ ಮಂದವಾಗಿ ಹೋಗುವದು ಯಶ,ಕೀರ್ತಿ ಪ್ರತಾಪಗಳು ಆ ಮಿಲನದಲ್ಲಿ ಸದಾ ವಾಸವಾಗಿರುವವು ಜ್ಞಾನಬೋಧೆ ಹಾಗು ಹರಿಕೀರ್ತನ ಭಜನೆಗಳು ನಡೆಯುವಲ್ಲಿ ಅಂದರೆ ಜ್ಞಾನ-ಭಕ್ತಿ ಭಜನೆಗಳು ಐಕ್ಯ ಹೊಂದಿದಲ್ಲಿ ಪ್ರಾಣಿ ಮಾತ್ರಗಳು ವಶವಾಗುವವು ಅಲ್ಲಿ ಕೀಳ್ದೆಸೆಯು ಕಂಡುಬರುವದಿಲ್ಲ ಪರಮಾರ್ಥ ಪ್ರಕಾಶವು ತೇಜಗೊಳ್ಳುವದು ವಿವೇಕ ಶಾಂತಿಯು ಅಭಿನ್ನವಾಗಿ ಪಸರಿಸುವದು ಇರಲಿ

ಸಾರಾಸಾರ ವಿವೇಕ ಹಾಗು ನ್ಯಾಯನೀತಿ ಇವೆರಡೂ ಜಾಜ್ವಲ್ಯವಾಗಿರುವವು. ಇಂಥ ಬುದ್ಧಿಯೇ ಭಗವಂತನಿಂದ ಪ್ರಾಪ್ತವಾಗುವದು ಆದರೆ ಇದು ಅನನ್ಯ ಭಕ್ತನಿಗೇ ಸಿಗುವದೆಂಬುದು ಮಾತ್ರ ನೆನಪಿಡು- ಇದನ್ನೇ ಗೀತೆ

ಯಲ್ಲಿ ಭಗವಂತನು ಅರ್ಜುನನಿಗೆ ಉಪದೇಶ ಮಾಡಿರುವನು ಇದೆಲ್ಲದರಿಂದ ಸಗುಣ ಭಜನವು, ಶ್ರೇಷ್ಠ ಬ್ರಹ್ಮಜ್ಞಾನವು ಇವೆರಡೂ ಸಂಗತಿಗಳು ಐಕ್ಯವಿದ್ದಲ್ಲಿ ಮಾತ್ರ ಅತ್ಯಂತ ದುರ್ಲಭವೆನಿಸಿದ್ದ ಅನುಭವಿಕ ಜ್ಞಾನವು ಸಿಗುವದು.

ಶ್ರೀ ರಾಮ || ೮ ಪ್ರಚೀತ ನಿರೂಪಣೆ || ಇನ್ನು ಪ್ರಚೀತಿಯ ಲಕ್ಷಣವನ್ನು ಹೇಳುವೆವೆಂದು ಗುರುಗಳು ಶಿಷ್ಯನಿಗೆ—"ಪ್ರಚೀತಿಯೆಂದರೆ ಶೋಧಕ ಬುದ್ಧಿಯು, ಇದ್ದಿದ್ದವನೇ ಜಾಣನು ಇಲ್ಲದವನು ದೀನನು ರತ್ನ-ಮಾಣಿಕಗಳನ್ನೂ ನಾಣ್ಯಗಳನ್ನೂ ಪರೀಕ್ಷಿಸಿ ತೆಗೆದುಕೊಳ್ಳದಿದ್ದರೆ ಹಾನಿಯೊದಗುವದು ಅದರಂತೆಕುದುರೆ,ಶಸ್ತ್ರ ಇವುಗಳನ್ನು ನಿರೀಕ್ಷಿಸಿಪರೀಕ್ಷಿಸಿ ಯೋಗ್ಯವೆಂದು ಮನದಟ್ಟಾದ ನಂತರವೇ ತೆಗೆದುಕೊಂಡರೆ ಹಾನಿಯಿಲ್ಲ ಧಾನ್ಯಗಳ ಬೀಜಗಳನ್ನು ಕೊಳ್ಳುವಾಗ ಆ ಬೀಜಗಳು ಅಂಕುರಿಸಲಿಕ್ಕೆ ಯೋಗ್ಯವಿದ್ದರೆ ಮಾತ್ರ ಹಣ ವ್ಯಯಮಾಡಿ ತೆಗೆದುಕೊಳ್ಳತಕ್ಕದ್ದು ದೇಹವು ಅನಾರೋಗ್ಯವಿದ್ದಾಗ ವೈದ್ಯರಿಂದ ಮಾತ್ರೆ-ಭಸ್ಮಗಳನ್ನು ಗುಣವಾಗುವ ನಿಮಿತ್ತ ತೆಗೆದುಕೊಂಡು ಆರೋಗ್ಯತೆಯುಂಟಾಯಿತೆಂದು ಮನಗಾಣುವವರಿಗೆ ಅವನ್ನು ಸ್ವೀಕರಿಸತಕ್ಕದ್ದು ಪ್ರಚೀತಿಯಿಲ್ಲದೆ ಔಷಧ ತೆಗೆದುಕೊಳ್ಳುವದು, ಮರುಕ್ಷಣವೇ ದೇಹಾರೋಗ್ಯವು ಇನ್ನಿಷ್ಟು ಕೆಡುವದು ಇದು ಯುಕ್ತವಲ್ಲ ಬಂಗಾರ ಕೊಳ್ಳುವಲ್ಲಿ ಹಾಗು ಆಭರಣ ಮಾಡಿಸುವಲ್ಲಿ ಪ್ರಚೀತಿಯಿಲ್ಲದೆ ಹೋದರೆ ಮೋಸಕ್ಕೆ ಬಲಿ ಬೀಳುವದುಂಟು ಶೋಧಿಸಿ ನೋಡದೇ ಏನೊಂದು ಕಾರ್ಯ ಕ್ರಿಯೆಗಳಲ್ಲಿ ಪ್ರವೃತ್ತರಾಗುವದರಿಂದ ಜೀವಾಪಾಯಗಳಿಗೆ ಎದುರಾಗಬೇಕಾಗುವದು ಆದುದರಿಂದ ಜಾಣರಾದವರು ಅನುಮಾನಯುಕ್ತರಾಗಿ ಪ್ರಚೀತಿಯಿಲ್ಲದ ಕಾರ್ಯ ಕೈಕೊಳ್ಳಬಾರದು ಅದರಿಂದ ಉಪಾಯಗಳು ಅಪಾಯಗಳಾಗಿ ಪರಿಣಮಿಸುವವು ನೀರಲ್ಲಿ ಮಲಗಿದ್ದ ಎಮ್ಮೆಯನ್ನು ದೂರಿನಿಂದಲೇ ಕಂಡು ಅದರ ಬೆಲೆ ನಿರ್ಧರಿಸುವದು ಕಷ್ಟದಾಯಕವು ಹೊಲ-ಮನೆ ಕೊಳ್ಳುವಲ್ಲಿ ಬೇರೊಬ್ಬರ ಮುಖವಾಗಿ ವ್ಯವಹಾರ ನಡೆಯುವದುಂಟು ಅಂಥ ಪ್ರಸಂಗದಲ್ಲಿ ಕೊಳ್ಳುವವನಲ್ಲಿ ಪ್ರಚೀತಿಯಿಲ್ಲದೆ ಹೋಗಲು ಅವನು ದಲಾಲರ ಕಾಪಟ್ಯಕ್ಕೆ ಗುರಿಯಾಗಬೇಕಾಗುವದು ಇದರಂತೆ ಅನ್ನ ವಸ್ತ್ರ ಕೊಳ್ಳುವಲ್ಲಿ ಶೋಧಕ ದೃಷ್ಟಿಯಿಲ್ಲದಿದ್ದರೆ ಪ್ರಾಣಕ್ಕೂ ಸಹ ಗಂಡಾತರ ಬರಬಹುದು ಅಸತ್ಯವಾದವುಗಳಲ್ಲಿ ವಿಶ್ವಾಸವಿಡುವದು ಮೂರ್ಖತನವು ಕಳ್ಳರು

ಮೊದಲಾದ ನೀಚರ ಸಂಗದಿಂದ ಆತ್ಮಘಾತ ಒದಗುವದುಂಟು ಸ್ವಲ್ಪ ಜಾಣತನದ ದೃಷ್ಟಿಯಿಂದ ನೋಡಲು ನೀಚರು ಕಪಟಿಗಳು ಇವರ ಲಕ್ಷಣ ಗಳು ತೋರದಿರುವದಿಲ್ಲ ದುರ್ವರ್ತನಿಗಳನ್ನೂ, ತಾಮಸಿಗಳನ್ನೂ ವೇಷ ಭೂಷಣಗಳಿಂದ ಯುಕ್ತರಾಗಿ ಪರರನ್ನು ಮೋಸಗೊಳಿಸುವವರನ್ನೂ ಡಾಂಭಿ ಕರನ್ನು ಸೂಕ್ಷ್ಮ ಅವಲೋಕನದಿಂದ ತಿಳಿದು ಅಂಥವರಿಂದ ದೂರಿರಲು ಸಾಧ್ಯವಿದೆ ದಿವಾಳೀ ಹೊರಡುವವನ ಹೊರಗಿನ ವೈಭವದ ಆಡಂಬರಕ್ಕೆ ಮರುಳಾಗಿ ಸಭ್ಯರಾದ ಜನರು ಪ್ರಚೀತಿ ಇಲ್ಲದೆ ಹಾನಿ ಮಾಡಿಕೊಳ್ಳುವರು. ಇವೆಲ್ಲ ಹೇಳಿಕೆಗಳಿಂದ ತಿಳಿಯುವದೇನಂದರೆ ಪ್ರಚೀತಿಯಿಲ್ಲದೆ ಜ್ಞಾನವು ವ್ಯರ್ಥ ಜ್ಞಾನವಿಲ್ಲದೆ ಸಮಾಧಾನ ವ್ಯರ್ಥ ಪ್ರಚೀತಿಯಿಲ್ಲದೆ ಒಹಳ ವಾಗಿ ಅನುಮಾನಕ್ಕೆಆಸ್ಪದ ನೀಡುವವನಿಗೆ ಅನಹಿತವಾಗುವದು ನಿಶ್ಚಯವು

ಇನ್ನು ಮಂತ್ರ ತಂತ್ರಗಳನ್ನು ಬೋಧಿಸುವವನು ಅನಧಿಕಾರಿಯಾದವ ನಿಗೆ ಉಪದೇಶ ಕೊಡಕೂಡದು ಹಾಗೆ ಬೋಧಿಸಿದ್ದಾದರೆ ಅವನನ್ನುಮುಸು ಕಿಕ್ಕಿ ಕೊಲೆ ಮಾಡಿದಂತಾಗುವದು. ಅನುಭವ ಶೂನ್ಯನೊಬ್ಬ ವೈದ್ಯನಿಂದ ರೋಗಿ ಬಾಲಕನೊಬ್ಬನ ಔಷಧೋಪಚಾರ ಸರಿಯಾಗಿ ನಡೆಯದೆ ಆ ಬಾಲ ಕನು ಸಾವಿಗೀಡಾದರೆ ಅಂಥಲ್ಲಿ ಇನ್ನೊಬ್ಬರ ಉಪಾಯವೇನು ? ಅದರಂತೆ ರೋಗವನ್ನು ಬಚ್ಚಿಟ್ಟುಕೊಂಡು ವೈದ್ಯನಿಗೆ ತಿಳಿಸುವದಕ್ಕೆ ನಾಚಿಕೆ ಪಟ್ಟರೆ ವೈದ್ಯನದೇನು ತಪ್ಪು ? ಆ ರೋಗಿಯು ತನ್ನ ಕೊಲೆಯನ್ನು ತಾನೇ ಮಾಡಿ ಕೊಂಡಂತಾಗುವದು ತಾನು ದಡ್ಡನೆಂದು ತನಗೆ ತಿಳಿದಿದ್ದರೂ ಕೂಡ ಬಲ್ಲ ವರ ಬಳಿಗೆ ಸೇರಿ ಜ್ಞಾನ ಪಡೆಯಲು ನಿರಾಕರಿಸಿದರೆ ಯಾರ ಹಾನಿಯು ? ಎಲ್ಲ ಪಾಪಗಳು ದೂರಾಗಿ ಜನನ–ಮರಣ ಯಾತನೆ ತಪ್ಪಿತೆಂದು ಆತ್ಮ ಪ್ರಚೀತಿಯಾದರೆ ಮಾತ್ರ ಒಳಿತಾಗುವದು. ಪರಮೇಶ್ವರನನ್ನು ತಿಳಿದು ಕೊಳ್ಳಬೇಕು ತಾನು ಯಾರೆಂಬುದನ್ನು ತಿಳಿದುಕೊಳ್ಳಬೇಕು. ಮತ್ತು ತನ್ನಲ್ಲಿ ಆತ್ಮನಿವೇದನೆಯುಂಟಾಗಬೇಕು ಇಷ್ಟಾದರೆ ಮಾತ್ರ ಒಳಿತಾಗು ವದು ಈ ಬ್ರಹ್ಮಾಂಡವು ಯಾರಿಂದ ಹಾಗು ಯಾವ ಉದ್ದಿಶ್ಯವಾಗಿ ನಿರ್ಮಿಸಲ್ಪಟ್ಟಿತೆಂಬದರ ಪ್ರಚೀತಿಯಿಂದ ಮುಖ್ಯ ಕರ್ತಾರನನ್ನು ತಿಳಿ ಯಲು ಒಳಿತಾಗುವದು ಆದರೆ ಅನುಮಾನದಿಂದ ಯುಕ್ತನಾಗಿ ಪರಮಾ ರ್ಥಕ್ಕಾಗಿ ಯತ್ನಿಸಿದರೂ ಕೂಡ ಅದು ವ್ಯರ್ಥವು ಪ್ರಚೀತಿಯಿಲ್ಲದವನು

ಸಂಶಯು ಮಡುವಿನಲ್ಲಿ ಮುಳುಗುವದು ನಿಶ್ಚಿತವು ಪಾರಮಾರ್ಥಿಕ ವಿಷಯ ಮರ್ಮವನ್ನು ಅಸತ್ಯವನ್ನಾಗಿ ಹೇಳುವವನು ಅಧಮನು, ಮತ್ತು ಅಸತ್ಯವಾದದ್ದೇ ಎಂದು ತಿಳಿದುಕೊಳ್ಳುವವನು ಅಧಮಾಧಮನು, ಕೇವಲ ಬಹಳಷ್ಟು ಮಾತುಗಳಿಂದ ಪಾರಮಾರ್ಥಿಕ ವಿಷಯ ಪ್ರತಿಪಾದನೆ ಮಾಡಿ ಅಂತಸ್ಥದಲ್ಲಿ ಪರಮಾತ್ಮನನ್ನು ಅರಿಯದಿದ್ದರೆ ಅವನಿಗೆ ಆ ಪರಮಾತ್ಮನ ಐಕ್ಯತೆ ದೊರಕಲಾರದು ಇದರಲ್ಲಿ ತಿಲಮಾತ್ರವೂ ಸಂಶಯವಿಲ್ಲ ದೇವನಲ್ಲಿ ನಂಬುಗೆಯನ್ನಿಟ್ಟು "ಸರ್ವೋತ್ತಮನೇ ನೀನು ಎಲ್ಲವನ್ನೂ ತಿಳಿಯುವಿ ನಿನ್ನ ಸಂಬಂಧವಾಗಿ ನನ್ನಲ್ಲಿ ಧೃಡವಾದ ಉಪಾಸನೆಯನ್ನು ಮಹತ್ವದ್ದಾಗಿ ಎಣಿಸಿ ನನಗೆ ಸತ್ಯಜ್ಞಾನವನ್ನು ದಯಪಾಲಿಸು" ಎಂದು ಮೊರೆ ಹೋಗಬೇಕು ಸತ್ಯವನ್ನು ಆಡಬೇಕು. ಕರ್ತಾರನನ್ನು ಅರಿತುಕೊಳ್ಳಬೇಕು ಮೂಲ ಮಾಯೋದ್ಭವನನ್ನು ಶೋಧಿಸಬೇಕು ಇದನ್ನೇ ಮುಂದೆ ಆಧಾರಯುಕ್ತವಾಗಿ ಹೇಳುವೆವು ಇದು ಸೂಕ್ಷ್ಮ ನಿರೂಪಣೆಯೆಂದು ಮತ್ತೂ ಮತ್ತೂ ಹೇಳಿದೆವು ಪ್ರಚೀತಿಯ ಶಾಂತಿ ಸ್ಥಾಪನೆಗಾಗಿ ಲೋಕ ರೂಢಿಯನ್ನು ಬದಿಗಿಟ್ಟು ಹೇಳಬೇಕಾಗುವದು ಒಂದು ವೇಳೆ ಜನರೂಢಿಗನುಸರಿಸಿ ಹೇಳಿದರೆ ಪ್ರಚೀತಿಯ ಶಾಂತಿ ದೊರಕಲಾರದು ನಾವು ಜನರೂಢಿ ಹಾಗು ಪ್ರಚೀತಿ ಪ್ರಮಾಣಗಳೆರಡನ್ನೂ ಕಾಯ್ದುಕೊಂಡು ಹೋಗುವವರಾದ ಮೂಲಕ ಅದನ್ನೇ ಮತ್ತೆ ಮತ್ತೆ ಹೇಳಬೇಕಾಗುತ್ತದೆ ಅದರಂತೆ ವಿವರಿಸುವೆವು" ಎಂದು ಗುರುಗಳು ಹೇಳಿದರು.

ಶ್ರೀ ರಾಮ ॥ ೯ ಪ್ರಹೇತ ನಿರೂಪಣೆ ॥ ಶ್ರೀ ಗುರುಗಳು ಪ್ರಚೀತಿಯ ವಿಷಯವನ್ನು ಮುಂದುವರಿಸಿ—"ಆಕಾಶದಿಂದ ವಾಯುವು ನಿರ್ಮಾಣವಾದಂತೆ ಬ್ರಹ್ಮನಿಂದ ಮೂಲ ಮಾಯೆಯುದಿಸಿತು ಈ ವಾಯು ಸ್ವರೂಪ ಮೂಲ ಮಾಯೆಯಲ್ಲಿ ತ್ರಿಗುಣ-ಪಂಚಭೂತಾತ್ಮಕವಾದ ಅಷ್ಟಧಾ ಪ್ರಕೃತಿಯು ಅತಿ ಸೂಕ್ಷ್ಮವಾಗಿ ಅಂದರೆ ಆಲದ ಬೀಜದೋಪಾದಿಯಾಗಿರುವದು ಆ ಆಲದ ಬೀಜವನ್ನು ಒಡೆದು ನೋಡಲು ಅದರಲ್ಲಿ ಆಲದ ಮರದ ಪ್ರಚಂಡ ವಿಸ್ತಾರವು ತೋರಿ ಬರುವದಿಲ್ಲ ಆದರೂ ಅದು ಆ ಬೀಜದಲ್ಲಿಯೇ ಇರುವದು ಅದರಂತೆ ಬೀಜರೂಪವಾದ ಮೂಲಮಾಯೆಯು ವಿಸ್ತೃತಗೊಂಡ ನಂತರ ಅದರ ಸ್ವರೂಪ ಶೋಧಿಸುವದಕ್ಕೆ ಒಳಿತಾಗು

ಗುವದು ವಿವೇಕದಿಂದ ನೋಡಲು ಅಲ್ಲಿ ಪ್ರತೀತಿಯು ಎರಡು ಬಗೆಯಾಗಿ ತೋರುವದು ಒಂದು ನಿಶ್ಚಲ ಸ್ಥಿತಿಯು ಇನ್ನೊಂದು ಚಂಚಲ ಸ್ಥಿತಿಯು ಈ ಚಂಚಲ ಸ್ಥಿತಿಯೇ ವಾಯುವು ಅದರಲ್ಲಿಯ ಅರಿವು ಅದೇ ಜಗಜ್ಜ್ಯೋತಿಯ ಮೂಲ ಪ್ರವಾಹವು. ಪ್ರಾಣಿ ಮತ್ತು ವಾಯುವಿನ ಮಿಲನವು ಮೂಲ ಮಾಯೆಯು 'ಸರಿತಾ' ಇದು ಸ್ತ್ರೀವಾಚಕ ಶಬ್ದವು ಆದರೆ ಸರಿತಾ ಎಂದರೆ ಪ್ರವಾಹವೆಂಬ ಶಬ್ದಾರ್ಥವಿರುವದರಿಂದ ಅದರಲ್ಲಿ ಕೇವಲ ನೀರೇ ಇರುತ್ತದೆ ಮೂಲ ಮಾಯೆಯನ್ನಾದರೂ ವಿವೇಕದಿಂದ ಹೀಗೆಯೇ ತಿಳಿಯಬೇಕು ವಾಯುವಿನ ಅರಿವು ಜಗಜ್ಜ್ಯೋತಿಯು ಅದಕ್ಕೇ ಮೂಲ ಮಾಯೆಯೆನ್ನುವದು ಅರಿವು ಹಾಗು ವಾಯು ಇವುಗಳಿಗೇ ಪ್ರಕೃತಿ, ಪುರುಷ ಎಂಬ ಹೆಸರು ವಾಯುವು ಪ್ರಕೃತಿಯು, ಜಗಜ್ಜ್ಯೋತಿಯು ಪುರುಷನು ಈ ಪುರುಷ-ಪ್ರಕೃತಿಗಳೇ ಶಿವ–ಶಕ್ತಿ ಎನ್ನಿಸುವದು. ವಾಯು ಸ್ವರೂಪದ ಮೂಲ ಮಾಯೆಯಲ್ಲಿಯ ಅರಿವೇ ಪುರುಷನು. ಅದರಂತೆ ವಾಯು ಇದು ಶಕ್ತಿಯು, ಅದರಲ್ಲಿಯ ಅರಿವು ಶಿವನು ಹೀಗೆ ಶಕ್ತಿ ಮತ್ತು ಶಿವ ಇವರ ಐಕ್ಯತೆವಿದ್ದುದರಿಂದಲೇ ಮೂಲ ಮಾಯೆಗೆ 'ಅರ್ಧನಾರೀನಟೇಶ್ವರ' ಎಂದೆನ್ನುವರು ವಾಯುವಿನಲ್ಲಿಯ ಅರಿವು ಅದೇ ಈಶ್ವರನು. ಅದರಿಂದಲೇ ತ್ರಿಗುಣಗಳಾದವು ಈ ತ್ರಿಗುಣಗಳಲ್ಲಿ ಸತ್ವಗುಣವು ಅಂದರೆ ಶುದ್ಧವಾದ ಅರಿವು ದೇಹಧಾರಿ ವಿಷ್ಣುವೆನ್ನಿಸುವದು ಆ ವಿಷ್ಣ್ವಂಶದಿಂದಲೇ ಜಗತ್ತಿನ ಸಂಚಲನವು ಭಗವದ್ಗೀತೆಯಲ್ಲಿ ಇದನ್ನೇ ಹೇಳಿದೆ.

ಈ ಪ್ರಕಾರ ತುದಿಯಿಂದ ಮೂಲದವರೆಗೆ ವಿಚಾರ ಮಾಡುವವನು ಅವನು ಮಾಯಾನ್ವಿತನಾಗಿದ್ದರೂ ಕೂಡ ಮುಕ್ತನಾಗುವನು ಅರಿವು ಇದು ಒಳಿದೇ ಎಲ್ಲ ಪ್ರಾಣಿಗಳಲ್ಲಿ ಆಡುತ್ತಿದ್ದು ಅವುಗಳನ್ನು ರಕ್ಷಿಸುವದು ಈ ರಕ್ಷಕವೇ ಜಗಜ್ಜ್ಯೋತಿಯು ಪಶು-ಪಕ್ಷಿ ಮೊದಲಾದ ಪ್ರಾಣಿ ಮಾತ್ರಗಳೆಲ್ಲ ಈ ಜಗಜ್ಜ್ಯೋತಿಯ ಆಧಾರದಿಂದಲೇ ಬದುಕುವವು ಅರಿವಿನಿಂದಲೇ ಪ್ರಾಣಿಗಳು ಓಡುವವು, ಮರೆಯಾಗುವವು ಇತ್ಯಾದಿ ಕ್ರಿಯಾನ್ವಿತವಾಗುವವು ಇಂತೆಲ್ಲ ಪ್ರಾಣಿಗಳ ಕ್ರಿಯೆಗಳಿಗೆ ಪ್ರವರ್ತನೆಯನ್ನುಂಟು ಮಾಡಿ ಇಡೀ ಜಗತ್ತನ್ನೇ ಬದುಕಿಸುವ ಆ ಅರಿವಿಗೆ ಜಗಜ್ಜ್ಯೋತಿ ಎಂಬ ಹೆಸ

ರುಂಟು ಪ್ರಾಣಿಯಲ್ಲಿಂದ ಈ ಜಗಜ್ಯೋತಿಯು ದೂರಾಗಲು ಆ ಪ್ರಾಣಿಯು ಇದ್ದಲ್ಲಿಯೇ ಆಗಿಂದಾಗಲೇ ಸತ್ತು ಬೀಳುವದು ನೀರಿನ ತಂತುರ ಹನಿಗಳಿಂದ ಅನೇಕ ತುಷಾರಗಳು ಅವುಗಳಿಂದ ಅನೇಕ ರೇಣುಗಳೂ ಹುಟ್ಟುವಂತೆ ಮೂಲ ಮಾಯೆಯಲ್ಲಿಯ ಅರಿವಿನ ವಿಸ್ತೃತಿಯು ಬೆಳೆಯುತ್ತ ಬೆಳೆಯುತ್ತ ಬ್ರಹ್ಮಾಂಡವನ್ನೇ ವ್ಯಾಪಿಸಿ ಬಿಡುವದು ಅದರಂತೆ ಅನೇಕ ದೇವ-ದೇವತೆಗಳು ಭೂತಗಳು ತಮ್ಮ ತಮ್ಮ ಸಾಮರ್ಥ್ಯದಿಂದ ಸೃಷ್ಟಿಯಲ್ಲಿ ತಿರುಗುವವು ಆದ್ದರಿಂದ ಅವಕ್ಕೆ ಮಿಥ್ಯವೆಂದೆನ್ನಲಾಗದು ಅವು ವಾಯು ಸ್ವರೂಪದಿಂದ ಚರಿಸುವವು ಮತ್ತು ಮನಬಂದಂತೆ ತಮ್ಮ ರೂಪುಗಳನ್ನು ಬದಲಿಸುವವು ಅಜ್ಞಾನ ಪ್ರಾಣಿಗಳು ತಮ್ಮ ತಮ್ಮ ವಾಸನೆಯಿಂದ ಭ್ರಮೆಗೊಳ್ಳುವವು ಅವಕ್ಕೆ ಆ ದೇವತಾ-ಭೂತ ಮೊದಲಾದವುಗಳ ಬಾಧೆಯಾಗುತ್ತದೆ ಜ್ಞಾನಿಯಾದವನಿಗೆ ವಾಸನೆ ಇಲ್ಲವೆ ಸಂಕಲ್ಪಗಳೇನೊಂದು ಇರುವದಿಲ್ಲವಾದ್ದರಿಂದ ಈ ಉಪದ್ರವವು ಅವನಿಗಾಗುವದಿಲ್ಲ ಆದ್ದರಿಂದಲೇ ಆತ್ಮಜ್ಞಾನವನ್ನು ಅಭ್ಯಾಸಿಸಬೇಕು ಆತ್ಮಜ್ಞಾನದಿಂದ ಎಲ್ಲ ಕರ್ಮಗಳ ಖಂಡನೆಯಾಗುವದೆಂಬದು ಪ್ರತ್ಯಕ್ಷ ಪ್ರಮಾಣವಾಗಿರುವದು ಜ್ಞಾನವಿಲ್ಲದೆ ಕರ್ಮಪಾಶವು ಹರಿಯುವದಿಲ್ಲ ಮತ್ತು ಸದ್ಗುರುವಿನ ಕೃಪೆಯಿಲ್ಲದೆ ಜ್ಞಾನವಾಗುವದಿಲ್ಲ ಈ ಗುಟ್ಟನ್ನರಿಯುವದಕ್ಕಾಗಿ ಸಂತ-ಸದ್ಗುರುಗಳ ಸೇವೆ ಹಾಗು ಸಮಾಗಮ ಸುಖ ಹೊಂದಬೇಕು ಮತ್ತು ಅಂತರ್ಯಾಮನ ಬಗೆಗೆ ತತ್ವ ವಿಚಾರಗಳನ್ನು ವಿವರವಾಗಿ ತಿಳಿಯಬೇಕು ಅಂದರೆ ತತ್ವಗಳು ತತ್ವಗಳಲ್ಲಿ ಬೆರೆತುಕೊಳ್ಳುವವು ಹಾಗು ತನಗೆ ತಾನೇ ಉಳಿಯುವದು ತನಗೆ ಈ ಸ್ವರೂಪದೊಡನೆ ಅನನ್ಯತೆಯು ಎಲ್ಲಕ್ಕೂ ಸಾಫಲ್ಯವು ವಿಚಾರವಿಲ್ಲದೆ ಎಲ್ಲವೂ ವ್ಯರ್ಥವಾಗುವವು ಆದ್ದರಿಂದ ವಿಚಾರದಲ್ಲಿ ಯಾವಾಗಲೂ ಪ್ರವೃತ್ತರಾಗಿರಬೇಕು. ವಿಚಾರವುಳ್ಳವನೇ ಪುರುಷನು ಹಾಗು ವಿಚಾರಂಗಾಣದವನು ಪಶು ಸಮಾನನು ಈ ಬಗೆಯಾಗಿ ಸರ್ವೇಶನು ಅಲ್ಲಲ್ಲಿಗೆ ಹೇಳಿರುವನು ಸಿದ್ಧಾಂತವನ್ನು ಸ್ಥಾಪಿಸುವದಕ್ಕಾಗಿ ಪೂರ್ವ ಪಕ್ಷವನ್ನು ಖಂಡಿಸಬೇಕಾಗುವದು ಆದರೆ ಸಾಧಕರಿಗೆ ಅವರಲ್ಲಿಯ ದೃಢವಾದ ಶ್ರದ್ಧೆಯ ಮೂಲಕವಾಗಿ ನಿರೂಪಣೆಯಲ್ಲಿಯೇ ಸಾಕ್ಷಾತ್ಕಾರವಾಗುವದು. ಶ್ರವಣ-ಮನನ

ನಿಧಿಧ್ಯಾಸದ ಅಭ್ಯಾಸದಿಂದ ಹಾಗು ವಿಶ್ವಾಸದಿಂದ ಅನುಭವವುಂಟಾಗುತ್ತಾಗುತ್ತಾ ನಿರಾಭಾಸವಾಗಿ ಪ್ರತ್ಯಕ್ಷ ಸಾಕ್ಷಾತ್ಕಾರವಾಗುವದು ಇದಕ್ಕಾಗಿ ಬೇರೆ ಉಪಾಯಗಳನ್ನು ಶೋಧಿಸಬೇಕಾಗಿಲ್ಲ" ಎಂದು ಗುರುಗಳು ಹೇಳಿದರು

ಶ್ರೀ ರಾಮ || ೧೦ ಚಲಾಚಲ ನಿರೂಪಣೆ || ಶ್ರೀ ಗುರುಗಳು ಶಿಷ್ಯನನ್ನು ಕುರಿತು:—

"ಬ್ರಹ್ಮನು ಆಕಾಶದಂತೆ ಅವಕಾಶವುಳ್ಳವನು, ವ್ಯಾಪಕನು, ಉನ್ನತನು, ನಿರ್ಮಲನು, ನಿಶ್ಚಲನು ಹಾಗು ಸದೋದಿತನು ಆಗಿರುವನು ಅವನಿಗೇ ಪರಮಾತ್ಮನೆಂದು ಹೆಸರು ಇನ್ನೂ ಅದೆಷ್ಟೋ ಹೆಸರುಗಳಿರುವವು ಅವನು ಆಕಾಶದಂತೆ ಸರ್ವವ್ಯಾಪಿಯೂ ನಿರಾಭಾಸನೂ, ಪಾತಾಳ ಅಂತರಿಕ್ಷದಲ್ಲಿ ಪಸರಿಸಿದವನೂ ಹಾಗು ಕಲ್ಪಾಂತದಲ್ಲಿಯೂ ಕೂಡ ಎಲ್ಲೆಡೆಯಲ್ಲಿ ಇರುವವನೂ ಆಗಿರುವನು ಹೀಗೆ ಕೆಲವೊಮ್ಮೆ ಆತನು ಅಚಂಚಲನಾಗಿ ಮತ್ತು ಅಚಂಚಲದಿಂದ ಚಂಚಲನಾಗಿ ಭಾಸಿಸುವನು ಇಂತು ಅವನಿಗಿರುವ ಹಲವು ನಾಮಗಳಲ್ಲಿ ಮೂರು ಪ್ರಕಾರಗಳು ತೋರುವವು ಅವನು ತೋರದಿದ್ದರೂ ಅವನಿಗೆ ಹೆಸರಿಡುವದು ಅವನನ್ನು ಗುರುತಿಸುವದೂ ಅವಶ್ಯವು ಮೂಲ ಮಾಯೆ, ಮೂಲ ಪುರುಷ ಹಾಗು ಮೂಲ ಪ್ರಕೃತಿ ಈ ಹೆಸರುಗಳು ಆ ಚಂಚಲನಿಗೆ ಉಂಟು ಅವನಿಗೆ ಇರುವ ಹೆಸರುಗಳನ್ನು ಮೊದಲು ತಿಳಿದುಕೊಳ್ಳಬೇಕು ಅವನ ರೂಪವು ನಮ್ಮ ಧ್ಯಾನದಲ್ಲಿ ಬಾರದೆ ಕೇವಲ ಹೆಸರುಗಳನ್ನು ಉಚ್ಚರಿಸುವದು ಯೋಗ್ಯವಾಗುವದಿಲ್ಲ ಅನುಭವವಿಲ್ಲದೆ ಕೇವಲ ಅನುಮಾನ ಪಡುವದು ಇಷ್ಟವಲ್ಲ ನಿಶ್ಚಲವಾದ ಆಕಾಶದಲ್ಲಿ ವಾಯುವು ಒಳ್ಳೇ ಭರದಿಂದ ಪ್ರವಹಿಸುತ್ತಿದ್ದರೂ ಆ ಆಕಾಶ ಹಾಗು ವಾಯುಗಳಲ್ಲಿ ಭೇದವಿದ್ದೇ ಇರುತ್ತದೆ. ಅದರಂತೆ ನಿಶ್ಚಲ ಪರಬ್ರಹ್ಮನಲ್ಲಿ ಚಂಚಲ ಮಾಯೆಯು ಭ್ರಮೆಯಿಂದ ಭಾಸವಾಗುವದು ಆದರೂ ಬ್ರಹ್ಮ ಹಾಗು ಭ್ರಮೆ ಇವುಗಳಲ್ಲಿ ಭೇದವಿರುವದು ಇನ್ನು ಆ ಮಾಯಾಭ್ರಮೆಯ ವಿವರಣವನ್ನು ಮಾಡುವವು. ಆಕಾಶದಲ್ಲಿ ವಾಯುವು ಸಂಚಲಿಸುವಂತೆ ನಿಶ್ಚಲ ಬ್ರಹ್ಮನಲ್ಲಿ ಚಂಚಲ ಮಾಯೆಯ ಗತಿಯಿರುವದು ಇಚ್ಛಾ, ಸ್ಫೂರ್ತಿ, ಮೂಲ ಪ್ರಕೃತಿ ಹಾಗು ಮೂಲ

ಮಾಯೆ ಇವೆಲ್ಲವು ಆ ಮಾಯೆಯ ಗತಿಗೆ ಸಂಬಂಧಿಸಿದ ಹೆಸರುಗಳು ಆ ಮಾಯೆಯ 'ಅಹಂ' ಎಂಬ ಸ್ಫುರಣರೂಪದ ಅರಿವು ಬ್ರಹ್ಮಾಂಡ ರಚನೆಗೆ ಮಹಾಕಾರಣ ದೇಹಿಯಾಗಿರುವದು ಪಿಂಡಕ್ಕೆ ಸಂಬಂಧಿಸಿ ಸ್ಥೂಲ ಸೂಕ್ಷ್ಮ ಕಾರಣ ಮತ್ತು ಮಹಾಕಾರಣ ಹೀಗೆ ನಾಲ್ಕು ದೇಹಗಳಿರುವಂತೆ ಬ್ರಹ್ಮಾಂಡ ಸಂಬಂಧವಾಗಿ ವಿರಾಟ, ಹಿರಣ್ಯಗರ್ಭ, ಅವ್ಯಾಕೃತ ಹಾಗು ಮೂಲ ಮಾಯೆ ಹೀಗೆ ನಾಲ್ಕು ದೇಹಗಳಿರುವವು ಈ ದೇಹಗಳಿಗೆ ಈಶ್ವರತನುಚತುಷ್ಟಯ ಅಂದರೆ ಈಶ್ವರನ ನಾಲ್ಕು ದೇಹಗಳು ಎಂದೆನ್ನುವರು ಇಂತು ಪಿಂಡದ ನಾಲ್ಕು ದೇಹಗಳು ಮತ್ತು ಬ್ರಹ್ಮಾಂಡದ ನಾಲ್ಕು ದೇಹಗಳು ಹೀಗೆ ಒಟ್ಟು ಎಂಟು ದೇಹಗಳು ಈ ಎಂಟು ದೇಹಗಳ ವಿಚಾರವೂ ನಿರಸನ ಪ್ರಕಾರವೂ ಪಂಚೀಕರಣದಲ್ಲಿ ಹೇಳಲ್ಪಟ್ಟಿದೆ ಈ ಎಂಟು ದೇಹಗಳಲ್ಲಿ ಕೊನೆಯದು ಮೂಲ ಮಾಯೆಯು ಇದೇ ಮೇಲೆ ಹೇಳಿದ ಅಹಂಸ್ಫುರಣರೂಪದ ಅರಿವು ಆಗಿರುವದು ಆ ಅರಿವೇ ಮೂಲ ಮಾಯೆಯು ಆ ಆದಿಸ್ಫುರಣವೇ ಮೂಲ ಮಾಯೆಯು

ಮೇಲೆ ಹೇಳಿದ ಮೂಲ ಮಾಯೆಗೆ ಪರಮೇಶ್ವರ ವಾಚಕ ಅನಂತ ಹೆಸರುಗಳಿರುವವು ನಾಮ-ರೂಪ-ಲಿಂಗಭೇದಗಳಿಲ್ಲದ್ದರಿಂದ ಆ ಮೂಲ ಮಾಯೆಗೆ ಪುರುಷವಾಚಕ, ಸ್ತ್ರೀವಾಚಕ ಹಾಗು ನಪುಂಸಕವಾಚಕ ಹೆಸರುಗಳು ಹಲಕೆಲವು ಇರುವವು ಈ ಹೆಸರುಗಳೆಲ್ಲ ಕೇವಲ ಆ ಬ್ರಹ್ಮನ ಸಂಕೇತವನ್ನು ತಿಳಿಸುವದಕ್ಕಾಗಿಯೇ ಇರುವವು ಅವು ಯಾವವೆಂದರೆ- ಪರಮಾತ್ಮಾ, ಪರಮೇಶ್ವರ, ಪರೇಶ, ಜ್ಞಾನಘನ, ಈಶ್ವರ, ಜಗದೀಶ, ಸತ್ತಾಧೀಶ, ಜ್ಞಾನಸ್ವರೂಪ, ಪ್ರಕಾಶರೂಪ, ಜ್ಯೋತಿರೂಪ, ಕಾರಣರೂಪ, ಚಿದ್ರೂಪ, ಆತ್ಮಾ, ಅಂತರಾತ್ಮ, ದ್ರಷ್ಟಾ, ಸಾಕ್ಷಿ, ಜೀವಾತ್ಮ, ಶಿವಾತ್ಮ, ದೇಹಿ, ಕೂಟಸ್ಥ, ಹರಿ-ಹರ-ಬ್ರಹ್ಮಾತ್ಮ, ಯಮಾತ್ಮ, ಧರ್ಮಾತ್ಮ, ನೈಋತ್ಯಾತ್ಮ, ವರುಣಾತ್ಮ, ಕುಬೇರಾತ್ಮ, ವಾಯೊರಾತ್ಮ ಇತ್ಯಾದಿ ಪುಲ್ಲಿಂಗ ನಾಮಗಳು ಆ ಅರಿವಿನ ರೂಪದ ಮೂಲ ಮಾಯೆಗೆ ಇರುವವು ಇಂದ್ರ-ಚಂದ್ರ, ಋಷಿ, ಮುನಿ, ಗಣ, ಗಂಧರ್ವ ವಿದ್ಯಾಧರ, ಯಕ್ಷ, ಕಿನ್ನರ, ನಾರದ, ತುಂಬರ ಇತ್ಯಾದಿಯಾಗಿ ಎಲ್ಲರ ಅಂತಃಸ್ಥವಾಗಿದ್ದ ಮೂಲ ಮಾಯೆಗೆ ಸರ್ವಾಂತರಾತ್ಮ ಎಂಬ

ಹೆಸರುಂಟು ಈ ಅಂತರಾತ್ಮನಿಂದಲೇ ಚಂದ್ರ, ಸೂರ್ಯ, ನಕ್ಷತ್ರಮಂಡಲ, ಸ್ವರ್ಗ, ಮೃತ್ಯು, ಪಾತಾಳಯುಕ್ತ ಬ್ರಹ್ಮಾಂಡವೆಲ್ಲ ನಡಯುವದು. ಮೂಲ ಮಾಯೆಯೇ ಗುಣಮಾಯೆಯಾಗಿ ತ್ರಿಗುಣರೂಪದಿಂದ ಹರಿಹರ ಬ್ರಹ್ಮರನ್ನು ಉತ್ಪನ್ನ ಮಾಡಿ ಸಕಲ ಬ್ರಹ್ಮಾಂಡ ರಚನೆಗೆ ಕಾರಣವಾಯಿತು ಆದ್ದರಿಂದಲೇ ಗುಣಮಾಯೆಯು ವಿಸ್ತೃತಳಾದಳು' ಎಂದು ಹೇಳಿದೆ ಇನ್ನು ಮೂಲ ಮಾಯೆಯ ಸ್ತ್ರೀಲಿಂಗದ ಹಸರುಗಳು — ಜಗದೀಶ್ವರಿ, ಪರಮೇಸ್ವರಿ,ತ್ರೈಲೋಕ್ಯಜನನಿ, ಅಂತರ್ಕಳೆ, ಜ್ಞಾನಕಲೆ, ಚಂಚಲೆ ಜಗಜ್ಯೋತಿ, ಜೀವನಕಲೆ, ಪರಾ, ಪಶ್ಯಂತಿ, ಮಧ್ಯಮಾರೂಪದ ಶಾರದೆ, ಮತಿ, ಧೃತಿ, ಧಾರಣಾ ಮೂಳಪ್ರಕೃತಿ, ಶಕ್ತಿ, ಜಾಗೃತಾದಿ ಅವಸ್ಥೆಗಳನ್ನೂ ಸುಖದುಃಖಗಳನ್ನೂ ಅರಿವು ಮಾಡಿಕೊಡುವವಳು ದೀನವತ್ಸಲೆ, ದಯಾನ್ವಿತೆ, ಕೋಮಲೆ, ಶಾಂತಿ, ಕ್ಷಮೆ, ದಯೆ, ಅಧ್ಯಾತ್ಮವಿದ್ಯೆ, ಸಾಯುಜ್ಯತೆ ಮುಂತಾದ ಸ್ತ್ರೀ-ನಾಮಗಳು ಮೂಲ ಮಾಯಯನ್ನು ಗುರುತಿಸಲ್ಪಡುವವು ಇನ್ನು ಈ ಚಂಚಲೆಯಾದ ಮೂಲ ಮಾಯೆಯ ನಪುಂಸಕಲಿಂಗಗಳು —

ಅಂತಃಕರಣ, ಜೀವಿತ, ಚೈತನ್ಯ, ಅಹಂಕಾರ, ಮಮಕಾರ, ಅರಿವು, ಸರ್ವಜ್ಞತ್ವ, ಜೀವಿತ್ವ, ಶಿವತ್ವ, ಅಲಿಪ್ತತೆ ಈ ಮುಂತಾದ ಹೆಸರುಗಳು ಇವಲ್ಲದೆ ಇನ್ನೂ ಅನಂತವಾಗಿ ಹೇಳಬಹುದು ಆತ್ಮಾ, ಜಗಜ್ಯೋತಿ, ಸರ್ವಜ್ಞತ್ವ ಈ ಮೂರೂ ಹೆಸರುಗಳು ಭಿನ್ನಭಿನ್ನ ಲಿಂಗದವಾದವು ಆ ಮಾಯೆಗೇ ಇರುವವು ಗುಣಗಳಿಗೆ ಅಂದರೆ ಸೃಷ್ಟಿ ರಚನೆಗೆ ಸಂಬಂಧಿಸಿ ಇನ್ನೂ ಅನೇಕ ನಾಮಗಳನ್ನು ಹೇಳಿದರೂ ಎಲ್ಲವನ್ನು ನಿರೀಕ್ಷಿಸಲು ಅಂತರಾತ್ಮವು ಒಂದೇ ಆಗಿರುವದು, ಇರಿವೆ ಮೊದಲಾಗಿ ಬ್ರಹ್ಮನ ವರೆಗೆ ಎಲ್ಲವೂ ಅಂತರಾತ್ಮನ ಮೇಲೆಯೇ ಅವಲಂಬಿಸಿರುವವು ಅವನ್ನು ಸ್ವಲ್ಪ ಮಟ್ಟಿಗೆ ತಿಳಿಯಬೇಕು ಸೃಷ್ಟಿರಚನೆಯ ಚಾತುರ್ಯವನ್ನು ಅಂತರಾತ್ಮನಿಂದಲೇ ತಿಳಿಯಬೇಕು ತಿಳಿದರೂ ಕೂಡ ತೋರುವದಿಲ್ಲ ಅನುಭವಕ್ಕೆ ಬಂದರೂ ಭಾಸವಾಗುವದಿಲ್ಲ, ದೇಹದಲ್ಲಿದ್ದರೂ ಅದರ ಒಂದೇ ಸ್ಥಾನವು ಸಿಗುವದಿಲ್ಲ ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾಗಿದ್ದರೂ ಆಕಾಶವು ಅದರಲ್ಲಿ ಅಡಗುವದು ಅದರ ಸ್ಥೂಲತೆಯೆಂದರೆ— ಅದು ನದಿ, ಸಮುದ್ರ

ಗಳಂತಹ ಅಪರಂಪಾರವಾದ ಎಲ್ಲ ಪದಾರ್ಥಗಳಲ್ಲಿ ಪಸರಿಸಿ ಬಿಟ್ಟಿದೆ. ಅದು ವಾಯುವಿಗಿಂತ ಚಂಚಲವಾದದ್ದು ಪ್ರತಿಯೊಂದು ವಸ್ತುವಿನಲ್ಲಿ ಆ ವಸ್ತುವಿನಂತೆ ಆಗಿ ಇರುವದು ಅನಂತ ದೃಷ್ಟಿಗಳಿಂದ ಅದು ನೋಡುವದು, ಅನಂತ ನಾಲಗೆಗಳಿಂದ ನೆಕ್ಕುವದು, ರುಚಿ ನೋಡುವದು, ಅನಂತ ರೂಪಗಳಿಂದ ಗುರುತಿಸುವದು, ಶ್ರವಣೇಂದ್ರಿಯಲ್ಲಿದ್ದು ಶಬ್ದ ಕೇಳುವದು, ಮೂಗಿನಲ್ಲಿದ್ದು ವಾಸನೆಯನ್ನು ಪರೀಕ್ಷಿಸುವದು, ತ್ವಚೆಯಲ್ಲಿದ್ದುಕೊಂಡು ಶೀತ-ಉಷ್ಣ ಮೊದಲಾದವುಗಳ ಸ್ಪರ್ಶಜ್ಞಾನವನ್ನು ತಿಳಿದುಕೊಳ್ಳುವದು ಈ ಪ್ರಕಾರ ಆ ಅಂತರಾತ್ಮವು ಎಲ್ಲರ ಅಂತರ್ಕಳೆಯಾಗಿದ್ದರೂ ಎಲ್ಲದರಿಂದಲೂ ಬೇರೆಯಾಗಿರುವದು ಇದೆಲ್ಲವೂ ಆ ಮೂಲ ಮಾಯೆಯು ಅಗಾಧ ಲೀಲೆಯಾಗಿರುವವು ಇದನ್ನು ಅದೇ ತಿಳಿಯುವದು ಅವಕ್ಕೆ ಲಿಂಗ ಭೇದವಿಲ್ಲ ಬಾಲ್ಯ ಮುಂತಾದ ಅವಸ್ಥಾತ್ರಯಗಳಿಲ್ಲ ಸರ್ವ ದೇಹ ಚಾಲಕನಾಗಿದ್ದರೂ ಅಕರ್ತನಾಗಿರುವನು ಸರ್ವ ಭೂತಗಳು ಕ್ಷರ ಎಂದರೆ ನಾಶವಂತಗಳು ಕೂಟಸ್ಥನು ಅಕ್ಷರನು ಎಂದರೆ ನಾಶರಹಿತನು ಅವನು ದೇಹದಲ್ಲಿ ಕೂಟಸ್ಥನಾಗಿರುವನು ಇದು ವರೆಗೆ ಅಂತರಾತ್ಮನ ವರ್ಣನೆಯಾಯಿತು ನಿಶ್ಚಳ ಪರಬ್ರಹ್ಮನು ಆ ಅಂತರಾತ್ಮನ ಆಚೆಗಿರುವನು ಆತನು ಉತ್ತಮ ಪುರುಷನು, ನಿಷ್ಪ್ರಪಂಚನು, ನಿಷ್ಕಲಂಕನು, ನಿರಂಜನನು, ನಿರ್ವಿಕಾರಿಯಾದ ಪರಮಾತ್ಮನು ಅವನು ಒಬ್ಬ ಒಬ್ಬನಾಗಿರುವನು ತನ್ನ ನಾಲ್ಕೂ ದೇಹಗಳನ್ನಳಿದು ಇಂಥ ಪರಮಾತ್ಮನಲ್ಲಿ ಅನನ್ಯನಾಗುವವನೇ ಭಕ್ತನು ಎಂಟೂ ದೇಹಗಳ ನಿರಸನವಾದ ನಂತರ ಚಂಚಲವಾದ ಅಂತರಾತ್ಮನ ಇರುವಿಕೆ ಉಳಿಯಲಾರದು. ನಿರ್ವಿಕಾರನಲ್ಲಿ ವಿಕಾರಗಳುಂಟಾಗಲಾರವು ಪರಬ್ರಹ್ಮನು ನಿಶ್ಚಲನು ಅವನು ಒಬ್ಬನೇ ಆಗಿರುವನು ಮಾಯೆಯ ಮೂಲಕ ಅವನು ಚಂಚಲನೆಂಬುದರ ಅನುಭವವನ್ನು ನಿಶ್ಚಯಾತ್ಮಕ ವಿವೇಕದಿಂದ ಕಂಡುಕೊಳ್ಳಬೇಕು ಹೀಗೆ ಜ್ಞಾನ ವಿವೇಕದಿಂದ ಪರಮಾತ್ಮನನ್ನು ಗುರುತಿಸುವ ಗುಟ್ಟು ಸ್ವಲ್ಪ ಮಾತ್ರವಾಗಿದೆ ಚಂಚಲವು ನಶ್ವರವೆಂದೂ ನಿಶ್ಚಲವು ಶಾಶ್ವತವೆಂದೂ ತಿಳಿಯಬೇಕು. ಅಸಾರವೂ ಅನಿತ್ಯವೂ ಆಗಿರುವದನ್ನು ಬಿಟ್ಟು ಸಾರವೂ ನಿತ್ಯವೂ ಆಗಿರುವ ನಿಶ್ಚಲ ಪರಬ್ರಹ್ಮನಲ್ಲಿ ತದ್ರೂಪತೆಯನ್ನು ಹೊಂದ

ಬೇಕು ಜ್ಞಾನವು ವಿಜ್ಞಾನವಾಗಿ, ಪುನವು ಉನ್ಮನವಾಗಿ ವರ್ತಿಸುವಲ್ಲಿ ಆತ್ಮನಿಗೆ ಚಂಚಲತನವು ಇರಲಾರದು ಇದು ಬಾಯಿಯಿಂದ ಹೇಳುವ ಮಾತಲ್ಲ ಅನುಭವ ಪಡೆದು ಕಾಣಬೇಕು ಅಂದರೆ ಮಾತ್ರ ಸಮಾಧಾನ ವುಂಟಾಗುವದು

ಸತ್ಯಕ್ಕೆ ಸಮನಾದ ಪುಣ್ಯವಿಲ್ಲ, ಹಾಗು ಅಸತ್ಯದಂಥ ಪಾಪವಿಲ್ಲ ಸತ್ಯವೆಂದರೆ ನಿಶ್ಚಲ ಪರಬ್ರಹ್ಮ ಸ್ವರೂಪವು ಅಸತ್ಯವೆಂದರೆ ಚಂಚಲ, ಮಾಯಾ ದ್ರಶ್ಯ ಪಾಪ ನಾಶವಾದ ಮೇಲೆ ನಿಶ್ಚಲವಾದ ಪುಣ್ಯವು ಅಂದರೆ ಪರಬ್ರಹ್ಮವು ಉಳಿಯುವದು ಆ ಪರಬ್ರಹ್ಮನೊಡನೆ ಅನನ್ಯವಾಗಲು ನಾಮಾತೀತವಾಗುವದು "ನಾನು ಸ್ವತ ಸಿದ್ಧ ವಸ್ತುವಾಗಿರುವೆನು ನನಗೆ ದೇಹದ ಸಂಬಂಧವು ಏನೂ ಇರುವದಿಲ್ಲ" ಈ ಅನುಭವವು ಉಂಟಾದ ಕೂಡಲೇ ಪಾಪರಾಶಿಗಳೆಲ್ಲ ಕ್ಷಣಾರ್ಧದಲ್ಲಿ ಹುರುಪುಳಿಸಿ ಹೋಗುವವು ಬ್ರಹ್ಮಜ್ಞಾನದಿಂದ ಹಲವು ದೋಷಗಳು ತೊಳೆದು ಹೋಗುವವು ಅದರ ಹೊರತು ಅನ್ಯ ಸಾಧನಗಳಿಲ್ಲ ದೇಹವು ಮೂಲತಃ ಪಾಪಾತ್ಮಕವಾದದ್ದು ಇಂಥ ದೇಹದ ಒಳಗಿನ ರೋಗಗಳಿಗೆ ಮೇಲುಪಚಾರಗಳಿಂದ ಪ್ರಯೋಜನವಿಲ್ಲ ತೀರ್ಥಾಟನಗಳಿಂದ ದೇಹ ದಂಡಿಸಿದರೂ, ನಿಗ್ರಹದಿಂದ ಅದನ್ನು ಖಂಡಿಸಿದರೂ ವ್ಯರ್ಥವು ಅದರಂತೆ ಆ ದೇಹವನ್ನು ಹಲವು ಮೃತ್ತಿಕೆಯಿಂದ ತಿಕ್ಕಿದರೂ, ತಪ್ತ ಮುದ್ರೆಯಿಂದ ಒತ್ತಿದರೂ ಅದು ಪವಿತ್ರತೆಯನ್ನು ಹೊಂದಲಾರದು ಗೋಮಯ ಗೋಮೂತ್ರಗಳನ್ನು ಸೇವನೆ ಮಾಡಿದರೂ, ರುದ್ರಾಕ್ಷಗಳನ್ನೂ ಕಟ್ಟಿಗೆ ಮಾಲೆಗಳನ್ನು ಆ ದೇಹಕ್ಕೆ ತೊಡಕಿಸಿದರೂ, ಮೇಲಿಂದ ಮೇಲೆ ಬೇರೆ ಬೇರೆ ವೇಷ ಹಾಕಿದರೂ ಒಳಗೆ ತುಂಬಿದ ಪಾಪಗಳು ನಾಶವಾಗುವದಿಲ್ಲ ಅದಕ್ಕೆ ಆತ್ಮಜ್ಞಾನವೇ ಅವಶ್ಯವಾದದ್ದು. ಅದರಿಂದಲೇ ದೇಹಶುದ್ಧಿಯು ಆತ್ಮಜ್ಞಾನದ ಪುಣ್ಯಕ್ಕೆ ಎಣೆಯಿಲ್ಲ. ವೇದ-ಶಾಸ್ತ್ರಗಳಲ್ಲಿ ಆತ್ಮಜ್ಞಾನದ ಸತ್ಯ ಸ್ವರೂಪವನ್ನು ಹೇಳಿರುವದಲ್ಲದೆ ಅದುವೇ ಜ್ಞಾನಿಯ ರೂಪವೆಂದು ಹೇಳಿರುವದು ಆ ಜ್ಞಾನಿಯಲ್ಲಿಯೇ ಪುಣ್ಯಸಂಪತ್ತು ಅಪರಿಮಿತವಾಗಿ ಇರುವದೆಂಬದು ಅನುಭವದ ಮಾತಾಗಿರುವದು ಆತ್ಮದೃಷ್ಟಿಯಿಂದ ಅನುಭವವನ್ನು ಕಾಣಬೇಕು ಪ್ರಚೀತಿಯಿಲ್ಲದೆ ಹೋದರೆ ದುಃಖ ಶೋಕಗಳುವುಂಟಾಗುವವು

ಆದುದರಿಂದ ನಿಶ್ಚಿತ ಅನುಭವದಿಂದ ಶ್ರೀ ರಘುನಾಥನ ಕೃಪೆಯನ್ನು ಹೊಂದಿ ದುಃಖ ಶೋಕ ರಹಿತರಾಗಿ ಇರತಕ್ಕದ್ದು' ಎಂದು ಹೇಳಿದರು.

ಇತಿ ದಾಸಬೋಧೆಯ ೧೦ನೆಯ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೧೧ನೆಯ ದಶಕವು (ಭೀಮದಶಕ)

ಶ್ರೀ ರಾಮ ॥ ೧ ಸಿದ್ಧಾಂತ ನಿರೂಪಣೆ ॥ ಶ್ರೀ ಗುರುಗಳು ಶಿಷ್ಯನನ್ನು ಕುರಿತುಃ—

" ಆಕಾಶದಿಂದ ವಾಯುವುಂಟಾಗುವದೆಂದು ಅನುಭವಕ್ಕೆ ಬರುವದು ಈಗ ಆ ವಾಯುವಿನಿಂದ ಅಗ್ನಿಯು ಹೇಗೆ ಹುಟ್ಟುವದೆಂಬದನ್ನು ಚನ್ನಾಗಿ ಕೇಳು

ವಾಯುವಿನ ಘರ್ಷಣದಿಂದ ಅಗ್ನಿ ಹುಟ್ಟುವದು ಆ ವಾಯುವಿನಲ್ಲಿ ಶೀತ ಹಾಗು ಉಷ್ಣ ಹೀಗೆ ಎರಡು ಪ್ರವಾಹಗಳಿರುವವು ಶೀತ ಪ್ರವಾಹದಿಂದ ಶೀತಲ ತೇಜವೂ ಆ ಶೀತಲ ತೇಜದಿಂದ ಶೀತಲ ಜಲವೂ ನಿರ್ಮಾಣವಾದವು ನೀರಿನಿಂದ ಬೀಜ ರೂಪ ಜಗತ್ತು, ಮತ್ತು ಅನಂತ ಬೀಜಗಳಿಂದ ಸೃಷ್ಟಿಯು ಸಹಜವಾಗಿ ಹುಟ್ಟಿದವು ಮೂಲ ಮಾಯೆಯಲ್ಲಿ ಕಲ್ಪನೆಯೇ ಸೃಷ್ಟಿ ರೂಪವಾಗಿರುವದು ಆ ಮೂಲ ಮಾಯೆಯೇ ಆದಿ ಸಂಕಲ್ಪವು ಆ ಆದಿ ಸಂಕಲ್ಪದಿಂದ ಅಂದರೆ ಮೂಲ ಮಾಯೆಯಿಂದ ತ್ರಿಗುಣಾತ್ಮಕವಾದ ಗುಣಮಾಯೆಯುದಿಸಿತು ಮೂಲ ಮಾಯೆಯ ಚಂಚಲ ಕಲ್ಪನೆಗಳೇ ಬ್ರಹ್ಮನಲ್ಲಿಯ ಅಷ್ಟಧಾ ಪ್ರಕೃತಿಯ ಮೂಲವಾಗಿರುವದು ಈ ಅಷ್ಟಧಾ ಪ್ರಕೃತಿಯು ಕಲ್ಪನೆಗಳ ರೂಪವೇ ಆಗಿರುವದು ಮೂಲಮಾಯೆಯಲ್ಲಿ ಮೊದಲಿನಿಂದಲೂ ಅಷ್ಟಧಾ ಪ್ರಕೃತಿಯಿದೆ

ಸತ್ವ, ರಜ, ತಮ ಈ ಮೂರು ಗುಣಗಳು ಹಾಗು ಪಂಚಭೂತಗಳು ಕೂಡಿ ಅಷ್ಟಧಾ ಪ್ರಕೃತಿಯಾಗಿರುವದು ಈ ಅಷ್ಟಧಾ ಪ್ರಕೃತಿಯು ಮೊದಲು ಮೂಲ ಮಾಯೆಯಲ್ಲಿ ಕಲ್ಪನಾರೂಪವಾಗಿತ್ತು ಅದೇ ಬೀಜವು ಬೆಳೆ ಬೆಳೆಯುತ್ತ ಸೂಕ್ಷ್ಮದಲ್ಲಿಂದ ಸ್ಥೂಲದಲ್ಲಿ ಬಂದು ಕೊನೆಗೆ ಜಡ ಸೃಷ್ಟಿ ರೂಪವಾಗಿ ಪರಿಣಮಿಸಿತು ಮೂಲದಲ್ಲಿ ಕಲ್ಪನಾ ರೂಪವಾದ್ದರಿಂದ ಅದು ಮೂಲಮಾಯೆಯೆನ್ನಿಸಿತು ತ್ರಿಗುಣ ರೂಪವಾದುದರಿಂದ ಅದೇ ಗುಣಮಾಯೆಯಾಯಿತು ಮತ್ತು ಜಡ ಸೃಷ್ಟಿ ರೂಪಕ್ಕೆ

ಬಂದಿತೆಂದು ಅದೇ ಅವಿದ್ಯಾ ಮಾಯೆಯೆನ್ನಿಸಿತು, ಈ ಅವಿದ್ಯಾ ಮಾಯೆ ಯಿಂದಲೇ ಮುಂದೆ ಜಾರಜ, ಅಂಡಜ, ಸ್ವೇದಜ ಹಾಗು ಉದ್ಭಿಜ್ಜ ಗಳೆಂಬ ನಾಲ್ಕು ಬಗೆಯ ಜೀವ ಕೋಟಿಗಳೂ, ಪರಾ, ಪಶ್ಯಂತಿ ಮಧ್ಯಮಾ ಹಾಗು ವೈಖರಿಗಳೆಂಬ ನಾಲ್ಕು ವಾಣಿಗಳೂ ಉಂಟಾದವು ಮುಂದೆ ಇವೆಲ್ಲ ವಿಸ್ತೃತವಾಗಿ ಅನಂತ ಯೋನಿಗಳು ಮತ್ತು ಅದರಲ್ಲಿ ಅನಂತ ಜೀವಿಗಳು ಪ್ರಕಟವಾದವು ಇಂತು ಇದು ಸೃಷ್ಟಿಯ ರಚ ನೆಯು

ಇನ್ನು ಸೃಷ್ಟಿಯ ಸಂಹಾರ ಕ್ರಮವನ್ನು ಕೇಳುಃ—

ಹಿಂದಿನ ದಶಕದಲ್ಲಿ ಹೇಳಿದ ಪ್ರಳಯದ ವರ್ಣನೆಯಲ್ಲಿ ಸೃಷ್ಟಿಯ ಸಂಹರಣೆಯ ವಿಷಯವೆಲ್ಲ ಬಂದಿದೆ ಆದರೂ ಈಗ ಮತ್ತೆ ಸಂಕ್ಷಿಪ್ತವಾಗಿ ಹೇಳುವೆವು

'ಒಂದು ನೂರು ವರುಷಗಳ ವರೆಗೆ ಮಳೆ ಬೀಳದೆ ಹೋಗಲು ಜೀವ ಸೃಷ್ಟಿಯೆಲ್ಲ ಒಟ್ಟಿಸಿ ಹೋಗುವದು ಇದು ಕಲ್ಪಾಂತದಲ್ಲಿಯ ಸಂಗತಿಯೆಂದು ಶಾಸ್ತ್ರದಲ್ಲಿ ಹೇಳಿದೆ ಮುಂದೆ ಸೂರ್ಯನು ಹನ್ನರಡು ಕಲೆಗಳಿಂದ ಕೂಡುವನು ಆಗ ಪೃಥ್ವಿಯ ರಕ್ಷಣೆಯಾಗುವದು ಬಳಿಕ ಅದು ಜಲದಲ್ಲಿ ವಿಲೀನವಾಗುವದು ಮುಂದೆ ಆ ಜಲವು ಅಗ್ನಿಯಲ್ಲಿ ಅಗ್ನಿಯು ವಾಯುವಿನಲ್ಲಿ, ವಾಯುವು ನಿರಾಕಾರವಾದ ಆಕಾಶದಲ್ಲಿ ವಿಲೀನವಾಗುತ್ತ ಸರ್ವ ಸೃಷ್ಟಿಯ ಸಂಹಾರವಾಗುವದು ಮತ್ತು ಅದ ರಂತೆ ಮಾಯೆಯು ಲಯವಾಗಿ ಸ್ವರೂಪವೇ ಉಳಿಯುವದು ಜೀವ— ಶಿವ, ಪಿಂಡ-ಬ್ರಹ್ಮಾಂಡ, ಮಾಯಾ-ಅವಿದ್ಯಾ ಇವೆಲ್ಲ ಮೂಲ ಮಾಯೆ ಯಿಂದ ಉತ್ಪನ್ನವಾಗಿದ್ದರೂ ಇವೆಲ್ಲವುಗಳ ಲಯವಾಗಿ ಸ್ವರೂಪವೇ ಉಳಿಯುವದು ಈ ಪ್ರಳಯಕ್ಕೆ ವಿವೇಕ ಪ್ರಳಯವೆಂದು ಹೆಸರು ಯಾಕೆಂದರೆ ಇದು ವಿವೇಕದಿಂದ ಧ್ಯಾನಕ್ಕೆ ಬರುವದು ಆದಕ್ಕೆಂತಲೇ ಆ ಹೆಸರು ಬಂದಿದೆ ಇದೆಲ್ಲವೂ ವಿವೇಕಿ ಸಾಧಕನಿಗೇ ತಿಳಿಯು ವದು

ಸರ್ವ ಸೃಷ್ಟಿಯನ್ನೆಲ್ಲ ಶೋಧಿಸಲು ಚಂಚಲ ಹಾಗು ನಿಶ್ಚಲ ಹೀಗೆ ಎರಡೇ ಪ್ರಕಾರ ಇರುವವು ಇವನ್ನೇ ಕ್ರಮವಾಗಿ ಮಾಯೆ ಬ್ರಹ್ಮ ರೆಂದು ತಿಳಿಯಬೇಕು

ಚಂಚಲ ಸೃಷ್ಟಿಕರ್ತನು ಚಂಚಲ ರೂಪಿಯಾದ ಚಂಚಲ ಅಂದರೆ ಮೂಲ ಮಾಯೆ ( ಅಂತರಾತ್ಮ ) ಈ ಕರ್ತಾರನು ಎಲ್ಲ ಶರೀರಗಳಲ್ಲಿ ಇರುವನು, ಹಾಗು ಎಲ್ಲ ಕರ್ತೃತ್ವವು ಇವನದೇ ಆಗಿರುವದು ಇಂದ್ರಿಯ ದ್ವಾರದಿಂದ ಇವನು ಅನಂತ ಶರೀರಗಳನ್ನು ನಡೆಯಿಸುವನು ಆದರೆ ಇಷ್ಟೆಲ್ಲವನ್ನು ಮಾಡಿದರೂ ಆತನು ಅಕರ್ತನೆಂದೇ ಎನ್ನಿಸುವನು ಬಡವ ಬಲ್ಲಿದ ಬ್ರಹ್ಮಾದಿಕರೆಲ್ಲರ ದೇಹಗಳ ಚಾಲಕತ್ವವು ಇವನದೇ ಆಗಿರುವದು ಇವನಿಗೇ ಪರಮಾತ್ಮ , ಸರ್ವಕರ್ತ ಎಂದು ಹೆಸರು ಆದರೆ ವಿವೇಕ ಪ್ರಳಯ ಕಾಲದಲ್ಲಿ ಇವಾವವೂ ಉಳಿಯುವದಿಲ್ಲ ನಾಯಿ ನರಿ ಮೊದಲಾದ ನೀಚ ಯೋನಿಗಳ ಶರೀರದಲ್ಲಿಯೂ ಕೂಡ ಇವನೇ ಚಾಲಕನಾಗಿರುವನು ಸಾಮಾನ್ಯರು ದೇಹವನ್ನು ಕಾಣುವರು ಆದೇ ವಿವೇಕಿಯಾದ ಮಾನವನು ದೇಹಕ್ಕೆ ಚಾಲಕನಾದ ಅಂತರಾತ್ಮನನ್ನು ತಿಳಿದು ಕೊಳ್ಳುವನು ಆ ಅಂತರಾತ್ಮನು ಎಲ್ಲ ದೇಹಗಳಲ್ಲಿ ಒಬ್ಬನೇ ಇರುವದರಿಂದ ವಿವೇಕಿಯು ಎಲ್ಲವುಗಳಲ್ಲಿ ಸಮದರ್ಶಿತ ಭಾವನೆಯುಳ್ಳವನಾಗಿರುವನು ವಿವೇಕವುಳ್ಳ ಪಂಡಿತನು ವಿದ್ಯಾವಿನಯಾನ್ವಿತನಾದ ಬ್ರಾಹ್ಮಣ, ಆಕಳು, ಆನೆ, ನಾಯಿ ಚಾಂಡಾಲ ಇತ್ಯಾದಿಗಳೆಲ್ಲರ ದೇಹಗಳು ಭಿನ್ನ ಭಿನ್ನವಾಗಿದ್ದರೂ ಎಲ್ಲ ದೇಹಗಳಲ್ಲಿಯೂ ಅಂತರಾತ್ಮನು ಒಬ್ಬನೇ ಇರುವನೆಂಬ ಜ್ಞಾನವುಳ್ಳವನಾಗಿರುವನು ಈ ಜ್ಞಾನ ರೂಪವಾದ ಅಂತರಾತ್ಮನೇ ಎಲ್ಲ ಪ್ರಾಣಿಗಳಲ್ಲಿ ವರ್ತಿಸುವನಾದುದರಿಂದ ಅವನಿಗೆ ಜಗಜ್ಯೋತಿ ಎಂದೆನ್ನುವರು

ಈ ಅಂತರಾತ್ಮನು ಜ್ಞಾನೇಂದ್ರಿಯ, ಕರ್ಮೇಂದ್ರಿಯ ಕ್ರಿಯೆಗಳಿಗೆಲ್ಲ ಕರ್ತಾರನಾಗಿರುವನ ಇವನು ಅತ್ಯಂತ ಸೂಕ್ಷ್ಮನಾಗಿದ್ದರೂ ಸ್ಥೂಲ ದೇಹದ ರಕ್ಷಣೆ ಮಾಡುವನು ಸುಖ ದುಃಖಗಳ ಅರಿವು ಇವನಿಗೇ ಇರುವದು ಅಂತರ ಸಾಕ್ಷಿ ಹಾಗು ಅಂತರಾತ್ಮನೆಂದರೆ ಇವನೇ ಇನ್ನೂ ಇವನಿಗಿರುವ ಹೆಸರುಗಳೆಂದರೆ— ಆತ್ಮಾ , ಅಂತರಾತ್ಮಾ ವಿಶ್ವಾಸ

ಚೈತನ್ಯ ಸರ್ವಾತ್ಮಾ, ಸೂಕ್ಷ್ಮಾತ್ಮಾ, ಜೀವ, ಶಿವ, ಪರಮಾತ್ಮಾ, ದ್ರಷ್ಟಾ, ಸಾಕ್ಷಿ, ಸತ್ತಾರೂಪ ಇವೆಲ್ಲವು. ವಿಕಾರಾತ್ಮಕ ದೇಹದಲ್ಲಿ ವಿಕಾರವನ್ನುಂಟು ಮಾಡುವನೆಂಬದಾಗಿ ಇವನಿಗೆ ಮಂದ ಮತಿಗಳು ಪರಮಾತ್ಮ ವಸ್ತು ಎನ್ನುವರು

ಇನ್ನು ಚಂಚಲತೆಯಲ್ಲಿ ಎಲ್ಲವನ್ನು ಅವು ಬೇರೆಯಾಗಿದ್ದರೂ ಒಂದೇ ಎಂದು ತಿಳಿಯುವ ಏಕಾಕಾರ ವೃತ್ತಿಯು ಇದ್ದು ಅದು ಮಾಯಾ ಸ್ಥಿತಿಯುಳ್ಳದ್ದಾಗಿರುವದು ಚಂಚಲ ಮಾಯೆಯು ಮಾಯಕ ಹಾಗು ವಿವಿಧವಾಗಿದುವದು ನಿಶ್ಚಳ ಪರಬ್ರಹ್ಮನು ಸತ್ಯನು ಹಾಗು ಒಬ್ಬನೇ ಇರುವನು ಇದೇ ನಿತ್ಯಾನಿತ್ಯ ವಿವೇಕವು ಅರಿವುಳ್ಳ ಜೀವವೇ ಪ್ರಾಣವು ಅರಿವನ್ನು ತಿಳಿಯದ ಜೀವವೇ ಅಜ್ಞಾನವು ಜನ್ಮ ತಾಳುವ ಜೀವವೇ ವಾನನಾಕ್ಮಕವು ಮತ್ತು ಬ್ರಹ್ಮನೊಡನೆ ಐಕ್ಯತೆ ಹೊಂದಿದ ಜೀವವೇ ಬ್ರಹ್ಮಾಂಶವು ಈ ಪ್ರಕಾರ ಜೀವನ ನಾಲ್ಕು ಪ್ರಕಾರಗಳು ಇವೆಲ್ಲವು ಚಂಚಲದಲ್ಲಿಯವಾದುದರಿಂದ ಇವು ನಾಶವಂತವಾಗಿರುವವು ನಿಶ್ಚಲ ಪರಬ್ರಹ್ಮನು ಮಾತ್ರ ತುದಿಮೊದಲು ನಿಶ್ಚಲನಾಗಿಯೇ ಇರುವನು ಅಂದರೆ ಅವನು ಸತ್ಯನೂ ಅಹುದು, ಶಾಶ್ವತನೂ ಅಹುದು ಪರಬ್ರಹ್ಮ ವಸ್ತುವು ಆದಿ—ಮಧ್ಯ—ಅಂತ್ಯಗಳಲ್ಲಿ ಸಮಾನ ಸ್ಥಿತಿಯುಳ್ಳದ್ದು, ವಿಕಾರವಿಲ್ಲದ್ದು, ಗುಣ ರಹಿತವು, ನಿರಂಜನ ಹಾಗು ನಿಷ್ಪ್ರಪಂಚವುಳ್ಳದಾಗಿರುವದು ಚಂಚಲತೆಯ ಉಪಾಧಿಯನ್ನು ವಿವೇಕದಿಂದ ಹಿಮ್ಮೆಟ್ಟಲು ಜೀವ-ಶಿವರ-ಐಕ್ಯತೆ ಒದಗುವದು ಆದರೆ ಉಪಾಧಿಯೇ ಇಲ್ಲವೆಂದ ಮೇಲೆ ಅದು ಹಿಮ್ಮೆಟ್ಟುವದೆಂದು ಹೇಗೆ ಹೇಽಹುವಧು? ಇದಿರಲಿ ಇನ್ನು ಅರಿವು ಇದೇ ಜ್ಞಾನವು ಮತ್ತು ಜ್ಞಾನವುಂಟಾಗುವದೇ ವಿಜ್ಞಾನವು ಮನಕ್ಕೆ ಉನ್ಮನದ ಸ್ಥಿತಿಯು ತಿಳಿಯುವದಿಲ್ಲ ಅದರಂತೆ ಜ್ಞಾನಕ್ಕೆ ವಿಜ್ಞಾನವು ಅಂದರೆ ಸ್ವರೂಪಾನುಭವವು ತಿಳಿಯುವದಿಲ್ಲ, ವೃತ್ತಿಯು ನಿವೃತ್ತಿಯನ್ನು ತಿಳಿಯುವದಿಲ್ಲ ಅದರಂತೆ ಚಂಚಲಕ್ಕೆ ನಿರ್ಗುಣ ಬ್ರಹ್ಮನು ಗೊತ್ತಾಗುವದಿಲ್ಲ ಆದಕ್ಕೆಂತಲೇ ಸಂತರು ಗುಣಾತೀತ ಪರಬ್ರಹ್ಮನನ್ನು ವಿವೇಕದಿಂದ ತಿಳಿದು ಕೊಳ್ಳತಕ್ಕದ್ದು ಎಂದು ಹೇಳುವರು

ಇನ್ನು ಶ್ರವಣಕ್ಕಿಂತಲೂ ಮನನವು ಶ್ರೇಷ್ಠವಾದದ್ದು ಯಾಕೆಂದರೆ– ಮನನದಿಂದ ಸಾರ ಮತ್ತು ಅಸಾರಗಳೆರಡೂದರ ವಿವೇಕ ಉದಿಸುವದು

ಇಲ್ಲಿ ಸಾರವೆಂದರೆ ಬ್ರಹ್ಮನೆಂದೂ ಅಸಾರವೆಂದರೆ ಚಂಚಲವೆಂದೂ ಅರ್ಥವು ಸಾರವಾದಂಥ ಬ್ರಹ್ಮನ ನಿದಿಧ್ಯಾಸದಿಂದ ಸಂಗರಹಿತ ವಸ್ತುವಿನ ಸಾಕ್ಷಾತ್ಕಾರವುಂಟಾಗುವದು ನಿರ್ಗುಣನಲ್ಲಿ ಅನನ್ಯತೆಯನ್ನಿರಿಸುವದೇ ಸಾಯುಜ್ಯ ಮುಕ್ತಿಯು ವಸ್ತುವು ಲಕ್ಷ್ಯಾಂಶವು, ಚಂಚಲವು, ವಾಚ್ಯಾಂಶವು ಅಲಕ್ಷ್ಯ ವಸ್ತುವಿನಲ್ಲಿ ಲಕ್ಷ್ಯವನ್ನಿರಿಸಲು ಪೂರ್ವ ಪಕ್ಷವಿಲ್ಲದೆ ಸಿದ್ಧಾಂತವು ಸ್ಥಾಪಿತವಾಗುವದು ಅಂದಬಳಿಕ ಅಪ್ರತ್ಯಕ್ಷವಿರುವ ಪರಬ್ರಹ್ಮನಿಗಾಗಿ ಪ್ರತ್ಯಕ್ಷತೆಯು ಅಂದರೆ ನೇತ್ರಾದಿ ಇಂದ್ರಿಯಗಳ ಕ್ರಿಯಗಳು ಆವಶ್ಯಕವಿಲ್ಲ ಮಾಯಿಕ ಉಪಾಧಿಯಿದ್ದರೂ ಅದು ಅಲ್ಲಿದ್ದಲ್ಲಿಯೇ ಇದ್ದು ಸ್ವರೂಪಾಕಾರತೆಯನ್ನು ಹೊಂದುವದೇ ಸಹಜ ಸಮಾಧಿಯಾಗಿರುವದು ಈ ನಿಶ್ಚಯವು ಶ್ರವಣಾಭ್ಯಾಸದಿಂದ ಸ್ಥಿರತೆ ಗೊಳ್ಳುತ್ತದೆ "ಎಂದರು

ಶ್ರೀ ರಾಮ ॥ ೨ ಚತ್ವಾರದೇವ ನಿರೂಪಣೆ ॥ ಶ್ರೀ ಗುರುಗಳು ಶಿಷ್ಯನನ್ನು ಕುರಿತು –''ಬ್ರಹ್ಮ ಮಾಯೆಯರಲ್ಲಿ ಬ್ರಹ್ಮನು ನಿಶ್ಚಲನು, ಮಾಯೆಯು ಚಂಚಲಳು ಜಗತ್ತೆಲ್ಲವೂ ಚಂಚಲದಲ್ಲಿ ಸೇರಿಕೊಂಡಿದೆ ನಿಶ್ಚಲವು ಎಲ್ಲವೂ ನಿಶ್ಚಲವಾಗಿದೆ ನಿಶ್ಚಲ ಬ್ರಹ್ಮನಲ್ಲಿ ನಿಶ್ಚಯಾತ್ಮಕವಾಗಿ ಸ್ಥಿರಗೊಂಡವನು ಅಂದರೆ ಬ್ರಹ್ಮಸ್ವರೂಪ ಹೊಂದಿದವನು ಲಕ್ಷ ಜನರಲ್ಲಿ ಒಬ್ಬನು ಮಾತ್ರ ದೊರೆಯುವದುಂಟು ಬ್ರಹ್ಮಜ್ಞಾನವನ್ನು ಬಹುಜನರು ಹೇಳುವರು ಆದರೆ ಅವರು ಚಂಚಲದಲ್ಲಿ ವಾಸನೆಯನ್ನು ತೊಡಕಿಸಿಕೊಂಡಿರುವರು ಚಂಚಲ ಮಾಯೆಯ ಹೊಡೆತಕ್ಕೆ ಸಿಕ್ಕು ಪಾರಾಗುವವರೇ ವಿರಳ, ಚಂಚಲ ಮೂಲ ಮಾಯೆಯಿಂದ ತ್ರಿಗುಣ ಪಂಚಭೂತಾತ್ಮಕ ಜಗತ್ತು ಮತ್ತು ಅದರಲ್ಲಿ ಅನಂತ ಜೀವಗಳೂ ಹುಟ್ಟಿದವು ಆ ಚಂಚಲ ಮಾಯೆಯಲ್ಲಿಯೇ ಬೆಳೆದ ಜೀವನ ಎಲ್ಲ ವಾಸನೆಗಳು ಮಾಯೆಯಲ್ಲಿಯೇ ಇರುವವು ಪೃಥ್ವಿಯ ಮೇಲಿನ ಜೀವಗಳೆಲ್ಲ ಚಂಚಲಮಾಯೆಯಲ್ಲಿಯವಾಗಿದ್ದುದರಿಂದ ಅವುಗಳ ಕರ್ಮಗಳೂ ಸಹ ಮಾಯಿಕವಾಗಿಯೇ ಇರುವವು ತಮ್ಮ ವಿವೇಕ ಬಲದಿಂದ ಚಂಚಲವನ್ನು ತ್ಯಾಗಮಾಡಿ

ನಿಶ್ಚಲ ಬ್ರಹ್ಮನಲ್ಲಿ ಸೇರ್ಪಡೆಯಾಗುವ ಮಹಾಪುರುಷರು ದುರ್ಮಿಳವಾಗಿ ರುವರು ಚಂಚಲವು ನಿಶ್ಚಯವಾಗುವದಿಲ್ಲ ಹಾಗು ನಿಶ್ಚಲವು ಅಂದರೆ ಬ್ರಹ್ಮನು ಮಾಯೆಯ ಜಾಲದಲ್ಲಿ ಸಿಕ್ಕಲಾರನು ಚಂಚಲ ಮತ್ತು ನಿಶ್ಚಲ ಗಳ ವಿವೇಕವನ್ನು ನಿತ್ಯವಾಗಿ ಜಾಗೃತವಾಗಿರಿಸಿಕೊಂಡರೆ ಏನಾದರೂ ಜ್ಞಾನವುದಿಸುವದು ತೀರ ಸ್ವಲ್ಪ ಮಟ್ಟಿಗೆ ಮಾತ್ರ ತಿಳಿಯಿತೆಂದರೂ ಕೂಡ ಸ್ವಲ್ಪಾದರೂ ಜ್ಞಾನವು ಹುಟ್ಟುವದು ಆದರೆ ಸಂಶಯ, ಅನುಮಾನ ಹಾಗು ಭ್ರಮೆ ಈ ಚಂಚಲತೆಯ ಧರ್ಮಗಳು ಮನಸಿನ ಮೇಲೆ ತಮ್ಮ ಸತ್ತೆಯನ್ನು ನಡೆಯಿಸಲು ಹೋಗಿ ಶ್ರಮ ಮಾತ್ರ ಹೊಂದುವವು ನಿಶ್ಚ ಲದಲ್ಲಿ ಮಾತ್ರ ಹೀಗಾಗುವದಿಲ್ಲ ಆದರೆ ಅದು ತಿಳಿಯುವದು ಮಾತ್ರ ಕಠಿಣವು ಸಗುಣ ಸಾಕಾರಗಳೆಲ್ಲವೂ ನಶ್ವರವಾದವುಗಳು ಆದುದರಿಂದ ಅವುಗಳಲ್ಲಿ ಸಣ್ಣ ದೊಡ್ಡವುಗಳೆಂದು ವರ್ಗೀಕರಿಸ ವದು ಉಪಯೋಗದ್ದಲ್ಲ ಎಲ್ಲವೂ ಮಾಯೆಯ ವಿಸ್ತಾರವೇ ಆಗಿರುವದು ಈ ಬ್ರಹ್ಮಾಂಡವು ಅಷ್ಟ ಧಾಪ್ರಕೃತಿಯ ವಿಸ್ತಾರವಾಗಿದ್ದು ಚಿತ್ರವಿಚಿತ್ರ ಅನಂತ ರೂಪಗಳು ಆ ಪ್ರಕೃ ತಿಯ ವಿಕಾರವನ್ನು ಹೊಂದಿರುವವು ಅನಂತ ವಿಕಾರಹೊಂದಿ ಅದರಲ್ಲಿ ಹಲವು ಬಗೆಯ ಚಮತ್ಕೃತಿ-ಜನಕ ಸಣ್ಣ ದೊಡ್ಡ ಪ್ರಾಣಿಗಳು ನಿರ್ಮಾ ಣವಾಗಿರುತ್ತವೆ ಮೂಲ ಮಾಯೆಯೇ ವಿಕಾರಯುತವಾಗಿದೆ, ಅದು ಮೂಲದಲ್ಲಿ ಸೂಕ್ಷ್ಮವಿದ್ದರೂ ಏನೂ ಇರದೆ ಯಾವದೋ ಒಂದು ಅದ್ಭು ತವಾದ ಭವ್ಯರೂಪವಾಗಿ ಸ್ಥೂಲ ಜಡದ ವರೆಗೆ ವಿಸ್ತೃತವಾಗಿರುತ್ತದೆ ಮನುಷ್ಯ ಯೋನಿಯಲ್ಲಾದರೂ ಅನಂತ ಶರೀರಗಳುಂಟಾದವು ಮತ್ತು ಭಾಷಾಪರತ್ವದಿಂದ ಅದಕ್ಕೆ ಅನೇಕ ಹೆಸರುಗಳು ದೊರಕಿದವು ಬಳಿಕ ಅವುಗಳಲ್ಲಿ ಅನೇಕ ಬಗೆಯ ರೀತಿಗಳು, ಅನೇಕ ಬಗೆಯ ಕಲ್ಪನೆಯ ಪ್ರಕಾ ರಗಳು, ಅನೇಕ ಆಚಾರಗಳು ಉತ್ಪನ್ನವಾದವು ಜನರು ತಮ ತಮಗೆ ಸರಿಗಂಡ ರೀತಿಯಿಂದ ವರ್ತಿಸಹತ್ತಿದರು ಅಷ್ಟಧಾಪ್ರಕೃತಿಯಿಂದಲೇ ಎಲ್ಲ ಜನರು ಜನ್ಮ ತಾಳಿದರು ಆದರೆ ಅವರ ವೃತ್ತಿಗಳು ಹಲವು ಬಗೆ ಗಳಾಗಿ ಪರಿವರ್ತಿಸಿದವು ಹಲವು ಮತಗಳು, ಹಲವು ವೇದ ವಿರುದ್ಧ [ಪಾಖಂಡ] ಮತಗಳು, ಎಷ್ಟೋ ಸ್ವಚ್ಛಂದ ಮತಗಳು ತುಂಬಿದವು ಜನರೆಲ್ಲ ಪ್ರವಾಹದ ಓಘದಂತೆ ಮತ ಪ್ರವಾಹಗುಂಟ ಹರಿಯಹತ್ತಿದರು

ಎಲ್ಲರಲ್ಲಿ ಮತೈಕ್ಯವಾಗಲಿಲ್ಲವಾದ್ದರಿಂದ ಅನ್ಯೋನ್ಯರಲ್ಲಿ ಪಿತುಷ್ಪತಿ ಯುಂಟಾಗಿ ಎಲ್ಲೆಡೆಯಲ್ಲಿ ಅಲ್ಲೋಲಕಲ್ಲೋಲವುಂಟಾಯಿತು. ಮತ ಮತಗಳಲ್ಲಿ ವಿರೋಧ ಭಾವನೆಗಳು ಹೆಚ್ಚಿದವು ಒಬ್ಬನಿಗಿಂತಲೂ ಒಬ್ಬನು ದೊಡ್ಡವನೆಂದೆಣಿಸಿ ಅದೆಷ್ಟೋ ಮಂದಾಗ ಸಿದ್ಧರಾಗಿ ಮುಂದೆ ಬಂದರು. ಇನ್ನು ಮುಂದೆಇದರಲ್ಲಿಯ ಸತ್ಯಾಸತ್ಯತೆಯನ್ನುಹೇಗೆತಿಳಿಯುವದು?ಶಕ್ಯವಿರ ಲಿಲ್ಲ ಅವರಲ್ಲಿ ಬೇರೆ ಬೇರೆ ನಡುವಳಿಕೆಗಳು ರೂಢಿಗೆ ಬಂದವು ಅವ ರಲ್ಲಿ ಎಷ್ಟೋ ಜನರು ಸ್ವಾರ್ಥಾಭಿಲಾಷಿಗಳು ಹೊರಟರು ಸ್ವಪಕ್ಷಾಭಿ ಮಾನವು ಮುಂದುವರಿದು ಬರಹತ್ತಿತು ಹಲವು ದೇವ-ದೇವತೆಗಳು, ಹಾಗು ಅವುಗಳ ಅನೇಕ ವಿಧದ ಉಪಾಸನ ಪ್ರಕಾರಗಳು ಹೊರಟು ದೇವ ಹಾಗು ಭೂತಗಳ ಉಪಾಸನೆಗಳು ಒಂದರಲ್ಲೊಂದು ಕೂಡಿಕೊಂಡು ಬೆಳೆ ಯುತ್ತ ಹೋದವು ಇದರಿಂದ ಮುಖ್ಯ ದೇವನು ಯಾರೆಂಬುದು ತಿಳಿಯ ದಾಯಿತು. ಒಬ್ಬನ ಮತವು ಇನ್ನೊಬ್ಬನ ಮತಕ್ಕೆ ಹೊಂದಿಕೆಯಾಗದಾ ಯಿತು ಆದರಿಂದ ಅನ್ಯೋನ್ಯರಲ್ಲಿ ಸಹಕಾರಿತೆಯಿಲ್ಲದಾಯಿತು. ಸಾರಾ ಸಾರ ವಿಚಾರದಿಂದ ಯಾರೂ ನೋಡದಾದರು. ಸಣ್ಣ-ದೊಡ್ಡವರಲ್ಲಿಯು ಹೆಚ್ಚು ಕಡಿಮೆ ತಿಳಿಯದಾಯಿತು ಈ ಪ್ರಕಾರದಿಂದ ನಿಜವಾದ ವಿಚಾ ರಗಳು ಲೋಪವಾದವು ಹಲವು ದೇವರು ಹಲವು ಶಾಸ್ತ್ರಗಳು ಇವುಗಳ ಪ್ರದರ್ಶನವೇ ಉಂಟಾಯಿತು ಜನರೆಲ್ಲ ಇಷ್ಟ ಕಾಮನೆಯ ಪೂರ್ತಿಗಾಗಿ ವ್ರತಗಳನ್ನು ಮಾಡಹತ್ತಿದರು ಇಂತು ಸತ್ಯಾಸತ್ಯತೆಗಳ ನಿರ್ಣಯವಾಗದೆ ಹೋಗಿ ಸಮಾಜವೆಲ್ಲ ನಾಶಹೊಂದಿ ಹೋಯಿತು ಸಮಾಜಕ್ಕೆ ನಾಯ ಕನೇ ಇಲ್ಲದಾಯಿತು ಮತ್ತು ಸಮಾಜವನ್ನು ನಡೆಯಿಸಿಕೊಂಡು ಹೋಗುವ ನಿಯಂತ್ರಕನೇ ಇಲ್ಲದಾಯಿತು ಹಲವು ಮತಗಳ ಗೊಂದಲ ದಲ್ಲಿ ಯಾರೂ ಯಾರನ್ನೂ ಕೇಳದ ಸ್ಥಿತಿಯುಂಟಾಯಿತು ತಾನು ಸ್ವೀಕ ರಿಸಿದ ಮತವೇ ಪ್ರಾಧಾನ್ಯವೆಂದು ತಿಳಿಯಹತ್ತಿದರು ಅಸತ್ಯದ ಅಭಿಮಾನ ಹಿಡಿಯುವದರಿಂದ ಸಮಾಜದ ನಾಶವಾಗುವದೆಂದೇ ಅರಿತು ಜ್ಞಾನವುಳ್ಳ ವರು ಸತ್ಯಶೋಧನೆಯಲ್ಲಿರುವರು ಜನರ ನಡೆವಳಿಯಲ್ಲಿಯ ಪ್ರಕಾರ ಗಳೆಲ್ಲ ತಿಳಿದವರಿಗೆ ಅಂಗೈಯೊಳಗಿನ ನೆಲ್ಲಿಯ ಕಾಯಿಯು ತೋರುವಂತೆ ಸ್ಪಷ್ಟವಾಗಿಯೇ ತೋರುವದು ಜನರು ಯಾವ ದೇವನನ್ನು ಭಜಿಸುವರು?

ಹಾಗು ಯಾವ ಮಾರ್ಗದಿಂದ ನಡೆಯುವರು? ಇದನ್ನು ಸಾವಧರಾಗಿ ಕೇಳತಕ್ಕದ್ದು ಧಾತು, ಪಾಷಾಣ, ಮೃತ್ತಿಕೆಗಳಿಂದ ಅನೇಕ ಮೂರ್ತಿಗಳನ್ನು ಮಾಡಿ 'ಇವನೇ ದೇವನು' ಎಂಬ ಭಾವನೆಯಿಂದ ಪೂಜೆ-ಪುನಸ್ಕಾರಗಳನ್ನು ಮಾಡಬೇಕೆಂಬುವದು ಬಹು ಜನ ಸಮಾಜದ ಮಾರ್ಗವಾಗಿದೆ ಅದೆಷ್ಟೋ ಕೆಲವರು ರಾಮ-ಕೃಷ್ಣ ಮೊದಲಾದ ದೇವರುಗಳ ಅವತಾರ ಚರಿತ್ರೆಗಳನ್ನು ಕೇಳಿ ಆ ಆ ಅವತಾರಗಳ ಜಪ-ಧ್ಯಾನ, ಪೂಜನ ಅರ್ಚನಗಳನ್ನು ಮಾಡುತ್ತಾರೆ ಮತ್ತೂ ಕೆಲವರು ಜನರ ಅಂತರಾತ್ಮನು ಸರ್ವಸಾಕ್ಷಿಯೂ ಜ್ಞಾನಘನನೂ ಆಗಿರುವ ದೇವನೆಂದು ಒಪ್ಪಿಕೊಳ್ಳುತ್ತಾರೆ ಕೆಲವರು ನಿರ್ಮಲನೂ ನಿತ್ಯನೂ ನಿಶ್ಚಲನೂ ಆಗಿರುವ ಪರಬ್ರಹ್ಮ ವಸ್ತುವಿನ ವಸ್ತುವಾಗಿ ಅನನ್ಯ ಚಿಂತನೆ ಮಾಡುವರು ತಾತ್ಪರ್ಯವೆಂದರೆ—

ಪ್ರತಿಮಾಪೂಜೆ, ಅವತಾರೋಪಾಸನ, ಅಂತರಾತ್ಮ ಭಜನ ಮತ್ತು ನಿಶ್ಚಲ ಬ್ರಹ್ಮೋಪಾಸನೆ ಹೀಗೆ ನಾಲ್ಕು ಪ್ರಕಾರಗಳಿಂದ ಜನರು ದೇವಪೂಜೆ ಮಾಡುವರು ಸೃಷ್ಟಿಯಲ್ಲಿಯ ಭಿನ್ನ ಭಿನ್ನ ಸ್ವಭಾವವುಳ್ಳ ಎಲ್ಲ ಜನರು ಮಾಡುವ ಉಪಾಸನೆಯು ಈ ಮೇಲಿನ ವರ್ಗಗಳಲ್ಲಿ ಅಂತರ್ಭಾವವಾಗುತ್ತದೆ ಈ ಎಲ್ಲ ಜನರು ಪುನ 'ನಾವು ಒಬ್ಬನೇ ದೇವನ ಪೂಜೆ ಮಾಡುವೆವು' ಎಂದೆನ್ನುವರು ಮತ್ತು ಇದರ ಪರೀಕ್ಷೆಯು ಆ ದೇವನಿಗೆ ಗೊತ್ತು ಆದರೆ ಅಷ್ಟಧಾ ಪ್ರಕೃತಿಯನ್ನು ತಿಳಿದುಕೊಂಡು ಪ್ರಕೃತಿಪರಮಾತ್ಮನನ್ನು ತಿಳಿದುಕೊಳ್ಳಬೇಕು ಪ್ರಕೃತಿಯಲ್ಲಿಯ ದೇವನೆಂದರೆ ಪ್ರಕೃತಿಯ ಸ್ವಭಾವವು ಆ ದೇವನು ಮಾತ್ರ ಭಾವಾತೀತನು ಇಂಥ ಆ ಮಹಾನುಭಾವನನ್ನು ವಿವೇಕದಿಂದ ತಿಳಿಯಬೇಕು ಆ ನಿರ್ಮಲ ದೇವನನ್ನು ಧ್ಯಾನ ಮಾಡುವವನು ನಿರ್ಮಲನೇ ಆಗುವನು ಅವನನ್ನು ಭಜಿಸಿದವನು ಅವನ ಸ್ವರೂಪವನ್ನೇ ಹೊಂದುವನು ರಾಜಹಂಸವು ಹಾಲು ನೀರುಗಳ ಮಿಶ್ರಣದಿಂದ ಕೇವಲ ಹಾಲನ್ನೇ ಬೇರ್ಪಡಿಸಿ ಸ್ವೀಕರಿಸುವದು ಅದರಂತೆ ಸಾರಾಸಾರದಲ್ಲಿ ಅಂದರೆ ನಿಶ್ಚಲಬ್ರಹ್ಮ ಹಾಗು ಚಂಚಲ ಪ್ರಕೃತಿಗಳಲ್ಲಿ ಇರುವ ತಾರತಮ್ಯವನ್ನು ವಿವೇಕ ರೂಪವಾದ ರಾಜಹಂಸವು ತಿಳಿದುಕೊಳ್ಳುವದು ಹಾಗು ಮಹಾನುಭಾವನಾದ ನಿಶ್ಚಲ ಬ್ರಹ್ಮನನ್ನೇ ಹೊಂದುವದು ಒಟ್ಟಿನ ಮೇಲೆ ಚಂಚಲ ಧ್ಯಾನದಿಂದ ಚಾಂಚಲ್ಯವೂ

ನಿಶ್ಚಲನನ್ನು ಭಜಿಸುವದರಿಂದ ನಿಶ್ಚಲತೆಯೂ ಸಹಜವಾಗಿ ಉಂಟಾಗು ವವು ಪ್ರಕೃತಿಗನುಸರಿಸಿ ಅಂದರೆ ಜಗರೂಢಿಯಂತೆ ನಡೆದರೂ ಹೃದಯದ ಶಾಶ್ವತ ಹಾಗು ನಿಶ್ಚಲನನ್ನು ಬಿಡದೆ ವರ್ತಿಸುವವನೇ ಜ್ಞಾನಿಯು ಆದ್ದ ರಿಂದ ಲೋಕರೂಢಿಯಂತೆ ಜಗದಲ್ಲಿ ಕೂಡಿಕೊಂಡು ಹೋಗಬೇಕು ಆದರೆ ಸತ್ಯವನ್ನು ಬಿಡದೆ ವರ್ತಿಸಬೇಕು''ಎಂದು ಗುರುಗಳು ಹೇಳಿದರು

ಶ್ರೀ ರಾಮ || ೩. ಶಿಕ್ಷಣ ನಿರೂಪಣ || ಗುರುವು ಶಿಷ್ಯನನ್ನು ಕುರಿತು–

''ಪ್ರಾಣಿಯು ಅದೆಷ್ಟೋ ಜನ್ಮಗಳನ್ನು ನೀಗಿದ ನಂತರ ಕೊನೆಗೆ ನರ ದೇಹವು ಲಭಿಸುವದು ದುರ್ಲಭವಾದ ಈ ಮಾನವ ಜನ್ಮಕ್ಕೆ ಬಂದು ನೀತಿ ನ್ಯಾಯಗಳನ್ನನುಸರಿಸಿ ನಡೆಯಬೇಕು ಹೊಂದಿಕೆಯಿಂದ ಪ್ರಪಂಚ ಸಾಗಿ ಸಿಕೊಳ್ಳಬೇಕು ಹಾಗು ವಿವೇಕದಿಂದ ಪರಮಾರ್ಥವನ್ನು ತಿಳಿದುಕೊಳ್ಳ ಬೇಕು ಇದರಿಂದ ಇಹ–ಪರಗಳೆರಡೂ ಸಾಧ್ಯವಾಗುವವು

ಮಾನವನ ಆಯುರ್ಮರ್ಯಾದೆಯು ಒಂದುನೂರುವರುಷಗಳದ್ದೆಂದು ಸಿದ್ಧವಿದೆ ಈ ನೂರುವರುಷದಅವಧಿಯ ಕೆಲ ಭಾಗವು ಬಾಲ್ಯವಿದ್ದಾಗ ಅಜ್ಞ ಸ್ಥಿತಿಯಲ್ಲಿ ಕಳೆದು ಹೋಗುತ್ತದೆ ಅದರಂತೆ ಪ್ರಾಯದ ಅವಸ್ಥೆಯೊದಗಿದಾಗ ವಿಷಯಗಳ ಪ್ರಾಬಲ್ಯದಲ್ಲಿ ಕೆಲಕಾಲ ಕಳೆಯುವದು ತದುವಾಯದ ಮುಪ್ಪಿನ ಕಾಲದಲ್ಲಿ ಹಲವು ರೋಗಾದಿ ಕರ್ಮಭೋಗಗಳನ್ನು ಭೋಗಿಸುತ್ತ ಉಳಿದ ಕಾಲವನ್ನು ಕಳೆಯುವದು ಹೀಗಾಗಿ ಈ ಮೂರು ಪ್ರಸಂಗಗಳಲ್ಲಿ ಜರ ಗುವ ಅನಾಹುತಗಳಲ್ಲಿಯೇ ಮಾನವನ ನಿಯಮಿತ ನೂರು ವರುಷಗಳ್ಳ ಸಂದು ಹೋಗುವವು ಅಂದ ಮೇಲೆ ಆ ಜೀವಯುಕ್ತ ದೇಹಧಾರಿಗೆ ಭಗ ವದ್ಯೋಗ ದೊರಕುವದೆಂತು? ತಾಪತ್ರಯಗಳ ಚಿಂತೆಯೂ, ಅನ್ನ– ವಸ್ತ್ರಗಳಿಂದೆ ದೇಹವನ್ನು ರಕ್ಷಿಸುವ ಮಮತೆಯೂ ಆಕಸ್ಮಿಕವಾಗಿ ಒದ ಗಿದ ಹಲವು ಪ್ರಸಂಗಗಳನ್ನು ನೀಗುವ ವಿಚಾರವೂ ಇವುಗಳಲ್ಲಿಯೇ ಇಡೀ ಜನ್ಮದ ಅವಧಿಯ ಪ್ರಮಾಣವು ಮುಗಿದು ಹೋಗುವದು ಜನರು ಒಬ್ಬರ ಹಿಂದೊಬ್ಬರು ಸತ್ತು ಹೋಗುವರು ಹಿರಿ ಹಿರಿಯರೆಲ್ಲರೂ ಹೋದರು ಈ ಅನುಭವವು ತಿಳಿದೂ ತಿಳಿದೂ ಹೇಗೆ ನಿಶ್ಚಿತ ಮಾಡಿಕೊಳ್ಳಬೇಕು? ಮನೆಗೆ ಬೆಂಕಿ ಹತ್ತಿದಾಗ ವಿಶ್ರಾಂತಿಗಾಗಿ ನಿದ್ದೆ ಮಾಡುವ ಮಾನವನ ಆತ್ಮಘಾತಕಿಯಲ್ಲದೆ ಮತ್ತೇನು? ಪುಣ್ಯವೆಲ್ಲ ವ್ಯಯವಾಗಿ ಪಾಪಸಂಗ್ರಹ

ಹೆಚ್ಚಾದ ಕೂಡಲೆ ಕಠಿಣತರ ಯಮಯಾತನೆ ಬಂದೇ ಬರುವದು ಆದರೆ ಇಂಥ ಪ್ರಸಂಗದಿಂದ ದೂರಾಗುವ ಮಾರ್ಗವೆಂದರೆ —ಬಹಳ ವಿವೇಕದಿಂದ ನಡೆದು ಇಹ—ಪರಗಳೆರಡನ್ನೂ ಸಾಧಿಸಿಕೊಳ್ಳುವದು ಮಾನವನಿಗೆ ಮುಖ್ಯ ವೈರಿಯೆಂದರೆ ಆಲಸ್ಯತನವು ಇದರಿಂದ ಏನೊಂದು ಸಾಧ್ಯವಾಗುವದಿಲ್ಲ. ಈ ಆಲಸ್ಯವು ಪ್ರತ್ಯಕ್ಷ ತನ್ನ ದುಷ್ಫಲವನ್ನು ಕೊಡುವದು ಇದರ ಲಕ್ಷಣವೆಂದರೆ—ಸೋಮಾರಿಯು ಯಾವಾಗಲೂ ನಿದ್ರೆಯ ಮಬ್ಬಿನಿಂದ ಕಣ್ಣು ಮುಚ್ಚುತ್ತ ತೆರೆಯುತ್ತ ಬಿದ್ದು ಉರುಳಾಡುವನು ಅವನು ಯಾವಾಗಲೂ ಸುಖವನ್ನೇ ಮಾತ್ರ ಬಯಸುವನು ದೈಹಿಕ ಶ್ರಮ ಮಾಡುವದು ಶರೀರಕ್ಕೆ ಕಷ್ಟವೆನ್ನಿಸಿದರೂ ಮುಂದೆ ಅದರಿಂದ ಸ ಖವೇ ಹೆಚ್ಚಾಗುವದು ದುಡಿತದ ಪ್ರಯತ್ನದಿಂದ ತಿಂದುಂಬುವದರಲ್ಲಿ ಅವನಿಗೆ ಒಳ್ಳೇ ಸೌಖ್ಯವುಂಟಾಗುವದು ಅದೇ ಸೋಮಾರಿಯಾದವನಲ್ಲಿ ಉದಾಸೀನತೆ ಹೆಚ್ಚುವದು ಅನ್ನವಸ್ತ್ರಗಳದಾರಿದ್ರ್ಯಪೀಡೆಯುಂಟಾಗುವದು ಅವನಲ್ಲಿಪ್ರಯತ್ನ ಸಾಹಸ ಮುಂತಾದವುಗಳಿರುವದಿಲ್ಲ ಈಆಲಸ್ಯವು ಮಾನವನ ತೀರ ಕಷ್ಟಸ್ಥಿತಿಯಲಕ್ಷಣವು ಇದುಆಲಸ್ಯತನದಿಂದಲೇಪ್ರಕಟವು ಆಲಸ್ಯತನವಿರಬಾರದು ಆದ್ದರಿಂದಅಂದರೆ ಮಾನವನುವೃಭವಸಂಪತ್ತುಗಳನ್ನುಪಡೆಯುವನು. ಆಲಸ್ಯರಹಿತನಾದವನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಶಾಂತಿ ಲಭಿಸುವದು ಮಾನವನು ಯಾವ ಯಾವ ಬಗೆಯ ಪ್ರಯತ್ನ ಮಾಡತಕ್ಕದ್ದೆಂಬದನ್ನು ಹೇಳುವೆವು ಅಂತಃಕರಣವನ್ನು ಸರಿಯಾಗಿರಿಸಿಕೊಂಡು ಕೇಳಬೇಕು

"ಬೆಳಗು ಮುಂಜಾವಿನಲ್ಲಿ ಏಳಬೇಕು ಮಾಡತಕ್ಕ ಪಠನವನ್ನು ಮುಗಿಸಬೇಕು- ಸರ್ವೋತ್ತಮ ದೇವದೇವನ ಸ್ಮರಣೆಯನ್ನು ಕೈಲಾದ ಮಟ್ಟಿಗೆ ಸ್ಮರಿಸಿಕೊಳ್ಳಬೇಕು ಆ ಬಳಿಕ—

ಬಹಿರ್ದಿಶೆಗೆ ಹೋಗಬೇಕು ಅಲ್ಲಿ ಯಾರ ಸುಳಿವು ಇರಕೂಡದು ಈ ಕ್ರಿಯೆ ಮುಗಿದ ನಂತರ ನಿರ್ಮಲ ನೀರಿನಿಂದ ಶುದ್ಧವಾಗಬೇಕು ಆಗ ಶೌಚ್ಯಾಚಮನ ಮಾಡಬೇಕು ನಂತರ ಮುಖಮಾರ್ಜನ,-ಪ್ರಾತಃಸ್ನಾನ ಸಂಧ್ಯಾ, ಬ್ರಹ್ಮತರ್ಪಣ, ದೇವತಾರ್ಚನ ಮುಗಿಸಿದ ನಂತರ ಮುಂದೆ- ವೈಶ್ವದೇವ, ಉಪಾಸನೆಗಳನ್ನು ಮುಗಿಸಬೇಕು ಆ ಬಳಿಕ ಕೆಲವು ಫಲಾ

ಹಾರ ಸ್ವೀಕರಿಸಬೇಕು ತರುವಾಯ ತನ್ನ ಸಂಸಾರ ಸಾಗಲು ಕೈಕೊಂಡ ಉದ್ಯೋಗಕ್ಕೆ ಆರಂಭ ಮಾಡಬೇಕು ಎಲ್ಲರೊಡನೆ ಒಳ್ಳೆಯ ಮಾತುಗಳನ್ನು ಆಡುತ್ತಿರಬೇಕು ತಾನು ಯಾವದೇ ವ್ಯಾಪಾರ ವಹಿಸಿ ಮಾಡುತ್ತಿದ್ದರೂ ಕೊಡಕೊಂಬುವದರಲ್ಲಿ ಬರಹೋಗುವದರಲ್ಲಿ ಒಹಳೇ ದಕ್ಷತೆಯಿರಬೇಕು ಅಲಕ್ಷ್ಯ ಮಾಡಿದ್ದಾದರೆ ಹುಡುಗರು ಕೂಡಾ ಹಚ್ಯಾಹುಚ್ಯಾ ಮಾಡುವರು ಮೋಸ-ಮೂವುಗಳಾಗದಂತೆ ಸಾಕಷ್ಟು ಎಚ್ಚರಿಕೆಯಿರಬೇಕು ಎಚ್ಚರಿಕೆಯಿಲ್ಲದಿರುವದು ಆಲಸ್ಯಕ್ಕೆ ಆಸ್ಪದ ಕೊಟ್ಟಂತಾಗುವದು. ಆದಕಾರಣ ಯಾವಾಗಲೂ ಸಾವಧಾನರಾಗಿರಬೇಕು, ಏಕಾಗ್ರ ಮನಸ್ಸಿನವರಾಗಬೇಕು, ಅಂದರೆ ಉಂಡ ಊಟ ಸವಿಹತ್ತಿ ಸುಖವೆನ್ನಿಸುವದು ಮುಂದೆ ಊಟವಾದ ಮೇಲೆ ಗ್ರಂಥಾವಲೋಕನ ಮಾಡುವದು ಓದಿ ತಿಳಿದ ನಂತರ ವಿಷಯಗಳ ಚರ್ಚೆಯನ್ನು ಮಾಡಬೇಕು ಏಕಾಂತದಲ್ಲಿ ಸೇರಿ ಅನೇಕ ಗ್ರಂಥಗಳನ್ನು ಓದಿ ಮನನ ಮಾಡಿಕೊಳ್ಳತಕ್ಕದ್ದು, ಈ ಬಗೆಯಾಗಿ ದಿನಚರ್ಯೆ ಸಾಗಿದ್ದಾದರೆ ಮಾನವನು ಜಾಣನಾಗುವನು ಇಲ್ಲದಿದ್ದರೆ ಮೂರ್ಖನಾಗುವನು ಹಲವು ಉಪಭೋಗಾನ್ವಿತರಾದ ಸುಜನರನ್ನು ಕಂಡು ದೈನ್ಯತೆಯಿಂದ ಅವರ ಮುಖ ನಿರೀಕ್ಷಣೆ ಮಾಡುತ್ತ ಕೂಡ್ರುವನಂತಾಗುವದು ಒಂದರಕ್ಷಣವನ್ನು ಸಹ ವ್ಯರ್ಥ ಕಳೆಯದಿರುವದು ಭಾಗ್ಯವಂತನ ಲಕ್ಷಣವು ಒದ್ದರಿಂದ ಎಲ್ಲರೂ ತಮ್ಮ ತಮ್ಮ ಉದ್ಯೋಗದಲ್ಲಿ ಆಸಕ್ತಿಯುಳ್ಳವರಾಗಬೇಕು ಸ್ವಕಷ್ಟದಿಂದ ಧನ ಧಾನ್ಯ ಸಂಪಾದಿಸಿಕೊಂಡು ಊಟ ಮಾಡಬೇಕು ಬಂಧನದಲ್ಲಿ ಸಿಕ್ಕವರನ್ನು ಮುಕ್ತರನ್ನಾಗಿ ಮಾಡುವದೂ, ಶರೀರ ಸಾರ್ಥಕ ಮಾಡಿಕೊಳ್ಳುವದೂ, ಧಾರ್ಮಿಕ ವಿಷಯಗಳ ಸಂಬಂಧವಾಗಿ ಬೋಧೆ-ಚರ್ಚೆಗಳಲ್ಲಿ ವೇಳೆಗಳೆಯುವದೂ ಇತ್ಯಾದಿ ಹಲವು ಮಾರ್ಗಗಳಿಂದ ಪ್ರಪಂಚ ಮತ್ತು ಪರಮಾರ್ಥಗಳನ್ನು ಮೇಳೈಸಿ ನಿರಾಲಸ್ಯತೆಯಿಂದ ವರ್ತಿಸುವದು ಐಶ್ವರ್ಯವಂತನ ಲಕ್ಷಣವು. ಇಂಥ ದಕ್ಷತೆಯುಳ್ಳವನಿಗೆ ಕಷ್ಟವೆಂದೂ ಬಾಧಿಸುವದಿಲ್ಲ ದೇಹಬುದ್ಧಿಯ ಸಂಬಂಧವು ವಿವೇಕದಿಂದದಿಂದ ದೂರಾಗುವದು 'ಎಲ್ಲವೂ ದೇವನ ಅಧೀನವು' ಎಂಬ ನಿಶ್ಚಿತ ಬಾವನೆಯನ್ನಿಟ್ಟುಕೊಂಡು ಪ್ರಪಂಚದಲ್ಲಿ ವರ್ತಿಸಿದ್ದಾದರೆ ಚಿಂತೆಯು

ಮೂಲವೇ ಕತ್ತರಿಸಿ ಬೀಳುವದು ಇದೇ ಯೋಗ್ಯವಾದ ರೀತಿಯು ಪ್ರಾಪಂಚಿಕನು ಬಂಗಾರಕ್ಕೆ ಮಹತ್ವ ಕೊಡುವಂತೆ ಪಾರಮಾರ್ಥಿಕನು ಪಂಚೀಕರಣಕ್ಕೆ ಮಹತ್ವವನ್ನೀಯುವನು ಇವೆರಡೂ ಮಹತ್ವದವೇ ಇವೆರಡೂ ಎಲ್ಲರಿಗೂ ಅವಶ್ಯವಾದವೇ. ಪ್ರಪಂಚ–ಪರಮಾರ್ಥಗಳೆರಡನ್ನೂ ಸಾಧಿಸಿಕೊಂಡು 'ತತ್ವಮಸ್ಯಾದಿ' ಎಂಬ ಮಹಾ ವಾಕ್ಯದ ಅರ್ಥವನ್ನು ಮನನ ಮಾಡಿಕೊಂಡು ವರ್ತಿಸಿದ್ದಾದರೆ ಯಾವ ಮಾನವನಾದರೂ ಬಂಧನದಿಂದ ಮುಕ್ತನಾಗುವನು ಕರ್ಮ, ಉಪಾಸನೆ ಹಾಗೂ ಜ್ಞಾನ ಈ ಮೂರೂ ಸಾಧನಾಂಗಗಳಿಂದ ಪೂರ್ಣನಾದ ಮನುಷ್ಯನು ಪರಮ ಸಮಾಧಾನಯುಕ್ತನಾಗುವನು ಆದ್ದರಿಂದ ಎಲ್ಲರೂ ಪರಮಾರ್ಥಕ್ಕೆ ಪೋಷಕವಾಗಿರುವ ಸಾಧನಗಳನ್ನು ಹೊಂದಿ ಪಾರಮಾರ್ಥಿಕ ವಿಷಯಗಳ ಶ್ರವಣ ಭಕ್ತಿಯನ್ನು ಮಾಡುತ್ತಿರಬೇಕು" ಎಂದು ಗುರುಗಳು ಹೇಳಿದರು

ಶ್ರೀ ರಾಮ || ೪ ವಿವೇಕ ನಿರೂಪಣೆ || ಗುರುಗಳು ಶಿಷ್ಯನನ್ನು ಕುರಿತು:—

" ವಿಚಾರದಿಂದ ನೋಡಲು ಬ್ರಹ್ಮನು ಗಗನದಂತಿರುವನು ಅವನು ಆಕಾಶದಂತೆ ನಿರಾಕಾರನು ಹಾಗು ನಿರ್ವಿಕಾರನು ಬ್ರಹ್ಮನು ನಿಶ್ಚಲನು ಅಂತರಾತ್ಮನು ಚಂಚಲನು ಆ ಅಂತರಾತ್ಮನೇ ದ್ರಷ್ಟಾರನೂ ಸಾಕ್ಷಿಯೂ ಆಗಿರುವನು ಆ ಅಂತರಾತ್ಮನೇ ದೇವನು, ಚಂಚಲಿತ ಸ್ವಭಾವಿಯು, ಸಕಲ ಜೀವಿಗಳ ಅಂತಸ್ಥವಾಗಿ ಎಲ್ಲವನ್ನು ರಕ್ಷಿಸುವನು ಎಲ್ಲ ಜಡ ಪದಾರ್ಥಗಳೂ ಆವನ ವ್ಯತಿರಿಕ್ತವಾಗಿರುವವು ಅವನಿಲ್ಲದ ದೇಹವು ವ್ಯರ್ಥವು ಆ ಅಂತರಾತ್ಮನ ಯೋಗದಿಂದಲೇ ಪರಮಾರ್ಥ ಜ್ಞಾನವಾಗುವದು ಈ ಅಂತರಾತ್ಮ ದೇವನಿಂದಲೇ ಕರ್ಮ—ಉಪಾಸನೆ—ಜ್ಞಾನ ಮಾರ್ಗಗಳೂ ಸಿದ್ಧಾಂತ ಮಾರ್ಗವೂ, ಪ್ರವೃತ್ತಿ—ನಿವೃತ್ತಿಗಳಿಗೆ ಸಂಬಂಧಿಸಿದ ಅನೇಕ ಮಾರ್ಗಗಳೂ ನಡೆಯುವವು ನಿಶ್ಚಲತೆಯು ಚಂಚಲತೆಯಿಲ್ಲದೆ ಗೊತ್ತಾಗುವದಿಲ್ಲ ಚಂಚಲವಾದರೂ ಸ್ಥಿರವಿರುವದಿಲ್ಲ ಇದನ್ನು ಹಲವು ಒಳ್ಳೆ ವಿಚಾರದಿಂದ ನೋಡು ಚಂಚಲ ನಿಶ್ಚಲಗಳ ಐಕ್ಯವಾದಲ್ಲಿ ಬುದ್ಧಿಯ ಆಟ ಸಾಗದು ಆದರ ತರುವಾಯ ಕರ್ಮ ಮಾರ್ಗದ ವಿಧಿಗಳು ದೇವನು ಇವೆಲ್ಲಕ್ಕೂ ಮೂಲನು ಆದರೆ ದೇವನಿಗೆ ಮೂಲವು ಇಲ್ಲ ಖಂಡತೆ

ಯೂ ಇಲ್ಲ ಪರಬ್ರಹ್ಮನು ನಿಶ್ಚಲನು ಹಾಗು ನಿರ್ವಿಕಾರಿಯು ನಿರ್ವಿ ಕಾರಿಯೂ ಮತ್ತು ವಿಕಾರಿಯೂ ಒಂದೇ ಎಂದು ಭಾವಿಸುವವನು ದರಿದ್ರನು ಹಾಗೆ ಭಾವಿಸುವಲ್ಲಿ ನೋಡ ನೋಡುತ್ತ ವಿಚಾರವು ಅಳಿಯುವದು ಎಲ್ಲ ಪರಮಾರ್ಥಕ್ಕೆ ಪಂಚೀಕರಣ ಹಾಗು ಮಹಾವಾಕ್ಯಗಳು ಮೂಲವಾಗಿವೆ ಆದ್ದರಿಂದ ಕೇವಲ ಅವುಗಳನ್ನೇ ಪುನಃ ಪುನಃ ವಿಚಾರ ಮಾಡಬೇಕು ಎಂಟು ದೇಹಗಳಲ್ಲಿ ಮೊದಲನೆಯದಾದ ಸ್ಥೂಲ ದೇಹವು ಮತ್ತು ಎಂಟನೆಯ ದೇಹವಾದ ಮೂಲ ಮಾಯೆಯು ಈ ಎಲ್ಲ ದೇಹಗಳ ನಿರಾಕರಣವಾದನಂತರ ವಿಕಾರವೆಲ್ಲಿ ಉಳಿಯುವದು? ಆದರೆ ವಿಕಾರಯುಕ್ತ ಚಂಚಲವು ಸತ್ಯದಂತೆ ಭಾಸವಾಗುವದರಿಂದ ಒಮ್ಮೆ ಆದರೆ ಮಿಥ್ಯತೆಯೂ ಒಮ್ಮೆ ನಿಜತ್ವವೆಂಬುವದೂ ಕಾಣುವದು. ಉತ್ಪತ್ತಿ-ಸ್ಥಿತಿ-ಲಯಗಳು ಚಂಚಲದ ವಿಕಾರಗಳಾಗಿರುವವು ನಿಶ್ಚಲಕ್ಕೆ ವಿಕಾರಗಳು ಇರುವದಿಲ್ಲ ಈ ಸಾರಾಸಾರ ವಿಚಾರ ತಿಳಿಯಲಿಕ್ಕೆ ಬೇಕು ಸಾರವೂ ಅಸಾರವೂ ಎರಡೂ ಒಂದೇ ಆದನಂತರ ವಿವೇಕವೇ ಉಳಿಯುವದಿಲ್ಲ ಇದು ವಿಚಾರ ಬುದ್ಧಿಗಳ ರಾಹಿತ್ಯತೆಯು ಪಾಪಿಷ್ಠನಿಗೆ ತಿಳಿಯುವದಿಲ್ಲ ಅಂತರಾತ್ಮನು ಒಬ್ಬನಿದ್ದು ಬಹು ರೂಪವಾಗಿ ಸೃಷ್ಟಿ ರೂಪದಿಂದ ವಿಸ್ತರಿಸಿದನು ಇಂಥ ವಿಕಾರಿಯಾತನಾಗಿರುವನು ಆದರೆ ಅವನು ನಿಶ್ಚಲ ಪರಬ್ರಹ್ಮನಲ್ಲ ಎಂಬುದು ಸ್ಪಷ್ಟವಿದೆ ಇದನ್ನು ವಿಚಾರವಂತನು ತನ್ನ ಅನುಭವದಿಂದ ತಿಳಿಯುವನು ಅಜ್ಞನಾದವನಿಗೆ ಶಾಶ್ವತ ಹಾಗು ಅಶಾಶ್ವತ ಇವು ಏನು ತಿಳಿಯುವದಿಲ್ಲ ಉತ್ಪತ್ತಿ-ಸ್ಥಿತಿ-ಲಯಗಳು ಇವು ಅಶಾಶ್ವತಕ್ಕೆ ಇರುವವು ಇದು ಎಲ್ಲರ ಅನುಭವವು ಜಗತ್ತಿನಲ್ಲಿ ಒಬ್ಬನು ಸುಖಿಯಾಗಿಯೂ ಇನ್ನೊಬ್ಬನು ದುಃಖಿಯಾಗಿಯೂ ಇರುವರು, ಒಬ್ಬನು ಅತ್ಯಂತ ಕಷ್ಟ ಮಗ್ನನಾದವನನ್ನು ಕಷ್ಟದಿಂದ ಬಿಡಿಸಿ ಹೊರತೆಗೆದು ತಾನೇ ಅವನನ್ನು ಕೊಲ್ಲುವನು ಈ ಕ್ರಿಯೆಗಳು ನ್ಯಾಯ ನೀತಿಗಳಿಲ್ಲದವರಿಂದ ನಡೆಯುವವು. ಈ ಪ್ರಕಾರವಿದ್ದಾಗ 'ಸರ್ವವೂ ಬ್ರಹ್ಮವು' ಎಂದು ಹೇಳುವ ಅವಿಚಾರಿಗಳಾದ ಬ್ರಹ್ಮವಾದಿಗಳ ಹೇಳಿಕೆಯು ನಿರರ್ಥಕವಾದದ್ದು

ಕಲ್ಲನ್ನು ಚೆಲ್ಲಿಕೊಟ್ಟು ಬಂಗಾರವನ್ನು ತೆಗೆದುಕೊಳ್ಳುವದು, ಮಣ್ಣನ್ನು ಒಗೆದು ಅನ್ನವನ್ನು ಉಣ್ಣುವದು ಈ ಬಗೆಯಲ್ಲಿಯೂ ಭೇದವನ್ನು ತೋರಿಸುತ್ತಿದ್ದರೂ 'ಎಲ್ಲವೂ—ಬ್ರಹ್ಮ' ಎಂದು ಹೇಳುವದು ಕೇವಲ ಬಡಬಡಿಕೆಯ ಬಾಯ್ಮಾತಾಗಿರುವದು ಆದ್ದರಿಂದ ವಿವೇಕದಿಂದ ಅಸಾರವನ್ನು ಬಿಟ್ಟು ಸಾರವನ್ನು ಗ್ರಹಿಸಬೇಕು ಈ ಸಾರವೆಂದರೆ 'ಶಾಶ್ವತ ಬ್ರಹ್ಮ' ಎಂಬರ್ಥ

'ರತ್ನ ಹಾಗು ಬೆಣಚುಗಲ್ಲು' ಇಷ್ಟೆಂದಮಾತ್ರಕ್ಕೆ ರತ್ನ ಪರೀಕ್ಷೆಯಾಗುವದಿಲ್ಲ ಅಂತೆಯೇ ಚತುರನು ಪರೀಕ್ಷಿಸಿ ಅಸಾರವಾದುದನ್ನು ಬಿಟ್ಟು ಸಾರವನ್ನು ತೆಗೆದುಕೊಳ್ಳಬೇಕು ಪರೀಕ್ಷೆಯಾಗದಿದ್ದಲ್ಲಿ ಕೊಟ್ಟದ್ದೇ ತೆಗೆದುಕೊಂಡದ್ದೇ ಅದು ಏನೇ ಇರಲಿ ಎಂಬಂತಾಗಿ ಬಿಡುವದು ತೆಗೆದುಕೊಳ್ಳಲಿಕ್ಕೆ ಯೋಗ್ಯವಾದದ್ದನ್ನುಮಾತ್ರ ತೆಗೆದುಕೊಳ್ಳಬೇಕು ಅಯೋಗ್ಯವಾದದ್ದನ್ನು ತ್ಯಾಗಮಾಡಬೇಕು ಉಚ್ಚ ನೀಚತ್ವಗಳನ್ನು ಅರಿಯುವದೇ ಜ್ಞಾನವು ಎಷ್ಟೋ ವಿವೇಕಿಗಳು ಪ್ರಪಂಚದಲ್ಲಿದ್ದುಕೊಂಡು ಶಾಶ್ವತವಾದ ಅಮರ ಪದವನ್ನು ಹೊಂದಿರುವರು ಅಜ್ಞಾನಿಗಳು ಮಾತ್ರ ಏನೊಂದನ್ನು ಹೊಂದಲಾರರು ಅರಿವುಳ್ಳವರು ಹೀಗೆ ಮಾಡಬಾರದು ಅಸಾರವನ್ನು ನಿಂದ್ಯವೆಂದು ಬಿಟ್ಟು ಸಾರವನ್ನು ಶೋಧಿಸಿ ಸ್ವೀಕರಿಸಬೇಕು ತ್ಯಾಗ ಮಾಡಿದ್ದನ್ನು ಸ್ವೀಕರಿಸುವದು ಶ್ವಾನದ ಲಕ್ಷಣವು ಒಮ್ಮೆ ಕಾರಿಕೊಂಡ ಪದಾರ್ಥವನ್ನು ಪವಿತ್ರ ಬ್ರಾಹ್ಮಣನು ನೋಡುವದಿಲ್ಲ ಅದರಂತೆ ಅಸಾರವಾದದ್ದನ್ನು ಸಾರವೆಂದು ಗ್ರಹಿಸಿ ಸ್ವೀಕರಿಸುವದು ಪತಿತ ಲಕ್ಷಣವು ವಿವೇಕಿಯು ಅಸಾರ ಸೇವನೆಯನ್ನೆಂದೂ ಮಾಡನು ಪೂರ್ವ ಸಂಚಿತದಂತೆ ಆಗುತ್ತಿರುತ್ತದೆ ಅಭ್ಯಾಸದಿಂದ ಪಚನವಾದದ್ದನ್ನು ಬಿಟ್ಟರೂ ಅದು ಬಿಡುವದಿಲ್ಲ ದಿವ್ಯಾನ್ನ ಸೇವಿಸುವವನೂ ಕದನ್ನವನ್ನು ಸೇವಿಸುವವನೂ ಇವರಿಬ್ಬರು ತಮ್ಮ ತಮ್ಮ ಪೂರ್ವಜರ ಅಭಿಮಾನ ಬಿಡುವದಿಲ್ಲ ಇರಲಿ. ವಿವೇಕವಿಲ್ಲದೆ ನುಡಿಯುವದು ವ್ಯರ್ಥ; ಆ ವಿವೇಕ ಜಾಗೃತಿಗಾಗಿ ಶ್ರವಣ—ಮನನ ಮಾಡಬೇಕು" ಎಂದು ಹೇಳಿದರು

ಶ್ರೀ ರಾಮ || ೫ ರಾಜಕಾರಣ ನಿರೂಪಣೆ || ಶ್ರೀ ಗುರುಗಳು ಶಿಷ್ಯನನ್ನು ಕುರಿತು:—

" ದಿನ ದಿನವೂ ಸ್ವಧರ್ಮ ಕರ್ಮಗಳನ್ನು ಮಾಡುತ್ತಲೇ ಇರಬೇಕು ತನ್ನ ಉಪಾಸ್ಯ ದೇವತೆಯ ಧ್ಯಾನ್ಯವನ್ನು ಮಾಡಬೇಕು. ಮತ್ತು ಬೋಧೆಯಾದುದನ್ನು ಪುನಃ ಪುನ ಮನನ ಮಾಡುತ್ತಿರಬೇಕು ನಮ್ಮದಾದರೂ ಹಾಗೆಯೇ ಆಗಿದೆ ನಾವು ಹೇಳಿದ ಮಾತುಗಳನ್ನೇ ನಾವು ಪುನಃ ಪುನಃ ಹೇಳಬೇಕಾಗುತ್ತದೆ ಯಾಕಂದರೆ ಶ್ರೋತೃಗಳ ಮನಸು ಚಂಚಲತೆಯಲ್ಲಿ ಇರುವಾಗ ನಾವು ಅದನ್ನು ಸ್ಥಾನಕ್ಕೆ ತಂದು ಪುನಃ ಸ್ವಸ್ಥ ಮಾಡಬೇಕಾಗುವದು ಲೋಕ ಹಿತಕ್ಕಾಗಿ ಯತ್ನಿಸುವ ನಮ್ಮ ಅಭಿಪ್ರಾಯವು ಎಂತಿರುವದೆಂದರೆ— ನಮ್ಮ ಸಮುದಾಯದಂಥ ಸಮುದಾಯವು ಇನ್ನೊಂದಿರಕೂಡದು ನಮ್ಮ ಸಮುದಾಯದಿಂದ ಉಳಿದವರಲ್ಲಿ ಸದ್ಭಾವನೆಯುದಿಸಬೇಕು ಇದೆ ನಮ್ಮ ಇಚ್ಛೆ ಮುಖ್ಯವಾಗಿ ಹರಿಕಥಾ ನಿರೂಪಣೆಯೂ ತದನಂತರ ರಾಜ ಕಾರಣವೂ ಮೂರನೆಯದು ಎಲ್ಲ ವಿಷಯಗಳಲ್ಲಿ ಸಾವಧಾನವೂ ನಾಲ್ಕನೆಯದು ಸತತ ಪರಿಶ್ರಮವೂ ಇವೇ ನಾಲ್ಕು ಗುಣಗಳು ಲೋಕ ಹಿತಕ್ಕಾಗಿ ನಮ್ಮ ಆಚರಣೆಗೆ ತಕ್ಕವಾದವುಗಳಾಗಿವೆ ಇವುಗಳ ಹೊರತು ಬೇರೆ ಉಪಾಯಗಳಿಲ್ಲ.

ಲೋಕ ಕಲ್ಯಾಣ ಬಯಸುವವರಲ್ಲಿ ಇನ್ನೂ ಕೆಲವು ಗುಣಗಳಿರಬೇಕಾಗುವದು ಪರರ ಸಣ್ಣ ದೊಡ್ಡ ಅಪರಾಧಗಳನ್ನು ಕ್ಷಮಿಸುವದಕ್ಕೆ ಕಲಿತಿರಬೇಕು ಅನ್ಯರ ಇಂಗಿತವನ್ನರಿತಿರಬೇಕು ಸ್ವತಃ ಉದಾಸ ವೃತ್ತಿಯಿಂದಿರಬೇಕು ನ್ಯಾಯ–ನೀತಿಗಳಿಂದ ಹೊರತಾಗಿರಬಾರದು ತನ್ನ ಗುಣದಿಂದ ಅನ್ಯರ ಮನಸ್ಸನ್ನು ಆಕರ್ಷಿಸಿಕೊಳ್ಳಬೇಕು ತನಗೆ ತಿಳಿದ ಮಟ್ಟಿಗೆ ಎಲ್ಲರಿಗೆ ಬೋಧ ಮಾಡಬೇಕು ತನ್ನ ಶಕ್ತಿಗನುಸರಿಸಿ ಸರಿಯಾಗಿ ಪ್ರಪಂಚ ಸಾಗಿಸಬೇಕು ಪ್ರಪಂಚದಲ್ಲಿ ಹಲವು ಪ್ರಸಂಗಗಳನ್ನರಿತು ಧೈರ್ಯದಿಂದ ನಡೆಯಬೇಕು ಯಾರೂಡನೆಯೂ ಅತಿ ಪರಿಚಿತ ವೃತ್ತಿಯಿಂದ ನಡೆದು ಅನಾದರಕ್ಕೆ ಗುರಿಯಾಗಬಾರದು ಪ್ರಾಪಂಚಿಕ ಹಲವು ವ್ಯಾಪಗಳಿಗೆ ಆಸ್ಪದವಿತ್ತರೂ ಅಂತರ್ಯಾಮಿಯಲ್ಲಿ ನಿರುಪಾಧಿಕನಾಗಿರತಕ್ಕದ್ದು ವಾದ ಪ್ರಸಂಗಗಳು ಉದ್ಭವಿಸಿದಾಗ ತಾನೇ ಮೊದಲಿಗೆ

ಮೂರ್ಖ ಹಾಗು ನೀಚನೆಂದು ಹೇಳಿಬಿಟ್ಟರೆ ವಾದಗಳು ದೂರಾಗಿ ಹೋಗುವವು ಅನ್ಯರ ದೋಷಗಳನ್ನು ಕಂಡರೂ ಕಾಣದಂತಿರಬೇಕು ಯಾವಾಗಲೂ ಅನ್ಯರ ಅವಗುಣಗಳನ್ನು ಎತ್ತಿ ಹೇಳಬಾರದ ದುರ್ಜನರ ಸಹವಾಸವನ್ನು ಕೈಯಿಂದಕೊಟ್ಟು ದೂರಮಾಡಬೇಕು ಜನರೊಡನೆ ಹಟದಿಂದ ವರ್ತಿಸಬಾರದು ಹಲವು ಉಪಾಯಗಳಿಂದ ಬಂದ ಸಮಯ ನೀಗಬೇಕು ಅಶಕ್ಯವಾದ ಕಾರ್ಯಗಳನ್ನು ದೀರ್ಘ ಪ್ರಯತ್ನದಿಂದ ಕೈಕೊಂಡು ಕೊನೆಗಾಣಿಸಬೇಕು

ತನ್ನ ಮತ ಸಾಧನಕ್ಕಾಗಿ ಇಡಿಯ ಸಭೆಯನ್ನೇ ಮುರಿಯಲು ಯತ್ನಿಸಬಾರದು. ಎಂಥ ಪ್ರಸಂಗಗಳೊದಗಿದರೂ ಅವುಗಳಿಂದ ಪಾರಾಗುವ ಪ್ರಯತ್ನ ಮಾಡಬೇಕು ಯಾರೊಡನೆಯೂ ಅತಿ ವಾದ ಮಾಡಬಾರದು ಅನ್ಯರ ಅಭೀಷ್ಟವನ್ನು ಚಿಂತಿಸಬೇಕು ಹಲವರಾಡುವ ಹಲವು ಮಾತುಗಳನ್ನು ಸಹಿಸಬೇಕು ಆದರೆ ಸಹಿಸಿಕೊಳ್ಳುವ ಶಕ್ತಿಯಿಲ್ಲದೆ ಹೋದರೆ ತಾನು ದೂರ ಸರಿಯತಕ್ಕದ್ದು ಪರರ ದುಃಖವನ್ನು ತಿಳಿಯಬೇಕು ಹಾಗು ದುಃಖಿತರಿಗೆ ಸಹಾನುಭೂತಿ ತೋರಿಸಬೇಕು ಸಮಾಜದ ಒಳಿತು ಹೀನಗಳನ್ನು ಅನುಸರಿಸಿ ನಡೆಯಬೇಕು ಪರಣವು ಚೆನ್ನಾಗಿರಬೇಕು ಆದರ ಜೊತೆಗೇ ವಿಚಾರಮಾಡಬೇಕು ಪರೋಪಕಾರದಲ್ಲಿ ಸದಾ ನಿರತರಾಗಿರಬೇಕು ಸತತವೂ ತಾನು ಶಾಂತನಾಗಿದ್ದು ಅನ್ಯರಿಗೆ ಶಾಂತಿಯುಂಟಾಗುವಂತೆ ವರ್ತಿಸಬೇಕು ದುರಭಿಮಾನಕ್ಕೆ ತಾನೂ ಬೀಳಬಾರದು ಅನ್ಯರನ್ನು ಅದರಂತೆ ಪ್ರಚೋದಿಸಬಾರದು ತಾನು ದುಡಿದು ಅನ್ಯರಿಗೆ ದುಡಿಯುವ ಅಭ್ಯಾಸವನ್ನುಂಟು ಮಾಡಬೇಕು ಪರರಿಗೆ ಅಪಾಯ ಚಿಂತಿಸಕೂಡದು. ಹಾಗೆ ಮಾಡುವದೇ ಅನಿವಾರ್ಯವಾದಲ್ಲಿ ಆಡಿತೋರಿಸಬಾರದು ಮುಳ್ಳಿನಿಂದ ಮುಳ್ಳು ತೆಗೆಯುವ ಹಾಗೆ ಬೇರೆ ಬಗೆಯಿಂದ ಸಾಧಿಸಬೇಕು ಪರರ ದುಃಖವನ್ನು ತಾನು ಸೋಸದ ಹೊರತು ಲೋಕ ಕಲ್ಯಾಣವಾಗುವದು

ಆದರೆ ಎಲ್ಲ ದುಃಖಗಳನ್ನು ಸೋಸುವದೆಂದರೆ ತನ್ನ ಮಹತ್ವವುಳಿಯುವದಿಲ್ಲ ರಾಜ ಕಾರಣದಲ್ಲಿ ಅಂಟಿಕೊಂಡಿದ್ದರೂ ಅದನ್ನು ಇತರರಿಗೆ ತಿಳಿಸಕೂಡದು ಇನ್ನೊಬ್ಬನಿಗೆ ದುಃಖಕೊಡುವ ಬುದ್ಧಿಯು

ತನ್ನಲ್ಲಿ ಇರಕೂಡದು. ಜನರ ಪರೀಕ್ಷೆ ಮಾಡಿಕೊಂಡಿರಬೇಕು ರಾಜ ಕಾರಣದಲ್ಲಿ ಯಾರ ಅಭಿಮಾನವನ್ನು ಇರಗೊಡಬಾರದು ಆದರೂ ಏನೊಂದು ಉಪಾಯದಿಂದ ಕೂಡಿಕೊಳ್ಳಬೇಕು ತಾತ್ಪರ್ಯವೇನೆಂದರೆ– ಮನುಷ್ಯನನ್ನು ಕಳೆದುಕೊಳ್ಳಬಾರದು ನೀಚರನ್ನು ದೂರದಲ್ಲಿರಿಸಬೇಕು. ಅವರೊಡನೆ ಮಾತುಸಹ ಆಡಕೂಡದು ಒಂದು ವೇಳೆ ತನಗೆ ಅವರ ಸಂಬಂಧವು ಅನಿವಾರ್ಯವಾದರೆ ತಾನೇ ಎದ್ದು ಅಲ್ಲಿಂದ ದೂರ ಏಕಾಂತ ದಲ್ಲಿ ಹೋಗಬೇಕು ಈ ಪ್ರಕಾರ ರಾಜ ಕಾರಣ ಸಂಗತಿಗಳು ಹಲ ವುಂಟು ಚಿತ್ತವು ಸಾವಧಾನವಾಗಿದ್ದರೆ ರಾಜ ಕಾರಣ ವಿಷಯ ತಿಳಿಯು ವದು ಉತ್ಕರ್ಷ ಪಡೆಯುವನಿಗೆ ಉತ್ಸಾಹ ನೀಡಿ ಅವನನ್ನು ಮೇಲ ಕ್ಕೇರಿಸಬೇಕು. ವಿರೋಧ—ವೈಷ್ಯಮ ಕಲಹಕಾರಿಯನ್ನು ಕೆಳಗೆ ಜಗ್ಗಿ ಕೆಡವಬೇಕು ಕಾರಭಾರದ ಅಂಗಗಳನ್ನು ಹೇಳಲಿಕ್ಕೆಬಾರದು ನೋಡ ಬೇಕೆಂದರೆ ಅವು ಸಿಗುವದಿಲ್ಲ, ಹೊಗಳಬೇಕೆಂದರೆ ಅವು ಅಲ್ಲಿ ಇರುವ ದಿಲ್ಲ, ವೈಭವ ಪ್ರಾಪ್ತವಾದರೂ ಅವು ಏನು ಮಾಡಿದರೂ ಅಭಿಲಾಷೆ ಪಡುವದಿಲ್ಲ ಒಬ್ಬನಿಗೆ ಆಶ್ರಯಕೊಡುವದು, ಇನ್ನೊಬ್ಬನನ್ನು ವಿಷಮ ತೆಯಿಂದ ಕಾಣುವದು ಇವೆಲ್ಲ ವಿಚಾರದ ಕೆಲಸಗಳಲ್ಲ ನ್ಯಾಯಬೋ ಧೆಯು ಅಲ್ಲಿ ನಾಟುವದಿಲ್ಲ ಹಿತದ ಮಾತುಗಳನ್ನು ಮನಸು ಕೊಳ್ಳು ವದಿಲ್ಲ ಇಂಥದರ ಸಂಬಂಧಕ್ಕಿಂತ ತ್ಯಾಗವೇ ಒಳಿತು ಇದು ಎಲ್ಲರಿಗೆ ತಿಳಿದ ಮಾತು ಕೇವಲ ಸಂಶಯ ನಿರಸನಕ್ಕಾಗಿ ನಾವು ಹೇಳಿದೆವು" ಎಂದು ಹೇಳಿದರು

ಶ್ರೀ ರಾಮ || ೬ ಮಹಂತ ಲಕ್ಷಣ || ಗುರುಗಳು ಶಿಷ್ಯನನ್ನು ಕುರಿತು —

"ಬರೆಯುವ ಮೊದಲು ಒಳ್ಳೆ ದಕ್ಷತೆಯಿಂದ ಯುಕ್ತನಾಗಿ ಬರೆ ಯುವದಕ್ಕೆ ಉಪಕ್ರಮಿಸಬೇಕು ಶುದ್ಧವಾಗಿಯೂ ಚೆನ್ನಾಗಿಯೂ ಬರೆದು ಬರೆಯುವದನ್ನು ಮುಗಿಸಬೇಕು ಆ ನಂತರ ಬರೆಹದಲ್ಲಿಯ ಶುದ್ಧತೆಯನ್ನು ನಿರೀಕ್ಷಿಸಬೇಕು ಬರೆದದ್ದನ್ನು ಶುದ್ಧವಾಗಿ ಓದಬೇಕು ತಪ್ಪಬಾರದು ಅಂಕಡೊಂಕಾದ ಅಕ್ಷರ ಹಾಗು ಅಕ್ಷರಾವಯವಗಳನ್ನು ತಿದ್ದಿ ಸರಿಪಡಿಸಬೇಕು ಬರೆಹದ ಶೈಲಿಯು ಚೆನ್ನಾಗಿರಬೇಕು ಕಥೆ–

ಚರಿತ್ರಗಳನ್ನು ಒರೆಯುವಲ್ಲಿ ಅವುಗಳಲ್ಲಿಯ ಸಂದರ್ಭಗಳಿಗನುಸರಿಸಿ ತನ್ನ ಚಾತುರ್ಯದಿಂದ ಬಗೆಬಗೆಯ ಶಬ್ದಾಲಂಕಾರಗಳನ್ನು ಯೋಜಿಸಬೇಕು ಬುದ್ಧಿಯಿಂದ ಮಾಡಬೇಕಾಗಿರುವದನ್ನು ಬಾಯಿಯಿಂದ ಹೇಳಲಿಕ್ಕೆ ಬರುವದಿಲ್ಲ ಬಾಯಿಯಿಂದ ಹೇಳಿ ಭಾವವನ್ನು ವ್ಯಕ್ತಪಡಿಸುವಲ್ಲಿ ಅವುಗಳ ನಿಯಮ ಮುಂತಾದವುಗಳನ್ನು ಕೊಡಲು ಬರುವದಿಲ್ಲ ತನಗೆ ತಿಳಿಯದ ಹೊರತು ಏನನ್ನೂ ಮಾಡಲಿಕ್ಕೆ ಬರುವದಿಲ್ಲ ಪಾರಮಾರ್ಥಿಕ ವಿಚಾರ ವಿವರಣೆ, ಮಹತ್ವವಾದ ಹಾಗು ಹಿಂದು ಮುಂದಿನ ವಿಚಾರದಿಂದ ತಿಳಿಯುವದಾದ ರಾಜಕರಣ ಮತ್ತು ಶುದ್ಧವಾದ ಆಚರಣೆ ಇವೆಲ್ಲವು ಮಹಂತರದಲ್ಲಿ ಇರಲಿಕ್ಕೆ ಬೇಕಾಗುವದು ಎರಡನೆಯವರನ್ನು ವಿಚಾರಿಸುವದು, ಸ್ವತಃ ಹೇಳುವದು, ಸೂಕ್ಷ್ಮ ಬುದ್ಧಿಯಿಂದ ವಿಷಯಗಳಿಗೆ ಬೇರೆ ಬೇರೆ ಅರ್ಥ ಹುಡುಕುವದು, ತನ್ನ ಹೇಳಿಕೆಯಿಂದ ಎಲ್ಲರಿಗೂ ಸಮಾಧಾನ ಸುಖವನ್ನು ಉಂಟು ಮಾಡುವದು, ಭವಿಷ್ಯ ಸಂಗತಿಗಳನ್ನು ತಿಳಿಸುವದು ಸಾವಧರಾಗಿ ಉಹಾಪೋಹ ಮಾಡುವದು, ಪುನಃ ಪುನ ಚನ್ನಾಗಿ ತಿಳಿದುಕೊಂಡು ವಿಪುಲ ಜ್ಞಾನ ಸಂಪಾದಿಸುವದು ಈ ಎಲ್ಲ ಕ್ರಿಯೆಗಳು ಎಲ್ಲವನ್ನೂ ಅರಿತು ಬುದ್ಧಿವಂತನಾದವನ ಮಹಂತತೆಯಿಂದ ಜರಗುವವು ಇಂಥ ಯೋಗ್ಯವೂ ಶ್ರೇಷ್ಠವೂ ಆಗಿರುವ ಮಹಂತತೆಯ ಪುರುಷನು ಅಂದರೆ ಮಹಂತನು ಶಾಶ್ವತ ಪುರುಷನು ಅವನ ಹೊರತು ಉಳಿದವರೆಲ್ಲರೂ ನಶ್ವರರು ತಾಲ–ಸ್ವರಗಳು, ತಾನ–ಮಾನಗಳು, ಕವಿತ್ವ ರಚನೆಯು, ಗಂಭೀರ ಮತ್ತು ಸತ್ಯ ಸಿದ್ಧಾಂತಗಳ ಪ್ರತಿಪಾದನೆಗಳು, ಜ್ಞಾನವಂತರ ಸಭೆಯನ್ನು ಅನೇಕ ಬಗೆಯಿಂದ ರಂಜನಗೊಳ್ಳಿಸುವ ಶಕ್ತಿಯು,ಏಕಾಂತವಿಷಯದಪ್ರೀತಿ ಗ್ರಂಥಗಳರಹಸ್ಯವನ್ನು ಶೋಧಿಸುವವಿಮರ್ಶಾತ್ಮಕಶಕ್ತಿಯು, ಇವೆಲ್ಲಶಕ್ತಿಗಳು ಮಹಂತನಲ್ಲಿ ಮೂರ್ತವಾಗಿರಬೇಕು ಅವನು ತಾನು ಮೊದಲು ಕಲಿತು ಬಳಿಕ ಜನರಿಗೆ ಶಿಕ್ಷಣ ಕೊಡುವನು, ಬಂಧಿತರಾದವರನ್ನು ಸಂಕಟದಿಂದ ಪಾರುಗೊಳಿಸುವನು, ಅವನ ಅಕ್ಷರಗಳು, ಓದುವಿಕೆಯು, ಉಪನ್ಯಾಸವು ಭಕ್ತಿ–ಜ್ಞಾನ–ವೈರಾಗ್ಯಗಳು ಇವೆಲ್ಲವು ಶ್ರೇಷ್ಠ ತರಗತಿಯವಾಗಿರುವವು ಅವನಲ್ಲಿ ಪ್ರಯತ್ನಶೀಲತೆಯೂ, ಪ್ರಸಂಗಾವಧಾನವೂ, ಧೈರ್ಯವೂ,ಯಶಸ್ವಿ ರೀತಿಯಿಂದ ವರ್ತಿಸುವವು ಭಿನ್ನ ಭಿನ್ನ ಉಪಾಧಿಗಳಲ್ಲಿ ಬೇರೆ ಬೇರೆ

ಕಾರ್ಯಗಳನ್ನು ಮಾಡಿ ಅವನು ಪುನ ಅಸಂಗತ್ವವನ್ನು ಕಾಯ್ದುಕೊಳ್ಳು ವನು ಅಂತರಾತ್ಮನು ದೇಹದಲ್ಲಿಯ ಎಲ್ಲ ಕಾರ್ಯಗಳನ್ನು ನಡೆಯಿಸು ತ್ತಿದ್ದರೂ ಅವನು ಅಲಿಪ್ತನಾಗಿಯೇ ಇರುವಂತೆ ಮಹಂತನು ಎಲ್ಲ ಕಡೆ ಯಲ್ಲಿ ಸರ್ವ ಕಾರ್ಯಗಳನ್ನು ಮಾಡುತ್ತ ಇದ್ದು ಎಲ್ಲಿಯೂ ದೊರಕುವದಿಲ್ಲ• ಅವನಿಲ್ಲದೆ ಯಾವ ಕಾರ್ಯಗಳೂ ಒದಗುವದಿಲ್ಲ ತದ್ವಿಪರೀತವಾಗಿ ಅವನೇ ಸರ್ವ ಪ್ರಾಣಿಗಳಿಗೆ ಪ್ರೇರಕನಾಗಿರುವನು ಆದರೂ ಅವನು ಎಲ್ಲಿಯೂ ತೋರುವದಿಲ್ಲ ಅವನು ಜನರಿಗೆ ಹಲವು ಸುಗಮವೂ ಸೂಕ್ಷ್ಮವೂ ಆಗಿ ರುವ ವಿದ್ಯೆಗಳನ್ನು ಕಲಿಸಿ ಜಾಣರನ್ನಾಗಿ ಮಾಡುವನು ಅದರಂತೆ ಅವ ನಿಂದ ಶಿಕ್ಷಿತರಾದವರಿಂದ ಬೇರೆ ಜನರು ವಿದ್ಯೆ ಕಲಿತು ಸ್ವತಂತ್ರ ಕಾರ್ಯ ಪ್ರವರ್ತಕರಾಗುವರು ಇಂಥ ಸರ್ವಜ್ಞ ಹಾಗು ಸರ್ವಕರ್ತಾ ರನು ಅವನೇ ಮಹಂತತ್ವಕ್ಕೆ ಯೋಗ್ಯನಾಗುವನು ಅವನಿಂದ ನ್ಯಾಯ ನೀತಿಗಳ ರಕ್ಷಣೆಯಾಗುವದು ಸ್ವತ ಅನ್ಯಾಯ ಮಾಡನು ಹಾಗು ಇತ ರರಿಂದ ಅನ್ಯಾಯ ಕ್ರಿಯೆಗಳನ್ನು ಮಾಡಗೊಡನು ಅವನು ಗಂಡಾಂತರ ಪ್ರಸಂಗಗಳಿಂದ ಪಾರಾಗುವ ಉಪಾಯಗಳನ್ನು ಹುಡುಕಿ ತೆಗೆಯುವನು. ಇಂಥ ಅಸಾಮಾನ್ಯತೆಯನ್ನು ಧಾರಣ ಮಾಡಿದ ಪುರುಷನು ಅವನಾಗಿರು ವನು ಅವನೇ ಬಹು ಜನರಿಗೆ ಆಶ್ರಯದಾತನಾಗಿರುವನು ಈ ಎಲ್ಲ ಮಹಂತ ಗುಣಗಳನ್ನು ರಘುರಾಮನ ಚರಿತ್ರೆಯಿಂದ ಬೋಧೆ ಮಾಡಿ ಕೊಳ್ಳಬೇಕು''

ಈಪ್ರಕಾರ ಗುರುಗಳು ಹೇಳಿದರು

ಶ್ರೀ ರಾಮ || ೭ ಚಂಚಲನದೀ ನಿರೂಪಣೆ || ಗುರುಗಳು ಶಿಷ್ಯ ನನ್ನು ಕುರಿತು॥—

''ಮಾಯಾ ನದಿಯು ಚಂಚಲವಾಗಿದ್ದು ಗುಪ್ತಗಾಮಿನಿಯಾಗಿದೆ ಈ ಚಂಚಲ ಗಂಗೆಯ ಸ್ಮರಣದಿಂದ ಜಗತ್ತು ಪಾವನವಾಗುವದು ಇದು ಪ್ರತ್ಯಕ್ಷ ಅನುಭವವಾದುದು ಇದರಲ್ಲಿ ಅನ್ಯಥಾ ತೋರುವದಿಲ್ಲ

ಈ ಚಂಚಲ ಗಂಗೆಯು ಆಚಂಚಲದಲ್ಲಿ ನಿರ್ಮಾಣವಾಯಿತು ಅಲ್ಲಿಂದ ಅಧೋಮುಖವಾಗಿ ಒತ್ತರದಿಂದ ಹರಿಯಹತ್ತಿತು. ಈ ಇಡೀ ಅಖಂಡ ನದಿಯನ್ನು ಯಾರೂ ಕಂಡಿರುವದಿಲ್ಲ ಈ ನದಿಗೆ ಅದರ ತಿರು

ಗುವಿಕೆ, ಅಂಕಡೊಂಕಾಗಿ ಹರಿಯುವಿಕೆ, ಅದರಲ್ಲಿಯ ಜಲವು ಸುಳಿಯಾ
ಗುವಿಕೆ ಇವಲ್ಲದೆ – ಉಕ್ಕೇರುವ ತೆರೆಗಳು, ಝರಿಗಳು, ದಂಡೆಗೆ ಅಪ್ಪಳಿ
ಸುವ ತರಂಗಗಳು ಇವೆಲ್ಲವು ಆ ಚಂಚಲ ನದಿಯಲ್ಲಿಯ ಸೊಗಸಿನ ದೃಶ್ಯ
ಗಳು ಈ ನದಿಯಲ್ಲಿಯ ಬತ್ತಿದ ನೀರಿನ ಚಲನವಲನವೂ ಧಾರೆಗಟ್ಟಿ
ಬೀಳುವ ಧಬಧಬೆಗಳ ಸಪ್ಪಳವು, ಚವಲ ನೀರಿನ ಪುಟಿಯುವಿಕೆಯು,
ತುಂಬಿ ಹೊಯ್ದಾಡುವ ನೊರೆಗಳು, ಸಿಕ್ಕ ಸಿಕ್ಕತ್ತ ಪ್ರವಹಿಸುವ ನೀರು,
ಅಗಣಿತ ನೀರಿನ ಹನಿಗಳಿಂದ ಹುಟ್ಟಿದ ತುಷಾರ–ತುಂತುರಗಳು ಇವೆ
ಲ್ಲವು ಕಂಡು ಬರುವವು ಈನದಿಯ ಮಹಾಪೂರಿನಲ್ಲಿ ಅದೆಷ್ಟೋ ಹೊಲಸು
ನಿರಂತರ ಹರಿದು ಹೋಗುವದು ಇದರಲ್ಲಿ ಅಲೆಗಳು, ಕಲ್ಲುಗಳು, ಬುದ್ಬು
ದಗಳು, ಈ ನದಿಯು ಸುತ್ತು ಹಾಕಿದ ದ್ವೀಪಗಳು ಲೆಕ್ಕವಿಲ್ಲದಷ್ಟು ಕಂಡು
ಬರುವವು. ಈ ಮಾಯಾ ನದಿಯು ಮಿದುವಾದ ಮಣ್ಣಿನ ನೆಲವನ್ನು
ಕೊರೆದು ಹರಿದಿದೆ ಕಠಿಣ ಭೂಮಿಯು ಮಾತ್ರ ಹಾಗೆಯೇ ಉಳಿದಿದೆ
ಮಾಯಾ ನದಿಯ ಪ್ರವಾಹದ ಗುಂಟ ಅದೆಷ್ಟೋ ಜೀವಗಳು ಹರಿದು
ಹೋಗುವವು ಆ ನದಿಯ ಪ್ರವಾಹ ತಿರುಗುವಲ್ಲಿ ಎಷ್ಟೋ ಪ್ರಾಣಿಗಳು
ಮುಳು ಮುಳುಗಿ ಮೇಲೇಳುವವು ಕೆಲವು ಕೆಳ ಮುಖವಾಗಿ ಕೊರಕಲು
ಗಳಲ್ಲಿ ಸಿಕ್ಕಿಕೊಂಡಿರುವವು ಕೆಲವು ಜೀವಗಳು ಒಂದಕ್ಕೊಂದು ಅಪ್ಪಳಿಸಿ
ಗತವಾದವು ಕೆಲವು ಚೂರು ಚೂರಾಗಿ ಸತ್ತುಹೋದವು ಎಷ್ಟೋ
ಜೀವಗಳು ನೀರಿನಿಂದ ತುಂಬಿ ಉಬ್ಬಿದವು, ಕೆಲವು ಜೀವಗಳು ಬಲದಿಂದ
ದಾಟಿದವು ಅವು ಪ್ರವಾಹದ ವಿರುದ್ಧ ಈಸುತ್ತ ಉಗಮಕ್ಕೆ ಹೋಗಿ
ನಿಲುಕಿದವು ಅಲ್ಲಿ ತೀರ್ಥರೂಪವಾದ ಉಗಮದರ್ಶನದಿಂದ ಪುನೀತವಾ
ದವು ಆ ಮಾಯಾ ನದಿಯ ಉಗಮ ಸ್ಥಾನದಲ್ಲಿ ಬ್ರಹ್ಮಾದಿಕರ ಲೋಕ
ಗಳಿವೆ, ಬ್ರಹ್ಮಾಂಡ ದೇವತಗಳ ಸ್ಥಾನಗಳಿವೆ ಅಲ್ಲಿ ಎಲ್ಲರಿಗೂ ಅಧೋ
ಮುಖವಾಗಿ ಪ್ರವಹಿಸುವ ಗಂಗೆಯ ದರ್ಶನವಿದೆ ಅಲ್ಲಿಯ ನೀರು ಅತ್ಯಂತ
ನಿರ್ಮಲವು ಅಲ್ಲಿಯ ನೀರು ಅತ್ಯಂತ ನಿರ್ಮಲವು ಅಂಥ ನಿರ್ಮಲ
ಜಲವು ಅದೆಲ್ಲಿಯೂ ಇಲ್ಲ ಮತ್ತು ಆ ನೀರಿನ ಚಂಚಲತೆಯಿಂದ ಅದಕ್ಕೆ
ಆಪೋ ನಾರಾಯಣ ಎಂದು ಹೆಸರು ಮಹಾನದಿಯಂತೆ ಅದು ಅಂತ
ರಿಕ್ಷದಲ್ಲಿ ಹರಿದರೂ ಸರ್ವಕಾಲದಲ್ಲಿಯೂ ಪ್ರತ್ಯಕ್ಷವಾಗಿ ಪ್ರವಹಿಸುವದು

ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕಗಳಲ್ಲಿ ಪಸರಿಸಿರುವದು ದಶ ದಿಕ್ಕುಗಳಲ್ಲೆಲ್ಲ ಆ ಚಂಚಲ ನದಿಯ ನೀರು ಸುತ್ತರಿಸು ಹರಿಯುವ ದನ್ನು ಜಗದೀಶನು ಒಂದೇ ಸವನೆ ನಿರೀಕ್ಷಿಸುತ್ತಿರುವನು ಆ ನದಿಯ ನೀರು ಅನಂತ ಪಾತ್ರೆಗಳಲ್ಲಿ ತುಂಬಿರುವದು ಅವುಗಳಲ್ಲಿ ಎಷ್ಟೋ ನೀರು ಸೋರಿ ಹೋದವು ಎಷ್ಟೋ ನೀರು ಪ್ರಪಂಚ ಬಳಕೆಗೆ ಒಳಿಸಲ್ಪಟ್ಟಿತು ಈ ನದಿಯ ನೀರು ತಾನು ಸಂಪರ್ಕ ಮಾಡಿದ ಪದಾರ್ಥದಂತಯೇ ಸ್ವರೂಪ ಹೊಂದುವದು ಒಂದರ ಸಂಗದಿಂದ ಸೀಯಾಗುವದು ಇನ್ನೊಂದರ ಸಂಗದಿಂದ ಕಹಿಯಾಗುವದು. ಇದರಂತೆ ಬೇರೆ ಬೇರೆ ಸಂಗತಿಯಿಂದ ಬೇರೆ ಬೇರೆ ಗುಣಧರಿಸುವದು, ಈ ನದಿಯ ನೀರು ತಾನು ಸೇರಿದ ಪದಾರ್ಥದ ರೂಪ-ಗುಣ ಹೊಂದುವದು ತಗ್ಗಿನಲ್ಲಿ ತುಂಬಿದ ಈ ನೀರು ತಗ್ಗಿನ ರೂಪ ಹೊಂದುವದು ಈ ಜಲವು ವಿಷದೊಡನೆ ಬೆರೆತುಕೊಳ್ಳಲು ವಿಷವೇ ಆಗುವದು ಅದರಂತೆ ಅಮೃತದಲ್ಲಿ, ಸುಗಂಧ ದ್ರವ್ಯದಲ್ಲಿ ದುರ್ಗಂಧ ಪದಾರ್ಥದಲ್ಲಿ, ಹೀಗೆ ಸೇರಿಸಿಕೊಂಡು ಆ ಆ ಗುಣಗಳನ್ನು ಹೊಂದುವದು ನೀರಿಲ್ಲದೆ ನೀರನ ಮಹಿಮೆ ತಿಳಿಯಲಾರದು ನೀರು ಅಪರಂಪಾರವಾಗಿ ಹರಿಯುವದು ಅದಕ್ಕೆ ನದಿಯೆನ್ನಬೇಕೋ? ಸರೋವರವೆನ್ನಬೇಕೋ ತಿಳಿಯದಾಗಿದೆ ಎಷ್ಟೋ ಮಾನವರು ನೀರಿನಲ್ಲಿಯೇ ವಾಸವಾಗಿರುವರು ಎಷ್ಟೋ ಜನರು ಆ ಮಾಯಾ ನದಿಯ ಉಗಮದ ಆಚೆಗೆ ಹೋಗಿರುವರು ಅಲ್ಲಿ ಸೇರಿ ಅವರು ತಿರುಗಬಂದು ನೋಡಲು ಚಂಚಲಾ ನದಿಯ ನೀರೆಲ್ಲ ಬತ್ತಿ ಹೋಗಿದ್ದಿತು ಅವರಿಗೆ ಒಂದು ಹನಿಯೂ ಕೂಡ ಕಾಣಿಸಲಿಲ್ಲ ಇನ್ನು ಯೋಗೇಶ್ವರನು ವೃತ್ತಿ ಶೂನ್ಯನೆಂತಾಗುವನೆಂಬ ವಿಚಾರವನ್ನು ನೋಡಬೇಕು" ಎಂದು ಗುರುಗಳು ಹೇಳಿದರು

ಶ್ರೀ ರಾಮ|| ೮ ಅಂತರಾತ್ಮ ವಿವರಣೆ || ಗುರುವು ಶಿಷ್ಯನನ್ನು ಕುರಿತು 'ಇನ್ನು ಸಕಲ ಕರ್ತೃತ್ವಕ್ಕೆ ಮೂಲನೂ ಎಲ್ಲ ದೇವತೆಗಳಿಗೆ ಒಡೆಯನೂ ಆಗಿರುವ ಮೂಲಪುರುಷನಾದ ಅಂತರಾತ್ಮನಿಗೆ ನಮಸ್ಕರಿಸುವೆನು ಆತನನ್ನು ಸಮಸ್ತರೂ ಭಜಿಸಬೇಕು ಅವನಿಲ್ಲದೆ ಯಾವ ಕಾರ್ಯಗಳು ಜರಗುವದಿಲ್ಲ ಅಷ್ಟೇ ಏಕೆ ? ಅವನನ್ನು ಬಿಟ್ಟು ಗಿಡದ ಒಂದು ಎಲೆಯು ಕೂಡ

ಅಲ್ಲ[illegible]ನದಿಲ್ಲ ಅವನಿಂದಲೇ ಮೂರೂ ಲೋಕಗಳ ಸ್ಥಿತಿಗತಿಯು ನಡೆಯುತ್ತದೆ ಆತನು ಎಲ್ಲವುಗಳ ಅಂತರಾತ್ಮನು ದೇವ ದೈತ್ಯರು, ಮಾನವ ಪ್ರಾಣಿಗಳು, ಚತುರ್ವಿಧ ಜೀವಕೋಟಿಗಳು, ಚತುರ್ವೇದಗಳು, ಇವಕ್ಕೆಲ್ಲ ಆತನೇ ಪ್ರವರ್ತಕನಾಗಿರುವನು, ಅವನೊಬ್ಬನಿಂದಲೇ ಎಲ್ಲ ಕ್ರಿಯೆಗಳೂ ದಗುವವು ಸಕಲ ಸೃಷ್ಟಿಯ ಭಿನ್ನ ಭಿನ್ನ ಚಕ್ರಗಳ ಚಾಲಕನು ಅವನೇ ಆಗಿರುವನು ಇಷ್ಟಾದರೂ ಅವನು ತೋರನು ಇಂಥ ಆ ಗುಪ್ತೇಶ್ವರನೇ ಈಶ್ವರನೆಂದೆನ್ನಿಸಿಕೊಳ್ಳುವನು ಆತನಿಂದಲೇ ಘನವಾದ ಸಿರಿವಂತರು ಸಕಲೈಶ್ವರ್ಯ ಭೋಗಿಸುವರು ಆತನನ್ನು ಅರಿತ ಜ್ಞಾನಿಯು ಅವನೊಡನೆ ಸಮರಸನಾಗಿ ವಿಶ್ವಂಭರನಾಗುವನು ಎಂದ ಮೇಲೆ ಸಮಾಧಿ, ಸಹಜ ಸ್ಥಿತಿಗತಿಗಳ ಅವಶ್ಯಕತೆಯೇನು? ತ್ರೈಲೋಕ್ಯಗಳ ಸ್ಥಿತಿಗತಿಯನ್ನವಲೋಕಿಸಿದರೆ ಆತನ ಸ್ವರೂಪ ತಿಳಿಯುವದು ಆ ಅಂತರಾತ್ಮನಅಲ್ಪಸ್ವಲ್ಪಜ್ಞಾನದಿಂದಲೇ ಅದೆಷ್ಟೋ ಸಮಾಧಾನವಾಗುವದು ನೋಡಿದ್ದನ್ನು ಮತ್ತೆ ನೋಡುವದು ಹೇಳಿದ್ದನ್ನು ಮತ್ತೆ ಹೇಳುವದು, ಓದಿದ್ದನ್ನು ಮತ್ತೆ ಓದುವದು ಇದರಿಂದ ಉಂಟಾಗುವ ಬೇಜಾರ ಸ್ಥಿತಿಯು ಅಂತರಾತ್ಮನನ್ನು ಕಾಣುವದರಿಂದ ಮುಂತಾಗಿ ಆಗುವದಿಲ್ಲ ಆ ಅಂತರಾತ್ಮನು ಎಂಥವನು? ಹೇಗಿರುವನು? ಎಂಬುದನ್ನು ನೋಡುವವನಲ್ಲಿ ಉಂಟಾದ ದೆಶೆಯನ್ನು ವಿವೇಕದಿಂದ ನೋಡಿ ಕೇಳಿ ತಿಳಿಯಬೇಕು ಜನರು ಕಂಡಷ್ಟನ್ನು ಕೇಳಿದಷ್ಟನ್ನು ಮಾತ್ರ ಹೇಳುವರು ಎಷ್ಟುಕಂಡರೂ ಅದೆಷ್ಟುಕೇಳಿದರೂ ಆಅಂತರಾತ್ಮನಪೂರ್ಣಸ್ವರೂಪವು ತಿಳಿಯಲಾರದು ಮಾನವ ದೇಹಧಾರಿಯು ಗೊಂಬೆಯಂತಿರುವನು ಎಂದ ಮೇಲೆ ಆ ಗೊಂಬೆಗೆ ಜ್ಞಾನವಾಗುವದೆಷ್ಟು? ಆ ಅಂತರಾತ್ಮನು ಪೂರ್ಣನು, ಆತನನ್ನು ನೋಡುವವನು ಅಪೂರ್ಣನು ಆದರೂ ಅಪೂರ್ಣನಾದವನು ಅಂತರಾತ್ಮನ ಅಖಂಡ ಸ್ವರೂಪವನ್ನು ಹೇಳಹತ್ತಿದರೆ ಅವನಿಗೆ ಪೂರ್ಣವಾಗಿಯೇ ತಿಳಿಯುವದು ಅಂದರೆ ಅವನು ಆ ಅಖಂಡತ್ವದಿಂದ ಬೇರೆಯಾಗನು ದೇವಭಕ್ತರಲ್ಲಿ ವಿಭಜನೆಯಿರದೆ ಹೋದರೆ ಆ ಭಕ್ತನು ನಿಜವಾದ ಭಕ್ತನು ಇಲ್ಲದಿದ್ದರೆ ಅವನ ಭಜನಾದಿಗಳು ವ್ಯರ್ಥವೆಂದು ಹೇಳಬಹುದು ಮನೆಯೊಡೆಯನಿಲ್ಲದೆ ಮನೆಯಿಲ್ಲ, ಅರಸನಿಲ್ಲದೆ ರಾಜ್ಯವಿಲ್ಲ ಇದರಂತೆ ದೇಹಧಾರಿಯಿಲ್ಲದೆ ದೇಹವಿಲ್ಲ ಆ ದೇಹಧಾರಿ ಅಂತ

ರಾತ್ಮನು ದೇಹದಲ್ಲಿಕೂಡಿದರಿಂದಲೇ ಪ್ರಾಣಿಯು ವಿಷಯ ಭೋಗಿಸುವನು. ದೇಹ ಸಂಗದಿಂದಲೇ ಆ ಪ್ರಾಣಿಯು ಪೊರೆಯುವದು. ಇಷ್ಟೆಲ್ಲಾದರೂ ಆ ದೇಹಧಾರಿಯನ್ನು ಅದು ತಿಳಿಯದಿರುವದು ಬಹಳ ಆಶ್ಚರ್ಯವು. ಇದನ್ನು ತಿಳಿಯದವರು ಅವಿವೇಕಿಗಳು. ಹೀಗಿದ್ದರೂ ನಾವು ವಿವೇಕಿಗಳೆಂದು ಹೇಳಿಕೊಳ್ಳುವದು ಎಷ್ಟು ಮೂರ್ಖತನವು? ಇರಲಿ, ಅವರವರ ಬುದ್ಧಿಯಂತೆ ಅವರು ಮಾಡಲಿ. ಮೂರ್ಖನಿಗೆತನ್ನಅಂತಸ್ಥ ಈಶ್ವರೀ ಶಕ್ತಿಯು ತಿಳಿಯುವ ದಿಲ್ಲ. ಇದುಸರಿ. ಆದರೆ ಬಲ್ಲಿದವರಾದವರು ಕೂಡ ಮೂರ್ಖರಂತೆ ವರ್ತಿಸಿ ವ್ಯರ್ಥವಾಗಿ ದೈನ್ಯತೆಯನ್ನು ಹೊಂದುವರಲ್ಲ! ತನ್ನ ಅಂತರಾತ್ಮನನ್ನು ಮರೆತು ಆ ದೇವ ಈ ದೇವ ಎಂದು ನೂರೆಂಟು ದೇವರಿಗೆ ಕೈ ಮುಗಿಯುತ್ತ ಹೋಗುವವರಿಗೆ ಅರ್ಥಾತ್ ಅಜ್ಞಾನಿಗಳಿಗೆ ದೇವನ ಸ್ವರೂಪ ತಿಳಿಯಲಾರದು. ಹಾಗು ಆತನು ಅವರಿಗೆ ದೊರೆಯುವದಿಲ್ಲ. ಚಿತ್ತವೃತ್ತಿಯನ್ನು ಒಂದಾಗಿಸಿ (ಏಕ ಚಿತ್ತದಿಂದ) ಚಂಚಲವಾದ ಅಂತರಾತ್ಮನ ಧ್ಯಾನ ಮಾಡ ವದರಲ್ಲಿ ಮನಸ್ಸು ಸುಲಭವಾಗಿ ಪ್ರವೃತ್ತಗೊಳ್ಳುವದಿಲ್ಲ. ಈ ಬ್ರಹ್ಮಾಂಡ ದಲ್ಲಿ ಅನೇಕ ರೂಪಗಳುಳ್ಳ, ಅನೇಕ ಶಬ್ದ ವಾಚಿಗಳುಳ್ಳ ಭೂಗರ್ಭದಲ್ಲಿ ವಾಸವಾಗಿದ್ದ ಹಾಗು ಕಲ್ಲುಕೋಟೆರೆಗಳಲ್ಲಿನ್ನ ಅದೆಷ್ಟೋ ಪ್ರಾಣಿಗಳು ಕಂಡುಬರುವವು. ಆದರೆ ಇವೆಲ್ಲ ಪ್ರಾಣಿಗಳ ಪ್ರತಿಯೊಂದರಲ್ಲಿಯೂ ಅಂತರಾತ್ಮನು ತುಂಬಿರುವನು. ಅವನು ಒಬ್ಬನೇ ಆಗಿದ್ದರೂ ಅನೇಕ ಪ್ರಾಣಿ (ಎಲ್ಲ ಪ್ರಾಣಿ)ಗಳಲ್ಲಿ ವರ್ತಿಸುವನು. ಅವನೊಮ್ಮೆ ಕಾಣುವನು ಒಮ್ಮೆ ಕಾಣದಾಗುವನು. ಚಂಚಲವಾದದು ಎಂದೂ ನಿಶ್ಚಲವಾಗದು. ನಿಶ್ಚಲವೆಂದರೆ ಪರಬ್ರಹ್ಮನು. ಇವನುಚಂಚಲನಲ್ಲ. ಪಂಚ ತತ್ವಗಳಿಂದ ಪಿಂಡ ದೇಹವು. ಆ ತತ್ವಗಳು ವಿವೇಕದಿಂದ ಮೂಲ ತತ್ವದಲ್ಲಿ ಮಿಲನವಾಗಲು ಆಗ ದೇಹ ಬುದ್ಧಿಯು ಅಂದರೆ ನಾನೆಂಬ ಭಾವ ನೆಯು ನಿರ್ಮೂಲವಾಗುವದು. ಇಷ್ಟಾದ ಬಳಿಕ ಎಲ್ಲೆಡೆಗೂ ನಿರ್ಮಲನೂ ನಿಶ್ಚಲನೂ ನಿರಂಜನನೂ ಆಗಿ ತುಂಬಿರುವ ಪರಬ್ರಹ್ಮನೇ. ಪರಬ್ರಹ್ಮನು ಮಾನವನಲ್ಲಿ "ನಾನು ಯಾರು? ಎಲ್ಲಿಯವನು ಹಾಗು ನಾನು ಎಂಥವನು?" ಈ ತಿಳುವಳಿಕೆಗಳಿದ್ದರೆ ಅವನು ವಿವೇಕ ಮಾರ್ಗದಲ್ಲಿದ್ದಂತಾಗುವದು. ಈ ವಿವೇಕ ರಹಿತನೇ ಅಜ್ಞಾನಿಯು. ಅವನಿಗೇನೂ ತಿಳಿಯದು.

ಒಟ್ಟಿನ ಮೇಲೆ ಬುದ್ಧಿವಂತನಾದವನು ವಿವೇಕವನ್ನನುಸರಿಸ ಬೇಕು, ಆ ವಿವೇಕ ಸಾಮರ್ಥ್ಯದಿಂದ ದುಸ್ತರ ಸಂಸಾರ ಸಾಗರವನ್ನು ಹರಿ ಭಕ್ತಿಯೆಂಬ ನಾವೆಯಿಂದ ಕೊನೆಹಾಯಿಸಿ ತನ್ನ ವಂಶವನ್ನು ಉದ್ಧರಿಸ ಬೇಕು" ಎಂದು ಹೇಳಿದರು

ಶ್ರೀ ರಾಮ|| ೯ಉಪದೇಶ|| ಗುರುಗಳು ಶಿಷ್ಯನನ್ನು ಕುರಿತು - "ಮಾನ ವನಿಗೆ ಮೊದಲು ಕರ್ಮ ಸಂಬಂಧವು ಬರುವದು ಈ ಕರ್ಮವನ್ನು ಶಾಸ್ತ್ರಕ್ಕ ನುಸರಿಸಿ ಸರಿಯಾಗಿ ಮಾಡಬೇಕಾಗುವದು ಮಾಡುವ ಕರ್ಮಕ್ಕೆ ಏನೊಂದು ಬಗೆಯಿಂದ ನ್ಯೂನತೆಯುಂಟಾಗಲು ವಿಘ್ನಗಳೊದಗುವವು ಆದ್ದರಿಂದ ಕರ್ಮಕ್ಕಾರಂಭಿಸಿ ಮುಗಿಯುವ ವರೆಗೆ ಮಧ್ಯದಲ್ಲಿ ಏನಾದರೂ ಆತಂಕಗಳೊದಗಿದರೆ ಅಷ್ಟಕ್ಕೆ ಬಿಡದೆ ಹರಿಯನ್ನು ಸ್ಮರಿಸಿ ಮುಂದೆ ಸಾಗಿಸ ಬೇಕು ಇನ್ನು ಸ್ಮರಣೆಗೆ ತಕ್ಕ ಹರಿಯು ಎಂಥವನೆಂಬ ವಿಚಾರವನ್ನು ನೋಡೋಣ ಪ್ರತಿದಿನವೂ ಸಂಧ್ಯಾವಂದನೆಯ ಮೊದಲಲ್ಲಿ ಜಗದೀಶ ನಾದ ಶ್ರೀಹರಿಯನ್ನು ಇಪ್ಪತ್ನಾಲ್ಕುನಾಮಗಳಿಂದ ಸ್ಮರಣೆ ಮಾಡತಕ್ಕದ್ದು ಆತನಿಗೆ ಈ ಇಪ್ಪತ್ನಾಲ್ಕು ನಾಮಗಳಷ್ಟೇ ಇರುವದಿಲ್ಲ ಅವನ ಸಂಬಂಧ ವಾಗಿ ಸಾವಿರ ನಾಮಗಳು ಅನಂತ ನಾಮಗಳು ಇದ್ದರೂ ಅವನು ನಾಮ ರಹಿತನೇ ಆಗಿರುವನು ಈ ಅನಾಮಿಯಾದ ಅಂತರ್ಯಾಮಿಯನ್ನು ವಿವೇಕ ದಿಂದ ಅರಿತುಕೊಳ್ಳಬೇಕು ಬ್ರಾಹ್ಮಣನು ಸ್ನಾನ ಮಾಡಿ ಸಂಧ್ಯಾವಂದನೆ ತೀರಿಸಿ ದೇವತಾರ್ಚನೆ ಮಾಡುವನು ದೇವ ಪ್ರತಿಮೆಯನ್ನು ವಿಧಾನೋಕ್ತ ಪೂಜಿಸುವನು ಜನರು ಪ್ರೇಮದಿಂದ ಹಲವು ದೇವತೆಗಳ ಹಲವು ಪ್ರತಿಮೆ ಗಳನ್ನು ಅರ್ಚಿಸುವರು ಅವರವರು ಪೂಜಿಸುವ ಪ್ರತಿಮೆಗಳಲ್ಲಿ ಪರಮಾತ್ಮ ನನ್ನು ತಿಳಿದುಕೊಳ್ಳವದು ಅವಶ್ಯವಿಲ್ಲವೇ ? ಪರಮಾತ್ಮನೆಂದೇ ಅರಿತುಕೊ ಳ್ಳಬೇಕು, ಹೀಗೆ ತಿಳಿದು ಆ ಪರಮಾತ್ಮನ ಭಜನೆ ಮಾಡಬೇಕು ತಿಳಿ ಯದ ಹೊರತು ಭಜಿಸಲು ಬರಲಾರದು ಹೇಗೆಂದರೆ- ಒಬ್ಬಾನೊಬ್ಬ ಅಪರಿ ಚಿತ ಅಧಿಕಾರಿಯು ಬಂದ ಕೂಡಲೆ ಅವನು ವರಿಷ್ಠಾಧಿಕಾರಿ ಎಂದು ತಿಳಿ ಯದ ವರೆಗೆ ಯಾರೂ ವಂದನೆ ಮಾಡುವದಿಲ್ಲ, ಮನ್ನಣೆ ಮಾಡುವದಿಲ್ಲ. ಅದರಂತೆ ಪ್ರತಿಮೆಗಳಲ್ಲಿ ಕಲ್ಪಿತ ದೇವನನ್ನು ಅತನು ಪರಮಾತ್ಮನೆಂದು ತಿಳಿದ ನಂತರವೇ ಪೂಜೆ ಯೋಗ್ಯವು ಆದ್ದರಿಂದ ವಿಚಾರಪೂರ್ವಕ ಪರ

ಮಾತ್ಮನನ್ನು ಅರಿತುಕೊಳ್ಳಬೇಕು ಅರ್ಚಕನಿಂದ ಪ್ರತಿಷ್ಠೆ ಪೂಜೆಗೊಳ್ಳು ವದು ಆದರೆ ಪೂಜೆ ಮಾಡುವವನ ಶರೀರದಲ್ಲ ಅಂತರಾತ್ಮನ ಸಂಚಾರ ವಾಗುವದು ದೇವರ ಇಲ್ಲವೆ ಮಹಂತರ ಅವತಾರವಾದರೂ ಆವಾದರೂನಿಜ ರೂಪದಲ್ಲಿಅಂತರಾತ್ಮನನ್ನು ಕಾಣುವವು ಆ ನಿಜರೂಪವೇ ಜಗಜ್ಯೋತಿಯು ಈ ಜಗಜ್ಯೋತಿಯೇ ಸತ್ವಗುಣಾ ಧಿಷ್ಠಿತವಾಗಿರುವದು,ಸರ್ವರ ಅಂತಸ್ಥವಾಗಿ ರುವ ಜೀವನಜ್ಯೋತಿಯೇ ಅದಾಗಿರುವದು ಅದೇ ಜೀವನ ಕಳೆಯು ಈ ಜೀವ ಕಳೆಯ ಹೊಟ್ಟೆಯಲ್ಲಿ ಕೊಟ್ಯಾನುಕೋಟಿ ದೇವತೆಗಳಿರುವರು ಇದು ಅನುಭವದಿಂದ ಕಂಡು ಬರುವಂತಹದು ಶರೀರವೆಂಬ ಪಟ್ಟಣದ ಒಡೆ ಯನು ಪುರುಷನು ಅದರಂತೆ ಜಗತ್ತಿಗೆ ಜಗದೀಶನು ಇವನೇ ಪುರು ಷೋತ್ತಮನು ಎಲ್ಲ ಜೀವಿಗಳ ಅಂತಸ್ಥವಾಗಿ ಎಲ್ಲ ಶರೀರಗಳನ್ನು ನಡೆಯಿ ಸುವ ಜ್ಞಾನಕಳೆಯೇ ವಿಷ್ಣುವು ಅವನು ಜಗದಂತರ್ಯನಾಗಿರುವನು ಮತ್ತು ನಮ್ಮಲ್ಲಿಯಾದರೂ ಅಂತಸ್ಥನಾಗಿರುವನು ಅವನೇ ಕರ್ತಾರನು ಅವನೇ ಭೋಕ್ತಾರನು ಇಂಥ ಚತುರನಾದ ಆ ಅಂತರಾತ್ಮನನ್ನು ಅರಿತುಕೊಳ್ಳ ಬೇಕು ಆ ಅಂತರಾತ್ಮನೇ ಜ್ಞಾನೇಂದ್ರಿಯ ಕರ್ಮೇಂದ್ರಿಯ ಕ್ರಿಯೆಗಳ ಕರ್ತೃವಾಗಿರುವನು। ಇಂತು ಜಗತ್ತಿನ ಒಬ್ಬನೇ ಜೀವನ ಸೂತ್ರಧಾರಿ ಯಾಗಿದ್ದ ಆ ಅಂತರಾತ್ಮನನ್ನು ತಿಳಿಯದೆ ದೇಹ ಮಮತೆಯಿಂದ ಅಡ್ಡ ಮಾರ್ಗ ಹಿಡಿಯುವರು ಅವರು ದೇಹಾಭಿಮಾನಿಗಳಾಗಿ ದೇಹಾಸಕ್ತಿ ಯಿಂದ ಪ್ರತಿಯೊಂದು ಜೀವನು ನನ್ನಿಂದ ಹೊರತಿರುವನೆಂಬದಾಗಿ ಮಿಥ್ಯಾ ಭಿಮಾನದಿಂದ ಹೇಳುತ್ತಿರುವರು ಹುಟ್ಟುವದು ಬೆಳೆಯುವದು, ಸಾಯು ವದು, ಕೊಲ್ಲುವದು ಇವೆಲ್ಲವು ಪ್ರತಿಯೊಂದು ಶರೀರದ ಲೆಕ್ಕದಿಂದ ಬೇರೆ ಬೇರೆಯೆಂದು ಮಾತ್ರ ತೋರುವವು ಆದರೆ ಇವೆಲ್ಲವು ಒಂದೇ ಮಹಾಸಾಗ ರದ ಮೇಲೆ ಉಕ್ಕುಕ್ಕಿಬರುವ ತೆರೆಗಳೋಪಾದಿಯಲ್ಲಿಅಂದರೆಅವು ಬೇರೆಬೇರೆ ಯಾಗಿ ಭಾಸಿಸುವ ಹಾಗೆ ಭಾಸಮಾತ್ರವಾಗುವವು ತ್ರೈಲೋಕ್ಯಗಳನ್ನು ಸ್ಥಿತಿಗೆ ತಂದಿರುವ ತ್ರೈಲೋಕ್ಯನಾಯಕನೆಂದರೆ ಅಂತರಾತ್ಮನು ಒಬ್ಬನೇ ಆಗಿರುವನು ಇಂತು ಇದು ಅಂತರಾತ್ಮನ ಬಗೆಗೆ ವಿವೇಕ ಅನುಭವವಾಯಿತು ಆ ಅಂತರಾತ್ಮನು ಸತ್ವಗುಣಾಧಿಷ್ಠಾನ ವಿಷ್ಣುವೂ ಹಾಗು ಅಂತಃಕರಣವೂ ಈ ರೂಪಗಳು ಜೀವಿಗಳ ಹಾಗು ಜಗತ್ತಿನ

ಅಂತಸ್ಥವಾಗಿ ಇರುವವು ಇದನ್ನು ಚನ್ನಾಗಿ ವಿಚಾರಮಾಡಿ ಅನುಭವ ಪಡೆದರ ಆತನು ತತ್ವಗಳಲ್ಲಿ ಸಮಾವಿಷ್ಟನೆಂಬದು ತಿಳಿಯುವದು ತತ್ವಗಳೆಲ್ಲ ನಾಶವಂತವಾದ ದರಿಂದ ಅವನ್ನು ತತ್ವಗಳಲ್ಲಿಯೇ ಬಿಟ್ಟುಗೊಟ್ಟು ಮಹಾವಾಕ್ಯದ ವಿಚಾರವನ್ನು ಮಾಡಬೇಕು ಮೊದಲು ದೇಹಧಾರಿ ಅಂತರಾತ್ಮನನ್ನು ಅರಿತು ನಂತರ ಅವನನ್ನೇ ಜಗತ್ತಿನ ಅಂತರದಲ್ಲಿ ನಿರೀಕ್ಷಿಸಬೇಕು ಇಷ್ಟಾದಮೇಲೆ ಪರಬ್ರಹ್ಮನನ್ನು ಹೊಂದಬೇಕು ಆ ಪರ ಬ್ರಹ್ಮನ ವಿಚಾರದಿಂದ ಸಾರಾಸಾರಗಳನ್ನು ತಿಳಿದದ್ದಾದರೆ ನಿಶ್ಚಯವಾಗಿ ಚಂಚಲವು ದೂರಾಗುವದು ನಿರಂಜನವು ಸೃಷ್ಟಿ–ಸ್ಥಿತಿ–ಲಯಗಳಿಂದ ಬೇರೆಯಾಗಿರುವದು ಈ ಜ್ಞಾನದ ಪರಿಪಾಕವು ವಿಜ್ಞಾನದಲ್ಲಿ ಅಂದರೆ ಸ್ವ ಸ್ವರೂಪಾನುಭವದಲ್ಲಿ ಆಗುತ್ತಿರುವದು ಎಂಟೂ ದೇಹಗಳ ನಿರಸನವಾಗಲು ನಿರಂಜನ ಪರಬ್ರಹ್ಮವೇ ಉಳಿಯುವದು ಆಗ ವಿಚಾರವು ಅನನ್ಯವಾಗವದು, ಪ್ರತ್ಯಕ್ಷಾನುಭವವಾಗುವದು ಈ ತರಹದ ವೃತ್ತಿಯೇ ನಿವೃತ್ತಿ ಪದಕ್ಕೆ ತಕ್ಕದ್ದಾಗುವದು ಮಹಾವಾಕ್ಯದ ವಾಚ್ಯಾರ್ಥವನ್ನರಿತಮೇಲೆ ಲಕ್ಷ್ಯಾರ್ಥವನ್ನು ಮನಸಿನಲ್ಲಿ ತರಬೇಕು ಬಳಿಕ ಆ ಲಕ್ಷ್ಯಾರ್ಥವನ್ನೂ ಬಿಟ್ಟು ಅನನ್ಯನಾಗಲು ಕೊನೆಗೆ 'ಅಹಂಬ್ರಹ್ಮಾಸ್ಮಿ' ಎಂಬ ವೃತ್ತಿಲೇಶವೂ ಬಿಟ್ಟ ಹೋಗುವದು'' ಎಂದು ಹೇಳಿದರು

ಶ್ರೀ ರಾಮ ॥ ೧೦ ನಿಸ್ಪೃಹ ವರ್ತನೆ ॥ ಆ ಬಳಿಕ ಗುರುಗಳು ಶಿಷ್ಯನನ್ನು ಕುರಿತು:—

'' ಮೂರ್ಖನು ಸಂಕುಚಿತ ಸ್ಥಿತಿಯಲ್ಲಿದ್ದರೆ ಚತುರನು ವ್ಯಾಪಕನಾಗಿರುವನು ಆ ಚತುರನು ಹಲವು ಬಗೆಯಿಂದ ಹಲವು ಸುಖಗಳನ್ನು ಉಪಭೋಗಿಸುವನು- ಅಂತರಾತ್ಮನು ವ್ಯಾಪಕಗಳಲ್ಲಿ ಅತ್ಯಂತ ವ್ಯಾಪಕನು ಹಾಗು ಮಹಂತರಲ್ಲಿ ಹಿರಿಯ ಮಹಂತನು ಸರ್ವವನ್ನೂ ತಿಳಿಯುವ ಆ ವಿಖ್ಯಾತ ಯೋಗಿಯು ಎಲ್ಲ ಭೂತಾಂತರ್ಗತನಾಗಿ ವಾಸವಾಗಿರುವದರಿಂದ ಅವನು ಅತ್ಯಂತ ವ್ಯಾಪಕನಾಗಿರುವನು ಅಂದಮೇಲೆ ಅವನು ಸಂಕುಚಿತನಲ್ಲ ಸರ್ವ ಕರ್ತಾರನೂ ಸರ್ವ ಭೋಕ್ತಾರನೂ

ಅವನೇ ಸಕಲ ಸೃಷ್ಟಿಯ ನಿಯಂತಾರನು ಅವನೇ ಅವನಂಥ ಸಂಪೂರ್ಣ ಸಿರಿಸಂತನೆಂದರೆ ಅವನೇ ಈ ಅಂತರಾತ್ಮನಂತೆಯೇ ಮಹಂತನು ಸಾರ ಶೋಧಕನೂ, ವ್ಯಾಪಕನೂ, ಸರ್ವತ್ರಸ್ಥಿತನೂ ಇರಬೇಕು. ಆದರೆ ಹಾಗೆ ಎಲ್ಲಿಯೂ ಕಂಡು ಬರುವದಿಲ್ಲ ಮತ್ತು ಮಹಂತನು ಕೀರ್ತಿ ರೂಪದಿಂದ ಸಣ್ಣ ದೊಡ್ಡವರಲ್ಲೆಲ್ಲ ಪರಿಚಿತನಾಗಿರಬೇಕು ಆದರೆ ಅವನ ಸ್ಥಿರವಾದ ವೇಷವೊಂದೂ ಇರುವದಿಲ್ಲ ಅವನ ಕೀರ್ತಿಯು ಮಾತ್ರ ಅಚಲವು ಆದರೆ ಅವನ ಸ್ವರೂಪ ನಿರೀಕ್ಷಿಸಲು ಸಾಮಾನ್ಯರಿಗೆ ಏನೊಂದೂ ತಿಳಿಯದ. ವೇಷಗಳು ಭೂಷಣವಲ್ಲ ಅವು ಹೇಗಿದ್ದರೂ ದೂಷಣವು ಆದರೆ ಕೀರ್ತಿಯು ಮಾತ್ರ ಭೂಷಣವು ಅವನು ನಿರಂತರವೂ ಅಂತ ರ್ಯಾಮಿ ಚಿಂತನ (ಚಾಲನ)ದಲ್ಲಿಯೇ ಮಗ್ನನು ತನ್ನ ಪರಿಚಿತರನ್ನು ಬಿಟ್ಟು ನಿತ್ಯವೂ ಹೊಸ ಹೊಸ ಜನರಲ್ಲಿ ಸಂಚರಿಸುವನು ಮನಸಿನಿಂದ ಜನರ ಪರೀಕ್ಷೆ ಮಾಡುವನು ಆದರೂ ಯಾರನ್ನೂ ಸ್ನೇಹಕ್ಕೆ ಬಯಸಲಾರನು ಯಾರೊಬ್ಬರನ್ನೂ ಸಂಪೂರ್ಣ ನೋಡನು ಪೂರ್ಣವಾಗಿ ಯಾರೊಡನೆಯೂ ಮಾತಾಡಲಾರನು ಒಂದೆಡೆಯಲ್ಲಿ ಚಿರಕಾಲ ನಿಲ್ಲನು, ತಾನು ಹೋಗತಕ್ಕ ಸ್ಥಳವನ್ನು ಯಾರಿಗೂ ಹೇಳನು ಹೇಳಿದರೂ ಅಲ್ಲಿಗೆ ಹೋಗನು ತನ್ನ ಸ್ಥಿತಿಯ ಬಗೆಗೆ ಅವನು ಎಂದೂ ಅನುಮಾನಗೊಳ್ಳನು ಜನರು ಸರಿಪಡಿಸಿದ್ದನ್ನು ತಪ್ಪಿಸುವನು ಜನರು ಭಾವಿಸಿದ್ದನ್ನು ಮರೆಸುವನು ಜನರು ತರ್ಕಿಸಿದ್ದನ್ನು ನಿಷ್ಫಲವನ್ನಾಗಿ ಮಾಡಿ ತೋರಿಸುವನು ಜನರಿಗೆ ಪ್ರಿತಿಯೆನ್ನಿಸಿದ ವಸ್ತುವನ್ನು ಇವನು ಅನಾದರಿಸುವನು ಜನರು ಯಾವದೊಂದರಲ್ಲಿ ತತ್ಪರತೆಯನ್ನು ತೋರಿಸಿದ್ದರಲ್ಲಿ ಆತನು ತನ್ನ ನಿರಾಶೆಯನ್ನು ವ್ಯಕ್ತಪಡಿಸುವನು ಇಂತು ಆ ಯೋಗೇಶ್ವರನು ಕಲ್ಪನೆ, ತರ್ಕ, ಹಾಗು ಭಾವನೆಗಳಿಂದ ಹೊಂದಿಕೊಂಡಿರದವನು ಅವನ ಮರ್ಮವನ್ನಾರಿಗೂ ತಿಳಿಯದು ಅವನು ಒತ್ತಟ್ಟಿಗೆ ಇರಲಾರನು ಕಥಾ ಕೀರ್ತನದಲ್ಲಿಯೇ ಕಾಲ ಕಳೆಯುವನು ಒಂದರಕ್ಷಣ ಸಹ ವಿಶ್ರಾಂತಿಯಿಲ್ಲ ಜನರ ಮನಸಿನ ಸಂಕಲ್ಪ ವಿಕಲ್ಪಗಳನ್ನು ಇವನು ನಿಷ್ಫಲವನ್ನಾಗಿ ಮಾಡಿತೋರಿಸುವನು ಜನರು ತಮ್ಮ ಆಶೆ ನಿರಾಶೆಗಳಿಂದ ತಾವೇ ನಾಚಿಕೆಗೊಳ್ಳುವಂತೆ ಇವನು ಮಾಡುವನು

ಇಂಥ ವೃತ್ತಿಯು ಈ ಯೋಗೇಶ್ವರನದಾಗಿದೆ. ಬಹುಜನರು ಯಾವದೊಂದು ಮಹತ್ಕೃತ್ಯದ ವಿಷಯಕ್ಕೆ ಬಹಳ ಶೋಧಮಾಡಿ ನೋಡಿದಮೇಲೆ ಈ ಯೋಗೇಶ್ವರನ ಅಭಿಪ್ರಾಯವೇ ಯೋಗ್ಯವೆಂದು ತಿಳಿದು ಆ ಬಳಿಕ ಆ ಕಾರ್ಯಕ್ಕೆ ಆರಂಭಿಸುವರು. ಇನ್ನೂ ಮಹಂತನ ವಿಷಯುವನ್ನು ಗೊತ್ತುಮಾಡಿ ಕೊಡುವದಾದರೆ—

'ಮಹಂತನು ಸತತವೂ ಏಕಾಂತವಾಸನಾಗಿರಬೇಕು, ಅಭ್ಯಾಸ ಬಿಟ್ಟಿರಕೂಡದು ತನ್ನ ಜೀವಿತ ಕಾಲವು ಇತರರಿಗೂ ಸಾರ್ಥಕವಾಗುವಂತೆ ಆಚರಿಸಬೇಕು ಕಂಡದ್ದರಲ್ಲಿಯ ಉತ್ತಮ ಗುಣಗಳನ್ನೆಲ್ಲ ಗ್ರಹಣ ಮಾಡುತ್ತಿರಬೇಕು ತಾನು ಗುಣವಂತನಾಗಿ ಜನರಿಗೆ ನೀತಿಯನ್ನು ಕಲಿಸಬೇಕು ತನ್ನ ವರ್ತನದಿಂದ ಬಹುಜನರನ್ನು ಆಕರ್ಷಿಸಿಕೊಂಡು ಜನಸಂಘ ಮಾಡಿಕೊಳ್ಳಬೇಕು. ಆದರೂ ಗುಪ್ತ ರೀತಿಯಿಂದಿರಬೇಕು ಬಿಡುವಿಲ್ಲದೆ ಹಲವು ಕೆಲಸಗಳನ್ನು ಕೈಕೊಂಡು ಆ ಉದ್ಯೋಗಗಳಲ್ಲಿ ನಿರತನಾಗಿರಬೇಕು ಜಗತ್ತನ್ನು ಉಪಾಸನೆಯು ಕಡೆಗೆ ದಕ್ಷವನ್ನಾಗಿ ಮಾಡಬೇಕು ಜನರು ಯಾವಾಗಲೂ ತನ್ನ ಆಜ್ಞೆಯನ್ನು ನಿರೀಕ್ಷಿಸುವಂತೆ ಅವರನ್ನು ತರಬೇತು ಗೊಳ್ಳಿಸಬೇಕು ಕಷ್ಟದಿಂದ ಫಲವೆಂಬ ಸಿದ್ಧಾಂತವನ್ನರಿಯಬೇಕು ಶ್ರಮ ಪಡದೆ ಮಾಡಿದ ಕಾರ್ಯವು ನಿರರ್ಥಕವೆಂದು ತಿಳಿಯಬೇಕು ನಾಕಷ್ಟು ಉದ್ಯೋಗವಿಲ್ಲದೆ ದಷ್ಟಪುಷ್ಟನಾಗುವದು ವ್ಯರ್ಥವು ಜನರನ್ನು ಹಲವು ಬಗೆಯಿಂದ ಪರೀಕ್ಷಿಸಿ ಅವರವರ ಯೋಗ್ಯತೆಗಳನ್ನು ಕಾಣಬೇಕು ಹಾಗು ಅವಕ್ಕೆ ತಕ್ಕಂತೆ ಅವರೊಡನೆ ದೂರ ಸಮೀಪ ಸಂಬಂಧವನ್ನಿಡಬೇಕು ಅಧಿಕಾರ ಪರತ್ವದಿಂದ ಹಲವು ಕಾರ್ಯಗಳು ಸಿದ್ಧಿಸುವವು ಆದರೆ ಅಧಿಕಾರವಿಲ್ಲದಾಗಲು ಕಾರ್ಯ ಫಲಗಳೊದಗುವದಿಲ್ಲ ಆದ್ದರಿಂದ ಜನರ ಅಧಿಕಾರಗಳ ಅಳತೆಯನ್ನು ಕಂಡುಕೊಳಬೇಕು ಅಧಿಕಾರ ನೋಡಿ ಕೆಲಸ ಮಾಡಲು ಹೇಳಬೇಕು ಮನಸ್ಸನ್ನು ಪರೀಕ್ಷಿಸದೆ ವಿಶ್ವಾಸವಿಡಬಾರದು ಏನಾದರೂ ತನ್ನ ಸತ್ವವನ್ನು ಕಾಯ್ದುಕೊಳ್ಳಬೇಕು ಇವೆಲ್ಲವು ಅನುಭವದ ಮಾತುಗಳು ಯೋಗ್ಯಕಂಡರೆ ಬೇಕಾದವನ್ನು ಸ್ವೀಕರಿಸಬೇಕು ಮಹಂತನು ಇನ್ನೊಬ್ಬರನ್ನು ತನ್ನಂತೆ ಮಹಂತ

ರಸ್ನಾಗಿ ಮಾಡಬೇಕು. ಅವರನ್ನು ತನ್ನ ಯುಕ್ತಿ ಬುದ್ಧಿಗಳಿಂದ ಶಿಕ್ಷಿತರ
ಸ್ನಾಗಿ ಮಾಡಬೇಕು ಮತ್ತು ಹೀಗೆ ತರಬೇತು ಹೊಂದಿದ ಅವರು ಬೋಧೆ
ಪ್ರಸಾರಕ್ಕಾಗಿ ದಿಕ್ಕು ದಿಕ್ಕಿಗೆ ಹಬ್ಬಿ ಹರಡುವಂತೆ ಯತ್ನಿಸಬೇಕು." ಎಂದು
ಹೇಳಿದರು.

ಇಂತಿ ದಾಸಬೋಧೆ ೧೭ನೆಯ ದಶಕ ಮುಗಿದುದು.





## ಜಯ ಜಯ ರಘುವೀರ ಸಮರ್ಥ

## ೧೨ನೆಯ ದಶಕ [ವಿವೇಕ ವೈರಾಗ್ಯ]

ಶ್ರೀ ರಾಮ ಸಮರ್ಥ ॥ ವಿಮಲ ಲಕ್ಷಣ ॥ ಗುರುವು ಶಿಷ್ಯನನ್ನು ಕುರಿತು—

"ಪ್ರಪಂಚವನ್ನು ಮೊದಲು ವಿಸ್ತರಿಸಿಕೊಂಡು ನಂತರ ವಿವೇಕದಿಂದ ಪರಮಾರ್ಥವನ್ನು ಸಾಧಿಸಿಕೊಳ್ಳತಕ್ಕದ್ದು ವಿಚಾರವಂತರು ಇದರಲ್ಲಿ ಆಲಸ್ಯಮಾಡಬಾರದು ಪ್ರಪಂಚವನ್ನು ಬಿಟ್ಟು ಪರಮಾರ್ಥಕ್ಕೆಳಸಿದರೆ ಕಷ್ಟಕ್ಕೆ ಗುರಿಯಾಗಬೇಕಾಗುವದು ಕೂಳಗೇಡಾಗಬೇಕಾಗುವದು ಅಂದಮೇಲೆ ಇಂಥ ದರಿದ್ರನಿಗೆ ಪರಮಾರ್ಥವೇಕೆ? ಒಂದು ವೇಳೆ ಪರಮಾರ್ಥವನ್ನೇ ಬಿಟ್ಟು ಪ್ರಪಂಚವನ್ನು ನಂಬಿಕೊಂಡದ್ದಾದರೆ ಯಮಯಾತನೆಗಳನ್ನು ಭೋಗಿಸಬೇಕಾಗುವದು ಈ ಯಮಯಾತನೆಗಳು ಕೊನೆಯಲ್ಲಿ ಬಹು ಕಷ್ಟದಾಯಕಗಳಾಗುವವು ಸೇವಕನೊಬ್ಬನು ತನ್ನ ಒಡೆಯನ ಕೆಲಸವನ್ನು ಮಾಡುವಲ್ಲಿ ದಕ್ಷತೆ ವಹಿಸದಿದ್ದರೆ ಇಲ್ಲವೆ ಆಲಸ್ಯತನದಿಂದ ಕೆಲಸ ಕೊನೆಗಾಣಿಸದಿದ್ದರೆ ಅವನು ಒಡೆಯನ ಅಪ್ರೀತಿಗೆ ಕಾರಣನಾಗುವನು ಇಷ್ಟೇ ಅಲ್ಲ ಅವನು ತನ್ನ ಕೆಲಸವನ್ನೂ ಕೂಡ ಕಳೆದುಕೊಳ್ಳಬಹುದು ಇದರಿಂದ ಆ ಸೇವಕನ ಮಹತ್ವವುಳಿಯದಂತಾಗಿ ಅವನು ಅಪಹಾಸ್ಯಕ್ಕೀಡಾಗುವನು ಅಂತೆಯೇ ಪರಮಾರ್ಥ ಪ್ರಪಂಚಗಳ ಸಂಬಂಧವನ್ನು ಅನ್ಯೋನ್ಯವೆಂದರಿಯದ ಜೀವನ ಸ್ಥಿತಿಯು ಹೀನಾಯವುಳ್ಳದ್ದಾಗುವದು ಆದ್ದರಿಂದ ಪರಮಾರ್ಥದ ಪ್ರತ್ಯಕ್ಷಾನುಭವಕ್ಕಾಗಿ ಭಗವಂತನ ಸ್ಮರಣೆಯಲ್ಲಿದ್ದುಕೊಂಡು ಪ್ರಪಂಚವನ್ನು ಸಾಧಿಸಿಕೊಳ್ಳಬೇಕು ಸಂಸಾರದಲ್ಲಿದ್ದು ಮುಕ್ತ ಸ್ಥಿತಿಯನ್ನು ಪಡೆದವನೇ ಯೋಗಿಯು ಯಾಕಂದರೆ ಆತ್ಮಾನುಸಂಧಾನವು ಅವನಿಂದಲೇ ಸಾಧಿಸುವದು ಹೀಗೆ ನಿಜಾತ್ಮ ತತ್ವದಲ್ಲಿ ದಕ್ಷನಾಗಿರುವವನಿಗೆ ಪರಮಾರ್ಥವು ಸಾಧ್ಯವು ಪ್ರಪಂಚ ಪರಮಾರ್ಥಗಳೆರಡೂ ಒಳಿತವು ಎರಡೂದರಲ್ಲಿ ದಕ್ಷತೆಯಿರಬೇಕು ಆಧರಿಸದ ಪ್ರಪಂಚವೂ ಡಾಂಭಿಕವಾದ ಪರಮಾರ್ಥ

ವೃತ್ತಿಯೂ ಹಿತಕಾರಿಗಳಲ್ಲ ಆದ್ದರಿಂದ ಪ್ರಪಂಚದ ನಿಜ ಸ್ವರೂಪವನ್ನರಿತು ದಕ್ಷತೆಯಿಂದ ಪರಮಾರ್ಥ ಸಾಧಿಸಿಕೊಳ್ಳತಕ್ಕದ್ದು ಈ ವಿಷಯದಲ್ಲಿ ಪ್ರತಿಯೊಬ್ಬನು ಹಿಂದು ಮುಂದಿನ ವಿಚಾರದಿಂದ ಅಡಿಯನ್ನಿಡಬೇಕ ಹೇಗೆಂದರೆ ಮರದ ಎಲೆಗಳ ಮೇಲೆ ಓಡಾಡುವ ಕೀಟಕವು ಒಂದು ಎಲೆಯಿಂದ ಇನ್ನೊಂದು ಹತ್ತರಿದ್ದ ಎಲೆಗೆ ಸಾಗುವಾಗ ಮುಂದಿನ ಕಾಲಿನಿಂದ ತಾನು ಸೇರುವ ಎಲೆಯ ಸ್ಥಿತಿ ನಿರೀಕ್ಷಿಸಿ ಸಾಗುವದು ಇಷ್ಟು ಬುದ್ಧಿಯು ಆ ಕ್ಷುದ್ರ ಜಂತುವಿಗಿರುವದು ಎಂದಮೇಲೆ ಬುದ್ಧಿವಂತನೆಂದು ಹೆಸ್ಮರಪಡುವ ಮಾನವ ಜೀವ ಜಂತುವಿಗೆ ಈ ವಿಚಾರವಿರಬಾರದೇಕೆ? ಅವಶ್ಯವಾಗಿ ಇರಲಿಕ್ಕೇಬೇಕು

ಮಾನವನಲ್ಲಿ ದೀರ್ಘ ವಿಚಾರವಿರಬೇಕು. ಚಿಕಿತ್ಸಕತೆಯಿರಬೇಕು ಮುಂದಾಗುವದನ್ನು ಅನುಮಾನದಿಂದ ಕಂಡುಕೊಳ್ಳಬೇಕು ಸುಖವಾಗಿದ್ದವನಲ್ಲಿ ಎಚ್ಚರಿಕೆಯಿದ್ದಂತೆ ಸುಖವಿಲ್ಲದವನಲ್ಲಿ ಇವರುವದಿಲ್ಲ ಈ ಬಗೆಯೇ ರೂಢಿಯಲ್ಲಿ ಕಂಡು ಬರುವದು ಆದ್ದರಿಂದ ಪ್ರಪಂಚ ಪರಮಾರ್ಥಗಳೆರಡನ್ನೂ ದಕ್ಷತೆಯಿಂದ ಸಾಧಿಸಿಕೊಳ್ಳುವವನು ಧನ್ಯನು ಅವನೇ ಸುಖಿಯು ಅವನಿಗೇ ಆತ್ಮಹಿತವನ್ನು ಸಾಧಿಸಿಕೊಂಡು ಜನರ ಸಮಾಧಾನವನ್ನು ಕಾಯ್ದುಕೊಳ್ಳಲು ಬರುವದು ಸಾರಾಸಾರ ವಿಚಾರದಿಂದ ಅಸಾರವನ್ನು ಬಿಟ್ಟು ಸಾರಭೂತವಾದ ಬ್ರಹ್ಮ ವಸ್ತುವನ್ನು ಅಂಗೀಕರಿಸಿಕೊಳ್ಳಬೇಕು ಇಲ್ಲದೆ ಹೋದರೆ ಅವನಿಗೆ ವ್ಯತ್ಯಯಿಸಂಧ ಗಂಡಾಂತರಗಳೊದಗುವವು ಆ ಬಳಿಕ ಅದನ್ನು ದೂರಮಾಡುವದು ಅಶಕ್ಯವಾಗುವದು. ಆದ್ದರಿಂದ ದೂರದರ್ಶಿಗಳು ವಿವೇಕ ಯುಕ್ತರಾಗಬೇಕು ಪರಮಾರ್ಥದಲ್ಲಿ ಮನಸ್ಸನ್ನು ತೊಡಕಿಸಿ ಪ್ರಪಂಚ ಸಾಧಿಸಿಕೊಳ್ಳುವವರನ್ನು ನಿರೀಕ್ಷಿಸಬೇಕು ಅಂದರೆ ತನ್ನಲ್ಲಿಯೂ ಅಂಥ ಜಾಣತನವು ಪ್ರಾದುರ್ಭವಿಸುವದು ಪ್ರಪಂಚ ಪರಮಾರ್ಥ ಸಾಧಕರಾದ ಬುದ್ಧಿವಂತರನ್ನು ಅನುಕರಿಸುವವನೇ ಜಾಣನು ಸಾಮಾನ್ಯ ಜನರಲ್ಲಿಯ ದೋಷಗಳಲ್ಲಿ ಲಕ್ಷ್ಯವನ್ನಿಡುವದು ಯುಕ್ತವಲ್ಲ ಬುದ್ಧಿವಂತನು ಮನುಷ್ಯಮಾತ್ರರನ್ನು ಸರಿಯಾಗಿ ತಿಳಿಯುವನು ಆದರೂ ಅವನು ಯಾರ

ಮನಸ್ಸನ್ನೂ ನೋಯಿಸುವದಿಲ್ಲ ಆವನು ಎಲ್ಲರಿಗೂ ಸಮನಾಗಿ ತೋರು ವನು ಅವನಲ್ಲಿ ನಿರ್ದೋಷನಾದ ವಿವೇಕವಿರುವದು ಉದ್ಯೋಗಿ-ನಿರು ದ್ಯೋಗಿ ಜನರಾರೆಂಬುದನ್ನು ಅವನು ಅರಿತುಕೊಂಡು ಅವರ ಗೌರವ ಕ್ಕನುಸರಿಸಿ ಅವರ ಕಲ್ಯಾಣವನ್ನೇ ಚಿಂತಿಸುತ್ತಿರುವನು ಇಂಥ ದೂರ ದರ್ಶಿ ಬುದ್ಧಿವಂತನ ಹಾಗೆ ಸರ್ವದಕ್ಷ್ಯಕನಾದವನಿಗೇ ಮಾತ್ರ ಪ್ರಪಂಚ ವು ಒಳಿತಾಗುವದು "

ಶ್ರೀ ರಾಮ || ೨ ಪ್ರತ್ಯಯ ನಿರೂಪಣೆ ||ಗುರುಗಳು ಶ್ರೋತೃಗಳನ್ನು ಕುರಿತು ಮುಂದುವರಿಸಿ ಹೇಳಿದರು

ಏಂತೆಂದರೆ —

" ಜನ್ಮತಾಳಿ ಜಗತ್ತಿಗೆ ಬಂದ ನರನಾರಿಯರೇ! ಹಾಗು ನಿಸ್ಪೃಹಿಗಳಾದ ವಿರಕ್ತರೆ! ಕೇಳಿರಿ ಯಾವದೊಂದನ್ನು ಅದರ ಸೂಚಿತವಾದ ಆರ್ಥ ತಿಳಿದು ಮನನ ಮಾಡಿಕೊಳ್ಳಿರಿ ಚಿತ್ತದಲ್ಲಿ ವಾಸನೆ ಹಾಗು ಕಲ್ಪನೆಗಳ ತೆರೆಗಳು ಎದ್ದೇಳುವವು ತಿಂಬುವದು, ಉಣ್ಣುವದು, ಕುಡಿಯುವದು, ಉಡಿಗೆ ತೊಡಿಗೆ ಧರಿಸುವದು, ಕೊಡಕೊಳ್ಳುವದು ಇತ್ಯಾದಿ ಕ್ರಿಯೆಗಳೆಲ್ಲ ಮನನೇಚ್ಛೆಯಂತೆ ಸಫಲವಾಗಬೇಕೆಂಬ ಬಯಕೆ ಎಲ್ಲರಿಗೂ ಇರುವದು ಆದರೆ ಬಹಳಸಾರೆ ಮನೋಗತದಂತೆ ಏನೊಂದು ವರ್ತಿಸುವದಿಲ್ಲ ತದ್ವಿಪರೀತವಾಗಿ ಒಳಿತು ಹೀನವಾಗುವದು, ಸರಳವು ವಕ್ರವಾಗುವದು ಈ ಅನುಭವವು ಸರ್ವರಿಗೂ ಕಂಡು ಬರುವದು ಹೀಗೇಕೆ ಆಗುವದು? ಇದರಲ್ಲಿ ಏನಾದರೂ ದೋಷವಿದೆಯೇ? ಈ ಮುಂತಾಗಿ ವಿಚಾರ ಮಾಡುವದು ಯುಕ್ತವಾದದ್ದು ವ್ಯವಹಾರದಲ್ಲಿ ಸೌಖ್ಯ ಪಡುವವರನ್ನೂ ದುಃಖಿತರಾಗಿರುವವರನ್ನೂ ನಾವು ನಿತ್ಯವೂ ನೋಡುತ್ತಿರುತ್ತೇವೆ ದರಿದ್ರನು ದುಃಖಪಡುವ ಕಾರಣವು ಕೇವಲ ಅವನ ಪ್ರಾರಬ್ಧವನ್ನೇ ಅವಲಂಬಿಸಿರುವದೆಂದು ದೈವವಾದಿಗಳು ಹೇಳುವದುಂಟು

ಅವರು ಸುಖ ಪಡೆಯುವದಕ್ಕೆ ತಕ್ಕವಾಗಿ ಪ್ರಯತ್ನಿಸುವದಿಲ್ಲ. ಹಾಗು ಪ್ರಯತ್ನ ಮಾಡಿದರೂ ಅದನ್ನು ಕೊನೆಗಾಣಿಸುವದಿಲ್ಲ ಈ ಪ್ರಕಾರವಾಗಿ ಅವರಲ್ಲಿರತಕ್ಕ ಅವಗುಣವು ಅವರಿಗೆ ಏನೂ ತಿಳಿಯುವದಿಲ್ಲ ತನ್ನದು ತನಗೇ ತಿಳಿಯದವನು ಅನ್ಯರದನ್ನು ತಿಳಿದುಕೊಳ್ಳ

ಲಾರನು ಒಟ್ಟಿನ ಮೇಲೆ ನ್ಯಾಯ ವಿವರ್ಜಿತರಾದವರು ದಾರಿದ್ರ್ಯ ಪೀಡಿತರಾಗುವರೆಂದು ಹೇಳಬಹುದು ಜನರ ಮನೋಗತ ತಿಳಿಯದೆ ಹಾಗು ಜನರ ನಡವಳಿಕೆಯಂತೆ ನಡೆಯದೆ ವರ್ತಿಸಿದಲ್ಲಿ ಮೂರ್ಖತನವು ಪದರಿನಲ್ಲಿ ಬೀಳುವದು ಆದರಿಂದಲೇ ಕಲಹಗಳು ಉತ್ಪನ್ನವಾಗುವವು ಹಿಂದಿನಿಂದ ತಿಳಿವು ಹೆಚ್ಚಾದರೆ ಉಪಯೋಗವೇನು? ಅನ್ಯೋನ್ಯ ಕಷ್ಟಗಳುಂಟಾದಮೇಲೆ ಕಡೆಗೆ ಮಾಡುವ ಪ್ರಯತ್ನವು ನಿರರ್ಥಕವಾದ ಶ್ರಮವಾಗುವದು ಈ ನಡುವಳಿಕೆ ಸರಿಯಾದವಲ್ಲ ಹಲವು ಜನರ ರೀತಿ ನಡತೆಗಳನ್ನು ನಿರೀಕ್ಷಿಸಬೇಕು ಅವರಲ್ಲಿಯ ಯೋಗ್ಯವಾದವುಗಳನ್ನು ಸ್ವೀಕರಿಸಿ ಅನುಸರಿಸಬೇಕು ಪರರ ಮನಸು—ಮಾತುಗಳನ್ನು ಪರೀಕ್ಷಿಸಬೇಕು

ಅವರಲ್ಲಿಯ ಉತ್ತಮವಾದ ಗುಣಗಳನ್ನು ಗ್ರಹಿಸಿ ಅವರಂತೆ ವರ್ತಿಸಬೇಕು ಈ ಪ್ರಕಾರ ಸಾಧಿಸಿಕೊಂಡವನ ಯತ್ನಗಳು ಯಶ ಹೊಂದುವವು ಹಾಗು ಅವನು ಸುಖಪಡುವನು ಬೇರೊಬ್ಬನಿಗೆ ಅಥವಾ ಬೇರೊಂದು ಪಕ್ಷಕ್ಕೆ ಕುಂದನ್ನೆಣಿಸಿ ಮಾತಾಡುವದು ಹಾಗು ತಾನೇ ಶ್ರೇಷ್ಠನಾಗಬೇಕೆಂಬ ಹವ್ಯಾಸ ಪಡುವದು ಇವು ಸದ್ಯಸ್ಥಿತಿಯ ಸರ್ವತ್ರ ಲಕ್ಷಣಗಳಾಗಿಬಿಟ್ಟಿವೆ ಜನರಲ್ಲಿ ತಾನು ಹೆಚ್ಚಿನವನೆನ್ನಿಸಿಕೊಳ್ಳುವ ಹಂಬಲವುಳ್ಳವನು ಹಲವು ಬಗೆಯ ಕಷ್ಟ ಬಂದರೂ ಅವನ್ನು ಸಹಿಸಿದರೆ ಮಾತ್ರ ಅವನ ಇಚ್ಛೆ ಕೈಗೂಡಬಹುದು ಇಲ್ಲದೆ ಹೋದಲ್ಲಿ ಕಲಹ—ಉದ್ಯೋಗಗಳು ಉದ್ಭವಿಸುವವು ತನಗೆ ಸರಿಗಾಣದ್ದನ್ನು ದೂರ ಮಾಡುವದೇ ಒಳಿತು ಆಗ್ರಹ—ಮುರವತ್ತುಗಳಿಂದ ಅದಕ್ಕೆ ಹೊಂದುವದು ತಪ್ಪು ನಡೆ—ನುಡಿಗಳಲ್ಲಿ ಸತ್ಯತೆಯನ್ನು ಅನುಸರಿಸುವನು ಎಲ್ಲರ ಮರ್ಯಾದೆಗೆ ತಕ್ಕವನಾಗುವನು ಅವನ ಹಾಗು ಅವನನ್ನು ಮನ್ನಣೆಯಿಂದ ಕಾಣುವವರ ನ್ಯಾಯಾನ್ಯಾಯಗಳು ಪರಸ್ಪರರಿಗೆ ಸಹಜವಾಗಿ ತಿಳಿಯುವವು, ಅಪರಾಧಿಗೆ ಅವನಿಗೆ ತಾನು ಮಾಡಿದ ತಪ್ಪು ತಿಳಿಯದಿರುವಂತೆ ವಿಚಾರದಿಂದ ಕ್ಷಮೆಯನ್ನು ಮಾಡಕೂಡದು ಇದೇ ಸರಿಯಾದದ್ದು ಹೇಗೆಂದರೆ ಚಂದನ ವೃಕ್ಷದಂತಿರುವ ಹಲವು ಗಿಡಗಳುಂಟು ಅವುಗಳಲ್ಲಿ ಚಂದನವನ್ನೇ ನಿರ್ಧರಿಸುವದರಲ್ಲಿ ಅದನ್ನು ತಿಕ್ಕಿ ತೇಯಿದೇ

ಗೊತ್ತುಪಡಿಸಬೇಕಾಗುವದು ಯಾವನೊಬ್ಬನಲ್ಲಿಯ ಸದ್ಗುಣಗಳು ಜನರಿಗೆ ತಿಳಿಯದಿರುವ ವರೆಗೆ ಅವರಿಗೆ ಆ ಮನುಷ್ಯನ ಯೋಗ್ಯತೆ ಮಹತ್ವಗಳು ತಿಳಿಯಲಾರವು ಆತನ ಒಳ್ಳೆಯ ಗುಣಗಳು ತಿಳಿದನಂತರ ಜನರಿಗೆ ಸಮಾಧಾನವೆನ್ನಿಸುವದು ಜನತೆಯ ಮನಸ್ಸು ಶುದ್ಧವಾಗಿ ಜನರಲ್ಲಿ ಅವನ ಬಗೆಗೆ ಆದರಯುಕ್ತ ಪ್ರೇಮ ಜನಿಸಿತೆಂದರೆ ಎಲ್ಲರೂ ಅವನಿಗೆ ವಶರಾಗುವರು ಜನತೆಯು ಜನಾರ್ದನ ಸ್ವರೂಪವೆಂದು ಹೇಳಲ್ಪಡುತ್ತದೆ ಅಂಥ ಜನಾರ್ದನನೇ ಪ್ರಸನ್ನನಾಗಲು ಇನ್ನೇತರ ಆವಶ್ಯಕತೆ ಉಳಿಯುವದು? ಈ ಹೊಂದಿಕೆಯು ಎಲ್ಲರಿಗೂ ಸಾಧ್ಯವಿಲ್ಲ ಬಿತ್ತಿದಂತೆ ಬೆಳೆ ಬರುವದು, ಕೈಯಿಂದ ಕೊಟ್ಟಿದ್ದನ್ನೇ ತಿರುಗಿ ಪಡೆಯಬೇಕಾಗುವದು, ಬೇರೊಬ್ಬರ ಗುಟ್ಟನ್ನು ಹೊರಗೆಳೆದರೆ ಅವರ ಮನಸ್ಸು ನೋಯುವದು ಯೋಗ್ಯ ನಡುವಳಿಕೆಯಿಂದ ಸರ್ವರು ಸುಖಿಗಳಾಗುವರು ಉತ್ತರಕ್ಕೆ ಸಮರ್ಪಕ ಪ್ರತ್ಯುತ್ತರ ಬರುವದು ಈ ಎಲ್ಲ ನಡವಳಿಕೆಗಳು ನಮ್ಮನ್ನೇ ಅವಲಂಬಿಸಿರುವವು ಇವುಗಳಲ್ಲಿ ವ್ಯತ್ಯಯವುಂಟಾದರೆ ಅನ್ಯರಿಗೆ ದೋಷ ಕೊಡುವದು ತಪ್ಪಾಗುತ್ತದೆ ಆದ್ದರಿಂದ ಬಾರಿಬಾರಿಗೂ ವಿಚಾರಿಸಿ ಮನಸ್ಸು ಧಾರಣೆಯನ್ನು ಮಾಡಿಗೊಳ್ಳಬೇಕು ಒಳ್ಳೆಯ ತನವನ್ನು ಲಕ್ಷಿಸದ ದುರ್ಜನರೊಡನೆ ವ್ಯವಹರಿಸುವ ಪ್ರಸಂಗವೊದಗಿದಾಗ ಇಲ್ಲಿವೆ ತನ್ನ ಸಹನ ಶೀಲತೆ ನಷ್ಟವಾಗುವ ಕಾಲವುಂಟಾದಾಗ ಜಾಣತನದಿಂದ ಮೌನತ್ವದಿಂದಲೇ ಅಲ್ಲಿಂದ ಸ್ಥಾನಾಂತರಿಸತಕ್ಕದ್ದು ಹೀಗಾದರೇ ಮಾತ್ರ ಒಳಿತು.

ಹಲವು ಜನರು ಹಲವು ವಿಷಯಗಳಲ್ಲಿ ಬಲ್ಲಿದರಿರುವರು ಆದರೆ ಅವರಲ್ಲಿ ಪರೇಂಗಿತವನ್ನು ತಿಳಿಯುವ ಜ್ಞಾನಮಾತ್ರ ಇರುವವರು ವಿರಳ ಆದ್ದರಿಂದಲೇ ಅವರು ಕೆಳಮಟ್ಟಕ್ಕಿಳಿಯುವರು ಇದರಲ್ಲಿ ಎಷ್ಟೂ ಸಂಶಯವಿಲ್ಲ ಮಾನವನು ದುರಾಗ್ರಹಕ್ಕೆ ಬಲಿ ಬೀಳಕೂಡದು ತನಗೂ ಒಂದಿಲ್ಲೊಂದು ದಿನ ಯಮಪಾಶವು ಬಂಧಿಸುವದೆಂದು ಅರಿತು ಸತತವೂ ಒಳ್ಳೆ ಮಾರ್ಗದಿಂದ ನಡೆಯಬೇಕು ಇದು ವಿವೇಕಯುಕ್ತರ ಮಾತಾಗಿರುವದು ಇದು ಎಲ್ಲರಿಗೂ ಸಾಧಿಸುವದಿಲ್ಲ ತನಗಿಂತಲೂ ಚಿಕ್ಕವರಿರಲಿ ತನ್ನ ಸರಿಸರಿರಲಿ, ಹಿರಿಯರೇ ಇರಲಿ, ತನ್ನವರೇ ಆಗಲಿ, ಪರರೇ

ಆಗಲಿ ಈ ಎಲ್ಲರೊಡನೆ ಉತ್ತರೋತ್ತರ ಪ್ರೀತಿ–ಸ್ನೇಹಗಳಿಂದ ವರ್ತಿಸುತ್ತ ಹೋಗಬೇಕು ಒಳ್ಳೆಯತನದಿಂದ ಒಂತು ಹೆಚ್ಚಾಗುತ್ತದೆಂಬ ಮಾತು ಅನುಭವ ಸಿದ್ಧವಾದದ್ದು ಇನ್ನು ಇದಕ್ಕಿಂತಲೂ ಹೆಚ್ಚಿಗೆ ಹೇಳುವದೇನೂ ಇಲ್ಲ ಹರಿಕಥೆ, ನಿರೂಪಣೆ ಒಳ್ಳಿತಾದ ರಾಜಕಾರಣ, ಮತ್ತು ವೇದಾಂತ ಬೋಧೆ ಈ ಎಲ್ಲ ಪ್ರಸಂಗಗಳಲ್ಲಿ ಜನ, ಸ್ಥಲ, ಕಾಲಮಾನಕ್ಕನುಸರಿಸಿ ವರ್ತಿಸಬೇಕು ಪ್ರಸಂಗವನ್ನು ಅಲಕ್ಷಿಸಿದ್ದಾದರೆ ಏನೂ ಫಲ ದೊರೆಯುವದಿಲ್ಲ ಸಕಲ ವಿದ್ಯಾ ವಿಶಾರದನೊಬ್ಬನು ಒದಗಿದ ಪ್ರಸಂಗವನ್ನು ಹಿಂದೂಡಿದರೆ ಪ್ರಸಂಗಾನುಸಾರವಾಗಿ ನಡೆಯುವದರಲ್ಲಿ ಅವನು ತಪ್ಪಿದರೆ ಅವನಲ್ಲಿಯ ಆ ವಿದ್ಯೆಗಳಿಂದ ಏನೂ ಉಪಯೋಗವಿಲ್ಲ ಅಂದರೆ ಆ ವಿದ್ಯೆಗಳು ನಿರರ್ಥಕವಳಿಂದ ಗ್ರಹಿತವಾಗುವವು"

ಶ್ರೀ ರಾಮ || ೩ ಭಕ್ತಿ ನಿರೂಪಣೆ || ಗುರುಗಳು ಶಿಷ್ಯನಿಗೆ—

" ಈ ಜಗತ್ತಿನ ಮೇಲೆ ಬಹು ಜನರಿರುವರು ಬುದ್ಧಿವಂತರು ಐಹಿಕ ಪಾರಲೌಕಿಕಗಳ ಬಗೆಗೆ ಚೆನ್ನಾಗಿ ವಿವೇಕವನ್ನು ಬಳಸತಕ್ಕದ್ದು ಇಹಲೋಕ ಸಾಧನೆಗಾಗಿ ಬಲ್ಲವರ ಸಂಗವನ್ನೂ ಪರಲೋಕ ಪ್ರಾಪ್ತಿಗಾಗಿ ಸದ್ಗುರು ಚರಣ ಸೇವೆಯನ್ನೂ ಕೈಗೊಳ್ಳತಕ್ಕದ್ದು ಸದ್ಗುರುವಿನಲ್ಲಿ ವಿಚಾರಿಸತಕ್ಕ ಸಂಗತಿಗಳು ಸುಲಭವಾಗಿ ಒಮ್ಮೆಲೇ ತಿಳಿಯುವದಿಲ್ಲ ಆದರೂ ಗುರುವಿನನನ್ನು ಕಂಡು ಅನನ್ಯ ಭಾವ ಏಕ ಭಾವಗಳಿಂದಃ —'ದೇವನೆಂದರೆ ಯಾರು? ಹಾಗು ನಾನು ಯಾರು? ಈ ಎರಡು ಮಾತುಗಳ ಬಗೆಗೆ ಕೇಳಿಕೊಳ್ಳತಕ್ಕದ್ದು ಅರ್ಥಾತ್ 'ದೇವ ಹಾಗು ಭಕ್ತ' ಈ ವಿಚಾರದ ಸಂಬಂಧ ಪಂಚೀಕರಣ ಜ್ಞಾನ ಮಾಡಿಕೊಳ್ಳಬೇಕು ಇದಲ್ಲದೆ ಮಹಾವಾಕ್ಯದ ಮಹಿಮೆಯನ್ನೂ ವಿಚಾರಿಸಬೇಕು ಏನೇ ಶ್ರಮ ಮಾಡಿದರೂ ಆ ಎಲ್ಲ ಶ್ರಮದ ಫಲವು 'ನಿಶ್ಚಲನೂ ಶಾಶ್ವತನೂ ಆಗಿರುವ ಪರಬ್ರಹ್ಮನನ್ನು ತಿಳಿಯುವದು' ಇದೇ ಆಗಿರಬೇಕು ಮತ್ತು 'ತಾನು ಯಾರೆಂ'ಬ ಬಗೆಗೆ ಶೋಧ ಮಾಡುವದೂ ಆಗಿರಬೇಕು ಸಾರಾಸಾರ ವಿಚಾರದಿಂದ ನೋಡಲು ಯಾವ ಪದಾರ್ಥವೂ ಶಾಶ್ವತವಲ್ಲ ಇದಕ್ಕೆ ಕಾರಣನಾದ ಭಗವಂತನನ್ನು ಮೊದಲು ಅರಿತುಕೊಳ್ಳಬೇಕು ಅವನು ಸಾರಭೂತನು

ಅಶಾಶ್ವತ ವಸ್ತುಗಳಿಂದ ಆತನು ಹೊರತಾಗಿರುವನು ಬ್ರಹ್ಮನ ಅಚಲ ತೆಯೂ, ಅಂತರಾತ್ಮನ ಚಂಚಲತೆಯೂ ಹಾಗು ಪದಾರ್ಥಗಳ ಜಡ ತ್ವವೂ ಇವೆಲ್ಲವು ಮಾಯೆಯ ಮೋಹನ ಕೃತಿಗಳು ಜಡತ್ವವುಳ್ಳವುಗಳ ಲ್ಲಿಯೂ ಗಮನಿಸುವದಿಲ್ಲವೆಂದ ಮೇಲೆ ಅವನ್ನು ಶೋಧ ಮಾಡಬೇಕಾಗಿಲ್ಲ ಅದೇ ಅವ್ಯಕ್ತ ಪರಬ್ರಹ್ಮನನ್ನು ವಿವೇಕದಿಂದ ಶೋಧಿಸಬೇಕಾಗುವದು ಮೂರೂ ಲೋಕಗಳನ್ನು ಸಂಚರಿಸಬೇಕಾಗುವದು ಮಾಯಿಕ ವಿಚಾರ ಗಳನ್ನು ಖಂಡನೆ ಮಾಡಿ ಪರೀಕ್ಷಿಸಬೇಕಾಗುವದು ಅಸತ್ಯವನ್ನು ತ್ಯಾಗ ಮಾಡಿ ಸತ್ಯವನ್ನು ಸ್ವೀಕರಿಸಬೇಕಾಗುವದು ಪರೀಕ್ಷಕರಿಂದ ನಿರೀಕ್ಷಣೆ ಮಾಡಿಸಬೇಕಾಗುವದು ಈ ಎಲ್ಲ ಬಗೆಗಳನ್ನನುಸರಿಸಿ ವಿಚಾರವಂತರು ಮಾಯೆಯ ಎಲ್ಲ ಮಾಯಾವಿಗಳನ್ನರಿತು ಅವನ್ನು ನಿರಸನ ಮಾಡಿ ಕೊಂಡು ಶಾಶ್ವತಬ್ರಹ್ಮವನ್ನು ಸ್ವೀಕರಿಸುವರು ಮಾಯೆಯು ಪಂಚ ಭೌತಿಕವಾಗಿರುವದು ಪಿಂಡ-ಬ್ರಹ್ಮಾಂಡಗಳೂ ಮಾಯಿಕವಾದವುಗಳು ಆದ್ದರಿಂದ ಅವೂ ನಾಶವಾಗುವಂಥವೇ ಆಗಿರುವವು ದೃಷ್ಟಿಗೆ ತೋರಿದ್ದೆ ಲ್ಲವೂ ನಷ್ಟವಾಗುವದು 'ಜನನವಾದವೆಲ್ಲವೂ ಮರಣ ಹೊಂದುವವು' 'ಮೂಡಿದ್ದು ಕೆಡುವದು' 'ಉಕ್ಕಿದ್ದು ಕುಕ್ಕರಿಸುವದು' ಇತ್ಯಾದಿ ಮಾತು ಗಳಿಂದ 'ಎಲ್ಲವೂ ನಾಶವಾಗುವವು' ಎಂದು ಸ್ಪಷ್ಟವಾಗುವದು ಕಲ್ಪಾಂತ್ಯ ದಲ್ಲಿಯೂ ಕೂಡ ಪೃಥ್ವಿ ಆಪ್ ಮೊದಲಾದ ಭೂತಗಳು ಒಂದರಲ್ಲೊಂದು ಲಯವಾಗುವವು ಶರೀರಧಾರಿಗಳಾದ ಪ್ರಾಣಿಗಳು ನಿತ್ಯವೂ ಅದೆಷ್ಟೋ ಸಾಯುತ್ತಿರುವದನ್ನು ನಾವು ನೋಡುತ್ತಿರುವೆವು. ಮಾನವನ ರಕ್ತ ರೇತ ಸ್ಸಿನಿಂದ ಮಾನವನ ಉತ್ಪತ್ತಿಯಾಗುವದು ಸ್ಪಷ್ಟವಿದೆ ಆದರೆ ಈ ರಕ್ತ ರೇತಸ್ಸಿನ ಉತ್ಪತ್ತಿಯು ಇನ್ನಾತರಿಂದಾಗದೆ ಅನ್ನದಿಂದ ಉಂಟಾಗು ವದು ಅನ್ನವಿಲ್ಲದಿದ್ದರೆ ರೇತಸ್ಸು ಎಲ್ಲಿಂದ ಬರುವದು? ಸಾಧ್ಯವಿಲ್ಲ ಅದರಂತೆ ಔಷಧಿ (ವನಸ್ಪತಿ)ಗಳಿಲ್ಲದೆ ಅನ್ನದ ಉತ್ಪತ್ತಿಯಿಲ್ಲ ಪೃಥ್ವಿಯಿ ಲ್ಲದಿದ್ದರೆ ಔಷಧಿ [ವನಸ್ಪತಿ]ಗಳ ಹುಟ್ಟುವಿಕೆಯಿಲ್ಲ, ಜಲವಿಲ್ಲದಿದ್ದರೆ ಪೃಥ್ವಿಯ ಉತ್ಪತ್ತಿಯಿಲ್ಲ ತೇಜವಿಲ್ಲದಿದ್ದರೆ ಜಲವಿಲ್ಲ, ವಾಯುವಿಲ್ಲ ದಿದ್ದರೆ ತೇಜವಿಲ್ಲ, ಹಾಗು ಆಕಾಶವಿಲ್ಲದಿದ್ದರೆ ತೇಜೋತ್ಪತ್ತಿಯಿಲ್ಲ ಈ ಕ್ರಮದಿಂದ ಕೊನೆಗೊಂಡ ಆಕಾಶವೇ 'ಅಂತರಾತ್ಮ'ನು ಇನ್ನು

ವಿಕಾರವಿಲ್ಲದಿರಲು ಅಂತರಾತ್ಮನಿಲ್ಲ, ವಿಕಾರವಿದ್ದ ಮೇಲೆ ನಿರ್ವಿಕಾರಿಯಿ ರಬೇಕು ಒಟ್ಟಿನ ಮೇಲೆ ಪೃಥ್ವಿಯಿಲ್ಲ, ಜಲವಿಲ್ಲ, ತೇಜ-ವಾಯು ಗಳಿಲ್ಲ ಅಂತರಾತ್ಮವಿಕಾರಗಳಿಲ್ಲಎಂದರಾಯಿತು ಆದರೆ ನಿರ್ವಿಕಾರಬ್ರಹ್ಮನಲ್ಲಿ ವಿಕಾರ ಸಂಭವಿಸುವದೋ ಹೇಗೆಂಬುದನ್ನು ನೋಡುವದು ಅವನಲ್ಲಿ ಪೃಥ್ವಿ ಮೊದ ಲಾಗಿಅಂತರಾತ್ಮನ ವರೆಗೆ ಪಂಚಭೂತಾತ್ಮಗಳಲ್ಲಿ ಏನೊಂದೂ ಇರುವದಿಲ್ಲ ತಾತ್ಪರ್ಯ—ನಿರ್ವಿಕಾರ ಬ್ರಹ್ಮನೇ ಸಾರವು ಉಳಿದ ಅಷ್ಟಧಾ ಪ್ರಕೃತಿಗಳೆಲ್ಲ ಅಸಾರಗಳು ಅಂದರೆ ನಶ್ವರವಾದವುಗಳು ನಶ್ವರವಾದ ಈ ಸೃಷ್ಟಿಯನ್ನು ವಿಚಾರಪೂರ್ವಕವಾಗಿ ನಿರೀಕ್ಷಿಸಲು ಅದು ಇರುವಾಗಲೇ ಇಲ್ಲದಂತಾಗು ತ್ತದೆ ಮತ್ತು ಶಾಶ್ವತ ಬ್ರಹ್ಮನ ಬಗೆಗೆ ಸಮಾಧಾನವುಂಟಾಗುತ್ತದೆ ಇದೇ ವಿಚಾರವನ್ನು ಸಾರಾಸಾರ ವಿವೇಕದಿಂದ ದೃಢ ಮಾಡಿಕೊಳ್ಳಬೇಕು ಶಾಶ್ವತ ನಿರ್ಗುಣಬ್ರಹ್ಮನೇ ದೇವನೆಂಬುದು ತಿಳಿಯುವದು ಇನ್ನು 'ನಾನು" ಯಾರು? ಎಂಬದರ ವಿಚಾರ ಮಾಡಬೇಕು 'ನಾನು' ಎಂಬುದು ದೇಹ ಸಂಗದಿಂದ ಉದ್ಭವಿಸುವದು ಅಂದ ಮೇಲೆ ದೇಹವು ಯಾವ ತತ್ವಗಳಿಂದ ಉಂಟಾಗಿದೆಂಬದನ್ನು ನೋಡಲು ಅದು ಅಹಂಕಾರ-ಮಮಕಾರಗಳಿಂದ ಯುಕ್ತ ಮನಸಿನ ಧರ್ಮವಾಗಿದೆ ಎಂದಿಷ್ಟೇ ತಿಳಿಯುವದು ಎಲ್ಲ ದೇಹ ವನ್ನು ಶೋಧಿಸಲು ಅದರಲ್ಲಿಯ ತತ್ವಗಳು ತತ್ವವಿಲೀನವಾದ ಮೇಲೆ ಅಹಂತತೆಯು ಉಳಿಯಲಾರದು. ದೃಶ್ಯದಲಯವು ಇಲ್ಲವೆ ನಾಶವು ಉಂಟಾ ಗಲು ಕೂಡಲೆ ತತ್ವಗಳಲ್ಲಿ ತತ್ವಲೀನತೆಯಾಗಿ ಹೋಗುವವು ಆ ಮೇಲೆ 'ನಾನು' ಎಂಬದು ಉಳಿಯಲಾರದು ಕೇವಲ ಸತ್ಯ ವಸ್ತುವಷ್ಟೇ ಉಳಿ ಯುವದು ಪಂಚೀಕರಣ, ತತ್ವ ವಿವರಣೆ, ಹಾಗು ಮಹಾವಾಕ್ಯವಿಚಾರ ಈ ಮೂರು ಸಂಗತಿಗಳ ವಿಚಾರವಾಗಲು ದೇಹದಿಂದ ನಿಸ್ಸಂಗವಾಗಿ ಆತ್ಮ ನಿವೇದನೆಯುಂಟಾಗುವದು ನಂತರ ದೇವ-ಭಕ್ತರ ಮೂಲವನ್ನು ಶೋಧಿಸಿ ನೋಡಲುಕೇವಲಉಪಾಧಿರಹಿತನಾದಆತ್ಮನೊಬ್ಬನಲ್ಲಿಯೇಅನನ್ಯತೆಯಭಾವ ಉಂಟಾಗುವದು ಹೀಗೆ ತತ್ವ ನಿರಸನವಾಗಲು ಆ ತತ್ವದ ಜೊತೆಯಿಂದಲೇ ಅಹಂತತೆಯುಹೋಗುವದು ಆಗಜೀವಶಿವರಲ್ಲಿದ್ದ ಭೇದವು ವಿವೇಕದಿಂದಅಸ್ತ ವಾಗಿಹೋಗುವದು ನಿವೃತ್ತಿ ಪದವು ಪ್ರಾಪ್ತವಾಗಿ ಮನಸ್ಸುಉನ್ಮನವುಳ್ಳದ್ದಾ ಗುವದು ಜ್ಞಾನವು-ವಿಜ್ಞಾನದಲ್ಲಿ ಉಳಿಯುವದು ಧ್ಯಾನವು ಧ್ಯೇಯ

ದಲ್ಲಿ ಮುಳುಗುವದು. ಕಾರ್ಯ-ಕಾರಣಗಳನ್ನರಿತುಕೊಳ್ಳುವ ವಿಚಾರವು ಅಷ್ಟಕೇ ಉಳಿಯುವದು ಜನನ-ಮರಣಗಳ ಭಯವು ತಪ್ಪುವದು ಪಾಪ ಗಳು ಲೋಪವಾಗುವವು, ಯಮ ಬಾಧೆಯ ಕಷ್ಟವು ದೂರಾಗುವದು ಎಲ್ಲ ಎಲ್ಲ ಬಂಧನಗಳು ಹರಿದು ವಿಚಾರದಿಂದ ಮುಕ್ತಿಯು ಕೈಗೆ ಸಿಗುವದು ಜನ್ಮಸಾರ್ಥವಕವಾಯಿತೆಂದು ಅನ್ನಿಸುವದು ಹಲವು ಕುತರ್ಕಗಳು ಮಣ್ಣು ಗೂಡುವವು; ಗಂಡಾಂತರಗಳು ಕಾಲ್ದೆಗೆಯುವವು, ಈ ಪ್ರಕಾರ ಜ್ಞಾನ ವಿವೇಕಗಳಿಂದ ಅದೆಷ್ಟೋ ಜನರು ಪುನೀತರಾಗುವರು ಪರಮಾತ್ಮನು ಪತಿತೋದ್ಧಾರಕನು ಆತನ ನಿಜಭಕ್ತರುಗಳಾದರೂ ಪತಿತರನ್ನು ಉದ್ಧ ರಿಸಲು ಸಮರ್ಥರಾಗುವರು ಇದರ ಅನುಭವವು ಬಹು ಜನರಿಗೆ ಇರು ವದು "

ಶ್ರೀ ರಾಮ || ೪ ವಿವೇಕವೈರಾಗ್ಯ ಲಕ್ಷಣ || ಗುರುಗಳು ಶಿಷ್ಯ ನಿಗೆ—

"ಘನವಾದ ಐಶ್ವರ್ಯವು ಪ್ರಾಪ್ತವಾದರೂ ಅದನ್ನು ಉಪಭೋಗಿಸುವ ಬುದ್ಧಿಯಿಲ್ಲದ ಮಾನವನಂತೆ ವಿವೇಕರಹಿತವಾದ ವೈರಾಗ್ಯಯುಕ್ತನ ಸ್ಥಿತಿ ಯಿರುವದು ಮನೆಯಲ್ಲಿ ನೀಚ ಹೆಂಡತಿಯ ದುರ್ವರ್ತನ, ಕಷ್ಟಮಯ-ಜೀವನ, ಹಲವು ಯಾತನೆಗಳು ಇವುಗಳಿಂದ ಮಾನವನು ಸಂಸಾರಕ್ಕೆ ಬೇಜಾರುಗೊಳ್ಳುವನು, ಅವನು ಪ್ರಪಂಚದಲ್ಲಿಯ ಹಲವು ಆನುವು-ಆಪತ್ತು, ಅಚು-ಸಂಕಟಗಳನ್ನು ಹೊಂದಿ ಮನೆಮಾರು ಸಂಸಾರ ಬಿಟ್ಟು ಜೋಗಿಯಾಗುವನು ಅದರಂತೆ ಚಿಂತೆ, ಪರತಂತ್ರಗಳಿಂದ ನೊಂದು ವನು ದೇಶಾಂತರ ಹೊರಡುವನು ರೋಗಮುಕ್ತ ರೋಗಿಯಂತೆ ದುಃಖ ಕ್ಲೇಶಗಳನ್ನು ಮರೆತು ಅದೆಲ್ಲಿಯೋ ವಾಸವಾಗುವನು ಆದರೆ ಇಷ್ಟರಿಂದ ಮಾತ್ರ ಅವನಲ್ಲಿ ವೈರಾಗ್ಯ ಹುಟ್ಟಿತೆಂದು ಹೇಳಲಾಗದು ಅವನು ಅನು ಸರಿಸಿದ ಮಾರ್ಗ ಸರಿಯಲ್ಲ ಅದರಿಂದ ಅವನು ಅನಿಯಂತ್ರಿತನೂ ಪಾಪಿಯೂ ಭ್ರಷ್ಟನೂ, ಮತ್ತು ನಿರುಪಯುಕ್ತನೂ ಎನ್ನಿಸುವನಲ್ಲದೆ ಉರ್ಪಾಡಿಯ ದನ ದಂತೆ ಎಣಿಸಲ್ಪಡುವನು ಆದರೆ ಅವನ ವೈರಾಗ್ಯ ಸ್ಥಿತಿಯು ಉತ್ತಮ ಗೊಳ್ಳಬೇಕಾದರೆ ಅದಕ್ಕೆ ವಿವೇಕದ ಜೊತೆಯು ಇರಬೇಕಾಗುವದು ವಿವೇಕವಿಲ್ಲದ ವೈರಾಗ್ಯವು ಮಾನವನನ್ನು ಹೇಳಿ ಕೇಳಿ ಅನರ್ಥ ಪರಂಪರೆ

ಗಳ ಸೆಳೆತಕ್ಕೆ ಸಿಕ್ಕಿರುವದು ಯಾಕಂದರೆ ಅವನಲ್ಲಿ ವಿವೇಕ-ವೈರಾಗ್ಯಗಳೂ ಪ್ರಪಂಚ-ಪರಮಾರ್ಥಗಳೂ ಯಾವವೂ ಇರುವದಿಲ್ಲ ಹೀಗಾಗಿ ಅವನು ಎಲ್ಲಿಯೂ ಜೀವಿಸುವದು ವ್ಯರ್ಥವಾಗುವದು ಇದು ವಿವೇಕವಿಲ್ಲದ್ದರ ಪರಿಣಾಮವು ಸೆರೆಯಲ್ಲಿ ಸಿಕ್ಕವನು ತನ್ನ ಪೌರುಷವನ್ನು ಹೇಳಿಕೊಳ್ಳುವ ಹಾಗೆ ವೈರಾಗ್ಯಯೋಗವಿಲ್ಲದವನು ಬೋಧಿಸುವ ಜ್ಞಾನಗಳು ನಿರರ್ಥಕವಾದವುಗಳು ವೈರಾಗ್ಯವಿರಹಿತ ಜ್ಞಾನವನ್ನು ಹೇಳುವದೆಂದರೆ ಅದು ಕೇವಲ ತನ್ನ ಪ್ರತಿಷ್ಠೆಯನ್ನು ವ್ಯಕ್ತ ಪಡಿಸುವಂತೆಯೇ ಸರಿ ಲೋಭ-ದಂಭಗಳಿಂದ ಯುಕ್ತನಾಗಿ ಪರತಂತ್ರಕ್ಕೆ ಸಿಕ್ಕ ಈ ಮೂರ್ಖನು ಬಡಬಡಿಸುವ ಜ್ಞಾನಬೋಧೆಯು ಕಟ್ಟಿ ಹಾಕಿದ ನಾಯಿಯು ಬೊಗಳುವಿಕೆಗೆ ಸರಿಯಾದುದೆಂದು ಹೇಳಬಹುದು ಅವನ ಈ ಜ್ಞಾನವು ಅವನಲ್ಲಿಯ ಸ್ವಾರ್ಥಾತಿಶಯವನ್ನೂ ಗರ್ವವನ್ನೂ ಅನ್ಯರ ಹೆಚ್ಚಳ ಸಹಿಸಲಾರದ ಅವನ ಸ್ಥಿತಿಯನ್ನೂ ವ್ಯಕ್ತ ಪಡಿಸುವದು ಒಟ್ಟಿನ ಮೇಲೆ ವಿವೇಕ ಹಾಗು ವೈರಾಗ್ಯ ಇವು ಎರಡೂ ಜೊತೆಯಾಗಿರಬೇಕು- ಇವುಗಳಲ್ಲಿ ಯಾವದೊಂದು ಇಲ್ಲದೆ ಹೋದರೆ ದುಃಖ ಶೋಕಗಳು ತಪ್ಪುವದಿಲ್ಲ ಇನ್ನು ಇವೆರಡರ ಅಂದರೆ ವಿವೇಕ-ವೈರಾಗ್ಯಗಳ ಮಿಲನದಿಂದ ಉಂಟಾಗುವ ಸುಪರಿಣಾಮವೆಂದರೆ—ವಿವೇಕದಿಂದ ಆಂತರಿಕ ಬಂಧನಗಳು ದೂರಾಗುವವು, ವೈರಾಗ್ಯದಿಂದ ಬಾಹ್ಯ ಪ್ರಪಂಚವು ಬಿಡುವದು ಈ ಬಗೆಯಾಗಿ ಅಂತರ್ಬಾಹ್ಯಗಳಿಂದ ಮುಕ್ತನಾದ ನಿಸ್ಸಂಗ ಪುರುಷನೇ ನಿಜವಾದ ಯೋಗಿಯೆನ್ನಿಸುವನು ಅಂಥ ಯೋಗಿಯಲ್ಲಿ ವಿಚಾರವಿರುವದು, ಹಾಗು ಅವನು ಮಾತಾಡಿದಂತೆ ನಡೆಯುವನು ಆತನ ಯೋಗದೀಕ್ಷೆಯು ಸದಾಚರಣ ನಿರತ ಸಜ್ಜನರಿಗೆ ಸಂತೋಷ ಪ್ರವಾಹವನ್ನೇ ಹರಿಸುತ್ತಿರುವದು.ಅವನಲ್ಲಿಯ ನಿಸ್ಪೃಹತೆಯು ತ್ರೈಲೋಕ್ಯ ರಾಜ್ಯಪದವಿಯನ್ನೂ ಕೂಡ ಧಿಕ್ಕರಿಸಿ ಬಿಡುವಂತಹದಾಗಿರುವದು ಯಾವ ಪದಾರ್ಥಗಳನ್ನೂ ಪಡೆಯುವ ಆಶೆಯು ಆ ಯೋಗಿಯಲ್ಲಿರುವದಿಲ್ಲ ಅವನಲ್ಲಿ ಮೇಲ್ತರದ ವೈರಾಗ್ಯವು ಮನೆ ಮಾಡಿ ಬಿಟ್ಟಿರುವದು ಅಲ್ಲದೆ ಯಾವಾಗಲೂ ಲೋಕಕಲ್ಯಾಣಗೈಯುವ ಬುದ್ಧಿ ಪ್ರಯತ್ನಗಳೂ ನಿಸ್ಸೀಮವಾದ ವಿವೇಕ-ಧಾರಣಗಳೂ ಇರುವವು ಅವನು ಗೀತಗಾಯನಯುಕ್ತ ಕೀರ್ತನೆಗಳಿಂದ ಭಕ್ತಿ ಪ್ರೇಮ ರಸವನ್ನು ಸುರಿಸು

ವನು ತಾಲ-ಸ್ವರ, ತಾನ–ಮಾನಗಳು ಕೂಡಿದ ಭಜನೆಯು ಆತನಲ್ಲಿ ನಿರಪೇಕ್ಷ ಮನಸಿನಿಂದ ನಡೆದೇ ನಡೆಯುವದು ಅವನ ವಿವೇಕಯುಕ್ತ ಕೀರ್ತನ ರಂಗದಿಂದ ದಂಗುಬಡೆದ ಜನರು ಪರಮಾರ್ಥ ಮಾರ್ಗಾವಲಂಬಿಗಳಾಗುವರು ಅವನ ವಕ್ತೃತ್ವದ ಸುಪರಿಣಾಮದಿಂದ ಜನರು ಅನುಭವದ ಸಾಧನ ಗಳಿಸುವರು ಆತನ ಸನ್ಮಾರ್ಗದ ಚರಣೆ ಕಂಡು ಜನತೆಯೆಲ್ಲವೂ 'ಇವನೇ ಜನಾರ್ದನನು, ಇವನೇ ನಮಗೆ ಪ್ರಸನ್ನನಾದನು' ಎಂಬ ದೃಢ ವಿಶ್ವಾಸಯುಕ್ತರಾಗುವರು ಅಚಲವಾದ ವೈರಾಗ್ಯ, ನಿರ್ಲೋಭ ನಿರ್ದಂಭ, ನಿರ್ದ್ವಂದ್ವ, ಸಂಪೂರ್ಣ ಬ್ರಹ್ಮಜ್ಞಾನ, ಸ್ನಾನ ಸಂಧ್ಯಾದಿಗಳು ಭಗವದ್ಭಜನ,ಸದ್ವರ್ತನ ಮುಂತಾದವೆಲ್ಲವೂ ಸಮೃದ್ಧಿಯಾಗಿದುವಲ್ಲಿ ವಿವೇಕ ಹಾಗು ವೈರಾಗ್ಯಗಳೆರಡೂ ಇರುತ್ತವೆಂದೇ ತಿಳಿಯತಕ್ಕದ್ದು ಬರಿಯ ವೈರಾಗ್ಯವಿದೆ ಎಂದು ಹೇಳುವವರಲ್ಲಿ ತಥ್ಯವಿಲ್ಲ ಅದರಂತೆ ಕೇವಲ ವಿವೇಕವಿದೆ, ಶಬ್ದ ಜ್ಞಾನವಿದೆ ಮುಂತಾಗಿ ಹೇಳುವದೂ ಸರಿಯಾಗುವದಿಲ್ಲ. ವಿವೇಕ ಮತ್ತು ವೈರಾಗ್ಯ ಇವೆರಡೂ ಜತ್ತಾಗಿ ಇರುವದೇ ಮಹದ್ಭಾಗ್ಯವೆನ್ನಿಸುವದು ವಿವೇಕ–ವೈರಾಗ್ಯ ಸಂಪದ್ಯುಕ್ತನಾದವನೇ ಶ್ರೀ ರಘುರಾಮನ ದಾಸನು. ಅವನೇ ಯೋಗ್ಯ ಸಾಧುವೆಂದು ತಿಳಿಯಬೇಕು "

ಶ್ರೀ ರಾಮ ॥ ೫ ಆತ್ಮನಿವೇದನೆ ॥ ಗುರುಗಳು—

"ರೇಖೆಗಳನ್ನು ಹೊಂದಿಸಿ ಅವಕ್ಕೆ ಸ್ವರ ವ್ಯಂಜನ ಚಿಹ್ನಗಳನ್ನು ಸೇರಿಸಲು ಅಕ್ಷರಗಳುಂಟಾಗುವವು ಹಲವು ಅಕ್ಷರಗಳನ್ನು ಅರ್ಥವಾಗುವಂತೆ ಹೊಂದಿಸಲು ಶಬ್ದಗಳೆನ್ನಿಸುವವು ಈ ಶಬ್ದಗಳಿಂದಲೇ ವಾಕ್ಯ, ಶ್ಲೋಕ, ವಚನ, ಪದ–ಪದ್ಯ–ಪ್ರಬಂಧಗಳ ರಚನೆಯಾಗುವದು ವೇದ ಶಾಸ್ತ್ರ-ಪುರಾಣಗಳು, ಕಾವ್ಯಗಳು ಮುಂತಾಗಿ ಗ್ರಂಥಗಳ ಹಲವು ಪ್ರಕಾರಗಳೆಲ್ಲವೂ ಶಬ್ದ ಮೂಲದಿಂದಲೇ ಸಿದ್ಧವಾದವು ಈ ಗ್ರಂಥಗಳ ಪ್ರಕಾರಗಳ ಬಗೆಗೆ ಹಲವು ಋಷಿಗಳ ಹಲವು ಮತಗಳಿಂದ ವಿಚಾರ ಮಾಡಲು ಅವು ಅಸಂಖ್ಯವಿರುವವು ಭಾಷೆ ಹಾಗು ಬರೆಹಗಳೆರಡೂ ಸಾಧನಗಳಿದ್ದಲ್ಲಿ ಗ್ರಂಥ ಪ್ರಕಾರಗಳಿಗೆ ಕೊರತೆಯಿರಲಾರದು ಋಗ್ವೇದದ ವರ್ಗಗಳು, ವೇದಮಂತ್ರಋಕ್‌ಗಳು, ಶ್ರುತಿ, ಸ್ಮೃತಿ, ಅಧ್ಯಾಯ, ಸರ್ಗ, ಸ್ತಬಕ, ಜಾತಿ, ಪ್ರಸಂಗ, ಸಮಾಸ, ಪೋಥೀ ಮುಂತಾಗಿ ಗ್ರಂಥಗಳ ಅನೇಕ

ವಿಭಾಗಗಳಿರುವವು. ಪದಗಳು, ಶ್ಲೋಕ, ಸಾಕಿ, ದೋಹರೆ ಮುಂತಾದವು ಇವೆಲ್ಲವುಗಳ ಪ್ರಕಾರಗಳುಂಟು ಡಬ್ಬ-ಡೊಳ್ಳು ವಾದ್ಯಗಳಮೇಲೆ ಬಾರಿಸಿ ಹಾಡುವ ಪದಗಳು, ದಿಂಡೀ, ದುಂದುಮೆಗಳು, ಇತ್ಯಾದಿ ಗಾಯನದ ಹಲವು ಬಗೆಗಳು, ತಾಳ ಲಯ, ತಾನ—ಮಾನ, ಳಿಗನ-ಸರಿಸಿ ಬೇರೆ ಬೇರೆ ಆಟಗಳನ್ನಾಡ ತಕ್ಕ ಹಲವು ಪ್ರಕಾರಗಳು ಇವೆಲ್ಲವಿರುವವು ಧ್ವನಿ, ಘೋಷ, ನಾದ, ರೇಖೆ ಇವು ವಾಣಿಯ ನಾಲ್ಕು ಪ್ರಕಾರಗಳು ವೈಖರಿ ವಾಣಿಯಲ್ಲಿಯೂ ಹಲವು ಪ್ರಕಾರಗಳುಂಟು ಪರಾವಾಣಿಯಲ್ಲಿ ಸ್ಫುರಣ[ಉನ್ಮೇಷ]ವೂ, ಪಶ್ಯಂತಿಯಲ್ಲಿ ಧ್ವನಿಯೂ, ಮಧ್ಯಮೆಯಲ್ಲಿ ನಾದವೂ ಮತ್ತು ವೈಖರಿಯಲ್ಲಿ ಹಲವು ರೇಷೆಗಳೂ ಮತ್ತು ಅವುಗಳಿಂದ ಹುಟ್ಟುವ ಹಲವು ಶಬ್ದರತ್ನಗಳೂ ಇರುವವು ಅಕಾರ, ಉಕಾರ, ಮಕಾರ ಹಾಗು ಅರ್ಧಮಾತ್ರೆ ಇವೆಲ್ಲ ಕೂಡಿ ಮೂರುವರೆ ಮಾತ್ರೆಗಳು ಈ ಮಾತ್ರೆಗಳಿಂದಲೇ ಓಂಕಾರವು ಹುಟ್ಟುವದು ಆ ಓಂಕಾರದಿಂದ ಮುಂದೆ ೫೨ ಮಾತೃಕೆಗಳು ಅಂದರೆ ಅ ದಿಂದ ಜ್ಞ ವರ್ಣದ ವರೆಗೆ ೧೬ ಸ್ವರಗಳು ೩೬ ವ್ಯಂಜನಗಳು ಇವಲ್ಲದೆ ನಾದಭೇದ, ರಾಗಜ್ಞಾನ, ತಾಲ—ಲಯಗಳ ಜ್ಞಾನ ಅರ್ಥಭೇದ ಮತ್ತು ತತ್ವಜ್ಞಾನ ಹೀಗೆ ಹಲವು ಪ್ರಕಾರಗಳಿರುವವು ಮತ್ತು ಇವುಗಳಲ್ಲಿ ಮುಖ್ಯ ತತ್ವ ಅಂದರೆ ಅರ್ಧಮಾತ್ರೆಯು ಶುದ್ಧ ಸತ್ವಗುಣವು ಇದಕ್ಕೇ ಮಹತ್‌ತತ್ವ ಅಥವಾ ಮೂಲಮಾಯೆ ಎಂದೆನ್ನುವರು ಇಂತು ಶಬ್ದ ಸೃಷ್ಟಿಯ ವಿವರವಾಯಿತು ಇನ್ನು ದೇಹದಲ್ಲಿಯೂ ಎಂಟು ಪ್ರಕಾರಗಳಿರುವವು ಅವುಗಳಲ್ಲಿ ನಾಲ್ಕು ಪಿಂಡಕ್ಕೆ ಸಂಬಂಧಿಸಿದವು ಉಳಿದ ನಾಲ್ಕು ಬ್ರಹ್ಮಾಂಡಕ್ಕೆ ಸಂಬಂಧಿಸಿದವು ಈ ಎಂಟೂ ದೇಹಗಳು ಬೇರೆ ಬೇರೆ ತತ್ವಗಳಿಂದ ರಚಿತವಾಗುವವು ಮುಖ್ಯ ತತ್ವಗಳು ಎಂದರೆ ಸತ್ವ, ರಜ, ತಮಗಳೂ ಪಂಚಭೂತಗಳೂ ಕೂಡಿ ಅಷ್ಟಧಾ ಪ್ರಕೃತಿಯೆನಿಸುವದು ಅದು ವಾಯುರೂಪ ಮೂಲಮಾಯೆಯಿಂದ ಉಂಟಾಯಿತು ವಾಯುರಹಿತ ಆಕಾಶದಂತೆ ಅಷ್ಟದೇಹಗಳ ನಿರಸನವಾಗಲು ಘನಯುಕ್ತ ಪರಬ್ರಹ್ಮನು ಕಾಣುವನು ಪಿಂಡ-ಬ್ರಹ್ಮಾಂಡಗಳ ಉತ್ಪತ್ತಿ ಸಂಹಾರಗಳಿಂದ ವಿಮಲ ಬ್ರಹ್ಮನು ಸಾರಭೂತನಾಗಿ ಬೇರೆ ಯಿರುವನು ಪದಾರ್ಥವು ಜಡವಾಗಿಯೂ, ಆತ್ಮನು ಚಂಚಲ

ವಾಗಿಯೂ, ಇರುವರು ಇವೆರಡರ ನಿರಸನ ಮಾಡಿಕೊಂಡು ಅವುಗಳ ವಿವರಣೆ ಮಾಡಮಾಡುತ್ತಾ ಹೋಗಲು ನಿಶ್ಚಲ ವಿಮಲ ಬ್ರಹ್ಮನಲ್ಲಿ ಅವುಗಳ ತದ್ರೂಪತೆಯುಂಟಾಗುವದು ಇನ್ನು ಆತ್ಮನಿವೇದನಯ ಶ್ರೇಷ್ಠವಾದ ಮೂರು ಪ್ರಕಾರಗಳು ಯಾವವೆಂದರೆ— ದೇಹದಿಂದ ಜಗತ್ತಿನ ವರೆಗೆ ಎಲ್ಲ ತತ್ವಗಳಿಂದೊಡಗೂಡಿದ ಜಡಸೃಷ್ಟಿಯು ದೇವನದು ಅಹಂಕಾರ—ಮಮಕಾರಗಳಿಲ್ಲದೆ ತ್ರಿಕರಣಪೂರ್ವಕವಾಗಿ ಆ ದೇವನಿಗೇ ಮೊರೆಹೋಗುವದು ಇದು ಜಡವಾದ ಆತ್ಮನಿವೇದನೆಯು ಜೀವಾತ್ಮವು ಚಂಚಲವಾದುದು ಜಗದೀಶನು ಜೀವಾತ್ಮನ ಕರ್ತೃವು ಪ್ರಾಣಿಮಾತ್ರಗಳೆಲ್ಲ ಆ ಜಗದೀಶನ ಅಂಶವು ಅಂದರೆ ಜೀವಾತ್ಮನು ಜಗದೀಶನಿಂದ ಬೇರೆಯಿಲ್ಲ ಎಲ್ಲವನ್ನು ಮಾಡುವವನು ಆ ದೇವನು ನಾನು ಮಾತ್ರ ಅಲ್ಲ ಹೀಗೆ ತಿಳಿಯುವದೇ ಚಂಚಲ ಆತ್ಮನಿವೇದನೆಯು ಇನ್ನು ಚಂಚಲವು ಸ್ವಪ್ನಾಕಾರವಿದ್ದು ಅದಕ್ಕೆ ನಿಶ್ಚಿತ ಸ್ಥಾನವಿಲ್ಲ ನಿಶ್ಚಲ ಬ್ರಹ್ಮನ ಹೊರತು ಇನ್ನೊಂದು ನಿಶ್ಚಲವಾದದ್ದಿರುವದಿಲ್ಲ ಈ ಪ್ರಕಾರ ತಿಳಿಯುವದೇ ನಿಶ್ಚಲ ಆತ್ಮನಿವೇದನೆಯು ಇಂತು ಈ ಮೂರೂ ಪ್ರಕಾರಗಳಲ್ಲಿ ನಾನು ಎಲ್ಲಿಯೂ ಇಲ್ಲ ಹಾಗು ಇನ್ನೊಂದೂ ಇಲ್ಲ ಒಬ್ಬನೇ ಒಬ್ಬ ಪರಬ್ರಹ್ಮನಿರುವನೆಂಬದು ವಿವರಣೆ ಮಾಡಮಾಡುತ್ತ ಹೋಗಲು ತಿಳಿದು ಬರುವದು ತಿಳಿ ತಿಳಿದಂತೆ ಹೃದಯದಲ್ಲಿ ಮೂಡುವನು ಇಂತು ನಿಶ್ಚಲ ಬ್ರಹ್ಮಾಕಾರವುಂಟಾಗಲು ಆಗ ಎಲ್ಲ ಶಬ್ದ ಮಾತುಗಳು ಕುಂಠಿತವಾಗುವವು"

ಶ್ರೀ ರಾಮ || ೬ ಸೃಷ್ಟಿಕ್ರಮ ನಿರೂಪಣೆ || ಗುರುಗಳು ಶಿಷ್ಯನಿಗೆ ಬೋಧಿಸಿದ್ದೆಂತೆಂದರೆ—

"ಬ್ರಹ್ಮನು ಆಕಾಶದಂತೆ ನಿರ್ಮಳನು, ನಿಶ್ಚಲನು, ಶಾಶ್ವತನು, ನಿರ್ಮರ್ಯಾದನು ಹಾಗು ವ್ಯಾಪಕನು ಅವನನ್ನು ಕ್ರಿಯೆಯಿಂದ ತಿಳಿಯಲು ಸಾಧ್ಯವಿಲ್ಲ ಅವನಿಗೆ ಜನನ ಮರಣಗಳಿಲ್ಲ ಅರಿವು–ಮರಿವುಗಳಿಲ್ಲ ಅವನು ಶೂನ್ಯಾತೀತನೂ ಅಪಾರನೂ ಮಾಯಾತೀತನೂ ಆಗಿರುವನು ಅವನಲ್ಲಿ ಕೃತಿ-ಹತಗಳಿಲ್ಲ, ಆಗು–ಹೋಗುಗಳಿಲ್ಲ ಆ ಬ್ರಹ್ಮನಲ್ಲಿ ಮೊದಲು ಸಂಕಲ್ಪವು ಉಂಟಾಯಿತು. ಆ ಆದಿಸಂಕಲ್ಪವೇ ಮೂಲ ಮಾಯೆಯು ಆ ಮೂಲ ಮಾಯೆಯೇ ಷಡ್ಗುಣೇಶ್ವರ ಎಂದೆನ್ನಿ

ಸಿಕೊಳ್ಳುವದು. ಮತ್ತೂ ಆ ಮೂಲ ಮಾಯೆಯು ವಾಯು ಮತ್ತು ಜ್ಞಾನಗಳಿಂದ ಕೂಡಿದ್ದರಿಂದ ಅದಕ್ಕೆ 'ಅರ್ಧನಾರೀ ನಟೇಶ್ವರ' ಎಂಬ ಹೆಸರು ಬಂದಿತು ಸರ್ವೇಶ್ವರ, ಸರ್ವಜ್ಞ, ಸಾಕ್ಷಿ, ದ್ರಷ್ಟಾ, ಜ್ಞಾನಘನ, ಪರೇಶ, ಪರಮಾತ್ಮ, ಜಗಜ್ಜೀವನ, ಮೂಲಪುರುಷ ಈ ಎಲ್ಲ ಹೆಸರುಗಳೂ ಮೂಲ ಮಾಯೆಗೆ ಸಂಬಂಧಿಸಿದವು ಈ ಮೂಲ ಮಾಯೆಯು ಅಧೋಮುಖವೇ ಗುಣಮಯೆಯು ಈ ಗುಣ ಕ್ಷೋಭಿಣಿಯಿಂದ ಗುಣತ್ರಯಗಳು ನಿರ್ಮಾಣವಾದವು ನಂತರ ಸತ್ವಗುಣಾಯತ್ತ ವಿಷ್ಣುವಿನ ನಿರ್ಮಿತವಾಯಿತು ಅವನೇ ಮೂರು ಲೋಕಗಳ ಪಾಲನ ಕರ್ತನಾದನು ತರುವಾಯ ರಜೋಗುಣಾಯತ್ತ ಬ್ರಹ್ಮದೇವನುದಿಸಿದನು ಅವನಿಂದ ಮೂರು ಲೋಕಗಳಲ್ಲಿ ಉತ್ಪತ್ತಿಕ್ರಿಯೆಗಾರಂಭವಾಯಿತು ಕೊನೆಗೆ ತಮೋಗುಣ ಪ್ರಾಧ್ಯಾನ್ಯತೆಯಿಂದ ರುದ್ರನ ಅವತಾರವಾಗಿ ಅವನು ಎಲ್ಲವನ್ನೂ ಸಂಹರಿಸುವ ಕಾರಣ ಕರ್ತೃವಾಗಿ ಬಿಟ್ಟನು ಇಷ್ಟಾದ ಬಳಿಕ ಪಂಚಭೂತಗಳು ಸ್ಪಷ್ಟ ದೆಶೆಯನ್ನು ಹೊಂದಿದವು ಆ ಮೂಲಮಾಯೆಯು ಮೊದಲೇ ಅಷ್ಟಧಾ ಪ್ರಕೃತಿಯ ಸ್ವರೂಪದಿಂದಿರುವದು ಹಾಗು ಅತಿ ಸೂಕ್ಷ್ಮರೂಪದಿಂದಿರುವದು ಈ ಸೂಕ್ಷ್ಮರೂಪವೇ ಮುಂದೆ ವ್ಯಕ್ತರೂಪಕ್ಕೆ ಬರುವದು ನಿಶ್ಚಲ ಬ್ರಹ್ಮನಲ್ಲಿ ಉಂಟಾದ ಸಂಕಲ್ಪದ ಮೊದಲನೆಯ ಸಂಚಲನವೇ ಮೂಲ ಮಾಯೆಯು ಇದು ವಾಯುವಿನ ಸ್ವರೂಪದ್ದಾಗಿರುವದು ತ್ರಿಗುಣ ಪಂಚಭೂತಾತ್ಮಕ ಅಷ್ಟಧಾ ಪ್ರಕೃತಿಯು ಆ ವಾಯು ರೂಪ ಮೂಲ ಮಾಯೆಯಲ್ಲಿ ಸೂಕ್ಷ್ಮ ರೂಪದಿಂದ ಇರುವದು ಅದರ ಆಕಾಶ ಎಂದರೆ ಅಂತರಾತ್ಮನನ್ನು ಈ ಅನುಭವಪ್ರತ್ಯಯದಿಂದ ಕಾಣಬೇಕು ಆಕಾಶದಿಂದ ಎರಡು ವಾಯುಗಳು ಪ್ರವಹಿಸುವವು ಅವು ಯಾವವೆಂದರೆ ೧ ಉಷ್ಣ ೨ ಚಳಿ

ಶೀತಲ ವಾಯುವಿನಿಂದ ತಾರಕೆಗಳು, ಚಂದ್ರನು ಉದಯಿಸಿದರೂ ಮತ್ತು ಉಷ್ಣ ವಾಯುವಿನಿಂದ ರವಿ, ಅಗ್ನಿ, ವಿದ್ಯುಲ್ಲತೆ ಮುಂತಾದವುಗಳು ದಿಸಿದವು ತೇಜದಿಂದ ಜಲವೂ ಜಲವು ಆಟ್ಟಿಸಿ ಪೃಥ್ವಿಯೂ ಪೃಥ್ವಿಯಿಂದ ಅನೇಕ ಔಷಧಿಗಳೂ ನಿರ್ಮಾಣವಾದವು ಈ ಪ್ರಕಾರ ಸೃಷ್ಟಿ ರಚನೆಯ ವಿಚಾರ ಮಾಡಬೇಕು.

ಈ ಸೃಷ್ಟಿ ರಚನೆಯ ನ್ಯಾಯದಂತೆಯೇ ಸಂಹಾರದ ವಿಚಾರವನ್ನೂ ಮಾಡಬೇಕು ಹೀಗೆ ವಿಚಾರ ಮಾಡುವಾಗ 'ಹುಟ್ಟಿದಲ್ಲಿಯೇ ಸಾವು' ಎಂಬ ತತ್ವವನ್ನು ಲಕ್ಷ್ಯದಲ್ಲಿ ಇರತಕ್ಕದ್ದು ಸೃಷ್ಟಿಯ ಉತ್ಪತ್ತಿ— ಸ್ಥಿತಿ—ಲಯ ಈ ಮೂರೂ ಅವಸ್ಥೆಗಳಲ್ಲಿ ಶಾಶ್ವತ ಸ್ವರೂಪವು ಅಖಂಡವಾಗಿರುತ್ತದೆ ಅದು ಸಾರವೆಂದೂ ಉಳಿದ ಮಾಯೆಯು ಅಸಾರವೆಂದೂ ಈ ಸಾರಾಸಾರ ವಿವೇಕವು ಜಾಗೃತವಾಗಿರಬೇಕು ಬುದ್ಧಿವಂತನು ಆದಿ ಮಧ್ಯ-ಅಂತ್ಯಗಳಲ್ಲಿ ಶಾಶ್ವತವಿರುವ ನಿರಂಜನ ಪರಬ್ರಹ್ಮನಲ್ಲಿ ಅನುಸಂಧಾನವನ್ನಿಡಬೇಕು ಅವನಿಗೆ ದೃಷ್ಟಾ, ಸಾಕ್ಷಿ, ಅಂತರಾತ್ಮ ಎಂದು ಹೆಸರು ಆದರೆ ಸಾಕ್ಷಿತ್ವಕ್ಕೆ ಅವಸ್ಥೆಯುಂಟು, ಬ್ರಹ್ಮನು ಅವಸ್ಥಾತೀತನಾಗಿರುವನು ಇದನ್ನು ಅನುಭವದಿಂದ ತಿಳಿಯಬೇಕು ಸೃಷ್ಟಿಯ ರಚನೆಯು ಮೂಲ ಮಾಯೆಯಲ್ಲಿ ಆಗುವದು ಮತ್ತು ಹೋಗುವದು ಅದು ನಿಲ್ಲುವದಿಲ್ಲ ಬ್ರಹ್ಮನು ಆಚೆಗಿರುವನು ಮೂಲ ಮಾಯೆಯಿಂದ ಕೊನೆಯವರೆಗೆ ಎಲ್ಲವೂ ಮಾಯಾಭರಿತವಾಗಿರುವದು ಹಲವು ವಿದ್ಯೆಗಳು, ಕಲಾಕೌಶಲ್ಯಗಳು ಇವೆಲ್ಲವೂ ಮಾಯೆಯಲ್ಲಿಯೇ ಆಗಿರುವವು ಉಪಾಧಿಗೆ ಬಂದು ನಿಲುಕುವವನಿಗೆ ಸೃಷ್ಟಿ ರಚನೆಯು ಭ್ರಮೆಯೆನ್ನಿಸುವದು ಉಪಾಧಿಯ ಭ್ರಮೆಯಲ್ಲಿ ಸಿಕ್ಕವನನ್ನು ಬಿಡಿಸುವದು ಸಾಧ್ಯವಿಲ್ಲ ಇದು ಅನುಭವದ ಕೆಲಸವಲ್ಲ ವಿವೇಕ ವಿಚಾರದಿಂದಲೇ ಬ್ರಹ್ಮಪದವನ್ನು ಪಡೆಯಬೇಕಾಗುವದು ಬ್ರಹ್ಮಾಂಡದ ಮಹಾಕಾರಣ ದೇಹವೇ ಮೂಲಮಾಯೆಯು ಅದು ಅಪೂರ್ಣವಿರುವದು ವಿವೇಕರಹಿತರು ಅದಕ್ಕೇ ಪೂರ್ಣ ಬ್ರಹ್ಮನೆನ್ನುವರು ಸೃಷ್ಟಿಯಲ್ಲಿ ಅದೆಷ್ಟೋ ಜನರು ರಾಜ್ಯೈಶ್ವರ್ಯ ಭೋಗಿಸುವವರಿರುವರು ಕೆಲವರು ಹೊಲಸು ಬಳಿಯುವ ಹೀನ ಕ್ರಿಯೆ ಮಾಡುವವರೂ ಇರುವರು ಎಲ್ಲರೂ ತಮ್ಮ ತಮಗೆ ಮಹತ್ವವನ್ನೇ ಎಣಿಸಿಕೊಳ್ಳುವರು ಆದರೆ ವಿವೇಕಿಗಳ ಮಾತ್ರ ಯೋಗ್ಯವಾದುದನ್ನು ತಿಳಿದುಕೊಳ್ಳುವರು ವಿವೇಕದಿಂದ ಪೂರ್ಣ ಬ್ರಹ್ಮನನ್ನು ಹೊಂದಬೇಕು ಬುದ್ಧಿಯಿಲ್ಲದವರ ನಾದಕ್ಕೆ ಮರುಳಾಗಿ ಸಂಸಾರವನ್ನು ಹಾಳು ಮಾಡಬಾರದು. ತಮ್ಮ ಅನುಭವದಿಂದ ನೋಡಿಕೊಳ್ಳಬೇಕು ಪುಸ್ತಕವನ್ನು ಓದಿದ ಮಾತ್ರದಿಂದ ಆತ್ಮನಿಶ್ಚಯವಾಗುತ್ತಿದ್ದರೆ ಗುರುವಿನ ಆವಶ್ಯಕತೆಯಿಲ್ಲ. ಅಂತೆಯೇ ಸೃಷ್ಟಿಯ ಉತ್ಪತ್ತಿ

ಸಂಹಾರಗಳ ಕಥೆಯನ್ನು ತಿಳಿದುಕೊಳ್ಳಬೇಕು. ಮತ್ತು ಸ್ವಂತದ ಅನುಭವದಿಂದ ವಿವರಿಸಬೇಕು ಬುದ್ಧಿಹೀನರ ಮಾತಿಗೆ ಮರುಳಾದ ಪ್ರಾಣಿಯು ನಿಸ್ಸಂದೇಹವಾಗಿ ಮುಳುಗಿ ಹೋಗುವದು ಆದಕ್ಕಾಗಿ ಗುರುವಿನಲ್ಲಿ ವಿಶ್ವಾಸ ವಿಟ್ಟು ನಡೆಯಬೇಕು ಒಬ್ಬ ಒಡೆಯನನ್ನು ಗೊತ್ತು ಮಾಡಿಕೊಳ್ಳದೆ ಇದ್ದರೆ ಉದರ ನಿರ್ವಾಹವೆಂತು ಸಾಗುವದು ? ಆ ಒಡೆಯನಿಂದಲೇ ಸಾಧ್ಯವು '

ಶ್ರೀ ರಾಮ ॥ ೭ ವಿಷಯ ತ್ಯಾಗ ನಿರೂಪಣೆ ॥ ಶಿಷ್ಯನು ಗುರುಗಳನ್ನು ಕುರಿತು ಕೇಳಿದ್ದೆಂತೆಂದರೆ:—

'' ಸ್ಪಷ್ಟವಾಗಿ ನೀತಿಯನ್ನು ಹೇಳಹತ್ತಲು ಅದು ಒಹುಜನರಿಗೆ ರುಚಿ ಕಟ್ಟೆನ್ನಿಸುವದಿಲ್ಲ ಹೊಟ್ಟೆಯಲ್ಲಿ ಮಳಮಳಿಸುತ್ತಿರುವಾಗ ಊಟ ಮಾಡುವದು ವಿಹಿತವಲ್ಲ ಎಷ್ಟೋ ಜನರು ವಿಷಯಗಳನ್ನು ತಿರಸ್ಕರಿಸುವರು ಆದರೂ ಅವರು ವಿಷಯಾಸಕ್ತರಾಗಿಯೇ ವರ್ತಿಸುವರು ವಿಷಯತ್ಯಾಗ ಮಾಡುವವರಿಂದ ಶರೀರ ಸ್ಥಿತಿಯು ಉಳಿಯುವದೆಂತು? ಆಡುವದೊಂದು, ಮಾಡುವದಿನ್ನೊಂದು- ಈ ಪ್ರಕಾರದ ವರ್ತನವು ವಿವೇಕಹೀನರಲ್ಲಿರುವದು ಇದರಿಂದ ಅವರು ಜ ರೆ ಅಪಹಾಸ್ಯಕ್ಕೆ ಗುರಿಯಾಗುವರು ವಿಷಯತ್ಯಾಗದ ಹೊರತು ಪರಲೋಕ ಪ್ರಾಪ್ತವಾಗುವದಿಲ್ಲ ಎಂಬುದು ಮೇಲೆ ಮೇಲೆ ಹೇಳುತ್ತ ಬಂದಿದೆ ಪ್ರಪಂಚದಲ್ಲಿ ತಿಂಬುಂಬುವರು ಆವರೆ ಪರಮಾರ್ಥದಲ್ಲಿ ಉಪವಾಸವಿರುವರೇ? ಇದರ ಮೇಲಿಂದ ನೋಡಲು ಪ್ರಾಪಂಚಿಕನಿಗೂ ಪಾ ಮಾರ್ಥಿಕ ವಿಚಾರಿಗೂ ವಿಷಯಗಳ ಸಂಬಂಧವು ಸಮಾನವಿರುವದೆಂದು ಕಂಡು ಬರುವದು. ದೇಹವು ಕ್ರಿಯೆಗಳಲ್ಲಿ ಸಮರ್ಥವಿರ ವಾಗ ವಿಷಯಗಳನ್ನು ತ್ಯಾಗ ಮಾಡಿದಂಥವನು ಜಗತ್ತಿನಲ್ಲಿ ಆದಾವನಿರುವನು? ಈ ನನ್ನ ಸಂಶಯದ ಪರಿಹಾರವನ್ನು ನನಗೆ ನಿರೂಪಿಸುವದಾಗಬೇಕು ವಿಷಯಗಳನ್ನು ಬಿಡಬೇಕು, ಮತ್ತು ಪರಮಾರ್ಥವನ್ನು ಮಾಡಬೇಕು ಈ ಮಾತು ಅಸಾಧ್ಯ ತೋರುವದಲ್ಲವೇ?''

ಎಂದು ಶಿಷ್ಯನು ಪ್ರಶ್ನೆ ಮಾಡಿದನು ಅದಕ್ಕೆ ಗುರುಗಳು:—

"ವೈರಾಗ್ಯ ಪೂರ್ವಕ ವಿಷಯಗಳನ್ನು ತ್ಯಾಗ ಮಾಡಿದರೇನೇ ಪರಮಾರ್ಥದ ಲಾಭ ದೊರಕುವದು ಪ್ರಪಂಚ ತ್ಯಾಗ ಮಾಡುವದರಿಂದ ಪರಮಾರ್ಥ ದೊರಕುವದೆಂಬುದು ತೀರ ನಿಜವೇ ಹೇಗ ಹೇಳು ಇದು ವರೆಗಾಗಿ ಹೋದ ಎಷ್ಟೋ ಜ್ಞಾನಿಗಳು ಶ್ರಮ ವಹಿಸಿಯೇ ವಿಖ್ಯಾತ ರಾಗಿ ಹೋದರು ಇಂಥ ಶ್ರೇಷ್ಠರನ್ನು ಅದೆಷ್ಟೋ ಅನಾರ್ಥಿ ಅಶನಾರ್ಥಿ ಗಳು ಮಾತ್ಸರ್ಯದಿಂದ ಕಾಣಲಿಲ್ಲವ ? ಮೂಲ ಮಾಯೆಯಿಂದ ಸಕಲ ಚರಾಚರ ಸೃಷ್ಟಿಯುಪರಗೆ ವೈರಾಗ್ಯವಿಲ್ಲ, ಅನುಭವ ಜ್ಞಾನವಿಲ್ಲ ಪವಿತ್ರ ಆಚರಣೆ ಭಜನಗಳಿಲ್ಲ ಇಂಥ ಜನರು ತವ್ಮನ್ನು ಸಜ್ಜನರೆಂದು ಹೇಳಿ ಕೊಳ್ಳುವರು ಆದರ ಅವರಲ್ಲಿ ಅನುಮಾನಿಕ ಜ್ಞಾನದ ಹೊರತು ಮತ್ತೇನೂ ಇರುವದಿಲ್ಲ ಅವರಿಗೆ ನಿಜವಾದ ಅನುತಾಪವು ಉಂಟಾಗಿ ರುವದಿಲ್ಲ ಈ ಅನುತಾಪವಿಲ್ಲದಿರುವದೆಂದರೆ ಅದು ಸಂಚಿತ ಪಾಪಗಳ ದ್ಯೋತಕವಾಗಿರುವದೆಂದು ಹೇಳಬಹುದು ವೈರಾಗ್ಯ ಮತ್ತು ಅನುತಾ ಪಗಳೆರಡೂ ಇಲ್ಲದ್ದರಿಂದ ಅವರಲ್ಲಿ ಅನ್ಯರ ಹೆಚ್ಚಳವನ್ನು ಸಹನೆ ಮಾಡುವ ಮನೋವೃತ್ತಿಯಿರುವದಿಲ್ಲ ಈ ಜನರು ನನಗೂ ಇಲ್ಲ, ನಿನಗೂ ಬೇಡ ' ಎನ್ನುವ ಸ್ವಭಾವದವರಾಗಿರುವರು ಸಿರಿವಂತರಿಗೆ ಬಡ ವರು ಹೆಸರನ್ನಿಡುವರು ಅವರಿಗೆ ಎರಡನೆಯವರ ಸುಖ — ದುಃಖಗಳೇನೂ ಅನ್ನಿಸುವದಿಲ್ಲ ಐಶ್ವರ್ಯವಂತನನ್ನು ಕಂಗಾಲರು ನಿಂದಿಸುವರು ಹೊಟ್ಟೆ ಕಿಚ್ಚಿನವರು ವಿರಕ್ತರ ನಿಂದೆಯನ್ನೂ ವೈರಾಗ್ಯಕ್ಕೆ ಕುಂದನ್ನೂ ಇಟ್ಟು ಮಾತಾಡಿದರೆ ಅದರಿಂದೇನಾಗುವದು? ಎಲ್ಲ ಐಶ್ವರ್ಯಗಳಲ್ಲಿ ವೈರಾಗ್ಯ ಭಾಗ್ಯವು ಹೆಚ್ಚಿನದು ವೈರಾಗ್ಯರಹಿತನು ಕೀಳನು. ಹಾ ! ದುರ್ಭಾ ಗ್ಯನು ವೈರಾಗ್ಯವಿಲ್ಲದೆ ಯಾರಿಗೂ ಪರಮಾರ್ಥದ ಯೋಗ್ಯತೆಯು ಬರಲಾರದು ಅನುಭವದ ಜ್ಞಾನವಿದ್ದ ವಿರಕ್ತ ಪುರುಷನು ವಿವೇಕ ಬಲದಿಂದ ಸರ್ವಸ್ವವನ್ನು ತ್ಯಾಗಮಾಡಿದ್ದಾದರೆ ಅವನು ಮಹಾಯೋಗಿ ಯೆನ್ನಿಸುವನು ಹಾಗು ಅವನೇ ಈಶ್ವರೀ ಪುರುಷನೆಂದು ಗಣಿಸಲ್ಪಡು ವನು ಇಂಥ ಯೋಗಿಗಳಲ್ಲಿಯೂ ಕೂಡ ಅಣಿಮಾದಿ ಅಷ್ಟ ಸಿದ್ಧಿಗ ಳನ್ನು ಉಪೇಕ್ಷೆ ಮಾಡಿ, ಯೋಗದಿಕ್ಷೆ ಹೊಂದಿ ಮನೆ ಮನೆಗೆ ಹೋಗಿ

ಭಿಕ್ಷೆ ಬೇಡುವವನೇ ಯೋಗಿಗಳ ಮುಕುಟ ಮಣಿ ' ಎನ್ನಿಸುವನು ಅವನೇ ಭಗವಾನ್ ಶಂಕರನೆಂದು ತಿಳಿಯಬೇಕು ಕೇವಲ ಬಾಹ್ಯ ವೇಷಧರಿಸಿ ಯೋಗಿಯೆಂದು ಹೇಳಿಕೊಳ್ಳುವ ಡಾಂಭಿಕನು ಈಶ್ವರನಂತೆ ಎಂದಾದರೂ ಆಗುವನೇ? ಶಕ್ಯವಿಲ್ಲ ಆದ್ದರಿಂದ ಎಲ್ಲವನ್ನೂ ಒಂದೇ ಎಂದು ತಿಳಿಯು ಬಾರದು ವಿವೇಕಿಗಳನ್ನೂ ವಿರಕ್ತರನ್ನೂ ಬಹು ಜನರು ಶೋಧಿಸುತ್ತ ಬರುವರು ಆದೇ ವಿಷಯ ಲೋಲುಪನಾದ ದೀನ ಹಾಗು ಮೂರ್ಖ ನನ್ನು ಅದಾರು ಹುಡುಕುವರು? ಆಚಾರ ವಿಚಾರ ಹೀನರಾದ ಭ್ರಷ್ಟರು ವಿಷಯಾಸಕ್ತರು, ಅವಿವೇಕಿಗಳು ಇವರಿಗೆ ಭಜನೆಗಳು ಸೇರುವದಿಲ್ಲ ಅವರಿಂದ ಪುರಶ್ಚರಣಗಳು ಸಿದ್ಧಿಸುವದಿಲ್ಲ ಅವರಿಗೂ ಒಳ್ಳೆಯವರಿಗೂ ಒಂದು ಗೂಡುವದು ಶಕ್ಯವಾಗುವದಿಲ್ಲ ವೈರಾಗ್ಯ ಸಂಪನ್ನನಾಗಿ ಸದಾ ಚಾರ ಯುಕ್ತನಾದವನು, ಜ್ಞಾನಿಯಾಗಿ ಸಗುಣ ಭಜನೆಯನ್ನು ಬಿಡದ ವನು, ಮತ್ತು ವ್ಯುತ್ಪನ್ನಮತಿಯಾಗಿ ವಾದ ವಿವಾದ ಮಾಡದವನು ಇಂಥ ಪುರುಷರು ಸಿಗುವದು ದುರ್ಲಭವೆಂದೇ ಹೇಳಬಹುದು ದುಡಿದು ಶ್ರಮವಹಿಸಿ ಕಾಬಾಡಕಷ್ಟ ಮಾಡಿದರೆ ಹೊಲವು ಬೆಳೆಯುವದು ಶ್ರೇಷ್ಠ ಪದಾರ್ಥಗಳು ಮಾರಲಿಕ್ಕೆ ಬಂದರೆ ಕೂಡಲೇ ಮಾರಾಟವಾ ಗುವವು ಜನರು ನಾ ಮುಂದೆ ನೀ ಮುಂದೆ ಎಂದು ಬಂದು ಕೊಳ್ಳು ವರು

ಇನ್ನು ಇದೆಲ್ಲವು ಜ್ಞಾನವಂತರ ಬಗೆಯದಾಯಿತು ಅಜ್ಞಾನಿಗ ಳಲ್ಲಿ ದುರಾಶೆಯು ಮನೆ ಮಾಡಿರುವದು ಅವರಲ್ಲಿಯ ಆಚರಣೆ ಭ್ರಷ್ಟತೆ ಹೊಂದಿರುವದು ಆದರಿಂದ ಆವರಲ್ಲಿ ಜ್ಞಾನ ಸೇರ್ಪಡೆಯಾಗಲು ಸ್ವಲ್ಪವೂ ಸಾಧ್ಯವಿಲ್ಲ. ಅಶುದ್ಧವೆಂದರೆ ಶಾಸ್ತ್ರ ನಿಷಿದ್ಧವಾದ ವಿಷಯಗಳನ್ನು ತ್ಯಾಗ ಮಾಡುವದು, ಶುದ್ಧ ವಿಷಯಗಳ ಕಾರ್ಯ ಕಾರಣಗಳನ್ನರಿತು ಸ್ವೀಕರಿಸು ವದು ಇದೇ ವಿಷಯತ್ಯಾಗದ ಲಕ್ಷಣವೆಂದು ಹೇಳಬಹುದು ವಿಷಯ ಸಂಬಂಧದಲ್ಲಿ ಪ್ರಖರ ವೈರಾಗ್ಯವಿದ್ದ ಶೂರ – ವೀರರು—ಸರ್ವರಿಂದ ಮನ್ನಣೆ ಪಡೆಯುವರು ದುಡಿಯುವವನೂ ಆಲಸಿಯೂ ಎಂದೂ ಮಿಲನ ವಾಗರು ತ್ಯಾಗವೆಂದರೇನು? ಎಂಥದು? ಅದನ್ನು ಹೇಗೆ ಮಾಡಬೇಕು? ಮತ್ತು ಅತ್ಯಾಗವೆಂದರೇನು? ಇವೆಲ್ಲವುಗಳ ನಿಜವಾದ ಬೋಧೆಯು

ವಿವೇಕ ಕುಶಲರಿಗೆ ಚನ್ನಾಗಿ ಇರುತ್ತದೆ ಅಂಥವರೇ ಆಡಿದಂತೆ ನಡೆಯುತ್ತಾರೆ ಅವರಿಗೇ ಪಿಂಡ—ಬ್ರಹ್ಮಾಂಡಗಳ ನಿಜ ಜ್ಞಾನವಿರುತ್ತದೆ ಇಂಥ ಸರ್ವಜ್ಞರಾದ ಅವರು ಉತ್ತಮ ಗುಣಗಳಿಂದ ಪರಿಪೂರ್ಣರಿರುವರು ಆದರ ಯೋಗದಿಂದಲೇ ಅವರು ಸುಲಭ ಸಾರ್ಥಕತೆಯನ್ನು ಪಡೆಯುತ್ತಾರೆ ”

ಶ್ರೀ ರಾಮ || ೮ ಕಾಲ ರೂಪ || ಗುರುಗಳು ಶಿಷ್ಯನಿಗೆ—

“ ಮೂಲ ಮಾಯಾ ಜಗದೀಶ್ವರನಿಂದೆ ಅಷ್ಟಧಾ ಪ್ರಕೃತಿಯ ವಿಸ್ತಾರವಾಗಿ ಕ್ರಮದಿಂದ ಸೃಷ್ಟಿಯ ಉತ್ಪತ್ತಿಯಾಯಿತು ಬ್ರಹ್ಮನು ಆಕಾಶದಂತೆ ನಿರಾಕಾರನು ಆ ಬ್ರಹ್ಮನಿಗೆ ಕಾಲ ವೇಳೆಗಳಿಲ್ಲ ಉಪಾಧಿಗಳು ವಿಸ್ತೃತಗೊಂಡು ಅಲ್ಲಿ ಕಾಲವು ಕಂಡು ಬಂದಿತು ಇದನ್ನು ಬಿಟ್ಟು ಕಾಲನಿಗೆ ಸ್ಥಾನವೇ ಇಲ್ಲ ಒಂದು ಚಂಚಲವು ಇನ್ನೊಂದು ನಿಶ್ಚಲವು ಇವನ್ನು ಬಿಟ್ಟು ಕಾಲವೆಲ್ಲಿರಬೇಕು? ಚಂಚಲವಿರುವವರೆಗೆ ಕಾಲವು. ಆಕಾಶವೆಂದರೆ ಅವಕಾಶವುಳ್ಳದ್ದು, ಅವಕಾಶವೆಂದರೆ ವಿಲಂಬವು, ಆ ವಿಲಂಬ ರೂಪದ ಕಾಲವನ್ನು ಅರಿತುಕೊಳ್ಳಬೇಕು ಸೂರ್ಯನಿಗಾಗಿ ‘ಪಲ’ದಿಂದ ಮೊದಲಾಗಿ ‘ಯುಗ’ದ ವರೆಗೆ ಕಾಲಗಣನೆ ಮಾಡುವರು ಪಲ, ಗಳಿಗೆ, ಪ್ರಹರ, ದಿವಸ, ಅಹೋರಾತ್ರಿ, ಪಕ್ಷ, ಮಾಸ, ಷಣ್ಮಾಸ, ವರ್ಷ, ಯುಗ ಇವೆಲ್ಲವು ಮನುಷ್ಯನು ಲೆಕ್ಕ ಮಾಡುವಕಾಲಗಳು ಅದರಂತೆ ಕೃತ, ತ್ರೇತಾ, ದ್ವಾಪರ, ಕಲಿ ಇವೂ ಕಾಲಗಣನೆಯ ಪ್ರಕಾರಗಳು ಇವಲ್ಲದೆ ಶಾಸ್ತ್ರಗಳಲ್ಲಿ ದೇವಾದಿಕರ ಆಯುಷ್ಯ ಪ್ರಮಾಣವನ್ನನುಸರಿಸಿ ಕಾಲಗಳಿವೆ ಬ್ರಹ್ಮಾದಿ— ತ್ರಿಮೂರ್ತಿಗಳ ಉತ್ಪತ್ತಿ ಮೊದಲಾದ ಸಂಗತಿಗಳು ಸೂಕ್ಷ್ಮ ರೀತಿಯಿಂದ ಸರ್ವ ಪ್ರಾಣಿಗಳಲ್ಲಿಯೂ ಕಾಲವನುಸರಿಸಿ ನಡೆದಿದೆ ಆದರೆ ಜೀವವು ನೀತಿ ನ್ಯಾಯಗಳನ್ನು ಬಿಟ್ಟರೆ ಮಾತ್ರ ದುಃಖಹೊಂದುವದು ಸೃಷ್ಟಿಯ ಆದ್ಯಂತ ರಚನೆಯಲ್ಲಿ ಮೂರು ಗುಣಗಳು ಮಿಶ್ರಿತವಾಗಿವೆ ಆ ಗುಣಗಳನ್ನು ವಿಂಗಡಿಸಲು ಬರಲಾರದು ಆದ್ದರಿಂದ ಸಣ್ಣ ದೊಡ್ಡವುಗಳನ್ನು ಬೇರೆ ಎಂದು ತೋರಿಸಲು ಸಾಧ್ಯವಿಲ್ಲ ಇದು ಜ್ಞಾನಿಯ ಕೆಲಸವು ಅಜ್ಞಾನಿಯು ವ್ಯರ್ಥ ಭ್ರಮೆಯಲ್ಲಿ ಬೀಳುವನು ಅನುಭವದಿಂದ ಇಂಗಿತವನ್ನಷ್ಟೇ ತಿಳಿಯಬೇಕು.

ಇನ್ನು ಕಾಲ ವಿಷಯದಲ್ಲಿ:— ಉತ್ಪತ್ತಿ—ಸ್ಥಿತಿ—ಲಯ ಕಾಲಗಳು ಆದಕಂತೆ ವರುಷದಲ್ಲಿಯ ಆರು ಋತು ಕಾಲಗಳು, ಇದನ್ನನುಸರಿಸಿ ಪ್ರಸಂಗವುಂಟಾದ ಹಾಗೆ ಕಾಲದ ಹೆಸರುಗಳು ಬೇರೆ ಬೇರೆಯಾಗಿವೆ ಯಾವವೆಂದರೆ—

ಮಳೆಗಾಲ, ಚಳಿಗಾಲ, ಬಿಸಿಲಗಾಲ, ಸಂತೋಷಕಾಲ, ಸುಖ-ದುಃಖ—ಆನಂದ ಕಾಲಗಳು, ಪ್ರಾತ ಕಾಲ, ಮಧ್ಯಾಹ್ನ ಕಾಲ, ಸಾಯಂ ಕಾಲ, ವಸಂತ-ಕಾಲ, ಪರ್ವಕಾಲ, ಕಠಿಣಕಾಲ, ಜನ್ಮಕಾಲ, ಬಾಲ್ಯ-ತರುಣ—ವೃದ್ಧ ಕಾಲಗಳು, ಅಂತ್ಯಕಾಲ ವಿಷಮಕಾಲ, ಸುಕಾಲ, ದುಷ್ಕಾಲ, ಪುಣ್ಯ—ಪ್ರದೋಷ ಕಾಲಗಳು, ಇಂತು ವೇಳೆಗಳು ಕೂಡಿ ಕಾಲವೆಂಬ ಹೆಸರಿನಿಂದ ಕರೆಯಲ್ಪಡುವವು

'ಇರುವವೊಂದು ತಿಳಿಯುವದು ಮತ್ತೊಂದು' ಇದೇ ಹೀನ ವಿವೇಕವು ಪ್ರವೃತ್ತಿ ಮಾರ್ಗಗಳಲ್ಲಿ ಅವಿಚಾರತೆಯಿರುವದರಿಂದ ಆ ಮಾರ್ಗವು ಕೆಳಗೆ ಮೋರೆ ಹಾಕಿಕೊಂಡು ನಡೆದಿವೆ ಎಂಬುದು ಅವರಿಗೆ ತಿಳಿಯುವದಿಲ್ಲ ಇದು ವಿವೇಕವುಳ್ಳವರಿಗೆ ಗೊತ್ತಾಗುವದು ನಿವೃತ್ತಿ ಮಾರ್ಗದವರು ಊರ್ಧ್ವ ಮುಖವು ಪರಮ ಸುಖದಾಯಕವೆಂದು ಅರಿತುಕೊಳ್ಳುವರು ಮತ್ತು ಅವರು ಬ್ರಹ್ಮಾಂಡ ರಚನೆಯ ಮೂಲವು ಊರ್ಧ್ವ ಮುಖವಾಗಿಯೇ ಇರುವದನ್ನರಿತು ಆ ಕಡೆಗೇ ದೃಷ್ಟಿಯನ್ನಿಡುವರು ಹಾಗೇ ಅವರು ನೋಡ ನೋಡುತ್ತ ಉಗಮದತ್ತ ಕಾಣುವರು ಅವರು ಪ್ರಪಂಚದಲ್ಲಿದ್ದೂ ಪರಮಾರ್ಥವನ್ನು ಕಾಣುವವರೆಗೂ ಈ ಸ್ಥಿತಿಯುಂಟಾಗುವದು ಪ್ರಾರಬ್ಧಕ್ಕನುಸರಿಸಿ ಜನರಲ್ಲಿರುವನು ಉಳಿದ ಕಾಲವು ಜನರಿಂದ ಹೊರತಾಗಿರುವನು ಎಲ್ಲಕ್ಕೂ ಮೂಲ ಒಂದೇ ಆಗಿರುವದು ಆದರೂ ಕೆಲ ಜನರು ಬುದ್ಧಿವಂತರೂ ಕೆಲವರು ಕೇವಲ ಮಾತಿನವರೂ ಇರುವರು ವಿವೇಕದಿಂದ ಕೂಡಲೆ ಪರಲೋಕವನ್ನು ಸಾಧಿಸಿಕೊಳ್ಳಬೇಕು ಉತ್ತಮರು ಇಹಪರಗಳೆರಡನ್ನೂ ಸಾಧಿಸಿಕೊಳ್ಳುವರು ಇದರಿಂದ ಅವರ ಜನ್ಮ ಸಾರ್ಥಕಗೊಳ್ಳುವದು ಇದು ಅವರಲ್ಲಿಯ ವಿವೇಕದ ಫಲವು ಅವಿವೇಕಿಗಳು ಪಶು ಸಮಾನರೆಂದು ಹೇಳೆ

ಬಹುದು. ಅವರ ಜೊತೆಯಿಂದ ಪರಲೋಕ ದೊರೆಯಲಾರದು ಒಳ್ಳೇದು ಇದರಲ್ಲಿ ನಮ್ಮ ಹಾನಿಯೇನೂ ಇಲ್ಲ ಅವರು ಬಿತ್ತಿದ್ದನ್ನು ಬೆಳೆದು ಕೊಳ್ಳುವರು, ಮಾಡಿದ್ದನ್ನು ಉಣ್ಣುವರು ಇದು ನ್ಯಾಯವೇ ಆಗಿರು ವದು ಭಕ್ತಿಯನ್ನು ಆಚರಿಸಿದರೆ ದೇವನು ಪ್ರಸನ್ನನಾಗುವನು - ದೇವ ಭಕ್ತರಲ್ಲಿ ಐಕ್ಯತೆಯುಂಟಾಗಲು ಸಮಾಧಾನ ಹೆಚ್ಚುವದು ಕೀರ್ತಿ ಯನ್ನು ಸಂಪಾದಿಸದೆ ಸಾಯಬಾರದು ಬಲ್ಲವರೆನ್ನಿಸುವ ಎಷ್ಟೋ ಜನರು ಮಿಥ್ಯವಾದ ಪ್ರವೃತ್ತಿಗೆ ಮೋಹಿಸುವರು ಇದು ಆಶ್ಚರ್ಯವು ಎಲ್ಲವೂ ಇಲ್ಲಿಯೇ ಉಳಿಯುವದು ಯಾರೂ ಏನನ್ನೂ ಜೊತೆಗೆ ಒಯ್ಯಲಾರರು ಇದು ಎಲ್ಲರಿಗೂ ಅನುಭವದ ಸಂಗತಿಯಾಗಿರುವದು ಆದ್ದರಿಂದ ಪದಾರ್ಥ ವಿಷಯದಲ್ಲಿ ವಿರತಿ ಭಾವವಿರಬೇಕು ಮತ್ತು ಪದಾರ್ಥದಿಂದ ವ್ಯತಿರಿಕ್ತ ಪರಮಾತ್ಮನನ್ನು ವಿವೇಕದಿಂದ ಕಾಣಬೇಕು ಅಂದರೆ ಪಾರಮಾರ್ಥಿಕ ಲಾಭ ದೊರೆಯುವದು ಈ ಲಾಭದಂಥ ಪ್ರತ್ಯಕ್ಷ ಲಾಭವು ಇನ್ನೊಂದಿಲ್ಲ ಇಹ ಲೋಕದಲ್ಲಿ ದೊರೆಕಿದ ಕಾರ್ಯ ಕಾರಣಗಳೆಲ್ಲವೂ ಇಲ್ಲಿಯೇ ಉಳಿಯುವವೆಂಬದನ್ನರಿತು ಸಂಸಾರವನ್ನು ಮಾಡುತ್ತಿದ್ದರೂ ಜೀವನಿಗೆ ಸಮಾಧಾನನೆನ್ನಿಸುವದು ಈ ಪೂರ್ವದಲ್ಲಿ ಜನಕರಾಜ ಮೊದಲಾದವರು ರಾಜ್ಯವನ್ನು ಉಪಭೋಗಿಸುತ್ತಿದ್ದರೂ ಪರಮಾತ್ಮ ಸುಖವನ್ನು ನಿರಂತರವಾಗಿ ಅನುಭೋಗಿಸಿದರು ಈಗಲಾದರೂ ಅಂಥ ಪುಣ್ಯ ಶ್ಲೋಕಿಗಳಾದವರಿರುವರು ಮರಣ ಸಮೀಪಿಸಿದ ರಾಜನು ಲಕ್ಷಾನುಲಕ್ಷ ಹಣವನ್ನು ವ್ಯಯಮಾಡಿ ಉಳಿಯುವ ಪ್ರಯತ್ನ ಮಾಡಿ ದರೂ ಮೃತ್ಯುವು ಆತನನ್ನು ಸೆಳೆಯದೆ ಬಿಡಲಾರದು ಇಂತು ಜೀವಿ ತವು ಪರಾಧೀನವು ಅದರೊಳಗೂ ನೋವು —ಸಾವು –ಉದ್ವೇಗ —ಚಿಂತೆ ಮುಂತಾದವುಗಳು ತಪ್ಪಿದ್ದವಲ್ಲ ಸಂಸಾರವೆಂಬದೊಂದು ಕೂಡಿದ ಸಂತೆಯು ಆ ಸಂಸಾರ ವ್ಯವಹಾರದಿಂದಾಗುವ ಲಾಭವು ಕೇವಲ ದೇವನ ದಾಗಿರುವದು ಅಂದಮೇಲೆ ಆ ಲಾಭ ದೊರಕಿಸುವ ದೇವನ ಜೊತೆ ಯನ್ನು ಮಾಡಿಕೊಂಡವನಿಗೆ ಅದು ಒಂದು ವೇಳೆ ಇವನಿಗೆ ದೊರೆಯದಿದ್ದರೂ ಸಂಸಾರದ ದುಃಖದ ಪರಿಹಾರವು ಆಗಿಯೇ ತೀರುವದು ”

ಶ್ರೀ ರಾಮ || ೯. ಯತ್ನ ಶಿಕ್ಷಣ || ಶಿಷ್ಯನು ಗುರುಗಳಿಗೆ ಪ್ರಶ್ನೆ ಮಾಡಿದನೆಂತೆಂದರೆ—

"ದುರ್ಬಲನು, ದುರಾಚಾರಿಯು, ಸೋಮಾರಿಯು, ಕೊಳಬಕ್ಕನು, ಸಾಲಗುಳಿಯು ಹಾಗು ಎಲ್ಲವನ್ನು ಕಳೆದುಕೊಂಡು ಕಂಗಾಲಸ್ಥಿತಿಗಿಳಿದವನು ಇಂಥವನೊಬ್ಬನು ಅನ್ನ ವಸ್ತ್ರಾದಿಗಳಿಂದ ವರ್ಜಿತನಾಗಿ ಕೀಳನಾಗಿರುವನು ಅವನಿಗೆ ಆಪ್ತೇಷ್ಟರಾರೂ ಇಲ್ಲ ದಿಕ್ಕೇಡಿಯಾದ ಆತನು ಮುಂದೆ ಏನು ಮಾಡಬೇಕು? ಅವನ ಹೃದಯವು ಸಮ ಉಳಿಯುವದೆಂತು? ಅವನು ಸಾಯಬೇಕೇ ಇರಬೇಕೇ? ಇರುವದಾದರೆ ಅವನು ಎಂತಿರಬೇಕು? ಎಂದು ಕೇಳಿದನು ಅದಕ್ಕೆ ಗುರುಗಳು —

"ಯಾವ ಸಣ್ಣ–ದೊಡ್ಡ ಕೆಲಸಗಳಾದರೂ ಕೈಯಿಂದ ಮಾಡದೆ ಸಿದ್ಧಿಸುವದಿಲ್ಲ, ಕೆಲಸವು ಸಣ್ಣದೇ ಇರಲಿ ದೊಡ್ಡದೇ ಇರಲಿ ಮೊದಲು ಕೆಲಸಕ್ಕೆ ಆರಂಭಿಸಬೇಕು ಅಂದರೆ ದೈವ ತೆರೆಯಬಹುದು ಅವನಲ್ಲಿ ಕ್ರಿಯಾದಕ್ಷತೆಯಿರದಿದ್ದರೆ ಹಾಗು ಪೂರಾ ಪ್ರಯತ್ನ ಮಾಡದಿದ್ದರೆ ಅವನಿಗೆ ಸುಖಸಂತೋಷಗಳು ದೊರಕಲಾರವು ಅಂತೆಯೇ ಸೋಮಾರಿತನವನ್ನೂ ದುರ್ಲಕ್ಷ್ಯವನ್ನೂ ಬಿಟ್ಟುಗೊಟ್ಟು ಪ್ರಯತ್ನ ಮಾಡತಕ್ಕದ್ದು ಇನ್ನು ಅಂಥವನು ಏನು ಮಾಡತಕ್ಕದ್ದೆಂಬುದನ್ನು ಹೇಳುವೆವು ಏನಂದರೆ—

"ಪ್ರಾತಃಕಾಲದಲ್ಲಿ ಬೇಗನೆ ಏಳತಕ್ಕದ್ದು, ಪ್ರಾತಃಸ್ಮರಣೆಯನ್ನು ಮುಗಿಸಿ ನಿತ್ಯ ನಿಯಮದಂತೆ ಪಾಠಾಂತರ ಮಾಡತಕ್ಕದ್ದು. ಹಿಂದೆ ಕಲಿತದ್ದನ್ನು ಸ್ಮರಣೆಯಿಂದ ಉಚ್ಚರಿಸಬೇಕು. ಮುಂದೆ ಹೊಸಪಾಠಗಳನ್ನು ಓದಿ ಕಲಿಯಬೇಕು ವ್ಯರ್ಥವಾದ ಮಾತುಗಳಿಂದ ಕಾಲ ಕಳೆಯಕೂಡದು ಶೌಚ ಮೊದಲಾದ ಶರೀರಶುದ್ಧಿಗಾಗಿ ಊರ ಹೊರಗೆ ಹೋಗಬೇಕು ಅಲ್ಲಿಂದ ಬಂದು ಸ್ನಾನ–ಸಂಧ್ಯಾದಿ ನಿತ್ಯ ಧಾರ್ಮಿಕ ಕ್ರಿಯೆ ಮುಗಿಸಿ ಶುದ್ಧನಾಗಬೇಕು ಹೊರಗಿನಿಂದ ಮನೆಗೆ ಬರುವಾಗ ಆವಶ್ಯಕವಾದವುಗಳನ್ನು ತಕ್ಕೊಂಡು ಬರಬೇಕು, ಬರಿಗೈಯಿಂದ ಬರಬಾರದು. ಅರಿವೆ–ಅಂಚಡಿಗಳನ್ನು ಒಗೆದು ನುರಿಯಾಗಿ ಹಿಂಡಿ ಒಣಗಹಾಕಬೇಕು ಕೈಕಾಲು-ಮುಖಮಾರ್ಜನನಂತರ ದೇವದರ್ಶನ–ದೇವಪೂಜನಗಳನ್ನು ಶಾಸ್ತ್ರೋಕ್ತವಾಗಿ ತೀರಿಸಬೇಕು ಪರಕೀಯರನ್ನು ತನ್ನವರಂತೆ ಭಾವಿಸಬೇಕು ಇದೊಂದು

ಮುಖ್ಯ ಸೂತ್ರವೆಂದೆಣಿಸಿ ವ್ಯವಹಾರಸಾಗಿಸಬೇಕು ಬರೆಯುವಾಗ ಸುಂದರ ಅಕ್ಷರಗಳನ್ನು ಬರೆಯಬೇಕು ಬರೆದದ್ದನ್ನು ಸ್ಪಷ್ಟವಾಗಿಯೂ ಸಾವಕಾಶ ವಾಗಿಯೂ ಓದಬೇಕು. ಓದಿದ್ದನ್ನು ಮನನಮಾಡಿಕೊಳ್ಳುತ್ತಲೇ ಎಲ್ಲ ಅರ್ಥ ತಿಳಿದುಕೊಳ್ಳಬೇಕು ಅನ್ಯರಿಂದ ತಿಳಿದುಕೊಳ್ಳತಕ್ಕದ್ದನ್ನು ಯೋಗ್ಯ ರೀತಿ ಯಿಂದ ಕೇಳಿ ಅರಿತುಕೊಳ್ಳಬೇಕು ತಾನು ಇನ್ನೊಬ್ಬರಿಗೆ ತಿಳಿಸುವದಿದ್ದಲ್ಲಿ ಸ್ಪಷ್ಟ ಹಾಗು ನಮ್ರತೆಯಿಂದ ಹೇಳಬೇಕು ಅನುಭವವಿಲ್ಲದೆ ಮಾತುಗಳ ನ್ನಾಡುವದು ದೋಷವು ಮಾತು ಮೊದಲಾದವುಗಳಲ್ಲಿ ಎಚ್ಚರಿಕೆಯಿರ ಬೇಕು ನ್ಯಾಯ-ನೀತಿಗಳನ್ನನುಸರಿಸಿ ವರ್ತಿಸಬೇಕು. ಜನಮೆಚ್ಚುಗೆಯಾ ಗುವಂತೆ ಹಾಗು ತನ್ನ ಮನಸ್ಸೂ ಒಪ್ಪುವಂತೆ ವರ್ತನವಿರಬೇಕು ತಾನು ಕೈಕೊಂಡ ಕ್ರಿಯೆಗಳನ್ನು ಮುಗಿಸಿ ತೋರಿಸಬೇಕು. ಯಾವದರಲ್ಲಿಯೂ ತನ್ನ ಹೇಡಿತನವನ್ನು ತೋರಿಸಬಾರದು ತನ್ನನ್ನು ಕೇಳ ಬಂದವರನ್ನು ಸಮಾಧಾನಗೊಳಿಸಬೇಕು ಹರಿಕಥೆಯನ್ನು ಹುರುಪಿನಿಂದ ನಿರೂಪಿಸ ಬೇಕು ಪ್ರತಿಯೊಂದು ಸಮಯದಲ್ಲಿ ಅವಧಾನದಿಂದ ನಡೆಯಬೇಕು ತಾಲ, ಛಂದ, ಹಾವ-ಭಾವ ಮುಂತಾದವೆಲ್ಲ ನಿರ್ದೋಷವಿರಬೇಕು ಶ್ಲೋಕ ಪದ್ಯಗಳ ಅರ್ಥವನ್ನೂ ಸಿದ್ಧಾಂತ-ಪ್ರಮೇಯಗಳನ್ನೂ, ಪದಚ್ಛೇದಾನ್ವ ಯಗಳನ್ನೂ ತಪ್ಪದೆ ಹೇಳಬೇಕು ಗದ್ಯ-ಪದ್ಯಗಳಲ್ಲಿಯು ಮನಹರವಾದ ಅನುಭವಿಕ ದೃಷ್ಟಾಂತಗಳನ್ನು ಆರಿಸಿ ಉಪಯೋಗಿಸಬೇಕು. ಹಾಡು-ಬಾರಿಸುವ ಕಲೆಗಳು, ಸಾಭಿನಯ-ಗೀತೆ-ಭಾಷಣಗಳು, ಮನರಂಜಕ ವೆನ್ನಿಸುವ ವಚನ-ಕಾವ್ಯಗಳು, ಕಥೋಪಕಥೆಗಳು, ಬೇರೆ ಬೇರೆ ಛಂದ ಸ್ಸಿನ ವೃತ್ತಗಳು, ಇವಲ್ಲವನ್ನು ಪ್ರಸಂಗೋಚಿತವಾಗಿ ಚತುರತೆಯಿಂದ ಬಳಸಿಕೊಳ್ಳಬೇಕು ಬಹು ಜನರಿಗೆ ಸಂತೋಷ ಹಾಗು ಒಪ್ಪಿಗೆಯಾಗು ವಂತಹ ಮಾತುಗಳನ್ನಾಡಬೇಕು ತಾನು ಹೇಳುವ ಕಥೆಯಲ್ಲಿ ಯಾವ ಬಗೆಯಿಂದಲೂ ವ್ಯತ್ಯಸ್ತ ಉಂಟಾಗದಂತೆ ನೋಡಿಕೊಳ್ಳುತ್ತಿರಬೇಕು ತನ್ನ ಮಾತು-ಕಥೆಗಳಿಂದ ಜನರಲ್ಲಿ ಬೇಸರು-ಬೇಜಾರು ಹುಟ್ಟಕೊಡದಂತೆ ಎಚ್ಚರದಿಂದ ಮಾತು-ಕಥೆ ಸಾಗಿಸತಕ್ಕದ್ದು ಜನರ ಹೃದಯವುಕ್ಕೇರಿ ಅವರೇ ಸ್ವಯಂಸ್ಫೂರ್ತಿಯಿಂದ ನಾಮ-ಘೋಷ-ಜಯಜಯಕಾರಗಳನ್ನು ಮಾಡುವಂತೆ ಯತ್ನಿಸಬೇಕು ತನ್ನ ಮಾತುಗಳಲ್ಲಿ ಭಕ್ತಿ-ಜ್ಞಾನ-ವೈರಾಗ್ಯ

ವಿಷಯಗಳೂ ಯೋಗ ಮುಂತಾದ ಹಲವು ಸಾಧನ ಮಾರ್ಗಗಳೂ ಒಡಮೂಡಿ ಅವುಗಳ ಶ್ರವಣ-ಮನನಗಳಿಂದ ಶ್ರೋತೃಗಳ ಭವರೋಗ ನಿವಾರಿಸುವ ಸಾಮರ್ಥ್ಯವಿರಬೇಕು ತಾನು ನುಡಿದಂತೆ ನಡೆದರೆ ತನ್ನಲ್ಲಿ ಸಹಜವಾಗಿ ಸುಹಂತ ಲೀಲೆ ತೋರುವದು ಯುಕ್ತಿರಹಿತವಾದ ಯೋಗವು ದುರಾಶೆಯ ರೋಗವು ಇಂಥ ಯೋಗಿಯು ಜೊತೆಯು ಭೋಗಕ್ಕೆಳೆಸುವದು ಹಾಗೆ ಮಾಡಬಾರದು ತಾನು ಜನರ ಮೇಲೆ ಭಾರ ಹಾಕಿ ಅವರಿಗೆ ತೊಂದರೆ ಕೊಡಕೂಡದು ಹೃದಯದಲ್ಲಿ ಶ್ರೀ ರಾಮಸ್ಮರಣೆಯಿರಬೇಕು, ನಿರಪೇಕ್ಷನನ್ನು ಜನರು ಮೆಚ್ಚುವರು. ಹೆಚ್ಚಾಗಿ ಅಧ್ಯಾತ್ಮ ನಿರೂಪಣೆ ಮಾಡಿ ಹರಿಕಥೆಯಿಂದ ಬ್ರಹ್ಮಾಂಡ ಭೇದಿಸಬೇಕು. ಮಹಂತ ಲಕ್ಷಣಗಳೆಲ್ಲ ಇದ್ದು ಅದಕ್ಕೆ ಗಾಯನದ ಜೊತೆ ಸೇರಿದರೆ ಯಾವ ವೈಭವಕ್ಕೂ ಕೊರತೆಯಾಗದು ಇಂಥ ಮಹಂತನನ್ನು ಹಲವು ಜನರು ಗಗನದ ತಾರೆಗಳು ಚಂದ್ರನನ್ನು ಬಳಿಸುವಂತೆ ಸುತ್ತುಗಟ್ಟುವರು ಆದರೆ ಇವನಲ್ಲಿ ಮೇಲ್ತರದ ಬುದ್ಧಿಯಿರಬೇಕಾಗುವದು ಬುದ್ಧಿಯಿಲ್ಲದೆ ಏನೂ ಸಾಧಿಸದು ಬುದ್ಧಿಯಿಲ್ಲದಲ್ಲಿ ಗೊಂದಲವು ತಲೆದೋರುವದು ಬುದ್ಧಿಯಿಲ್ಲದ ಎಂಥ ಸದ್ಗುಣ ಮಾನವನಿದ್ದರೂ ಅವನ ಜೀವಿತವು ವ್ಯರ್ಥವು ಆದ್ದರಿಂದ ಬುದ್ಧಿಬಲವು ದೊಡ್ಡದಾಗಿರಬೇಕು ಮತ್ತು ಬ್ರಹ್ಮನನ್ನು ಹೊಟ್ಟೆಯಲ್ಲಿರಿಸಿಕೊಂಡು ಆ ಬ್ರಹ್ಮನಿಗಿಂತಲೂ ದೊಡ್ಡವನಾದರೆ ಕೀಳುತನವೆಲ್ಲಿ ಉಳಿಯುವದು?" ಎಂದು ಗುರುಗಳು ಹೇಳಲು ಶಿಷ್ಯನ ಸಂಶಯ ದೂರಾಗಿ ಅವನಲ್ಲಿ ಪ್ರಯತ್ನಶೀಲ ಬುದ್ಧಿಯುತ್ಪನ್ನವಾಯಿತು ಮತ್ತು ಆತನಲ್ಲಿ ಕರ್ತೃತ್ವ ಶಕ್ತಿಯ ಉತ್ಸಾಹವು ತುಂಬಿತು

ಶ್ರೀ ರಾಮ ॥ ೧೦ ಉತ್ತಮ ಪುರುಷ ॥ ಗುರುಗಳು ಶಿಷ್ಯನಿಗೆ—

"ತಾನು ಹೊಟ್ಟೆ ತುಂಬಾ ಉಂಡು ಉಳಿದದ್ದನ್ನು ಜನರಿಗೆ ಹಂಚಿಕೊಡಬೇಕು ಆದರೆ ಅದನ್ನು ವ್ಯರ್ಥ ಹಾಳುಗೆಡಿಸಬಾರದು. ಇದರಂತೆ— ತಾನು ಜ್ಞಾನದಿಂದ ಸಮಾಧಾನ ಹೊಂದಬೇಕು ಹಾಗು ಅದೇ ಜ್ಞಾನವನ್ನು ಜನರಿಗೆ ಬೋಧಿಸಬೇಕು. ಈಜು ಬಲ್ಲವನು ಮಡುವಿನಲ್ಲಿ ಮುಳುಗುವವನನ್ನು ಮುಳುಗಗೊಡದೆ ಮೇಲಕ್ಕೆತ್ತಿ ತೆಗೆಯಬೇಕೇ ಹೊರತು ಅವನನ್ನು ಮತ್ತೆ ಮುಳುಗಿಸಿ ಸಾಯಗೊಡಬಾರದು ಕಂಡವರಲ್ಲಿಯ ಉತ್ತಮ

ಗುಣಗಳನ್ನು ತಾನು ಸ್ವೀಕರಿಸಬೇಕು. ಹಾಗು ಜನರಿಗೆ ಆದರಂತೆ ಹೇಳ ಬೇಕು. ನುಡಿದಂತೆ ತಾನೇ ನಡೆಯದಿದ್ದರೆ ಅವನ ಮಾತಿಗೆ ಬೆಲೆಯಿಲ್ಲ. ಸ್ನಾನ-ಸಂಧ್ಯೆ, ದೇವಪೂಜೆ, ಜಪ-ಧ್ಯಾನ, ಕೀರ್ತನ ನಿರೂಪಣೆ ಇವೆಲ್ಲವು ಗಳನ್ನು ಶ್ರದ್ಧೆಯಿಂದ ಆಚರಿಸಬೇಕು ಪರೋಪಕಾರದಲ್ಲಿ ದೇಹವನ್ನು ಸವೆಯಿಸಬೇಕು ತಾನು ಜನಕ್ಕೆ ಉಪಯೋಗ ಬೀಳುವಂತೆ ನಡೆಯಬೇಕು ಯಾವದರಿಂದಲೂ ಕೊರತೆಯನ್ನು ತಂದುಕೊಳ್ಳಬಾರದು ಇನ್ನೊಬ್ಬರ ಅನವು-ಆಪತ್ತುಗಳನ್ನು ಕಳೆಯಲು ಯತ್ನಿಸಬೇಕು, ಎಲ್ಲರೊಡನೆ ಸವಿಮಾತು ಗಳನ್ನಾಡಬೇಕು ಪರರಿಗಾಗುವ ಸುಖದು ಖಗಳು ತನಗೇ ಆಗುವವೆಂಬ ಭಾವ ನೆಯಿರಬೇಕು ಮೃದು-ಮಧುರ ನುಡಿಗಳಿಂದ ಪ್ರಾಣಿಗಳನ್ನು ವಶಮಾಡಿಕೊ ಳ್ಳಬೇಕು ಬೇರೆಯವರಿಂದಾದ ತಪ್ಪನ್ನು ಕ್ಷಮೆಮಾಡಬೇಕು ಹಲವರ ಕೆಲಸ ಗಳನ್ನು ಮಾಡಬೇಕು ಸ್ವಕೀಯರು ತನ್ನನ್ನು ಓಲೈಸುವಂತೆ ಪರರೂ ಕೂಡ ಓಲೈಸುವಂತೆ ವರ್ತಿಸಬೇಕು ಅನ್ಯರ ಮನಸೊಪ್ಪುವಂತೆ ನಡೆದು ಕೊಳ್ಳಬೇಕು ಹಲವು ಬಗೆಯಿಂದ ಜನರನ್ನು ಪರೀಕ್ಷಿಸಬೇಕು ಬಹಳ ಮಾತಾಡದೆ ಸ್ವಲ್ಪ ಹಾಗು ಮುಖ್ಯ ಮಹತ್ವದ ಮಾತುಗಳನ್ನಾಡಬೇಕು ಪರರು ಕೇಳಿದ್ದಕ್ಕೆ ಕೂಡಲೆ ಉತ್ತರ ಕೊಡಬೇಕು ಕ್ಷಮೆಯನ್ನನುಸರಿಸ ಬೇಕು, ಸಿಟ್ಟಿಗೇಳಕೂಡದು ಆಲಸ್ಯತನವನ್ನು ಬಿಟ್ಟು ಪ್ರಾಪಂಚಿಕ ಉದ್ಯೋಗಗಳನ್ನು ಮಾಡಬೇಕು ಮಾತಿನಿಂದಲೂ ಕೂಡ ಇನ್ನೊಬ್ಬರಲ್ಲಿ ಮತ್ಸರ ಭಾವವನ್ನು ತೋರಬಾರದು ಜನರಿಗೆ ಕೊಡುವ ಪದಾರ್ಥಗಳು ಉತ್ತಮವಿರಬೇಕು ವಿಚಾರದಿಂದಲೇ ಮಾತುಗಳನ್ನಾಡಬೇಕು ತನ್ನ ಸಂಸಾರವನ್ನು ದಕ್ಷತೆಯಿಂದ ಸಾಗಿಸಬೇಕು ತನಗೆ ಮರಣವು ತಪ್ಪಿದ್ದಲ್ಲ ವೆಂಬುದನ್ನು ನೆನಪಿಗೆ ತಂದುಕೊಂಡು ಹರಿ-ಭಜನೆಯಲ್ಲಿ ತತ್ಪರನಾಗ ಬೇಕು ಇಂತು ನಡೆದುಕೊಂಡದ್ದಾದರೆ ಮರಣಾನಂತರದಲ್ಲಿಯೂ ಕೂಡ ಹೆಸರು ಉಳಿಯುವದು. ನಿಯಮಿತತನ ಹಾಗು ವ್ಯವಸ್ಥಿತ ವರ್ತನೆಗಳನ್ನು ಕಂಡು ಜನರು ಆರ್ಜವ ವೃತ್ತಿಯನ್ನು ತೋರಿಸುವರು ಅಂದ ಮೇಲೆ ಅವ ನಿಗೇತರಿಂದಲೂ ಕೊರತೆಯಾಗದು ಈ ಪ್ರಕಾರದ ಉತ್ತಮ ಗುಣಗಳಿಂದ ಯುಕ್ತನಾದವನೇ ಉತ್ತಮ ಪುರುಷನು ಇಂಥವನು ಮಾಡುವ ಭಕ್ತಿ ಯಿಂದಲೇ ಪರಮಾತ್ಮನು ಸಂತುಷ್ಟನಾಗುವನು

ಜನರು ತನ್ನನ್ನು ಆಡಿಷ್ಟು ಧಿಕ್ಕರಿಸಿದರೂ ಹೀಯಾಳಿಸಿ ನುಡಿದರೂ ಶಾಂತಿಯನ್ನು ಬಿಡತಕ್ಕದ್ದಲ್ಲ. ದುರ್ಜನರಲ್ಲಿ ಸಹ ಕೂಡಿ ನಡೆದು ತನ್ನ ಸದ್ಗುಣಗಳನ್ನು ಕಾಯ್ದುಕೊಳ್ಳುವ ಸಾಧುವು ಧನ್ಯನೆಂದು ಹೇಳಬಹುದು ಉತ್ತಮ ಗುಣಗಳಿಂದ ಅಲಂಕೃತನೂ ಜ್ಞಾನ ವೈರಾಗ್ಯ ಸಂಪನ್ನನೂ ಆಗಿರುವ ಪುರುಷನು ಮೂರೂ ಲೋಕಗಳಲ್ಲಿ ಧನ್ಯನೆನ್ನಿಸುವನು ಸ್ವತಃ ಶ್ರಮ ಮಾಡಬೇಕು ಬಹು ಜನರ ಕಷ್ಟವನ್ನು ಸೋಸಬೇಕು ಹಲವು ಬಗೆಯಿಂದ ದೇಹ ಸವೆಯಿಸಿ ಕೀರ್ತಿಯನ್ನು ಉಳಿಸಿಕೊಳ್ಳಬೇಕು, ಕೇವಲ ಕೀರ್ತಿಗಾಗಿ, ಸುಖವಿಲ್ಲ ಸುಖಕ್ಕಾಗಿ ಕೀರ್ತಿಯಿಲ್ಲ ವಿವೇಕವಿಲ್ಲದೆ ಸಮಾಧಾನವಿಲ್ಲ ಅನ್ಯರ ಮನಸ್ಸನ್ನು ನೋಯಿಸಬಾರದು ಕ್ಷಮಾಶೀಲನ ಮಹತ್ವವು ಎಂದೂ ಕುಂದಲಾರದು ಕಾರ್ಯವು ತನ್ನದೇ ಇರಲಿ, ಅನ್ಯರವೇ ಇರಲಿ ಅದನ್ನು ಮಾಡಿಯೇ ತೀರಬೇಕು ಪ್ರಸಂಗವೊದಗಿದಾಗ ಮೈಗಳ್ಳತನವನ್ನು ಮಾಡುವದು ಯುಕ್ತವಲ್ಲ ಸವಿಮಾತಿನಿಂದ ಸುಖ ದೊರೆಯುವದೆಂಬುದು ಅನುಭವಸಿದ್ಧವು ತನ್ನಂತೆ ಅನ್ಯರನ್ನು ಭಾವಿಸಬೇಕು. ಬಿರು ನುಡಿಗಳಿಂದ ಪರರಿಗೆ ತಾಪಕೊಡಬಾರದು ತನ್ನ ಕಷ್ಟದಂತೆ ಪರರ ಕಷ್ಟವನ್ನು ತಿಳಿಯಬೇಕು, ಅನ್ಯರ ಅಂತಃಕರಣವನ್ನು ಭೇದಿಸುವ ಮಾತುಗಳು ಅಪವಿತ್ರ ವಾಣಿಗಳು ಅವುಗಳಿಂದ ಒಮ್ಮೊಮ್ಮೆ ತನಗೂ ಘಾತವಾಗುವದುಂಟು ಬಿತ್ತಿದ್ದೇ ಬೆಳೆಯುವದು. ಮಾತಿಗೆ ಸರಿಯಾಗಿ ಉತ್ತರವು ಅಂದ ಮೇಲೆ ಪರರಿಗೆ ಕೆಟ್ಟ ಮಾತುಗಳನ್ನೇಕೆ ಆಡಬೇಕು? ತನ್ನ ಕರ್ತೃತ್ವ ಹಾಗು ವೈಭವದಿಂದ ಬಹು ಜನರ ಹಿತವನ್ನು ಸಾಧಿಸಬೇಕು ಆದರೆ ಜನರನ್ನು ಕಷ್ಟಕ್ಕೆ ಗುರಿ ಮಾಡುವದು ರಾಕ್ಷಸೀ ವೃತ್ತಿಯಾಗುವದು ದಂಭ, ದರ್ಪ, ಅಭಿಮಾನ, ಕ್ರೋಧ, ಬಿರುನುಡಿ, ಇವೆಲ್ಲವು ಅಜ್ಞಾನದ ಲಕ್ಷಣಗಳು ಇದನ್ನೇ ದೇವನು ಗೀತೆಯಲ್ಲಿ ಹೇಳಿರುವನು ಉತ್ತಮ ಪುರುಷನು ಯಾವಾಗಲೂ ಒಳ್ಳೆಯ ಗುಣಗಳನ್ನೇ ಹುಡುಕುವರು. ಆ ಉತ್ತಮ ಪುರುಷನನ್ನು ಜನರು ಹುಡುಕುವರು. ಕೃತಿಯಿಲ್ಲದ ಬರಿಯ ಬಾಯ್ಮಾತುಗಳು ನಾಯಿಯ ಶಾರಿಕೆಯಂತೆ ತುಚ್ಛವಾದವೆಂದು ಹೇಳಬಹುದು. ಉತ್ತಮರು ಅಂಥವನನ್ನು ಇಣಿಕಿಕ್ಕಿ ಸಹ ನೋಡುವದಿಲ್ಲ. ಮನಸ್ಸಿನಿಂದ ದೇವಭಕ್ತಿಯಲ್ಲಿ ನಿರತನಾದವನೊ

-ಉತ್ತಮ ಗುಣಗಳನ್ನು ಸ್ವೀಕರಿಸಲು ಆತುರನಾದವನೂ ಇವರು-ಶ್ರೇಷ್ಠರು ಇಂಥವರನ್ನು ಜನರು ಹುಡುಕುತ್ತ ಸಂಚರಿಸುವರು ಇಂಥ ಮಹಾ ಪುರುಷರು ಭಕ್ತಿಯೋಗದಿಂದ ದೇವಾಧಿದೇವನನ್ನು ತಮ್ಮವನನ್ನಾಗಿ ಮಾಡಿಕೊಳ್ಳುವರು ಅವರು ತಮ್ಮಂಥ ಸಮುದಾಯವನ್ನು ಮಾಡಿಕೊಂಡು ತಮ್ಮ ನಂತರವಲ್ಲಿಯೂ ತಾವಾಚರಿಸುವ ಭಜನ-ಭಕ್ತಿ ಮಾರ್ಗಗಳುಳಿಯುವಂತೆ ಮಾಡುವರು ಇವರು ಶಿಷ್ಯರಿಂದ ಏನನ್ನೂ ಬೇಡುವದಿಲ್ಲ ಆ ಶಿಷ್ಯರು ತಮ್ಮ ತರುವಾಯ ಭಕ್ತಿ ಮಾರ್ಗವನ್ನು ಅನುಸರಿಸಬೇಕೆಂಬುದೇ ಇವರ ಇಚ್ಛೆಯಿರುವದು ಮತ್ತು ಭಕ್ತ ಸಮುದಾಯ ಮಹೋತ್ಸವ ಮುಂತಾದವುಗಳಿಂದ ದೇವ ಪ್ರಸನ್ನತೆಗಾಗಿ ಉಪಾಸನೆಗಳನ್ನು ಹೆಚ್ಚಿಸುವ ಹಂಬಲವು ಇವರಿಗಿರುವದು

ಇನ್ನು ಭಕ್ತ ಸಮುದಾಯದ ಲಕ್ಷಣಗಳನ್ನು ಹೇಳುವೆವು ಅವನ್ನು ಧ್ಯಾನದಲ್ಲಿರಿಸಿಕೊಳ್ಳತಕ್ಕದ್ದು ಪ್ರಬೋಧ ಶಕ್ತಿ ಎಂದರೆ ಉಪದೇಶ ಸಾಮರ್ಥ್ಯದ ಯೋಗದಿಂದ ಬಹು ಜನರು ಭಕ್ತಿಮಾರ್ಗಾವಲಂಬಿಗಳಾಗುವರು ಆ ಶಕ್ತಿಯ ಸಹಾಯದಿಂದಲೇ ಜನರು ಮುಗ್ಧರಾಗುವರು ಹಿಂದೆ ಹೇಳಿದ ಉತ್ತಮ ಗುಣಗಳಿಗೆ ಅರ್ಥಾತ್ ಉತ್ತಮ ಪುರುಷರಿಗೆ ಜನರಿಂದ ಮರ್ಯಾದೆಯುಂಟಾಗುವದು ಯಾಕಂದರೆ ಆ ಉತ್ತಮ ಪುರುಷರು ನುಡಿಯಂತೆ ನಡೆಯುವರು, ಹಾಗು ಕೃತಿ ಮಾಡಿ ತೋರಿಸಿ ಬಳಿಕ ಮಾತಾಡುವರು ಇದರಿಂದಲೇ ಅವರ ಉಪದೇಶ ವಚನಗಳ ಮೇಲೆ ಜನತೆಯ ವಿಶ್ವಾಸವು. ದೃಢವಾಗಿ ಕೂಡ್ರುವದು' ಜನರು ತಮಗೆ ಸರಿಬಾರದ್ದನ್ನು ಎಂದೂ ಒಪ್ಪುವದಿಲ್ಲ ಉಪದೇಶವಚನಗಳನ್ನು ಜನರು ಒಪ್ಪದಿದ್ದರೆ ಉಪದೇಶಕನೊಂದು ಕಡೆ, ಜನತೆಯೊಂದು ಕಡೆ ಹೀಗಾಗುವದು ಆದರೆ ಉತ್ತಮ ಪುರುಷನ ಉಪದೇಶ ವಚನಗಳಿಂದ ಹೀಗಾಗಲಾರದು ಆತನು ತನ್ನ ಜೊತೆಯವರನ್ನು ತನ್ನ ವಿವೇಕದಿಂದ ಅವರಿಗೆ ಒಪ್ಪಿಗೆಯಾಗುವ ಹಾಗೆ ಬೋಧಿಸಿ ಸನ್ಮಾರ್ಗಕ್ಕೆ ತಂದಿಳಿಸುವನು ಇಂಥವರಿಂದಲೇ ಭಕ್ತ ಸಮುದಾಯಗಳು ಬೆಳೆಯುವವು ಉತ್ತಮ ಪುರುಷರನ್ನುಳಿದ ಇನ್ನಿತರರು ಇಂಥ ಭಕ್ತಸಮುದಾಯಗಳನ್ನು ನಿರ್ಮಿಸಲು ಯತ್ನಿಸುವರು ಆದರೆ ತಮ್ಮಲ್ಲಿಯೇ ಆ ಉತ್ತಮ ಪುರುಷ ಲಕ್ಷಣಗಳಿಲ್ಲದ್ದರಿಂದ ಅವರ ಪ್ರಯ

ತ್ನವೂ ಎಂದೂ ಸಫಲವಾಗುವದಿಲ್ಲ ಇಷ್ಟೇ ಅಲ್ಲ- ಇಂಥ ಸಮುದಾಯ ರಚಿತವಾಗುವದೊತ್ತಟ್ಟಿಗುಳಿದು ಸಮುದಾಯದಲ್ಲಿ ಕಲಹ-ಕಾಳಗಗಳು ಮಾತ್ರ ತಲೆದೋರುವವು ಸೈನ್ಯವು ಸಜ್ಜಾಗಿದ್ದರೆ ಸೇನಾಪತಿಗೆ ಮಹತ್ವವು ಸೈನ್ಯವನ್ನು ಹೊರತುಪಡಿಸಿ ಆ ಸೇನಾನಿಯೊಬ್ಬನೇ ಕಾಳಗ ಗೆಲ್ಲುವದು ಸಾಧ್ಯವಿಲ್ಲ ಈ ಕಾರಣದಿಂದ ಎಲ್ಲರೂ ಉತ್ತಮ ಪುರುಷನ ಆಧೀನತೆ ಯಲ್ಲಿ ಒಂದಾಗಿ ಸೇರಿ ಭಕ್ತ ಸಮುದಾಯವನ್ನು ಬಲಪಡಿಸತಕ್ಕದ್ದು"

ಇತಿ ದಾಸಬೋಧೆಯ ೧೨ನೆಯ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೧೩ನೆಯ ದಶಕ (ನಾಮರೂಪ)

ಶ್ರೀರಾಮ ಸಮರ್ಥ ।। ೧ ಆತ್ಮಾನಾತ್ಮ ವಿವೇಕ ।। ಶ್ರೀ ಗುರುಗಳು ಶಿಷ್ಯನಿಗೆ ಬೋಧಿಸಿದ್ದೇನೆಂದರೆ''ಆತ್ಮನೆಂದರೆಯಾರು? ಅನಾತ್ಮವೆಂದರೇನು? ಇದರ ವಿಚಾರ ಮಾಡಿ ಚೆನ್ನಾಗಿ ಮನನ ಮಾಡಿಕೊಂಡು ಚಿತ್ತದಲ್ಲಿ ದೃಢ ವಾಗಿರಿಸಿಕೊಳ್ಳಬೇಕು, ಮನನ ಅಥವಾ ವಿವರವನ್ನೆಂತು ಮಾಡಬೇಕೆಂಬು ದನ್ನು ಲಕ್ಷ್ಯಕೊಟ್ಟು ಕೇಳಬೇಕು

ನಾಲ್ಕು ಪ್ರಾಣಿಕೋಟಿ ಹಾಗು ನಾಲ್ಕು ಉದ್ಭಿಜ್ಜ ಕೋಟಿಗಳಲ್ಲಿ ಕೂಡಿ ೮೪ ಲಕ್ಷ ಬಗೆಯ ಜೀವಯೋನಿಗಳಿರುವವೆಂದು ಪುರಾಣಗಳಲ್ಲಿ ಉಲ್ಲೇಖವಿದೆ ಸೃಷ್ಟಿಯಲ್ಲಿ ಹಲವು ಬಗೆಯ ಅನಂತ ಶರೀರಗಳು ಕಂಡು ಬರುವವು ಅವುಗಳಲ್ಲಿ ಆತ್ಮನ ನಿಶ್ಚಯವನ್ನು ಅದಾವ ರೀತಿಯಿಂದ ಮಾಡ ಬೇಕು ? ಕಣ್ಣಿನಿಂದ ನೋಡುವದು, ಕಿವಿಯಿಂದ ಕೇಳುವದು, ನಾಲಿಗೆ ಯಿಂದ ರುಚಿ ನೋಡುವದು, ಮೂಗಿನಿಂದ ಮೂಸುವದು, ತ್ವಚೆಯಿಂದ ಸ್ಪರ್ಶಿಸುವದು, ಬಾಯಿಯಿಂದ ಶಬ್ದವನ್ನುಚ್ಚರಿಸುವದು, ಇವೆಲ್ಲ ಕ್ರಿಯೆಗ ಳನ್ನು ಇಂದ್ರಿಯಗಳ ದ್ವಾರದಿಂದ ಒಬ್ಬನೇ ಆತ್ಮನು ಚಲನವಲನ ನಾಗಿ ಸುವನು. ಇವಲ್ಲದೆ ಕಾಲಿನಿಂದ ನಡೆಯುವದು, ಕೈಯನ್ನು ಅಲ್ಲಾಡಿಸು ವದು, ಹುಬ್ಬನ್ನು ಏರಿಸುವದು, ಕಣ್ಣು ತಿರುವುವದು, ಈ ಎಲ್ಲ ಸಂಕೇತ ಚಿಹ್ನಗಳಿಂದ ಗೋಚರವಾಗುವನು ಒಬ್ಬನೇ ಆತ್ಮನು ಇವೂಅಲ್ಲದೆ ದಿಟ್ಟ ತನದಿಂದ ನಡೆಯುವದು, ನಾಚಿಕೆಪಡುವದು ತುರಿಸಿಕೊಳ್ಳುವದು, ಕೆಮ್ಮು ವದು, ಕೇಕರಿಸುವದು, ಉಗುಳುವದು, ಅನ್ನೋದಕ ಸೇವನೆ ಮಾಡುವದು ಮಲಮೂತ್ರ ವಿಸರ್ಜಿಸುವದು, ಎಲ್ಲ ಶರೀರಾವಯವಗಳನ್ನು ಸಾವರಿಸಿ ಹಿಡಿಯುವದು, ಪ್ರಪಂಚ ಪರಮಾರ್ಥಗಳ ವಿವೇಕ ವಿಚಾರಿಸುವದು, ಕೇಳುವದು, ನೋಡುವದು, ಮೂಸುವದು, ನೆಕ್ಕುವದು ಹೀಗೆ ನಾನಾ ಬಗೆಯಿಂದ ಗುರುತಿಸುವ ಕ್ರಿಯೆಯು ಒಬ್ಬನೇ ಆತ್ಮನದಾಗಿರುವದು ಇದಲ್ಲದೆ ಅಂಜಿಕೆ, ಹರ್ಷ, ಶೋಕ, ವಿನೋದ, ಚಿಂತೆ, ಕಷ್ಟ, ಮೋಹ, ಮಾಯೆ, ಮಮತೆ, ಈ ಎಲ್ಲ ವಿಕಾರಗಳನ್ನು ತನ್ನವೆಂದೇ ಭಾವಿಸಿ ಐಕ್ಯತೆ

ಹೊಂದಿ ನೊಂದುಕೊಳ್ಳುವವನು ಆ ಒಬ್ಬನೇ ಆತ್ಮನು ಆ ಆತ್ಮನು ನಾನಾಬಗೆಯ ಪದಾರ್ಥಗಳನ್ನು ಪ್ರೀತಿಸುವನು, ಜನರಲ್ಲಿ ಒಳಿತು ಹೀನಗಳನ್ನುಂಟು ಮಾಡುವನು, ತನ್ನವರನ್ನು ರಕ್ಷಿಸಿ ಪರಕೀಯರನ್ನು ಕೊಲ್ಲುವನು ಯುದ್ಧ ಪ್ರಸಂಗದಲ್ಲಿ ಎರಡೂ ಪಕ್ಷದವರ ಶರೀರಗಳಲ್ಲಿ ಸೇರಿ ಜಯಿಸುವನು ಹಾಗು ಸೋಲುವನು, ಬರುವನು, ಹೋಗುವನು, ದೇಹದಲ್ಲಿ ವರ್ತಿಸುವನು, ನಗುವನು, ಅಳುವನು, ಬಿಕ್ಕುವನು, ಉದ್ಯೋಗದ ಮಾನದಿಂದ ಸಿರಿವಂತನಾಗುವನು ಬಡವನಾಗುವನು, ಇದರಂತೆ ಆ ಆತ್ಮನು ದುರ್ಬಲನು, ಸಬಲನು, ವಿದ್ವಾಂಸನು, ದೇಹಪುಷ್ಟನು, ನ್ಯಾಯವಂತನು, ಅನ್ಯಾಯಿಯು, ಧೀರೋದಾರನು, ಜೀನನು, ಹುಚ್ಚನು, ಜಾಣನು, ಚಿಕಿತ್ಸಕನು ಉಚ್ಛೃಂಖಲ ವೃತ್ತಿಯವನು ಸಹಿಷ್ಣುವು ಈಎಲ್ಲ ವೃತ್ತಿಯವನೂ ತಾನೇ ಆಗಿರುವನು ಈ ಆತ್ಮನು ಜ್ಞಾನದಲ್ಲಿಯೂ ಅಜ್ಞಾನದಲ್ಲಿಯೂ ಎಲ್ಲದರಲ್ಲಿಯೂ ಸುಖವಾಗಿ ಚರಿಸುವನು. ಮಲಗುವನು, ಏಳುವನು, ಕೂಡ್ರುವನು, ನಡೆಯುವನು ಓಡುವನು, ಹೊಯ್ದಾಡುವನು, ತೂಗಾಡುವನು, ಪುಸ್ತಕವನ್ನೋದುವನು, ಓದಿ ಅರ್ಥ ಹೇಳುವನು, ತಾಳ ಹಿಡಿದು ಹಾಡುವನು, ವಾದ ವಿವಾದ ಮಾಡುವನು, ಸ್ವಸ್ಥವಾಗಿ ಕುಳಿತುಕೊಳ್ಳುವನು, ಏಕಾಕಿಯಾಗುವನು, ಇವೆಲ್ಲ ಕ್ರಿಯೆಗಳು ಆ ಆತ್ಮನಿಂದಲೇ ಒದಗುವವು ಆತ್ಮನಿಲ್ಲದ ದೇಹವು ಪ್ರೇತವೆನ್ನಿಸುವದು ದೇಹದಲ್ಲಿ ಕೂಡಿಕೊಂಡು ಆತ್ಮನು ಎಲ್ಲವನ್ನೂ ಮಾಡುವನು ಒಬ್ಬನಿಂದಲೇ ಏನೊಂದು ಕ್ರಿಯೆ ಒದಗಲಾರದು ಆದಕ್ಕಾಗಿಯೇ ಆತ್ಮನು ದೇಹದೊಡಗೂಡಿ ಎಲ್ಲವನ್ನು ಮಾಡುವನು. ದೇಹವು ಅನಿತ್ಯವೆಂದರೆ ನಾಶವಾಗುವಂತಹದು ಆತ್ಮನು ನಿತ್ಯ ಅಂದರೆ ಶಾಶ್ವತನು ಈ ಪ್ರಕಾರದ ವಿವೇಕ ವಿಚಾರವೇ ಆತ್ಮಾನಾತ್ಮವಿವೇಕವೆಂದೆನ್ನಿಸುವದು ಇಲ್ಲವೆ ನಿತ್ಯಾನಿತ್ಯ ವಿವೇಕವೆಂದೂ ಹೇಳಿಸಿಕೊಳ್ಳುವದು. ಈ ಸೂಕ್ಷ್ಮವಿಚಾರವು ಜ್ಞಾನಿಗಳಲ್ಲಿ ಇರುವದು. ಪಿಂಡದಲ್ಲಿ ನಾಲ್ಕು ಶರೀರಗಳು ಇವುಗಳನ್ನು ಧಾರಣ ಮಾಡುವವನಿಗೆ ಜೀವನೆಂದು ಹೆಸರು. ಬ್ರಹ್ಮಾಂಡದಲ್ಲಿಯು ನಾಲ್ಕು ಶರೀರಗಳನ್ನು ಧಾರಣ ಮಾಡುವವನಿಗೆ ಶಿವ ಅಥವಾ ಈಶ್ವರನೆಂದು ಹೆಸರು. ಈ ಎಂಟೂ ಶರೀರಗಳಲ್ಲಿ ಎಂಟನೆಯ ದೇಹವಾದ ಮೂಲಮಾಯೆಯು ಮೂಲ ಪುರುಷನೆನ್ನಿಸಿ ತ್ರಿಗುಣಾತೀತವಾಗಿರುವದು ಅದಕ್ಕೆ

ಅರ್ಧನಾರೀ ನಟೇಶ್ವರ ಎಂದೆನ್ನುವರು ಸಕಲ ಸೃಷ್ಟಿಯ ವಿಸ್ತಾರವು ಇದರಿಂದಲೇ ಉಗಮವಾಗುವದು ಸೂಕ್ಷ್ಮವಿಚಾರದಿಂದ ನಿರೀಕ್ಷಿಸಲು ಆ ಅರ್ಧನಾರೀನಟೇಶ್ವರವು ಗಂಡೂ ಅಲ್ಲ, ಹೆಣ್ಣೂ ಅಲ್ಲವೆಂದು ವಿದಿತವಾಗುವದು. ಆದರೆ ಅದು ಚಂಚಲವಾಗಿರುವದು ಅದರ ಚಂಚಲ ರೂಪವು ಅನುಭವಕ್ಕೆ ಬರುವದು ಮೂಲ ಮಾಯೆಯಿಂದ ಸ್ಥೂಲ ಪಿಂಡದವರಿಗೆ ಇಲ್ಲವೆ ಬ್ರಹ್ಮನಿಂದ ಇರುವೆಯ ವರೆಗೆ ಇರುವ ದೇಹಗಳೆಲ್ಲವೂ ಅನಿತ್ಯವಾಗಿರುವವು ಇವೆಲ್ಲ ದೇಹಗಳ ಸೂತ್ರ ಚಾಲಕನು ಆತ್ಮನು. ಈ ಆತ್ಮನು ನಿತ್ಯನು ಜಡವೆಲ್ಲವೂ ಅನಿತ್ಯವು ಸೂಕ್ಷ್ಮವಾದದ್ದೇ ನಿತ್ಯವು ಈ ವಿಚಾರವೇ ನಿತ್ಯಾನಿತ್ಯ ವಿವೇಕವು

ಪಿಂಡದ ನಾಲ್ಕು ದೇಹಗಳು ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಮಹಾಕಾರಣ ಇವುಗಳನ್ನೆಲ್ಲ ವೃತ್ತಿಯು ದಾಟಿದ ನಂತರ ಮುಂದೆ ಬ್ರಹ್ಮಾಂಡದ ವಿರಾಟ, ಹಿರಣ್ಯಗರ್ಭ ಅವ್ಯಾಕೃತ ಈ ಮೂರು ಶರೀರಗಳನ್ನು ಹಿಂದುಳಿಸಿ ನಿತ್ಯಾನಿತ್ಯ ವಿವೇಕದಿಂದ ನಾಲ್ಕನೆಯದಾದ ಮೂಲ ಪ್ರಕೃತಿ (ಮೂಲ ಮಾಯೆ)ಯಲ್ಲಿ ಹೋಗಿ ಕೂಡಿಕೊಳ್ಳುವದು ಮುಂದೆ ಅಲ್ಲಿಂದ ಆ ವೃತ್ತಿಯನ್ನು ಬಿಡಿಸಿ ಅದರ ನಿವೃತ್ತಿಯನ್ನು ಹೇಗೆ ಮಾಡಬೇಕೆಂಬುದನ್ನು ಮುಂದೆ ಹೇಳುವೆವು ಆತ್ಮನಾರು ? ಅನಾತ್ಮನಾವುದು ? ಹಾಗು ಆತ್ಮನು ಚಂಚಲ ರೂಪನೇಕೆ ? ಇವನ್ನೆಲ್ಲ ಧ್ಯಾನದಲ್ಲಿರಿಸಿ ಇನ್ನು ಸಾರಾಸಾರ ವಿವೇಕವನ್ನು ಹೇಳುವವು ಚಿತ್ತಗೂಡಬೇಕು ”

ಶ್ರೀ ರಾಮ ।। ೨ ಸಾರಾಸಾರ ನಿರೂಪಣ ।। ಗುರುಗಳು ಶಿಷ್ಯನಿಗೆ– “ಸಾರಾಸಾರ ವಿಚಾರವನ್ನು ಕೇಳು ಈ ಅವಾಢವ್ಯ ಜಗತ್ತಿನಲ್ಲಿ ಸಾರ ಮತ್ತು ಅಸಾರಗಳಾವವೆಂಬುದನ್ನು ವಿವೇಕದಿಂದ ತಿಳಿದುಕೊಳ್ಳು, ಕಾಣುವದೆಲ್ಲವೂ ನಾಶವಾಗುವದು ’ ಮತ್ತು ‘ಬಂದದ್ದು ಹೋಗುವದು’ ಈ ಮಾತುಗಳು ರೂಢವಿರುವಂತೆ ‘ಅಖಂಡವಿದ್ದದ್ದೇ ಸಾರವಾದದ್ದು’ ಎಂದಿದೆ ಈ ಮೊದಲು ಆತ್ಮಾನಾತ್ಮ ವಿಚಾರವನ್ನು ಹೇಳಿವೆ ಅನಾತ್ಮವನ್ನರಿತು ಅದನ್ನು ದೂರ ಮಾಡಿತು ಆತ್ಮವು ಮೂಲ ಮಾಯೆಯಲ್ಲಿ ಹೋಗಿ ಕೂಡಿತು ಆ ಮೂಲ ಮಾಯೆಯಲ್ಲುಳಿದ ವೃತ್ತಿಯೇ ನಿವೃತ್ತಿಯಾದರೆ ಸಾರವಾದದ್ದು ದೊರಕುವದು ಆತ್ಮವು ನಿತ್ಯವಂದು ಗ್ರಹಿಸಿತು ಮತ್ತು

ಅಲ್ಲಿ ನಿವೃತ್ತಿ ರೂಪದಿಂದ ನಿರ್ವಿಕಾರ ಹೇತು ಉಳಿಯಿತು ಆ ಹೇತುವೇ ಚಂಚಲ ಮತ್ತು ನಿರ್ಗುಣ ನಿಶ್ಚಲ ಪರಬ್ರಹ್ಮವು. ಮೊದಲು ಜಡತ್ವದ ನಿರಸನವಾಗಲು ಚಂಚಲವು ಅನುಭವಕ್ಕೆ ಬರುವದು ಮತ್ತು ಚಂಚಲದ ನಿರಸನವಾಗಲು ನಿಶ್ಚಲವು ಅನುಭವಕ್ಕೆ ಬರುವದು ಇದೇ ಸಾರಾಸಾರ ವಿವೇಕವು ಜಡವೂ ಚಂಚಲವೂ ಇವರಡರ ನಿರಸನವಾಗಿ ನಿಶ್ಚಲನೊಡನೆ ತದ್ರೂಪ ಹೊಂದಲು ಅದುವೇ ಸಾರವು. ಚಲನೆಯುಳ್ಳದ್ದು ಚಂಚಲವು ಚಲನೆಯಿಲ್ಲದ್ದು ನಿಶ್ಚಲವು. ನಿಶ್ಚಲನಲ್ಲಿ ತದ್ರೂಪವಾಗುವದೆಂದರೆ ಚಂಚಲದ ನಿರಸನವಾಗುವದು

ಚಂಚಲವೆಂದರೆ ಮೂಲ ಮಾಯೆಯು ಇದೇ ಜ್ಞಾನವು, ಹಾಗು ಇದೇ ಉಪಾಸನೆಯು ಉಪಾಸನೆಗಳಿಂದ ಜನರ ಉದ್ಧಾರವಾಗುವದು. ಚಂಚಲಕ್ಕೆ ಸಾಕ್ಷಿ, ದ್ರಷ್ಟಾ, ಜ್ಞಾತಾ, ಜ್ಞಾನಘನ ಎಂದೆನ್ನುವರು ಆ ಜ್ಞಾನದಿಂದಲೇ ವಿಜ್ಞಾನವಾಗುವದು ಹಲವು ಮತಗಳ ಪರ್ಯವಸಾನವು ಇದೇ ಆಗಿರುವದು ಈ ಪ್ರಕಾರ ಚಂಚಲ ನಿರಸನವಾಗುವದು ನಶ್ವರತೆಯ ಬಗೆಗೆ ಸಂಶಯುವಿರುವದೆಂದರೆ ಜ್ಞಾನಾಧಿಕಾರವಿಲ್ಲೆಂದರ್ಥವು ನಿಶ್ಯವೂ ನಿಶ್ಚಲನನ್ನು ಕುರಿತು ನಿಶ್ಚಿತಮತಿಯುಳ್ಳವರಾಗಿ ನಿತ್ಯವೂ ವೃತ್ತಿ ಸಂಶಯ ಯುಕ್ತರಾಗುವದು ಮೃಗಜಲದಲ್ಲಿ ಮುಳುಗುವಂತೆಯೇ ಸರಿ. ನಿಶ್ಚಲ ಬ್ರಹ್ಮನು ಅಕ್ಷಯನೂ, ಸರ್ವವ್ಯಾಪಿಯೂ, ಹೇತು ಸಂದೇಹರಹಿತನೂ, ಆದಿ–ಮಧ್ಯ-ಅಂತ್ಯವರ್ಜಿತನೂ, ಅಚಲನೂ, ಸ್ಥಿರನೂ, ಹಾಗು ಗಗನಕ್ಕಿಂತಲೂ ಘನವಾದವನೂ ಆಗಿರುವನು ಚರ್ಮಚಕ್ಷು–ಜ್ಞಾನಚಕ್ಷುಗಳು ಇವೆಲ್ಲ ಪೂರ್ವಪಕ್ಷಗಳಾಗಿವೆ ನಿರ್ಗುಣ ಹಾಗು ನಿಶ್ಚಲ ಬ್ರಹ್ಮನು ಮೂಲದಲ್ಲಿ ಅಲಕ್ಷ್ಯನಾಗಿರುವನು ಅಲ್ಲಿ ತ್ರಿಪುಟಿಗಳಿಲ್ಲ ಚಂಚಲದ ಜೊತೆಯನ್ನು ಬಿಡದ ಹೊರತು ಬ್ರಹ್ಮಪದ ಪ್ರಾಪ್ತಿಯಿಲ್ಲ ಆದ್ದರಿಂದ ನಿಸ್ಸಂಗನಾಗಿ ಬ್ರಹ್ಮ ಸುಖವನ್ನು ಭೋಗಿಸಬೇಕು ಚಂಚಲವು ನಿರಸನವಾದ ಮೇಲೆ ನಿಶ್ಚಲವು ತಾನೇ ಉಳಿಯುವದು ಆ ನಿಶ್ಚಲವೇ ಸಾರವು. ಉಳಿದವೆಲ್ಲ ಅಸಾರವು ಸ್ಥೂಲ ದೇಹದಿಂದ ಮಾಯೆಯ ವರೆಗಿನ ಎಂಟೂ ದೇಹಗಳ ನಿರಸನವಾದನಂತರ 'ಸೋಽಹಂ ಹಂಸಃ' ಅಂದರೆ ಆ 'ಬ್ರಹ್ಮನೇ ನಾನು, ನಾನೇ ಬ್ರಹ್ಮನು' ಎಂಬ ಬೋಧೆಯು ಸದ್ಗುರುವಿನಿಂದಾಗುವದು

'ಬ್ರಹ್ಮನು ನಾನೇ' ಎಂಬ ಧ್ಯಾಸವನ್ನ ಪುನಃ ಪುನಃ ಗ್ರಹಿಸಲು ಬ್ರಹ್ಮಾನುಭವವು ಸಹಜವಾಗಿ ಉಂಟಾಗುವದು ಬ್ರಹ್ಮತ್ವವನ್ನು ಹೊಂದಿ ಬಾಹ್ಯ ಸಾಧನಗಳನ್ನು ಮಾಡುತ್ತ ಹೋಗಲು ಸಾರಾಸಾರ ವಿಚಾರದಿಂದ ನಿವೃತ್ತಿ ಪದವು ಪ್ರಾಪ್ತವಾಗುವದು ಪರಬ್ರಹ್ಮವು ತಪ್ತವಾಗುವದಿಲ್ಲ ಆರಿ ತಣ್ಣಗಾಗುವದಿಲ್ಲ ಬೆಳಗುವದಿಲ್ಲ ಹಾಗು ಕಪ್ಪಾಗುವದಿಲ್ಲ ಹೊಲಸಾಗುವದಿಲ್ಲ ಹಾಗು ಸ್ವಚ್ಛವಾಗುವದಿಲ್ಲ ಕಾಣುವದಿಲ್ಲ ಹಾಗು ಭಾಸಿಸುವದಿಲ್ಲ ಅದು ಹುಟ್ಟುವದಿಲ್ಲ ಮತ್ತು ನಾಶವಾಗುವದಿಲ್ಲ ಅದಕ್ಕೆ ಗಮನಾಗಮನಗಳಿಲ್ಲ ಆದ್ರತನಿರಾದ್ರ್ರತೆಗಳಿಲ್ಲ ಅದು ಉರಿಯುವದಿಲ್ಲ ಹಾಗು ನಂದುವದಿಲ್ಲ ಅದನ್ನು ಯಾರೂ ಎತ್ತಿ ಒಯ್ಯಲಾರರು ಅದು ನಾಲ್ಕೂ ನಿಟ್ಟಿನಲ್ಲಿ ಮುಖಗಳುಳ್ಳದ್ದಾಗಿ ಒಳಗೂ ಹೊರಗೂ ಎಲ್ಲ ಕಡೆ ಾ ತುಂಬಿಬಿಟ್ಟಿರುವದು ದೃಶ್ಯ ಹಾಗು ಭಾಸಗಳು ಅದರ ಮುಂದೆ ಹಾರಿ ಹೋಗುವವು ಇಂಥ ನಿಶ್ಚಲನೂ ನಿರ್ವಿಕಾರನೂ ಆಗಿರುವ ಪರಬ್ರಹ್ಮನಲ್ಲಿ ಸ್ಥಿರತೆಗೊಂಡಿರುವಪುರುಷನು ಧನ್ಯನು ! ನಿರ್ವಿಕಲ್ಪ ಬ್ರಹ್ಮನ ಕಲ್ಪನೆಯುಳ್ಳವರೇ ಸಂತರು ಉಳಿದವರೆಲ್ಲ ಪಾಮರರು ವ್ಯವಹಾರ ಚತುರನು ಅಸತ್ಯವನ್ನು ಹೊರತು ಪಡಿಸಿ ಸತ್ಯವನ್ನೇ ಗ್ರಹಿಸುವನು ಸಂತರು ಅಸಾರವಾದುದನ್ನು ಬಿಟ್ಟು ಸಾರಗ್ರಹಣ ಮಾಡುವರು. ಇಂಥವರಿಗೇ ಪರೀಕ್ಷಕರೆನ್ನುವರು ಜ್ಞಾತ ವೃತ್ತಿಯು ಬ್ರಹ್ಮಸ್ವರೂಪದಲ್ಲಿ ವಿಲೀನವಾಗುವದು ತಾದ್ರೂಪ್ಯತೆಯಿಂದ ವೃತ್ತಿಯು ನಿವೃತ್ತ ಸ್ಥಿತಿಯನ್ನು ಹೊಂದುವದು ಇದಕ್ಕೆ ಆತ್ಮನಿವೇದನೆ ಭಕ್ತಿಯೆನ್ನುವರು ಮುಖದಿಂದ ಭಕ್ತಿ–ಮುಕ್ತಿಗಳನ್ನು ನುಡಿಯಬೇಕು ಲಕ್ಷ್ಯಾರ್ಥದಿಂದ ಅವನ್ನು ಧ್ಯಾನದಲ್ಲಿ ತಂದುಕೊಂಡು ವಿವರಣೆ ಮಾಡಬೇಕು ಹೀಗೆ ವಿವರಿಸುತ್ತಾ ವಿವರಿಸುತ್ತಾ ಕೊನೆಗೆ ಹೇತು ವಿರಹಿತವಾಗಿ ಲೀನವಾಗಬೇಕು ಸದ್ರೂಪ, ಚಿದ್ರೂಪ, ತದ್ರೂಪ,ಸಸ್ವರೂಪ ಅಂದರೆ ತನ್ನ ರೂಪ ತನ್ನ ರೂಪವೆಂದರೆ ತತ್ವ ನಿರಸನದ ತರುವಾಯ ಉಂಟಾಗುವ ಅರೂಪ ಇದೇ ನಿರ್ವಿಕಲ್ಪ ಬ್ರಹ್ಮ ಸ್ವರೂಪವೆಂದು ತಿಳಿಯತಕ್ಕದ್ದು

ಶ್ರೀ ರಾಮ || ೩ ಸೃಷ್ಟಿ ರಚನೆ || ಗುರುಗಳು ಶಿಷ್ಯನಿಗೆ – "ಬ್ರಹ್ಮವು ಘನಸಾಂದ್ರವು, ಅವಕಾಶ ಮುಕ್ತವು, ನಿರ್ಮಲವು, ನಿರ್ವಿಕಾರವು ಹಾಗು ಆಕಾಶಕ್ಕಿಂತ ಮಿಗಿಲು ಹೀಗಿದ್ದು ಕೆಲಕಾಲದ ನಂತರ ಆ ಬ್ರಹ್ಮನಿಂದಲೇ

ಭೂಗೋಲಕ್ಕೆ ಆರಂಭವಾಯಿತು. ಈ ಸೃಷ್ಟಿ ರಚನೆ ಹೇಗಾಯಿತೆಂಬು ದನ್ನು ಕೇಳಬೇಕು

ಮೊದಲು ನಿಶ್ಚಲ ಬ್ರಹ್ಮನಲ್ಲಿ ಸಂಕಲ್ಪವುದಿಸಿತು. ಆ ಸಂಕಲ್ಪವೇ ಚಂಚಲವು. ಅದೇ ಆದಿ ನಾರಾಯಣ, ಅದೇ ಮೂಲ ಮಾಯೆ, ಅದಕ್ಕೇ ಜಗದೀಶ್ವರ, ಷಡ್ ಗುಣೇಶ್ವರ ಎಂಬ ಹೆಸರುಗಳುಂಟು ಅದೇ ಅಷ್ಟಧಾಪ್ರ ಕೃತಿಯ ಮೂಲವು ಮೂಲ ಮಾಯೆಯ ಇತ್ತೀಚೆಗೆ ಗುಣಮಾಯೆಯು ಆ ಗುಣ ಮಾಯೆಯಿಂದ ತ್ರಿಗುಣಗಳುಂಟಾದವು ಅವುಗಳಿಂದಲೇ ಓಂಕಾ ರದ ರಚನೆಯಾಯಿತು ಅ, ಉ, ಮ್ ಗಳು ಕೂಡಿ ಓಮ್ ಎಂದಾಯಿತು ಮುಂದೆ ಪಂಚಭೂತಗಳು ವಿಸ್ತ್ರತಗೊಂಡವು ಆಕಾಶವುಅವುಗಳಲ್ಲೊಂದು ಆಕಾಶವೆಂದರೆ ಅಂತರಾತ್ಮವು ಆಕಾಶದಿಂದ ವಾಯುವು, ವಾಯುವಿನಿಂದ ತೇಜವು, ಆ ವಾಯುವು ಎರಡು ನಿಟ್ಟೆನಿಂದ ಹರಿಯುವದು ಆ ವಾಯು ಪ್ರವಾಹಗಳ ಘರ್ಷಣದಲ್ಲಿ ಉಷ್ಣ ವಾಯುವಿನಿಂದ ಅಗ್ನಿಯು ಪ್ರಜ್ವಲಿಸಿತು ಮತ್ತು ಅಲ್ಲಿಯೇ ಸೂರ್ಯಬಿಂಬವು ಉತ್ಪನ್ನವಾಯಿತು ಶೀತಲವಾಯುವಿ ನಿಂದ ಜಲವು ಹುಟ್ಟಿತು ಮುಂದೆ ಆ ಜಲವು ಅಟ್ಟಿಸಿ ಭೂಗೋಲವಾಯಿತು ಪೃಥ್ವಿ—ಜಲಗಳ ಸಂಯೋಗದಿಂದ ಅನಂತ ಪ್ರಕಾರದ ಬೀಜಗಳು ಮೊಳೆತು ಅಂಕುರಗಳುದಿಸಿದವು ಹಲವು ಬಣ್ಣದ ಬಳ್ಳಿಗಳು ಉತ್ಪನ್ನವಾಗಿ ಅವುಗ ಳಿಗೆ ಎಲೆಗ ು, ಹೂಗಳು, ಹಾಗು ವಿವಿಧ ರಸಭರಿತ ಹಣ್ಣುಗಳು ಆದವು ಎಲೆ, ಹೂ, ಹಣ್ಣು, ಬೇರುಗಳು ಬೇರೆ ಬೇರೆ ಬಣ್ಣ ಹಾಗು ಬೇರೆ ಬೇರೆ ರಸಗಳಿಂದ ಯುಕ್ತವಾಗಿ ಹಲವು ಧಾನ್ಯಗಳೂ ಅನ್ನವೂ ನಿರ್ಮಾಣವಾದವು ಆ ಅನ್ನದಿಂದ ರೇತಸ್ಸು ಆ ರೇತಸ್ಸಿನಿಂದ ಪ್ರಾಣಿಯು ನಿರ್ಮಾಣವಾ ಯಿತು ಜಾರಜ, ಅಂಡಜ, ಸ್ವೇದಜ, ಹಾಗು ಉದ್ಭಿಜ್ಜಗಳೆಂಬ ನಾಲ್ಕು ಕೋಟಿ ಪ್ರಾಣಿಗಳ ಉತ್ಪತ್ತಿಯಾಯಿತು ಆದರೂ ಪೃಥ್ವಿ ಹಾಗು ಜಲ ಇವು ಎಲ್ಲವುಗಳಿಗೆ ಬೀಜವಾಗಿರುವವು ಈ ಪ್ರಕಾರವಾಗಿ ಸೃಷ್ಟಿ ರಚ ನೆಯ ಬಗೆಗೆ ಕೌತುಕದ ಕಥೆಯಿವೆ ಪಿಂಡ ಬ್ರಹ್ಮಾಂಡಗಳು ಕೂಡಿ ೮೪ಲಕ್ಷ ಬಗೆಯ ಜೀವ ಯೋನಿಗಳ ಪ್ರಾದುರ್ಭಾವವಾಯಿತು ಅಷ್ಟಧಾಪ್ರಕೃ ತ್ಯಾತ್ಮಕ ಸಕಲ ಪ್ರಾಣಿಗಳೆಲ್ಲ ನೀರಿನಿಂದಲೇ ಜನ್ಮಿಸಿದವು ನೀರಿಲ್ಲದೆ ಹೋಗಲು ಪ್ರಾಣಿಗಳು ಮರಣ ಹೊಂದುವವು. ಇದು ಸ್ಪಷ್ಟವೆಂದು

ಹೇಳುವ ಕಾರಣವಿಲ್ಲ ಈ ಎಲ್ಲ ಹೇಳಿಕೆಗಳು ಅನುಭವದಿಂದೊಡಗೂಡಿದವು ಆನುಮಾನಿಕಗಳಲ್ಲಿ ವೇದ-ಶಾಸ್ತ್ರ-ಪುರಾಣಗಳು ಹಾಗು ಅವುಗಳ ಸಿದ್ಧಾಂತಗಳು ಅನುಭವಯುಕ್ತವಾದವು ಆದ್ದರಿಂದ ಅವನ್ನು ಪ್ರಮಾಣವಾಗಿ ಗ್ರಹಿಸಬೇಕು ಅನುಭವಕ್ಕೆ ಗೋಚರವಾಗದ್ದನ್ನು ಅದು ಕೇವಲ ಅನುಮಾನಿಕ ಭಾಷಣವೆಂದು ತಿಳಿಯಕೂಡದು. ಅನುಭವವನ್ನು ಹೊರತುಪಡಿಸಿ ಜಗತ್ತಿನ ವ್ಯವಹಾರಗಳು ಸಾಗುವದಿಲ್ಲ ಪ್ರವೃತ್ತಿ ಹಾಗು ನಿವೃತ್ತಿ ವ್ಯವಸಾಯಗಳಲ್ಲೆಲ್ಲ ಅನುಭವವುಬೇಕಾಗುವದು ಅನುಭವವಿಲ್ಲದೆ ಅನುಮಾನವು ಕೆಲಸದ್ದಲ್ಲ.

ಇಂತು ಸೃಷ್ಟಿ ರಚನೆಯ ಸ್ಥಿತಿಯನ್ನು ಹೇಳಿದೆವು ಇನ್ನು ಮುಂದೆ ಸೃಷ್ಟಿ ಸಂಹರಣೆಯ ಬಗೆಗೆ ಕೇಳಬೇಕು ಮೊದಲಿನಿಂದ ಕೊನೆಯವರೆಗೂ ಆತ್ಮಾರಾಮನೇ ಎಲ್ಲವನ್ನೂ ಮಾಡುವನು ಮತ್ತು ಆತನೇ ಎಲ್ಲವನ್ನು ಕುರಿತು ಸರಿಯಾಗಿ ವಿಚಾರ ಮಾಡುವನು"

ಶ್ರೀ ರಾಮ || ೪ ಪ್ರಳಯ || ಗುರುಗಳು ಶಿಷ್ಯನಿಗೆ — "ಶಾಸ್ತ್ರಗಳಲ್ಲಿ 'ಪೃಥ್ವಿಯ ಅಂತ್ಯವಾಗುವದು ಮತ್ತು ಪಂಚಭೂತಗಳು ಕಲ್ಪಾಂತದಲ್ಲಿ ಹೇಳ ಹೆಸರಿಲ್ಲದಾಗುವವು' ಎಂದು ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ ಒಂದೆ ಸವನೆ ಒಂದು ನೂರು ವರುಷಗಳ ವರೆಗೂ ಮಳೆ ಬೀಳದೆ ಈ ಸೃಷ್ಟಿಯೆಲ್ಲವೂ ಸುಟ್ಟು ಹೋಗುವದು ಮತ್ತು ಜಗತ್ತಿನ ಪೃಷ್ಠ ಭಾಗವೆಲ್ಲ ಹರಿದು ತುಣು ತುಣುಕಾಗುವದು ಅದರಲ್ಲಿ ಆಗ ತೋರುವ ಡಂಬ-ತಗ್ಗುಗಳಲ್ಲಿ ದೊಡ್ಡ ದೊಡ್ಡ ಗಿರಿ ಪರ್ವತಗಳು ಗಡಪ್ಪಾಗಿ ಮುಳುಗಿ ಬಿಡುವವು ಸೂರ್ಯಮಂಡಲದ ಪ್ರಖರವಾದ ಹನ್ನೆರಡು ಕಿರಣಗಳಿಂದ ಭಯಂಕರ ಉರಿಜ್ವಾಲೆಗಳು ಹೊರಟು ಒಂದೇ ಸವನೆ ನೂರು ವರುಷಕಾಲ ಪರಿಯಂತ ಭೂಗೋಲವು ಧಗಧಗನೆ ಉರಿದುಸುಟ್ಟು ಹೋಗುವದು ಪೃಥ್ವಿಯು ಸುಡುಸುಡುತ್ತ ಕೆಂಡದ ಗುಂಡಿನಂತಾಗಿ ಕೆಂಪಗೆ ತೋರುವದು ಅದನ್ನು ತನ್ನ ಶಿರಸ್ಸಿನ ಮೇಲೆ ಧಾರಣ ಮಾಡಿದ್ದ ಶೇಷನು ಅದರ ತಪ್ತತೆಯಿಂದ ಹಾಗು ಉರಿಜ್ವಾಲೆಯಿಂದ ಹುರಸುಳಿಸಿ ಒಂದೇಸವನೆ ವಿಷಕಾರುವನು ಶೇಷನ ಆ ವಿಷಕಾರಿಕೆಯ ಜ್ವಾಲೆಯಿಂದ ಇಡೀ ಪಾತಾಳ ಲೋಕವು ಆದರಲ್ಲಿದ್ದ ಮಹಾನ್ ಮಹಾ ಸರ್ಪಗಳಿಂದೊಡಗೂಡಿ ಸುಟ್ಟು ಭಸ್ಮವಾಗುವದು

ಪಂಚಮಹಾ ಭೂತಗಳೆಲ್ಲಿ ಅಳವುಗೆಡುವವು ಪ್ರಳಯವಾತವು ಭರದಿಂದ ಬೀಸತೊಡಗುವದು ಅದರೊಡನೆ ಪ್ರಳಯಾಗ್ನಿಯು ಜೊತೆಯಾಗಿ ಅವೆ ರಡರ ಐಕ್ಯತೆಯಿಂದ ಇನ್ನಿಷ್ಟು ಮತ್ತಿಷ್ಟು ಪ್ರಳಯತಾಪವು ವರ್ಧಿಸುತ್ತ ಸಾಗುವದು ಈ ಪ್ರಲಯ ಕಾಲದಲ್ಲಿಯೇ ಹನ್ನೊಂದು ಜನರುದ್ರರು, ದ್ವಾದಶಾದಿತ್ಯರು ಸಿಕ್ಕು ಅಗ್ನಿಯ ಪ್ರಕೋಪದಿಂದ ಸಂತಪ್ತಗೊಳ್ಳಹತ್ತು ವರು ಇಷ್ಟೇ ಅಲ್ಲ ಅವರೂ ಕೂಡ ಪಾವಕನ ಊಳಿಗದವರಂತಾಗಿ ಅವ ನಿಗೆ ಸೃಷ್ಟಿನಾಶನ ಕ್ರಿಯೆಗೆ ಸಹಾಯ ಮಾಡದೆ ಗತಿಗಾಣದಾಗುವರು ಇಂತು ಈ ತ್ರಿವರ್ಗರ ತಾಪಾಧಿಕ್ಯತೆಯಿಂದ ಹಾಗು ಗಾಳಿ ವಿದ್ಯುತ್ತುಗಳ ಬಲವಂತಿಕೆಯಿಂದ ಪೃಥ್ವಿಯು ನಲೆಗಾಣದೆ ದೂರ ಸಿಡಿಯುವದು ಅದ ರಿಂದ ಅವಕ್ಕಿರುವ ಕಠಿಣತೆಯು ನಷ್ಟವಾಗಿ ಉರಿಯಹತ್ತುವದು ಎಲ್ಲ ಕಡೆಗೂ ಅಗ್ನಿಮಯವೇ ಆಗಿಬಿಡುವದು ಪೃಥ್ವಿಗೊದಗಿದ ವಿಪನ್ನಾವ ಸ್ಥೆಯಲ್ಲಿ ಅಹಮಿಕೆವೆಂದು ಮೆರೆಯುತ್ತಿದ್ದ ಮೇರು ಪರ್ವತದ ಶ್ರೇಷ್ಠತೆ ಯನ್ನು ಅದಾರು ಕೇಳುವರು ? ಆ ಕಾಲದಲ್ಲಿ ಅನ್ಯೋನ್ಯ ಸಹಾಯ ಸಂಬಂಧಗಳೇ ಉಳಿಯುವದಿಲ್ಲ ಚಂದ್ರ, ಸೂರ್‍ಯ, ನಕ್ಷತ್ರಗಳೆಲ್ಲ ಕರಗಿ ಮುದ್ದೆಯಾಗುವವು ಜಗತ್ತಿನ ಬಿರುಸುತನವು ಮೊದಲೇ ಹಾರಿ ಹೋಗು ವದು ಬ್ರಹ್ಮಾಂಡವು ಸುಣ್ಣ ಸಿದ್ಧಪಡಿಸುವ ಭಟ್ಟಿಯಂತೆ ಸುಟ್ಟುರಿದು ಹೋಗುವದು ಇಂತು ಜಗತ್ತೆಲ್ಲವು ಸುಟ್ಟು ಸುಟ್ಟು ಕುಕ್ಕರಿಸಿ ಬೀಳಲು ಆಗ ಮಹಾವೃಷ್ಟಿಯು ಸುರಿಯಲಾರಂಭಿಸುವದು ಆಗಿನ ದುಸ್ಥಿತಿಯನ್ನು ಹೇಳುವದೇನು ? ಸುಟ್ಟ ಸುಣ್ಣದ ಮೇಲೆ ನೀರೆರಚಿದಂತೆ ಪೃಥ್ವಿಯ ಪ್ರತಿ ಯೊಂದು ಕಣದ ಮೇಲೆ ಮಹಾವೃಷ್ಟಿಯ ಜಲಸೇಚನವಾಗಲು ಪ್ರತಿಕಣವು ಸುಣ್ಣವರಳಿದಂತೆ ಅರಳುವದು ಇದರಿಂದ ಇಡೀಪೃಥ್ವಿಯೇ ಅರಳಿ ಸುಟ್ಟರೆ ಗೊಂಡು ಪ್ರಳಯ ಜಲದಲ್ಲಿ ವಿಲೀನವಾಗುವದು ಭೂಧಾರಣ ಮಾಡಿದ್ದ ಶೇಷ, ಕೂರ್ಮ, ವರಾಹ, ಇವರು ಪೃಥ್ವಿಯನ್ನು ನಿರಾಧಾರ ಸ್ಥಿತಿಗೆ ಮುಟ್ಟಿಸಿ ತಾವೆಲ್ಲರು ತಮ್ಮ ಸತ್ವ ಕಳೆದುಕೊಂಡು ಪ್ರಲಯ ಜಲ ದಲ್ಲಿ ವಿಲೀನರಾಗಿ ಹೋಗುವರು ಆಗ ಪ್ರಲಯ ಮೇಘವು ಮಹಾ ಗರ್ಜನೆ ಯಿಂದ ಎದ್ದೇಳುವದು ಒಂದೇ ಸವನೆ ಗುಡುಗು ಮಿಂಚು ಸಿಡಲುಗಳ ಆರ್ಭಟೆಯು ಮಿತಿಗೆಡುವದು ಚಿಕ್ಕ ದೊಡ್ಡ ಪರ್ವತಗಳ ಗಾತ್ರದಂತಿರುವ

ಆಣೆಕಲ್ಲುಗಳು ಉದುರುವವು ಗಾಳಿಯು ಹೊಡೆತದಿಂದ ಗಿರಿ ಪರ್ವತಗಳು ಬುಡವೆರಿಸಿ ಹಾರಿಬಿದ್ದು ಉರುಳುವವು ಈ ಝುಂಝಾವಾತದ ಭಯಾನಕ ಕ್ರಿಯೆಯು ನಡೆದಾಗಲೇ ನಿಬಿಡವಾದ ಅಂಧಃಕಾರವು ಇಡಿಯ ಬ್ರಹ್ಮಾಂಡವನ್ನೆಲ್ಲ ತುಂಬಿಬಿಡುವದು ಜಗತ್ತಿನ ಮೇಲಿನ ಸಮುದ್ರ-ನದಿಗಳೆಲ್ಲ ವಾಗಿಲ್ಲಿಯ ಮೋಡಗಳ ಸಾಲಿನಂತೆ ಒಟ್ಟುಗೂಡಿ ಎಲ್ಲ ಕಡೆಗೂ ನೀರೇ ನೀರಾಗುವದು, ಆ ಅಖಂಡ ಜಲ ಸಮೂಹದಲ್ಲಿ ಹಾವು, ಮೀನು, ಆವೆಗಳು ಪರ್ವತರಾಸಿಯಾಗಿ ಬಿದ್ದು ಒದರಿ ಒದ್ದಾಡುವವು ಅವುಗಳ ಒದರುವಿಕೆಯು ನೀರಿನ ಗರ್ಜನೆಯೊಂದಿಗೆ ಬೆರೆತು ಗರ್ಜನೆಯ ಸ್ವರೂಪವು ಇನ್ನಿಷ್ಟು ಹೆಚ್ಚಾಗುವದು ಪೃಥ್ವಿಯ ಮೇಲಿನ ಏಳೂ ಸಮುದ್ರಗಳು ಭೂಮಿಗೆ ಹೊದಿಕೆಯಾದಂತಿವೆ ಆ ಪ್ರಲಯದಲ್ಲಿ ಈ ಆವರಣವು ಹರಿದು ಎಲ್ಲಸಾಗರಗಳ ಜಲವು ಒಂದಾಗಿ ಬಿಡುವದು ಇಷ್ಟಾದ ಬಳಿಕ ಕಬ್ಬಿಣದ ಗುಂಡಿನಂತಿದ್ದ ತಪ್ತ ಬ್ರಹ್ಮಾಂಡವು ಪ್ರಕಟವಾಗಿ ಅದು ಜಲಮಯ ಜಗತ್ತಿನ ನೀರನ್ನೆಲ್ಲ ಒಂದೂ ಹನಿಯುಳಿಯದಂತೆ ಶೋಷಿಸಿಬಿಡುವದು ಇಂತು ನೀರೆಲ್ಲ ಆಟ್ಟಿಸಿ ಹೋದ ಮೇಲೆ ಮತ್ತೆ ಅಸಂಭಾವ್ಯವಾದ ಅಗ್ನಿಯು ಪ್ರಜ್ವಲಿಸುವದು ಆಗ ಪ್ರಲಯ ಮಹಾ ಮಾರುತನು ಬೀಸಿ ಆ ಅಗ್ನಿಯನ್ನು ನುಂಗಿಬಿಡುವನು ಸೆರಗು ಬೀಸಿ ದೀವಿಗೆಯನ್ನು ಆರಿಸುವಂತೆ ಪ್ರಚಂಡವಾದ ಆ ಅಗ್ನಿಯನ್ನಾರಿಸುವದಕ್ಕೆ ಪ್ರಚಂಡ ವಾಯುಗಳು ಹುಟ್ಟುವವು ಆದರೆ ಈ ಗಾಳಿಗಳೆಲ್ಲ ಅವಕ್ಕಿಂತಲೂ ದೊಡ್ಡದಾದ ಆಕಾಶದ ಪ್ರದೇಶದಲ್ಲಿ ಸೇರಿ ಅವಕಾಶದಲ್ಲಿ ಕೂಡಿಬಿಡುವವು ಈ ಪ್ರಕಾರವಾಗಿ ಪಂಚ ಭೂತಗಳ ಮಹತ್ವವೆಲ್ಲ ಹಾರಿ ಹೋಗುವದು ಕೊನೆಗೆ ಬ್ರಹ್ಮಾಂಡದ ನಾಲ್ಕನೆಯ ಶರೀರವಾದ ಮೂಲಮಾಯೆ ಇದು ಮಹದ್ಭೂತವೆನ್ನಿಸಿಕೊಳ್ಳುವದು ಇದರ ಚೇತನವೂ ಕೂಡ ಇಲ್ಲದಾಗಿ ಇಡೀ ಪ್ರಪಂಚವೆಲ್ಲ ಆಟ್ಟಿಸಿ ಹೋಗುವದು ಆಗ ಯಾವ ಪದಾರ್ಥಗಳಿಗೂ ಭೂತಗಳಿಗೂ ಇರಲಿಕ್ಕೆ ಆಸ್ಪದವು ಉಳಿಯುವದಿಲ್ಲ ಈ ರೀತಿಯಾಗಿ ಪಂಚ ಭೌತಿಕ ದೃಶ್ಯ ಜಗತ್ತು ಮಹಾ ಪ್ರಲಯದಿಂದ ಹಾರಿಹೋಗಲು ಜಡವೂ ಚಂಚಲವೂ ಉಳಿಯುವದಿಲ್ಲ ಆದರೆ ನಿಶ್ಚಲ ಪರಬ್ರಹ್ಮನು ಮಾತ್ರ ಉಳಿಯುವನು ”

ಶ್ರೀ ರಾಮ ‖ ೫ ಕಥೆ ‖ ಗುರುಗಳು ಶಿಷ್ಯನಿಗೆ ಅಧ್ಯಾತ್ಮ ರೂಪಕ ಕಥೆ ಹೇಳುವರು ಎಂತೆಂದರೆ—

" ಇಬ್ಬರು ವಿರಕ್ತರಿದ್ದರು ಅವರಿಬ್ಬರೂ ಜೊತೆಯಾಗಿ ಭೂಮಿಯ ಮೇಲೆ ಸಂಚರಿಸುತ್ತಿದ್ದರು. ಮಾರ್ಗ ಕ್ರಮಣದಲ್ಲಿ ಹೊತ್ತುಗಳೆಯುವ ದಕ್ಕಾಗಿ ಅವರಲ್ಲಿ ಒಬ್ಬನು ಇನ್ನೊಬ್ಬನಿಗೆ ಒಂದು ಕಥೆಯನ್ನು ಹೇಳುತ್ತ ನಡೆದನು ಕಥೆ ಕೇಳುವವನ ಬಯಕೆಯಂತೆ ಹೇಳುವವನು ಒಂದು ಶ್ರೇಷ್ಠ ಕಥೆಯನ್ನು ಹೇ-ಹತ್ತಿದನು ಅದಾವದೆಂದರೆ—

" ಹೀಗೆ ಒಂದು **ಗಂಡ-ಹೆಂಡಿರ ಜೊತೆಯಿತ್ತು** ಆ ದಂಪತಿ ಗಳಲ್ಲಿ ಅತ್ಯಂತ ಪ್ರೇಮವಿದ್ದಿತು ಸ್ವರೂಪ ಭಿನ್ನವಾದರೂ ಅವರು ಒಂದೇ ರೂಪದಿಂದ ವರ್ತಿಸುತ್ತಿದ್ದರು ಅವರಲ್ಲಿ ಭಿನ್ನತೆಯೇನೂ ಇದ್ದಿರ ಲಿಲ್ಲ ಈ ಪ್ರಕಾರ ಇರುತ್ತಿರಲು ಕೆಲ ಕಾಲದಮೇಲೆ ಅವರಿಗೊಬ್ಬ **ಮಗನು** ಹುಟ್ಟಿದನು ಆ ಮಗನೇ ಕಾರ್ಯಕರ್ತನಾದನು ಅವನು ಬಹಳ ಒಳ್ಳೆಯವನು ಮುಂದೆ ಆ ಮಗನಿಂದ ಒಂದು **ಮಗು** ಹುಟ್ಟಿತು ಆ ಮಗುವು ತಂದೆಗಿಂತ ಹುರುಪಿನವನು ಆದರೆ ತಂದೆಯ **ಅರ್ಧ ಜಾಣ ತನವು** ಅವನಲ್ಲಿದ್ದಿತು ಆದರೂ ಅವನು ಪ್ರಸಿದ್ಧನು ಅವನು ಪ್ರಪಂಚ ವಿಸ್ತಾರ ಮಾಡಿಕೊಂಡವನು ಹಲವು ಹೆಣ್ಣು-ಗಂಡು ಮಕ್ಕಳನ್ನು ಹಡೆ ದನು ಅಲ್ಲದೆ **ಹಲವು ಜನರು** ಅವನಿಂದ ಹುಟ್ಟಿದರು ಈ ಪ್ರಕಾರ ಅವನು ಲೋಕ ಸಂಗ್ರಹ ಕರ್ತನಾಗಿದ್ದನು. ಅವನು **ಹಿರಿಯ ಮಗನು** ಅಜ್ಞಾನಿಯೂ ಸಿಟ್ಟಿನವನೂ ಆಗಿದ್ದನು ಎಲ್ಲಿಯಾದರೂ ತಪ್ಪು ಕಂಡು ಬಂದರೆ ಅಲ್ಲಿ ತನ್ನ ತಮೋಗುಣದಿಂದ ಸಂಹಾರ ಕ್ರಿಯೆಯನ್ನು ಮಾಡು ತ್ತಿದ್ದನು ಈ ಪ್ರಕಾರ ಇಡೀ ಕುಟುಂಬವು ಏಕತ್ರ ಮನೆತನದ್ದಾಗಿ ಸಾಗಿತ್ತು ಮುತ್ತಜ್ಜ-ಅಜ್ಜ-ತಂದೆ-ಮಗು ಇವರೆಲ್ಲರೂ ಮನೆತನ ಪ್ರಪಂಚ ಸಾಗಿಸುತ್ತ ಬಂದಿದ್ದರೂ ಮುಂದೆ **ಮುತ್ತಜ್ಜನು** ಮುಪ್ಪಿನವ ನಾಗಿ ದುಡಿಯಲಾರದೆ ಕುಳಿತು ಬಿಟ್ಟನು. ಮುಂದೆ **ಆತನ ಮಗನು** ತನ್ನ ವ್ಯಾಪವನ್ನು ಹೆಚ್ಚಿಸಿ ಜ್ಞಾನಿಯೂ ಒಳ್ಳೆಯವನೂ ಎನ್ನಿಸಿದನು **ಅವನ ಮಗ** ಅರ್ಧ ಪಂಡಿತನು. ಹಾಗು ಬಹು ಚಟವಟಿಕೆಯವನು **ಇವನ ಮಗನಂತೂ** ಬಹಳ ಕೋಪಿಷ್ಠನೆಂದು ಹೇಳಿದೆಯಲ್ಲವೆ? ಮುತ್ತ

ಜ್ಜನು ಮಕ್ಕಳು ಮೊಮ್ಮಕ್ಕಳು ಮರಿ ಮಕ್ಕಳುಗಳನ್ನೆಲ್ಲ ಪಾಲನ ಪೋಷಣೆ ಮಾಡುತ್ತಲಿದ್ದನು ಅವನ ಮೊಮ್ಮಗನು ತಂದುಹಾಕಿ ಈಡುಮಾಡು ವನು ಮರಿಮಗನು ಇದ್ದದ್ದೆಲ್ಲ ಹಾಳು ಮಾಡುವನು ಈ ಪ್ರಕಾರ ಮೂಲ ಪುರುಷನ ವಂಶ ವಿಸ್ತಾರ ಹೆಚ್ಚಿತು ಇಂತು ಬಹುಕಾಲ ಆನಂದ ದಲ್ಲಿ ಹೋಯಿತು ಅತಿ ವಿಸ್ತಾರ ಹೊಂದಿತು ಬರಬರುತ್ತ ಮುಂದೆ ಅಂತಃ ಕಲಹಗಳು ಸುರುವಾದವು ಹಿರಿಯರನ್ನು ಕಿರಿಯರು ಮರ್ಯಾದಿಸ ದಾದರು ಪ್ರತಿಯೊಬ್ಬರಲ್ಲಿ ಇನ್ನೊಬ್ಬರ ಬಗೆಗೆ ವೈಷಮ್ಯತೆ ಹುಟ್ಟ ಹತ್ತಿತು ಅವರಲ್ಲಿಯ ಒಕ್ಕಟ್ಟು ಮುರಿಯಿತು ಅವರಲ್ಲರು ಮನ ಬಂದಂತೆ ನಡೆಯ ಹತ್ತಿದರು ಎಲ್ಲರೂ ಕೂಡಿ ಇರುವಾಗ ಚಂದವಿತ್ತು ಆದರೆ ಈಗ ಆ ಕಾಲ ಬದಲಾಯಿತು ಗೃಹಕಲಹ ಸುರುವಾದುದ ರಿಂದ ಎಲ್ಲರ ಸಂಹಾರವಾಗುವ ಸಮಯ ಉತ್ಪನ್ನವಾಯಿತು ದೊಡ್ಡ ದೊಡ್ಡವರಲ್ಲಿಯೇ ವೈಮನಸು ಹುಟ್ಟಿತು ಮುತ್ತಜ್ಜ, ಅಜ್ಜ ತಂದೆ,ಮಗ ಇವರೆಲ್ಲರ ಸಂಹಾರವಾಗಿ ನಿರ್ವಂಶವಾಯಿತು "

ಈ ಮೇಲಿನ ಕಥೆಯು ಮನನೀಯವಾಗಿದೆ ಅಂದರೆ ಇದರಿಂದ ಸೃಷ್ಟಿಯ ಉತ್ಪತ್ತಿ—ಸಂಹಾರಗಳ ಮರ್ಮ ತಿಳಿಯುವದು ಹಾಗು ಈ ಕಥೆಯ ಮರ್ಮವನ್ನರಿತವನು ಜನನ ಮರಣಗಳಿಂದ ದೂರಾಗುವನು ಇದರ ಅನುಭವದಿಂದ ಕಥೆ ಕೇಳಿದವರೂ ಹೇಳಿದವರೂ ಇಬ್ಬರೂ ಧನ್ಯ ರಾಗುವರು ಯುಗ ಯುಗಾಂತರಗಳಲ್ಲಿ ಇಂಥ ಅಪೂರ್ವ ಕಥೆಯು ಅದೆಷ್ಟೋ ಬಾರಿ ಹೇಳಲ್ಪಡುವದು ''

ಈ ಪ್ರಕಾರ ಆ ವಿರಕ್ತನು ಕಥೆ ಹೇಳಿ ಸುಮ್ಮನೆ ಕುಳಿತನು ನಮ್ಮ ಕಥೆ ಮುಗಿಯಲಿ, ನಿಮಗೆ ಆದರಿಂದ ಮನಹರವಾಗಲಿ, ಈ ಕಥೆ ಯನ್ನು ಹೇಳಿದ್ದರ ಮರ್ಮವು ಕೇಳಿದವರಿಗೆ ತಿಳಿಯಲಿ, ತಪ್ಪುತ್ತ ತಡೆ ಯುತ್ತ ಸಂಕ್ಷಿಪ್ತವಾಗಿ ಈ ಕಥೆಯನ್ನು ಹೇಳಿದೆವು ಕುಂದು ಕೊರತೆ ಗಳನ್ನು ಕ್ಷಮ್ಯವೆಂದೆಣಿಸತಕ್ಕದ್ದು. ಈ ಕಥೆಯು ನಿರಂತರವಾಗಿ ವರ್ತಿಸು ವದು ವಿವೇಕದಿಂದ ಕಾಣುವವರಿಂದ ಜಗದುದ್ಧಾರವಾಗುವದು ಆ ಜಗ ದುದ್ಧಾರದ ಲಕ್ಷಣ ಹೇಳುವೆವು ಎಷ್ಟು ಹೇಳಿದರೂ ಎಲ್ಲ ಹೇಳಿಕೆಗಳ ಸಾರವನ್ನು ತೆಗೆದು ಸ್ವೀಕರಿಸುವದೇ ನಿರೂಪಣವು ತತ್ವ ರಹಸ್ಯವನ್ನು

ವಿವರಣೆ ಮಾಡುತ್ತ ಹೋದಂತೆ ಅದನ್ನು ಗ್ರಹಿಸಿ ಸಂದೇಹ ರಹಿತರಾಗಬೇಕು ಅಷ್ಟ ದೇಹ ನಿರಸನದಿಂದ ಸಮಾಧಾನ ಹೊಂದಬೇಕು ತತ್ವಗಳ ಮೇಳುಗೂಡುವಿಕೆಯಿಲ್ಲವಲ್ಲಿ ಶಾಂತಿಯು ಇರುವದು ಸಾಧ್ಯವಿಲ್ಲ ಈ ಕಾರಣದಿಂದ ಯಾರಾದರೂ ಗೊಂದಲದಲ್ಲಿ ಬೀಳದೆ ತತ್ವಗಳ ರಹಸ್ಯವನ್ನು ಗ್ರಹಿಸಿ ಸಮಾಧಾನದಿಂದಿರಬೇಕು

ಈ ಪ್ರಕಾರ ಈ ಸೂಕ್ಷ್ಮ ಸಂವಾದವನ್ನು ವಿಶದವಾಗಿ ಹೇಳಬೇಕಾಯಿತು ಮುಂದಿನ ಸಮಾಸದಲ್ಲಿ ' ಲಘು ಬೋಧೆ ' ಯನ್ನು ವಿವರಿಸುವೆವು ''

---

ಟೀಪು:— ಈ ಕಥೆಯಲ್ಲಿ ದಪ್ಪ ಅಕ್ಷರದ ಶಬ್ದಗಳನ್ನು ಸೂಚಿಸಿಕೊಂಡವುಗಳು ಕೆಳಗಿನಂತಿವೆ ಅವನ್ನು ಅನುಲಕ್ಷಿಸಿಕೊಂಡು ತತ್ವ ರಹಸ್ಯದ ಕಥೆಯನ್ನು ತಿಳಿಯಬೇಕು

ಗಂಡ-ಹೆಂಡಿರ ಜೊತೆ— ಪ್ರಕೃತಿ-ಪುರುಷ, ಶಿವ-ಶಕ್ತಿ, ಅರ್ಧನಾರಿನಟೇಶ್ವರ, ಮೂಲಮಾಯೆ-ಮೂಲ ಪುರುಷ
ಅವರಿಗೊಬ್ಬ ಮಗನು— ವಿಷ್ಣು
ಒಳ್ಳೆಯವನು— ಸತ್ವಗುಣ
ಕಾರ್ಯಕರ್ತನು— ಜ್ಞಾನಿ
ಮಗು— ಬ್ರಹ್ಮ
ಅರ್ಧ ಜಾಣ— ಸತ್ವ ರಜ ಯುಕ್ತ
ಪ್ರಸಿದ್ಧ— ವ್ಯಾಪಕ
ಹಲವು ಜನರು— ಸಪ್ತಲೋಕದ ಸ್ತ್ರೀ ಪುರುಷ, ಹೆಣ್ಣು ಗಂಡುಗಳೆಲ್ಲ
ಹಿರಿಯ ಮಗ— ಶಂಕರ
ಅಜ್ಞಾನಿ— ತಮೋಗುಣ
ಮುತ್ತಜ್ಜ— ಪ್ರಕೃತಿ-ಪುರುಷ

ಶ್ರೀ ರಾಮ || ೬ ಲಘು ಬೋಧೆ || ಗುರುಗಳು ಶಿಷ್ಯನನ್ನು ಕುರಿತು—

"ಪಂಚ ತತ್ವಗಳೆಂದು ಯಾವಕ್ಕೆ ಅನ್ನುವರೋ ಅವುಗಳ ಹೆಸರುಗಳನ್ನು ಮೊದಲು ಲಕ್ಷ್ಯದಲ್ಲಿಸಿರಿಕೊಳ್ಳಬೇಕು ಬಳಿಕ ತನ್ನ ಅನುಭವದಿಂದ ಅವುಗಳ ರೂಪಗಳನ್ನು ಕುರಿತು ವಿಚಾರಮಾಡಬೇಕು ಮತ್ತು ಅವುಗಳಲ್ಲಿ ಶಾಶ್ವತವಾದವುಗಳಾವವು? ಅಶಾಶ್ವತವಾದವುಗಳಾವವು? ಇದರ ಬಗೆಗೆ ವಿಚಾರ ಮಾಡಬೇಕು ಪಂಚ ಭೂತಗಳ ನಾಮ-ರೂಪಗಳನ್ನೂ ಅವುಗಳಲ್ಲಿಯ ಸಾರಾಸಾರ ವಿಚಾರವನ್ನೂ ಕೇಳಬೇಕು ತತ್ವಗಳು ಪೃಥ್ವಿ, ಆಪ, ತೇಜ, ವಾಯು ಹಾಗು ಆಕಾಶಗಳೆಂಬವಿರುವವು ಪೃಥ್ವಿಯೆಂದರೆ ಭೂಮಿಯು, ಆಪವೆಂದರೆ ನೀರು, ತೇಜವೆಂದರೆ ಅಗ್ನಿ ಸೂರ್ಯ, ವಹ್ನಿ ಮುಂತಾದ ಸತೇಜ ಪದಾರ್ಥಗಳು ವಾಯು ಎಂದರೆ ಗಾಳಿಯು, ಆಕಾಶವೆಂದರೆ ಅವಕಾಶವೂ ವಿಸ್ತಾರವೂ ಆದದ್ದು

ಇನ್ನು ಶಾಶ್ವತವಾವುದೆಂಬದರ ವಿಚಾರವನ್ನು ಮನಸಿನಲ್ಲಿ ತರಬೇಕು ಒಂದೇ ಅಗಳಿನ ಪರೀಕ್ಷೆಯಿಂದ ಇಡಿಯ ಪಾತ್ರೆಯೊಳಗಿನ ಅನ್ನದ ಪರೀಕ್ಷೆಯಾಗುವದು ಅದರಂತೆ ಸ್ವಲ್ಪ ಅನುಭವದಿಂದ ಹೆಚ್ಚು ಜ್ಞಾನ ತಿಳಿಯುವದು ಪೃಥ್ವಿಗೆ ಉತ್ಪತ್ತಿ ನಾಶಗಳೆರಡೂ ಇರುವವೆಂಬ ಅನುಭವ ಇರುವದು ಬಹಳ ಹೇಳುವದೇನು? ಸೃಷ್ಟಿಯಲ್ಲಿ ಉತ್ಪಾದಿತಗಳೆಲ್ಲವೂ ನಾಶವಾಗುವವು ನೀರು ಆಟ್ಟಿಸುವದು, ತೇಜವು ಪ್ರಕಟವಾಗಿ ಅಡಗುವದು, ವಾಯುವು ಕುಂಠಿತ ಗತಿಯುಳ್ಳದ್ದಾಗುವದು, ತಾತ್ಪರ್ಯ ವಿಷ್ಟೇ ಹುಟ್ಟಿದ್ದೆಲ್ಲವೂ ಹಾಳಾಗುವದು

ಆಕಾಶವು ಕೇವಲ ನಾಮ ಮಾತ್ರವಿರುವದು ವಿಚಾರ ಮಾಡಲು ಅದು ಉಳಿಯುವದಿಲ್ಲ ಒಟ್ಟಿನ ಮೇಲೆ ಪಂಚಭೂತಾತ್ಮಕಗಳೆಲ್ಲವೂ ಅಶಾಶ್ವತವಾಗಿರುವವು ಅಂದರೆ ಅವು ಉಳಿಯುವದಿಲ್ಲ ನಾಶವಾಗುವವು ಮಾತ್ರ ಆತ್ಮನು ಶಾಶ್ವತನೂ ನಿರಾಕಾರಿಯೂ ಆಗಿರುವನು ಹಾಗು ಅವನು ಸತ್ಯನಾಗಿರುವನು ಆ ಆತ್ಮನ ಸ್ವರೂಪವು ಜ್ಞಾನವಿಲ್ಲದೆ ಉಂಟಾಗಲಾರದು ಆ ಜ್ಞಾನವು ಸಂತ ಜನರಲ್ಲಿ ಇರುವದು ಶಾಶ್ವತ

ವಾದ ಆತ್ಮನ ಸ್ವರೂಪದ ಬಗೆಗೆ ಅವರನ್ನೇ ಕೇಳಬೇಕು ಆ ಸಂತರನ್ನು ಪ್ರಶ್ನಿಮಾಡಲು ಅವರು ' ಆತ್ಮನು ಅವಿನಾಶಿಯು, ಜನನ-ಮೃತ್ಯು ರಹಿತನು ' ಎಂದು ಹೇಳುವರು ನಿರಾಕಾರದಲ್ಲಿ ಆಕಾರವೂ ಆಕಾರದಲ್ಲಿ ನಿರಾಕಾರವೂ ಭಾಸವಾಗುವದು ಆದ್ದರಿಂದ ನಿರಾಕಾರವು ನಿತ್ಯವು, ಆಕಾರವು ಅನಿತ್ಯವಿದೆ ಈ ವಿವೇಕಕ್ಕೆ 'ನಿತ್ಯಾನಿತ್ಯವಿಚಾರ' ವೆಂದೆನ್ನುವರು. ಸಾರದಲ್ಲಿ ಅಸಾರವೂ ಅಸಾರದಲ್ಲಿ ಸಾರವೂ ಭಾಸಿಸುವದು ಅವನ್ನು ಸಾರಾಸಾರ ವಿಚಾರದಿಂದ ಶೋಧಿಸಿ ತಿಳಿದುಕೊಳ್ಳತಕ್ಕದ್ದು ಪಂಚ ಭೂತಗಳೆಲ್ಲವು ಮಾಯಾನ್ವಿತವು ಆದರೆ ಅವು ಹಲವಾಗಿ ಇರುವವು ಆತ್ಮನು ಶಾಶ್ವತನು ಅವನು ಒಬ್ಬನೇ ಇರುವನ ಮತ್ತು ವ್ಯಾಪಕನಾಗಿರುವನು ಪೃಥ್ವಿ ಮೊದಲಾಗಿ ನಾಲ್ಕು ಭೂತಗಳಲ್ಲಿ ಆಕಾಶವಿದ್ದೇ ಇರುವದು ಅದರಂತೆ ಆಕಾಶದಲ್ಲಿ ಬ್ರಹ್ಮನು ಘನ ಸಾಂದ್ರನಾಗಿ ತುಂಬಿರುವನು ಒಳ್ಳೆ ವಿಚಾರ ಮಾಡಿ ನೋಡಲು ಆಕಾಶ ಹಾಗು ಬ್ರಹ್ಮರಲ್ಲಿ ಭಿನ್ನತೆಯಿಲ್ಲೆಂದು ತಿಳಿಯುವದು ಆಕಾಶವು ಉಪಾಧಿಯುಕ್ತವಾಗಿ ಬ್ರಹ್ಮನು ನಿರುಪಾಧಿಕನಾಗಿ ಇರುವರು ಉಪಾಧಿ ಹಾಗು ಭಾಸ ರಹಿತನಾದವನೇ ಬ್ರಹ್ಮನು ಆಕಾಶವೂ ಅಂತೆಯೇ ಇದೆ- ವಿಚಾರದಿಂದ ನಾಶ ರಹಿತವಾದದ್ದನ್ನು ಅನುಮಾನದ ಮಟ್ಟಿಗೆ ತಂದು ಬಿಡಬೇಕು ಪರಮಾತ್ಮನು ನಿರಾಕಾರನು ಇದೇ ಸಾರವೆನ್ನಿಸುವದು ಇನ್ನು ' ನಾನು ಯಾರು? ' ಎಂಬ ಬಗೆಗೆ ವಿಚಾರ ಮಾಡಿನೋಡಬೇಕು. ದೇಹಾಂತ ಸಮಯದಲ್ಲಿ ವಾಯುವು ಶರೀರದಿಂದ ಹೊರಟು ಹೋಗುವದು ಇದನ್ನು ತಿಳಿಯಬೇಕಾದರೆ ಕ್ಷಣಹೊತ್ತು ಶ್ವಾಸ ನಿರೋಧಿಸಿ ಅನುಭವ ಪಡೆಯಬೇಕು ಉಸುರು ಕಟ್ಟಿದ ಕೂಡಲೆ ಶರೀರವು ಬಿದ್ದು ಹೋಗುವದು. ಆ ಬಳಿಕ ಅದಕ್ಕೆ " ಹೆಣ "ವೆಂದೆನ್ನುವರು ಆ ಹೆಣದಲ್ಲಿ ಕರ್ತೃತ್ವವೇನೂ ಇರುವದಿಲ್ಲ ದೇಹವನ್ನು ಬಿಟ್ಟು ವಾಯುವು, ವಾಯುವನ್ನು ಬಿಟ್ಟು ದೇಹವು ಇವು ಏನನ್ನೂ ಮಾಡಲಿಕ್ಕೆ ಸಮರ್ಥವಾಗುವದಿಲ್ಲ. ಮೇಲೆ ನೋಡಿದ ಮಾತ್ರಕ್ಕೆ ಮನುಷ್ಯನು ಕಾಣುವನು ಆದರೆ ವಿಚಾರ ಮಾಡಲು ದೇಹವು ಇದೊಂದು ಪಂಚ ಭೂತಗಳಿಂದ ಕೂಡಿದ ಗಂಟಾಗಿರುವದೆಂದು ತಿಳಿಯುವದು ಅಂದರೆ ಅದು ನಶ್ವರವೆಂದು ಕಂಡು

ಬರುವದು ಅಲ್ಲದೆ ನಿರ್ಗುಣ ಬ್ರಹ್ಮನ ಹೊರತು ಎಲ್ಲಿಯೂ ಏನೊಂದೂ ಇಲ್ಲೆಂದು ತಿಳಿದಲ್ಲಿ ಅಭೇದ ಭಕ್ತಿಯ ಲಕ್ಷಣವು ಕಂಡು ಬರುತ್ತದೆ ' ನಾನೇ ಕರ್ತೃವು ' ಎಂದು ತಿಳಿದರೆ ನನ್ನ ಇಚ್ಛೆಗೆ ಅನುಸರಿಸಿ ಕ್ರಿಯೆಗಳುಂಟಾಗ ಬೇಕಲ್ಲವೇ ? ಆದರೆ ನನ್ನ ಇಚ್ಛೆಯ ಪ್ರಕಾರ ಏನೂ ಉಂಟಾಗುವದಿಲ್ಲ ಆದ್ದರಿಂದ ' ನಾನೇ ಕರ್ತೃವು ' ಎಂಬದು ಸರಿಯಲ್ಲ ನಾನು ಕರ್ತನಾಗಿರದಿದ್ದರೆ ಭೋಕ್ತಾ ನಾರು? ಇದನ್ನು ವಿಚಾರಿಸ ಬೇಕು ಅವಿಚಾರದಿಂದ ತಿಳಿಯುವದಿಲ್ಲ ವಿಚಾರ ಮತ್ತು ಅವಿಚಾರಗಳು ಕ್ರಮವಾಗಿ ಬೆಳಕು ಕತ್ತಲೆಗಳಂತಿರ ವವು

ತಾತ್ಪರ್ಯವೇನೆಂದರೆ— ವಿಕಾರ, ಅವಿಕಾರಗಳು ಒಂದೇ ಅಲ್ಲ ವಿಚಾರವಿಲ್ಲದಲ್ಲಿ ಏನೊಂದೂ ನಡೆಯುವದಿಲ್ಲ ಸತ್ಯ ವಸ್ತುವಿನಲ್ಲಿ ಅನುಮಾನಕ್ಕೆ ಆಸ್ಪದವಿಲ್ಲ ಪ್ರತ್ಯಯವೆಂದರೆ ನ್ಯಾಯ, ಅಪ್ರತ್ಯಯವೆಂದರೆ ಅನ್ಯಾಯ ಹುಟ್ಟು ಗುರುಡನಿಂದ ರತ್ನಗಳ ಪರೀಕ್ಷೆಯು ಅಸಾಧ್ಯವು ಒಟ್ಟನಮೇಲೆ 'ನಾನು ಕರ್ತೃವು' 'ನಾನು ಭೋಕ್ತನು' ಇತ್ಯಾದಿ ಮಾತುಗಳು ಮಿಥ್ಯವಾದವುಗಳು ಆತ್ಮನು ನಿರ್ವಿಕಾರನು ಹಾಗು ನಿರ್ಗುಣನು ಇಂಥ ಆತ್ಮನಲ್ಲಿ ಅನನ್ಯವಾದ ಅಭೇದ ಭಕ್ತಿಯನ್ನು ಇಟ್ಟಿರುವ ಭಕ್ತನು ಧನ್ಯನೆಂದೂ ಅವನೇ ಪರಮ ಪುರುಷನೆಂದೂ ಹೇಳಬಹುದು

ಶ್ರೀ ರಾಮ ॥ ೭. ಪ್ರತ್ಯಯ ವಿವರಣೆ ॥ ಗುರುಗಳು ಶಿಷ್ಯನನ್ನು ಕುರಿತ :—

"ಬ್ರಹ್ಮನು ನಿರ್ಮಲನು, ನಿಶ್ಚಲನು ಹಾಗು ನಿರಾಭಾಸನು ಅವನಿಗೆ ಆಕಾಶದ ದೃಷ್ಟಾಂತವೇ ಶೋಭಿಸುವದು ಆಕಾಶವೆಂದರೆ ಅವಕಾಶವುಳ್ಳದ್ದು, ವಿಸ್ತೃತವೂ ಪೊಳ್ಳೂ ಆಗಿರುವಂಥದು ಮೊದಲು ಆಕಾಶವು, ಬಳಿಕ ಅದರಲ್ಲಿ ಪದಾರ್ಥಗಳು ಅಂದರೆ ನಾಲ್ಕು ಭೂತಗಳು ಇವನ್ನು ಅನುಭವದಿಂದ ಕಂಡುಕೊಳ್ಳಬೇಕು ಅನುಭವವಿಲ್ಲದೆ ಎಲ್ಲವೂ ವ್ಯರ್ಥವು ಆಕಾಶದಲ್ಲಿ ವಾಯುವಿದ್ದಂತೆ ಘಟಾಕಾಶದಲ್ಲಿ ಘಟಬಿಂಬವು ಅದರಂತೆ ನಿಶ್ಚಲ ಬ್ರಹ್ಮನಲ್ಲಿ ಚಂಚಲ ಆತ್ಮವು ಎರಡೂದರಲ್ಲಿ ಭೇದವುಂಟು. ಭೂತಗಳೆಂದರೆ ಎಷ್ಟು ಆಗುವವೋ ಅವೆಲ್ಲವು ಹೋಗುವವು. ಇದರಂತೆ ನಾವು ನೋಡುವವೆಲ್ಲವೂ ನಾಶವಾಗಿ ಹೋಗುವವು ಬರುಹೋಗುವಿಕೆಯೇ ಚಂಚ

ಲವು ಭೂತವೆಂದರೆ ಅವಿದ್ಯೆಯ ಕಾರ್ಯವು ಅದು ಜಡವು ಆತ್ಮವು ಚಂಚಲವು ಜಡವು ಕರ್ಪೂರವಾದರೆ ಆತ್ಮವು ಅಗ್ನಿಯು ಅಂದರೆ ಆತ್ಮ ನಿಂದ ಅನಾತ್ಮವು ಸುಡುವದು ಮತ್ತು ತಾನೂ ಕೂಡಲೇ ಸುಟ್ಟು ಹೋಗುವದು ಆಕಾಶ ಮತ್ತು ಬ್ರಹ್ಮ ಇವೆರಡರ ಜಾತಿಯು ನಿಶ್ಚ ಲವು ಇವುಗಳಿಂದ ಕ್ರಮದಿಂದ ಉಂಟಾಗುವ ವಾಯು ಹಾಗು ಆತ್ಮ ಇವುಗಳ ಜಾತಿಯು ಚಂಚಲವು ಪರೀಕ್ಷಕರು ಇದನ್ನು ಸರಿಯಾಗಿ ತಿಳಿ ಯುವರು ಜಡವು ಅನೇಕವಿರುವವು, ಆತ್ಮನು ಒಬ್ಬನೇ ಇರುವನು ಈ ತಿಳುವಳಿಕೆಯೇ ಆತ್ಮಾನಾತ್ಮವಿವೇಕವು ಆತ್ಮ(ಅಂತರಾತ್ಮ)ನಿಂದಲೇ ಜಗತ್ತು ಸಾಗುವದು ಆದ್ದರಿಂದಲೇ ಆವನಿಗೆ ಜಗನ್ನಾಯಕನೆಂದು ಹೆಸರು ಜಡ ಅನಾತ್ಮವೂ ಆತ್ಮನಿಂದ ಚೇತರಿಸಿಕೊಳ್ಳುವದು ಇಡೀ ಬ್ರಹ್ಮಾಂಡವು ಸರ್ವಾತ್ಮನಿಂದ ಚೇತರಿಸಿಕೊಳ್ಳುವದು ಅಂದರೆ ಆತ್ಮಾ ಸರ್ವಾತ್ಮರು ಕೂಡಿ ಚಂಚಲನೇ ಹೊರತು ನಿಶ್ಚಲವಲ್ಲ ನಿಶ್ಚಲನೂ, ವಿಮಲನೂ, ನಿರ್ಭ್ರಮನೂ ಆಗಿರುವ ಬ್ರಹ್ಮನೇ ಪರಬ್ರಹ್ಮನು ಜಡ ಮತ್ತು ಚಂಚಲಗಳ ವಿಚಾರವನ್ನು ಮೊದಲು ಮಾಡಬೇಕು ಈ ವಿಚಾ ರಕ್ಕೂ ಆತ್ಮಾನಾತ್ಮವಿವೇಕವೆನ್ನುವರು ಬಳಿಕ ಸಾರವಾದ ಬ್ರಹ್ಮ ಹಾಗು ಅಸಾರವಾದ ಜಡ ಹಾಗು ಚಂಚಲ ಇವುಗಳ ಬಗೆಗೆ ವಿಚಾರಮಾಡಿ ದೃಶ್ಯ ಭಾಸಾತ್ಮಕ ಪ್ರಕೃತಿಯನ್ನು ದೂರಮಾಡಿಕೊಳ್ಳಬೇಕು ವಿಚಾರ ದಿಂದ ಪ್ರಕೃತಿಯು ದೂರಾಗುವದು ಅದು ದೂರಾಯಿತೆಂದರೆ ದೃಶ್ಯವು ಸರಿದು ಹೋಗುವದು ಮತ್ತು ಚಂಚಲ ಆತ್ಮವು ಅಧ್ಯಾತ್ಮ ಶ್ರವಣದಿಂದ ನಿಶ್ಚಲನಲ್ಲಿ ಲೀನವಾಗುವದು ಅರ್ಥ ವಿಸ್ತಾರವಾದಂತೆ ಅಂತರಾತ್ಮನು ವಿಸ್ತೃತಗೊಳ್ಳುವನು ಅರ್ಥವಿಳಿದಂತೆ ಅವನು ಭೂಮಂಡಲಕ್ಕಿಳಿಯುವನು ಅರ್ಥಕ್ಕನುಸರಿಸಿ ಆತ್ಮನು ಇರುವನು. ಆತನು ಎಳೆದತ್ತ ಬರುವನು ಅನುಮಾನಾತ್ಮಕ ಅರ್ಥದಿಂದ ಅವನು ಸಂದೇಹದಲ್ಲಿ ಬೀಳುವನು

ನಿಸ್ಸಂದಿಗ್ಧವಾದ ಅರ್ಥ ನಡೆಯಿತೆಂದರೆ ಆತ್ಮನು ನಿಸ್ಸಂದೇಹವುಳ್ಳವನಾಗು ವನು ರಸಭರಿತ ಅರ್ಥದಿಂದ ಶ್ರೋತೃಗಳು ತದ್ರೂಪತೆ ಹೊಂದುವರು ನೀಚವಾದ ಅರ್ಥದಿಂದ ಹೀನತೆ ಹೊಂದುವರು. ಸಂಗದಿಂದ ರಂಗವು

ಪರಿವರ್ತಿಸುವದು ಅದರಂತೆ ಆತ್ಮನ ಬಗೆಗೂ ಅರಿತುಕೊಳ್ಳಬೇಕು ಈ ಎಲ್ಲ ವಿವರದಿಂದ ಉತ್ತಮ ಮಾರ್ಗಾವಲಂಬಿಗಳ ಸಂಗ ಬಳಿಸಬೇಕೆಂದಾಗುವದು. ಶ್ರೇಷ್ಠವಾದ ಪಕ್ವಾನ್ನಗಳ ವರ್ಣನೆ ನಡೆಯಲು ಮನಸ್ಸು ತದಾಕಾರ ಹೊಂದುವದು, ಸ್ತ್ರೀ ಸೌಂದರ್ಯ ವರ್ಣನೆ ನಡೆಯಲು ಮನಸ್ಸು ಕಾಮನೆಯಲ್ಲಿಯೇ ತಲ್ಲೀನತೆ ಹೊಂದುವದು ಪದಾರ್ಥಗಳ ವರ್ಣನೆಯನ್ನು ಅದೆಷ್ಟು ಮಾಡಿದರೂ ತೀರುವದಿಲ್ಲ ಆದರೆ ಅವುಗಳ ತಾತ್ಪರ್ಯವನ್ನು ಮಾತ್ರ ಹೃದಯದಲ್ಲಿ ಅರಿತುಕೊಳ್ಳಬೇಕು ಕಂಡದ್ದನ್ನೂ ಕೇಳಿದ್ದನ್ನೂ ಚಿತ್ತವು ತನ್ನಲ್ಲಿ ಸ್ಥಿರಗೊಳಿಸಿಕೊಳ್ಳುವದು ಆದ್ದರಿಂದಲೇ ವಿಚಾರವಂತರು ತಮ್ಮ ಹಿತಾಹಿತಗಳನ್ನನುಲಕ್ಷಿಸಿ ವರ್ತಿಸುವರು ಒಟ್ಟಿನ ಮೇಲೆ ಹೇಳುವದೇನಂದರೆ ನಿಶ್ಚಲ ದೇವನೊಬ್ಬನನ್ನೇ ಶೋಧಿಸಬೇಕು ಉಳಿದ ಎಲ್ಲವನ್ನು ಬಿಡಬೇಕು ಇಂತಾದರೆ ಮಾತ್ರ ನಿಜವಾದ ಮರ್ಮ ಗೊತ್ತಾಗುವದು ದೇವನಿಂದಲೇ ಸರ್ವ ಸುಖಗಳು ಉದಿತವಾಗುವವು ಇದನ್ನರಿಯದೆ ಬಹು ಜನರು ಸುಖಕ್ಕಾಗಿ ಮರುಳಾಗಿ ಸುಖವನ್ನುಂಟು ಮಾಡುವ ದೇವನನ್ನು ಮರೆತು ಬಿಡುವರು ಇಷ್ಟೇ ಅಲ್ಲ ಅವರು ಜೀವಮಾನವಿರುವವರೆಗೂ ಇಂಥ ತಪ್ಪುಗಳನ್ನು ಮಾಡುವರು ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಗೀತೆಯಉಪದೇಶ ನೀಡುವ ಕಾಲದಲ್ಲಿ —"ಎಲ್ಲವನ್ನೂ ಬಿಟ್ಟು ನನ್ನೊಬ್ಬನನ್ನೇ ಶೋಧಿಸು" ಎಂದು ಬೋಧಿಸಿರುವನು ಆದರೆ ಅದೆಷ್ಟೋ ಜನರು ದೇವನ ಆ ಆದೇಶವನ್ನು ಮಾನ್ಯ ಮಾಡದೆ ಕಷ್ಟಕ್ಕೊಳಗಾಗುವರು ನಿಶ್ಚಲ ದೇವನನ್ನು ಬಿಟ್ಟು ಚಂಚಲ ಸುಖದ ಮಬ್ಬಿಗೆ ಬಿದ್ದು ನಿಜವಾದ ಸುಖಕ್ಕೆ ಎರವಾಗುವರು ಇದು ಹುಚ್ಚುತನವು ಅಜ್ಞರು ಇನ್ನೊಬ್ಬರ ನಾದಕ್ಕೆ ಮರುಳಾಗಿ 'ಸುಖ''ಸುಖ'ವೆಂದು ಕನವರಿಸುತ್ತ ದುಖವನ್ನೇ ಹೊಂದುವರು ಬುದ್ಧಿವಂತರು ಹಾಗೆಂದಿಗೂ ಮಾಡಕೂಡದು ನಿಜವಾದ ಸುಖ ಪಡೆಯುವದಕ್ಕಾಗಿ ಯತ್ನಿಸಬೇಕು ಆದರ ಪ್ರಾಪ್ತಿಗಾಗಿ ದೃಶ್ಯವನ್ನು ದಾಟಿ ಬ್ರಹ್ಮಾಂಡದ ಆಚೆಗಿರುವ ದೇವನನ್ನು ಹುಡುಕಬೇಕು ಸುಖ ಸ್ವರೂಪ ದೇವನಾದ ನಿಶ್ಚಲ ಪರಬ್ರಹ್ಮನು ಕೈಗೆ ದೊರೆತ ಮೇಲೆ ಯಾವ ಸುಖಕ್ಕೂ ಕೊರತೆಯಾಗಲಾರದು ಆದರೆ ಅಜ್ಞಾನಿಗಳು ವಿಚಾರವಿಲ್ಲದೆ ಸಿಕ್ಕ ಸಿಕ್ಕತ್ತ ಸುಖಕ್ಕಾಗಿ ಓಡಿಹೋಗುವರು. ವಿವೇಕದ ಫಲವೇ

**ಸುಖವು** ಅವಿವೇಕದ ಫಲವೇ ದುಃಖವು. ಈ ಎರಡರಲ್ಲಿ ನಿನಗೆ ಸರಿ ಕಂಡದ್ದನ್ನು ಸ್ವೀಕರಿಸು ನಿಜವಾದ ಕರ್ತಾರನನ್ನು ಕಂಡು ತಿಳಿಯುವದೇ ವಿವೇಕವು ವಿವೇಕವನ್ನು ಬಿಟ್ಟು ಉಳಿದವೆಲ್ಲವೂ ದುಃಖಗಳು. ಕರ್ತಾರನನ್ನು ಗುರುತಿಸುವಲ್ಲಿ ಸ್ವಹಿತವೇ ಇರುವದು ಆದ್ದರಿಂದ ಆ ಕರ್ತೃವಿನಿಂದ ತಪ್ಪಿಸಿಕೊಳ್ಳಬಾರದು "

ಶ್ರೀ ರಾಮ ‖ ೮ ಕರ್ತೃ ನಿರೂಪಣೆ ‖ ಈ ಚರಾಚರ ಸೃಷ್ಟಿ ಹಾಗು ಬ್ರಹ್ಮಾಂಡಗಳ ಕರ್ತೃವು ಯಾರು? ಎಂದು ಶಿಷ್ಯನು ಮಾಡಿದ ಪ್ರಶ್ನೆಗೆ ಹಲವರು ತಮ್ಮ ತಮ್ಮ ಸಂಪ್ರದಾಯಗಳಿಗನುಸರಿಸಿ ಅಭಿಮಾನಗಳಿಂದ ಕೊಡುವ ಉತ್ತರಗಳು –

"ಕರ್ತಾರನಾರು? ಕರ್ತಾರನಾರೆಂದರೇನು? ಕರ್ತಾರನು ದೇವನೆಂದು ತಿಳಿದರೆ ಯಾವ ದೇವನು? ಈ ಪ್ರಶ್ನೆಗಳಿಗೆ ಹಲವರು ದೇವನಲ್ಲಿ ನ್ಯೂನಾಧಿಕ್ಯತೆಗಳನ್ನಿಟ್ಟು ಅಭಿಮಾನದಿಂದ ನುಡಿಯುವರು, ಕೆಲವರು ಗಣಪತಿಯೇ ಕರ್ತಾರನೆಂದು ಹೇಳುವರು, ಕೆಲವರು ಶಾರದೆಯೇ ಸರ್ವ ಕರ್ತ್ರಿಯು ಎನ್ನುವರು, ಇದರಂತೆ ಇನ್ನೂ ಹಲಕೆಲವರು ಬೇರೆ ಬೇರೆ ದೇವತೆಗಳಹೆಸರನ್ನು ಸೂಚಿಸುವರು. ಭೈರವ, ಖಂಡೇರಾಯ, ವೀರದೇವ, ಭಗವತಿ, ನರಹರಿ, ಬನಶಂಕರಿ, ನಾರಾಯಣ, ಶ್ರೀ ರಾಮ, ಶ್ರೀ ಕೃಷ್ಣ, ಕೇಶವರಾಜ, ಪಾಂಡುರಂಗ, ಶ್ರೀರಂಗ ಸೂರ್ಯ ಅಗ್ನಿ, ಲಕ್ಷ್ಮೀ, ಮಾರುತಿ ಧರಿತ್ರಿ, ಭಾರ್ಗವ, ವಾಮನ, ಪರಮಾತ್ಮ, ಕಾರ್ತಿಕಸ್ವಾಮಿ, ರೇವಣ್ಣ, ಬಸವಣ್ಣ, ವೆಂಕಟೇಶ, ದತ್ತ, ಗುರು, ವಿಷ್ಣು, ಬ್ರಹ್ಮ ಶಂಕರ, ಪರ್ಜನ್ಯ, ವಾಯು, ಮಾಯಾ, ಜೀವ, ಪ್ರಾರಬ್ಧ, ಪ್ರಯತ್ನ, ಸ್ವಭಾವ ಈ ಪ್ರಕಾರವಾಗಿ ಪ್ರತಿಯೊಂದರ ಬಗೆಗೆ ಅಭಿಮಾನವುಳ್ಳವರು ತಮ್ಮ ತಮ್ಮ ಉಪಾಸ್ಯಗಳಿಗೆ ಸೃಷ್ಟಿಯ ಕರ್ತೃತ್ವವನ್ನಿಟ್ಟು ಹೇಳಹತ್ತುವರು. ಅವರಲ್ಲಿ ಮ್ಹಸೋಬಾ, ಝೋಟಿಂಗ, ಮುಂಜ್ಯಾ ಮೊದಲಾದ ದೇವತೆಗಳ ಅಭಿಮಾನಿಗಳೂ ಮಾತಾಡಹತ್ತುವರು. ಕೆಲವರು 'ನಿರ್ಗುಣ ದೇವನು ಕರ್ತಾರನಲ್ಲ' ಎಂದು ಪ್ರತಿಪಾದಿಸುವರು, ಕೆಲವರು 'ಕರ್ತಾರನಾರೋ ಏನೋ' ಎಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳುವರು, 'ಕರ್ತೃವಾರು' ಎಂಬ ಈ ಪ್ರಶ್ನೆಯ ಬಗೆಗೆ ಅಲ್ಲಿ ಸಂತೆಯೇ ನೆರೆದಂತಾಗುವದು. ಪ್ರತಿಯೊಬ್ಬನು

ತನ್ನ ಮನಸ್ಸು ಒಪ್ಪಿದ ದೇವನೇ ಕರ್ತೃವೆಂದು ಹೇಳಹತ್ತುವನು ಈ ಪ್ರಕಾರ ಉಂಟಾದ ಗೊಂದಲವನ್ನು ಬುದ್ಧಿವಂತರು ಅನುಭವ ಪ್ರಮಾಣದಿಂದ ವಿಚಾರಿಸಿ ಗೊತ್ತು ಮಾಡಬೇಕಾಗುವದು ಇದು ಇರಲಿ

ಇನ್ನು ಅನುಭವದ ವಿಚಾರವನ್ನು ಹೇಳುವೆವು ಕರ್ತಾರನಿಂದ ಉಂಟಾದವೆಲ್ಲ ಆ ಕರ್ತಾರನ ತರುವಾಯವೇ ಹುಟ್ಟಿದವುಗಳು ಅಂದರೆ ಆ ಕರ್ತಾರನಕಿಂತ ಪೂರ್ವದಲ್ಲಿ ಅವುಗಳ ಉತ್ಪತ್ತಿ ಯಿದ್ದಿರಲಿಲ್ಲವೆಂಬದು ನಿಜವು ಕರ್ತಾರನು ಮೊದಲು, ನಂತರ ಕಾರ್ಯವು ಇದನ್ನು ಎಲ್ಲರೂ ಒಪ್ಪುವರು ಕರ್ತಾರನಿಂದ ಮಾಡಿದವೆಲ್ಲವೂ ಪಂಚಭೂತಾತ್ಮಕಗಳು ಬ್ರಹ್ಮಾದಿ ಸಕಲ ದೇವತೆಗಳೂ ಪಂಚಭೌತಿಕರಾಗಿಯೇ ಇರು ವರು ಅಂದ ಮೇಲೆ ಈ ಬ್ರಹ್ಮಾದಿ ದೇವತೆಗಳಿಂದ ಪಂಚಭೌತಿಕ ಸೃಷ್ಟಿಯ ರಚನೆ ಸಾಧ್ಯವಿಲ್ಲ ಎಂದಂತಾಯಿತು

ಇನ್ನು ಪಂಚಭೌತಿಕ ಬ್ರಹ್ಮಾಂಡವನ್ನು ಬದಿಗಿರಿಸಿ ನಂತರ ಕರ್ತಾರನಾರೆಂಬುದನ್ನು ನೋಡೋಣ ಪಂಚಭೌತಿಕವು ಇದೊಂದು ಕಾರ್ಯವು ಅಂದ ಮೇಲೆ ಈ ಕಾರ್ಯಕರ್ತಾರನು ಪಂಚಭೌತಿಕನಲ್ಲದವನಿರಬೇಕೆಂಬದು ಸ್ಪಷ್ಟವು ಪಂಚಭೂತಗಳಿಂದ ಹೊರತಾದ ನಿರ್ಗುಣ ಹಾಗು ನಿರ್ವಿಕಾರವಾದ ಬ್ರಹ್ಮನೊಬ್ಬನ ಇರುವನು ಆದರೆ ಆ ನಿರ್ವಿಕಾರನಿಗೆ ಯಾವ ವಿಕಾರವನ್ನೂ ರೂಪಿಸಲು ಬರುವದಿಲ್ಲ ಇನ್ನು ಕರ್ತೃತ್ವವನ್ನು ಯಾರಲ್ಲಿ ಒಪ್ಪಬೇಕು? ಸಗುಣ–ನಿರ್ಗುಣ ಇವೆರಡರಲ್ಲಿ ಕಾರ್ಯಕ್ಕಿಂತ ಮೊದಲೇ ಸಗುಣವಿಂದ ಸಗುಣವು ಗಿರುವದರಿಂದ ಸಗುಣ ಕರ್ತೃವೆಂದು ಹೇಳಲು ಬರಲಾರದು ನಿರ್ಗುಣನಿಗೆ ಕರ್ತವ್ಯವನ್ನು ಹೊಂದಿಸುವದು ಎಂದೂ ಸರಿಯಾಗಲಾರದು ಇದರಿಂದ ಕರ್ತಾರನು ಇವನೇ ಎಂದು ಗೊತ್ತಾಗುವದಿಲ್ಲ, ಅನುಮಾನ ಅನುಭವಗಳಿಂದ ತಿಳಿಯಬಹುದು ಸೃಷ್ಟಿಯು ದೃಶ್ಯವೆಂದರೆ ಮಿಥ್ಯವೆಂದು ಸಿದ್ಧಾಂತವಿದೆ ಆದ್ದರಿಂದ ಮಿಥ್ಯವಾದ ಸೃಷ್ಟಿಯ ಕರ್ತಾರನಾವನೆಂದು ಏಕೆ ವಿಚಾರಿಸಬೇಕು? ದೃಶ್ಯವು ಸತ್ಯವಲ್ಲ, ಮಿಥ್ಯವಾಗಿರುವದು ಎಂದ ಮೇಲೆ ಕರ್ತಾರನು ಅದರಲ್ಲಿ ಇರಲಾರನು ಇನ್ನು ಸೃಷ್ಟಿಯು ಸ್ವಯಂಸಿದ್ಧವು ಇದಕ್ಕೆ ಕರ್ತಾರನು ಯಾವನೂ ಇರುವದಿಲ್ಲೆಂಬ ಅನುಭವವು ಅಂತರ್ಯಾಮಿದಿಂದ ಸೂಸುವದು ಇನ್ನು ಇದೆ

ಲ್ಲವೂ ಇಷ್ಟಕ್ಕೇ ಇರಲಿ ಸೃಷ್ಟಿಯ ಕರ್ತಾರನನ್ನು ವಿವೇಕದಿಂದ ಕಂಡು ಹಿಡಿಯಬೇಕಾಗುವದು ಈ ವಿಷಯಕ್ಕೆ ಹಲವು ಮತ ಸಾಂಪ್ರದಾಯಿಗಳ ಉತ್ತರಗಳೆಲ್ಲ ಈ ವಿವರದಿಂದ ಸರಿಯಲ್ಲವೆಂದಾಯಿತು.' ಎಂದು ಗುರುಗಳು ಹೇಳಿ ಮುಂದೆ-ದೇಹದಲ್ಲಿ ಸುಖದುಃಖಗಳ ಭೋಕ್ತಾರನಾರು? ಎಂಬುದನ್ನು ನಿರೂಪಣ ಮಾಡುವರು,

ಶ್ರೀ ರಾಮ ॥ ೯ ಆತ್ಮ ವಿವರಣೆ ॥ ಗುರುಗಳು ಶಿಷ್ಯನಿಗೆ—

"ಆತ್ಮನು ಶರೀರಯೋಗದಿಂದ ಉದ್ವೇಗ, ಚಿಂತೆಗಳನ್ನು ಹೊಂದುವನು ಶರೀರ ಯೋಗದಿಂದಲೇ ಆತ್ಮನ ಇರುವಿಕೆ ಎಂಬದು ಪ್ರಸಿದ್ಧವು ಶರೀರವು ಅನ್ನವನ್ನು ಸ್ವೀಕರಿಸದಿದ್ದರ ಆತ್ಮನು ಆ ಶರೀರದಲ್ಲಿ ಇರಲಾರನು ಶರೀ ಕ್ಕೆ ಆತ್ಮನಿಂದಲೇ ಚೇತನವುಂಟು ದೇಹ ಮತ್ತು ಆತ್ಮನನ್ನು ಅಗಲಿಸಿದರೆ ಏನೊಂದು ಕಾರ್ಯವಿಲ್ಲ ಉಭಯಯೋಗದಿಂದಲೇ ಕಾರ್ಯವೊದಗುವದು ದೇಹಕ್ಕೆ ಸ್ವಂತವಾಗಿ ಚೇತನೆಯಿಲ್ಲ ಆತ್ಮನಿಗೆ ಸ್ವಂತವಾಗಿ ಭಾರ ಮುಂತಾದವನ್ನು ಎತ್ತುವದಾಗುವದಿಲ್ಲ ಸ್ವಪ್ನದಲ್ಲಿ ಉಂಡರೆ ಹೊಟ್ಟೆ ತುಂಬುವದಿಲ್ಲ ಆತ್ಮನು ಸ್ವಪ್ನಾವಸ್ಥೆಯಲ್ಲಿ ಸೇರಿರುವಾಗ ಶರೀರವು ಹಾಗೇ ಬಿದ್ದಿರುವದು ಆದರೆ ಆತ್ಮನು ಆ ಬಿದ್ದಿರುವ ದೇಹದಲ್ಲಿಯೇ ಇರುವನು ಇದರ ಚಮತ್ಕಾರವು ಆತ್ಮನು ಸ್ವಪ್ನಾವಸ್ಥೆಯಲ್ಲಿದ್ದಾಗ ಶರೀರವು ಬಿದ್ದಿರುವಾಗ ನಿರೀಕ್ಷಿಸಲು ಕಂಡು ಬರುವದು ಗಾಢ ನಿದ್ರೆಯಲ್ಲಿ ಶರೀರಕ್ಕೆ ತಗಣಿ-ಚಿಕ್ಕಾಡುಗಳು ದಂಶ ಮಾಡಲು ಕೈಯಿಂದ ತುರಿಸಿಕೊಳ್ಳುವದು, ಕೆಮ್ಮು ಬಂದರೆ ಖೇಕರಿಸುವದು, ಇತ್ಯಾದಿ ಕ್ರಿಯೆಗಳನ್ನು ನೋಡಿದರೆ ಆಗಲೂ ಕೂಡ ಆತ್ಮನು ದೇಹದಲ್ಲಿದ್ದೇ ಇರುವನೆಂದು ಸ್ಪಷ್ಟವಾಗುವದು ಶರೀರವು ಅನ್ನರಸದಿಂದ ಬೆಳೆಯುವದು, ಶರೀರ ಬೆಳೆದ ಪ್ರಮಾಣದಿಂದ ವಿಚಾರಗಳುಂಟಾಗುವವು. ಆ ನಂತರ ಮುಪ್ಪಿನಲ್ಲಿ ಶರೀರ ಹಾಗು ವಿಚಾರಗಳ ಬೆಳೆಯುವಿಕೆ ಕಟ್ಟಾಗುವದು- ಆತ್ಮನು ಶರೀರದಲ್ಲಿ ಇದ್ದುಕೊಂಡು ಉನ್ಮತ್ತದಾಯಕ ಪದಾರ್ಥಗಳನ್ನು ದೇಹ ಮುಖಾಂತರ ಸ್ವೀಕರಿಸುವನು ದೇಹಯೋಗದಿಂದ ಅವು ಮರವಿಗೀಡಾಗುವನು ಎಚ್ಚರದಪ್ಪುವನು ದೇಹದಲ್ಲಿ ವಿಷಪ್ರವೇಶ

ವಾಗಲು ,ಅವನು ಅಲ್ಲಿಂದ ಸಾವಕಾಶವಾಗಿ ಸರಿದೇ ಬಿಡುವನು. ದೇಹ ಬೆಳೆಯಲಿ, ಕೊರಗಲಿ, ನಾಶವಾಗಲಿ ಇವೆಲ್ಲ ದೇಹವಿಕೃತಿಗಳಾದರೂ ಆತ್ಮನು ಬೆಳೆಯು ವದಿಲ್ಲ, ಕೊರಗುವದಿಲ್ಲ, ನಾಶವಾಗುವದಿಲ್ಲ ಅವನಿಗೆ ಎಲ್ಲವು ಅಷ್ಟೇ ಆಗಿರುವವು ಶರೀರ ಬೆಳೆಯುವದು, ಕುಗ್ಗುವದು, ಹೋಗುವದು, ಬರುವದು ಸುಖಪಡುವದು, ದು'ಖಿಸುವದು ಮುಂತಾದ ವೆಲ್ಲವೂ ದೇಹದ ಗುಣಗಳು ಆದರೂ ದೇಹದಲ್ಲಿದ್ದ ಆತ್ಮನಿಗಾದರೂ ಇವೆಲ್ಲವುಗಳ ಸಂಬಂಧವು ಇದ್ದೇ ಇರುವದು ಇರುವೆಯ ಹುತ್ತು ನೋಡು ವದಕ್ಕೆ ಪೊಳ್ಳು ಕಾಣುವದು ಆದರಲ್ಲಿ ಏನೂ ಕಾಣದಿದ್ದರೂ ಅದರೊಳ ಗೆಲ್ಲ ಇರುವಯ ಮಾರ್ಗಗಳೇ ಇರುವವು, ಆ ಹುತ್ತಿನಂತೆಯೇ ಈ ಶರೀರವಿರುವದು ಶರೀರದಲ್ಲಿ ನಾಡಿನರಗಳು ತಳುಕುಗೊಂಡಿರುವವು ಪ್ರತಿಯೊಂದು ನಾಡಿಯು ಪೊಳ್ಳಾಗಿರುವದು ಪ್ರಾಣಿಯು ಅನ್ನ-ನೀರು ಸೇವಿಸುವದು ಆದರಿಂದ ಅನ್ನರಸವುಂಟಾಗುವದು ಅದಕ್ಕೆ ಶ್ವಾಸೋ ಚ್ಛ್ವಾಸದಿಂದ ವಾಯು ಸಂಚಲನೆ ಕೂಡುವದು. ನಾಡಿಯ ದ್ವಾರದಿಂದ ರಸವು ಚಲಿಸುವದು ಮತ್ತು ಆ ರಸದಲ್ಲಿ ವಾಯು-ಮಿಶ್ರವಾಗಿ ಅದುಚಲ ವಿಚಲತೆಯನ್ನುಂಟು ಮಾಡುವದು ಅದರ ಜೊತೆಗೇ ಆತ್ಮನೂ ಚಲಿಸು ವನು ನೀರಡಿಕೆಯ ಬಾಧೆಯಾಗಲು ಆತ್ಮವು ಶರೀರವನ್ನು ನೀರಿದ್ದಲ್ಲಿಗೆ ಓಡಹಚ್ಚುವದು ತಾತ್ಪರ್ಯವೆಂದರೆ ಪ್ರಸಂಗ ಬಂದಂತೆ ಆತ್ಮವು ತಾನೇ ಶರೀ ರವನ್ನು ಕಾರ್ಯಕ್ಕಾಗಿ ಪ್ರಚೋದಿಸುವದು, ಹಸಿವೆಯಾದುದನ್ನು ಆತ್ಮವೇ ತಿಳಿದುಕೊಳ್ಳುವದು ಬಳಿಕ ಶರೀರವನ್ನು ಅಡುಗೆಯ ಮನೆಯ ಕಡೆಗೆ ದೂಡಿಕೊಂಡೊಯ್ಯುವದು ಸಿಕ್ಕಸಿಕ್ಕಂತೆ ಬಾಯಿಯಿಂದ ಮಾತುಗಳನ್ನಾಡಿ ಸುವದು ಅಡುಗೆಯಾದುದನ್ನು ವಿಚಾರಿಸಿ ಮಡಿಯ-ವಸ್ತ್ರವನ್ನು ಸುತ್ತಿ ಸುವದು ಲಘು ಬಗೆಯಿಂದ ಶರೀರವನ್ನೊಯ್ದು ಮಣೆಯ ಮೇಲೆ ಕುಳ್ಳಿ ರಿಸುವದು ನೀಡುವವನ್ನು ಕಣ್ಮುಟ್ಟಿ ನೋಡುವದು, ಆಪೋಶನಕ್ಕೆ ಕೈ ಬಾಯಿಗಳನ್ನು ಪ್ರವರ್ತಿಸುವದು ತುತ್ತನ್ನು ಕೈಯಿಂದ ಎತ್ತಿಸಿಕೊಂಡು ಬಾಯಿಯಲ್ಲಿ ತುರುಕಿಸುವದು, ಹಲ್ಲುಗಳಿಂದ ನುರಿಸಹಚ್ಚುವದು, ನಾಲ ಗೆಯಿಂದ ರುಚಿಯನ್ನು ಪರೀಕ್ಷಿಸಿ ರುಚಿ ಎನ್ನಿಸಿದರೆ ಹರ್ಷ ಪಡುವದು ಉಪ್ಪು-ಕಾರಗಳ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾಗಲು ಅಡುಗೆ ಮಾಡಿ

ದಡಿದವರ ಮೇಲೆ ಹರಿಹಾಯ ಹಚ್ಚುವದು ಬಿರು ನುಡಿಗಳನ್ನು ಆಡ ಹಚ್ಚುವದು ತುಪ್ಪ ಮೊದಲಾಗಿ ಯಥೇಚ್ಛವಾಗಿ ಊಟ ಮಾಡ ಹಚ್ಚುವದು, ನಡು ನಡುವೆ ನೀರಡಿಕೆ ಹೆಚ್ಚಿಸಿ ತಂಬಿಗೆಯನ್ನು ಬಾಯಿಗೆ ಹಚ್ಚಿಸುವದು ಗುಂಟಲಿನ ದ್ವಾರದಿಂದ ಗಟಗಟನೆ ನೀರು ಕುಡಿಸುವದು. ಒಟ್ಟಿನ ಮೇಲೆ ಆರಂಭದಿಂದ ಕೂನೆಯ ವರೆಗೆ ಶರೀರದ ಎಲ್ಲ ಕ್ರಿಯೆ, ಕರ್ಮಗಳನ್ನು ಮಾಡುವ ಹಾಗೂ ಮಾಡಿಸುವ ಕರ್ತೃವೇ ಆತ್ಮನಾಗಿರುವನು ಸುಖದುಖಗಳ ಭೋಕ್ತಾರನು ಆತ್ಮನೇ ಆಗಿರುವನು ಆ ಆತ್ಮನ ವ್ಯತಿರಿಕ್ತವಾಗಿ ಶರೀರವು 'ಶವ' 'ಹೆಣ' ಎನ್ನಿಸುವದು ಮನಸ್ಸಿನ ಹಲವು ವೃತ್ತಿಗಳನ್ನು ಅರಿಯುವದು ಆತ್ಮನ ಧರ್ಮವು ಬ್ರಹ್ಮಾಂಡದಲ್ಲಿದ್ದ ಎಲ್ಲ ಪ್ರಾಣಿಗಳ ಅಂತರ್ಯದಲ್ಲಿ ಸಂಚರಿಸುವ ಆತ್ಮನು ಒಬ್ಬನೇ ಆಗಿರುವನು ಜಗತ್ತಿನಲ್ಲಿ ವ್ಯವಹರಿಸುವವನು ಜಗದಾತ್ಮನು ವಿಶ್ವದಲ್ಲಿ ಚಲಿಸುವವನು ವಿಶ್ವಾತ್ಮನು, ಎಲ್ಲವನ್ನೂ ಹಲವು ರೂಪಗಳಿಂದ ನಡೆಯಿಸುವವನು ಸರ್ವಾತ್ಮನು ಮೂಸುವದು, ರುಚಿನೋಡುವದು, ಕೇಳುವದು. ಮೃದು ಕಠಿಣಗಳನ್ನು ತಿಳಿದುಕೊಳ್ಳುವದು, ಶೀತೋಷ್ಣಗಳನ್ನರಿಯುವದು, ಹಲವು ಬಗೆಯ ಆಡಂಬರಗಳನ್ನು ಮಾಡಿಕೊಳ್ಳುವದು ಮುಂತಾದವೆಲ್ಲವನ್ನು ಆತ್ಮನೇ ಮಾಡುವನು ಇಂಥ ಧೂರ್ತ ಆತ್ಮನು ಧೂರ್ತನಿಗೇ ತಿಳಿಯುವನು ಹೊರತು ಉಳಿದವರಿಂದ ಸಾಧ್ಯವಿಲ್ಲ

ಇನ್ನು ವಾಯುವು ಅತಿ ಚಪಲತೆಯುಳ್ಳದ್ದು ಆದರೂ ಆತ್ಮನಿಗೆ ಅದು ಸರಿಯಾಗಲಾರದ ಹೇಗಂದರೆ—

ವಾಯುವು ಸುಗಂಧವಾಹಕನು. ಆವನು ಸುಗಂಧವನ್ನು ತಂದಕೂಡಲೇ ಅದೆಲ್ಲವೂ ಚಲ್ಲಾಪಿಲ್ಲಿಯಾಗಿ ಹೋಗುವದು. ಧೂಲಿಯನ್ನು ತಂದರೂ ಕೂಡ ಆ ಧೂಲಿಯ ಕಣಗಳೂ ಹಾರಿಹೋಗುವವು ಆ ವಾಯುವು ಶೀತವಾಗಿಯೂ ಉಷ್ಣವಾಗಿಯೂ ಬೀಸುವದು ಸುಗಂಧವನ್ನೂ ದುರ್ಗಂಧವನ್ನೂ ಹೊತ್ತು ತರುವದು, ಆದರೆ ಅದರ ಇವಾನವೂ ಉಳಿಯುವದಿಲ್ಲ. ಇದೇ ವಾಯುವಿನ ಸಂಗದಿಂದ ರೋಗ ಬೀಜಗಳು ಹಬ್ಬುವವು, ಭೂತಗಳು ಬರುವವು; ಹೊಗೆ-ಮಂಜುಗಳು ಇಡಿಗುವವು; ಆದರೆ ಅವಾವವೂ ವಾಯುವಿನೊಡನೆ ಬದುಕಿ ಉಳಿಯುವದಿಲ್ಲ ನಾಶವಾಗುವವು ಆದರೆ ಆತ್ಮನ

ಮುಂದೆ ಮಾತ್ರ ವಾಯುವಿನ ಆಟ ನಡೆಯಲಾರದು ಆತ್ಮವು ವಾಯು ವಿಗಿಂತ ಅತಿ ಚಪಲನು ವಾಯುವಿನ ಮಾರ್ಗದಲ್ಲಿ ಕಠಿಣ ಪದಾರ್ಥಗಳು ಅಡ್ಡ ಬಂದರೆ ವಾಯು ಆಟವೇ ನಿಂತು ಹೋಗುವದು ಆದರೆ ಆತ್ಮನ ಎದುರು ಎಂಥ ಕಠಿಣತೆ ಬಂದರೂ ಅದನ್ನು ಭೇದಿಸಿ ಆತ್ಮನು ಆಚೆಗೆ ಪಾರಾಗುವನು ಇದರ ಮೇಲಿಂದ ಆತ್ಮನು ವಾಯುವಿಗಿಂತಲೂ ಕಠಿ ಣನೂ ಅಚ್ಛೇದ್ಯನೂ ಆಗಿರುವನೆಂದು ಸ್ಪಷ್ಟವಾಗುವದು ಆತನನ್ನು ಯಾರೂ ತುಂಡರಿಸಲಾರರು ವಾಯುವು ಸ್ಥೂಲನು ಆ ಕಾರಣದಿಂದಲೇ ಅವನ ಬೀಸುವಿಕೆಯ ಸಪ್ಪಳವು ಕೇಳ ಬರುವದು ಆದರೆ ಆತ್ಮನು ಹಾಗಲ್ಲ, ಅವನು ನಿಶ್ಶಬ್ದನು ಅವನನ್ನು ನಿವಾಂತದಲ್ಲಿ ಕುಳಿತುಕೊಂಡು ವಿಚಾರದಿಂದ ನೋಡಿದರ ಮಾತ್ರ ಅಂತಸ್ಥಕ್ಕೆ ಗೋಚರನಾಗುವನು ಶರೀ ರಕ್ಕೆ ಸುಖವಾಗುವಂತೆ ವರ್ತಿದರೆ ಮಾತ್ರ ಆತ್ಮನು ಸುಖಬಡುವನು ದೇಹವನ್ನು ಹೊರತು ಪಡಿಸಿ ಏನೇ ಉಪಾಯ ಮಾಡಿದರೂ ಅದರಿಂದ ಆತ್ಮನಿಗೆ ಉಪಯೋಗವಿಲ್ಲ ಶರೀರಯೋಗದಿಂದಲೇ ವಾಸನೆಗಳು ತೃಪ್ತಿ ಹೊಂದುವವು

ಇಂತು ದೇಹ ಮತ್ತು ಆತ್ಮರ ಕೌತುಕ ವರ್ಣನೆಯನ್ನು ಎಷ್ಟು ಮಾಡಿದರೂ ಅದು ಕಡಿಮೆಯೇ ಸರಿ ದೇಹವನ್ನು ಬಿಟ್ಟರೆ ಆತ್ಮನ ಚೆಲ್ಲಾಟವಿಲ್ಲ ದೇಹ ಮತ್ತು ಆತ್ಮ ಇವೆರಡರ ಸಂಯೋಗವಾಗಲು ಘ ಟಿತಗಳೂ ಕೂಡ ಘಟಿಸುವವು ಬೇರೆಯಾದ ಮಾತ್ರಕ್ಕೆ ಎರಡರಿಂದಲೂ ಏನೂ ಒದಗಲಾರದು

ಆದ್ದರಿಂದ ವಿವೇಕಿಯಾದ ಮಾನವನು ದೇಹ ಮತ್ತು ಆತ್ಮ ಇವ ರನ್ನು ಸಂಯುಕ್ತವಾಗಿ ಗ್ರಹಿಸಿಕೊಂಡು ಬ್ರಹ್ಮಾಂಡದ ವಿಚಾರದಲ್ಲಿ ಪ್ರವೃ ತ್ತನಾಗಬೇಕು, ಅಂದರೆ ಅವನು ಮುಕ್ತನಾಗುವನು"

ಶ್ರೀ ರಾಮ || ೧೦ ಶಿಕ್ಷಣ ನಿರೂಪಣೆ || ಗುರುಗಳು ಶಿಷ್ಯನಿಗೆ—

"ಮಾಲೆಗಳಲ್ಲಿ ಹಲವು ಪ್ರಕಾರಗಳಿರುವವು ಕೇವಲ ಎಲೆಗಳಿಂದ, ಹೂವಿನಿಂದ, ಹಣ್ಣುಗಳಿಂದ ಬೀಜಗಳಿಂದ, ಕಲ್ಲಿನಿಂದ, ಕವಡಿಗಳಿಂದ, ಮಾಲೆಗಳನ್ನು ಸಿದ್ಧಪಡಿಸಿಕೊಳ್ಳುವದ ಅದರಂತೆ ಸ್ಫಟಿಕಮಾಲೆ, ಕಾಷ್ಠಮಾಲೆ, ಧಾತುಮಾಲೆ, ರತ್ನಮಾಲೆ———————ಮುಂತಾದ

ಎಷ್ಟೋ ಮಾಲೆಗಳ ಪ್ರಕಾರವಿರುವದು ಆದರೆ ಈ ಎಲ್ಲ ಮಾಲೆಗಳಲ್ಲಿ ದಾರವು ಅಂದರೆ ಸೂತ್ರವು ಸಾಮಾನ್ಯವಿರುವದು ಆ ಸೂತ್ರದಿಂದಲೇ ಮಾಲೆಯ ಸ್ವರೂಪವು ಸೂತ್ರವಿಲ್ಲದಿದ್ದರೆ ಅದರಲ್ಲಿ ಪೋಣಿಸಿದವುಗಳೆಲ್ಲ ಬಿಡಿ ಬಿಡಿಯಾಗಿ ಮಾಲೆಯೇ ಇಲ್ಲದಾಗುವದು ಮಾಲೆಗಳಿಗೆಲ್ಲ ಸೂತ್ರವೇ ತಂತುವಾಗಿರುವಂತೆ ಪ್ರಾಣಿಮಾತ್ರಕ್ಕೆಲ್ಲ ಆತ್ಮವೇ ತಂತುವಾಗಿರುವದು ಸೂತ್ರ ತಂತುವು ಮಣಿ ಮೊದಲಾದವುಗಳ ಒಳಗೆ ಮಾತ್ರ ಇರುವದು ಆದರೆ ಆತ್ಮ ತಂತುವು ಅಂತರ್ಬಾಹ್ಯವಾಗಿ ವ್ಯಾಪಿಸಿರುವದು ಸೂತ್ರ ತಂತ ವು ನಿರ್ಜೀವವು ಆದರೆ ಆತ್ಮತಂತುವು ಚಪಲವು ಆದ್ದರಿಂದ ಆತ್ಮ ತಂತುವಿಗೆ ಸೂತ್ರ ತಂತುವಿನ ದೃಷ್ಟಾಂತವು ಒಪ್ಪಲಾರದು ಬಳ್ಳಿಗಳಲ್ಲಿ ನೀರಿನ ಅಂಶವಿರುವದು, ಕಬ್ಬಿನಲ್ಲಿಯೂ ನೀರಿನ ಅಂಶವು ಇರುವದು ಅಂದ ಮೇಲೆ ಕಬ್ಬು-ಬಳ್ಳಿಗಳಲ್ಲಿಯ ರಸವೂ ವಕ್ರತೆಯೂ ಒಂದೇ ಆಗಲಾರದು ದೇಹವು ಅನಾತ್ಮವು, ಆ ದೇಹದಲ್ಲಿ ಆತ್ಮನಿರುವನು ಆದರೆ ಪರಮಾತ್ಮನು ಆತ್ಮನಿಗಿಂತಲೂ ಪರನಾಗಿ ಆಚೆಕಡೆಗಿರುವನು ಆ ಪರಮಾತ್ಮನು ನಿರಂಜನನು ಅವನಿಗೊಪ್ಪುವ ಉಪಮೆಗಳೇ ಇಲ್ಲ ಅರಸನಿಂದ ದರಿದ್ರನ ವರೆಗೆ ಎಲ್ಲರನ್ನೂ ಸರಿಸಮಾನರೆಂದೆಣಿಸಲು ಬರಲಾರದು ದೇವ, ದಾನವ, ಮಾನವ, ನೀಚಯೋನಿಜ, ಹೀನಜೀವ, ಪಾಪಿಷ್ಠ, ಪುಣ್ಯಾತ್ಮ ಮುಂತಾಗಿ ಹಲವು ಭೇದಗಳಿರುವವು ಒಬ್ಬನ ಅಂಶದಿಂದಲೇ ಜಗತ್ತು ನಡೆದರೂ ಸಾಮರ್ಥ್ಯ ಮಾತ್ರ ಬೇರೆಯಿರುವದು ಒಬ್ಬನ ಸಂಗದಿಂದ ಮೋಕ್ಷ ದೊರಕುವದು, ಒಬ್ಬನ ಜೊತೆಯಿಂದ ಮಹಾನರಕವುಂಟಾಗುವದು ಮಣ್ಣೂ ಸಕ್ಕರೆಯೂ ಇವೆರಡೂ ಪೃಥ್ವಿಯ ಪದಾರ್ಥಗಳೆಂದು ತಿಳಿದರೂ ಯಾರೂ ಸಕ್ಕರೆಯನ್ನು ಬಿಟ್ಟು ಮಣ್ಣನ್ನು ತಿನ್ನುವದಿಲ್ಲ ವಿಷ ಮತ್ತು ನೀರು ಇವೆರಡೂ ಜಲಕ್ಕೆ ಸಂಬಂಧಿಸಿದವೆಂದು ಯಾರೂ ವಿಷವನ್ನು ಕುಡಿಯುವದಿಲ್ಲ ಪುಣ್ಯಾತ್ಮ-ಪಾಪಾತ್ಮರಿಬ್ಬರಲ್ಲಿಯೂ ಅಂತರಾತ್ಮನಿರುವನು ಆದರೆ ಅವರಲ್ಲಿ ಸಾಧುತ್ವ ನೀಚತ್ವಗಳೆಂಬ ಭೇದವಿದ್ದೇ ಇರುವದು. ಹೊಲೆಯ ಹಾರುವರಲ್ಲಿ ಒಬ್ಬನೇ ಆತ್ಮನಿದ್ದರೂ ಅವರಲ್ಲಿ ಪಂಕ್ತಿ ಭೋಜನವಿಲ್ಲ ವಿದ್ವಾಂಸ ಹಾಗು ಅಜ್ಞ ಬಾಲಕ ಇವರಿಬ್ಬರೂ ಒಂದೇ ಆಗಲಾರರು ಅದರಂತೆ ಮನುಷ್ಯ, ಕತ್ತೆ, ಹಂಸ,

ಕೋಳಿ, ರಾಜ, ಮಂಗ ಇವರ ಏಕತ್ವ ಸಂಭವಿಸಲಾರದು ಗಂಗೆಯ ಪವಿತ್ರ ಜಲ ಹಾಗು ಬಚ್ಚಲ ಹರಿಯ ನೀರು ಇವೆರಡೂ ಸರಿಯಾಗುವದಿಲ್ಲ ಈ ಕಾರಣದಿಂದಲೇ ಪವಿತ್ರಾಚರಣೆ, ಶುದ್ಧ ವೈರಾಗ್ಯಶೀಲತೆ ಹಾಗು ಒಳ್ಳೆಯ ಜ್ಞಾನಗಳುಳ್ಳ ಜನವರ್ಗವೊಂದು ಬೇರೆಯಿದೆ ಶೂರನನ್ನು ಬಿಟ್ಟು ಹೇಡಿಯನ್ನು ಮರ್ಯಾದಿಸಿದರೆ ಯುದ್ಧದಲ್ಲಿ ಮರ್ಯಾದೆ ಶೂರನಿಗೇ ಹೊರತು ಹೇಡಿಗಲ್ಲ ಅಲ್ಲಿ ಆ ಹೇಡಿಯು ಧಿಕ್ಕಾರವೇ ಕಂಡು ಬರುವದು ಶ್ರೀಮಂತ ನನ್ನು ಬಿಟ್ಟು ಕಂಗಾಲನ ಸೇವೆ ಮಾಡುವದರಿಂದ ಬರುವ ಫಲವೇನು? ಒಂದೇ ನೀರಿನಿಂದ ಎಲ್ಲವೂ ಉಂಟಾಗಿದ್ದರೂ ನೋಡಿ ಸ್ವೀಕರಿಸಬೇಕಲ್ಲವೇ? ಎಲ್ಲವೂ ನೀರಿನ ಸ್ವರೂಪವೆಂದು ಸಿಕ್ಕದ್ದನ್ನು ಸೇವನೆ ಮಾಡಿದರೆ ಮೂರ್ಖ ತೆಯುಂಟಾಗುವದು ನೀರಿನಿಂದ ಅನ್ನವು, ಅನ್ನದಿಂದ ಕಾರಿಕೆ ಮುಂತಾದವು, ಆದರೆ ಆ ಕಾರಿಕೆ ಮುಂತಾದವನ್ನು ಭಕ್ಷಿಸಲಾಗದು ನಿಂದ್ಯವಾದುದನ್ನು ಸ್ವೀಕ ರಿಸ ವದು,ಆದರಂತೆ ವಂದ್ಯವಾದುದನ್ನೇ ಹೃದಯದಿಂದಗ್ರಹಿಸಿ ಭೂಮಂಡ ಲವನ್ನು ಸತ್ಕೀರ್ತಿಯಿಂದ ತುಂಬಬೇಕು ಉತ್ತಮನಿಗೆ ಉತ್ತಮವುಸೇರುವದು, ಆದರೆ ಕನಿಷ್ಠನಾದವನಿಗೆ ಉತ್ತಮವು ಎಷ್ಟೂ ಸೇರುವದಿಲ್ಲ ಅದಕ್ಕಾಗಿಯೇ ದೇವನು ಅಧಮವೆಂಬುದನ್ನು ಮಾಡಿ ಇಟ್ಟಿರುವನು ಅಧಮವಾದುದನ್ನು ಬಿಟ್ಟು ಉತ್ತಮ ಲಕ್ಷಣವನ್ನು ಸ್ವೀಕರಿಸಬೇಕು ಹರಿಕಥಾ, ಪುರಾಣ ಶ್ರವಣ, ನೀತಿನ್ಯಾಯ ಮುಂತಾದವುಗಳಲ್ಲಿ ವಿವೇಕದಿಂದ ನಡೆದು ಜನ ರೆಲ್ಲ ಮೆಚ್ಚುವಂತೆ ವರ್ತಿಸಿ ನಿದಾನದಿಂದ ಪುಣ್ಯ ಸಂಪಾದಿಸುತ್ತ ಹೋಗ ಬೇಕು ಬಾಲಕರನ್ನು ತಿದ್ದುವದರಲ್ಲಿ ಅವರಂತೇ ನಡೆದು ಅವರ ಮನೋ ಗತದಂತೆ ನುಡಿಯಬೇಕಾಗುತ್ತದೆ ಅದರಂತೆ ಜನರನ್ನು ಅವರವರ ಮನೋಗತದಂತೆ ನಡೆದು ನಿದಾನದಿಂದ ತಿದ್ದಬೇಕು ಚತುರನಾದವನು ಪರೇಂಗಿತವನ್ನರಿಯುವ ಲಕ್ಷಣವುಳ್ಳವನಾಗಿರಬೇಕು ಚತುರ್ವಿಧ ಉಪಾ ಯಗಳನ್ನು ಉಪಯೋಗಿಸಿ ಮುಂದ ಜನರನ್ನು ಹಾದಿಗೆ ತರಬೇಕು ಈ ಉಪಾಯಗಳು ಮೂರ್ಖರಿಗೆ ತಿಳಿಯುವದಿಲ್ಲ ಹುಚ್ಚನಿಗೆ ಹುಚ್ಚನೆಂದು ಅನ್ನಬಾರದು- ಮತ್ತು ಇನ್ನೊಬ್ಬರ ಗುಟ್ಟನ್ನು ಹೊರಗೆಡುವಿ ಅವರ ಮನಸ್ಸನ್ನು ವ್ಯಥೆಗೀಡು ಮಾಡಬಾರದು ಹೀಗೆ ನಡೆದ ನಿಸ್ಪೃಹ ಮಾನವ ನಿಗೆ ದಿಗ್ವಿಜಯವು ಸುಲಭ ಸಾಧ್ಯವು ಹಲವು ಸ್ಥಳಗಳಲ್ಲಿ ಎಷ್ಟೋ

ಪ್ರಸಂಗಗಳು ಒದಗುವವು. ತಾನು ಅವುಗಳನ್ನೆಲ್ಲ ಅರಿತುಕೊಂಡು ಪ್ರಾಣಿ ಮಾತ್ರಗಳೆಲ್ಲರ ಅಂತರಂಗವಾಗಿ ವರ್ತಿಸಬೇಕು ಪರರ ಇಂಗಿತವನ್ನು ಕಾಯ್ದುಕೊಂಡರೆ ಅನ್ಯೋನ್ಯ ಪ್ರೇಮವು ಇಲ್ಲವಾದರೆ ದುಷ್ಪರಿಣಾಮವು ಇದು ಒಳಿತಲ್ಲ. ಆದ್ದರಿಂದಲೇ ಪರೇಂಗಿತ ಜ್ಞಾನಿಗೆ ಮಹಂತನೆನ್ನುವರು. ಅಂಥವನು ಎಲ್ಲರ ಪ್ರೇಮಾದರಕ್ಕೆ ಆಸ್ಪದನಾಗುವನು'

ಇತಿ ದಾಸಬೋಧೆಯ ೧೩ನೆಯ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೧೪ನೆಯ ದಶಕ (ಅಖಂಡ ಧ್ಯಾನ)

ಶ್ರೀ ರಾಮ ಸಮರ್ಥ ॥ ೧ ನಿಸ್ಪೃಹ ಲಕ್ಷಣ ॥ ಶ್ರೀ ಗುರುಗಳು ಶಿಷ್ಯನಿಗೆ—"ನಿಸ್ಪೃಹನ ಶಿಕ್ಷಣ, ಯುಕ್ತಿ, ಬುದ್ಧಿ ಮತ್ತು ನಿಪುಣತೆಗಳನ್ನು ಹೇಳುವೆವು. ಅವನ್ನು ಕೇಳುವದರಿಂದ ಸಮಾಧಾನವೆನ್ನಿಸುವದು ಮಂತ್ರವು ಸುಲಭವಿದ್ದು ಸಿದ್ಧಿ ದಾಯಕವಿರುವಂತೆ ಹಾಗು ಸುಲಭ ಔಷಧವಿದ್ದು ತೀವ್ರ ಗುಣಕಾರಿಯಾಗಿರುವಂತೆ ನನ್ನ ಬೋಧೆಯು ಸಾಧುವಾಗಿ ಅನುಭವಯುಕ್ತವಿರುವದು ಇದರಿಂದ ಕೂಡಲೇ ಅವಗುಣಗಳು ನಶಿಸುವವು, ಉತ್ತಮ ಗುಣಗಳು ಪ್ರಾಪ್ತವಾಗುವವು ಆದ್ದರಿಂದ ನನ್ನ ಶಬ್ದರೂಪವೆಂಬ ತೀವ್ರತರ ಔಷಧವನ್ನು ಆಲಸ್ಯವನ್ನು ಬಿಟ್ಟು ಸೇವನೆ ಮಾಡತಕ್ಕದ್ದು" ಎಂದು ಹೇಳಿ ಆರಂಭಿಸಿದರು

"ನಿಸ್ಪೃಹನಲ್ಲಿರತಕ್ಕ ಆವಶ್ಯಕ ಗುಣಗಳೆಂದರೆಃ— ಅವನು ಮೊದಲು ನಿಸ್ಪೃಹತೆಯನ್ನು ಹಿಡಿಯಕೂಡದು ಬಿಟ್ಟರೂ ಸಹ ಪರಿಚಿತ ಜನರಲ್ಲಿ ಅವನು ಸಂಚರಿಸಕೂಡದು ನಿಸ್ಪೃಹನು ಕಾಮುಕದೃಷ್ಟಿಯುವನಾಗಿರಬಾರದು ಮನಸ್ಸಿಗೆ ವಿಷಯ ವಾಸನೆಯ ರುಚಿಯನ್ನು ಹಚ್ಚಿಕೊಳ್ಳಕೂಡದು ಧೈರ್ಯಗುಂದಲು ಅದನ್ನು ತನ್ನ ಮುಖಚರ್ಯೆಯಿಂದ ವ್ಯಕ್ತಪಡಿಸಬಾರದು ಒಂದೇ ಸ್ಥಳದಲ್ಲಿ ಮೂಲೆಗುಂಪಾಗಿ ಇರಬಾರದು ಕನಕ-ಕಾಂತೆಯರಲ್ಲಿ ಅಭಿಲಾಷೆ ಹಿಡಿಯಕೂಡದು ನಡವಳಿಕೆಯಿಂದ ಕೆಡಬಾರದು, ಅನ್ಯರು ಕೊಡುವ ದ್ರವ್ಯ ತಕ್ಕೊಳ್ಳಬಾರದು, ಪರರಿಂದ ನ್ಯೂನತೆಯ ಮಾತುಗಳನ್ನು ಆಡಿಸಿಕೊಳ್ಳದಂತೆ ವರ್ತಿಸಬೇಕು ಭಿಕ್ಷೆ ಬೇಡಲು ನಾಚಿಕೆಗೊಳ್ಳಬಾರದು ಬಹಳ ಭಿಕ್ಷೆಯನ್ನು ತಕ್ಕೊಳ್ಳಬಾರದು, ಗುರುತಿನ ಇನ್ನೊಬ್ಬರು ಕೇಳದೆ ತನ್ನ ವಸ್ತು ಏನನ್ನಾದರೂ ಕೊಡಬಾರದು, ಉಡಿಗೆ–ತೊಡಿಗೆ ಹೊಲಸಾಗಿರಬಾರದು, ಸವಿ ಸವಿ ಅನ್ನವನ್ನು ಬಯಸಬಾರದು, ದುರಾಗ್ರಹ ಹಿಡಿಯಬಾರದು ಪ್ರಸಂಗವೊದಗಿದಾಗ ಅನುಸರಿಸಿ ವರ್ತಿಸತಕ್ಕದ್ದು ಮನಸ್ಸನ್ನು ಭೋಗ್ಯವಸ್ತುಗಳ ಕಡೆಗೆ ಹರಿಬಿಡಬಾರದು, ಶರೀರ ದುಃಖದಿಂದ

ವ್ಯಥೆಗೊಳ್ಳಬಾರದು, ಜೀವಿತ್ವದ ಬಗೆಗೆ ಮುಂದಿನ ಆಶೆ ಹಿಡಿಯಬಾರದು, ವಿರಕ್ತಿಯಿಂದ ಹಿಂತಿರುಗಬಾರದು, ಧೈರ್ಯವನ್ನವಲಂಬಿಸಬೇಕು, ವಿವೇಕ ಬಲದಿಂದ ವರ್ತಿಸಬೇಕು, ಜ್ಞಾನವನ್ನು ಮಲಿನವಾಗಗೊಡಬಾರದು, ಸದಯಾಂತ, ಕರುಣಿಗಳ ಮನ ಮೆಚ್ಚುವಂತೆ ಕೀರ್ತನೆ ಮಾಡಬೇಕು ಅಂತ ರ್ಧ್ಯಾನದಿಂದ ಅಂತರಿಸಬಾರದು, ಸಗುಣ ಮೂರ್ತಿಯಲ್ಲಿ ಕೂಡಿದ ಪ್ರೇಮ ರಜ್ಜುವನ್ನು ಹರಿದುಕೊಳ್ಳಬಾರದು ಉದರನಿರ್ವಾಹದ ಚಿಂತೆಮಾಡಕೂಡದು ಕಷ್ಟವುಂಟಾಗಲು ವ್ಯಥೆಗೊಳ್ಳಬಾರದು, ಏನಾದರೂ ಸಮಯವೊದಗಲು ಧೀರತೆಯಿಂದ ಕುಂದಬಾರದು, ಅನ್ಯರಿಂದಾದ ಅಪಮಾನಕ್ಕೆ ವ್ಯಗ್ರತೆ ತಾಳ ಕೂಡದು, ತಿರಸ್ಕಾರವನ್ನು ಮರೆಯಬೇಕು ಧಿಕ್ಕಾರವನ್ನು ಅಲಕ್ಷಿಸಬೇಕು, ಜನಲಜ್ಜೆಗೆ ಆಸ್ಪದ ಬೇಡ, ವಿರಕ್ತನಾದವ ತನ್ನನ್ನು ನಾಚಿಕೆಗೊಳಿಸುವವ ರಿಗೆಲಜ್ಜಿತನಾಗಬಾರದು, ಹೀಯಾಳಿಸಿದರೆ ಹಳಹಳಿಸಬಾರದು ಬೈದರೆ ಬೈಬಾ ರದು ನಿಸ್ಪೃಹಿಯು ಶುದ್ಧಮಾರ್ಗ ಬಿಡಬಾರದು ದುರ್ಜನರ ಗುಂಪುಸೇರ ಬಾರದು ನೀಚ ಚಾಂಡಾಲರ ಸಂಬಂಧ ಬಳೆಸಬಾರದು, ತಾಮಸೀ ವೃತ್ತಿ ಯನ್ನು ಅಂಗೀಕರಿಸಬಾರದು ಕಲಹ ಪ್ರಸಂಗ ವೊದಗಲು ಜಗಳಾಡಬಾ ರದು ತನ್ನ ನಿಜ ಸ್ಥಿತಿಗೆ ಏನಾದರೂ ಚ್ಯುತಿಯನ್ನು ತಂದುಕೊಳ್ಳಬಾ ರದು ಜನರು ನಗಿಸಿದರೆ ನಗಬಾರದು ಮಾತಾಡಿಸಿದರೆ ಮಾತಾಡಬಾ ರದು, ನಡೆಯಿಸಿದರೆ ನಡೆಯಬಾರದು ಒಂದೇ ವೇಷ ಧರಿಸಬಾರದು, ಕಂಡದ್ದೆಲ್ಲವು ಸತ್ಯವೆಂದು ತಿಳಿಯ ಬಾರದು ಒಂದೇ ಸ್ಥಾನವನ್ನಾಶ್ರಯಿ ಸದೆ ನಿರಂತರ ಸಂಚಾರ ಮಾಡುತ್ತಿರಬೇಕು ಇನ್ನೊಬ್ಬರಲ್ಲಿ ಸಲಿಗೆಯಿಂದ ಇರಕೂಡದು ಇನ್ನೊಬ್ಬರಿಂದ ಪ್ರತಿದಾನ ಸ್ವೀಕರಿಸಕೂಡದು ಸಭೆ ಯಲ್ಲಿ ಅವಶ್ಯವಿಲ್ಲದೆ ಯಾವಾಗಲೂ ಕೂಡ್ರಬಾರದು ಕೆಲ ವೇಳೆಯ ನ್ನಾ ದರೂ ಏಕಾಂತದಲ್ಲಿ ಕಳೆಯಬೇಕು, ನಿತ್ಯ ನಿಯಮ ಬಿಡಬ ರದು, ಆದರೆ ನಿಯಮಗಳಿಗೆ ಒಳಪಟ್ಟಿರಬಾರದು ಭವಿಷ್ಯವನ್ನರಿಯದೆ ಯಾರಿಗೂ ಭರ ವಸೆ ಕೊಡಕೂಡದು ಂಶಯವೃತ್ತಿ ತಳೆಯಬಾರದು, ಅಭ್ಯಾಸವನ್ನು ಬಿಡಬಾರದು, ಏನಾದರೂ ಪಾರತಂತ್ರಿಕನಾಗಬಾರದು ಸ್ವತಂತ್ರತೆಯನ್ನು ಕಳೆದುಕೊಳ್ಳಬಾರದು, ನಿರಪೇಕ್ಷ ಬುದ್ಧಿಯಿರಬೇಕು ಇನ್ನೊಬ್ಬರ ವಸ್ತು ವಿಗೆ ಆಶಿಸಬಾರದು ವೈಭವವು ಸ್ಥಿರವೆಂದು ತಿಳಿಯಬಾರದು, ಉಪಾಧಿ

ಸುಖಕ್ಕೆ ಆಶಿಸಬಾರದು, ಏಕಾಂತ ಮುರಿಯದೆ ಸ್ವರೂಪ ಸ್ಥಿತಿಯನ್ನು ಕಾಯ್ದುಕೊಂಡಿರಬೇಕು. ನಿರರ್ಥಕ ಬಡಬಡಿಸಬಾರದು, ಜನರಿಗೆ ನಾಚಬಾರದು, ಯಾವದರಲ್ಲಿಯೂ ಎಂದೂ ಆಸಕ್ತಿಯನ್ನು ತಳೆಯಕೂಡದು, ನಡೆದುಬಂದ ಮಾರ್ಗ ಬಿಡಬಾರದು, ಉಪಾಸನೆಯ ಕರ್ಮಗಳ ಉಪಾಧಿಯನ್ನು ಬಿಟ್ಟು ಕೊಡ್ರಬಾರದು, ಎಂದೂ ಜ್ಞಾನಮಾರ್ಗದಿಂದ ಹೊರತಾಗತಕ್ಕದ್ದಲ್ಲ ಕರ್ಮ ಮಾರ್ಗಾವಲಂಬಿಯಾಗಬೇಕು, ವೈರಾಗ್ಯ ಧರಿಸಬೇಕು, ಸಾಧನ ಭಜನೆಯಲ್ಲಿ ಎಂದೂ ಅಂತರಿಸಬಾರದು ಬಹಳವಾಗಿ ವಾದ ಬೆಳಿಸಬಾರದು, ಅನೀತಿಯುಕ್ತರಾಗಬಾರದು, ಸಿಟ್ಟು ಕೋಪದಿಂದ ಭರಿತರಾಗಬಾರದು, ಕೇಳದವನಿಗೆ ಹೇಳಬಾರದು ಬೇಸರಬರುವಂತೆ ಮಾತಾಡಬಾರೆದು, ಒಂದೇ ಸ್ಥಾನದಲ್ಲಿ ಬಹಳ ಹೊತ್ತು ಇರಬಾರದು, ಏನೊಂದು ಉಪಾಧಿಗೆಆಶ್ರಯಕೊಡಬಾರದು ಆಸರವಿತ್ತರೂ ಹಿಡಿಯಬಾರದು, ಹಿಡಿದರೂ ಉಪಾಧಿಯ ಹಿಡಿತದಲ್ಲಿ ಸಿಗಬಾರದು. ದೊಡ್ಡಿಸ್ತನಕ್ಕೆ ಆಶಿಸಬಾರದು, ತನಗೆ ತಾನೇ ಮಹತ್ವವೆಣಿಸಿಕೊಂಡು ಕೊಡ್ರಬಾರದು ಎಲ್ಲಿಯೂ ಮಾನಮರ್ಯಾದೆಗಾಗಿ ಬಯಸಿ ನಿಲ್ಲಬಾರದು ಎಲ್ಲದರಲ್ಲಿಯೂ ಸಾದಾವೃತ್ತಿಯಿರಬೇಕು ಬಲಾತ್ಕಾರದಿಂದ ದುರ್ಬಲರನ್ನು ಕಡೆಗಣಿಸಬಾರದು, ವೃಥಾಭಿಮಾನಯುಕ್ತರಾಗಬಾರದು ಅಧಿಕಾರವಿಲ್ಲದೆ ಅಪ್ಪಣೆ ಮಾಡಬಾರದು, ಯೋಗ್ಯತೆಯಿಲ್ಲದೆ ಉಪದೇಶ ಮಾಡಬಾರದು, ಪಾರಮಾರ್ಥಿಕ ವಿಷಯದಲ್ಲಿ ಎಂದೂ ಹಿಂದುಮುಂದಾಗಬಾರದು ವೈರಾಗ್ಯವು ಕಠಿಣವೆಂದು ಬಿಡಬಾರದು ಅಭ್ಯಾಸವು ಬಿಗಿಯೆಂದು ಬಿಡಬಾರದು ಯಾವದರಲ್ಲಿಯೂ ಕಾಠಿಣ್ಯವೃತ್ತಿಯನ್ನು ಹಿಡಿಯಬಾರದು ಕಠಿಣ ಶಬ್ದವನ್ನಾಡಬಾರದು, ಕಠಿಣ ಆಜ್ಞೆಯನ್ನು ಮಾಡಬಾರದು, ಏನು ಮಾಡಿದರೂ ಕಠಿಣತೆಯನ್ನು ಹಿಡಿಯಬಾರದು, ದುರ್ವಿಷಯಗಳಲ್ಲಿ ಆಸಕ್ತನಾಗಿರಬಾರದು ತಾನು ಮಾಡದೆ ಹೇಳಬಾರದು ಶಿಷ್ಯನ ಬಳಿಯಲ್ಲಿ ಹೆಚ್ಚಾಗಿ ಬೇಡಬಾರದು, ಹೊಲ್ಲದ ಶಬ್ದಗಳನ್ನಾಡಬಾರದು ಇಂದ್ರಿಯ ಸ್ಮರಣ ಮಾಡಬಾರದು, ನಾನು ಮುಕ್ತನೆಂಬ ಡೌಲಿನಿಂದ ಶಾಕ್ತ ಮಾರ್ಗವನ್ನು ಅಂದರೆ ಮನಬಂದಂತೆ ಆಚರಿಸುವ ಮಾರ್ಗವನ್ನು ಹಿಡಿಯಬಾರದು ದೇವ-ಗುರು-ಹಿರಿಯರ ಸೇವೆಯಲ್ಲಿ ಸೇವಾವೃತ್ತಿಯು ನೀಚತನದ್ದೆಂದು ಭಾವಿಸಬಾರದು ಇದ್ದ ವೈಭವ

ವನ್ನು ಕಳೆದುಕೊಳ್ಳಬಾರದು. ಮತ್ತು ವೈಭವ ಬಂದಾಗ ಉನ್ಮತ್ತನಾಗ ಬಾರದು ತಿಳಿದೂ ತಿಳಿದೂ ಸಿಟ್ಟಿಗೆ ಆಶ್ರಯ ಕೊಡಬಾರದು, ದೊಡ್ಡಸ್ತಿಕೆ ಇದ್ದುದರಲ್ಲಿ ತಪ್ಪಬಾರದು, ನೀತಿ-ನ್ಯಾಯಗಳನ್ನು ಬಿಡಬಾರದು, ಆಧಾರವಿಲ್ಲದೆ ವರ್ತಿಸಬಾರದು, ತಿಳಿಯದೆ ಮಾತಾಡಬಾರದು, ಅನುಮಾನದಿಂದ ನಿಶ್ಚಯ ತೀರಿಯಬಾರದು. ಇನ್ನೊಬ್ಬರು ಒಳ್ಳೇ ಸಂಗತಿಯನ್ನು ಹೇಳಿದ್ದಕ್ಕೆ ಮೂರ್ಖನಾಗಿ ದುಃಖ ಪಡಕೂಡದು ಎಚ್ಚರಿಕೆಯನ್ನು ಬಿಡಬಾರದು ವ್ಯಾಪಕತನವನ್ನು ಬಿಡಬಾರದು, ಸೋಮಾರಿತನದಲ್ಲಿ ಎಂದೂ ಸುಖವನ್ನು ತಿಳಿಯಬಾರದು, ವಿಕಲ್ಪನೆಗಳನ್ನು ಗ್ರಹಿಸತಕ್ಕದ್ದಲ್ಲ ಸ್ವಾರ್ಥದಿಂದ ಆಜ್ಞೆ ಕೊಡತಕ್ಕದ್ದಲ್ಲ, ಹಾಗೆ ಅರ್ಪಣೆ ಮಾಡಿದರೂ ತನ್ನ ಲಾಭ ಬಯಸತಕ್ಕದ್ದಲ್ಲ ಪ್ರಸಂಗ ಬಾರದೆ ಮಾತಾಡಬಾರದು, ತಾಳ-ರಾಗಗಳ ಹೊಂದಿಕೆಯಿಲ್ಲದೆ ಹಾಡಬಾರದು, ಅವಿಚಾರ ಮಾರ್ಗದಲ್ಲಿ ವಿಚಾರವಿಲ್ಲದೆ ನೇರಬಾರದು ಪರೋಪಕಾರ ಮಾಡಬೇಕು ಪರಪೀಡೆಯನ್ನು ಮಾಡಬಾರದು, ಯಾರೊಬ್ಬರ ವಿಷಯದಲ್ಲಿ ವಿಕಲ್ಪ ಭಾವನೆ ತರಕೂಡದು ತಿಳುವಳಿಕೆ ಬಿಡಬಾರದು, ಮಹಂತನೆಂದು ಹೇಳಿಕೊಳ್ಳಬಾರದು ದುಡ್ಡಿನ ಗಳಿಕೆಯನ್ನು ಇಟ್ಟುಕೊಂಡು ಕೀರ್ತನ ಮಾಡುತ್ತ ತಿರುಗಾಡಬಾರದು ಸಂಶಯಯುಕ್ತ ಮಾತುಗಳನ್ನಾಡಕೂಡದು ಬಹಳವಾಗಿ ಹಂಬಲಗಳನ್ನಿಟ್ಟುಕೊಳ್ಳಬಾರದು ತನಗೆ ಅವಗತವಾಗದ ಗ್ರಂಥವನ್ನು ಓದಿ ಉಪದೇಶ ಮಾಡುವದಕ್ಕಾಗಿ ಅದನ್ನು ಗ್ರಹಿಸಬಾರದು ತಿಳಿದೂ ತಿಳಿಯದವನಂತೆ ಕೇಳಬಾರದು, ನಾನು ಎಲ್ಲವನ್ನೂ ಬಲ್ಲೆನೆಂದು ಹೇಳುವ ಅಹಂಕಾರವಿರತಕ್ಕದ್ದಲ್ಲ, ತಾನು ಬಲ್ಲವನೆಂಬ ಸೊಕ್ಕು ಇರಕೂಡದು ಇನ್ನೊಬ್ಬರನ್ನು ಎಂದೂ ಹೀಯಾಳಿಸಬಾರದು, ಯಾರೊಡನೆಯೂ ವಾದ ಪ್ರಸಂಗಕ್ಕೆ ಸಿದ್ಧನಾಗಬಾರದು, ಸ್ವಾರ್ಥ ಬುದ್ಧಿಗೆ ಅಂಟಿಕೊಳ್ಳಬಾರದು, ಅಲ್ಲದ ಕಾರಭಾರ ನಡೆಯಿಸಬಾರದು, ರಾಜದ್ವಾರದಲ್ಲಿ ಜನಹಿತ ಕಾರ್ಯ ಮಾಡಿ ತೋರಿಸುವ ಜಂಭ ಕೊಚ್ಚತಕ್ಕದ್ದಲ್ಲ ಯಾರಿಗೂ ಮುಂದಾಗುವ ಭರವಸೆ ಕೊಡಬಾರದು, ಭಾರವಾದ ಭಿಕ್ಷೆ ಬೇಡಬಾರದು, ಭಿಕ್ಷೆಯನ್ನು ಎತ್ತುವಲ್ಲಿ ಪರಮಾರ್ಥ ವಿಷಯವನ್ನು ಮುಂದೆ ಮಾಡಬಾರದು, ಲಗ್ನ ಪ್ರಸಂಗದಲ್ಲಿ ಹಿರಿಯತನವನ್ನು ವಹಿಸತಕ್ಕದ್ದಲ್ಲ, ಮಧ್ಯಸ್ಥನೂ ಆಗ

ಬಾರದು ಉಪಾಧಿಯಿಂದ ಕೂಡಿಕೊಂಡು ಪ್ರಪಂಚಕ್ಕೆ ಹೊಂದಿಕೊಳ್ಳ ಬಾರದು ಪ್ರಪಂಚದ ಹಿಡಿತಕ್ಕೆ ಸಿ ಬಾರದು ದುಡಿಯದೆ ಅನ್ನ ಸ್ವೀಕ ರಿಸಬಾರದು, ಬೀಗರ ಜೊತೆಗೆ ಎಂದೂ ಆಮಂತ್ರಣ ಸ್ವೀಕರಿಸತಕ್ಕದ್ದಲ್ಲ ನಿಸ್ಪೃಹನಾದವನು ಶ್ರಾದ್ಧ ಪಕ್ಷಗಳ ಊಟವನ್ನು ಸ್ವೀಕರಿಸಬಾರದು ಅದ ರಂತೆ ಚಟಶ್ರಾದ್ಧ, ಷಾಣ್ಮಾಸಿಕ-ಶ್ರಾದ್ಧ, ಶಾಂತಿಕ್ರಿಯೆ, ಫಲಶೋಭನ,ದಿನ ಕರ್ಮ, ಮೇಜವಾನಿ, ಹರಕೆ (ಯಾವದೊಂದು ಉದ್ದೇಶದಿಂದ ಬೇಡಿ ಕೊಂಡದ್ದು) ವ್ರತಗಳು, ಉದ್ಯಾಪನೆಗಳು, ಈ ಎಲ್ಲ ಪ್ರಸಂಗಗಳಲ್ಲಿ ಆಮಂತ್ರಣ ಸ್ವೀಕರಿಸಿಯೂ ಸ್ವೀಕರಿಸದೆಯೂ ಊಟಕ್ಕೆ ಹೋಗಬಾರದು ಹಾಗು ಅಲ್ಲಿಯ ಅನ್ನ ಸ್ವೀಕರಿಸಿ ದೈನ್ಯತೆಯನ್ನು ಹೊಂದತಕ್ಕದ್ದಲ್ಲ ಮದುವೆ ಮುಂಜಿವಿಗಳ ಸಮಾರಂಭದ ಊಟಕ್ಕೂ ಹೋಗಕೂಡದು ಎಲ್ಲಿ ಯಾದರೂ ಹೊಟ್ಟೆಗಾಗಿ ಹಾಡುವದೂ ಕೀರ್ತನೆ ಮಾಡುವದೂ ತರ ವಲ್ಲ. ಮಧುಕರ ವೃತ್ತಿಯಿಂದ ಭಿಕ್ಷಾನ್ನ ಸೇವಿಸಬೇಕು ಆದರೆ ಮನೆ ಮನೆ ವಾರ ಹಚ್ಚಿಕೊಂಡು ಹೋಗಿ ಊಟ ಮಾಡಬಾರದು ಅನ್ಯರ ನಿಮಿ ತ್ತವಾಗಿ ಅವರಿಂದ ಹಣ ಪಡೆದು ಯಾತ್ರೆ ಮಾಡಬಾರದು ಅದರಂತೆ ಹಣ ಪಡೆದು ಪರರ ನಿಮಿತ್ತ ಪುಣ್ಯ ಕರ್ಮ ಮಾಡಬಾರದು, ಸಂಬಳ ಗೊತ್ತು ಮಾಡಿಕೊಂಡು ದೇವತಾರ್ಚನೆಯನ್ನು ಮಾಡಬಾರದು ಒಂದು ವೇಳೆ ಯಜಮಾನನು ಮೆಚ್ಚುಗೆಯಿಂದು ಕೊಟ್ಟರೂ ಸ್ವೀಕರಿಸದಿರುವದು ನಿಸ್ಪೃಹನ ಲಕ್ಷಣವು ಎಲ್ಲಿಯೂ ಮಠವನ್ನು ಕಟ್ಟಿಕೊಂಡು ಅದಕ್ಕೆ ಮಠ ಪತಿಯಾಗುವದು ಸರಿಯಾಗಲಾರದು, ಆದರೆ ನಿಸ್ಪೃಹನಾದವನು ತಾನಾಗಿ ಮಠ ಮುಂತಾದವುಗಳನ್ನು ಸ್ಥಾಪಿಸುವದಕ್ಕೆ ಮುಂದಾಗದೆ ಪರಸ್ಪರವಾಗಿ ಅನ್ಯರಿಂದಲೇ ಆ ಕಾರ್ಯವಾಗುವಂತೆ ಯತ್ನಿಸತಕ್ಕದ್ದು ಆದರೆ ಅದು ಭಕ್ತಿ ಮಾರ್ಗಕ್ಕೆ ಸಂಬಂಧಿಸಿಯೇ ಇರಬೇಕ ನಿಸ್ಪೃಹಿಯು ಪ್ರಯತ್ನವಿಲ್ಲದೆ ಇರಬಾರದು, ಆಲಸ್ಯಕ್ಕೆ ಆಸ್ಪದ ಕೊಡಬಾರದು ತನ್ನ ಶರೀರವಿರುವ ವರೆಗೂ ತಾನು ಉಪಾಸನೆಯ ಪ್ರಯೋಗವನು ಕಾಣತಕ್ಕದ್ದಲ್ಲ ಉಪಾಧಿ ಗಳಲ್ಲಿ ಬೀಳಬಾರದು, ಬಿದ್ದರೂ ಅವು ತನಗೆ ಅಂಟದಂತೆ ಇರಬೇಕು ನಿಸ್ಸಂಗತ್ವದಿಂದ ಭಜನೆಗೆ ಆತಂಕ ತಂದುಕೊಳ್ಳಬಾರದು ಒಹಳ ಉಪಾಧಿ ಇರಬಾರದು, ಉಪಾಧಿಯಿಲ್ಲದೆಯೂ ಇರಬಾರದು, ನಿಸ್ಸಂಗನಾದೆನೆಂಬ

ಅಭಿಮಾನದಿಂದ ಸಗುಣ ಭಕ್ತಿಯನ್ನು ಬಿಡಬಾರದು, ಮತ್ತು ಬೇರೆಯಾಗಿಯೂ ಇರಬಾರದು ಓಡುವದು, ಇರುವದು, ದುಡಿಯುವದು, ಮಾತಾಡುವದು, ಉಣ್ಣುವದು, ಮಲಗುವದು, ನೇಮ ಹಿಡಿಯುವದು, ಇವೆಲ್ಲ ಕ್ರಿಯೆಗಳು ಮಿತಿಯಿಂದಲೇ ಸಾಗಬೇಕು ಅತಿಯಾದರೆ ಗತಿಗೆಡುವದು ಇದರಂತೆ ಬಹು ಜನರಲ್ಲಿ ಬಾರದು, ಬಹುಕಾಲ ಅಡವಿಯಲ್ಲಿರಬಾರದು, ದೇಹವನ್ನು ಬಹಳವಾಗಿ ಪಾಲನೆ ಮಾಡಬಾರದು, ಅಂದರೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದಲ್ಲ ಅದಂತೂ ಬಹು ಪಾಪವು ಮಹಾ ಜನರ ಸಂಗವನ್ನು ಹಿಡಿಯಬಾರದು, ಸಂತರ ಸಂಗವನ್ನು ಬಿಡಬಾರದು, ಕರ್ಮಠತನವು ಕೆಲಸದ್ದಲ್ಲವಾದರೂ ಆಚಾರ ಹೀನನಾಗಿರುವದು ಬಲು ದೋಷವು ಸಂಸಾರಕ್ಕೆ ಅತಿಯಾಗಿ ಹೊಂದಿಕೊಂಡಿರಬಾರದು ಜನರ ಅಧೀನಕ್ಕೊಳಗಾಗಬಾರದು, ಯಾವದೊಂದರಲ್ಲಿ ಅತಿ ಪ್ರೀತಿಯಿರತಕ್ಕದ್ದಲ್ಲ ಆದರೆ ನಿಷ್ಠುರತೆಯು ಒಳಿತಲ್ಲ ಬಹಳ ಸಂಶಯ ಹಿಡಿಯಬಾರದು, ಮತ್ತು ಸುಮ್ಮಾನದಿಂದ ಎಲ್ಲವನ್ನೂ ಒಪ್ಪಿಕೊಳ್ಳಬಾರದು ಬಹು ಸಾಧನಗಳ ಜಾಲದಲ್ಲಿ ಸಿಗಬಾರದು ಹಾಗು ಸಾಧನವಿಲ್ಲದೆ ಇರುವದೂ ಅಯೋಗ್ಯವು ಬಹು ವಿಷಯಗಳನ್ನು ಭೋಗಿಸಬಾರದು ಹಾಗು ವಿಷಯ ತ್ಯಾಗ ಮಾಡಲೂ ಬಾರದು. ಧನ ಲೋಭವು ಅತಿಯಾಗಿರಬಾರದು ಹಾಗು ಧನವಿಲ್ಲದೆಯೂ ಇರಬಾರದು ಬೇರೆಯವರ ಅನುಭವ ಪಡೆಯಬಾರದು ಹಾಗು ಅನುಭವವಿಲ್ಲದೆಯೂ ಇರಬಾರದು ಆತ್ಮಸ್ಥಿತಿಯನ್ನು ಹೇಳಿಕೊಳ್ಳ ಬಾರದು ಸುಮ್ಮನೆಯೂ ಇರಬಾರದು ಮನಸ್ಸಿನ ಸಹಾಯವಿಲ್ಲದೆ ಏನೂ ಒದಗುವದು ಆದರೆ ಮನವು ಹಾಗೇ ಇರದೆ ಉನ್ಮನವಾಗಬೇಕು ಪರಮಾತ್ಮ ವಸ್ತುವನ್ನು ಲಕ್ಷಿಸಲು ಬರುವದಿಲ್ಲ ಆದರೂ ಲಕ್ಷಿಸದ ಹೊರತು ಗತ್ಯಂತರವಿಲ್ಲ ಅದು ಮನ ಹಾಗೂ ಬುದ್ಧಿಗಳಿಗೆ ನಿಲುಕುವದಿಲ್ಲ ಆದರೆ ಬುದ್ಧಿಯ ಸಹಾಯವಿಲ್ಲದೆ ಅಜ್ಞಾನತಮಸ್ಸು ದೂರಾಗುವದಿಲ್ಲ ಹಾಗು ಸ್ವರೂಪಾನುಭವವುಂಟಾಗುವದಿಲ್ಲ ಅರಿವು ಇಲ್ಲದಂತಾಗುತ್ತದೆ ಆದರೆ ಮರವು ಕೆಲಸದ್ದಲ್ಲ ಜ್ಞಾತತ್ವವನ್ನು ಹಿಡಿಯಬಾರದು ಆದರೆ ಜ್ಞಾನವಿಲ್ಲದೆ ಕಲಸವಿಲ್ಲ ಪರಬ್ರಹ್ಮವಸ್ತುವು ತರ್ಕಕ್ಕೆ ಮೀರಿ ಇದ್ದರೂ ತರ್ಕ ಮಾಡಲಿಕ್ಕೇ ಬೇಕಾಗುವದು. ದೃಶ್ಯ ವಸ್ತುವಿನ ಸ್ಮರಣವಿರಲಾಗದು. ಅದರಂತ ಸ್ವರೂಪದ

ವಿಸ್ಮರಣವು ಇರಬಾರದು ಬಹಳವಾಗಿ ಚರ್ಚಿಸಬಾರದು ಆದರೆ ಚರ್ಚೆಯಿಲ್ಲದೆ ಸಾಗುವದಿಲ್ಲ ಸಮಾಜದಲ್ಲಿ ವರ್ಣಭೇದವಿರ ಬಾರದಾದರೂ ವರ್ಣಸಂಕರವು ಉಪಯೋಗದ್ದಲ್ಲ ಸ್ವಧರ್ಮವನ್ನು ಬಿಡ ತಕ್ಕದ್ದಲ್ಲ ಆದರೆ ಅಭಿಮಾನವು ಒಳಿತಲ್ಲ ಆಶೆಗೆ ಬದ್ಧರಾಗಿ ಮಾತಾಡ ಬಾರದು, ವಿವೇಕವಿಲ್ಲದೆ ನಡೆಯಬಾರದು. ಏನಾದರೂ ಸಮಾಧಾನ ವನ್ನು ಬಿಡತಕ್ಕದ್ದಲ್ಲ ಪುಸ್ತಕವನ್ನು ಅಶುದ್ಧವಾಗಿ ಬರೆಯಬಾರದು ಪುಸ್ತಕವಿಲ್ಲದೆ ಕೆಲಸವಿಲ್ಲ ಅಪದ್ಧವಾಗಿ ಓದಬಾರದು ಆದರೆ ಓದದೆ ಗತ್ಯಂತರವಿಲ್ಲ ನಿಸ್ಪೃಹನು ಮಾತುಗಾರಿಕೆಯನ್ನು ಬಿಡಬಾರದು ಯಾರಾದರೂ ಸಂಶಯವನ್ನೆತ್ತಿದರೆ ಅವರೊಡನೆ ಜಗಳಾಡಬಾರದು ತನ್ನ ಭಾಷಣ ಕೇಳುವವರ ವಿಷಯದಲ್ಲಿ ತಿರಸ್ಕಾರ ಭಾವನೆ ತೋರತಕ್ಕದ್ದಲ್ಲ

ಈ ಪ್ರಕಾರದ ಶಿಕ್ಷಣೋಪದೇಶವನ್ನು ಚಿತ್ತದಲ್ಲಿ ಸ್ಥಿರವಾಗಿರಿಸಿಕೊಂಡು ವರ್ತಿಸಿದರೆ ಎಲ್ಲ ಸುಖಗಳು ತಂತಾವೇ ಲಭಿಸುವವು ಮತ್ತು ಇದರಿಂದ ನಿಸ್ಪೃಹನು ಅಕಸ್ಮಾತ್ತಾಗಿ ಮಹಂತ ಸ್ಥಿತಿಯನ್ನು ಹೊಂದುವನು ”

ಶ್ರೀ ರಾಮ ॥ ೨ ಭಿಕ್ಷಾ ನಿರೂಪಣೆ ॥ಗುರುಗಳು ಶಿಷ್ಯನಿಗೆ —

“ ಬ್ರಾಹ್ಮಣರ ಮುಖ್ಯ ದೀಕ್ಷೆ ಎಂದರೆ ಭಿಕ್ಷಾಶನ ಕೊಳ್ಳುವದು ‘ ಓಂ ಭವತಿ ’ ಎಂದು ಭಿಕ್ಷ ಬೇಡುವ ಅಧಿಕಾರವು ಇವರಿಗಿದ್ದು ಅದನ್ನು ಅವರು ಕಾಯ್ದುಕೊಂಡು ಹೋಗಬೇಕಾಗುವದು ಭಿಕ್ಷಾನ್ನದಿಂದ ಊಟ ಮಾಡಲು ನಿರಾಹಾರಕ್ಕೆ ದೊರೆಯುವ ಫಲವೇ ಇದಕ್ಕೆ ಸಿಗುವದು ಭಿಕ್ಷಾವೃತ್ತಿಯ ಬ್ರಾಹ್ಮಣನು ಪ್ರತಿಗ್ರಹದಿಂದ ಬದ್ಧನಾಗಲಾರನು ಅಂದರೆ ದಾನ ಸ್ವೀಕರಿಸುವದರಿಂದ ಬರುವ ದೋಷವು ಇವನಿಗೆ ತಟ್ಟ ಲಾರದು ಸಂತರೇ ಇರಲಿ ಯಾರೇ ಆಗಲಿ ಇಂಥವರಲ್ಲಿ ಪ್ರತಿ ದಿನವೂ ಕೋರಿತಂದ ಭಿಕ್ಷಾನ್ನದ ಭೋಜನವು ಅಮೃತದೂಟವಾಗಿ ಪರಿಣಮಿ ಸುವದು ಈ ಮೇಲಿನ ವಿಧಿಯ ಅರ್ಥವನ್ನೇ ಅಂದರೆ ಭಿಕ್ಷೆಯ ಮಹಿಮೆ ಯನ್ನು ಶಾಸ್ತ್ರದಲ್ಲಿ ಸರಿಯಾಗಿ ಹೇಳಿರುವದು ಸಾಕ್ಷಾತ್ ಸರ್ವೋತ್ತಮ ದೇವ ದೇವ ಶಂಕರನು ಭಿಕ್ಷೆಯನ್ನು ಬೇಡುವನೆಂದ ಮೇಲೆ ಭಿಕ್ಷೆಯ ಅಗಾಧ ಮಹಿಮೆ ವರ್ಣಿಸುವದಸಾಧ್ಯವು

ಶ್ರೀ ಗುರುದತ್ತರಾಜನು, ನಾಥವರ್ಯಗೋರಕ್ಷನು ಇವರು ಮುಂತಾಗಿ ಜನರಲ್ಲಿ ನಿಸ್ಪೃಹತೆಯಿಂದ ಭಿಕ್ಷ ಬೇಡುವದಕ್ಕಾಗಿ ಆಗಾಗ್ಗೆ ಪ್ರಕಟವಾಗುತ್ತಿದ್ದರು, ಇರಲಿ ಬೇರೆ ಭಿಕ್ಷೆಯ ಬಗೆಗೆ ಹೇಳಬೇಕಾದರೆ ತಿರಿದುಂಬುವ ಭಿಕ್ಷೆಯ ಹೊರತು ಮನೆ ಮನೆಗೊಂದೊಂದು ದಿನದಂತೆ ವಾರ ಹಚ್ಚಿಕೊಂಡು ಭೋಜನಕ್ಕೆ ಹೋಗುವದು ಇದು ವಾರಾನ್ನವು, ಹಾಗೂ ಸಿರಿವಂತ ಭಾವಿಕನ ಮನೆಯಲ್ಲಿ ದಿನಾಲು ಸಂಬಳದ ಪೂಜಾರಿಯಂತೆ ದೇವರ ತಲೆಯ ಮೇಲೆ ನೀರುಹಾಕಿ ಪ್ರಸಂಗ ಬಿದ್ದರೆ ನೀರುಹೊತ್ತು ಒಪ್ಪೊತ್ತು ಉಂಡು ಬರುವದು ಇದು ನೀರಾನ್ನವು, ಇವೆರಡೂ ಭಿಕ್ಷಾವೃತ್ತಿಯ ಬೇರೊಂದು ಪ್ರಕಾರಗಳು ಆದರೆ ಸಿದ್ಧವಾದ ಕೋರಾನ್ನ ಭಿಕ್ಷೆಯಿಂದ ಬೇಡುವವನಲ್ಲಿಯ ಸ್ವತಂತ್ರತೆಯೂ ನಿಸ್ಪೃಹತೆಯೂ ಈ ವಾರಾನ್ನ ನೀರಾನ್ನಗಳ ಭೋಜನ ಮಾಡುವವರಲ್ಲಿ ಉಂಟಾಗಲಾರವು ಆದ್ದರಿಂದ ಇವು ಒಳಿತಲ್ಲ ಇನ್ನು ಭಿಕ್ಷೆ ಬೇಡುವದೆಂದು, ವಾರಾನುವಾರ ಸಾಕಾಗುವಷ್ಟು ಧಾನ್ಯವನ್ನು ತಿರಿತಂದು ಸಂಗ್ರಹಿಸುವದು ಕಷ್ಟದಾಯಿಕವಲ್ಲದೆ ನಿತ್ಯವೂ ದೊರೆಯತಕ್ಕ ವಿವಿಧ ಭೋಜನ ಪದಾರ್ಥದಷ್ಟು ಸೊಗಸೆನ್ನಿಸುವದಿಲ್ಲ ನವೀನತೆಯು ಎಲ್ಲರಿಗೂ ಬೇಕು ನಿತ್ಯನೂತನ ಭಿಕ್ಷೆಗಾಗಿ ಸಂಚರಿಸಬೇಕು ಹೆಚ್ಚಾಗಿ ಹೊಸ ಹೊಸ ಪ್ರದೇಶಗಳ ಸಂಚಾರ ಕೈಕೊಳ್ಳಬೇಕು ಆದರೆ ಭಿಕ್ಷಾವೃತ್ತಿಯನ್ನು ಬಿಡಕೂಡದು ಅದೇ ಒಳಿತು ಹಾಗು ಅದೇ ಹೊಗಳಿಕೆಗೆ ತಕ್ಕದ್ದು

ನಿರಂತರ ಭಿಕ್ಷೆಯ ಅಭ್ಯಾಸವಿದ್ದವನಿಗೆ ಸ್ವದೇಶವೇನು? ಪರದೇಶವೇನು? ಮೂರೂ ಲೋಕಗಳು ಅವನಿಗೆ ಸ್ವದೇಶವೇ ಸರಿ ಭಿಕ್ಷೆ ಬೇಡುವವನು ಮನಸ್ಸಿಗೆ ಹೇಸಿಕೊಳ್ಳಬಾರದು ನಾಚಿಕೆಗೊಳ್ಳಬಾರದು ದಣಿವು ಶ್ರಮಗಳನ್ನೆಣಿಸದೆ ಪರಿಭ್ರಮಣ ಮಾಡುತ್ತಿರಬೇಕು ಭಗವಂತನ ಸ್ತವನಪರ ಪದ-ಪದ್ಯಗಳನ್ನು ಹಾಡುತ್ತ ಭಿಕ್ಷೆ ಬೇಡುವವನನ್ನು ಸಣ್ಣವರೂ ದೊಡ್ಡವರೂ ಚಮತ್ಕಾರ ದೃಷ್ಟಿಯಿಂದ ಕಂಡು ಮೋಹಗೊಳ್ಳುವರು ಭಿಕ್ಷಾವೃತ್ತಿಯು ಕಾಮಧೇನುವಿದ್ದಂತೆ ಆದರೆ ಕಾಮಧೇನುವು ಸಾಮಾನ್ಯರಿಗೆ ಸದಾವ ಕಾಲವೂ ಫಲಕೊಡುವದಿಲ್ಲ ಭಿಕ್ಷೆಯಿಂದ ಹಾಗಲ್ಲ, ನಿತ್ಯವೂ ಇದರಿಂದ ಫಲಸಿಗುವದು. ಭಿಕ್ಷೆ ಮಾಡಲು ಒಪ್ಪದವನು ದರಿ

ದ್ರನು. ಭಿಕ್ಷೆಯಿಂದ ಜನ ಪರಿಚಯವುಂಟಾಗುವದು ಭ್ರಮೆಯು ದೂರಾಗುವದು ಭಿಕ್ಷೆ ನೀಡಲು ಸಾಮಾನ್ಯವಾಗಿ ಎಲ್ಲರೂ ಹಿಂದು ಮುಂದು ನೋಡುದಿಲ್ಲ ಭಿಕ್ಷಗಾಗಿ ಭಯ ಪಡಬೇಕಾಗಿಲ್ಲ ಅಂದರ ಭಿಕ್ಷೆಯಿಂದ ನಿರ್ಭಯತೆ, ಸ್ವತಂತ್ರತೆಗಳು ಉಂಟಾಗಿ ಮಹಂತತೆಯು ಪ್ರಕಟವಾಗುವದು ಹಾಗು ತದ್ಗುಣದಿಂದ ಭಗವತ್ಪ್ರಾಪ್ತಿಯೂ ಆವದು ಭಿಕ್ಷೆ ಬೇಡುವಲ್ಲಿ ಯಾರಿಂದಲೂ ಅಡೆ ತಡೆಗಳುಂಟಾಗಲಾರವು. ತಿರಿದುಂಬುವವನಿಗೆ ಬಂಧನವಿಲ್ಲ, ಭಿಕ್ಷೆಯಲ್ಲಿ ಕಳೆದ ಕಾಲವು ನಿರರ್ಥಕವೆನ್ನಿಸಲಾರದು

ಭಿಕ್ಷೆಯು ಅಮೃತದ ಒಳ್ಳೆಯಂತಿರುವದು ಎಲ್ಲಿ ಬೇಕಾದಲ್ಲಿ ಅದು ಹಬ್ಬುವದು ಯಾವ ಕಾಲದಲ್ಲಿಯಾದರೂ ಎಂಥ ನಿರ್ಲಜ್ಜನಿಗಾದರೂ ಫಲವನ್ನು ನೀಡುವಂತಹದಾಗಿರುವದು ಜಗತ್ತಿನ ಮೇಲೆ ಹಲವು ದೇಶಗಳಿವೆ ಎಂದಮೇಲೆ ಭಿಕ್ಷಾಟನ ಮಾಡುವವನು ಎಂದೂ ಉಪವಾಸ ಬೀಳನು. ಯಾವದೊಂದು ಸ್ಥಾನಕ್ಕೆ ಅರ್ಥಾತ್ ಯಾವನೊಬ್ಬನಿಗೆ ಭಿಕ್ಷೆ ನೀಡಲು ಜನರಿಗೆ ಭಾರವಾಗಲಾರದು ಗೌಳಿಗ ವೃತ್ತಿ, ಬಣಜಿಗ ವೃತ್ತಿ ಹಾಗು ಒಕ್ಕಲತನ ಇವಾವಗಳಿಗಿಂತಲೂ ಭಿಕ್ಷಾ ವೃತ್ತಿಗೆ ಮಾನ್ಯತೆಯುಂಟು ಭಿಕ್ಷುಕನ ಜೋಳಿಗೆ ಎಂದು ಬರಿದಾಗುವದಿಲ್ಲ ಭಿಕ್ಷೆಯಂಥ ವೈರಾಗ್ಯವಿಲ್ಲ, ವೈರಾಗ್ಯದಂಥ ಐಶ್ವರ್ಯವಿಲ್ಲ ಆದ್ದರಿಂದ ವೈರಾಗ್ಯವಿಲ್ಲದವನು ದರಿದ್ರನು ಒಟ್ಟನಮೇಲೆ ಭಿಕ್ಷೆಯೇ ವೈರಾಗ್ಯ ಅದುವೇ ಐಶ್ವರ್ಯ ಎಂದು ಹೇಳಬಹುದು ಭಿಕ್ಷೆ ಬೇಡುವವನು ಪ್ರತಿಯೊಂದು ಮನೆಗೆ ಹೋಗಿ–'ಭಿಕ್ಷೆ ನೀಡುವಿರಾ?' ಎಂದು ಕೇಳಬೇಕು ಅದಕ್ಕೆ ಅವರ್ರು ನೀಡಿದರೆ ಸ್ವೀಕರಿಸಬೇಕು ಸ್ವಲ್ಪವೇ ನೀಡಿದರೂ ಸರಿ ಭಿಕ್ಷುಕನು ಅಲ್ಪ ಸಂತೋಷಿಯಾಗಿರಬೇಕು ಒಂದು ವೇಳೆ ಒಂದೆಡೆಯಲ್ಲಿ ಭಿಕ್ಷೆ ನೀಡದಿದ್ದರೆ ಮುಂದೆ ಸಾಗಬೇಕ ಭಾವುಕನೊಬ್ಬನು ಬಹಳ ಭಿಕ್ಷೆಯನ್ನು ನೀಡಲು ಬಂದರೆ ಅದರಲ್ಲಿಂದ ಒಂದು ಹಿಡಿಯಷ್ಟು ಭಿಕ್ಷೆಯನ್ನೇ ಮಾತ್ರ ನೀಡಿಸಿಕೊಂಡು ಮುಂದೆ ಸಾಗಬೇಕು

ಸುಖ ರೂಪವಾಗಿ ಆನಂದದಿಂದ ಭಿಕ್ಷೆ ಬೇಡಬೇಕು ಭಿಕ್ಷುಕನಲ್ಲಿ ಸವಿ ಮಾತುಗಳಿರಬೇಕು ಜನರಿಗೆ ಅವನ ಮಧುರ ವಚನಗಳಿಂದ ಸೊಗಸೆನ್ನಿಸಬೇಕು ಮತ್ತು ಸುಖದಾಯಕವಾಗಿರಬೇಕು

ಈ ಪ್ರಕಾರ ಭಿಕ್ಷೆಯ ಸ್ಥಿತಿಯಿರುವದು. ಇದು ನಿಸ್ಪೃಹತೆಯ ಲಕ್ಷಣವು ಮುಂದೊದಗುವ ವಿಪತ್ತುಗಳಿಂದ ಭಿಕ್ಷಾ ವೃತ್ತಿಯು ರಕ್ಷಣೆ ಮಾಡುವದು.

ಶ್ರೀ ರಾಮ ॥ ೩. ಕವಿತ್ವ ಕಲೆಯ ನಿರೂಪಣೆ ॥ ಗುರುಗಳು ಶಿಷ್ಯನಿಗೆ:–

" ಕವಿತ್ವವು ಶಬ್ದವೆಂಬ ಹೂವಿನ ಮಾಲೆಯು ಅದು ಅರ್ಥ ಪರಿಮಳದಿಂದ ಇಡಿಗಿರುವವನ್ನು ಕಂಡು ಭ್ರಮರ ಸ್ವರೂಪವಾದ ಸಂತರು ಒಳ್ಳೆ ಸಂತೋಷ ಹೊಂದುವರು ಇಂಥ ಮಾಲೆಯನ್ನು ತಮ್ಮ ಹೃದಯಾಂತ ಕರಣದಿಂದ ಪೋಣಿಸಿ ಶ್ರೀ ರಾಮಚರಣಕ್ಕೆ ಸಮರ್ಪಣೆ ಮಾಡಲು ಶ್ರೀ ರಾಮನ ಪೂಜೆಯನ್ನು ನೆರವೇರಿಸಿದ ತಾವದು ಆದರೆ ಆ ಮಾಲೆಯು ಓ ಕಾರ ಸೂತ್ರದಲ್ಲಿ ಪೋಣಿಸಿ ಸಿದ್ಧ ಪಡಿಸಿದ್ದಾಗಿರಬೇಕು ಅದರ ಸೂತ್ರವು ಅಖಂಡವಾಗಿರಬೇಕು ಕವಿತ್ವ ರಚನಯು ಪರೋಪಕಾರಕ್ಕೆ ಕಾರಣವಾಗಿರಬೇಕು ಅಂದರೆ ಅದು ಕವಿತ್ವದ ಲಕ್ಷಣವೆಂದು ಹೇಳಲ್ಪಡುತ್ತದ ಇನ್ನೂ ಕವಿತ್ವದ ಲಕ್ಷಣಗಳೆಂದರೆ—

ಕವಿತ್ವದಿಂದ ಭಗವದ್ಭಕ್ತಿ ಹಾಗು ವಿರಕ್ತಿಗಳು ಉಂಟಾಗುವಂತೆ ಯುಕ್ತಿಯಿಂದ ಅವುಗಳ ರಚನಯಾಗಿರಬೇಕು ಸಜ್ಜನರು ಕ್ರಿಯೆಯಿಲ್ಲದೆ ಬರಿಯ ಶಬ್ದ ಜ್ಞಾನವನ್ನು ಒಪ್ಪುವದಿಲ್ಲ ಆದ್ದರಿಂದ ಅನುತಾಪಯುಕ್ತರಾಗಿ ದೇವನನ್ನು ಪ್ರಸನ್ನೀಕರಿಸಿಕೊಳ್ಳಬೇಕು ದೇವ ಪ್ರಸನ್ನತೆಯಿಂದ ಒದಗಿದ ಸಂಗತಿಗಳು ಪ್ರಾಸಾದಿಕಗಳು ಅಂದರೆ ಅವು ಅತ್ಯಂತ ಸ್ಫೂರ್ತಿದಾಯಕಗಳು ಕವಿತ್ವೆಯಲ್ಲಿ ಮತಿವರ್ಧಿನಿ, ವಾಗ್ವರ್ಧಿನಿ ಹಾಗು ಪ್ರಾಸಾದಿಕ ಹೀಗೆ ಮುಖ್ಯ ಮೂರು ಭೇದಗಳು ಮನಸ್ಸಿನಲ್ಲಿ ಅಂದರೆ ಮತಿಯಲ್ಲಿ ಸ್ಫುರಿತವಾಗಿ ಅದರ ಬಲದಿಂದ ರಚಿತವಾದ ಕವಿತ್ವಗಳು ಮತಿವರ್ಧಿನಿಗಳಂದೆನ್ನಿಸುವವು, ಹಲವು ಗ್ರಂಥಗಳನ್ನು ನೋಡಿ ಓದಿ ಆ ಪಾರಶಕ್ತಿಯ ಬಲದಿಂದ ರಚಿಸುವ ಕವಿತ್ವಗಳು ವಾಗ್ವರ್ಧಿನಿಗಳೆನ್ನಿಸುವವು ಆಶು ಕವಿತ್ವಗಳೂ ನವರಸಾತ್ಮಕ ಕವಿತ್ವಗಳೂ ಮತಿ ವರ್ಧಿನಿ ಕವಿತ್ವಗಳು ಮನಸೇಚ್ಛೆಗನುಸರಿಸಿ ಕವಿತೆಯಲ್ಲಿ ಉದ್ಗಾರಗಳನ್ನು ಹೊರ

ಡಿಸುವದು, ಉದರ ನಿರ್ವಹಣೆಗಾಗಿ ವ್ಯುತ್ಪನ್ನ ಮತಿಯುಕ್ತ ಕವಿತ್ವದಿಂದ ನರಸ್ತುತಿಯನ್ನು ಮಾಡುವದು ಇತ್ಯಾದಿ ಬುದ್ಧಿ ಪ್ರಚೋದನೆಯ ಪ್ರಕಾರಗಳು ಮತಿವರ್ಧಿನಿಯಲ್ಲಿ ಬರುವವು ಇಂಥ ಕವಿತ್ವಗಳಿಂದ ಸದ್ಬೋಧವಾಗದ ಆದ್ದರಿಂದ ಇಂಥ ಕವಿತೆಗಳಿರಬಾರದು ಒತ್ತಾಯದಿಂದ ಶಬ್ದಗಳನ್ನೆಳೆತಂದು ಪೋಣಿಸಿ ಸಿದ್ಧಪಡಿಸಿದ ಕವಿತೆ ಇರಬಾರದು ಪಾಖಂಡ ಮತವನ್ನು ಪುರಸ್ಕರಿಸುವ ಅರ್ಹತೆಯುಳ್ಳ ಕವಿತೆಗಳಿರಬಾರದು ಇದರಂತೆ ವಾದಕ್ಕೆ ಆಸ್ಪದವನ್ನೀಯುವ, ರಸಭಂಗವನ್ನುಂಟು ಮಾಡುವ, ದೃಷ್ಟಾಂತ ಹೀನವಾಗಿ ವಸ್ತುಕವ ರಂಗವನ್ನು ಹೀನಾಯಗೊಳಿಸುವ ನಿರರ್ಥಕವಾಗಿ ವಿಸ್ತಾರವೆನ್ನಿಸುವ, ಜೊಳ್ಳು ಮಾತುಗಳಿಂದ ತುಂಬಿರುವ, ಬುದ್ಧಿ ಸೂರ್ವಕವಾಗಿ ಕುಟಿಲ ಮತವನ್ನು ವ್ಯಕ್ತಗೊಳಿಸುವ, ಎಲ್ಲರಿಂದಲೂ ಹೊಲ್ಲನೆಂದೆನ್ನಿಸುವ ಇವೆಲ್ಲ ಕವಿತ್ವಗಳು ಇರಕೂಡದು ಕವಿತ್ವದಲ್ಲಿ ಪುನರುಕ್ತಿ, ಛಂದೋಭಂಗ, ಪ್ರಾಸ ವಿರಹಿತ ಈ ದೋಷಗಳಿರಬಾರದು ಇವೂ ಅಲ್ಲದೆ ವ್ಯುತ್ಪತ್ತಿ, ತರ್ಕ, ಕಲೆ, ಶಬ್ದ, ಭಕ್ತಿ, ಜ್ಞಾನ, ವೈರಾಗ್ಯ ಈ ಎಲ್ಲವು ಆ ಬಗಗೆ ಹೀನತೆ ವ್ಯಕ್ತಪಡಿಸುವ ಕವಿತ್ವವಿರಬಾರದು ಭಕ್ತಿ ರಹಿತವಾಗಿರುವ ಕವಿತೆಗಳೆಂದರೆ ಕೇವಲ ವಿನೋದಕ್ಕಾಗಿ ರಚಿತವೆಂದು ತಿಳಿಯಬೇಕು ಪ್ರೀತಿಯಿಲ್ಲದ ಮಾತುಗಳಿಂದ ಬೇಸರೆನ್ನಿಸುವಂತೆ ಈ ಕವಿತ್ವಗಳೂ ತಲೆ ಚಿಟ್ಟೆನ್ನಿಸುವವು ಭಕ್ತಿಯಿಲ್ಲದೆ ಮಾಡಿದ ಅನುವಾದವೂ, ಪ್ರೀತಿಯಿಲ್ಲದೆ ಮಾಡಿದ ಸಂವಾದವೂ ವಿನೋದಕ್ಕಾಸ್ಪದವೆಂದೇ ಹೇಳಬಹುದು ಈ ಪ್ರಕಾರ ಮತಿವರ್ಧಿನಿ ಕವಿತೆಗಳಿವೆ ಅಹಂತತೆಯ ಪಿಶಾಚ್ಚದ ಚೇಷ್ಟೆಯಂತೆ ಈ ಕವಿತ್ವಗಳ ಸ್ಥಿತಿಯುಂಟು ಇನ್ನು ಪ್ರಾಸಾದಿಕ ಕವಿತ್ವಗಳ ಬಗೆಗೆ ಹೇಳುವೆವು.

ಈ ಲೋಕದ ಐಶ್ವರ್ಯವೂ ಕನಕ-ಕಾಂತೆಯರೂ ಇವರನ್ನು ಕಾಕವಿಷ್ಠೆಯಂತೆ ತಿಳಿಯುವ ಮನಸು ಭಗವದ್ಭಜನೆಯಲ್ಲಿ ತಲ್ಲೀನವಾಗುವ,ಮೇಲಿಂದಮೇಲೆ ಚಂದ್ರಕಲೆಯು ವರ್ಧನೆಯಂತೆ ಭಕ್ತಿಯ ರುಚಿಯನ್ನು ಹೆಚ್ಚಿಸುವ, ಸದಾಸರ್ವಕಾಲವೂ ಅಂತಕರಣವು ಭಕ್ತಿರಂಗದಲ್ಲಿ ಉದ್ರೇಕಿಸುವ ಹೃದಯಾಂತರಾಳದಲ್ಲಿ ಭಗವಂತನನ್ನು ಸ್ಥಿರವಾಗಿರಿಸಿ ನಿವಾಂತದಲ್ಲಿ ಸ್ವಭಾವ

ದಿಂದ ಬ್ರಹ್ಮನಿರೂಪಣೆ ಮಾಡುವ ಇಂಥ ಭಾವನೆಗಳನ್ನು ವ್ಯಕ್ತಪಡಿಸುವ ಕವಿತ್ವಗಳು ಪ್ರಾಸಾದಿಕಗಳು ಹೃದಯದಲ್ಲಿ ಗೋವಿಂದನನ್ನಿರಿಸಿಕೊಂಡು ಭಕ್ತಿಯಲ್ಲಿ ಮಗ್ನನಾಗುವದು. ಭಕ್ತಿಯ ಹೊರತು ಇನ್ನಿತರಗಳನ್ನು ಮಾಡದಿರುವದು ಅಂತಃಸ್ಫೂರ್ತಿಯಿಂತೆ ವಾಣಿಯಿಂದಲೂ ಪ್ರೇಮರಸ ಸುರಿಸುವದು ಕರುಣಾ ರಸಪೂರಿತ ಕೀರ್ತನೆಯಲ್ಲಿ ದೇಹದ ಪರಿವೆಯಿಲ್ಲದೆ ಲಜ್ಜೆಯನ್ನು ಗಣಿಸದೆ ಹಾಡುತ್ತ ಕುಣಿದಾಡುವದು, ಅಹಂಭಾವವನ್ನು ಕಡೆಗಣಿಸಿ ಹತ್ತಿಕ್ಕುವದು ಬಾಹ್ಯ ಸೃಷ್ಟಿ ನಿರೀಕ್ಷಿಸದೆ ಹೃದಯ ವ್ಯಾಪಕ ಜನಾರ್ದನನನ್ನು ಚಿತ್ತದಲ್ಲಿಯ ಊ ದೃಷ್ಟಿಯಲ್ಲಿಯೂ ತುಂಬಿಕೊಂಡಿರುವದು, ಸ್ವೇಚ್ಛೆಯಿಂದ ಭಗವಂತನ ಹಲವು ರೂಪ—ಧ್ಯಾನ— ಯಶ— ಕೀರ್ತಿ— ಪ್ರತಾಪಗಳನ್ನು ಕುರಿತು ಹಾಡುತ್ತಿರುವದು, ಈ ಎಲ್ಲ ಪ್ರಸಂಗಗಳಲ್ಲಿ ವೈರಾಗ್ಯ ಸಂಪನ್ನ ಹಾಗು ಭುಕ್ತಿ ಸುಖವನ್ನನುಭವಿಸುವ ಭಕ್ತನ ವೈರಾಗ್ಯ ಭಕ್ತಿಯ ಸಂಗತಿಗಳನ್ನು ಸ್ಪಷ್ಟವಾಗಿ ಪ್ರಕಾಶಪಡಿಸುವ ಕವಿತ್ವಗಳೇ ಪ್ರಾಸಾದಿಕ ಕವಿತೆಗಳು. ನಿರ್ಮಲ ಹಾಗು ಸರಳ ಕವಿತ್ವಗಳಿರಬೇಕು ದೂರಾನ್ವಯವಿರಬಾರದು ಅಹಂಭಾವ ವಿವರ್ಜಿತ ಕವಿತ್ವಗಳಿರಬೇಕು ಅರ್ಥ ಗೌರವ ಚೆನ್ನಾಗಿರಬೇಕು ಕವಿತ್ವದಲ್ಲಿ ಹರಿ ಕೀರ್ತಿಯ ಹೆಚ್ಚಳವನ್ನು ವ್ಯಕ್ತಪಡಿಸುವ ಗೀತೆಗಳಿರಬೇಕು ಕವಿತ್ವವು – ರಮ್ಯ, ಮಧುರ, ಸುಲಭ, ಅಲ್ಪರೂಪ, ಯಮಕಯುಕ್ತ,ಕೋಮಲ ಕೌಶಲ್ಯಪೂರ್ಣ, ಭಕ್ತಿ ಭಾವಯುಕ್ತ ರಸಭರಿತ ಈ ಪ್ರಕಾರವಿರಬೇಕು. ಅಕ್ಷರಬಂಧ, ಪದಬಂಧ, ಚಾತುರ್ಯ ಮುಂತಾದವುಗಳಿಂದ ಕೂಡಿರಬೇಕು. ಯುಕ್ತಿ ಬುದ್ಧಿ ಸಿದ್ಧಿಗಳಿಂದ ಯುಕ್ತವಾಗಿ ಸಮನ್ವಯ ಪೂರ್ಣವಿರಬೇಕು. ಹಲವು ರಸ ಸ್ಫೂರ್ತಿಗಳು, ಧೃತಿ—ಧಾರಣಗಳು, ಸಂಶಯ–ನಿರಸನಗಳು, ಸಾಹಿತ್ಯ ದೃಷ್ಟಾಂತಗಳು, ಸಂದೇಹರಹಿತಜ್ಞಾನವು ಇವೆಲ್ಲವು ಸಾಕಷ್ಟು ತಕ್ಕವಾಗಿ ಇರಬೇಕು ಒಳ್ಳೆ ವಿಚಾರಗಳು, ಯೋಗ, ವಿವರಣೆ, ತತ್ತ್ವ ವಿಚಾರ, ಸಂಶಯುಚ್ಛೇದ, ಪುರಶ್ಚರಣ, ತೀರ್ಥಾಟನೆ ಇವೆಲ್ಲವುಗಳ ಸುಸಂಬದ್ಧ ವರ್ಣನೆಗಳ ಕವಿತ್ವವಿರಬೇಕು ಕವಿತ್ವ ವಾಚನದಿಂದ ಅನುತಾಪ ಹುಟ್ಟಬೇಕು, ಲೌಕಿಕವು ಲಜ್ಜೆಗೊಳ್ಳಬೇಕು ಜ್ಞಾನೋದಯವಾಗಬೇಕು ಜ್ಞಾನವು ಪ್ರಬಲವಾಗಬೇಕು, ವೃತ್ತಿಯ ಅಸ್ತವಾಗಬೇಕು

ಭಕ್ತಿ ಮಾರ್ಗದ ತಿಳುವ ಕೆಯಾ-ಬೇಕು, ದೇಹ ಬುದ್ಧಿ ದೂರಾ-ಬೇಕು, ಭವಸಾ ರವು ಬತ್ತ ಬೇಕು, ಭಗ-ಂತನು ಪ್ರಕಟವಾಗಬೇಕು, ಸದ್ಬುದ್ಧಿ ಹುಟ್ಟಬೇಕು, ಪಾಖಂಡತ್ವ ಹಾಳಾಗಬೇಕು, ಭಾಸವಾದುದರ ನಿರಸನ ವ ಗಬೇಕು, ಭಿನ್ನತ್ವ ನಾಶವಾ-ಬೇಕು ಹೃದಯ ಸಮಾಧಾನ ಹೊಂದಬೇಕು, ಸಂಸಾರ ಪಾಶ ಹರಿದ್ಹೋಗಬೇಕು ಸಜ್ಜನರಲ್ಲ ಕವಿತ್ವಕ್ಕೆ ಮೆಚ್ಚಬೇಕು

ಈ ಪ್ರಕಾರ ಕವಿತ್ವದ ಲಕ್ಷಣಗಳನ್ನು ವಿಶಿಷ್ಟವಾಗಿ ಹೇಳಿದೆವು ಇನ್ನೂ ಆವಷ್ಟೋ ಇರುವವು ಆ ಗಾಹನಗಾಗಿ ಕೆಲವನ್ನು ಮಾತ್ರ ಇಲ್ಲಿ ಹೇಳಿದವು

ಶ್ರೀ ರಾಮ || ೪ ಕೀರ್ತನ ಲಕ್ಷಣ || ಶ್ರೀ ಗುರುಗಳು ಶಿಷ್ಯನಿಗೆ—

" ಕಲಿಯುಗದಲ್ಲಿ ಕೀರ್ತನ ಮಾಡಬೇಕು ಕುಶಲತಯಿಂದಲೂ ಕೋಮಲ ಸ್ವರ ಂದಲೂ ಹಾಡಬೇಕು ಕೀರ್ತನದಲ್ಲಿ ಕಠಿಣ–ಕರ್ಕಶ ಹಾ-ು ಕ್ಷುದ್ರ ವೃತ್ತಿಯನ್ನು ಕಡಗಣಿಸಿ ಸಾಗಬೇಕು

ಖಲ ಜನರದುರು ಕೀರ್ತನೆ -ಾಡಕೂಡದು ಶ್ರೋತೃಗ ಲ್ಲಿ ಜಗಳ ಗೊಂದಲುಗಳೇಳದಂತೆ ಕೀರ್ತನೆ ನಡೆಯಿಸಬೇಕು ನೀಚರೂಡನೆ ಮಾತು ಕತೆಯಾಡ ಕೂಡದು, ಸತ್ಯಾಸತ್ಯತೆಗಳಿಂದ ಮನಸ್ತಾಪವಾಗಗೊಡ ಬಾರದು

ಗಾಯನ ಗೀತೆಗಳು ಸರಸವಾಗಿ ಸಾಗಬೇಕು ಅಂದರೆ ಧೈರ್ಯ ಗುಂದಿ ಹಾಡಬಾರದು ಗುಪ್ತವಾದ ವಿಷಯಗಳನ್ನು ಗರ್ಜಿಸಿ ಹೇಳ ಕೂಡದು ಶ್ರೀ ಹರಿಯ ಗುಣಾನುವಾದದ ಪದಗಳು ಹೇರಳವಾಗಿರ ಬೇಕು

ಘನಾಂಬುವಿನ ಕಣಕ್ಕೆ ಚಾತಕವು ಆತುರ ಪಡ ವಂತೆ ಶ್ರೋತೃ ವರ್ಗವು ಕೀರ್ತನೆಯ ಶ್ರವಣಕ್ಕಾಗಿ ಆತುರಗೊಳ್ಳುವ ತೆರದಿಂದ ಕೀರ್ತನೆ ನಡೆಯಬೇಕು ವಿಷಯಾಂತ ದಿಂದ ಕೀರ್ತನೆ ನಡೆ ಕೂಡದು ಯಾವ ದೊಂದು ವ್ಯಕ್ತಿಯ ಮೇಲೆ ಹರಿಹಾಯ ಕೂಡದು ಗಡಿಬಿಡಿಯಿಲ್ಲದೆ ಕೀರ್ತನ ನಡೆಯಬೇಕು, ಭಗವನ್ನಾಮ, ಸಗುಣ ಧ್ಯಾನ, ದೇವ ಲೀಲೆ ಇವುಗಳಿಂದ ಯುಕ್ತವಾದ ಹಾಡು ಗೀತೆಗಳಿರಬೇಕು

ಚತುರ ಕೀರ್ತನಕಾರನು ಚಂಚಲ ವೃತ್ತಿ ಹಿಡಿಯಬಾರದು ವಿಷಯ ನಿವೇದಿಸುವಲ್ಲಿ ತಪ್ಪಬಾರದು ಶ್ರೋತೃವರ್ಗದ ಮೇಲೆ ಸಿಟ್ಟಿಗೇಳಬಾರದು ಇನ್ನೊಬ್ಬರ ಮನಸ್ಸು ನೋಯಿಸಬಾರದು ತನ್ನ ಹೇಳಿಕೆಯಿಂದ ಯಾರಿಗೂ ತೊಂದರೆ ಕೊಡಬಾರದು

ಛತ್ರಾಧಿಪತಿಯಿಂದ ದರಿದ್ರನವರೆಗೆ ಎಲ್ಲರೂ ಕೀರ್ತನಕಾರನಿಗೆ ಸಮರು ದರಿದ್ರನಾದ ಶ್ರೋತೃವೆಂದು ಅವನನ್ನು ಕಡೆಗಣಿಸ ಕೂಡದು

ಜೀ ಜೀ ವೃತ್ತಿಯು ಕೀಳ್ತರವಾದದು ಕೀರ್ತನಕಾರನು ಯಾರ ಭಿಡೆ ಮುರವತ್ತುಗಳಿಗೆ ಒಳಗಾಗಿ ಅವರ ಬಾಲ ಬಡೆಯಬಾರದು. ಕೀರ್ತನೆ ನಡೆದಾಗ ಜಾಗ್ರತೆಯಿಂದ ಇದ್ದವನು ಪುನೀತನಾಗುವನು ಜನತೆಗೆ ಕೀರ್ತನೆಯಿಂದ ಬೋಧಿಸಿ ಅವರಲ್ಲಿ ಜನಾರ್ದನ ಭಕ್ತಿಯನ್ನು ಹುಟ್ಟಿಸಿ ಸಂತುಷ್ಟಗೊಳಿಸಬೇಕು

ಝರಿಯಂತೆ ಕೀರ್ತನಕಾರನ ವಾಕ್ಪ್ರವಾಹವು ಸಾಗಿರಬೇಕು ಅವನ ಮೃದುವಾದ ಹೃದಯ ಹಾಗು ಪವಿತ್ರಾಚರಣೆಗಳಿಂದ ಶ್ರೋತೃವರ್ಗವು ತಾನಾಗಿಯೇ ಹೆಚ್ಚಾಗುವದು ಕೀರ್ತನಕ್ಕಾಗಿ ಬರಬೇಕೆಂದು ಯಾರನ್ನೂ ಕರೆಯಿಸಬೇಕಾಗುವದಿಲ್ಲ

ಟವಾಳಿಯನ್ನೆಬ್ಬಿಸುವ ಜನರು ಶ್ರೋತೃವರ್ಗದಲ್ಲಿ ಕಂಡುಬಂದರೆ ಕೀರ್ತನಕಾರನು ಎದೆಗುಂದಬಾರದು, ಅವರನ್ನು ಟಕಮಕ ನೋಡದೆ ತನ್ನ ಕೀರ್ತನವನ್ನು ಹಾಗೇ ಸಾಗಿಸಬೇಕು ಸಮಯ ಸಾಧಿಸಿ ಹೇಳಿಕೆಯಲ್ಲಿಯೇ ಜಾಣತನದಿಂದ ನಿರಾಕರಿಸಬೇಕು

ರೀತಿಗನುಸರಿಸಿ ಕೀರ್ತನಕಾರನ ವೇಷ ಭೂಷಣಗಳಿರಬೇಕು ಕೀರ್ತನ ಬೋಧೆಯು ಸ್ಥಗಿತವಾಗದಂತೆ ಪೂರ್ವ ಪ್ರಯತ್ನ ಮಾಡಿಕೊಂಡಿರಬೇಕು ಶ್ರೋತೃಗಳಿಗೆ ರಕ್ಕಿಸುವ ವರ್ತನವಿರಕೂಡದು ಎಲ್ಲರಿಗೂ ಧ್ಯಾನವುಂಟಾಗುವಂತ ಕೀರ್ತನೆ ಸಾಗಿಸಬೇಕು

ಡೊಂಕು ಕಬ್ಬಿನಲ್ಲಿಯೂ ಸೀರಸವು ಇರುವದು ಕೀರ್ತನಕಾರನ ಸ್ವರೂಪ ಹೇಗಿದ್ದರೂ ಅವನು ಮಾಡುವ ಕೀರ್ತನವು ರಸಭರಿತವಾಗಬೇಕು ಅಂಜಬಾರದು, ಅಳುಕಬಾರದು ಆತ್ಮ ವಿಶ್ವಾಸದಿಂದ ಕೀರ್ತನ

ಸಾಗಿಸಬೇಕು ನಿಶ್ಚಿತ ಭಾಷಣ ಮಾಡಬೇಕು ದುರಭಿಮಾನವಿರಕೂಡದು ಕೀರ್ತನ ರಂಗವು ಶ್ರೋತೃಗಳ ಪ್ರೇಮ ರಂಗಕ್ಕಿಳಿಯುವಂತೆ ಕೀರ್ತನೆ ಮಾಡಬೇಕು ಚತುರತೆ, ನಮ್ರತೆ, ಸವಿನುಡಿ, ಗಾಯನ ಪಟುತ್ವ ಇವೆಲ್ಲವು ಕೀರ್ತನ ಕಾರನಲ್ಲಿರಬೇಕು

ಢಾಲು ಶೂರನ ಕೈಯಲ್ಲಿರುವಂತೆ ಕೀರ್ತನಕಾರನಲ್ಲಿ ಸಹನೆಯಿರಬೇಕು. ಶಸ್ತ್ರ ಪ್ರಹಾರದಿಂದ ಢಾಲಿಗೆ ಆಗುವದೇನು? ಅಂತೆಯೇ ನಿಂದಕ ಶ್ರೋತೃವಿನ ವಾಕ್ ಪ್ರಹಾರಗಳಿಂದ ಕೀರ್ತನಕಾರನು ಡಳಮಳಿಸಕೂಡದು

ತಾಳ ಮೃದಂಗಗಳನ್ನನುಸರಿಸಿ ತಾನ ಮಾನ ಸುಸ್ವರಮೊಂದಿಗೆ ಗಾಯನ ಮಾಡುವ ಕಲೆಯಿರಬೇಕು ಬುದ್ಧಿವಂತ ಶ್ರೋತೃಗಳು ಪ್ರಸನ್ನಚಿತ್ತರಾಗಿ ಭಕ್ತಿ ಪರವಶರಾಗುವ ಹಾಗೆ ಕೀರ್ತನೆ ನಡೆಯಬೇಕು.

ಥೈ ಥೈ ಕುಣಿಯುತ್ತ ಉಚ್ಚಸ್ವರದಿಂದ ಹಾಡಿ ಶ್ರೋತೃಗಳ ಚಿತ್ತವು ಶ್ರವಣದಲ್ಲಿ ಸ್ಥಿರಗೊಳ್ಳುವಂತೆ ಮಾಡುವ ಜಾಣ್ಮೆ ಕೀರ್ತನಕಾರನಲ್ಲಿರಬೇಕು

ದಕ್ಷತೆಯು, ದಾಕ್ಷಿಣ್ಯವು, ಸಭ್ಯತನವು ಇವೆಲ್ಲ ಒಟ್ಟಾಗಿ ಹರಿದಾಸನಲ್ಲಿರಬೇಕು ಪದ ಪ್ರಬಂಧಗಳಿಂದ ಕೂಡಿದ ಅಂದರೆ ಚಾತುರ್ಯಯುಕ್ತ ಕಾವ್ಯಗಳಿಂದ ಭಾಂಡಾರವು ತುಂಬಿಹೋಗುತ್ತದೆ ಮತ್ತು ಶ್ರೋತೃಗಳ ಅಂತಃಕರಣವು ಹೊಯ್ದಾಡುವದು

ಧೂರ್ತರೂ ಆ ಕೂಡಲೆ ಅಲ್ಲಿ ಓಡಿ ಬರುವರು ಅವರ ಮತಿಯು ದಂಗಾಗಿ ಹೋಗುವದು. ಅವರು ತಮ್ಮಲ್ಲಿಯ ಅಪಾತ್ರತೆಯ ಬಗೆಗೆ ಅಂಜುತ್ತಿದ್ದರೂ ಕೂಡ ರಂಗದಿಂದ ದಂಗಾಗುವರು

ನಿಯಮಿತತನದಿಂದ ವರ್ತಿಸುವ ಎಷ್ಟೋ ವಿದ್ವಾಂಸರು ಆಗ ಅಲ್ಲಿ ಕೂಡುವರು ಈ ಪ್ರಕಾರ ನಡೆಯುವ ಕೀರ್ತನ ರಂಗವು ಮಹತ್ವದ್ದಾಗುವದು.

ಪಾಪಗಳು ದೂರಾಗಿ ಪುಣ್ಯ ಪ್ರಕಟವಾಗುವದು. ಶ್ರೋತೃಗಳು ಪ್ರವೃತ್ತಿವಂತರಿ ಕೀರ್ತನಕ್ಕೆ ಬರುವರು.

ಫಲಾಪೇಕ್ಷೆಯಿಲ್ಲದ ಭಕ್ತರ ಹೊರತು ಇನ್ನಾವಕ್ಕೂ ಅಲ್ಲಿ ಆಸ್ಪದವಿಲ್ಲ ನಿಂದೆ—ಮೋಸಗಳು, ಸ್ವಚ್ಛಂದ ಹಾಸ್ಯಗಳು, ಜೊಳ್ಳು ಹಾಗು ಬಡ ಬಡಿಕೆಯ ಮಾತುಗಳು ಇವೆಲ್ಲಕ್ಕೆ ಆ ಕೀರ್ತನ ರಂಗದಲ್ಲಿ ಸ್ಥಾನವಿಲ್ಲ

ಬಹು ಜನ ಶ್ರೋತೃಗಳಿಗೆ ಮೆಚ್ಚುಗೆಯಾದ ಆ ರಂಗದಲ್ಲಿ ಕೀರ್ತನಕಾರನು ಬಹಳ ಮನ್ನಣೆ ಪಡೆಯುವನು ಬಲುತೆಯಿಂದ ಆತನನ್ನು ಬೇರೂರಿಗೆ ಕರೆದೊಯ್ಯುವರು

ಭಕ್ತಿ ಭಾವ ಬಲದಿಂದ ಆತನು ಹಲವರಲ್ಲಿ ಮಹತ್ವ ಪಡೆಯುವನು ಪರೋಪಕಾರದಿಂದ ಭಾವಿಕರಲ್ಲಿ ಭೂಷಣ ಪ್ರಾಯನಾಗುವನು

ಮನಸ್ಸಿನಿಂದ ಆ ಕೀರ್ತನ ಕಾರನನ್ನು ಎಲ್ಲರೂ ಪೂಜ್ಯನೆಂದೆಣಿಸತಕ್ಕದ್ದು ಕನಕ ಕಾಂತಾದಿಗಳ ಮಮತೆಯಿಂದ ಯಾರೂ ಉನ್ಮತ್ತರಾಗಬಾರದು ಮಮಕಾರವು ಯಾರಿಗೂ ಒಳಿತಲ್ಲ ಎಷ್ಟೋ ಹರಿದಾಸರು ತಾವಾಗಿಯೇ ಬೇಕಾದಲ್ಲಿಗೆ ಹೋಗಿ ಕೀರ್ತನ ಮಾಡುವ ಕುರಿತು ದೈನ್ಯಾಶೆ ಬಡುವರು ಇದು ಕೇವಲ ಹೊಟ್ಟೆಗಾಗಿ

ಯಾವಾಗಲೂ ಹರಿದಾಸನು ನಿಸ್ಪೃಹನಿರಬೇಕು. ಯಾರಿಗೂ ಒತ್ತಾಯ ಮಾಡಬಾರದು

ರಸಭರಿತ ಕೀರ್ತನವಿರಬೇಕು ರಾಗ ರಾಗಿಣೀಯುಕ್ತ ಸಂಗೀತವಿರಬೇಕು ಹರಿದಾಸನ ಬಳಿಯಲ್ಲಿ ಕೀರ್ತನ ಬೋಧೆಯೆಂಬ ರತ್ನವಿದೆ ಆದು ಶ್ರೋತೃವೆಂಬ ರತ್ನ ಪರೀಕ್ಷರಿಂದ ಒರೆಗೆ ಹಚ್ಚಬೇಕು ಅಂದರೆ ಈ ಪರೀಕ್ಷಕರು ಗುಣಗ್ರಾಹಿಗಳಾಗಿರಬೇಕು

ಲಕ್ಷಣವಂತ ಹರಿದಾಸನ ಮುಖದಿಂದ ನಿರರ್ಥಕ ಶಬ್ದಗಳು ಹೊರಬೀಳಲಾರವು ಅವನ ಚಿತ್ತದಲ್ಲಿ ಸಲ್ಲದ ಅಮಂಗಲ ವಾಕ್ಯಗಳು ಸೇರಲಾರವು

ವಕ್ತೃತ್ವ ಕಲೆಯು ಹರಿದಾಸನಲ್ಲಿ ಮಾದರಿಯದಾಗಿರುವದು ಆದರಿಂದ ಎಲ್ಲರಿಗೂ ಸಮಾಧಾನವಾಗುವದು ವಿನಯವು ಅವನಲ್ಲಿಯ ಅಮೂಲ್ಯವಸ್ತುವು

ಸತತವೂ ಆತನು ಸರ್ವರಿಗೆ ಸಾರಾಸಾರ ವಿಚಾರಗಳನ್ನು ಸರಿಯಾಗಿ ಪುನಃ ಪುನಃ ತಿಳಿಯು ಹೇಳುವನು ಸಾಹಿತ್ಯ ಸಂಗೀತಗಳ ಪ್ರೀತಿಯು ಸಜ್ಜನರಿಗಿರುವದು ಸತ್ಯಾ ಸತ್ಯಗಳಲ್ಲಿ ಸತ್ಯವು ಸತ್ಯವೇ, ಅಸತ್ಯವು ಅಸತ್ಯವೇ ಆಗಿರುವದು

ಶೋಧಿಸಿದರೂ ಸಿಗುವದಕ್ಕೆ ದುರ್ಮಿಳ ವಸ್ತುವೆಂದರೆ ವಿದ್ಯಾವಂತನು ಶ್ರುತಿ ಶಾಸ್ತ್ರಗಳಿಗೂ ಕೂಡ ಆವನ ಯೋಗ್ಯತೆಯ ಅಂತವು ಹತ್ತುವದಿಲ್ಲ ಗಿಳಿಮರಿಗೂ ಕೂಡ ವಿದ್ವಾಂಸನ ಶಬ್ದ ಮಾಧುರ್ಯವನ್ನು ಅನುಕರಿಸಲಿಕ್ಕ ಬರಲಾರದು

ಹೊಲ್ಲದ ಮಾನವನು ಆಚಾರವಂತರನ್ನು ಕಂಡು ಹೆಚ್ಚೆಚ್ಚಾಗಿ ಹಾಸ್ಯ ಮಾಡುವನು ಹಾ ಹಾ ಹೋ ಹೋ ಎಂದು ಅಣಕವಾಡುವನು ಇಂಥ ಹೀನವೃತ್ತಿಯುವನಿಗೆ ಪರಲೋಕದ ಹಿತವು ಎಂದೂ ಸಾಧಿಸಲಾರದು

ಕ್ಷರ ರಹಿತ ಮತ್ತು ಅಲಕ್ಷ್ಯ ಬ್ರಹ್ಮ ವಸ್ತುವಿನ ಕಡೆಗೆ ಲಕ್ಷ್ಯವನ್ನಿಟ್ಟು ನಿರೀಕ್ಷಿಸಬೇಕು ನೋಡವ ಕಣ್ಣುಗಳನ್ನು ಅವನು ಲಕ್ಷಿಸುವನು ಅಲಕ್ಷ್ಯನಲ್ಲಿ ವಿಹಂಗಮಮಾರ್ಗದಿಂದ ಅಂದರೆ ತ್ವರಿತಗತಿಯಿಂದ ಅವನು ಲಯ ಹೊಂದುವನು

ದೇಹದಲ್ಲಿ ( ಕ್ಷೇತ್ರದಲ್ಲಿ ) ಇರುವವನು ಆತ್ಮನು [ಕ್ಷೇತ್ರಜ್ಞನು] ಅವನು ಜಾಗೃತನಾಗುವನು, ಕ್ಷಮಾ ಶೀಲತೆಯಿಂದ ಕ್ಷಮಿಸುವನು ಹಾಗೂ ಕ್ಷಮೆ ಮಾಡಿಸುವನು ಎಲ್ಲರಲ್ಲಿ ಇರುವ ಆತ್ಮನಲ್ಲಿ ಕ್ಷಮೆ ಮಾಡುವ ಗುಣವೂ ಉಂಟು ಪ್ರಕ್ಷೋಭಗೊಳ್ಳುವ ಧರ್ಮವೂ ಉಂಟು

[ ಸೂಚನೆ — ರಸಭರಿತವಾದ ದಾಸಬೋಧೆಯ ಮೂಲದಲ್ಲಿ ಈ ಸಮಾಸದಲ್ಲಿ 'ಕ' ಕಾರದಿಂದ 'ಕ್ಷ'ದ ವರೆಗೆ ಇರುವ ವ್ಯಂಜನಗಳನ್ನು ಒಂದೊಂದು ವ್ಯಂಜನಾದಿ ಶಬ್ದಗಳಿಂದ ಒಂದೊಂದು ಓವಿ [ಶ್ಲೋಕ] ಯನ್ನು ಇಟ್ಟಿದೆ ಪ್ರತಿಯೊಂದು ಓವಿಯಲ್ಲಿ ಆ ವ್ಯಂಜನಾದಿ ಶಬ್ದಗಳು ಹಲವು ಇರುವವು ಆದರೆ ಕನ್ನಡದಲ್ಲಿ ಆ ಮಹದ್ಗ್ರಂಥವನ್ನು ವಚನ ರೂಪಕ್ಕಿಳಿಸುವಾಗ ಮೊದಲಿನ ಒಂದೊಂದು ಶಬ್ದವನ್ನು ಮಾತ್ರ ಆ ಬಗೆಯಾಗಿ ಇಟ್ಟು ಬರೆಯಲಾಗಿದೆ. ]

ಶ್ರೀ ರಾಮ ॥ ೫ ಹರಿಕಥೆಯ ಲಕ್ಷಣ ॥ ಗುರುಗಳು— "ಹರಿಕಥೆಯನ್ನು ಹೇಗೆ ಮಾಡಬೇಕು ? ಕಥೆಗೆ ರಂಗವನ್ನು ಅದಾವ ಬಗೆಯಿಂದ ಹೆಚ್ಚಿಸಬೇಕು ? ಶ್ರೀ ರಘುರಾಮ ಕೃಪೆಯ ಪದವಿಯನ್ನೆಂತು ದೊರಕಿಸಬೇಕೆಂಬುದನ್ನು ಕೇಳಿರಿ " ಎಂದು ಹೇಳುವದಕ್ಕೆ ಆರಂಭಿಸಿದರು ಎಂತೆಂದರೆ

"ಬಂಗಾರಕ್ಕೆ ಪರಿಮಳವು ಕೂಡಿದಂತೆಯೂ, ಕಬ್ಬಿನ ಕೋಲಿಗೆ ಮೃದು ಮಧುರ ರಸಭರಿತ ಫಲಗಳುಂಟಾದಂತೆಯೂ ಹರಿದಾಸನು ಲಕ್ಷಣಯುತನಾಗಿರಬೇಕ ಅವನು ವಿರಕ್ತನೂ, ಸುಜ್ಞಾತನೂ, ಅನುಪಮ ಭಕ್ತಿಯುಳ್ಳವನೂ ವ್ಯುತ್ಪನ್ನಮತಿಯೂ ಆಗಿರಬೇಕಲ್ಲದ ಹಟವಾದಿಯಾಗಿರಕೂಡದು ಅವನಲ್ಲಿ ಸಾಕಷ್ಟು ಗಾಯನಕಲೆ ಇರಬೇಕು ಬ್ರಹ್ಮಜ್ಞಾನಿಯಾಗಿದ್ದರೂ ನಿರಭಿಮಾನತೆ ನಿರ್ಮಾತ್ಸರ್ಯತೆ ಸಜ್ಜನ ಪ್ರೀತಿ, ಚಾತುರ್ಯತೆ ಹಾಗು ಅಂತರಿಸ್ಮೃತಿ ಇವೆಲ್ಲವುಗ ಂದ ಯುಕ್ತ ಪುರುಷರು ಆದೆಷ್ಟೋ ದುರ್ಮಿಳರಾಗಿರುವರು ರಾಮ–ಕೃಷ್ಣರ ಜಯಂತಿಗಳು ಮೊದಲಾದ ಪರ್ವಗಳಲ್ಲಿಯೂ, ದೊಡ್ಡದೊಡ್ಡ ತೀರ್ಥಕ್ಷೇತ್ರ ಳಲ್ಲಿ ಾ ಪರಮಾತ್ಮನು ಸಾಮರ್ಥ್ಯರೂಪದಿಂದ ವಾಸವಾಗಿರುವನು ತಿ ರ್ಥ ಳಲ್ಲಿಯೂ ದೇವತ್ವದಲ್ಲಿಯ ೂ ನಾಸ್ತಿಕ್ಯಭಾವದ ಪಾಮರರಿಗೆ ದೇವಪ್ರಾಪ್ತಿಯುಂಟಾಗುವದಿಲ್ಲ. ಪಾಮರರಲ್ಲಿಯ ನಿರ್ಗುಣ ಜ್ಞಾನವು ಸಂದೇಹಾವರಣದಿಂದಲೂ ಸಗುಣಪ್ರೇಮವು ಬಾಯ ಬ್ರಹ್ಮಜ್ಞಾನದ ಬಡಬಡಿಕೆಯಿಂದಲೂ ನಾಶವಾಗುವವು ಮತ್ತು ಆ ಪಾಮರರಲ್ಲಿ ಅಭಿಮಾನ ಮೂಲಕವಾಗಿ ಸಗುಣ ನಿರ್ಗುಣಗಳ ಬಗೆಗೆ ಯಾವದೊಂದೂ ನಿಶ್ಚಿತ ಸ್ಥಿತಿಯು ಉಂಟಾಗುವದಿಲ್ಲ ತಮ್ಮೆದುರಿನಲ್ಲಿ ಸಗುಣ ಮೂರ್ತಿಯು ಆಕೃತಿ ಗೊಂಡಿದ್ದರೂ ಆ ಮೂರ್ತಿಯ ಸಗುಣಗಳನ್ನೆಲ್ಲ ತೊಡೆದು ನಿರ್ಗುಣವನ್ನು ಪ್ರತಿಪಾದಿಸುವವರು ತಿಳಿದ ಮೂರ್ಖರು ಇಂತು ಯುಕ್ತವಲ್ಲದ ಮಾರ್ಗವನ್ನನುಸರಿಸುವದು ಯಾರಿಗಾದರೂ ಸರಿಯಾದುದಲ್ಲ ಹಾಗೂ ಈ ಎರಡೂ ಮಾರ್ಗಗಳನ್ನು ಒದಿಗಿರಿಸಿ ಕಥಾನಿರೂಪಣ ಮಾಡುವದು ಹರಿದಾಸನ ಲಕ್ಷಣವಲ್ಲ ಗುಣ ಮೂರ್ತಿಯಮುಂದೆ ಕರುಣಾ ಕೀರ್ತನ ಮಾಡಬೇಕು ಧ್ಯಾನ ಮಹಿಮೆಯನ್ನು ವರ್ಣಿಸಿ ದೇವನ ಪ್ರತಾಪ ಕೀರ್ತಿಗಳನ್ನು ಬಾಯ್ತುಂಬ ಹೊಗಳಿ ಶ್ರೋತೃಗಳ ಹೃದಯಗಳಲ್ಲಿ ಪ್ರೇಮ ರಸವನ್ನು ಸುರಿಸಿ ಪ್ರೇಮ ಸುಖವನ್ನು ತೂಗಾಡಿಸಬೇಕು ಸಗುಣ

ದಲ್ಲಿ ನಿರ್ಗುಣವನ್ನು ತರಬಾರದು ಅನ್ಯರ ಗುಣ ದೋಷಗಳನ್ನೆತ್ತಿ ಹೇಳ ಬಾರದು. ದೇವನ ಮಹತ್ವ ದೇವನ ವೈಭವ ಹಾಗೂ ದೇವನ ಪ್ರೇಮಗ ಳನ್ನು ವರ್ಣಿಸಬೇಕು ತಾಳ ಬಾರಿಸುತ್ತ ಹಾಡುತ್ತ ಕುಣಿಯುತ್ತ ನಾಮ ಘೋಷ ಮಾಡಬೇಕು. ಒಬ್ಬ ದೇವನ ಕೀರ್ತಿಯನ್ನು ಬೇರೆ ದೇವನ ಮುಂದೆ ವರ್ಣಿಸಿ ಹಾಡಬಾರದು ಹಾಡಿದ ರಂಗಕ್ಕೆ ಕಳೆಯುಂಟಾಗಲಾರದು. ಎದುರಿಗೆ ಸಗುಣಮೂರ್ತಿಯಿಲ್ಲದಿರುವಾಗ ಸಾಧುಗಳು ಶ್ರವಣ ಮಾಡಲು ಕುಳಿತಿದ್ದರೆ ಅಲ್ಲಿ ಅದ್ವೈತವನ್ನೇ ನಿರೂಪಿಸುವದು ತಕ್ಕದ್ದು. ಭಾವಿಕ ಶ್ರೋತೃಗಳಿಗೆ ಅನುತಾಪ ವೈರಾಗ್ಯದ ಮಹತ್ವವನ್ನು ಹೇಳಬೇಕು

ನವರಸಗಳಲ್ಲೊಂದಾದ ಸ್ತ್ರೀಯಾದಿಕಶೃಂಗಾರ ಕೌತುಕವನ್ನು ವರ್ಣಿ ಸಕೂಡದು ಲಲನೆಯರ ಲಾವಣ್ಯ ವಿಲಾಸ ವರ್ಣನೆಯಿಂದ ಶ್ರೋತೃಗಳ ಮನಸ್ಥೈರ್ಯವು ವಿಭ್ರಮೆ ವಿಕಾರಯುಕ್ತವಾಗುವ ಸಂಭವವಿದೆ ಕಾಂತಾ ವಿಷಯಕ ಧ್ಯಾನವು ಅಂತರ್ಮೂರ್ತವಾಗಿ ಮನಸ್ಸು ಕಾಮಾಕ್ರಾಂತವಾಗಲು ಈಶ್ವರ ಧ್ಯಾನದ ಅಂತವಾಗದಿರುವದಿಲ್ಲ ಶ್ರೋತೃಗಳು ಸ್ತ್ರೀವರ್ಣನೆ ಯಿಂದ ಸುಖಾನ್ವಿತರಾಗಿ ಕಾಮಬದ್ಧರಾದರೆಂದರೆ ಅವರು ದೇವನಿಂದ ದೂರವೇ ಉಳಿಯುವರು ಪರಮಾತ್ಮ ಧ್ಯಾನವು ಸ್ವಲ್ಪಕಾಲವಾದರೂ ಹತ್ತಿದ್ದಾದರೆ ಭಾವಬಲದಿಂದ ಅಥವಾ ಯಾವದೊಂದು ಕಾರಣದಿಂದ ಉಂಟಾಗಿದ್ದ ರಂಗಭಂಗಕ್ಕೆ ಕುಂದೊದಗಿ ಪುನಃ ರಂಗಶ್ರೀ ತೋರುವದು ಧ್ಯಾನ ತಲ್ಲೀನತೆಯುಂಟಾದ ಮೇಲೆ ಜನರೆಲ್ಲಿ ಸ್ಮರಣಕ್ಕೆ ಬರುವರು ? ಈ ಪ್ರಕಾರ ನಿಸ್ಸಂಶಯ ಹಾಗು ನಿರ್ಲಜ್ಜ ಭಾವನೆ ತಾಳಿ ಕೀರ್ತನೆ ಮಾಡಲು ಕೀರ್ತನರಂಗ ವುಕ್ಕೇರುವದು ರಾಗ-ತಾಲ-ಸ್ವರಗಳ ಜ್ಞಾನವೂ, ಅರ್ಥಾ ನ್ವಯವನ್ನು ಯಥಾವತ್ತಾಗಿ ಹೇಳುವ ಚತುರತೆಯೂ, ಕೋಗಿಲೆಯಂತಿ ರುವ ಮಧುರ ಕಂಠಸ್ವರವೂ ಹಾಗು ಹಲವು ಭಾಷೆ ಕಲೆಗಳಲ್ಲಿ ನೈಪುಣ್ಯ ತೆಯೂ ಇರುವಂಥ ಹರಿದಾಸನ ದರ್ಶನವಾಗುವದು ಆದರೂ ಅವನು ಭಕ್ತಿ ಮಾರ್ಗದಿಂದ ಹೊರತಾದವನಿರುವನೆಂದು ಭಕ್ತರು ಅರಿತುಕೊಳ್ಳುವರು ಭಕ್ತನಿಗೆ ದೇವಧ್ಯಾನವು ಪ್ರಿಯವೆನ್ನಿಸುವದು ಕಲಾರಸಿಕರ ಮನಸ್ಸು ಆಲಾಪ ಮೊದಲಾದ ಬಾಹ್ಯ ಸಂಗತಿಗಳಲ್ಲಿಯೇ ರಮಿಸುವದು ಶ್ರೀ ಹರಿ ಯನ್ನು ಹೊರತುಪಡಿಸಿ ಇದ್ದ ಕಲೆಯು ಅವಕಳೆಯು ಯಾಕಂದರೆ ಅದ

ರಿಂದ ಶ್ರೋತೃಗಳೂ ಪಕ್ವಾರಸೂ ದೇವನಿಂದ ಅಭ್ಯಂತರಿಸುವರು. ಸರ್ಪ
ದಿಂದ ಚಂದನ ವೃಕ್ಷವು, ಪಿಶಾಚಿಯಿ ದ ನಿಧಿಯು ದುಸ್ಸಾಧ್ಯವು ಆದರಂತೆ
ಕಲೆಗಳಿಂದ ದೇವನು ದುಸ್ಸಾಧ್ಯನು. ದೇವನನ್ನು ಬಿಟ್ಟು ನಾದದಲ್ಲಿ ತಲ್ಲೀ
ನವಾಗಲು ನಾದವೇ ತಾನಾಗಿ ವಿಘ್ನವಾಗುವದು ಮನಸ್ಸು ಜಿಮ್ಮೆ ಸ್ವರಾ
ವಿಷ್ಟವಾಗಲು ಆ ಮೇಲೆ ಶ್ರೀಹರಿಯ ಸ್ಮರಣೆಯಿಂದ ವಿಮುಖವಾಗುವದು
ವೈಗಳ್ಳನನ್ನು ಒತ್ತಾಯದಿಂದ ದುಡಿಯಹಚ್ಚಿದಂತೆ ಸ್ವರಕ್ಕೆ ಮೋಹಿತ
ಮನಸ್ಸನ್ನು ಶ್ರೀಹರಿ ಧ್ಯಾನಕ್ಕೆ ಅಣಿಮಾಡಲು ಅದಕ್ಕಿದ್ದ ಸ್ವರದ ಹಂಬಲು
ಹಿಂದಾಗುವದಿಲ್ಲ ಅಂದರೆ ಧ್ಯಾನವು ಸಫಲವಾಗುವದಿಲ್ಲ ರಾಗಜ್ಞಾನವು
ದೇವದರ್ಶನಕ್ಕೆ ಆತಂಕವನ್ನೊಡ್ಡುತ್ತದೆ ಮತ್ತು ಮನಸ್ಸನ್ನು ತನ್ನ ಬೆನ್ನ
ಹಿಂದೆ ಅಡಗಿಸಿಕೊಳ್ಳುವದು ರಾಜ ದರ್ಶನಾಪೇಕ್ಷೆಯಾಗಿ ಹೋಗುವವ
ನನ್ನು ನಡುವೇ ಕೊಳ್ಳಕ್ಕೆ ಎಳೆದೊಯ್ದದಂತೆ ಕಲಾರಸಿಕನ ಸ್ಥಿತಿಯಾಗು
ವದು ದೇವನಿಗೆ ಬೇಕಿಲ್ಲೆಂತಲ್ಲ, ಆವನ ಕೂಡ ದೂರದಲ್ಲಿ ನಿಂತು ಬಾಹ್ಯ
ಕಲೆಗಳಲ್ಲಿ ಮಗ್ನನಾಗುವನು ಶ್ರೀಹರಿಯಲ್ಲಿ ಮನವನ್ನಿರಿಸಿ ಹರಿಕೀರ್ತನೆ
ಮಾಡುವವನೇ ಸಂಸಾರದಲ್ಲಿ ಧನ್ಯನು ಹರಿಕೀರ್ತನದಲ್ಲಿ ಅತ್ಯಾಸಕ್ತನಾದ
ವನಿಗೆ, ಸರ್ವೋತ್ತಮನ ಪ್ರಾಪ್ತಿಯುಂಟು ಅಂಥವನೇ ಉದ್ಯೋಗಗಳನ್ನೆ
ಲ್ಲವನ್ನೂ ನಿದ್ರಾಲಸ್ಯಗಳನ್ನೂ ತೊರೆದು, ಹರಿಭಕ್ತನ ಸೇವೆ ಮಾಡಿ ಅವನಿಗೆ
ಎಲ್ಲ ಬಗೆಯಿಂದ ಅನುಕೂಲ ಮಾಡಿಕೊಡುವನು ತಾತ್ಪರ್ಯ ಹರಿನಾಮ
ದಲ್ಲಿ ವಿಶ್ವಾಸವಿಟ್ಟು ಕೀರ್ತನ ಮಾಡುವವನೇ ಹರಿದಾಸನು"

ಶ್ರೀ ರಾಮ || ೭ ಚಾತುರ್ಯ ಲಕ್ಷಣ || ಗುರುಗಳು ಶಿಷ್ಯನಿಗೆ "ಬುದ್ಧಿ
ವಂತರು ದೃಶ್ಯ ವಸ್ತುವಿನ ರೂಪಕ್ಕೂ ಚಂದಕ್ಕೂ ಮೋಹಿಸಬಾರದು ಹಾಗು
ವಸ್ತುವಿನ ಸ್ವಾಭಾವಿಕ ಗುಣಗಳ ಪರಿವರ್ತನೆಗೆ ಉಪಾಯ ನಡೆಯಲಾರ
ದೆಂಬದನ್ನರಿತು ಹೊಸ ಹೊಸ ಗುಣಗಳನ್ನು ಇದ್ದಲ್ಲಿಂದ ಸ್ವೀಕರಿಸಬೇಕು
ಪ್ರಯತ್ನಮಾಡಿದರೂ ಕಪ್ಪನೆಯ ಮನುಷ್ಯನವರ್ಣವು ಕೆಂಪು ವರ್ಣದ್ದಾಗು
ವದಿಲ್ಲ ಹುಟ್ಟಾ ಇದ್ದ ಅಂಗ ವೈಕಲ್ಯತೆಗಳನ್ನು ಯತ್ನದಿಂದ ಸರಿಗೂಳಿ
ಸಲು ಬರುವದಿಲ್ಲ ಅದರಂತೆ ಮಾನವ ಪ್ರಾಣಿಯ ಕಣ್ಣು, ಕಿವಿ, ಕಾಲುಗಳ
ಕುಂಠಿತ ಕ್ರಿಯಾ ಶಕ್ತಿಗಳನ್ನು ಉಂಟುಮಾಡಲು ಬರುವದಿಲ್ಲ ಇಂತು
ಪ್ರಾಣಿಯ ಸ್ವಾಭಾವಿಕವಾದ ಕುರೂಪತೆಯ ಚಿಹ್ನಗಳನ್ನು ಕಳೆಯುವದು

ಅಸಾಧ್ಯವು. ಆದರೆ ಅದರ ಸಹಜ ಗುಣಗಳಲ್ಲಿಯೆ ದೋಷಗಳನ್ನು ತಿದ್ದಬಹುದು. ಪ್ರತಿಯೊಬ್ಬನಿಗೂ ಒಳ್ಳೆಯ ಗುಣಗಳನ್ನು ಸಂಪಾದಿಸುವದಕ್ಕೆ ಬರುವದು. ಬುದ್ಧಿವಂತರು ಹೀನ ವಿದ್ಯೆಗಳನ್ನು ಬಿಟ್ಟು ಸದ್ವಿದ್ಯೆಗಳನ್ನು ಕಲಿಯುವದನ್ನು ನೋಡುತ್ತಿರುವೆವು. ಯಾರಿಗಾದರೂ ತಮ್ಮಲ್ಲಿಯ ಮೂರ್ಖತೆಯನ್ನು ತ್ಯಾಗಮಾಡಲು ಬರುವದು. ಹಾಗು ವಿದ್ಯೆ ಬುದ್ಧಿಗಳನ್ನು ಕಲಿತುಕೊಳ್ಳಲು ಬರುವದು. ಆದರೆ ಆ ದಿಶೆಯಲ್ಲಿ ಮಾತ್ರ ಕ್ರಿಯಾಭ್ಯಾಸವಿರಬೇಕಾಗುವದು. ಜನವು ತನ್ನನ್ನು ಮನ್ನಣೆಯಿಂದ ನಡೆಸಿಕೊಳ್ಳಬೇಕೆಂದು ಬಗೆಯುವವನು ಸದ್ಗುಣ ಸಂಪಾದನೆ ಮಾಡಿಕೊಳ್ಳಲೇಬೇಕು. ಚತುರತೆಯಿದ್ದರೆ ಮಾತ್ರ ಗೌರವತೆ. ಇದನ್ನರಿತು ಎಲ್ಲರೂ ಸ್ವಹಿತವನ್ನು ಸಾಧಿಸಿಕೊಳ್ಳಬೇಕು. ಸನ್ಮಾರ್ಗ ನಿರತರಾದವರು ಸಜ್ಜನರೆನ್ನಿಸುವರು. ಶರೀರಕ್ಕೆ ವೇಷ ಭೂಷಣಗಳೆಂಬ ಸೊಬಗನ್ನುಂಟು ಮಾಡಿಕೊಳ್ಳಲಿಕ್ಕಾದರೂ ಜಾಣತನ ಬೇಕಾಗುವದು. ಇಲ್ಲದ್ದರಲ್ಲಿ ಇದ್ದಂತೆ ನಟನೆ ಮಾಡುವದು ಹಾಸ್ಯಾಸ್ಪದವು. ಬಾಹ್ಯಾಡಂಬರವು ನಿರರ್ಥಕ. ಬುದ್ಧಿವಂತಿಕೆಯಿಂದ ತನ್ನಂತರಂಗದಲ್ಲಿ ಪಾವಿತ್ರ್ಯತೆಯನ್ನುಂಟು ಮಾಡಿಕೊಳ್ಳುವದೇ ಅಂತಃಶೋಭೆಯು. ಹಲವು ಬಗೆಯಿಂದ ಬುದ್ಧಿಯಲ್ಲಿ ಕೆಚ್ಚಳ ಮಾಡಿಕೊಳ್ಳತಕ್ಕದ್ದು. ಆದರಂತೆ ಐಶ್ವರ್ಯವನ್ನೂ ಗಳಿಸಿಕೊಳ್ಳಬೇಕು. ಪ್ರಯತ್ನ ಶಿಕ್ಷಣ, ಶ್ರಮ, ಹಾಗು ನಮ್ರತೆಗಳಿಲ್ಲದ ಮುಂಗೋಪಿಯಾದ ಮೂರ್ಖನಿಗೆ ಏನೆನ್ನಬೇಕು ! ಅನ್ಯರೊಡನೆ ನಾವು ನಡದಂತೆ ಅವರು ನಮ್ಮೊಡನೆ ನಡೆದುಕೊಳ್ಳುವರು. ಅವರಿಗೆ ಕಷ್ಟ-ಸುಖಗಳಾಗುವಂತೆ ವರ್ತಿಸಿದರ ಅದರಿಂದ ನಮಗೂ ಕಷ್ಟ ಸುಖಗಳು ಸಂಭವಿಸುವವು. ನ್ಯಾಯದಿಂದ ನಡೆಯುವವನ ನೀತಿವಂತನು, ಅನ್ಯಾಯರತನು ನೀಚನು. ಈ ಎಲ್ಲ ಸಂದರ್ಭಗಳನ್ನು ಅರಿತು ವರ್ತಿಸುವವನೇ ಚತುರನು. ಇವೇ ಚಾತುರ್ಯದ ಲಕ್ಷಣಗಳು. ಬಹುಜನರ ಸದ್ವಿಚಾರಕ್ಕೆ ಮಾನ್ಯನಾದವನೇ ಲೋಕಮಾನ್ಯನು. ಜನವೆಲ್ಲ ತನ್ನನ್ನು ಓಲೈಸಬೇಕೆಂಬ ಆಶೆ ಯಾವನಿಗಾದರೂ ಇರುವದು. ಅಂಥವನು ಜಗನಿಂದೆಗೆ ಗುರಿಯಾಗಿ ವರ್ತಿಸುವದು ತಪ್ಪಾಗುವದಿಲ್ಲವೇ ? ಆದ್ದರಿಂದ ಪ್ರತಿಯೊಬ್ಬನು ತನಗೆ ಸಮಾಧಾನ ಸುಖಗಳುಂಟಾಗುವಂತೆ ನಡೆಯುವದು ಯೋಗ್ಯವು. ಪರರೊಡನೆ ಸಮಾಧಾನದ ವಿನಿಮಯ ಮಾಡಿದರೆ ಸಮಾ

ಥಾನ ದೊರೆಯುವದು ಸ್ನೇಹದಿಂದ ಸ್ನೇಹವು ಹೆಚ್ಚುವದು ಒಳಿತನ್ನು ಕ್ಷಣದಲ್ಲಿ ಹಾಳು ಮಾಡಲು ಬರುವದು ಜನರಲ್ಲಿ ಒಪ್ಪಿಟ್ಟು ಮಾತಾಡಲು ಅವರಿಂದ ಒಪ್ಪಿನ ಮಾತುಗಳೇ ತಿರುಗುವವು ಅದೇ ದುಷ್ಟ ನುಡಿಗಳನ್ನು ಬಳಿಸಿದರೆ ಅವರಿಂದಲೂ ಅವಕ್ಕೆ ತಕ್ಕ ಪ್ರತ್ಯುತ್ತರ ದೊರಕುವವು ಇದು ಜಗತ್ತಿನ ಜನತೆಯ ಪ್ರವೃತ್ತಿಯೇ ಆಗಿದೆ ಇದನ್ನು ಚತುರನಾದವನು ತಿಳಿದುಕೊಳ್ಳುವದೇ ಚಾತುರ್ಯವು ಇದು ಅವನ ಅಂತರಂಗಕ್ಕೆ ಭೂಷಣವು ವಸ್ತ್ರಾಭರಣಗಳು ದೇಹಕ್ಕೆ ಹೊರಗಿನ ಅಲಂಕಾರಗಳು. ಅಂದ ಮೇಲೆ ಇವೆ ಡು ಭೂಷಣಗಳಲ್ಲಿ ಶ್ರೇಷ್ಠವಾದದ್ದಾವುದು ? ದೇಹ ಶೃಂಗಾರದಿಂದಾಗುವ ಫಲವೇನು ? ಅಂತಶ್ಚಾತುರ್ಯದಿಂದ ಹಲವರನ್ನು ಹಲವು ಬಗೆಯಿಂದ ರಕ್ಷಿಸಲು ಬರುವದು ತಿಂಬುಂಬುವದು ವಸ್ತ್ರಾಲಂಕಾರಗಳು ಇವೆಲ್ಲವು ಸರಿಯಾಗಿರಬೇಕು ಅವುಗಳಲ್ಲಿ ತುಟಾಗ್ರತೆಯಿರಕೂಡದು ಹಾಗು ಜನರೆಲ್ಲ ತನಗೆ ಒಳ್ಳೆಯವನೆನ್ನಬೇಕು ಈ ಎಲ್ಲ ಬಯಕೆಗಳು ಇದ್ದುದಾದರೆ ಶರೀರ ಮನಸ್ಸುಗಳಿಗೆ ಕಷ್ಟ ಕೊಡಲೇ ಬೇಕಾಗುವದು. ಪ್ರಯತ್ನಪೂರ್ವಕ ದುಡಿಯಬೇಕು ಇಲ್ಲದ ಕಲ್ಪನೆಗಳಿಂದ ಸೋಮಾರಿಯಾಗಿದ್ದಾದರೆ ಜೀವನವು ದುಃಖಾಂತವಲ್ಲಿ ಪರಿಣಮಿಸುವದು ಅನ್ಯರ ಕಾರ್ಯಗಳಿಗೆ ಉಂಟಾದಅಡೆತಡೆಗಳನ್ನು ನಿವಾರಿಸುವಲ್ಲಿಆಸಕ್ತನಾದವನನ್ನುಜನತೆ ಬೆಂಬಳಿಸುವದು. ಆದ್ದರಿಂದಪರೋಪಕಾರದಂಥಪುಣ್ಯವೂಪರಪೀಡೆಯಂಥ ಪಾಪವೂ ಇಲ್ಲೆಂಬಆರ್ಯಾನುಭವ ವಾಕ್ಯವು ಸಜೀವದಂತಿದೆ 'ವಿಚಾರವಿಲ್ಲದೆ ಉಪಾಯಗಳು ಹೊಳೆಯಲಾರವು' ಆದ್ದರಿಂದ ಆ ವಿಚಾರ (ತಿಳುವಳಿಕೆ)ವೇ ಎಲ್ಲರಿಗೂ ಶಾಂತಿ ಆತ್ಮೋದ್ಧಾರಗಳಿಗೆ ಬಲವಾದ ಉಪಾಯವಾಗಿದೆ' ಬುದ್ಧಿಗನುಸರಿಸಿ ಕರ್ಮಕ್ರಿಯೆಗಳನ್ನು ಮಾಡುವವನೇ ಐಶ್ವರ್ಯವನ್ನು ಅನುಭೋಗಿಸುವನು ಉಳಿದವರೆಲ್ಲ ಕಲಸಕ್ಕೆ ಬಾರದವರು ಕರ್ಮಕ್ಷೇತ್ರ ವಿಸ್ತೃತವಿದ್ದಷ್ಟಕ್ಕನುಸರಿಸಿ ಕಾರ್ಮಿಕನ ಉದ್ಯೋಗ ಹಾಗು ಸಿರಿಯು ಇದನ್ನರಿತು ನಡೆಯಬೇಕು 'ಉದ್ಯೋಗವೇ ಸಿರಿಸಂಪತ್ತು' 'ಆಲಸ್ಯವೇ ಕಾರ್ಯಗಡಿಸುವ ಶತ್ರುವು' 'ಉದ್ಯೋಗದಿಂದಲೇ ಕಾರ್ಯಸಿದ್ಧಿಯು' ಇವೆಲ್ಲ ಬಿಚ್ಚುನುಡಿಗಳನ್ನರಿಯದವನು ಮೂರ್ಖನು 'ಸ್ನೇಹದ ಬಳಿಕೆಯಿಂದಲೇ ಕಾರ್ಯಗಳು ಕೊನೆಗೊಳ್ಳುವವು' 'ವೈಷಮ್ಯತೆಯು ಮೋಸದ ಬಲೆ ಬೀಸುವದು' ಇವು

ಗಳ ನಿಜತ್ವವನ್ನರಿಯಬೇಕು ವಿದ್ಯೆ–ಬುದ್ಧಿಗಳನ್ನು ಕಲಿಯದೆ, ಒಳ್ಳೆಯು ವರ ಸ್ನೇಹ ಗಳಿಸದೆ ಪರರಲ್ಲಿ ಹಗೆತನ ಬಳೆಸುತ್ತಿರುವ ಮೂರ್ಖನಿಗೆಂದಿಗೂ ಸಮಾಧಾನ ಸಿಗದು ಜನತೆಯಿಂದ ಹೊರತಾಗಿ ಕಲಹಕಾರಿಯಾದ ಮಾನ ವನಿಗೆ ಯಶ ದೊರಕದು

**ತಾತ್ಪರ್ಯ:-** ಚಾತುರ್ಯವುಳ್ಳವನು ಬಹುಜನರಿಗೆ ಮಾನ್ಯನಾಗಬೇಕು, ಜನಾದರ ಗಳಿಸಬೇಕು ಗುಣಗ್ರಾಹಿಯಾಗಬೇಕು, ಜನತೆಯಲ್ಲಿ ಒಕ್ಕಟ್ಟು ಬೆಳೆಯಿಸಬೇಕು ಶಿಕ್ಷಣದಿಂದ ಜನರನ್ನು ತಿದ್ದಬೇಕು ಪತಿತರನ್ನು ಉದ್ಧ ರಿಸಬೇಕು, ಮತ್ತು ಜನತೆಯಲ್ಲಿ ಭಗವದ್ಭಕ್ತಿಯನ್ನು ಪ್ರವರ್ಧಿಸಬೇಕು ”

ಶ್ರೀ ರಾಮ ॥ ೭ ಯುಗಧರ್ಮ ನಿರೂಪಣ ॥ ಗುರುಗಳು ಯುಗ ಧರ್ಮವನ್ನು ಕುರಿತು ಹೇಳಿದ್ದೆಂತೆಂದರೆ—

“ತ್ರೈಲೋಕ್ಯದ ಪ್ರಾಣಿಗಳಿಗೆಲ್ಲ ವಿಶ್ರಾಂತಿಯ ಸ್ಥಾನವೆಂದರೆ ‘ಗೃಹ ಸ್ಥಾಶ್ರಮ”ವು ಅನೇಕ ವೇಷ ಅನೇಕ ಆಶ್ರಮಗಳಿದ್ದರೂ ಅವೆಲ್ಲಕ್ಕೂ ಗೃಹಸ್ಥಾಶ್ರಮವೇ ಮೂಲವು ಈ ಸರ್ವಮೂಲ ಗೃಹಸ್ಥಾಶ್ರಮದಲ್ಲಿಯೇ ದೇವಋಷಿಗಳು, ಮುನಿಗಳು, ಯೋಗಿಗಳು, ತಪಸ್ವಿಗಳು, ವೈರಾಗ್ಯ ವಂತರು, ಅತಿಥಿಅಭ್ಯಾಗತರು, ಭಾಗ್ಯಯುತರಾದ ಪಿತರುಗಳು ಮುಂತಾ ದವರೆಲ್ಲರು ಜನ್ಮತಾಳಿವರು. ಅವರು ಆಶ್ರಮದಿಂದ ದೂರಾದರೂಕೂಡ ಗೃಹ ಸ್ಥನ ಮನೆಯಲ್ಲಿಯೇ ಪುನ ಕೀರ್ತಿ ರೂಪದಿಂದ ಸಂಚರಿಸುತ್ತಿರುವರು ಆದ್ದರಿಂದ ಎಲ್ಲ ಆಶ್ರಮಗಳಲ್ಲಿ ಸ್ವಧರ್ಮಾಚರಣೆಗಳನ್ನೂ ಭೂತದಯೆ ಯುನ್ನೂ ರಕ್ಷಿಸಿಕೊಂಡು ಇರಬೇಕಾಗುವದು ಯಜನಾದಿಷಟ್ಕರ್ಮಗಳು ನಡೆಯುವಲ್ಲಿ ಎಲ್ಲ ಕರ್ಮಗಳು ವಿಧಿಯುಕ್ತ ನಡೆಯುವವು ಅದರಂತೆ ಪ್ರಾಣಿ ಮಾತ್ರರೊಡನೆ ಮೃದು–ಮಧುರ–ಮಾತಿನಿಂದ ಬೋಧಿಸುವಲ್ಲಿ, ಶಾಸ್ತ್ರಕ್ಕನುಸರಿಸಿ ಎಲ್ಲ ರೀತಿ ನಡತೆಗಳು ನಿಯಮಿತತನದಿಂದ ರಕ್ಷಿಸಲ್ಪ ಡುವಲ್ಲಿ, ಮನೆಯ ಜನರೆಲ್ಲ ಭಕ್ತಿ ಮಾರ್ಗವನ್ನು ಮುಖ್ಯವಾಗಿ ನಂಬಿ ನಡೆ ಯುವಲ್ಲಿ ಗಾಯತ್ರಿ ಮೊದಲಾದ ಪುರಶ್ಚರಣಗಳನ್ನು ಶರೀರ ಶ್ರಮ ವಹಿಸಿ ನೇಮದಿಂದ ಸಾಗಿಸುವಲ್ಲಿ, ಪರಮಾತ್ಮನಿಗಿಂತಲೂ ಹೆಚ್ಚಿನವದಾವುದೂ ಇಲ್ಲೆಂದು ತಿಳಿಯುವಲ್ಲಿ, ಶರೀರ, ಮಾತು, ಜೀವ-ಪ್ರಾಣಗಳನ್ನು ವ್ಯಯ ಮಾಡಿ ಭಗವದುಪಾಸನೆಯಲ್ಲಿ ಎಲ್ಲ ಕಾಲ ಕಳೆಯುವಲ್ಲಿ ಪ್ರಯುಕ್ತವಾದ

ಗೃಹಸ್ಥಾಶ್ರಮವು ಪರಮ ಧನ್ಯವಾದದ್ದು ಈ ಪ್ರಕಾರ ಗೃಹಸ್ಥಾಶ್ರಮವನ್ನು ಕೈಕೊಂಡಿರುವ ಭಗವದ್ಭಕ್ತನು ಹೃದಯದಲ್ಲಿ ವಿಶಿಷ್ಟ ವೈರಾಗ್ಯವನ್ನು ತಂದುಕೊಂಡು ದೇವಪ್ರಾಪ್ತಿಗಾಗಿ ಸಂಸಾರ ತ್ಯಾಗಮಾಡಿ ಮನೆ ಮಾರು ಬಿಟ್ಟು ಹೊರಬಿದ್ದರೆ ಮಾತ್ರ ಅದು ನಿಜವಾದ ಹಾಗೂ ಪೂರ್ಣವಾದ ವೈರಾಗ್ಯವೆಂದು ಹೇಳತಕ್ಕದ್ದು ಇಂಥ ವೈರಾಗ್ಯವು ಮಹದ್ಭಾಗ್ಯವೆನ್ನಿಸುವದು. ವಿಷಯಸುಖದ ಆಸಕ್ತಿಯಂಥ ದುರ್ಭಾಗ್ಯವಿನ್ನೊಂದಿಲ್ಲ ಅದೆಷ್ಟೋ ಅರಸರು ರಾಜ್ಯ ತ್ಯಾಗ ಮಾಡಿ ಭಗವತ್ಪ್ರಾಪ್ತಿಗಾಗಿ ತಿರುಗಾಡಿದರು ಮತ್ತು ತ್ರೈಲೋಕ್ಯದಲ್ಲಿ ಕೀರ್ತಿ ರೂಪದಿಂದ ಪಾವಿತ್ರ್ಯತೆ ಹೊಂದಿದರು ಇಂಥ ವೈರಾಗ್ಯಸಂಪನ್ನ ಹಾಗು ಸ್ವಾನುಭವ ಜಾಗೃತ ಯೋಗೇಶ್ವರನು ವಿವೇಕದಿಂದ ಪ್ರಾಣಿ ಮಾತ್ರರ ಅಂತಃಕರಣವನ್ನು ಹೃದಯದಿಂದ ಬಿಚ್ಚಿಡುವನು ಉದಾಸೀನವೂ ನಿಸ್ವಾರ್ಥವೃತ್ತಿಯೂ ಇವರ ಮೇಲೆ ಶ್ರೇಷ್ಠವಾದ ಆತ್ಮಜ್ಞಾನವೂ ಉಳ್ಳಂಥ ಪುರುಷನದರ್ಶನದಿಂದ ಜನರು ಸಮಾಧಾನ ಹೊಂದುವರು ಅಂಥವನಿಂದ ಎಷ್ಟೋ ಜನರು ತಮ್ಮ ಉದ್ಧಾರದ ಮಾರ್ಗವನ್ನು ಕಂಡುಕೊಳ್ಳುವರು ಅವನು ಜನರ ಮಾರ್ಗದ ಹೊರತಾಗಿ ನಿರಂತರವಾಗಿ ಅವನ ಹೃದಯವು ಭಗವಂತನ ರೂಪವನ್ನು ಒಳಗೊಂಡಿರುತ್ತದೆ ಜನರಿಗೆ ಅವನು ಹೇಗೆಯೇ ಕಾಣಲಿ. ಅವನ ಚಿತ್ತವು ಮಾತ್ರ ಸಾವಧವಾಗಿ ಸತತವೂ ಪರಮೇಶ್ವರನ ಧ್ಯಾನ ಮಗ್ನವಾಗಿರುವದು ಇಂತು ಅವನ ಚಿತ್ತವು ಉಪಾಸ್ಯಮೂರ್ತಿಯ ಧ್ಯಾನದಲ್ಲಿ ಮಗ್ನವಾಗಿರುವದು ಅಲ್ಲದೆ ಅವನು ಸ್ವಸ್ವರೂಪಾನುಸಂಧಾನದಲ್ಲಿ ತನ್ಮಯನಾಗಿರುವನು ಇಲ್ಲವೆ ಶ್ರವಣ-ಮನನಗಳಲ್ಲಿ ಏಕಚಿತ್ತಾತ್ಮಕನಾಗಿರುವನು ಹಿರಿ ಹಿರಿಯರ ಪುಣ್ಯಸಂಚಿತವು ಪಾಲಿಗೆ ಸೇರಿದ್ದರೆ ಮಾತ್ರ ಸಂಸಾರದಲ್ಲಿಯು ಪ್ರಾಣಿಗೆ ಇಂಥ ವಿಭೂತಿಯ ಜೊತೆಯು ಲಭಿಸುವದು. ಅನುಭವವಿಲ್ಲದೆ ಕೇವಲ ಅನುಮಾನದ ಶಬ್ದಜ್ಞಾನದಿಂದ ಮಾನವನಿಗೆ ಪರಲೋಕ ಸಾಧನ ದೊರಕಲಾರದು. ಆದ್ದರಿಂದಲೇ ಆತ್ಮಾನುಭವಕ್ಕೆ ಪ್ರಾಶಸ್ತ್ಯವುಂಟಾಗಿದೆ ಅನುಭವರಹಿತ ಜ್ಞಾನವು ನಿರುಪಯುಕ್ತವು. ಜ್ಞಾನವುಳ್ಳವನು ಅನುಭವ ಜ್ಞಾನವನ್ನು ಉಪಾಯವೆಂದೂ ಆನುಮಾನಿಕ ಜ್ಞಾನವನ್ನು ಅಪಾಯವೆಂದೂ

ಅವಗತ ಮಾಡಿಕೊಂಡು ಅವು ಳ ತಾರತಮ್ಯ ನಿರ್ಧರಿಸುವನು ನಿಜವಾದ ವೈರಾಗ್ಯ ತಾಳಿದ ಸತ್ಪುರುಷನು ಧನ್ಯನೆಂದೂ ಅವನೇ ಜಗತ್ತಿನ ಉಪಯೋಗಕ್ಕೆ ಬೀಳುವನೆಂದೂ ಹಿಂಜರಿಯದೆ ಇನ್ನು ಅಪೂರ್ಣ ಬುದ್ಧಿಯವರು ಅಂದರ ಮೂರ್ಖರು ಸಂಸಾರ ಬಿಟ್ಟು ಹೋದ ರೂ ಮುಂದೆ ಅವರು ಕಷ್ಟದಿಂದಲೇ ಸಾಯುವರು ಅವರಿಗೆ ಇಹಪರಗಳೆರಡೂ ದೊರ ಕಲಾರವು ಸಿಟ್ಟಿನಿಂದ ಅವರು ಗೃಹತ್ಯಾಗ ಮಾಡಿದರೂ ಮುಂದೆ ಅವರ ಲ್ಲಿಯ ಮನಸ್ತಾಪವು ಹೆಚ್ಚಿ ಅದರಲ್ಲಿಯೇ ಸಾಯುವರು ಹೀಗಾಗಿ ಅವರು ತಾವೂ ಕಷ್ಟಪಡುವರು, ಅನ್ಯರನ್ನೂ ಕಷ್ಟಕ್ಕೆ ಗುರಿ ಮಾಡುವರು ಇಂಥ ಅಜ್ಞಾನಿಗಳು ಎಂದೂ ವೈರಾಗ್ಯಶೀಲರಾಗರು ಬೇರೆಯವರಾದರೂ ಆತ್ಮೋದ್ಧಾರಕ್ಕಾಗಿ ಇಂಥವರ ಶಿಷ್ಯತ್ವವನ್ನು ವಹಿಸಿದರೆ ಅವರೂ ಕೂಡ ಅಜ್ಞಾನಿಗಳಾಗಿ ಬಿಡುವರು ಒಟ್ಟಿನ ಮೇಲೆ ಆಶಾಬದ್ಧರೂ ಅನಾಚಾರಿ ಗಳೂ ವೈರಾಗ್ಯಸಾಧನೆಯೆಂದು ಹೇಳುತ್ತ ಗೃಹತ್ಯಾಗ ಮಾಡಿ ದೇಶಾಂತರ ಹೋದರೂ ಕೂಡ ಅವರಲ್ಲಿಯ ದುರ್ವರ್ತನವು ಅವರಿಂದ ಅಂತರಿಸುವದಿಲ್ಲ ಈ ಪ್ರಕಾರ ಮೂರ್ಖರಲ್ಲಿ ಉಂಟಾಗಿದ್ದ ಉಪರತಿಯ ದುಷ್ಪರಿಣಾಮಗಳು ಕಂಡು ಬರುವವು

ಇನ್ನು ಸಂಸಾರದ ಮಿಥ್ಯತ್ವವು ತಿಳಿದು ಜ್ಞಾನವುಂಟಾಗಿ ಗೃಹ ತ್ಯಾಗ ಮಾಡಿ ಹೋದವರ ಮಾತು ಬೇರೆ ಅಂಥವರು ತಮ್ಮಂತೆ ಜನ ರನ್ನು ಉದ್ಧರಿಸಿ ಪುನೀತರನ್ನಾಗಿ ಮಾಡುವರು ಒಟ್ಟಾಗಿ ಹೇಳುವ ದೆಂದರೆ ಒಬ್ಬನ ಜೊತೆಯಿಂದಲೇ ಹಲವರ ಉದ್ಧಾರವು- ಒಬ್ಬನ ಜೊತೆ ಯಿಂದಲೇ ಹಲವರ ನಾಶವು ಇದನ್ನರಿತು ಕೊಂಡು ಪ್ರತಿಯೊಬ್ಬರು ಸತ್ಸಂಗತಿಯನ್ನು ಅವಲಂಬಿಸಬೇಕು ಅದೇ ಹಿತಕಾರಿಯು ವಿವೇಕ ಪರೀಕ್ಷೆಯಿಲ್ಲದಲ್ಲಿ ಅಂದರೆ ವಿವೇಕ ವಿಚಾರಗಳಿಲ್ಲದವನಿಂದ ಪರಮಾರ್ಥ ದೀಕ್ಷೆ ದೊರೆಯುವದು ಸಾಧ್ಯವಿಲ್ಲ ಭಿಕ್ಷೆ ಬೇಡು ವವನಿಗೆ ಪ್ರತಿಯೊಂದು ಮನೆಯಲ್ಲಿಯೂ ಭಿಕ್ಷೆ ಸಿಗಲಾರದು ಈ ಜಗ ತ್ತಿನಲ್ಲಿ ಅನ್ಯರ ಅಂತರಂಗವನ್ನೂ ದೇಶಕಾಲ ಪರಿಸ್ಥಿತಿಯನ್ನೂ ತಿಳಿ ಯುವ ಜನರಿಗೆ ಏನೂ ಕೊರತೆಯಿಲ್ಲ ಕೀಳ್ತರಗತಿಯವರ ಗುರುತ್ವವವನ್ನು ಒಪ್ಪಿಕೊಂಡರೆ ಆಚಾರಗಳು ಭ್ರಷ್ಟವಾಗುವವು ಅಂದ

ಮೇಲೆ ಅಂಥಲ್ಲಿ ವೇದಶಾಸ್ತ್ರ ಬ್ರಾಹ್ಮಣರನ್ನು ಅದಾರು ಲಕ್ಷಿಸುವರು? 'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬ ವಚನದಂತೆ ಬ್ರಾಹ್ಮಣರಿಗೇ ಬ್ರಹ್ಮಜ್ಞಾನ ವಿಚಾರದ ಅಧಿಕಾರವಿರುವದು ಬ್ರಾಹ್ಮಣರು ಬುದ್ಧಿಹೀನರೂ ಆಚಾರಭ್ರಷ್ಟರೂ, ಗುರುತ್ವಹೀನರೂ ಆದದ್ದಾದರ ಎಲ್ಲವೂ ಅಸ್ತವ್ಯಸ್ತ ವಾಗುವದು ಕಲಿ ಪ್ರಾಬಲ್ಯದಿಂದ ಆಚಾರ-ವಿಚಾರಗಳೆಲ್ಲ ನಷ್ಟವಾಗು ವವು ಬರಬರುತ್ತ ವರ್ಣಸಂಕರತೆ ಹೆಚ್ಚಾಗುವದು ನೀಚ ಜಾತಿಯು ವರತ್ತ ಗುರುತ್ವ ಸೆರುವದು ಆ ಕೀಳ್ತರಗತಿಯವರ ಗುರುತ್ವವೇ ಬೆಳೆ ಯುವದು ಹೀಗಾಗಿ ಶೂದ್ರಾಚರಣೆಯಿಂದಲೇ ಬ್ರಾಹ್ಮಣತ್ವವು ಅಳಿದು ಹೋಗುವದರಲ್ಲಿದೆ ಇದು ದ್ವದ ಬ್ರಾಹ್ಮಣರಿಗೆ ತಿಳಿಯಲೊಲ್ಲದು ತಿಳಿ ದರೂ ಅವರು ಮಿಥ್ಯಾಭಿಮಾನದಿಂದಲೂ ಮೂರ್ಖತೆಯಿಂದಲೂ ತಮ್ಮ ವೃತ್ತಿಯಲ್ಲಿ ತಿದ್ದುಪಡಿಮಾಡಿಕೊಳ್ಳದಾಗಿರುವರು ರಾಜ್ಯ ಸೂತ್ರಗಳು ಮ್ಲೇಂಛಕ್ಷೇತ್ರಕ್ಕೆ ಒಳಪಡಹತ್ತಿದವು ಅಪಾತ್ರ ಸ್ಥಾನಕ್ಕೆ ಗುರುತ್ವ ಸೇರ ಹತ್ತಿದವು, ಹೀಗಾಗಿ ಬ್ರಾಹ್ಮಣರಿಗೆ ಅಲ್ಲಿಯೂ ಇಲ್ಲ ಇಲ್ಲಿಯೂ ಇಲ್ಲ- ಹೀಗೆ ಏನೊಂದೂ ಇಲ್ಲದ ಸ್ಥಿತಿಯು ಬದೊದಗಿದೆ ಬ್ರಾಹ್ಮಣರ ಅನಾ ಚಾರತೆಯು ಹಾಗು ಅನಾಗರಿಕತೆಯು ದುರವಸ್ಥೆಗಳೇ ಬ್ರಾಹ್ಮಣತ್ವಕ್ಕೆ ಅಳಿವನ್ನುಂಟು ಮಾಡಿದವು. ಬ್ರಾಹ್ಮಣರ ಆದರಣೆಯೆಂದು ತನ್ನ ಹೃದ ಯದ ಮೇಲೆ ಶ್ರೀವತ್ಸಾಂಕಿತವನ್ನು ಧರಿಸಿಕೊಂಡ ವಿಷ್ಣುವೂ ಕೂಡ ಪರಶುರಾಮಾವತಾರದಿಂದ ಬ್ರಾಹ್ಮಣರಿಗೆ ಶಾಪ ಕೊಟ್ಟನು ಇವೆಲ್ಲವನ್ನು ಬ್ರಾಹ್ಮಣರಾದ ನಾವೇ ದುಃಖದಿಂದ ಉಸುರುತ್ತಿರುವೆವು ನಮ್ಮ ಹಿರಿ ಯರ ಕಾಲದಲ್ಲಿಯೇ ಬ್ರಾಹ್ಮಣತ್ವಕ್ಕ ಅವನತಿಯ ಪರಿಸ್ಥಿತಿಯು ಆವೃತ್ತ ವಾಗಿ ಅದು ಈಗಲೂ ನಮ್ಮನ್ನು ಸುತ್ತುಗಟ್ಟಿ ನಿಂತಿದೆ. ಆದರೆ ಈಗಿನ ಬ್ರಾಹ್ಮಣತ್ವವು ಅದನ್ನ ಹರಿದೂಡೆದು ನಿಲ್ಲುವದು ಅಸಾಧ್ಯವಾಗಿದೆ ಮುಖ್ಯವಾಗಿ ಪ್ರಾಣಧಾರಣೆಗಾವಶ್ಯಕವಾದ ಅನ್ನವೇ ನಮಗೆ ಸಿದಾಗಿ ದೆಂಬುದು ಎಲ್ಲರಿಗೂ ತಿಳಿದ ಮಾತಾಗಿದೆ ಹೀಗಿದ್ದು ನಾವು ಆಗಿನ ನಮ್ಮ ಹಿರಿ ಹಿರಿಯರ ಕಾಲಕ್ಕ ದೂಷಣೆ ಕೊಟ್ಟು ಮಾಡುವದೇನು? ಬ್ರಾಹ್ಮಣತ್ವದ ಅದೃಷ್ಟವೇ ಹೀನವಾಗಿದೆ ಎಂದು ತಿಳಿಯಬೇಕಾಗಿದೆ, ಬ್ರಾಹ್ಮಣತ್ವದ ಬಗಗೆ ನಮಗೆ ತೋರಿದ ಈ ಎಲ್ಲ ವಿಚಾರಗಳು ಸದ್ಯದ

ಪ್ರಸಂಗಕ್ಕನುಸರಿಸಿ ಒಡಮೂಡಿದ್ದರಿಂದಲೇ ಸ್ವಾಭಾವಿಕವಾಗಿ ಹೇಳಿದೆವು ಕ್ಷಮಾಯಿರಲಿ''

ಶ್ರೀ ರಾಮ॥ ಅಖಂಡಧ್ಯಾನ ನಿರೂಪಣೆ॥ಗುರುಗಳು ಮುಂದುವರಿಸಿ ಹೇಳಿದ್ದೇನೆಂದರೆ— ''ಇರಲಿ ಈ ಮೊದಲು ಆದದ್ದಾಗಿ ಹೋಯಿತು ಇನ್ನು ಮೇಲಾದರೂ ಬ್ರಾಹ್ಮಣರು ಬುದ್ಧಿಗಲಿತು ವರ್ತಿಸತಕ್ಕದ್ದು ವಿಪ್ರರು ಪವಿತ್ರರಾಗಿ ಶುದ್ಧ ಮನಸಿನಿಂದ ದೇವಪೂಜೆ ಮಾಡಬೇಕು ಅಂದರೆ ಸಕಲೈಶ್ವರ್ಯಗಳು ಲಭಿಸುವವು ದೇವತಾರ್ಚನೆಯಿಲ್ಲದೆ ಮೂರ್ಖರೂ, ಪಾಖಂಡಿಗಳೂ ಹಾಗು ವ್ಯಸನ್ಥೆಯಿಲ್ಲದವರೂ ದಾರಿದ್ರ್ಯ ಮುಂತಾದವುಗಳಿಂದ ಬಳಲುತ್ತಿರುವರು ದೇವನನ್ನು ಮೊದಲು ಅರಿತುಕೊಂಡು ಅವನನ್ನು ನಿಷ್ಠೆಯಿಂದ ಸ್ಮರಿಸತಕ್ಕದ್ದು ಆ ಸರ್ವೋತ್ತಮನನ್ನು ನಿರಂತರವಾಗಿ ಧ್ಯಾನಿಸತಕ್ಕದ್ದು ಆ ದೇವನು ಎಲ್ಲದರಲ್ಲಿಯೂ ಉತ್ತಮನು ಆತ್ಮಾನಾತ್ಮ ವಿಚಾರ ಮಾಡಬೇಕು, ಆತ್ಮನೆಂದರೆ ಎಲ್ಲವನ್ನು ಅರಿತವನು, ದೇಹದಲ್ಲೆಲ್ಲ ಇದ್ದು ಇಂದ್ರಿಯಗಳ ಕ್ರಿಯಯನ್ನು ಪ್ರೇರಿಸುವನು, ಎಲ್ಲ ಭೂತಗಳಲ್ಲಿಯೂ ಆತ್ಮನ ವಾಸ್ತವ್ಯವೆಂದು ಅನುಭವವಿರುವದು ಆ ಜಗದಾತ್ಮನು ಪ್ರಾಣಿಮಾತ್ರಗಳಅಂತಸ್ಥನಾಗಿರುವದರಿಂದಪ್ರಾಣಿದಯಾನ್ವಿತರಾಗುವದುಎಲ್ಲೀಗೂ ಒಪ್ಪಿತವಾದದ್ದು ಇಂತಾದರೆ ಮಾತ್ರ ಆ ದೇವನ ನಿಜವಾದ ಪೂಜೆಯು ಆ ದೇವನೇ ದಾತಾರನು ಹಾಗು ಭೋಕ್ತಾರನು ಮತ್ತು ಎಲ್ಲವೂ ಅವನೇ ಆಗಿರುವನು. ಅವನು ಜಗತ್ತನ್ನೆಲ್ಲ ವ್ಯಾಪಿಸಿರುವನು ಹಾಗು ಅವನೇ ನಮ್ಮೊಳಗೂ ತುಂಬಿರುವನು ಮೂರೂ ಲೋಕಗಳಲ್ಲಿಯೂ ಆತನು ಅಂತಸ್ಥನಾಗಿರುವನು ನಮ್ಮ ನೋಡುವ ಕ್ರಿಯೆಯನ್ನು ನಡೆಯಿಸುವವನು ಅಂದರೆ ದ್ರಷ್ಟಾರನು ಅವನೇ ಆಗಿರುವನು ಇವನೇ ದೇಹ ಪ್ರಕೃತಿಗಳಿಂದ ನಮಗೆ ಭಿನ್ನ ಭಿನ್ನವಾಗಿ ಭಾಸಿಸುವನು ಆದರೂ ಅವನು ಎಲ್ಲರಲ್ಲಿಯೂ ಒಬ್ಬನೇ ಆಗಿರುವನು ಶರೀರಗಳ ಆಕಾರಗಳು ಬೇರೆ ಬೇರೆಯಾಗಿದ್ದರೂ ಪ್ರತಿ ಶರೀರದೊಳಗಿದ್ದ ಆತ್ಮನು ಒಬ್ಬನೇ ಆಗಿರುವನು ನುಡಿಯುವ, ನಡೆಯುವ ಕ್ರಿಯೆಗಳನ್ನೆಲ್ಲ ಅವನೇ ಮಾಡುವನು ತಾನು, ತನ್ನವರು,ಅನ್ಯರು, ಹೀಗೆ ಎಲ್ಲರೂ, ಪಶು ಪಕ್ಷಿ ಕೀಟಕಗಳೂ, ಇರಿವೆ ಮುಂತಾಗಿ ಸಣ್ಣ ಪ್ರಾಣಿ

ಗಳೂ ದೊಡ್ಡ ಪ್ರಾಣಿಗಳೂ, ಖೇಚರ (ಆಕಾಶಗಾಮಿ)ಗಳೂ, ವನಚರಗಳೂ ಭೂಚರ ಜಲಚರಗಳೂ, ಒಟ್ಟಿನ ಮೇಲೆ ನಾಲ್ಕು ಪ್ರಾಣಿ ಕೋಟಿಗಳ ಜೀವಿಗಳು ಇವೆಲ್ಲವು ಅರವಿನಿಂದಲೇ ವರ್ತಿಸುವವು ಈ ಅರವೇ 'ಅಂತರಾತ್ಮವು' ಈ ಅರವಿನ ಅನುಭವ ನಮಗುಂಟು ಆತನ ಜೊತೆಯು ನಮ್ಮಿಂದ ಅಂತರಿಸಿಯೇ ಇರುವದಿಲ್ಲ ಇಡೀ ಸೃಷ್ಟಿಯಲ್ಲಿ ಇವನೊಬ್ಬನೇ ವಾಸಿಸಿರುವದರಿಂದ ಎಲ್ಲ ಪ್ರಾಣಿಗಳ ನಿಯಂತ್ರಣಾಧಿಕಾರವು ಅವನಿಗೇ ಇರುವದು ಇಲ್ಲದಿದ್ದರೆ ಮನುಷ್ಯನೊಬ್ಬನೇ ಅದೆಷ್ಟು ಪ್ರಾಣಿಗಳನ್ನು ವಶಮಾಡಿಕೊಳ್ಳುವನು ? ಆದರೆ ಎಲ್ಲ ಪ್ರಾಣಿಗಳ ವಶೀಕರಿಸಿಕೊಳ್ಳುವ ಯುಕ್ತಿಯು ಮಾತ್ರ ನಮ್ಮ ಬಳಿಯಲ್ಲಿದೆ ಅದಾವದೆಂದರೆ– 'ನಾವು ಅಂತರಾತ್ಮನನ್ನು ವಶಪಡಿಸಿಕೊಳ್ಳುವದು ಇದೊಂದು ನಮ್ಮ ಕಡೆಗಿರುವದು ಇದು ಎಲ್ಲರಿಗೂ ಒಪ್ಪಿತವಾದದ್ದು ಎಲ್ಲರ ಶರೀರಗಳ ಒಳಿತನ್ನು ಬಯಸಿದರೆ ಆತ್ಮಾರಾಮನ ಪ್ರಸನ್ನತೆಯಾಗುವದು ದುರ್ಜನ ಪ್ರಾಣಿಯಲ್ಲಿಯೂ ದೇವನಿರುವನು ಆ ಪ್ರಾಣಿಯ ಸ್ವಭಾವವು ಸರಿಯಾಗಿ ತೋರದಿದ್ದರೂ ಅವನಲ್ಲಿಯ ದೇವನನ್ನು ತಿಳಿದು ದೂರ ಮಾಡಲಾಗದು ಆ ಪ್ರಾಣಿಯಿಂದೊದಗುವ ಸಂತಾಪವನ್ನು ಮಾತ್ರ ಕೆಲಹೊತ್ತು ದೂರಿಡಬೇಕು ಆ ಬಳಿಕ ವಿಚಾರ ಮಾಡಬೇಕು ವಿವೇಕದಿಂದ ಎಲ್ಲರಿಗೂ ತಮ್ಮ ಸಾಜನ್ಯವನ್ನು ವ್ಯಕ್ತಪಡಿಸಬೇಕು ಆತ್ಮತ್ವದಲ್ಲಿ ಭೇದ ತೋರಿದರೂ ದೇಹವು ಭಿನ್ನವಾಗಿ ಅದರಲ್ಲಿ ಆತ್ಮನೊಬ್ಬನೇ ಇರುವನು ಹಲವು ರಸಾಸ್ವಾದವನ್ನು ಕೊಡುವ ಔಷಧಿಗಳೆಷ್ಟೋ ಇದ್ದರೂ ಅವುಗಳಲ್ಲಿ ಜೀವನರಸವು ಒಂದೇಯಾಗಿರುವದು ಅಮೃತವೂ ವಿಷವೂ ತೋರಲು ಒಂದೇ ಇರುವವು ಅದರಂತೆ ಆತ್ಮನು ಸುಷ್ಟವಾದವುಗಳಲ್ಲಿಯೂ ದುಷ್ಟವಾದವುಗಳಲ್ಲಿಯೂ ಒಬ್ಬನೇಯಾಗಿರುವನು ಇಡೀ ಜಗತ್ತಿನಲ್ಲಿ ಅಂತರ್ನಿಷ್ಠ ಪುರುಷನೊಬ್ಬನೇ ಮಾತ್ರ ಒಬ್ಬ ಅಂತರಾತ್ಮನಾದ ಜಗದೀಶನನ್ನು ಕಾಣುವನು ಕಣ್ಣಿನಿಂದ ಕಣ್ಣನ್ನು ನೋಡಬೇಕು ಮನಸ್ಸಿನಿಂದ ಮನಸ್ಸನ್ನು ಶೋಧಿಸಬೇಕು ಅದರಂತೆ ಅಂತರಾತ್ಮನಿಂದ ಅಂತರಾತ್ಮನನ್ನು ಕಾಣಬೇಕು ಅಂದರೆ ಎಲ್ಲ ಕಾರ್ಯಗಳು ಒದಗುವವು ಅವನಿಲ್ಲದೆ ಕಾರ್ಯ ಭಾಗಗಳಲ್ಲಿ ಅಡೆತಡೆಗಳುಂಟಾಗುವದಿಲ್ಲ; ಹಾಗು ಎಲ್ಲ ಕಾರ್ಯವು ಅವನಿಲ್ಲದೆ ಮುಕ್ತಾಯಗೊಳ್ಳುವದಿಲ್ಲ ಆ ಅಂತರಾತ್ಮನಿಂದಲೇ

ಮಾನವನಿಗೆ ವಿವೇಕಗಳು ಸೂಚಿತವಾಗುವವು ಜಾಗೃತಿಯಲ್ಲಿಯು ಹಾಗು ಸ್ವಪ್ನದಲ್ಲಿಯ ಎಲ್ಲ ವ್ಯಾಪಾರಗಳು ಅವನಿಂದಲೇ ಒದಗುವವು ಮತ್ತು ಅವನ್ನು ಅವನೇ ಮಾಡುವನು ಆ ಸರ್ವಾಂತರ್ಯಾಮಿಯ ನಿರಂತರ ಧ್ಯಾನವೇ ದೇವನ ಅಖಂಡ ಸ್ಮರಣೆಯು ಆತನ ಬಗೆಗೆ ತಿಳಿಯುತ್ತ ತಿಳಿಯುತ್ತ ಹೋದಂತೆ ಅವನ ಧ್ಯಾನವು ಸಹಜವಾಗಿ ಪ್ರಾಪ್ತವಾಗುವದು ಇಂಥ ಸುಲಭ ಧ್ಯಾನವನ್ನು ಬಿಟ್ಟು ಆಯಾಸಪೂರ್ವಕ ಧ್ಯಾನದಲ್ಲಿ ಕುಳಿತುಕೊಳ್ಳುವದೆಂದರೆ ಆತ್ಮನನ್ನು ಬಿಟ್ಟು ಅನಾತ್ಮನನ್ನು ಸ್ಮರಿಸಿದಂತೆಯೇ ಸರಿ ಇಷ್ಟಾದರೂ ಅನಾತ್ಮನ ಧ್ಯಾನವೂ ಸಾಧಿಸುವದಿಲ್ಲ ಅನಾತ್ಮ ಧ್ಯಾನದಿಂದ ಮನಸ್ಸಿನಲ್ಲಿ ಹಲವು ವ್ಯಕ್ತಿ ರೂಪಗಳು ತೋರಿ ಅವು ಮನಸ್ಸನ್ನು ಕಷ್ಟಕ್ಕೀಡುಮಾಡುವವು ಸಾಯಾಸದಿಂದ ಒಂದೇ ಮೂರ್ತಿಯ ಧ್ಯಾನ ಮಾಡುವಲ್ಲಿ ಇನ್ನೊಂದಕ್ಕೆ ಆಸ್ಪದ ಕೊಡಬಾರದೆಂದಿದ್ದರೂ ಮನಸ್ಸಿನಲ್ಲಿ ಬೇರೆ ಬೇರೆ ಮೂರ್ತಿಗಳ ಭಾಸವಾಗುವದು ವಿಲಕ್ಷಣವು ದೇವನ ಧ್ಯಾನವೋ ದೇವಾಲಯದ ಧ್ಯಾನವೋ! ಇದನ್ನು ಮನಸ್ಸಿನಿಂದ ಚೆನ್ನಾಗಿ ವಿಚಾರ ಮಾಡಬೇಕು ಇದಕ್ಕೆ ಅಂತರ್ನಿಷ್ಠೆಯ ಧ್ಯಾನವೆಂಬ ಹೆಸರು ದೇಹವೆಂಬ ದೇವಾಲಯದಲ್ಲಿ ಆತ್ಮನೇ ದೇವನು ಅಂದಮೇಲೆ ಯಾವದರಲ್ಲಿ ಧ್ಯಾನವನ್ನಿರಿಸಬೇಕು ? ಈ ವಿಚಾರದಲ್ಲಿ ಜೀವವನ್ನು ಪ್ರೇರೇಪಿಸಿ ಆವನಿಂದಲೇ ದೇವನನ್ನು ಕಾಣಬೇಕು ಅರ್ಥಾತ್ ಆತ್ಮಧ್ಯಾನ ನಿರತರಾಗಬೇಕು ಇದೇ ಅಂತರ್ನಿಷ್ಠ ಧ್ಯಾನವು ದಂಡಕ ಧ್ಯಾನವು ಬೇರತರವಾಗಿರುವದು ಅದು ರೂಢಿಗನುಸರಿಸಿ ಮಾಡುವ ಧ್ಯಾನವು ಇದು ಅನುಭವರಹಿತವೂ ಅನುಮಾನಯುಕ್ತವೂ ಆಗಿರುವ ಧ್ಯಾನವು ಹುಚ್ಚುತನದ ಧ್ಯಾನವಿದೆಂದು ಹೇಳಬಹುದು ಕಲ್ಪನೆಯಿಂದ ಕಲ್ಪನೆ ಹೆಚ್ಚುವದು, ಈ ಸ್ಥಿತಿಯಲ್ಲಿ ಧ್ಯಾನವು ಸ್ಥಿರವಾಗುವದಿಲ್ಲ ಅಜ್ಞಾನಿಗಳು ಜಡ ವಸ್ತುವಿನ ಧ್ಯಾನದಿಂದ ನಿರರ್ಥಕ ಕಷ್ಟಪಡುವರು ದೇವನನ್ನು ಶರೀರಧಾರಿಯೆಂದು ಕಲ್ಪಿಸುವರು ಆದರಿಂದ ಅವರ ಮನಸ್ಸು ಹಲವು ವಿಕಾರಯುಕ್ತವಾಗುವದು. ಶರೀರವೆಂದ ಕೂಡಲೆ ಭೋಗ ತ್ಯಾಗ, ವಿಪತ್ತುಗಳು ಅದರಂತೆಯೇ ಇರುವವು ಆದರೆ ದೇವನಿಗೆ ಇವೆಲ್ಲ ಇರುವದಿಲ್ಲ ಈ ವಿಕಲ್ಪನೆಗಳ ಮೂಲಕ ಮನಸು ವಿಪರೀತವಾಗುವದು ಇಂಥವುಗಳನ್ನು ಮನಸು ಕಾಣಬಾರದು ಆದರೂ ಹಲವು ಸ್ವಪ್ನಗಳಿಂದ

ಅವು ಕಾಣುವವು ಕಂಡದ್ದೆಲ್ಲವನ್ನು ಹೇಳಲಿಕ್ಕೆ ಬರಲಾರದು ಹೀಗಾಗಿ ಸಾಧಕರ ಮನಸ್ಸು ತಳಮಳಗೊಳ್ಳುವದು ಯೋಗ್ಯಪೂರ್ಣವಾಗಿ ನೆರವೇರಿದ ಧ್ಯಾನಕ್ಕೆ ತಮ್ಮ ಮನಸ್ಸೇ ಸಾಕ್ಷಿಯು ಮತ್ತು ಅದರಿಂದಲೇ ಸಮಾಧಾನ ಸುಖ ಲಭಿಸುವವು ಮನಸಿನಲ್ಲಿ ವಿಕಲ್ಪಗಳುಂಟಾಗಬಾರದು ಒಂದು ವೇಳೆ ಮನಸ್ಸನ್ನು ಸುಧಾರಿಸಿಕೊಂಡು ಅಖಂಡ ಧ್ಯಾನವಿಲ್ಲದೆ ಹೋದರೂ ಅದರಿಂದೇನೂ ಉಪಯೋಗವಿಲ್ಲ ಹಾಗೂ ಅಖಂಡ ಧ್ಯಾನವಿದ್ದರೂ ದೇವನು ದೊರೆಯದೆ ಹೋದರೆ ಆ ಭಜಕನು ಪತಿತನೆಂದೇ ಹೇಳಬಹುದು ದೇವ ಭಜಕರಲ್ಲಿ ಅನನ್ಯತೆ ಅಂದರೆ ಐಕ್ಯತೆಯಿರಬೇಕು ಈ ಐಕ್ಯತೆಯ ಸಂಭ್ರಮದಿಂದಲೇ ಜ್ಞಾನಿಯು ಸಹಜವಾದ ಐಕ್ಯತ್ವವನ್ನರಿತು ಸಮಾಧಾನ ಹೊಂದುವನು ಈ ಪ್ರಕಾರದ ಅನುಭವವಿರಬೇಕು ಅದಿಲ್ಲದೆ ಹೋದರೆ ಭ್ರಮೆಯುಂಟಾಗಿ ಪ್ರಾಣಿಯು ದಂಡಕಧ್ಯಾನವನ್ನನುಸರಿಸಿದಂತಾಗುವದು ಈ ದಂಡಕ ಧ್ಯಾನದಿಂದ ಮನಸು ಕಲುಷಿತವಾಗಿ ಸತ್ಯಾಸತ್ಯಗಳ ವಿಚಾರವು ಆ ಭಜಕರಲ್ಲಿ ಬರಲಾರದು ಮಿಥ್ಯ ಸಂಗತಿಗಳನ್ನು ಅವರು ಹರಡುವರು ನಿರರ್ಥಕವಾಗಿ ಗೊಂದಲವನ್ನೆಬ್ಬಿಸಿ ಕೊನೆಗೆ ತಮ್ಮ ಮನಸ್ಸನ್ನೇ ಮಿಥ್ಯತ್ವದಲ್ಲಿ ನೂಕುವರು ಇದರ ಸ್ಪಷ್ಟತೆಯನ್ನು ಒಂದು ಉದಾಹರಣೆಯಿಂದ ಹೇಳುವದಾದರೆ—

'ಒಬ್ಬನು ಧ್ಯಾನ ಮಗ್ನನಾಗಿ ಕುಳಿತಿರುವನು ಅವನಿಗೆ ಇನ್ನೊಬ್ಬನು– ''ಎಲೈ ನಿನ್ನ ಧ್ಯೇಯ ಮೂರ್ತಿಯ ಮಸ್ತಕದ ಮೇಲಿನ ಮುಕುಟ ತೆಗೆದು ಕೊರಳ ಹಾರವನ್ನು ಹಾಕು ಅಂದರೆ ಆ ಸಣ್ಣ ಮಾಲೆಯು ಕೊರಳಿಗೆ ಸರಿಯಾಗುವದು" ಎಂದು ಹೇಳಿದನು

ಈ ಮೇಲಿನ ಉದಾಹರಣೆಯು ಬಗೆಗೆ ವಿಚಾರ ಮಾಡಲು—

ಮನಸ್ಸಿನ ಮನೆಯಲ್ಲಿ ಕಲ್ಪನೆಗಳು ಸಮೃದ್ಧವಾಗಿರುವವು ಆದರೆ ಉದಾಹರಣೆಯಲ್ಲಿಯ ತಿನೆಯುವನಲ್ಲಿ 'ಸಣ್ಣ ಮಾಲೆ'ಯ ಕಲ್ಪನೆ ಮಾತ್ರ ಬಂದಿತು

ಈ ವಿಚಾರದಿಂದ ಆ ಧ್ಯಾನಸ್ಥನೂ ಅವನಿಗೆ ಮಾಲೆ ಧರಿಸುವ ಯುಕ್ತಿಯನ್ನು ಹೇಳುವವನೂ ಇಬ್ಬರೂ ಮೂರ್ಖರೆಂದು ತಿಳಿಯುವದು ಕಲ್ಪನೆಗಳ ಮಾಲೆಯು ಹೂಗಳ ಮಾಲೆಗಿಂತ ಸಣ್ಣದನ್ನಾಗಿ ಮಾಡಿದ ಆತನ

ಬುದ್ಧಿಯು ಮೂರ್ಖತನದ್ದು ಕಲ್ಪನೆಯ ಮಾಲೆಗಾಗಿ ಹೊರಗಿನಿಂದ ಹೂವು ಆಯ್ದು ತರಬೇಕಾಗಿಲ್ಲ, ಮಾಲೆಯನ್ನು ಹೆಣೆಯಬೇಕಾಗಿಲ್ಲ, ಯಾವ ಬಗೆಯಿಂದಲೂ ಶ್ರಮ ಮಾಡಬೇಕಾಗುವದಿಲ್ಲ ಇದೇನೇ ಇರಲಿ

ಬುದ್ಧಿಯಿಲ್ಲದ ಮಾನವನ ಜನ್ಮವು ನಿರರ್ಥಕವು ಜನರು ಅಂಧವನ ಮಬ್ಬಿಗೆ ಎಂದೂ ಬೀಳಕೂಡದು ಯಾವನೊಬ್ಬನು ತಾನು ಸಾಧಿಸಿದ ಪರಮಾರ್ಥಕ್ಕನುಸರಸಿಯೇ ಆತನ ಸಾಂಪ್ರದಾಯವು ಬೆಳೆದು ಬರುವದು ಮುಂದೆ ಆ ಸಂಪ್ರದಾಯವನ್ನನುಸರಿಸುವದಕ್ಕೆ ಹಲಕೆಲವರು ಅನುಯಾಯಿಗಳುಕೂಡಿಕೊಂಡುಅಭಿಮಾನದಿಂದಅದನ್ನು ರೂಢಿಗೊಳಿಸಲು ಯತ್ನಿಸುವರು ಅನುಭವವಿಲ್ಲದೆ ಕೇವಲ ಸ್ವಾಭಿಮಾನದಿಂದ ಉಪದೇಶ ಮಾಡುವದೆಂದರೆ—ಮುಸುಕಿಕ್ಕಿ ರೋಗಿಯನ್ನು ಗುದ್ದಿ ಕೊಂದಂತೆಯೇ ಸರಿ ಇದರಲ್ಲಿ ಕೇವಲ ಅನುಮಾನವೇ ಹೊರತು ಜ್ಞಾನವಿಲ್ಲ ಒಟ್ಟಿನ ಮೇಲೆ ಹೇಳುವದೇನಂದರೆ-

ಎಲ್ಲ ಸ್ವಾಭಿಮಾನಗಳನ್ನು ಬಿಡಬೇಕು, ವಿವೇಕದಿಂದ ಅನುಭವ ಪಡೆಯಬೇಕು, ಮಾಯೆಯ ಸಂಬಂಧದ ಸಂದಿಗ್ಧತೆಗಳನ್ನೆಲ್ಲ ಖಂಡಿಸಿ ವಿವೇಕ ಬಲದಿಂದ ಆತ್ಮಸಿದ್ಧಾಂತವನ್ನು ಸ್ವೀಕಾರ ಮಾಡಬೇಕ ”

ಶ್ರೀ ರಾಮ ॥ ೯ ಶಾಶ್ವತ ನಿರೂಪಣೆ ॥ ಗುರುಗಳು—

ಆತ್ಮಾನಾತ್ಮ ವಿವೇಕದಿಂದ ಪಿಂಡವನ್ನೂ ಸಾರಾಸಾರ ವಿಚಾರದಿಂದ ಬ್ರಹ್ಮಾಂಡವನ್ನೂ ನಿರೀಕ್ಷಿಸಲೇಬೇಕು ಪಿಂಡವು ಅನಾತ್ಮವು ಸಕಲ ಕರ್ತಾರನು ಆತ್ಮನು ಈ ಬಗೆಯಾಗಿ ಆತ್ಮಾನಾತ್ಮ ವಿವೇಕದಿಂದ ಅನುಭವ ಪಡೆಯಬೇಕು ಇನ್ನು ಬ್ರಹ್ಮಾಂಡ ರಚನೆಯನ್ನು ತಿಳಿದುಕೊಳ್ಳಬೇಕು ಪಿಂಡದಲ್ಲಿ ಆತ್ಮಾನಾತ್ಮ ವಿವೇಕವನ್ನೂ ಬ್ರಹ್ಮಾಂಡದಲ್ಲಿ ಸಾರಾಸಾರ ವಿಚಾರವನ್ನು ಬಳಿಸಿ ತಿಳಿಯಬೇಕು ಪಿಂಡದ ಕಾರ್ಯ ಹಾಗು ಬ್ರಹ್ಮಾಂಡದ ಕಾರಣ ಇವುಗಳ ವಿವರಣೆಯನ್ನು ಮುಂದೆ ನಿರೂಪಿಸುವೆವು ಅಸಾರವೆಂದರೆ ನಶ್ವರವು, ಸಾರವೆಂದರೆ ಶಾಸ್ವತವು ಕಲ್ಪಾಂತದಲ್ಲಿಯೂ ಕೂಡ ನಾಶವಾಗದ್ದೇ ಸಾರವು, ನಾಶವಾಗುವದೇ ಅಸಾರವು ಪೃಥ್ವಿಯ ಜಲದಿಂದ ಆಗಿರುವದು, ಮುಂದೆ ಅದು ಜಲದಲ್ಲಿಯೇ ಕೂಡಿಕೊಳ್ಳುವದು ಜಲದ ಉತ್ಪತ್ತಿಯು ತೇಜದಿಂದಾಗಿ ಬೆಳೆಯಿತು ಆ ತೇಜದಿಂದಲೇ ಜಲವು ಹೀರಿಕೊಳ್ಳಲ್ಪಡುವದು. ಕೊನೆಗೆ ಮಹತ್ತೇಜವೇ ಉಳಿಯು

ವದು ತೇಜವು ವಾಯುವಿನಿಂದ ಉತ್ಪಾದಿತವು, ಆ ವಾಯುವು ತನ್ನಿಂದಾದ ತೇಜಕ್ಕೇ ಆವರಣವಾಗಿ ಬಿಡುವದು ಆದರಿಂದ ತೇಜವೆಲ್ಲ ಅಡಗಿ ಸಾಂದ್ರವಾದ ವಾಯುವೇ ಉಂಟಾಗುವದು ವಾಯುವು ಗಗನ ದಿಂದ ಉತ್ಪನ್ನವಾಗಿ ಹಿಂದಿನಿಂದ ಅದು ನಾಶವಾಗಿ ಬಿಡುವದು ಇದಕ್ಕೇ ವೇದಾಂತ ಶಾಸ್ತ್ರಗಳು ಕಲ್ಪಾಂತವೆಂದು ಹೇಳುವವು ಗುಣಮಾಯೆ ಮೂಲ ಮಾಯೆಗಳೆಂಬವು ಪರಬ್ರಹ್ಮನಲ್ಲಿ ಲಯವಾಗುವವು ಆ ಪರ ಬ್ರಹ್ಮನ ವಿವರಣೆಗೆ ವಿವೇಕವು ಅವಶ್ಯವು ವಿವೇಕದ ನಂತರ ಎಲ್ಲ ಉಪಾ ಧಿಗಳೆಲ್ಲ ಕೊನೆಗಂಡು ಅಲ್ಲಿ ದೃಶ್ಯಗಳೆಲ್ಲವುಗಳ ಯತ್ನವು ಇಲ್ಲದಾಗುವದು ಆಗ ನಿರ್ಗುಣ ಬಹ್ಮನು ಮಾತ್ರ ಎಲ್ಲೆಡೆಯಲ್ಲಿ ಸಾಂದ್ರನಾಗಿ ತುಂಬಿ ಉಳಿಯುವನು ಆ ನಿರ್ಗುಣನಿಗೆ ಕಲ್ಪಾಂತವೊದಗಿದರೂ ನಾಶತ್ವವಿಲ್ಲ ಆಗ ಆತನು ಮಾಯಾರಹಿತನಾಗಿಯೂ ಶಾಶ್ವತನಾಗಿಯೂ ಇರುವನೆಂಬು ದನ್ನು ತಿಳಿಯತಕ್ಕದ್ದು ಅಂತರಾತ್ಮಾದೇವನು ಸಗುಣನು, ಆ ಸಗುಣ ದಿಂದಲೇ ನಿರ್ಗುಣನನ್ನು ಹೊಂದಬೇಕು ಮತ್ತು ಆ ನಿರ್ಗುಣಜ್ಞಾನದಿಂದಲೇ ಜ್ಞಾನದವಿಜ್ಞಾನವುಅಂದರೆಅವರೋಕ್ಷಾನುಭವವುಉಂಟಾಗುವದು ನಿರ್ಗುಣ ಹಾಗು ನಿರ್ಮಲ ಬ್ರಹ್ಮನಲ್ಲಿ ಕಲ್ಪನೆ-ಮಾಯೆಗಳಿಲ್ಲ,ದೃಶ್ಯಗಳ ಆಗುಹೋಗು ವಿಕೆಗಳು ಇರುವದಿಲ್ಲ ಆಗುಹೋಗುವಿಕೆಗಳು ದೃಶ್ಯಗಳಿಗೆ ಮಾತ್ರವಲ್ಲ ದೆಬ್ರಹ್ಮ ನಿಗಿಲ್ಲಜ್ಞಾನ-ಅಜ್ಞಾನ-ವಿಪರೀತಜ್ಞಾನಗಳೆಲ್ಲ ಹೋಗಿ ವಿಜ್ಞಾನವಾಗಬೇಕು ವಿಪರೀತ ಜ್ಞಾನವೆಂದರೆ— ಒಂದನ್ನು ಇನ್ನೊಂದನ್ನಾಗಿ ತಿಳಿಯುವದು ಅಜ್ಞಾನವೆಂದರೆ ಏನೊಂದನ್ನೂ ತಿಳಿಯದಿರುವದು ಜ್ಞಾನವೆಂದರೆ— ಎಲ್ಲ ವನ್ನು ತಿಳಿಯುವದು ಆತ್ಮನನ್ನು ತಿಳಿಯದಿರುವದೇ ಅಜ್ಞಾನವು ಆತ್ಮ ನನ್ನೂ ತಿಳಿಯುವದೇ ಜ್ಞಾನವು. ಪಂಚಭೂತಾತ್ಮಕಗಳ ವಿಸ್ತಾರದ ವಿಚಾ ರವು ಜ್ಞಾನವೆನ್ನಿಸಲಾರದು ಹಾಗೂ ಅಜ್ಞಾನವೆಂದೂ ಅನ್ನಿಸಲಾರದು ಇದುವೇ ವಿಪರೀತ ಜ್ಞಾನವು ಯಾಕಂದರೆ ಅಲ್ಲಿ ಇರುವ ಬಗೆಯೊಂದು ತೋರುವ ಬಗೆಯಿನ್ನೊಂದಾಗಿರುವದು ಆದ್ದರಿಂದ ಈ ಮೂರು ವೃತ್ತಿ ಗಳು ಅಂದರೆ ತ್ರಿಪುಟೆಯು ಕ್ಷೀಣವಾದರೆ ಅದೇ ವಿಜ್ಞಾನವು ಶಾಸ್ತ್ರ-, ಗುರು ಆತ್ಮರುಗಳ ಅನುಭವಗಳನ್ನು ಕಂಡಲ್ಲಿಯೇ ನಿರ್ವಿಕಾರ ಬ್ರಹ್ಮನ ಸತತ ಸಂಚಲನೆಯಿರುವದು ಇದನ್ನು ಜ್ಞಾನದೃಷ್ಟಿಯಿಂದ ಕಂಡು

ಅನನ್ಯತೆಯಿಂದಿರಬೇಕು ಇದಕ್ಕೇ ಆತ್ಮನಿವೇದನೆಯೆಂದು ಹೆಸರು ಪರಬ್ರಹ್ಮನು ದೃಶ್ಯಗಳಿಗೆ ದೃಶ್ಯನಾಗಿ ತೋರುವನು, ಭಾಸಿಸುವ ಮನಸ್ಸಿನಿಂದ ನೋಡಲು ಭಾಸವಾಗುವನು ಆದರೆ ಅವನ ದೃಶ್ಯಾಭಾಸಗಳಿಂದಅತೀತನಾಗಿ ಅವಿನಾಶಿಯಾಗಿರುವನು ಆತನನ್ನು ನೋಡಹೋಗಲು ದೂರವಾಗಿ ಇರುವಷ್ಟಕ್ಕಿಂತ ಇನ್ನೂ ಹೆಚ್ಚಾಗಿ ದೂರ ತೋರುವನು ಒಳಗೂ ಹೊರಗೂ ವ್ಯಾಪಿಸಿರುವನು ಅವನ ಅಂತವು ತೋರದೆ ಅನಂತನಾಗಿಯೇ ಇರುವನು ಈ ಎಲ್ಲ ಲಕ್ಷಣಗಳಿಂದ ಅವನಿಗೆ ಇನ್ನೊಂದರ ಉಪಮೆಯೇ ಸರಿಯಾಗದು ಚಂಚಲವಾಗಿದ್ದುದು ಸ್ಥಿರವಾಗದು, ನಿಶ್ಚಲವಾದದ್ದು ಸಂಚರಿಸಲಾರದು ಆಕಾಶದಲ್ಲಿ ಆದೆಷ್ಟೋ ಮೋಡಗಳು ತುಂಬಾ ಹರಿದಾಡುವವು ಆದರೂ ಆ ಆಕಾಶವು ನಿಶ್ಚಲವಾಗಿಯೇ ಇರುವದು ವಿಕಾರಕ್ಕೆ ವಿನಾಶತೆಯುಂಟು ಅಂದ ಮೇಲೆ ಬೆಳೆಯುವ ಅಳಿಯುವ ವಸ್ತುಗಳೆಲ್ಲವೂ ಕಲ್ಪಾಂತದಲ್ಲಿ ಇಲ್ಲದಾಗುವವು ಮಾಯೆಯ ಸಂಭ್ರಮದಿಂದ ಅಂತರ್ವಿಕಾರನಾದವನನ್ನು ವ್ಯುತ್ಪ್ರಮಚಕ್ರವು ಎಂದೂ ಹೊರಬಿಡಲಾರದು ದಾಕ್ಷಿಣ್ಯವೃತ್ತಿಯಿಂದ ವ್ಯವಹಾರಗಳು ನಾಗುವದಿಲ್ಲ ಆ ದಾಕ್ಷಿಣ್ಯತೆಯಿಂದೆ ಸಿದ್ಧಾಂತಗಳೂ ಸ್ಥಾಪಿತವಾಗುವದಿಲ್ಲ ಅದರಂತೆ ಹೃದಯದಲ್ಲಿ ದೇವನು ಮೂರ್ತನಾಗುವದಿಲ್ಲ ಇದನ್ನೇ ರೋಗಿಯೊಬ್ಬನ ಉದಾಹರಣೆಯಿಂದ ಸ್ಪಷ್ಟಪಡಿಸುವದಾದರೆ– ಅನುಭವವಿಲ್ಲದ ವೈದ್ಯನಿಂದ ಮಹಾರೋಗಿಯೊಬ್ಬನು ಕೇವಲ ವೈದ್ಯನ ಭಿಡೆಗೊಳಗಾಗಿ ಔಷಧ ತೆಗೆದುಕೊಳ್ಳುವದರಿಂದ ಗುಣವಾಗುವದು ನಿಶ್ಚಯವಾಗಿ ಆ ರೋಗಿಯು ಮರಣಕ್ಕೆ ತುತ್ತಾಗುವನು ಇಂತಿದೆ ಆ ವಿಚಾರವು ರಾಜನ ಪರಿಚಯವಿದ್ದವನು ಸಿಕ್ಕಸಿಕ್ಕವನನ್ನು ರಾಜನೆಂದು ಗುರುತಿಸಲಾರನು ಅದರಂತೆ ದೇವನನ್ನು ದೇವನೆಂದೇ ಅರಿಯುವದು ಮಾಯೆಯ ದಾಕ್ಷಿಣ್ಯಕ್ಕೆ ಸಿಕ್ಕ ಮೂರ್ಖನು ನಿಜತತ್ವವನ್ನು ಎಂದೂ ಅರಿಯನು ದಾಕ್ಷಿಣ್ಯವು ಮಾಯೆಯಿಂದೀಚಿನದು, ಬ್ರಹ್ಮನು ಮಾಯೆಯಿಂದಾಚೆಯವನು ಆದ್ದರಿಂದ ವ್ಯರ್ಥವಾದ ದಾಕ್ಷಿಣ್ಯದ ಮಬ್ಬಿಗೆ ಬಿದ್ದು ವ್ಯವಹರಿಸುವದು ವಿಚಾರಿಗಳ ಕರ್ತವ್ಯವಲ್ಲ, ಮಿಥ್ಯಾ ಮಾಯೆಯನ್ನು ಬಿಡತಕ್ಕದ್ದು ಅನುಭವದಿಂದ ಸತ್ಯಬ್ರಹ್ಮನನ್ನು ತಿಳಿಯಬೇಕು ಮಾಯಾತ್ಯಾಗದಿಂದಲೇ ಬ್ರಹ್ಮಜ್ಞಾನವು. ಇನ್ನು ಮುಂದೆ ಮಾಯೆಯ ನಿಜತತ್ವವೆಷ್ಟಿರುವದೆಂಬದನ್ನು ನೋಡೋಣ"

ಶ್ರೀ ರಾಮ || ೧೦ ಮಾಯಾ ನಿರೂಪಣೆ || ಗುರುಗಳು ಶಿಷ್ಯನಿಗೆ ಮಾಯೆಯ ಸತ್ಯಾಸತ್ಯತೆಯ ಬಗೆಗೆ ಹೇಳಿದ್ದೆಂತೆಂದರೆ—

''ಮಾಯೆಯು ದೃಷ್ಟಿಗೋಚರವಾದರೂ ನಶ್ವರವಾಗಿದೆ ಮತ್ತು ಬ್ರಹ್ಮನು ಕಣ್ಣಿಗೆ ಕಾಣದಿದ್ದರೂ ಅವಿನಾಶಿಯಾಗಿರುವನು ಮಾಯೆಯನ್ನು ಸತ್ಯವೆಂದು ತಿಳಿಯುವದೇ ಮಿಥ್ಯವು ದರಿದ್ರನೊಬ್ಬನು ಅಂಗಾತಾಗಿ ಮಲಗಿಕೊಂಡು ಇಲ್ಲದ ಕಲ್ಪನೆಗಳನ್ನು ತಂದುಕೊಂಡು ಮನೋರಾಜ್ಯವನ್ನು ಕಟ್ಟುತ್ತಿದ್ದರೂ ಅವನಿಂದ ಏನೊಂದೂ ರಾಜ್ಯಕ್ರಿಯೆಗಳೊದಗಲಾರವು ತದ್ವತ್ ಮಾಯೆಯು ಕಲ್ಪನಾರೂಪವಾಗಿದೆ ಕನಸಿನಲ್ಲಿ ಉಪಭೋಗಿಸುವ ಕನಕ ಕಾಂತೆಯರ ಸಿರಿಯೂ, ಹಲವು ಬಗೆಯ ವಿಲಾಸ ವಿಭ್ರಮಗಳೂ, ಹಾವಭಾವಗಳು ಕ್ಷಣಿಕವಾಗಿ ತೋರಿ ಕೂಡಲೆ ಮಾಯವಾಗುವವು. ಅದೇ ಸ್ಥಿತಿಯು ಮಾಯೆಯದಾಗಿರುವದು ಆಕಾಶದಲ್ಲಿ ತೋರುವ ಗಂಧರ್ವ ನಗರದ ಸಡಗರದಂತೆ ಮಾಯೆಯು ಹಲವು ರೂಪಗಳಿಂದ ಹಲವು ಪ್ರಕಾರವಾಗಿ ತೋರುವದು ಜಾತಿಗೇರನು ವೈಭವಯುತವಾದ ವೇಷ ಧರಿಸುವನು, ಹಲವು ವಿಭವಾಡಂಬರದ ನುಡಿಗಳನ್ನಾಡುವನು ಇವೆಲ್ಲ ಆತನ ಕ್ರಿಯೆಗಳು ಕೇವಲ ಉದರನಿಮಿತ್ತವಾಗಿಯೇ ಅಲ್ಲದೆ ನಿಜವಾದ ವೈಭವ ವಚನಗಳಾಗಲಾರವು ಅವು ಬರಿಯ ಮಿಥ್ಯವಾದವುಗಳೇ ಆಗಿರುವವೆಂಬದು ಎಲ್ಲರ ಅನುಭವ ಸಂಗತಿಯಾಗಿರುವದು ಇದರಂತೆ ಸ್ವರೂಪ ಜಾಗೃತಿಯ ಕಾಲದಲ್ಲಿ ಐಹಿಕ ಐಶ್ವರ್ಯಗಳೆಲ್ಲ ಮಿಥ್ಯವಾದವುಗಳೆಂಬುದು ತಿಳಿದು ಬರುವದು ವಿಜಯಾ ದಶಮಿ ದಿನದಲ್ಲಿ ಬನ್ನಿಯ ತೊಪ್ಪಲಿಗೆ ಜನರು 'ಬಂಗಾರ'ವೆಂದು ನುಡಿದು ಅದನ್ನು ಪರಸ್ಪರರಲ್ಲಿ ಕೊಡತಕ್ಕೊಳ್ಳುವದನ್ನು ಆಚರಿಸುವರು ಆದರೆ ಆ ಬನ್ನಿಯಲ್ಲಿ ಸೇರ್ಪಡೆಯಿದ್ದ ಮುಳ್ಳು ಕೈಗೆ ಚುಚ್ಚುವದೇ ಹೊರತು ತೊಪ್ಪಲು ಬಂಗಾರವಾಗಲಾರದು ಅದರಂತೆ ಮಿಥ್ಯವಾದ ಮಾಯೆಯಲ್ಲಿಯ ಸಂಪತ್ತು ಇರುವದು ಮೃತರ ಶ್ರಾದ್ಧ–ಪಕ್ಷ–ಪುಣ್ಯತಿಥಿಗಳು, ಮಾಸ್ತಿಯ ವೈಭವಗಳು, ಸ್ಮಶಾನದಲ್ಲಿ ರೋದನಗಳು, ಇವೆಲ್ಲವುಗಳಂತೆಯೇ ಮಾಯೆಯ ನಿಷ್ಫಲತೆಯುಂಟು ತನ್ನ ವಶವರ್ತಿಯಾದ ಜಾರೆಗೆ ಲಕ್ಷ್ಮಿಯೆಂದೂ, ಕಂಗಾಲನ ಭಾರ್ಯೆಗೆ ಸಿರಿದೇವಿಯೆಂದೂ ಹೆಸರಿಟ್ಟು ಸಂಬೋಧಿಸುವ

ರೀತಿಯೇ ಮಾಯೆಯ ಬಗೆಗಿರುವದು ಇನ್ನೂ ಹೇಳುವದಾದರೆ— ವಿಧವಾ ಧರ್ಮ ಗ್ರಹಿಸಿದವಳಿಗೆ ಸಾವಿತ್ರಿ ಎಂದೂ, ಮನೆ ಮನೆ ಬಿಕ್ಕೆ ಬೇಡುವವನಿಗೆ ಕುಬೇರನೆಂದೂ, ಹರಕ ಅರಿವೆ ಧರಿಸಿದವನಿಗೆ ಭಗವಂತ ಕೃಷ್ಣನೆಂದೂ ಬತ್ತಿದ ಪ್ರವಾಹಕ್ಕೆ ಅಮರ ನದಿಯೆಂದೂ, ತನ್ನ ಸೋಗಿನ ಹಾವಭಾವದಿಂದ ಜನರನ್ನು ದಂಗುಗೊಳಿಸುವ ಜಾತಿಗೇರನಿಗೆ ರಾಮ ದೇವನೆಂದೂ, ನೀರು ಹೊತ್ತು ಉಪಜೀವಿಸುವವನಿಗೆ ಮಹಾರಾಜನೆಂದೂ, ಸಂಬೋಧಿಸುವ ಪದ್ಧತಿಯು ಜನತೆಯಲ್ಲಿ ನಡೆದು ಬಂದಿದೆ ಆದರೆ ಇವೆಲ್ಲವೂ ವಿಪರೀತಾಂಕಿತಗಳು ಮಾಯೆಯ ಸ್ವರೂಪವೂ ಕೂಡ ಇವನ್ನನುಸರಿಸಿಯೇ ಇರುವದು ಅಂದರೆ ಅವುಗಳಂತೆ ಮಾಯೆಯೂ ನಿಜವಾದುದಲ್ಲವೆಂದು ಹೇಳಬಹುದು ಇನ್ನೂ ಉದಾಹರಣೆ ಕೊಡುವದಾದರೆ—

ಮನೆಯಲ್ಲಿಯ ದೇವ ಮಂಟಪದಲ್ಲಿ ನಿತ್ಯವೂ ಅನ್ನಪೂರ್ಣಾದೇವೀ ವಿಗ್ರಹದ ಪೂಜೆ ನಡೆಯುತ್ತಿದ್ದರೂ ಆ ಮನೆಯವರಿಗೆ ಉಪವಾಸ ತಪ್ಪುವದಿಲ್ಲ ಕುಳ್ಳು ಮಾರಿ ಜೀವಿಸುವಾಕೆಗೆ ಸರಸ್ವತಿಯೆಂದು ಕರೆದರೆ ಅವಳು ವಿದ್ಯಾವಯುತಳಾಗುವದಿಲ್ಲ. ಶುನಕನಿಗೆ ಹುಲ್ಯಾ ಹುಲ್ಯಾ ಎಂದು ಕರೆದರೆ ಅದು ಹುಲಿಗೆ ಸರಿಯಾಗುವದಿಲ್ಲ ಈ ಎಲ್ಲವುಗಳಂತೆ ಮಗನಿಗೆ ಇಂದ್ರನೆಂದು, ಕುರೂಪಿಯಾದ ಹೆಂಡತಿಗೆ ಸುಂದರಿಯೆಂದು, ಮೂರ್ಖನಿಗೆ ಜ್ಞಾನವಂತನೆಂದು, ಕತ್ತೆಗೆ ಕೋಕಿಲೆಯೆಂದು, ಕುರುಡನಿಗೆ ಮನಹರನೆಂದು, ಚಾಂಡಾಲನಿಗೆ ತುಳಸಿ ಎಂದು, ಸಮಗಾರಳಿಗೆ ಕಾಶಿ ಎಂದು ಮಾದಿಗರಾಕೆಗೆ ಭಾಗೀರಥಿಯೆಂದು, ಹೆಸರಿಡುವ ಮೂರ್ಖತನದಷ್ಟೇ ಮಾಯೆಗೆ ನಿಜತ್ವವನ್ನು ಹೇಳುವದು ಮೂರ್ಖತನದ್ದಾಗುವದು ನೆರಳು ಮತ್ತು ಕತ್ತಲೆಗಳೊಂದಾಗಿ ಉಂಟಾಗುವ ಪ್ರಕಾರದಂತೆಯೇ ಮಾಯೆಯು ಭಾಸಮಾತ್ರವಾಗಿ ತೋರುವದು ಕಿವಿ ಕೈ ಬೆರಳುಗಳ ಸಂದು, ಅಂಗೈ ಇವೆಲ್ಲವುಗಳ ಮೇಲೆ ಸೂರ್ಯ ಕಿರಣಗಳು ಬೀಳಲು ಅವೆಲ್ಲವು ಆರಕ್ತವರ್ಣದಿಂದ ಕೆಂಡದೋಪಾದಿಗಳಾಗಿ ಕಾಣುವವು ಮಾಯೆಯ ಸ್ಥಿತಿಯಾದರೂ ಹಾಗೇ ತೋರುವದು

ಕಾವೀ ಬಣ್ಣದ ವಸ್ತ್ರಗಳನ್ನು ದೂರಿನಲ್ಲಿ ಕಂಡೊಡನೆ ಅಗ್ನಿಯ ಜ್ವಾಲೆಗಳು ಅದೆಲ್ಲಿಯೋ ಉರಿಯ ಹತ್ತಿರುವಂತೆ ಭಾಸವಾಗುವದು

ಅಥವಾ ನೀರಿನಲ್ಲಿ ಕೈಕಾಲುಗಳ ಬೆರಳನ್ನಿರಿಸಿ ನೋಡಲಾಗಿ ಬೆರಳುಗಳು ಉದ್ದವಾಗಿ ಇಲ್ಲವೆ ಗಿಡ್ಡಾಗಿ, ವಕ್ರವಾಗಿ, ಇಲ್ಲವೆ ವಿಪರೀತವಾಗಿ ಬೇಕಾದಂತೆ ಕಂಡು ಬರುವವು ಈ ದೃಶ್ಯದಂತೆಯೇ ಮಾಯೆಯ ದೃಶ್ಯವಿರುವದು ಪಿತ್ತ ವಿಕಾರದಿಂದ ಮಸ್ತಕ ಭ್ರಮಣೆಯುಂಟಾಗಲು ಕಣ್ದೆರೆದು ನೋಡಲು ಭೂಮಿಯೇ ಗರಗರನೆ ತಿರುಗಿದಂತೆ ಕಂಡು ಬರುವದು ಇಲ್ಲವೆ ಕಾಮಿಣಿ ರೋಗವುಂಟಾದ ಮಾನವನಿಗೆ ಅವನು ಕಂಡ ಎಲ್ಲ ಪದಾರ್ಥಗಳ ಬಣ್ಣವು ಅರಿಸಿಣ ಬಣ್ಣದವಾಗಿ ತೋರುವವು ವ್ಯೆಯಲ್ಲಿ ಸನ್ನಿವಾತ ಜ್ವರವು ತುಂಬಿದಾಗ ಶರೀರಿಕ್ಕೆ ಉಂಟಾದ ಸ್ಥಿತಿಯೇ ಮಾಯೆಯಿಂದಾಗುವದು ಪದಾರ್ಥಕ್ಕೆ ಯಾವದೊಂದು ವಿಕಾರವಾಗಲು ಕೇವಲ ಅದು ಭಾಸ ಮಾತ್ರವಾಗಿ ತೋರುವದು ಪದಾರ್ಥದ ವಿಕಾರದಂತೆಯೇ ಒಂದಾಗಿ ತೋರುವದು ಇದರಂತೆಯೇ ಮಾಯಯ ಸ್ಥಿತಿಯು ಆದು ಯಾವಾಗಲೂ ಅಸತ್ಯವಾಗಿಯೇ ಇದ್ದು ಸತ್ಯದಂತೆ ಭಾಸವಾಗುವದು ”

ಇತಿ ದಾಸಬೋಧೆಯ ೧೪ನೆ ದಶಕ ಮುಗಿದುದು





## ಜಯ ಜಯ ರಘುವೀರ ಸಮರ್ಥ

## ೧೫ ನೆಯದಶಕ (ಆತ್ಮ ದಶಕ)

ಶ್ರೀ ರಾಮ ಸಮರ್ಥ ॥ ೧ ಚಾತುರ್ಯ ಲಕ್ಷಣ ॥ ಶ್ರೀ ಗುರಗಳು ಶಿಷ್ಯರನ್ನು ಕುರಿತುಃ—

"ಶರೀರಗಳು ಅಸ್ಥಿಮಾಂಸಗಳಿಂದ ಯುಕ್ತವಾದವುಗಳು ಹಲವು ಜೀವಗಳಿಗೆ ಶರೀರವು ಆಶ್ರಯವಾಗಿರುವದು ಅಲ್ಲಿ ಆ ಜೀವಗಳು ಮನೋವಿಕಾರಗಳಿಂದ ಕೂಡಿ ವ್ಯವಹರಿಸುವವು ಸಾಂದ್ರ–ವಿರಲತೆಗಳನ್ನೂ, ಸ್ಥೂಲ–ಸೂಕ್ಷ್ಮತೆಗಳನ್ನೂ ಆ ಜೀವಗಳು ತಿಳಿಯುವವು ಬೇಕು–ಬೇಡ ಎಂಬವುಗಳ ಅರಿವೂ ಅವಕ್ಕಿರುವದು ಒಂದು ಜೀವವು ಬೇಡಿಕೊಂಡು ಸ್ವೀಕರಿಸುವದು, ಒಂದು ಜೀವವು ಬೇಡದೆಯೇ ಕೊಡುವದು ಈ ಒಳ್ಳೆಯ ಲಕ್ಷಣಗಳನ್ನು ಅನುಭವದಿಂದ ಕಾಣುವದು ಒಂದು ಜೀವವನ್ನು ಇನ್ನೊಂದರಲ್ಲಿ ನೇರಿಸುವದು ಆತ್ಮವನ್ನು ಆತ್ಮದಲ್ಲಿ ಬೆರೆಯಿಸುವದು ಇದರಿಂದ ಮೇಲಿಂದ ಮೇಲೆ ಅನ್ಯರ ಮನೋಗತವನ್ನು ತಿಳಿಯಬೇಕು ಗಡಿಬಿಡಿ ಮಾಡಲು ಕೊರಳಲ್ಲಿಯ ಜನಿವಾರಗಳು ತೊಡಕು ಬೀಳುವವು ಅದೇ ವ್ಯವಸ್ಥಿತವಾಗಿದ್ದರೆ ಕೊರಳಿಗೆ ಆ ಜನಿವಾರಗಳು ಸುಶೋಭಿತವಾಗುವವು ಅದರಂತೆಯೇ ವಿವೇಕದಿಂದ ಪರಾಂತರಾಳದಲ್ಲಿ ಬೆರೆತು ಹೋಗಬೇಕು ಸಮಯ ಕಳೆದರೆ ಸಂಶಯ ಹೆಚ್ಚುವದು, ಹಾಗು ಐಕ್ಯತೆಯುಂಟಾಗದು ಭಿಡೆಯಿಂದ ಕಾರ್ಯಭಾಗ ಕೆಡುವದು ಆದ್ದರಿಂದ ಅನುಮಾನದಿಂದ ವರ್ತಿಸಬಾರದು ಅನುಭವದಿಂದ ನಡೆಯಬೇಕು ಪರರ ಮನೋಭಾವ ಹಾಗು ವಿಚಾರಗಳು ತಿಳಿಯದೆ ಹೋದರೆ ಜನರು ವಶವಾಗುವದಿಲ್ಲ ವಿಚಾರ ಹಾಗು ಬುದ್ಧಿ ಕೌಶಲ್ಯತೆಗಳಿಂದ ನಡೆಯದೆ ಜನತೆಯ ಮೇಲೆ ವಶೀಕರಣ ಪ್ರಯೋಗ ಮಾಡುವವರು ತಮ್ಮ ಅಪಕ್ವ ಬುದ್ಧಿಯಿಂದಲೂ ಸಂಕುಚಿತ ಮನಸಿನಿಂದಲೂ ಕಂಡ ಕಂಡಲ್ಲಿ ಕೀಳ್ದಿಸೆ ಹೊಂದ್ಯವರು ಜಗತ್ತಿನಲ್ಲೆಲ್ಲ ಜಗದೀಶನು ವ್ಯಾಪಿಸಿ ಬಿಟ್ಟಿರುವದರಿಂದ ಎಲ್ಲಿಯೂ ಅವನರಿಯದೆ ಚಾಟಕ–ನಾಟಕಗಳು ನಡೆಯಲು ಸಾಧ್ಯವಿಲ್ಲ ವಿವೇಕ ಬಲದಿಂದ ವರ್ತಿಸುವವನೇ ಶ್ರೇಷ್ಠ ಪುರುಷನು ಮಾನವನಿಗೆ ಶ್ರೇಷ್ಠ

ತೆಯು ಕರ್ಮಗಳಿಂದ ಪ್ರಾಪ್ತವಾಗುವದು ಶ್ರೇಷ್ಠ ಕಾರ್ಯಗಳನ್ನು ಮನೋ
ಭಾವದಿಂದ ಆಚರಿಸಿದವನೇ ಶ್ರೇಷ್ಠನು ಅದರಲ್ಲಿ ತಪ್ಪಿದರೆ ಅವನೇ
ಕನಿಷ್ಠನು ಒಳಿತು-ಹೀನಗಳು ಕರ್ಮಕ್ಕನುಸರಿಸಿ ಇರುವವು ರಾಜನು
ನಿಸ್ಸಂಶಯದಿಂದ ರಾಜ ಮಾರ್ಗದಲ್ಲಿ ಸಂಚರಿಸುವನು ಅದೇ ನೀಚ ತುಡು
ಗನು ಕಳ್ಳ ದಾರಿಯನ್ನು ಹುಡುಕಿಕೊಂಡು ಕಾಲ್ದೆಗೆಯಬೇಕಾಗುವದು
ಮೂರ್ಖರು ಕೀಳತನದಿಂದ ಅಲ್ಪಸ್ವಾರ್ಥಕ್ಕಾಗಿ ಎಳಸುವರು ಆದ್ದರಿಂದಲೇ
ಅವರು ಮೋಸಕ್ಕೆ ಬಲಿ ಬೀಳುವರು ಮೂರ್ಖನು ತನಗೆ ತಾನೇ ಜಾಣ
ನೆಂದು ಹೇಳಿಕೊಳ್ಳುವನು ಇದು ಅವನ ದೀನತೆಯನ್ನೂ ಪಾಮರತೆ
ಯನ್ನೂ ವ್ಯಕ್ತಪಡಿಸುವದು ಚತುರನಾದವನೇ ಚಾತುರ್ಯದ ಲಕ್ಷಣವನ್ನು
ತಿಳಿಯುವನು ಜಗತ್ತಿನ ಅಂತರದಲ್ಲಿ ಕೂಡಿಕೊಂಡು ಹೋಗುವವನೇ
ಐಹಿಕ-ಪಾರಮಾರ್ಥಿಕಗಳನ್ನನುಭವಿಸುವನು ಬುದ್ಧಿಯು ದೈವಾಯತ್ತವು
ಬುದ್ಧಿಯಿಲ್ಲದ ಮಾನವನು ಅಪೂರ್ಣನು ಅವನು ರಾಜನಾಗಿದ್ದರೂ ತನ್ನ
ರಾಜ್ಯ ಕಳಕೊಂಡು ಕೂಡ್ರುವನು ದೇವನು ತಮ್ಮನ್ನು ಹುಟ್ಟಿಸಿದಲ್ಲಿಯೇ
ಜನರು ತಮ್ಮ ಜನ್ಮವನ್ನು ಕುರಿತು ಹೀಯಾಳಿಸದೆ ಅಭಿಮಾನವನ್ನೇ ತಾಳು
ವರು ಕೆಲವರು ತಾವು ದೊಡ್ಡ ಮನೆತನದಲ್ಲಿ ಹುಟ್ಟಿದ್ದರಿಂದ ತಾವು ದೊಡ್ಡ
ವರೆಂಬ ಅಭಿಮಾನ ತಾಳುವರು ಕೆಲವರು ನಾವೇ ಚೆಲುವರೆಂಬ ಹೆಮ್ಮೆಪಡು
ವರು, ಇನ್ನೂ ಕೆಲವರು ನಾವೇ ಭೂಮಂಡಲದಲ್ಲಿ ಚತುರರೆಂದು ಹೇಳಿ
ಕೊಳ್ಳುವರು ಈ ಎಲ್ಲ ವಿಚಾರಗಳನ್ನು ಮನಸ್ಸಿನಲ್ಲಿ ತಂದು ನೋಡಲು
ಜಗತ್ತಿನಲ್ಲಿ ಯಾರಿಗೂ ಸಣ್ಣವರೆಂದು ಅನ್ನಲಿಕ್ಕೆ ಬರಲಾರದು ಬುದ್ಧಿ
ವಂತರು ಮಾತ್ರ ಅನುಮಾನದಿಂದ ಎಲ್ಲವನ್ನೂ ತಿಳಿದುಕೊಳ್ಳುವರು
ಜನರು ಅಭಿಮಾನವರ್ತಿಗಳಾಗಿ ಅನುಮಾನವರ್ತಿಗಳಾಗಿ ಅನುಮಾನವನ್ನವ
ಲಂಬಿಸಿನಡೆಯುವರು ಆದರೆ ಜ್ಞಾನವಂತರನ್ನೂ ವಿವೇಕದಿಂದ ನೋಡಬೇಕಾ
ಗುವದು ವ್ಯರ್ಥ ಅಭಿಮಾನಗ್ರಸ್ತರಾಗುವದೂ ಸತ್ಯವಾದವುಗಳೆಲ್ಲವನ್ನು
ತ್ಯಾಗಮಾಡುವದೂ ಮೂರ್ಖತೆಯ ಲಕ್ಷಣಗಳು ನ್ಯಾಯ ಮತ್ತುಅನ್ಯಾಯ
ಗಳನ್ನು ಒಂದೇ ಅಳತೆಗೋಲಿನಿಂದ ಅಳೆಯುವದು ಸರಿಯಲ್ಲ ಯಾವಾಗಲೂ
ನ್ಯಾಯವು ಶಾಶ್ವತವಾಗಿಯೂ ಅನ್ಯಾಯವುಅಶಾಶ್ವತವಾಗಿಯೂಇರುವವು
ನಿಯಮಿತ ಹಾಗು ಅನಿಯಮಿತಗಳೆರಡೂಒಂದೇಆಗಲಾರವು. ಅರಸನುನಿರ್ಭಯ

ದಿಂದ ಸಿರಿಸಂಪತ್ತನ್ನು ಭೋಗಿಸುವನು ಆದರೆ ಕಳ್ಳನು ಬೆಳಕಿಗೆ ಹೆದರಿ ಓಡುವನು ಒಬ್ಬನ ಮಹತ್ವವು ಸುಪ್ರಸಿದ್ಧವಾದರೆ ಇನ್ನೊಬ್ಬನ ಮಹತ್ವವು ಮುಚ್ಚಿ ಹೋಗಿರುವದು ಆಚಾರ ವಿಚಾರಗಳಿಲ್ಲದೆ ಮಾಡಿದ ಕಾರ್ಯಗಳೆಲ್ಲ ಹೇಯವಾದವುಗಳು ಧೂರ್ತರೂ ಚಿಕಿತ್ಸಕ ಬುದ್ಧಿಯವರೂ ಯಾರಿರುವರೆಂಬುದನ್ನು ಶೋಧಿಸಬೇಕು ಧೂರ್ತನೆಂದರೆ ಮುಂಧೋರಣೆಯುಳ್ಳ ಚತುರ ಮಾನವನು ಎಲ್ಲವುಗಳನ್ನು ಅವನು ತಿಳಿಯುವನು ಅವನೆದುರು ಇನ್ನೊಬ್ಬರ ಆಟ ಸಾಗದು ಧೂರ್ತ ಧೂರ್ತರಲ್ಲಿ ಸ್ನೇಹಗೂಡುವದು ಅಜ್ಞನು ಕಾರ್ಯಸ್ಥಿತಿಯ ಇಂಗಿತವನ್ನರಿಯದೆ ವ್ಯರ್ಥ ಕಷ್ಟದಿಂದ ತೊಳಲಾಡುವನು ಧೂರ್ತನ ವೃತ್ತಿಯು ಬೇರೊಬ್ಬ ಧೂರ್ತನಿಗೇ ತಿಳಿಯುವದು, ಇದರಿಂದ ಅವರವರ ಮನಸ್ಸುಗಳು ಹೊಂದಿಕೆಯಾಗುವವು ಆದರೂ ಅವರು ಎಲ್ಲವನ್ನೂ ಗೌಪ್ಯವಾಗಿಯೇ ಇರಿಸಬೇಕಾಗುವದು ಮುಖ್ಯಸ್ಥನನ್ನು ವಶಪಡಿಸಿಕೊಂಡರೆ ಅವನ ಶಿಷ್ಯರು ಇಲ್ಲದೆ ಅನುಯಾಯಿಗಳು ತಮಗೆ ತಾವೇ ವಶರಾಗುವರು ಇದರಿಂದ ಸಜ್ಜನರೂ ಸಾಮಾನ್ಯ ಜನರೂ ತನ್ನವರೇ ಆಗುವರು ಪರಿಚಿತವಾದದ್ದೊಂದರಿಂದ ಇನ್ನೊಂದರ ಪರಿಚಯ ಮಾಡಿಕೊಳ್ಳಬೇಕು ತನ್ನ ಬುದ್ಧಿಯಿಂದ ಇನ್ನೊಬ್ಬನ ಬುದ್ಧಿಯನ್ನು ಎಚ್ಚರಿಸಬೇಕು ಮತ್ತು ನ್ಯಾಯ-ನೀತಿಗಳನ್ನವಲಂಬಿಸಿ ಸಮಾಜದಲ್ಲಿ ಪಾಷಂಡಿಗಳ ಪ್ರಾಬಲ್ಯವನ್ನು ವಿರೋಧಿಸಬೇಕು ಹಾಗು ಅವರ ಮಾರ್ಗವು ಮುಂದೆ ಸಾಗದಂತೆ ಪ್ರಯತ್ನಿಸಬೇಕು ತನ್ನ ವೇಷದಲ್ಲಿ ಆಡಂಬರವಿರಕೂಡದು ಹಲವು ಕಲೆಗಳಿಂದ ಅಂತ ಪೂರಿತವಾಗಿರಬೇಕು. ಎಲ್ಲ ಜನರ ಪ್ರೇಮವನ್ನು ಮುರಿದುಕೊಳ್ಳಬಾರದು ಸ್ವತ ನಿಸ್ಪೃಹನಾಗಿರಬೇಕು, ನಿರಪೇಕ್ಷಿಯಾದ ಕಾರ್ಯಕರ್ತನಾಗಿರಬೇಕು ಜನವಶಕ್ಕಾಗಿ ನಿತ್ಯನೂತನನಾಗಿ ಸಂಚರಿಸಬೇಕು. ಅನುಭವದ ಬ್ರಹ್ಮಜ್ಞಾನವನ್ನು ಪ್ರಕಟವಾಗಿ ತಿಳಿಯುವ ಸಜ್ಜನರು ಈ ಜಗತ್ತಿನಲ್ಲಿ ಅತಿ ವಿರಳರಾಗಿರುವರು ಅಂಥವರ ಬುದ್ಧಿಮತ್ತೆಯೂ ಓದು ವಾಚನಗಳೂ ಅಪಾರವಾಗಿದ್ದರೆ ಎಲ್ಲರ ಹೃದಯಗಳು ಸುಪ್ರಸನ್ನವಾಗಿ ಜನರು ಅವರ ವಶವರ್ತಿಯಾಗುವರು. ಆದರೆ ಆ ಸಜ್ಜನರು ಎಲ್ಲೆಡೆಯಲ್ಲಿ ಸತತವೂ ಸಂಚರಿಸುವವರಾಗಿರಬೇಕಾಗುವದು ಒಂದೇಸ್ಥಾನವನ್ನಾಶ್ರಯಿಸಿಕೊಂಡಿದ್ದರೆ ಮಾತ್ರ ಇದಾವ

ವ್ಯಾಪವೂ ನಡೆಯಲಾರದು ಆದ್ದರಿಂದ ಎಚ್ಚರಿಕೆಯಿಂದ ಯೋಗ್ಯರಾದ ವರಿಗೆ ಭೆಟ್ಟಿಯಾಗುತ್ತ ಸಂಚರಿಸುತ್ತಿರಬೇಕಾಗುವದು ಪುನಃ ಪುನ ಭೆಟ್ಟಿ ಯಾಗಿ ಅವರಿಂದ ಇತರರ ಪುನರ್ದರ್ಶನದ ಬಯಕೆಯನ್ನು ಸ್ಥಿರವಾಗಿ ಇರಿಸಿಕೊಳ್ಳಬೇಕಾಗುವದು ಇವೆಲ್ಲವು ಚಾತುರ್ಯದ ಲಕ್ಷಣಗಳು ಇವು ಮನುಷ್ಯಮಾತ್ರರಲ್ಲಿ ಇರಬೇಕಾದ ಮೇಲ್ತರದ ಗುಣಗಳು ಇವುಗ ಳಿಂದಲೇ ಸಮಾಧಾನ ಪಡೆಯತಕ್ಕದ್ದು"

ಶ್ರೀ ರಾಮ ॥ ೨ ನಿಸ್ಪೃಹ ವ್ಯಾಪ ಲಕ್ಷಣ ॥ ಶ್ರೀ ಗುರುಗಳು ಶಿಷ್ಯ ರನ್ನು ಉದ್ದೇಶಿಸಿ — ''ಈ ಜಗತ್ತಿನ ಮೇಲೆ ಕೋಟ್ಯವಧಿ ಮಾನವರಿರು ವರು ಎಲ್ಲರ ಮನೋವೃತ್ತಿಯು ಮೇಲಿಂದ ಮೇಲೆ ಬದಲಾಯಿಸುವದು ಮೂರ್ತಿಗಳಿದ್ದಷ್ಟು ಪ್ರಕೃತಿಗಳಿರುವವು ಮತ್ತು ಆ ಪ್ರಕೃತಿಗಳಾದರೂ ಯಾವಾಗಲೂ ಒಂದೇ ಬಗೆಯಲ್ಲಿ ಇರುವದಿಲ್ಲ ಅವೂ ಯಾವಾಗಲೂ ಪರಿವರ್ತಿಸುವವು ಅದನ್ನು ಎಷ್ಟೆಂದು ಹೇಳುವದು ? ಎಷ್ಟೋ ಜನರು ಮಹಮ್ಮದೀಯ ಧರ್ಮ ಸ್ವೀಕರಿಸಿರುವರು, ಎಷ್ಟೋ ಜನರು ಜಾತಿಯಿಂದ ಭ್ರಷ್ಟರಾಗಿ ಕ್ರೈಸ್ತರಾಗಿ ಹೋಗಿರುವರು ಅದೆಷ್ಟೋ ಜನರು ಭಿನ್ನ ಭಿನ್ನ ಭಾಷಾ ಪ್ರದೇಶಗಳಲ್ಲಿ ಹೋಗಿ ವಾಸ್ತವ್ಯ ಮಾಡಿಕೊಂಡಿರುವರು ಹೀಗಾಗಿ ಮಹಾರಾಷ್ಟ್ರ ದೇಶವಷ್ಟೇ ಮಾತ್ರ ಕಾರ್ಯ ಕೈಕೊಳ್ಳಲು ಉಳಿದಂತೆ ಕಾಣು ವದು- ಇಲ್ಲಿಯೂ ಕೂಡ ರಾಜಕಾರಣಗಳಲ್ಲಿ ಜನರ ಪ್ರವೃತ್ತಿಯಾಗಿ ಅದ ರಲ್ಲಿಯೇ ಅವರು ಸಿಕ್ಕಿಕೊಂಡಿರುವರು ಆದರೂ ಅವರ ಹಿಂದೆ ಹೆಚ್ಚೆಚ್ಚು ಕೆಲಸಗಳು ನೇರಿಕೊಂಡಿದ್ದರಿಂದ ಅವರಿಗೆ ಇತರ ಕೆಲಸಗಳಿಗಾಗಿ ಸವಡು ಇಲ್ಲದಾಗಿದೆ ಬಹುಜನರು ಯುದ್ಧ ಪ್ರಸಂಗದಲ್ಲಿ ಸೇರಿಕೊಂಡು ರಣ ವಾರ್ತೆಯ ವಿಚಾರಗಳ ಹೊರತು ಅವರಿಗೆ ಇನ್ನೊಂದು ನೆನಪಿಗೆ ಬರದಂತಾ ಗಿದೆ ವ್ಯಾಪಾರೀ ವರ್ಗದವರು ತನ್ನ ಹೊಟ್ಟೆಯನ್ನೇ ಬೆಂಬಳಿಸಿ ಸಾಗ ಹತ್ತಿರುವದು ಷಡ್‌ದರ್ಶನಗಳು, ಹಲವು ಮತ–ಸಂಪ್ರದಾಯಗಳು, ಮತ್ತು ಇವುಗಳ ಹೊರತು ಎಷ್ಟೋ ಪಾಖಂಡಿಗಳು ಇವರೇ ಭೂಮಿಯ ಮೇಲೆ ಹೆಚ್ಚಾಗಿ ಅವರು ತಮ್ಮ ತಮ್ಮ ವಿಷಯಕ ಬೋಧೆಗಳನ್ನು ನಡೆಯಿಸಿ ರುವರು ಇವನ್ನು ಉಳಿದು ಇದ್ದಬಿದ್ದ ಸ್ಮಾರ್ತ ಹಾಗು ವೈಷ್ಣವ ಪಂಥ ಗಳು ಇವುಗಳಲ್ಲಾದರೂ ಅನ್ಯೋನ್ಯ ವಿಷಮತಾಭಾವಗಳೇ ನಡೆಯ ಹತ್ತಿ

ರುವವು ಈ ಪ್ರಕಾರವಾಗಿ ಎಲ್ಲ ಕಡೆಯಲ್ಲಿಯೂ ಗೊಂದಲವೇ ಗೊಂದಲ ವೆದ್ದಿದೆ ಎಷ್ಟೋ ಕಾಮನಯುಕ್ತರು ಕೇವಲ ಸಕಾಮಯುಕ್ತವಾದ ವ್ರತಗಳನ್ನಾಚರಿಸುತ್ತಿರುವರು ಯೋಗ್ಯಾ ಯೋಗ್ಯಗಳನ್ನು ತಾರತಮ್ಯ ದೃಷ್ಟಿಯಿಂದ ಯಾರು ವಿಚಾರ ಮಾಡದಾಗಿರುವರು. ಇಂತು ನಡೆದು ಮತಾಮತಗಳ ಗೊಂದಲದಲ್ಲಿ ಇನ್ನೂ ಅದೆಷ್ಟೋ ಗೊಂದಲಗಳು ಉಂಟಾ ಗಿರುವವು ಅವುಗಳನ್ನೆದುರಿಸಲು ವೈದಿಕ ಧರ್ಮವು ನಡುಕಟ್ಟೆನಿಂತಿದೆ ಎಷ್ಟೋ ಜನರು ಹರಿಕೀರ್ತನೆ ಭಜನೆಗಳಲ್ಲಿ ಮಗ್ನರಾಗಿರುವರು ಹೀಗಾದ ಸ್ಥಿತಿಯಲ್ಲಿ ಅನುಭವದ ಬ್ರಹ್ಮಜ್ಞಾನವನ್ನು ಅದಾರು ವಿಚಾರಿಸುವರು ? ಆದುದರಿಂದಲೇ ಜ್ಞಾನವು ದುರ್ಲಭವಾಗಿ ಬಿಟ್ಟಿದೆ ಮಹತ್ಪುಣ್ಯದ ಹೊರತು ಯಾರೂ ಜ್ಞಾನವನ್ನು ನಿರೀಕ್ಷಿಸರು ವಿಚಾರ ಮಾಡುವವರಿಗೆ ಎಲ್ಲವೂ ಸುಲಭವು ಎಲ್ಲರಿಗೂ ಜ್ಞಾನದ ಸಂಬಂಧದ ವಿಚಾರವನ್ನು ಹೇಳ ಲಿಕ್ಕೆ ಬರುವಂತಿಲ್ಲ ಅದಕ್ಕೆ ಹಲವು ವಿಘ್ನಗಳು ಅಡ್ಡಬರುವವು ಉಪಾ ಯಗಳನ್ನು ಯೋಜಿಸ ಹೋಗಲು ಅವೇ ಅಪಾಯಗಳಾಗಿ ಪರಿಣಮಿಸುವವು ಇನ್ನು ಅನುಭವಿತ ಬ್ರಹ್ಮಜ್ಞಾನಿಯಾದ ವಿಚಾರವಂತನ ವರ್ತನೆಗಳನ್ನು ಕುರಿತು ಹೇಳುವೆವು

ಆ ಅನುಭವಯುತ ಬ್ರಹ್ಮಜ್ಞಾನಿಯ ಬುದ್ಧಿಯು ಬಲು ತೀಕ್ಷ್ಣಣವಾ ವಾಗಿರುವದು, ಮತ್ತು ಅವನು ವಿಚಾರವನ್ನು ಹೊರತುಪಡಿಸಿ ಒಂದು ಕ್ಷಣ ಸಹಕಾಲವನ್ನು ವ್ಯರ್ಥ ಕಳೆಯುವದಿಲ್ಲ ಧೂರ್ತತೆ, ತರ್ಕಶುದ್ಧತೆಯಂತೆ ವರ್ತಿಸುವನು ಚಿಕಿತ್ಸಕ ಬುದ್ಧಿ, ಸರ್ವಮಾನ್ಯತೆ, ಬಹುಳವಾದ ಗ್ರಂಥಾವ ಲೋಕನೆ, ಹಾಗು ಪಾರ ಪ್ರವಚನಗಳ ಆಧಿಕ್ಯತೆ ಇವೆಲ್ಲವುಗಳಿಂದ ಕೂಡಿದ ವನಾಗಿರುವನು ತನ್ನ ಪ್ರಬೋಧ ಶಕ್ತಿಯಿಂದ ಜನತೆಯನ್ನು ಅಡ್ಡದಾರಿ ಯಿಂದ ತಿರುಗಿಸಿ ಸರಳ ಮಾರ್ಗಕ್ಕೊಯ್ದು ಬಿಡುವನು ಎಲ್ಲರ ಅಂತಃಕರ ಣಗಳನ್ನು ವಶಪಡಿಸಿಕೊಂಡಿರುವನು ಪ್ರಬೋಧ ಶಕ್ತಿಯ ಹಲವು ಹಂಚಿ ಕೆಗಳು ಅವನಿಗೆ ವಿದಿತವಿರುವವು ಆದ್ದರಿಂದಲೇ ಜನತೆಯು ಆತನ ನಿರೂ ಪಣೆಯನ್ನು ಪುನಃ ಪುನಃ ಶ್ರವಣ ಮಾಡುವಲ್ಲಿ ಆತುರರಾಗುವರು, ಸ್ವಾನು ಭವದ ಮಾತುಗಳನ್ನು ಮಾತಾಡಿ ಮತ ಮತಾಂತರಗಳಲ್ಲಿಯ ವ್ಯತ್ಯಯ ವನ್ನು ನಿವಾರಿಸುವನು ಜನರನ್ನು ಅಜ್ಞಾನ ಮಾರ್ಗದಿಂದ ಬಿಡಿಸಿ ಸರಳ

ಮಾರ್ಗಕ್ಕೆ ತಂದಿಳಿಸುವನು ಪ್ರಸಂಗಾವಧಾನಿಯಾಗಿ ತನ್ನ ಮಾತುಗಳಲ್ಲಿ ನಿಯಮಿತತೆಯನ್ನು ಮರ್ಮಭೇದಕತೆಯನ್ನೂ ಇಟ್ಟು ನುಡಿಯುವನು ಈ ಪ್ರಕಾರ ತನ್ನ ವರ್ತನದಿಂದ ಜನತೆಯನ್ನು ಮುಗ್ಧಗೊಳಿಸಿ ತಾನು ನಿಸ್ಪೃಹತನದ ಆಧ್ಯತೆಯಲ್ಲಿಯೇ ಅಲ್ಲಿಂದ ಹೊರಟು ಹೋಗುವನು, ಇಂತಾತನು ಸ್ವಾನುಭವದ ಒಂದೆರಡು ನುಡಿಗಳನ್ನಾಡಿ ಅವನು ಒಮ್ಮೆಲೇ ಅಲ್ಲಿಂದ ಹೋದ ಕೂಡಲೆ ಜನತೆಗೆ ಸೊಗಸು ಇಲ್ಲದಾಗುವದು ಇಷ್ಟೇ ಅಲ್ಲ ಬಹು ಜನರು ತಮ್ಮ ಮೊದಲಿನ ಮಾರ್ಗ ಬಿಟ್ಟು ಅವನಿಗೆ ಮೊರೆ ಹೋಗುವರು ಆದೆಷ್ಟೋ ಜನರು ಅಗಲಿ ಹೋದ ಆತನನ್ನ ಹುಡುಕುವರು ಆದರೆ ಆತನು ಎಲ್ಲಿಯೂ ದೊರೆಯದಾಗುವನು ಯಾಕೆಂದರೆ ಅವನು ಒಂದೇ ಸ್ಥಳದಲ್ಲಿ ಇರಲಾರನು ಯಾವಾಗಲೂ ಅವನ ಒಂದೇ ವೇಷ ಇರುವದಿಲ್ಲ ಸಾದಾ ವೇಷಧಾರಿ ಹಾಗು ದರಿದ್ರನಂತೆ ಕಾಣುವ ಆತನಿಂದ ದೊಡ್ಡದೊಡ್ಡ ಕಾರ್ಯಗಳು ಇನ್ನೊಬ್ಬರರಿಯದಂತೆ ಪೂರ್ಣವಾಗುವವು ಇಂಥ ಪುರುಷನನ್ನು ಯಶ, ಕೀರ್ತಿ, ಪ್ರತಾಪಗಳು ತಾವೇ ಶೋಧಿಸುವವು ಪ್ರತಿಯೊಂದು ಸ್ಥಾನದಲ್ಲಿ ಜನರನ್ನು ಭಜನೆಗಾಗಿ ಅಣಿಮಾಡುವನು ಆದರೆ ತಾನು ಮಾತ್ರ ಆ ಉಪಾಧಿಯಲ್ಲಿ ತೊಡಕಿಕೊಂಡು ಬೀಳಲಾರನು ಇದರಿಂದ ಅವನು ಯಾರ ಮಾತ್ಸರ್ಯಕ್ಕೂ ಹೇವೆ ಹೆಮ್ಮೆಗಳಿಗೂ ಗುರಿಯಾಗಲಾರನು ದುರ್ಘಟವಾದ ಗಿರಿಕಂದರಗಳಲ್ಲಿ ಹೋಗಿ ವಾಸ ಮಾಡುವನು ಯಾರಿಗೂ ತನ್ನ ವಾಸ್ತವ್ಯದ ಗುರುತನ್ನು ತಿಳಿಸಲಾರನು ಹಾಗು ತಾನಿದ್ದಲ್ಲಿಯೇ ಎಲ್ಲರ ಬಗೆಗೆ ಸರ್ವಕಾಲವೂ ಕಲ್ಯಾಣಚಿಂತನೆ ಮಾಡುವನು, ಜನರು ಹೋಗಿ ಬರಲು ಕಠಿಣವಾಗಿರುವ ಸ್ಥಳದಲ್ಲಿಯೇ ಆತನು ಇರುವನು ಎಲ್ಲರಲ್ಲಿಯೂ ಇಂಥ ಸಮರ್ಥನಿಂದಲೇ ನಮ್ಮ ಉದ್ಧಾರವು' ಎಂಬ ಭಾವನೆಯು ದೃಢಗೊಳ್ಳುವಂತೆ ಅವರಿಗೆ ನಂಬುಗೆ ಹುಟ್ಟಿಸುವನು ಅದರಿಂದಲೇ ಅವರು ಆತನನ್ನು ಶೋಧಿಸುತ್ತ ಅವನಿದ್ದಲ್ಲಿಯೇ ಬರುವರು ಅವನ ಮುಂದೆ ಯಾರ ಒತ್ತಾಯವೂ ನಡೆಯದು ಅವನ ಬಗೆಗೆ ಯಾರಲ್ಲಿಯೂ ಅಣುಮಾತ್ರವಾಗಿ ಅನುಮಾನ ಹುಟ್ಟಲಾರದು ಈತನು ಎಲ್ಲರಲ್ಲಿ ಒಕ್ಕಟ್ಟನ್ನುಂಟು ಮಾಡಿ ಅವರನ್ನು ರಾಜಕಾರಣಕ್ಕೆ ಪ್ರವೃತ್ತಗೊಳಿಸುವನು ಮುಂದೆ ಅವನ ಶಿಷ್ಯಪರಂಪರೆಯು ಅವ್ಯಾಹತವಾಗಿ ಸಾಗುವದು ಮತ್ತು ಯಾರೂ ಅರಿಯ

ದಂತೆ ಆತನ ಸತ್ತ್ರಿಯು ಉತ್ತರೋತ್ತರವಾಗಿ ನಡೆಯುವದು ಪ್ರತಿಯೊಂದು ಸ್ಥಳದಲ್ಲಿ ಅವನಿಂದ ಮಂಡಲಗಳು ಸ್ಥಾಪಿತವಾಗುವವು ಹಾಗು ಹಬ್ಬುವವು ಎಲ್ಲ ಜನತೆಯೂ ಅವನ ಮಾರ್ಗಾವಲಂಬಿಯಾಗುವದು ಆತನು ಸುತ್ತಲೆಲ್ಲ ಪರಮಾರ್ಥ ಬುದ್ಧಿಯನ್ನು ವಿಸ್ತೃತಗೊಳಿಸಿ ಎಲ್ಲ ಕಡೆಯಲ್ಲಿಯೂ ಜನರಿಂದ ಉಪಾದನೆಯ ಜಯಜಯಕಾರ ಮಾಡ ಹಚ್ಚುವನು ತನ್ನ ಅನುಭವ ಜ್ಞಾನದ ಬಲದಿಂದಲೇ ಜನತೆಯನ್ನು ವಿವಿಧ ಬಂಧನಗಳಿಂದ ಮುಕ್ತನನ್ನಾಗಿ ಮಾಡುವನು ಇಂಥ ಹಲವು ಬಗೆಗಳಿಂದ ವರ್ತಿಸಿ ಅವನು ಜನರನ್ನು ಜಾಣರನ್ನಾಗಿ ಮಾಡುವನು. ಅವನಿಂದಲೇ ಪ್ರತಿಯೊಂದು ಸ್ಥಳದಲ್ಲಿ ಅನುಭವದಿಂದ ಕಾಣುವ ಮತ್ತು ವರ್ತಿಸುವ ಸಾವಿರಾರು ಜನರು ಸಿದ್ಧರಾಗುವರು

ಈ ಪ್ರಕಾರವಾಗಿ ನಡೆವ ಆತನ ವೃತ್ತಿಯನ್ನು ಆದರ್ಶವಾಗಿ ಇಟ್ಟುಕೊಂಡು ನಡೆಯಬೇಕು ಜಗತ್ತಿನಲ್ಲಿ ಮಿಗಿಲಾದ ಕೀರ್ತಿಯನ್ನು ಸಂಪಾದಿಸಿಕೊಂಡು ಹೋಗಬೇಕು ಅಂದರೇ ಜನ್ಮ ತಾಳಿದುದು ಸಾರ್ಥಕವಾಗುವದು ಈಗ ಈ ಪ್ರಕಾರವಾಗಿ ಹೇಳುವ ಪ್ರಸಂಗವೊದಗದ್ದರಿಂದಲೇ ಇದೆಲ್ಲವನ್ನು ಸಂಕ್ಷಿಪ್ತವಾಗಿ ಹೇಳುವೆವು. ಶ್ರೀ ರಘುರಾಮದಾಸನು ಸಂಕೇತವನ್ನು ಸಹಜವಾಗಿ ಹೇಳಿದಂತಾಯಿತು

ಶ್ರೀ ರಾಮ ॥ ಶ್ರೇಷ್ಠ ಅಂತರಾತ್ಮ ವಿವರಣೆ ॥ ಗುರುಗಳು ಶಿಷ್ಯನಿಗೆ:—

'' ಮೂಲ ಮಾಯೆಯಿಂದ ಐದು ತತ್ವಗಳು ಕೂಡಿಕೊಂಡು ಪಿಂಡ ಬ್ರಹ್ಮಾಂಡಾತ್ಮಕ ವಿವಿಧ ವ್ಯಾಪಕತೆಯು ಅಸ್ತವ್ಯಸ್ತವಾಗಿ ಹಬ್ಬಿತು ಅದರಲ್ಲಿ ಓತಪ್ರೋತವಾಗಿ ತುಂಬಿದ ಸಾಕ್ಷಿತ್ವದ ಪಾಶವಾದರೂ ತತ್ವರೂಪವಾಗಿಯೇ ಇವೆ ಎರಡು ಬದಿಯಲ್ಲಿ ಸಾಲಾಗಿನಿಂತ ಸುಸಜ್ಜಿತ ಸೈನ್ಯವನ್ನು ನಡುವೆ ಸಿಂಹಾಸನಾರೂಢನಾಗಿ ಕುಳಿತ ರಾಜನನ್ನು ಧ್ಯಾನದಲ್ಲಿ ತಂದುಕೊಂಡರೆ ಇದೆಲ್ಲ ತಿಳಿಯುವದು, ಇಡೀ ಶರೀರವೆಲ್ಲ ಅಸ್ಥಿಮಾಂಸಗಳಿಂದ ಸಿದ್ಧವಾಗಿದೆ ಆ ಶರೀರದಂತೆಯೇ ರಾಜನ ಶರೀರವೂ ಇರುವದು ಅದರಂತೆ ಭೂತ ಭೌತಿಕ ಸೃಷ್ಟಿಯೂ, ಅದರ ಸಾಕ್ಷಿತ್ವವೆಂದೆಣಿಸಿದ ಅಂತರಾತ್ಮನೂ ಇವೆರಡೂ ತತ್ವ ರೂಪಗಳಾಗಿವೆ ರಾಜನ

ಸತ್ತೆಗನುಸರಿಸಿ ಸೈನ್ಯದ ಚಲ ವಿಚಲತೆ ಸಾಗುವದು ಅದರಂತೆ ಅಂತ ರಾತ್ಮನ ಸತ್ತೆಯಿಂದ ಸೃಷ್ಟಿ ನಡೆಯುವದು ಆದರೆ ಇವೆಲ್ಲವೂ ತತ್ವ ದಲ್ಲಿಯವೇ ಆಗಿರುವವು ಇವುಗಳಲ್ಲಿ ಅಂತರಾತ್ಮನ ಅರಿವು ಮಾತ್ರ ಭೇದ ವಾಗಿ ತೋರುವದು ವಿವೇಕದಿಂದ ಅರಿವು ದೊಡ್ಡದೆನ್ನಿಸಿತೆಂದರೆ ದೊಡ್ಡ ವರಿಗೆ ಅವತಾರಿಗಳೆಂದೆನ್ನುವರು ಮನು ಮೊದಲಾದ ಚಕ್ರವರ್ತಿಗಳು ಇದ ರಿಂದಲೇ ಶ್ರೇಷ್ಠವೆಂದೆನ್ನಿಸಿಕೊಂಡರು ಅರಿವು ಹೆಚ್ಚಾಗಿ ಇರುವವನೇ ಭಾಗ್ಯ ವಂತನು ಕಡಿಮೆಯಾಗಿರುವವನೇ ದೀನ ದರಿದ್ರನು ಬಹಳ ಶ್ರಮ ಸಾಹಸ ಗಳನ್ನು ಮಾಡುವವರೂ ಕಷ್ಟ— ನಷ್ಟಗಳನ್ನು ಸೋಸುವವರೂ ಇಂಥ ವರೇ ಭಾಗ್ಯವಂತರಾಗುವರೆಂಬುದನ್ನು ನಾವು ನೋಡುವೆವು ಇದು ಮಂದ ಮತಿಗಳಿಗೆ ತಿಳಿಯಲಾರದು ವಿವೇಕಿಗಳಿಗೆಮಾತ್ರಗೊತ್ತು ಅರಿವು ಬುದ್ಧಿಗಳ ಪ್ರಮಾಣಕ್ಕನುಸರಿಸಿ ಸಣ್ಣವರು, ದೊಡ್ಡವರು ಎಂಬ ಭೇದ ಗಳುಂಟಾಗುವವು ಮೊದಲು ಹುಟ್ಟಿದವನು ಹಿಂದುಗಡೆ ಹುಟ್ಟಿದವ ನಿಗಿಂತಲೂ ಹಿರಿಯನೆಂದು ಹೇಳುವ ಲೌಕಿಕ ಪದ್ಧತಿಯುಂಟು ರಾಜನು ಚಿಕ್ಕ ಬಾಲಕನಿದ್ದರೂ ಮುಪ್ಪಿನವರೂ ಕೂಡ ಆತನಿಗೆ ಮಣಿದು ವಂದನೆ ಮಾಡಬೇಕಾಗುವದು ವಿವೇಕದ ಸಂಗತಿಯು ತಿಳಿಯಲಿಕ್ಕೆ ಬೇಕು ಸಾಮಾನ್ಯರ ಜ್ಞಾನವೆಲ್ಲ ಅನುಮಾನಯುಕ್ತವು ಲೋಕ ರೂಢಿ ಸಾಂಪ್ರ ದಾಯಗಳು ಅಂದರೆ ದಂಡಕ—ದೀಕ್ಷೆಗಳು ಇದೇ ಪ್ರಕಾರದವಾಗಿರುವವು. ವಯೋವೃದ್ಧನಾಗಿ ಶ್ರೇಷ್ಠನಾಗಿದ್ದವನಿಗೆ ಸಾಮಾನ್ಯರ ತಿಳಿವಳಿಕೆಯಂತೆ ಏನೆಂದೆನ್ನಬೇಕು? ಯಾರ ಬಾಯಿಯನ್ನು ಹಿಡಿಯಬೇಕು? ಚಿಕ್ಕ ವಯ ಸ್ಕನಾಗಿದ್ದವನೊಬ್ಬನು ಬಹು ಭಾಗ್ಯವಂತನಾಗಿದ್ದರೆ ಅವನ ಅತ್ಯಂತ ಪರಿಚಿತರು ಆತನನ್ನು ಹೇಯವಾಗಿ ತಿಳಿಯುವದುಂಟು ಕಾರಣ ಅಂಥ ಸಲಗಿಯ ನಡವಳಿಕೆಯಿಂದ ದೂರವಾಗಿಯೇ ಇರಬೇಕು ವ್ಯವಸ್ಥಿತ ಬಗೆಯಲ್ಲಿಯೂ, ರೀವು ಹಾಗು ವಚನ ಪರಿ ಪಾಲನೆಯಲ್ಲಿಯೂ, ಇಲ್ಲವೆ ರಾಜಕಾರಣದಲ್ಲಿಯೂ ಏನೊಂದನ್ನರಿಯದ ಎಷ್ಟೋ ಜನರು ಮೂರ್ಖತೆಯಿಂದ ತಮ್ಮನ್ನು ತಾವೇ ದೊಡ್ಡವರೆಂದು ಹೇಳಿ ಕೊಳ್ಳುವರು ಆದರೆ ಅವರು ಮೊದಲು ಜನ್ಮತಾಳಿದ ಮಾತ್ರದಿಂದ

ಅವರಿಗೆ ದೊಡ್ಡಿಸ್ತಿಕೆಯನ್ನು ನೀಡಲು ಅದಾರು ಕುಳಿತಿರುವರು? ‘ ಹಿರಿಯರ ಹಿರಿ ‘ನವುಳಿದಿಲ್ಲ ಚಿಕ್ಕವರು ಸಣ್ಣವರಾಗಿವರ್ತಿಸುವದಿಲ್ಲ ’ ಹೀಗೆ ವೃದ್ಧನಾದವನೊಬ್ಬನು ನುಡಿದರೆ ಬುದ್ಧಿವಂತರಾದ ಚಿಕ್ಕವರ ಅವಮಾನ ಮಾಡಿದಂತೆ ಹಾಗು ಈ ಪ್ರಕಾರ ನುಡಿಯುವ ವೃದ್ಧನಿಗೆ ಬುದ್ಧಿಯೇ ಇಲ್ಲ ಎಂದು ನಮ್ಮ ಅಭಿಪ್ರಾಯವು ಗುಣ ರಹಿತವಾದ ಹಿರಿತನವನ್ನು ಯಾರೂ ಒಪ್ಪರು ಆದರೂ ಚಿಕ್ಕವರಾದವರು ಹಿರಿಯರನ್ನು ಮರ್ಯಾದಿಸತಕ್ಕದ್ದು, ಮತ್ತು ವೃದ್ಧ ಹಿರಿಯರು ನಿಜವಾದ ಹಿರಿತನವು ವಯೋಮಾನದಲ್ಲಿ ಇರದೆ ಜ್ಞಾನದಲ್ಲಿ ಇರುವದೆಂದು ತಿಳಿದುಕೊಂಡು ಅದರಂತೆ ಜ್ಞಾನ ಮಾರ್ಗದಲ್ಲಿ ವ್ಯವಹರಿಸಬೇಕು ಇಲ್ಲವಾದರೆ ಅವಗು ಮುಪ್ಪಿನ ಕಾಲದಲ್ಲಿ ದುಃಖವನ್ನು ಭೋಗಿಸಬೇಕಾಗುವದು ಎಲ್ಲರಲ್ಲಿಯೂ ಇರುವ ಹಿರಿಯನೆಂದರೆ ಅಂತರಾತ್ಮನು ಅವನು ಪ್ರಕಟವಾದಲ್ಲಿಯೇ ದೊಡ್ಡಿಸ್ತಿಕೆಯಿರುವದು ಈ ಮಾತು ಸ್ಪಷ್ಟವಿರುವದರಿಂದ ನಾವು ಆಡಿದ ನುಡಿಗಳಿಂದ ನಮಗೆ ದೋಷ ಬರಲಾರದು ಆದ್ದರಿಂದ ಪ್ರತಿಯೊಬ್ಬರು ವಿವೇಕತನದಿಂದ ಬುದ್ಧಿಯನ್ನು ಕಲಿಯತಕ್ಕದ್ದು ಇಲ್ಲದೆ ಹೋದರೆ ಮಹತ್ವವುಳಿಯದು

ಇಂತು ಮಹತ್ವ ದೂರಾದರೆ ಜನ್ಮತಾಳಿ ಬಂದುದು ನಿರರ್ಥಕವಾಗುವದು ಒತ್ತಾಯದಿಂದ ನಮ್ಮನ್ನು ಒಂದು ಮೂಲೆಯಲ್ಲಿ ಬಂಧಿಸುವದು ಜಾಣತನವಲ್ಲ ಹೀಗೆ ವರ್ತಿಸಿದರೆ ಹೆಂಗಸರೆಲ್ಲರೂ ಕೂಡ ಅವನಿಗೆ ಮೂರ್ಖನೆನ್ನುವರು ಆದ್ದರಿಂದ ಈ ಪ್ರಕಾರ ಮಾಡದೆ ಬುದ್ಧಿವಂತರಾಗಬೇಕು ಅದೇ ಮುಖ್ಯವು ಹಾಗು ಅದೇ ಸಾರ್ಥಕವು ಇದು ಒಳಿತಾಗಿ ತಿಳಿಯದಿದ್ದಲ್ಲಿ ಗ್ರಂಥಗಳನ್ನಾದರೂ ಓದಿ ನೋಡಬೇಕು ವಿದ್ಯಾ ಬುದ್ಧಿಯುತನಿಗ ಜನತೆಯು ಮಾನ ಮರ್ಯಾದೆ ನೀಡುವದು ಮೂರ್ಖನನ್ನು ಹೊರ ನೂಕುವರು ಐಶ್ವರ್ಯ ಬಯಸುವವನು ವಿದ್ಯಾ ಬುದ್ಧಿಗಳನ್ನು ಕಲಿಯಬೇಕು! ಶಿಕ್ಷಣ ಪಡೆಯುವಲ್ಲಿ ಹಲವು ಕಷ್ಟ ತಾಪಗಳೊದಗಿದರೂ ಲೆಕ್ಕಿಸದೆ ವಿದ್ಯ ಸಂಪಾದಿಸಬೇಕು ಇದೇ ಅತ್ಯುತ್ತಮವು ಬಹು ಜನರ ಮರ್ಯಾದೆಗೆ ತಕ್ಕವನೇ ಬುದ್ಧಿವಂತನು ಅವನಿಗೆ ಜಗತ್ತಿನಲ್ಲಿ ಏನೊಂದು ಕೊರತೆಯಾಗದು ಸಂಸಾರದಲ್ಲಿದ್ದುಕೊಂಡು ತನ್ನ ಹಿತವನ್ನು ಸಾಧಿಸ್ಕಿ

ಕೊಳ್ಳದವನು ಆತ್ಮ ಘಾತಕಿಯೆನ್ನಿಸುವನು ಹಾಗು ಅವನೇ ಪಾಪಿಯು ಸಂಸಾರ ಕಷ್ಟಗಳನ್ನು ತಾನೇ ಅನುಭವಿಸಬೇಕು ಜನರ ಕೋಪಕ್ಕೆ ಗುರಿಯಾಗಬಾರದು ಹಾಗೆ ನಡೆಯುವನೇ ಜಾಣನು" ಈ ಪ್ರಕಾರ ಸಾಧಕರಾದವರಿಗೆ ನಮ್ಮ ಬೋಧೆಯಿದೆ ಆವಶ್ಯಕರು ಸ್ವೀಕರಿಸಬಹುದು ಇಲ್ಲವೆ ನಿರಾಕರಿಸಬಹುದು ಇದರಿಂದ ನಮ್ಮ ಹಾನಿಯಿಲ್ಲ ಶ್ರೋತೃಗಳಾದ ನೀವು ಚತುರರು ಅಲಕ್ಷ್ಯ ವಸ್ತು ಪರಮಾತ್ಮನಲ್ಲಿ ಬಯಕೆಯುಳ್ಳವರಿರುವಿರಿ ಇಲ್ಲಿ ಹೇಳಿದ ಸಾಮಾನ್ಯ ಸಂಗತಿಗಳೆಲ್ಲ ನಿಮಗೆ ಪ್ರತ್ಯಕ್ಷವಿರುವವು

ಶ್ರೀ ರಾಮ || ೪ಶಾಶ್ವತ ಬ್ರಹ್ಮ ನಿರೂಪಣೆ ||ಗುರುಗಳು ಶಿಷ್ಯನಿಗೆ—

" ಪೃಥ್ವಿಯಿಂದ ಗಿಡ-ಮರಗಳು ಉತ್ಪನ್ನವಾಗುವವು, ಅವುಗಳಿಂದ ಕಟ್ಟಿಗೆಯು, ಕಟ್ಟಿಗೆ ಸುಟ್ಟು ಭಸ್ಮವು ಮುಂದೆ ಪೃಥ್ವಿಯೇ ಉಂಟಾಗವದು ಪೃಥ್ವಿಯಿಂದಲೇ ಬಳ್ಳಿಗಳು ಹುಟ್ಟಿ ಬೆಳೆದು ಹಬ್ಬುವವು ಮತ್ತು ಅವು ಒಣಗಿ, ಕೊಳೆತು ಪುನ ಪೃಥ್ವಿಯೇ ಆಗುವದು ಹಲವು ಧಾನ್ಯಗಳು ಆಹಾರ ಪದಾರ್ಥಗಳು ಪೃಥ್ವಿಯಿಂದಲೇ ಮನುಷ್ಯರು ತಿನ್ನುವದಕ್ಕೆ ಬೆಳೆಯುವವು ಮನುಷ್ಯ ಪ್ರಾಣಿಗಳ ಹೇಸಿಕೆ ಕಾರಿಕೆ ಮೊದಲಾದವುಗಳಲ್ಲಿ ಆ ಧಾನ್ಯಾದಿಗಳು ರೂಪಾಂತರಿಸಿ ಪುನ ಪೃಥ್ವಿಯಾಗುವದು ಪಶು ಪಕ್ಷ್ಯಾದಿಗಳ ಆಹಾರದ ಗತಿಯೂ ಹೀಗೇ ಆಗುವದು ಮಾನವನು ಮೃತನಾದ ಮೇಲೆ ಅವ ಶವದಿಂದ ಉಂಟಾಗುವ ಕ್ರಿಮಿಗಳು, ಮಣ್ಣು—ಬೂದಿಗಳು ಸಹ ಇದೇ ಸ್ವರೂಪ ಹೊಂದುವವು ನಾಲ್ಕೂ ಪ್ರಾಣಿ ಕೋಟಿಗಳಲ್ಲಿಯ ಅನಂತ ಪ್ರಾಣಿಗಳ ಶರೀರಗಳು ಕೊನೆಗೆ ಹೀಗೆಯೇ ಪೃಥ್ವೀತ್ವದ ರೂಪಕ್ಕೆ ಪುನಃ ಬರುವವು ಪೃಥ್ವಿಯ ಹೊರತು ಇನ್ನೊಂದು ಆಧಾರವೇ ಇಲ್ಲ ಹುಲ್ಲಿನ ಪದಾರ್ಥಗಳ ಕೊಳೆಯುವಿಕೆ, ಕ್ರಿಮಿ ಮೊದಲಾದವುಗಳ ನಾಶವಾಗುವಿಕೆ ಇವೆಲ್ಲವೂ ಪೃಥ್ವಿಯನ್ನು ಹೊರತುಪಡಿಸಿ ಉಂಟಾಗುವದಿಲ್ಲ ಗಿಡ-ಮರಗಳ ಎಲೆಗಳು, ಹುಲ್ಲು, ದನಗಳ ಸೆಗಣಿಯು, ಮೂತ್ರ ಮುಂತಾದದೆಲ್ಲವು ಪೃಥ್ವೀತ್ವಕ್ಕೆ ಬರುವವು ಸೃಷ್ಟಿ—ಸ್ಥಿತಿ—ಲಯ ಈ ಮೂರೂ ಅವಸ್ಥಾನ್ವಿತಗಳೆಲ್ಲವು ಪುನ ಪೃಥ್ವಿಗೇ ಸಮಾವೇಶವಾಗುವವು ಲಕ್ಷಗಟ್ಲೆ ವನಸ್ಪತಿಗಳ ಬೀಜ

ಗಳು ಅಂಕುರಿಸುವವು, ಬೆಳೆಯುವವು ಎಷ್ಟೋ ಮರಗಳು ಬೆಳೆಯುತ್ತ ಬೆಳೆಯುತ್ತ ಮುಗಿಲನ್ನು ಮುಟ್ಟುವಷ್ಟು ಉನ್ನತವಾಗುವವು ಆದರೆ ಕೊನೆಗೆ ಅವೆಲ್ಲವು ಪೃಥ್ವಿಗೇ ಬಂದು ಬೀಳುವವು ಹಲವು ಧಾತುಗಳು, ಬಂಗಾರ, ಶಿಲೆಗಳು ಇವುಗಳೂ ಕಡೆಗೆ ಪೃಥ್ವಿಯುವೇ ಆಗಿ ಬಿಡುವವು ಮಣ್ಣಿನಿಂದಲೇ ಬಂಗಾರ, ಕಲ್ಲು ಮುಂತಾದವುಗಳಾಗಿ ಅಗ್ನಿಯ ಸಂಯೋಗದಿಂದ ಅವುಗಳ ಗತಿಯಾದರೂ ಹಾಗೇ ಆಗುವದು ಭಂಗಾರವೂ ರೂಪಾಂತರಿಸುವದು ಪೃಥ್ವಿಯಿಂದ ಉಂಟಾಗುವ ಹಲವು ಧಾತುಗಳು ಅಗ್ನಿ ಸಂಗದಿಂದ ರಸ, ರೂಪ ಹೊಂದುವವು 'ಬಳಿಕ ಆ ರಸವು ಕಾರಿಣ್ಯತೆಗೆ ಬಂದು ಪುನ ಪೃಥ್ವಿಯೇ ಆಗುವದು ನೀರಿನ ಗಂಧ (ವಾಸನೆ)ವು ಪೃಥ್ವಿಯ ರೂಪವೇ ಆಗಿರುವದು ನೀರು ಆಟ್ಟಿಸಿ ಪೃಥ್ವಿಯಾಗುವದು ಜೀವಿಗಳು ಎಲೆ ಹೂ ಹಣ್ಣು ಕಾಯಿಗಳನ್ನು ತಿನ್ನುವವು ಈ ಕ್ರಿಯೆಯು ಜೀವವಿರುವವರೆಗೆ ಮಾತ್ರ ನಡೆಯುವದು ಜೀವನು ಹೋದ ಕೂಡಲೆ ಅವು ಪೃಥ್ವಿ ರೂಪವನ್ನೇ ಹೊಂದುವವು ಪ್ರಾಣಿಗಳ ಆಕಾರಗಳಲ್ಲೆಷ್ಟು ವಿವಿಧವಿದ್ದರೂ ಎಲ್ಲವುಗಳ ಕೊನೆಯ ಪರಿಣಾಮವು ಪೃಥ್ವಿಯೇ ಆಗುವದು ಈ ಬಗೆಗೆ ಎಷ್ಟು ಹೇಳಿದರೂ ಕಡಿಮೆಯೇ ಸರಿ ಇದೇ ಸೃಷ್ಟಿ—ಲಯಗಳ ಬೀಜವಾಗಿರುವದು ಜಲವು ಆಟ್ಟಿಸಿ ಪೃಥ್ವಿಯಾಗುವದು, ಆ ಪೃಥ್ವಿಯು ಪುನಃ ಜಲದಲ್ಲಿಯೇ ಕರಗಿ ಹೋಗುವದು ನೀರು ತೇಜದಿಂದ ಉಂಟಾಗಿ ಕೊನೆಗೆ ತೇಜವೇ ಆ ಜಲವನ್ನು ಶೋಷಿಸಿ ಕೊಳ್ಳುವದು ಆ ತೇಜವು ವಾಯುವಿನಿಂದ ಉಂಟಾಗುವದು ಕೊನೆಗೆ ಆ ವಾಯುವೇ ಆ ತೇಜವನ್ನು ಅಡಗಿಸಿಕೊಳ್ಳುವದು ವಾಯುವು ಆಕಾಶದ ಹೊಟ್ಟೆಯಿಂದ ನಿರ್ಮಾಣವಾಗಿ ಕೊನೆಗೆ ಆಕಾಶದಲ್ಲಿಯೇ ಲೀನವಾಗುವದು ಇದೇ ಸೃಷ್ಟಿ-ಲಯವೆನ್ನಿಸುವದು ಹುಟ್ಟಿದ್ದೆಲ್ಲವೂ ಅಲ್ಲಿಯೇ ಲಯವಾಗುವದು ಈ ಪ್ರಕಾರವಾಗಿ ಪಂಚ ಭೂತಗಳ ನಾಶವಾಗುವದು 'ಭೂತ' ಶಬ್ದದ ಅರ್ಥವು ನಿರ್ಮಾಣವಾದದ್ದು ಎಂದಿದೆ ಉತ್ಪತ್ತಿಯಿದ್ದಲ್ಲಿಯೇ ನಾಶವಿರುವದು ಇವುಗಳಿಂದ ಹೊರತಾದದ್ದು ಎಂದರೆ 'ಉತ್ಪತ್ತಿ ನಾಶ' ರಹಿತವಾದದ್ದು ಅರ್ಥಾತ್ ಶಾಶ್ವತವಾದದ್ದು ಈ ಶಾಶ್ವತವೇ ಪರ ಬ್ರಹ್ಮನು ಆ ಪರ ಬ್ರಹ್ಮನ ಅರಿಕೆಯಾಗುವ ವರೆಗೆ

ಜನನ ಮರಣಗಳು ತಪ್ಪಲಾರವು ಎಲ್ಲ ಪ್ರಾಣಿ ಕೋಟಿಗಳಿಗೆ ಆಗು ಹೋಗುಗಳು ಇದ್ದೇ ಇರುವವು ಜಡತ್ವದ ಮೂಲವು ಚಂಚಲವು, ಚಂಚಲದ ಮೂಲವು ನಿಶ್ಚಲವು ಆ ನಿಶ್ಚಲ ಬ್ರಹ್ಮನಿಗೆ ಮಾತ್ರ ಮೂಲ ವಿರುವದಿಲ್ಲ 'ಜಗತ್ತು ಸತ್ಯ'ವೆಂದು ಪೂರ್ವ ಪಕ್ಷ ಗೃಹೀತ ಮಾಡಿದರೆ 'ಜಗನ್ಮಿಥ್ಯೆ' ಎಂಬದು ಸಿದ್ಧಾಂತವಾಗುವದು. ಈ ಪೂರ್ವ ಪಕ್ಷ ಹಾಗೂ ಸಿದ್ಧಾಂತಗಳನ್ನು ಮೀರಿ ಪರ ಬ್ರಹ್ಮನಿರುವನು. ಇದನ್ನು ಅನುಭವದಿಂದ ಕಾಣಬೇಕು

ವಿಚಾರದಿಂದ ಗುರುತಿಸಿಕೊಳ್ಳಬೇಕು ವಿಚಾರವಿಲ್ಲದೆ ಕಾಣದಿರು ವದೇ ಮೂರ್ಖತನವು ಜಡ ಚಂಚಲತೆಯು ಅಂದರೆ ಮಾಯೆಯ ದಾಕ್ಷಿಣ್ಯಕ್ಕೊಳಗಾದವನು ಜ್ಞಾನಿಯಾಗಿದ್ದರೂ ಅವನಿಗೆ ನಿಶ್ಚಲ ಪದ ಪ್ರಾಪ್ತವಾಗಲಾರದು ಆ ಬಳಿಕ ಆತನು ಮಾಯೆಯಲ್ಲಿ ಮನಬಂದಂತೆ ಬಡಬಡಿಸಿದರೂ ವ್ಯರ್ಥವೇ ಸರಿ ಮಾಯೆಯು ಸಂಪೂರ್ಣ ನಾಶತೆಯುಂಟಾ ಗಲು ಮುಂದೆ ಉಂಟಾಗುವ ಸ್ಥಿತಿಯನ್ನು ಚಿಕಿತ್ಸಕರು ವಿಚಾರ ಮಾಡ ಬೇಕು ಅಂದರೆ ಮಾಯೆಯ ನಿಶ್ಶೇಷವಾಗುವದೇ ನಿಜವಾದ ಆತ್ಮ ನಿವೇದನೆಯು ಹೀಗೆ ಆತ್ಮ ನಿವೇದನವಾದನಂತರ ವಾಚ್ಯಾರ್ಥವು ಉಳಿ ಯುವದಿಲ್ಲ ಅಂದಮೇಲೆ ವಿಜ್ಞಾನವೆಂದರೆ ಸ್ವ ಸ್ವರೂಪ ಸ್ಥಿತಿಯನ್ನು ಹೇಗೆ ತಿಳಿದುಕೊಳ್ಳುವದು? ಜನರ ಮಟ್ಟಿಗೆ ಬಿದ್ದವನು ಅನುಮಾನದಲ್ಲಿ ಮುಳುಗುವನು ಆದ್ದರಿಂದ ವಿಚಾರವನ್ನು ಮಾಡ ಮಾಡುತ್ತ ಸ್ವಾನುಭ ವವನ್ನು ಕಾಣತಕ್ಕದ್ದು"

ಶ್ರೀ ರಾಮ ॥ ೫ ಚಂಚಲ ಲಕ್ಷಣ ನಿರೂಪಣೆ ॥ ಗುರುಗಳು ಶಿಷ್ಯನಿಗೆ "ಪ್ರಕೃತಿ ಪುರುಷರಿವರೀರ್ವರಂತೆ ತ್ರಿಗುಣಾನ್ವಿತ ತ್ರಿಮೂರ್ತಿಗಳು ವರ್ತಿಸು ವರು ಅಗುಣನಲ್ಲಿ ಅಷ್ಟಧಾಪ್ರಕೃತಿಯು ಸಮರಸವಾಗಿ ಅಂತರಿಕ್ಷದಲ್ಲಿಯ ಮೋಡದಂತಿರುವದು ವಾಯುವು ಪೃಥ್ವಿಯನ್ನು ವಿಲೀನ ಮಾಡಿಕೊಳ್ಳು ವದು, ವಾಯು, ತೇಜ, ಜಲ, ಪೃಥ್ವಿ ಈ ನಾಲ್ಕು ತತ್ವಗಳು ಕ್ರಮವಾಗಿ ಪೃಥ್ವಿಯಿಂದಾಗಿ ಒಂದೊಂದರಲ್ಲಿ ಲೀನತೆ ಹೊಂದುತ್ತ ಕೊನೆಗೆ ಎಲ್ಲವೂ ಮಾಯ ಹೊಂದಿ ವಾಯುವಿನಲ್ಲಿಯೇ ಲೀನವಾಗುವವು, ಪುನಃ ವಾಯುವಿನಿಂದ ತೇಜ, ಜಲ, ಈ ಕ್ರಮದಿಂದ ಬಂದು ಕೊನೆಗೆ

ಪೃಥ್ವಿಯು ಉತ್ಪನ್ನವಾಗುವದು ತಾತ್ಪರ್ಯವೆಂದರೆ ಮುತ್ತಜ್ಜನಿಂದ ವಂಶ ನಡೆದಂತೆ ವಾಯುವಿನಿಂದ ಪೃಥ್ವಿಯ ವರೆಗಿನ ನಾಲ್ಕೂ ಭೂತಗಳೂ ಒಂದೊಂದರಿಂದ ಉತ್ಪನ್ನವಾಗುವವು ಮತ್ತು ಮಗನು ತಂದೆಯನ್ನು ಹೊಡೆವಂತೆ ಒಂದೊಂದರಲ್ಲಿ ವಿರುದ್ಧ ಕ್ರಮದಿಂದ ಲೀನವಾಗುವವು ಅಂತ ರಿಕ್ಷದಲ್ಲಿಯ ಮೋಡಗಳ ಲಯ ಸಂಚಯಗಳಂತೆ ಈ ಕ್ರಮವು ನಿತ್ಯವೂ ನಡೆ ದಿರುವದು ಈ ನಾಲ್ಕೂ ತತ್ವಗಳಿಗೆ ಆಕಾಶತತ್ವವು ರಾಜನಂತಿದ್ದು ಅವು ಆ ರಾಜನಿಂದ ತಪ್ಪಿಸಿಕೊಳ್ಳುವವು ದೇವಗಾರದಲ್ಲಿ ದೇವನು ಅಡಗಿರುವಾಗ ದೇವಾಲಯವನ್ನೇ ಪೂಜಿಸುವದರಿಂದ ಆ ದೇವನು ಪ್ರಸನ್ನನಾಗುವನೆಂಬ ತಿಳುವಳಿಕೆಯಂತೆಯೇ ಸೃಷ್ಟಿಯ ಬಗ್ಗೆ ತಿಳುವಳಿಕೆಯಿದೆ, ಪ್ರಕೃತಿ-ಪುರುಷ ಶಿವ-ಶಕ್ತಿ ಇತ್ಯಾದಿ ಹೀಗೆ ಎರಡೆರಡು ಹೆಸರುಗಳಿಂದು ಕಲ್ಪಿಸಿದರೂವಿವೇಕಾ ನುಭವದಿಂದ ಎರಡೂ ಹೆಸರುಗಳು ಒಂದೇ ದೇವನಿಂದ ಮೂಡಿದ ಕುಸುಮ ದಂತಿರುವವೆಂಬದು ತಿಳಿಯುವದು ದೇವನು ಪುರುಷನಲ್ಲ ಸ್ತ್ರೀಯಲ್ಲ ಸ್ತ್ರೀ ಅಥವಾ ಪುರುಷನೆಂಬುವದು ಕೇವಲ ಲೋಕ ಕಲ್ಪನೆ ವಿಚಾರದಿಂದ ಶೋಧಿಸಲು ಯಾವದೂ ಅಲ್ಲ ನದಿಯು ಸ್ತ್ರೀಯೆಂದೂ ಕಂಪರವು ಪುರುಷ ನೆಂದೂ ಹೇಳುವರು ವಿಚಾರದಿಂದ ನೋಡಲು ಅವಕ್ಕೆ ಶರೀರಗಳೇ ಇಲ್ಲ ನಮ್ಮದು ನಮಗೆ ತಿಳಿಯುವದಿಲ್ಲ ಇನ್ನೊಂದನ್ನು ನೋಡಲು ಏನೂ ತಿಳಿ ಯುವದಿಲ್ಲ ಅನೇಕ ವಸ್ತುಗಳಲ್ಲಿ ಒಂದಕ್ಕೊಂದು ಹೊಂದಿಕೆಯಿಲ್ಲ ಒಂದಕ್ಕೆ ಹಲವು, ಹಲವಕ್ಕೆ ಒಂದು ಉಂಟಾದರೆ ನಮ್ಮಲ್ಲಿ ನಮಗೇ ಗೊಂದ ಲಬೀಳುವದು ಅದು ಸಹಿಸಲಿಕ್ಕಾಗುವದಿಲ್ಲ ಅಖಂಡದಲ್ಲಿ ಭಿನ್ನದೆಯೂ ಭಿನ್ನತೆಯಲ್ಲಿ ಅಖಂಡತ್ವವೂ ತೋರುವದು ಇಂತು ಇವೆಲ್ಲವೂ ಪ್ರಾಣಿಗ ಳಲ್ಲಿ ತೋರುವ ವಿಚಿತ್ರತೆಗಳು ಇನ್ನು – ಇನ್ನು ಬಳ್ಳಿಯಲ್ಲಿ ನೀರು ಹರಿ ದಾಡುತ್ತಿರುವದು ಆದರೆ ಆ ನೀರು ನಿರಾದ್ರ್ರವಾಗಿದ್ದದರಿಂದ ಕಾಣಿಸುವ ದಿಲ್ಲ ಆದರೂ ನೀರು ಇದ್ದೇ ಇರುವದು ಇದಕ್ಕೆ ನಂಶಯವಿಲ್ಲ ಯಾಕಂದರೆ ನೀರಿಲ್ಲದಿದ್ದರೆ ಆ ಬಳ್ಳಿಯು ಮಲಿಮಲಿಸುತ್ತಿದ್ದಿಲ್ಲ ಗಿಡಕ್ಕೆ ನೀರುಣ್ಣಿಸುವ ಕುರಿತು ಅದರ ಬೊಡ್ಡೆಯ ಸುತ್ತಲೂ ನೀರಿನ ದೊಡ್ಡ ಕಟ್ಟೆ ಯನ್ನು ಕಟ್ಟಿ ನೀರು ಹಾಕಲು ಒಳಿಹಸಿಯಿಂದ ಗಿಡವು ಬೆಳೆದು ಉನ್ನತವಾ ಗುತ್ತದೆ ಮುಗಿಲಿಗೆ ಮುದ್ದಿಡುವಂತಾಗುತ್ತದೆ. ಹೀಗೆ ಅದಕ್ಕೆ ನೀರೇ

ಆಧಾರವು ನೀರೆಂದರೆ ಅದಕ್ಕೆ ಜೀವನವು ಮನುಷ್ಯ-ಪಶು-ಪಕ್ಷಿಗಳನ್ನೂ ಕೂಡ ಗಿಡಕ್ಕೆ ಹೋಲಿಸಬಹುದು ಗಿಡಕ್ಕೆ ನೀರು ಜೀವನವಿದ್ದಂತೆ ಪ್ರಾಣಿ ಗಳಿಗೆ ಅಂತರಾತ್ಮನು ಜೀವನವು ಎಷ್ಟೋ ಗಿಡಗಳು (ಪಕ್ಷಿಗಳು) ಆಕಾಶ ದಲ್ಲಿ ಹಾರುವವು ಅವು ಪೃಥ್ವಿಯಿಂದ ದೂರಾದರೂ ಅವುಗಳ ಅಂತರ್ಗ್ಯದಲ್ಲಿ ಜೀವನ (ಅಂತರಾತ್ಮ ರೂಪದ)ವು ಇದ್ದುದರಿಂದ ಅವು (ಪಕ್ಷಿಗಳೆಂಬ ಗಿಡ ಗಳು) ಒಣಗುವದಿಲ್ಲ ಎಲ್ಲಿ ಬೇಕಾದಲ್ಲಿ ಬಲದಿಂದ ಬೆಳೆಯುವವು

ದೇವನಿಂದ ಅಂದರೆ ಅಂತರಾತ್ಮನಿಂದ (ಪ್ರಾಣಿಗಳೆಂಬ) ಗಿಡಗಳು ಚಲಿಸುವವು ಅದಿಲ್ಲದಿದ್ದರೆ ಅವು ಒಣಗಿ ಕಟ್ಟಿಗೆಯಾಗುವವು ಇದರಲ್ಲಿ ತಿಳಿಯಲಸಾಧ್ಯವಾದುದೇನೂ ಇಲ್ಲ ಗಿಡಗಳಿಂದ ಗಿಡಗಳುಂಟಾಗುವವು ಅವಾದರೂ ಅಂತರಿಸಿ ಹೋಗುವವು ಆದರೆ ಅವುಗಳ ಬೇರುಗಳೇನೂ ನೆಲ ವನ್ನು ಭೇದಿಸಿ ಹೋಗುವವೆಂಬದೇನೂ ಇಲ್ಲ ಗಿಡಗಳೆ ಗೊಬ್ಬರ ನೀರುಗ ಳಿಂದಲೇ ಗಿಡಗಳು ಬೆಳೆಯುವವು, ಮಾತಿನ ಗಿಡಗಳು [ಮಾನವರು] ಮನೋಗತವನ್ನು ತಿಳಿಸುವವು ಸೃಷ್ಟಿ ಸ್ವಭಾವ ಧರ್ಮದಿಂದ ಆಗತಕ್ಕವು ಗಳೆಲ್ಲ ಮೊದಲೇ ಆಗಿ ಹೋಗಿವೆ ಹಿಂದಿನಿಂದ ಹಲವು ಶಾಸ್ತ್ರಕಾರರು ತಮ್ಮ ತಮ್ಮ ಕಲ್ಪನೆಗಳನ್ನು ಹರಿಬಿಟ್ಟು ಅವುಗಳ ಮೇಲೆ ವಿವಿಧ ಗ್ರಂಥಗಳನ್ನು ಬರೆ ದಿರುವರು ಆದರೆ ಬಲ್ಲವನು ಮಾತ್ರ ಇವೆಲ್ಲವುಗಳ ಮರ್ಮವನ್ನು ತಿಳಿದು ಕೊಳ್ಳುವನು ಸಾಮಾನ್ಯ ಜನರಿಗೆ ವಾಚ್ಯಾರ್ಥವು ತಿಳಿದರೂ ಕೂಡ ಅದರ ಮರ್ಮವು ತಿಳಿಯುವದಿಲ್ಲ ಮತ್ತು ಮರ್ಮವು ತಿಳಿದಂತೆ ತೋರಿದರೂ ಅದನ್ನು ಗ್ರಹಿಸುವ ಸಾಮರ್ಥ್ಯವಿರುವದಿಲ್ಲ ಯಾಕಂದರೆ ಅನುಭವವಿರುವ ದಿಲ್ಲ ಮುಖ್ಯವಾಗಿ ಅನುಭವವು ಅದೃಶ್ಯವು ಅದಿಲ್ಲದೆ ತತ್ವಬೋಧೆಯಾ ಗುವದಿಲ್ಲ ಅಂತರಾತ್ಮನು ಎಲ್ಲರಲ್ಲಿಯೂ ಹಿರಿಯನು ಆತನ ಪರಿಚಯು ಮಾಡಿಕೊಂಡರೆ ಜಗದಂತರ್ಯದಲ್ಲೆಲ್ಲ ನಾನೇ ತುಂಬಿಕೊಂಡಿರುವೆನೆಂಬದು ತಿಳಿದುಬರುವದು ಇದು ಎಲ್ಲರಿಗೂ ತಿಳಿಯಲಾರದು ಕೇವಲ ಅಂತ ರ್ಮುಖ ಮಾನವನಿಗಷ್ಟೇತಿಳಿಯುವದು ಶ್ರೇಷ್ಠ ತರಗತಿಯ ಬಹಿರ್ಮುಖ ಮಾನವನಿಗೆ ಇದು ತಿಳಿಯಲಾರದು ಅಂತರಾತ್ಮನ ಬಗೆಗೆ ಸುಜ್ಞರಿಲ್ಲದೆ ಮಂದಮತಿಗಳಿಗೇನೂ ತಿಳಿಯದು ಅಂತರಾತ್ಮನು ಗೊತ್ತಾಗಿ ಎಲ್ಲ ಭೂತ ಗಳಲ್ಲಿಯೂ ನಾನಿರುವೆನೆಂದು ತಿಳಿದವನಿಗೆ ಅನ್ಯರ ಅಂತಸ್ಥವನ್ನು ಅರಿಯಲು

ಬರುವದು ತನ್ನ ಅಂತರವನ್ನು ಕಾಯ್ದುಕೊಂಡು ಹೋಗುವವನಿಗೆ ಕಿರಯರೂ ಪ್ರಸನ್ನರಾಗಿ ಸ್ತುತಿಮಾಡುವರು ಇಲ್ಲದೆ ಹೋದರೆ ಒಂದು ಪಲ್ಯದ ತೊಪ್ಪಲು ಕೂಡ ಸಿಗುವದಿಲ್ಲ ಅದು ಅನುಭವದ ಮಾತು ಅಲಕ್ಷ್ಯ ಅಂತರಾತ್ಮನಲ್ಲಿ ಲಕ್ಷ್ಯವನ್ನಿರಿಸಬೇಕು ಅಂತರ್ನಿಷ್ಠರ ಅನ್ಯೋನ್ಯ ದರ್ಶನವು ಸಮಾಧಾನವಾಗಿ ಪರಿಣಮಿಸುವದು ಮನ ಮನಗಳು ಒಂದಾಗಲು, ನಾ ನೀ ಎಂಬ ಭಾವನೆಗಳು ದೂರಾಗಲು, ಅಂತರಾತ್ಮನ ವ್ಯಾಪಕತೆಯು ವಿಡಿತವಾಗಲು ಆಗ ನಿರಂಜನ ದರ್ಶನವಾಗುವದು ಚಂಚಲ ಚಕ್ರವನ್ನು ದಾಟಿ ಆಚೆಕಡೆಗೆ ಹೋಗಲು ಪರಬ್ರಹ್ಮನ ಪ್ರಾಪ್ತಿಯಾಗುವದು ಆತನನ್ನು ಚರ್ಮ ಚಕ್ಷುಗಳಿಂದ ನೋಡಲಿಕ್ಕೆ ಬರಲಾರದು ಒಮ್ಮೆ ಆತನು ದೊರಕಿಕೊಳ್ಳಲು ನಿರಂತರವಾಗಿ ನಮ್ಮಲ್ಲಿಯೇ ಇರುವನು ಅಂತರಾತ್ಮನು ಹಲವು ಶರೀರಗಳಲ್ಲಿದ್ದು ಚಲನವಲನ ನಡೆಯಿಸುವನು ನಿಶ್ಚಲ ಪರಬ್ರಹ್ಮನು ನಿತ್ಯನು ಹಾಗು ಸರ್ವತ್ರನು ಚಂಚಲ ವ್ಯಾಪಕತೆಯುಕಡಿಮೆ ಅದು ಒಂದೆಡೆಗೆ ಹೋಗಲು ಇನ್ನೊಂದೆಡೆಗೆ ಬರಿಯದಾಗುವದು ಚಂಚಲವು ಎಲ್ಲಿಡೆಗೆ ಸಾಕಾಗುವಷ್ಟಿಲ್ಲ, ಚಂಚಲ (ಜೀವ)ವು ಚಂಚಲವನ್ನು (ಅಂತರಾತ್ಮನನ್ನು] ಪೂರ್ಣವಾಗಿ ಶೋಧಿಸಲಾರದು ಅಂದ ಮೇಲೆ ಅದು ನಿಶ್ಚಲ ಪರಬ್ರಹ್ಮನನ್ನು ಅದೆಂತು ತಿಳಿಯುವದು? ಚಂದ್ರಜ್ಯೋತಿ, ಬಾಣ ಮದ್ದುಗಳು ಆಕಾಶದಲ್ಲಿ ಮೇಲಕ್ಕೆ ಹಾರಿ ಉರಿಯಹತ್ತಿದರೂ ಅವಕ್ಕೆ ಆಕಾಶದ ಅಂತವು ಗೊತ್ತಾಗುವದಿಲ್ಲ ಅವು ಮೇಲಕ್ಕೇರುವದರೊಳಗೇ ನಡುವೇ ನಂದಿ ಹೋಗುವದುಂಟು ಅಂದಮೇಲೆ ಅದರ ಸ್ವಭಾವವು ಒಮ್ಮುಖವು ಇಂತು ಏಕದೇಸೀ ವೃತ್ತಿಯವನು ಬ್ರಹ್ಮನನ್ನು ತಿಳಿಯುವದು ಶಕ್ಯವಿಲ್ಲ ವೃತ್ತಿಯಿಂದ ಅತೀತನಾದ ಬ್ರಹ್ಮನನ್ನು ಬಿಟ್ಟುವನು ವೃತ್ತಿಗತ ಬ್ರಹ್ಮನಿಗೆ ಕ್ಷುದ್ರ ಬ್ರಹ್ಮನೆನ್ನುವನು ಅಸಾರವಾದುದನ್ನು ಚೆಲ್ಲಿಕೊಟ್ಟು ಸಾರಭೂತವಾದ ನಿರ್ಗುಣ ಬ್ರಹ್ಮನನ್ನು ಸ್ವೀಕರಿಸದಿದ್ದರೆ ಎಲ್ಲವೂ ಅಂಧಃಕಾರವೇ ಸರಿ ಸತ್ಯವನ್ನು ಬಿಟ್ಟು ಸತ್ಯವನ್ನು ಬಿಟ್ಟು ಅಸತ್ಯಕ್ಕೆ ಕೈ ಹಾಕುವದು ಬಲ್ಲಿದರ ಕೆಲಸವಲ್ಲ ಬ್ರಹ್ಮಾಂಡದ ಮಹಾಕಾರಣ ದೇಹವೆಂದರೆ ಮೂಲಮಾಯೆಯು ಆ ಮೂಲ ಮಾಯೆಯಿಂದಲೇ ಪಂಚೀಕರಣ ಉಂಟಾಗಿದೆ ಮಹಾವಾಕ್ಯದ ವಿವರಣೆಯು ಬೇರೆಯೇ ಇರುವದು, ಅದು ಪಂಚೀಕರಣದಲ್ಲಿ ಬರುವದಿಲ್ಲ

ಮಹತ್‌ತತ್ತ್ವವೆಂದರೆ ಮಹತ್‌ಭೂತವು ಇದಕ್ಕೇ ಭಗವಂತನೆಂಬ ಹೆಸರು ಈ ಭಗವಂತನಲ್ಲಿಯೇ ಉಪಾಸನೆಯು ಸಮಾಪ್ತಿಗೊಳ್ಳುವದು ವೇದಗಳು ಕರ್ಮ, ಉಪಾಸನೆ, ಹಾಗು ಜ್ಞಾನ ಹೀಗೆ ತ್ರಿಕಾಂಡಾತ್ಮಕವಾಗಿರುವವು ಇಲ್ಲಿಯೇ ವೇದಗಳ ಮರ್ಯಾದೆಯು ನಿಲ್ಲುವದು ಇವುಗಳಾಚೆಗೆ ಜ್ಞಾನವು ವಿಜ್ಞಾನದಲ್ಲಿ ಪರಿವರ್ತಿಸುವದು, ಪರಬ್ರಹ್ಮಸ್ವರೂಪ ವುಂಟಾಗುವದು''

ಶ್ರೀ ರಾಮ ॥ ೬ ಚಾತುರ್ಯ ವಿವರಣೆ ॥ ಗುರುಗಳು ಶಿಷ್ಯರಿಗೆ —

''ಹಳದೀ ಬಣ್ಣದಿಂದ ಕಪ್ಪು ಬಣ್ಣವು ಉಂಟಾಯಿತು (ಅಳಲೆಯ ಕಾಯಿಯಿಂದ ಮಸಿಯು ಸಿದ್ಧವಾಯಿತು) ಅದೇ ಜಗತ್ತಿನಲ್ಲೆಲ್ಲ ಬಹು ಪ್ರಚಾರದಲ್ಲಿ ಬಂದು ಉಪಯೋಗವಾಗಹತ್ತಿತು ಅದಿಲ್ಲದೆ ಮನುಷ್ಯಮಾತ್ರರಲ್ಲಿ ಜ್ಞಾನ ಬೆಳೆಯದಂತಾಯಿತು ಆ ಮಸಿಯು ತೀರ ಅಲ್ಪ ಬೆಲೆಯ ಸಾದಾ ಪದಾರ್ಥವು ಆದರೂ ಅದರ ಬಳಕೆಯಿಂದ ಬ್ರಹ್ಮಾಂಡದಲ್ಲಿಯ ಜ್ಞಾನವೆಲ್ಲ ಒಟ್ಟುಗೂಡಿ ಗ್ರಂಥಗಳಲ್ಲಿ ರೂಪಿತವಾಗಿದೆ ಜಗತ್ತಿನಲ್ಲಿಯ ಉತ್ತಮಾಧಮ ಗುಣಗಳನ್ನೆಲ್ಲ ಗ್ರಂಥಗಳ ದ್ವಾರದಿಂದ ಆ ಮಸಿಯು ಜಗತ್ತಿಗೆಲ್ಲ ವಿದಿತಪಡಿಸುವದು ಈ ಮಸಿಯ ಜೊತೆಗೆ ಗಲಗಿನ ಲೆಕ್ಕಣಿಕೆಯು ಜೋಡಾಯಿತು ಹೀಗೆ ಮಸಿ–ಲೆಕ್ಕಣಿಕೆ ಇವೆರಡೂ ಕೂಡಿ ಜ್ಞಾನವಿಷಯಕ ಕಾರ್ಯವನ್ನು ಕೈಕೊಂಡವು ಮುಂದೆ ಅವು ಎರಡೂ ಬಿಳಿಯ ಕಾಗದದ ನೆರವು ಪಡೆದವು ಕಾಗದದ ಮೇಲೆ ಲೆಕ್ಕಣಿಕೆಯು ಮಸಿಯನ್ನು ಬಳಸಹತ್ತಿದ ಕೂಡಲೇ ಅವುಗಳ ಕ್ರಿಯೆಯಿಂದ ಇಹಲೋಕವು ಸಾರ್ಥಕತೆಯನ್ನು ಹೊಂದುವಂತಾಯಿತು! ಅವುಗಳಿಂದ ಮೂಡಿದವಿವರವಾದ ವಿಚಾರಗಳು ಮೂರ್ಖರನ್ನು ಚತುರನ್ನಾಗಿ ಮಾಡಹತ್ತಿದವು ಅವುಗಳಿಂದ ಸಿದ್ಧವಾದ ಬರೆಹದ ಅರ್ಥವನ್ನು ಗ್ರಹಿಸಿದವರು ಪರಲೋಕದ ಮಾರ್ಗವನ್ನು ಆ ಕೂಡಲೇ ದೊರಕಿಸಿಕೊಂಡು ಕೃತಾರ್ಥರಾಗಹತ್ತಿದರು. ಎಲ್ಲರಿಗೂ ಆವಶ್ಯಕವಾದ ಸಂಗತಿಯೇ ಜಗತ್ತಿನಲ್ಲಿ ರೂಢಿಗೊಳ್ಳುವದು. ಆದರೆ ಚತುರನಾದವನು ಸಾಮಾನ್ಯ ಸಂಗತಿಗಳಿಗೆ ಮಹತ್ವಕೊಡಲಾರನು ಅಂದರೆ ಅವನು ಅವುಗಳೊಡನೆ ಅನನ್ಯನಾಗುವದಿಲ್ಲ ಯಾವನೊಬ್ಬನ ಅದೃಷ್ಟವು ಉತ್ತಮವಾಗಿದ್ದರೆ ಇನ್ನೊಬ್ಬನದು ಮಧ್ಯಮವಾಗಿಯೂ ಮತ್ತೊಬ್ಬನದು ಕನಿಷ್ಠತರದ್ದಾಗಿಯೂ ಇರುವದು ಯಾಕಂ

ದರೆ ಆದೃಷ್ಟರೇಖೆಗಳು ಗುಪ್ತವಾಗಿರುವವು ಇದರಂತೆಯೇ ಅನುಭವ ಗಳ ಸ್ಥಿತಿಯಿರುವದು ಬಹು ಜನರ ಅನುಭವಗಳೆಲ್ಲ ಒಂದೇ ಬಗೆಯಾಗಿ ಇರುವದಿಲ್ಲ ತಮ್ಮ ಹಿಂದಿನ ಹಲವು ತಲೆ ಮಾರುಗಳಿಂದ ಆಗಿ ಹೋದ ಪೂರ್ವಜರ ಪರಾಕ್ರಮ-ಪ್ರಸಿದ್ಧಿಗಳನ್ನು ಹೇಳುವವರು ಹಲವರುಂಟು. ಹೀಗೆ ಹೇಳುವವರು ಹುಚ್ಚರೇ ಇರಲಿ, ಜಾಣರೇ ಇರಲಿ, ಅವರು ಹೇಳು ವದನ್ನು ಕೇಳುವವನು ಮಾತ್ರ ಅಂಥ ಮಹತ್ವಗಳು ತನ್ನಿಂದ ಒದಗ ಬಹುದು ಇಲ್ಲವೆ ಒದಗಲಿಕ್ಕಿಲ್ಲ ಎಂಬ ಬಗೆಗೆ ವಿಚಾರ ಮಾಡಬೇಕಾಗು ವದು ಕಾಗದ-ಹಲಗೆ-ಗೋಡೆಗಳ ಮೇಲಿನ ಬರೆಹಗಳನ್ನು ತೊಡೆಯು ಲಿಕ್ಕೆ ಬರುವದೆಂಬ ಅನುಭವವಿದ್ದವನು ಹಣೆಬರವನ್ನು ಒರಿಸಲಿಕ್ಕೆ ಬರು ವದಿಲ್ಲೆಂದು ಅನ್ಯರು ಹೇಳುವದನ್ನು ಸುಮ್ಮನೆ ಒಪ್ಪಿಕೊಳ್ಳುವದೇಕೆ ? ಬಹು ಜನರ ಮಬ್ಬಿಗೆಬಿದ್ದ ಮಾನವನು ಅನುಮಾನದ ಮಡುವಿನಲ್ಲಿ ಮುಳುಗಿ ಅನುಭವದ ನಿಶ್ಚಯುವನ್ನು ಮಾಡದೆ ಮರೆಯುವನು, ಹೀಗಾಗಿ ಅವನು ಮೋಸಹೋಗುವನು ಬಹು ಜನರು ಹೇಳಿದ ಬಹಳ ಸಂಗತಿಗಳನ್ನು ಕೇಳಬೇಕು ಆದರೆ ಅವೆಲ್ಲವನ್ನು, ಅನುಭವದ ಒರೆಗಲ್ಲಿಗೆ ತಿಕ್ಕಿ ತನ್ನ ಅಂತರ್ಯಾಮದಲ್ಲಿ ಅವುಗಳ ಸತ್ಯಾಸತ್ಯತೆಗಳನ್ನು ವಿಂಗಡಿಸ ಬೇಕು ಯಾರಿಗೂ 'ಅಲ್ಲ' ಎಂದೆನ್ನ ಕೂಡದು ನಿರೀಕ್ಷಣೆಯಲ್ಲಿ ಅಪಾಯ ಉಪಾಯಗಳ ಅನುಭವ ಪಡೆಯತಕ್ಕದ್ದು ಬಹಳ ಹೇಳು ವದರಿಂದೇನು ಪ್ರಯೋಜನವಿಲ್ಲ ದುರಭಿಮಾನಿಯೂ, ಅರ್ಧಮೂರ್ಖ ಜಾಣನೂ ಆದವನನ್ನು ಸಹ ಮನ್ನಿಸತಕ್ಕದ್ದು ಅಂದರೆ ಎಲ್ಲರನ್ನು ಮನ ಸಿನಿಂದ ಕೂಡಿಕೊಳ್ಳತಕ್ಕದ್ದು ತನ್ನ ಮನಸಿನಲ್ಲಿ ದುರ್ಬುದ್ಧಿಗಳನ್ನು ಹೆಚ್ಚಿಸಿಕೊಳ್ಳುವವನನ್ನು ಯಾರೂ ಬುದ್ಧಿವಂತನೆಂದು ಎಣಿಸುವದಿಲ್ಲ ಅಂಥವನು ಅನ್ಯರನ್ನು ಸಮಾಧಾನಪಡಿಸುವದು ಶಕ್ಯವಿಲ್ಲ ಮೂರ್ಖ ರನ್ನು ತಿದ್ದಿ ಜಾಣರನ್ನಾಗಿ ಮಾಡಬೇಕು ಇದೇ ಶ್ರೇಯಸ್ಕರವು ವ್ಯರ್ಥ ವಾದ ಬೆಳಿಸುವದು ಮೂರ್ಖತನವು ಪ್ರತಿಪಕ್ಷೀಯನೊಡನೆ ಕೂಡಿ ಕೊಂಡು ನಡೆದು ಅವನನ್ನು ತನ್ನಕಡೆಗೆ ಒಲಿಸಿಕೊಳ್ಳಬೇಕು ಪ್ರಸಂಗ ವೊದಗಿದಾಗ ಬಿದ್ದುಕೊಂಡು ಮೇಲೇಳಬೇಕು ಇದನ್ನು ವಿವೇಕದಿಂದ ಇನ್ನೊಬ್ಬರಿಗೆ ತಿಳಿಯದಂತೆ ವರ್ತಿಸಬೇಕು. ಪರರಲ್ಲಿ ಬೆರೆತುಕೊಂಡು

ಅವರ ನಡೆ-ನುಡಿಗಳನ್ನುನುಸರಿಸಿ ನಡೆದು ಅವರ ಮನೋಗತವನ್ನರಿತು ಕೊಳ್ಳಬೇಕು ಪರರಕಲ್ಯಾಣಕ್ಕೆ ವಿಘ್ನವನ್ನೊಡ್ಡಬಾರದು ತನ್ನಹೃದಯದಿಂದ ಪರರ ಅಂತರ್ಯವನ್ನರಿತಕೊಂಡು ನಂತರ ಸಾವಕಾಶವಾಗಿ ತನ್ನವಿಚಾರಗಳನ್ನು ಅವರಲ್ಲಿ ಬಿಂಬಿಸಬೇಕು ಹಲವು ಉಪಾಯಗಳನ್ನನುಸರಿಸಿ ಅವನಿಗೆ ಪರಲೋಕದ ಮಾರ್ಗತೋರಿಸಬೇಕು ಕೋಪಿ-ಕೋಪಿಗಳು ಕೂಡಿದರೆ ಕಲಹ ಪ್ರಾಪ್ತವಾಗುವದು ಇದರಲ್ಲಿ ಯಾವನದೂ ಚಾತುರ್ಯ ವಿರುವ ದಿಲ್ಲ ಎಷ್ಟೋ ಜನರು ಕಾರ್ಯಮಾಡದೆ ವ್ಯರ್ಥಗಳೆಹುತ್ತಾರೆ ಆದರೆ ನುಡಿದಂತೆ ನಡೆಯುವದು ಕಠಿಣವು ಪರರ ಹೃದಯವನ್ನು ವಶಮಾಡಿ ಕೊಳ್ಳುವದು ಸುಲಭವಲ್ಲ ಅದೊಷ್ಟೋ ಕಷ್ಟಸೋಸಬೇಕಾಗುವದು ನಿಂದ್ಯನುಡಿಗಳನ್ನು ಸಹಿಸಬೇಕಾಗುವದು, ಹೀಗಾದರೆ ಕೊನೆಗೆ ಹಗೆಯು ಪಶ್ಚಾತ್ತಾಪ ಹೊಂದಿ ತನ್ನನ್ನು ಬಂದು ಕೂಡುವನು ಪ್ರಸಂಗನೋಡಿ ನುಡಿಯಬೇಕು ಬುದ್ಧಿಯ ಅಭಿಮಾನ ಹಿಡಿಯಬಾರದು. ಎಲ್ಲೆಡೆಯಲ್ಲಿ ನಮ್ರತೆಯಿಂದ ವರ್ತಿಸಬೇಕು ಹಳ್ಳಿಗಳಲ್ಲಿಯೂ ಶಹರಗಳಲ್ಲಿಯೂ ಭಿಕ್ಷಾ ರ್ಥವಾಗಿ ಮನೆ ಮನೆ ತಿರುಗಿ ಭೆಟ್ಟಿಯಾದ ಸಣ್ಣದೊಡ್ಡವರನ್ನೆಲ್ಲ ಪರೀ ಕ್ಷಿಸಿಬಿಡಬೇಕು. ಬಹಳ ಕಡೆಯಲ್ಲಿ ಒಂದಿಲ್ಲೊಂದು ಸ್ವೀಕರಿಸತಕ್ಕ ಗುಣ ಗಳಿರುವವೆಂಬುದನ್ನು ನೆನಪಿಡಬೇಕು ಚತುರರೊಡನೆ ಸ್ನೇಹ ಬಳಿಸ ಬೇಕು ನೋಮಾರಿಯಾಗಿ ಒತ್ತಟ್ಟಿಗೇ ಕುಳಿತರೆ ಸಂಚಾರವೂ ಮನು ಷ್ಯಶೋಧದಕಾರ್ಯವೂ ಏನೊಂದೂ ಒದಗುವದಿಲ್ಲ ಸಾವಧಾನದಿಂದ ಎಲ್ಲ ವನ್ನೂ ಅರಿತುಕೊಳ್ಳಬೇಕು ಸುದ್ದಿಗಳನ್ನು ಮೊದಲು ಸಂಗ್ರಹಿಸಬೇಕು ನಂತರ ಆವಶ್ಯಕ ಸ್ಥಳಕ್ಕೆ ಹೋಗುವ ವಿಚಾರವನ್ನು ತಂದುಕೊಳ್ಳಬೇಕು ಪರಸ್ಪರರ ಶೋಧದಲ್ಲಿ, ಊರೂರು ತಿರುಗುವಲ್ಲಿ, ಒಂದೇ ಸ್ಥಳದಲ್ಲಿ ಇರು ವಲ್ಲಿ ಸಂಗಡ ವಿವೇಕದ ಜೊತೆಯಿರಬೇಕು ಹಲವು ಪದ-ಪದ್ಯಗಳನ್ನು ಪಠಿಸುವ ಕ್ರಮವಿರಬೇಕು ಅವುಗಳಿಂದ ಜನರ ಚಿತ್ತಕ್ಕೆ ಸಮಾಧಾನ ಉಂಟಾಗುವಂತಿರಬೇಕು ಪರಿಚಿತರಿಗೆ ಸ್ವತಃ ಲೇಖನ ಬರೆದು ಕೊಡ ಬೇಕು ಇದರಲ್ಲಿಯೇ ಅತ್ಯಂತಪರೋಪಕಾರವು ವಿರುವದು ಬೇಡಿದವ ರಿಗೆ ಅವರ ಇಚ್ಛಿತವಾದವುಗಳನ್ನು ಕೂಡಲೆ ಕೊಡಬೇಕು ಅಂದರೆ ಜನರು ಶ್ರೇಷ್ಠನೆಂದು ಮನ್ನಿಸುವರು ಜಗತ್ತಿನಲ್ಲಿ ಎಲ್ಲರಿಗೂ ಮಾನ್ಯ

ನಾದವನು ಸಾಮಾನ್ಯ ಪುರುಷನಲ್ಲ ಅವನೇ ಲೋಕಮಾನ್ಯನು ಅವ ನೊಡನೆ ಜನರೆಲ್ಲ ಅನನ್ಯ ಭಾವದಿಂದ ವರ್ತಿಸುವರು

ಈ ಪ್ರಕಾರವಾಗಿ ಚಾತುರ್ಯದ ಲಕ್ಷಣಗಳಿರುವವು ಚಾತುರ್ಯದಿಂದ ದಿಗ್ವಿಜಯ ಕೈಕೊಂಡವನಿಗೆ ಎಲ್ಲಿ ಬೇಕಾದಲ್ಲಿಯೂ ಯಾವದಕ್ಕೂ ಕೊರ ತೆಯುಂಟಾಗುವದಿಲ್ಲ ''

ಶ್ರೀ ರಾಮ ॥ ೭ ಅಧೋರ್ಧ್ವ ನಿರೂಪಣೆ ॥ ಗುರುಗಳು ಶಿಷ್ಯನನ್ನು ಕುರಿತುಃ—

'' ಮೂಲ ಮಾಯೆಯು ಹಲವು ವಿಕಾರಗಳ ಉಗಮಸ್ಥಾನವು ಅದು ಕೇವಲ ನಿಶ್ಚಲ ಪರಬ್ರಹ್ಮನ ಅತಿ ಸೂಕ್ಷ್ಮ ರೂಪದಿಂದ ಉಂಟಾಯಿತು ಅದಕ್ಕೆ 'ಚಂಚಲ'ವೆಂದೂ ಹೆಸರಿದೆ ಅದು ಅರವಿನ ರೂಪದಿಂದಿದ್ದು ಬ್ರಹ್ಮನ ಮೂಲಸಂಕಲ್ಪವಾಗಿದೆ ಈ ಮೂಲ ಮಾಯೆಗೆ ಷಡ್ಗುಣೇಶ್ವರ, ಪ್ರಕೃತಿ—ಪುರುಷ, ಶಿವ—ಶಕ್ತಿ, ಅರ್ಧನಾರೀ ನಟೇ ಶ್ವರ, ಜಗಜ್ಯೋತಿ ಎಂದೆನ್ನುವರು ಸಂಕಲ್ಪದ ಚಲ ವಿಚಲತೆಯೇ ಮೂಲ ಮಾಯೆಯು ಆ ಚಲನವು ವಾಯು ರೂಪದಲ್ಲಿದ್ದು ಅದರಲ್ಲಿ ತ್ರಿಗುಣ ಪಂಚ ಭೂತಾತ್ಮಕ ಅಷ್ಟಧಾಪ್ರಕೃತಿಯು ಅತಿ ಸೂಕ್ಷ್ಮರೂಪದಿಂದ ಇರುತ್ತದೆ ಯಾವದೊಂದು ಬಳ್ಳಿಯನ್ನು ನಿರೀಕ್ಷಿಸಲು ಅದರ ಬೇರುಗಳು ನೆಲದಲ್ಲಿ ಬಹುದೂರದ ವರೆಗೆ ಇಳಿದಿರುವವು ಆ ಬಳ್ಳಿಯು ಎಲೆ, ಹೂ, ಹಣ್ಣು ಕಾಯಿಗಳಿಂದ ಕೂಡಿ ಮುಂದೆ ವಿಸ್ತಾರವಾಗುತ್ತ ಹೋಗುವದು ಅದರ ವಿಸ್ತೃತೆಯು ಸೂಕ್ಷ್ಮರೂಪದಿಂದ ಮೊದಲು ಬೇರಿನಲ್ಲಿಯೇ ಇರುವದು ಇದಲ್ಲದೆ ಬಣ್ಣ, ಆಕಾರ, ವಿಕಾರ, ರುಚಿ ಒಳಗಿನ ರಚನೆ ಮುಂತಾದವೆಲ್ಲವೂ ಬೇರಿನಲ್ಲಿಯೇ ಬೀಜರೂಪವಾಗಿ ಇರುವವು ಆದರೆ ಆ ಬೇರನ್ನು ಸೀಳಿ ನೋಡಲು ಏನೊಂದೂ ಕಾಣುವದಿಲ್ಲ ಆದರೂ ಮುಂದೆ ಮುಂದೆ ಸಾವಕಾ ಶವಾಗಿ ಕಂಡುಬರುವವು ನೆಲಸೀಳಿ ಹೊರಬಂದ ಈ ಬಳ್ಳಿಯು ಯಾವ ದೊಂದರ ಆಶ್ರಯದಿಂದ ಬೆಳೆಯುವದು ಅದು ಕೆಳಮುಖವಾಗಿ ಜೋತು ಬಿದ್ದು ಹಬ್ಬುತ್ತ ಹಬ್ಬುತ್ತ ಅತಿ ವಿಸ್ತಾರವಾಗುವದು ಈ ಬಳ್ಳಿಯು ತೆರ ದಂತೆಯೇ ಮೂಲ ಮಾಯೆಯ ವಿಸ್ತಾರವನ್ನು ತಿಳಿದುಕೊಳ್ಳತಕ್ಕದ್ದು ತ್ರಿಗುಣ-ಪಂಚಭೂತಗಳು ಸೂಕ್ಷ್ಮರೀತಿಯಿಂದ ಈ ಮೂಲ ಮಾಯೆಯಲ್ಲಿ

ರುವವು ವಿವೇಕದಿಂದ ಈ ಬಳ್ಳಿಯ ಸ್ವರೂಪ ನಿರೀಕ್ಷಿಸಲು ಈ ಬಳ್ಳಿಯು ನಿರಂತರವೂ ಬೆಳೆಯುತ್ತ ಮುಂದೆ ಸಾಗುವದು ಹಲವು ವಿಕಾರಗಳಿಂದ ಈ ಬಳ್ಳಿಗೆ ಶೋಭೆಯುಂಟಾಗುವದು ಆ ವಿಕಾರಗಳಿಂದ ಮುಂದೆ ಹಲವು ವಿಕಾರಗಳುದಿಸಿ ಹೆಚ್ಚುತ್ತ ಹೋಗುವವು ಕೊಂಬೆ ರಂಬೆಗಳು ಹೆಚ್ಚಾಗಿ ತುದಿಯಲ್ಲಿ ಕುಡಿಗಳುಂಟಾಗುವವು ಹೂವುಕಾಯಿ ಹಣ್ಣುಗಳಾಗುವವು, ಉದುರುವವು ಮತ್ತೆ ಹೊಸ ಹೊಸವು ಫಲಿಸುವವು ಮತ್ತೆ ಮೊದಲಿನಂತೆ ಹೂಕಾಯಿ ಹಣ್ಣುಗಳ ಸ್ಥಿತಿಯಾಗುವದು, ಈ ಪ್ರಕಾರ ಪುನರಾವರ್ತನ ಸ್ಥಿತಿಯುಂಟಾಗುತ್ತ ಹೋಗಿ ಕಾಲಾಂತರದಲ್ಲಿ ಇಡೀ ಬಳ್ಳಿಯು ಬಾಡಿ ಒಣಗುವದು. ಮುಂದೆ ಅದರ ಬೊಡ್ಡೆಯಿಂದ ಮತ್ತೆ ಚಿಗುರುಗಳೊಡೆಯುವವು ಮೂಲ ಮಾಯೆಯ ಬಳ್ಳಿಗನುಸರಿಸಿ ಹೇಳುವದಾದರೆ ಸೃಷ್ಟಿಯಲ್ಲಿ ಲಕ್ಷಾವಧಿ ಕೋಟ್ಯಾವಧಿ ಪ್ರಾಣಿಗಳುದಿಸುವವು ಒಂದು ವೇಳೆ ಬಳ್ಳಿಯ ಬೇರನ್ನೇ ಅಗಿದು ತೆಗೆದುಕೊಂಡರೆ ಆ ಬಳ್ಳಿಯ ಅಸ್ತಿತ್ವವೇ ಇಲ್ಲದಾಗುವದು. ಅದರಂತೆ ಅನುಭವ ಜ್ಞಾನದಿಂದ ಮೂಲಮಾಯೆಯ ನಿರ್ಮೂಲನ ಮಾಡಿದರೆ ಆ ಮಾಯಾವಲ್ಲಿಯು ಮತ್ತೆ ವರ್ಧಿಸಲಾರದು ಅಂದರೆ ಜನನ ಮರಣಗಳ ಗಮನಾಗಮನವು ತಪ್ಪಿ ಹೋಗುವದು ಇದಿರಲಿ

ಈ ವಿವರಗಳಿಂದ ಬಳ್ಳಿಗಳಲ್ಲಿ ಮೂಲದಲ್ಲಿ ಬೀಜವುಂಟು, ತುದಿಯಲ್ಲಿ ಬೀಜವುಂಟು, ಹಾಗೂ ಮಧ್ಯದಲ್ಲಿ ಜೀವನ [ನೀರು] ಸ್ವರೂಪದಲ್ಲಿ ಬೀಜವುಂಟು ಈ ಎಲ್ಲ ಬೀಜಗಳಿಂದ ಆ ಬಳ್ಳಿಗಳು ಸಹಜವಾಗಿ ವಿಸ್ತರಿಸುತ್ತ ಹೋಗುವವು ಬೀಜದಿಂದುಟಾದ ಸೃಷ್ಟಿಯು ಬಳ್ಳಿಯ ಎಲೆ ಹೂ ಹಣ್ಣು ಮೊದಲಾದ ರೂಪ ವಿಸ್ತಾರದಂತೆ ಮೂಲದಲ್ಲಿರುವದೆಂಬುವದು ಕಂಡುಬರುವದು 'ಉತ್ಪತ್ತಿಯಾದಲ್ಲಿಯೇ ಲಯವು' ಎಂಬಂತೆ ಮೂಲ ಮಾಯೆಯಲ್ಲಿಂದ ಬಂದ ಪಿಂಡ ಬ್ರಹ್ಮಾಂಡಾತ್ಮಕ ಹಲವು ಜೀವ ರೂಪ ಸೃಷ್ಟಿಯು ಅದರಲ್ಲಿಯೇ ಲಯವಾಗುವದು ಆಗು ಹೋಗುಗಳು ಪುನಃ ಪುನಃ ವರ್ತಿಸ್ಯವವು ಆತ್ಮಜ್ಞಾನವುಳ್ಳವನಿಗೆ ಈ ಆಗು ಹೋಗುಗಳಸ್ಥಿತಿಯು ಅಂದರೆ ಜನನ-ಮರಣಗಳ ಕಷ್ಟಗಳು ಉಂಟಾಗುವದಿಲ್ಲ ಅವನಾದರೂ ಸಾಯಾಸದಿಂದ ಆತ್ಮರೂಪವನ್ನು ತಿಳಿದುಕೊಳ್ಳಬೇಕಾಗುವದು. ಆತ್ಮವು ಸರ್ವರ ಅಂತಸ್ಥವಾಗಿದ್ದರೂ ಎಲ್ಲರಿಗೂ ಅದನ್ನರಿಯುವದು ಸುಲಭವಿಲ್ಲ. ಅಂತರಾ

ತ್ಮನ ಆಧಾರದಿಂದಲೇ ಕಾರ್ಯಗಳು ಜರಗುವವು ಅವನ ಆಧಾರದಿಂದಲೇ ಜನರು ವಿಷಯ ಭೋಗ ಭೋಗಿಸುವರು ಅವನಿಲ್ಲದೆ ಏನೊಂದೂ ಸಾಧಿಲಾರದು ಆದರೂ ದೃಷ್ಟಿಯನ್ನು ಜಡತ್ವದಿಂದ ಸೂಕ್ಷ್ಮಕ್ಕೆ ಹೊರಳಿಸಲು ಬರುವದು ಮಾತ್ರ ದೃಷ್ಟಿಯು ವಿವೇಕಯುಕ್ತವಾದದ್ದಿರಬೇಕು ಆ ಸೂಕ್ಷ್ಮವು ಪ್ರತ್ಯಕ್ಷ ತೋರುವದಿಲ್ಲವೆಂದ ಮೇಲೆ ಜೀವನ ಂಯತ್ನವು ಅದೆಂತು ಕೊನೆಗಾಣುವದು ? ಆತ್ಮವು ತನಗೂ ಜಗತ್ತಿಗೂ ಒಬ್ಬನೇ ಆಗಿರುವನು ಪ್ರಾಣಿಗಳ ಶರೀರಗಳಲ್ಲಿ ಭೇದಗಳು ಬೇರೆ ಬೇರೆಯಾಗಿರುವವು ಹಸ್ತದ ಒಂದು ಬೆರಳಿಗಾಗುವ ವೇದನೆಯು ಇನ್ನೊಂದು ಬೆರಳಿಗೆ ತಿಳಿಯಲಾರದು ಇದರಂತೆ ಎಲ್ಲ ಅವಯವಗಳ ಸ್ಥಿತಿಯುಂಟು, ಒಂದು ಅವಯವದ್ದು ಇನ್ನೊಂದಕ್ಕೆ ತಿಳಿಯದೆಂದ ಮೇಲೆ ಇನ್ನೊಬ್ಬರ ಹೃದಯಾಂತರವು ತಿಳಿಯುವದು ಕಠಿಣವೆಂಬುವದು ಸಹಜವು ನೀರು ಒಂದೇ ಆಗಿದ್ದರೂ ಅದರಿಂದ ಎಲ್ಲ ವನಸ್ಪತಿಗಳು ಪೋಷಣೆ ಹೊಂದುವವು, ಬೆಳೆಯುವವು ಆದರೆ ಆ ವನಸ್ಪತಿಗಳ ತುದಿಗಳು ಬೇರೆ ಬೇರೆ ಹೆಚ್ಚು ಕಡಿಮೆ ಕಾಣುವವು ಹೆಚ್ಚು ಬೆಳೆದಷ್ಟನ್ನು ಕತ್ತರಿಸಿ ತೆಗೆಯಲು ಉಳಿದಷ್ಟೇ ನಳನಳಿಸುವದು ಇದೇ ನ್ಯಾಯವು ಮನುಷ್ಯನಿಗೆ ಅನ್ವಯಿಸುವದು ಹೇಗೆಂದರೆ—

ಒಬ್ಬನ ಅಂತರ್ಯವು ಇನ್ನೊಬ್ಬನಿಗೆ ತಿಳಿಯುವದಿಲ್ಲ, ಕೇವಲ ಆತ್ಮಜ್ಞಾನಿಗೆ ಮಾತ್ರಎಲ್ಲರ ಅಂತಸ್ಥಜ್ಞಾನವಾಗುವದು ಆತ್ಮತ್ವದಲ್ಲಿ ಭಿನ್ನತೆಯು ಶರೀರ ಭಿನ್ನತೆಗಳಿಂದ ಕಂಡುಬರುವದು ಆದರೂ ಬಹುಜನರಿಗೆ ಅಭಿನ್ನತೆಯೆಂಬುದು ತಿಳಿಯುವದಿಲ್ಲ .ಕೆಲವರುನೋಡಿಯೂ ಕೇಳಿಯೂ ಜಾಣರಾದ ಕೆಲವರು ಅಂತಃ ಪರೀಕ್ಷೆಯನ್ನು ಮಾಡಿಯೂ ಆತ್ಮನ ಅಭಿನ್ನತೆಯನ್ನು ತಿಳಿಯುವರು ಚತುರನಾದವನು ಮಾತ್ರ ಎಲ್ಲವನ್ನೂ ವಿವೇಕದಿಂದ ತಿಳಿದುಕೊಳ್ಳುವನು ಬಹುಜನರನ್ನು ಪಾಲನೆ ಮಾಡುವವನು ಆ ಬಹು ಜನರ ಹೃದಯವನ್ನರಿತುಕೊಳ್ಳುವದು ಅವನ ಚಾತುರ್ಯವೇ ಆಗಿರುವದು ಅನ್ಯರ ಮನೋಗತವನ್ನು ಅರಿತನಂತರ ಅವರಲ್ಲಿ ವಿಶ್ವಾಸವನ್ನಿರಿಸಬೇಕು ಇದು ಪ್ರಾಣಿಮಾತ್ರರ ಬಗೆಯಾಗಿರುವದು ಅರವಿನ ಹಿಂದೆಯೇ ಮರೆವು ಇರುವದು ಒಂದು ಕಾಲಕ್ಕೆ ನಾವೇ ಒಂದೆಡೆಗೆ ಇಟ್ಟ ವಸ್ತುವು ಇನ್ನೊಂದು ವೇಳೆಗೆ ಅದು ನಮಗೆ ಲಕ್ಷ್ಯಕ್ಕೆ ಬರುವದಿಲ್ಲ ಇದೇ ವಿಸ್ಮರಣೆ ಅಥವಾ

ಮರೆಯುವಿಕೆಯು ಅರವು ಮರೆವುಗಳ ಅನುಭವವು ಎಲ್ಲರಿಗೂ ಇರುವದು ನಮ್ಮದು ನಮಗೇ ನೆನಪುಳಿಯುವದಿಲ್ಲ ನಾವು ನುಡಿದದ್ದು ಸ್ಮರಣೆಗೆ ಬರುವದಿಲ್ಲ, ನಮ್ಮಲ್ಲಿ ಜನಿತವಾದ ಕಲ್ಪನೆಗಳು ನಮಗೇ ಗೊತ್ತಾಗುವದಿಲ್ಲ ಈ ಸ್ಥಿತಿಯುಂಟಾಗುವ ಕಾರಣವೆಂದರೆ ನಮ್ಮ ಚಂಚಲತೆಯು ಚಂಚಲತೆಯು ಮಾಯೆಯ ಚಕ್ರವಾಗಿರುವದು ಈ ಚಕ್ರವು ಕೆಲಕಾಲ ಸರಳವಾಗಿಯೂ ಕೆಲಕಾಲ ವಕ್ರವಾಗಿಯೂ ತಿರುಗುವದು ಇಂದ್ರನೇ ಇರಲಿ, ದರಿದ್ರನೇ ಇರಲಿ, ಯಾರಿಗೂ ಸ್ಮರಣೆ ವಿಸ್ಮರಣೆಗಳು ತಪ್ಪಿದವಲ್ಲ ಇದು ಜೀವ ಸ್ವಭಾವವು ಸದಾ ಸ್ಮರಣೆಯಿಂದ ದೇವನು, ಸತತ ವಿಸ್ಮರಣೆಯಿಂದ ದಾನವನು ಹಾಗು ಸ್ಮರಣೆ ವಿಸ್ಮರಣೆಗಳೆರಡರ ಯುಕ್ತತೆಯಿಂದ ಮಾನವನು ಈ ಪ್ರಕಾರದ ವೃತ್ತಿಯಿರುವದು ಈ ವಿಚಾರದಿಂದ ಸಂಪತ್ತಿನಲ್ಲಿ ದೈವೀಹಾಗುಆಸುರೀ ಸಂಪತ್ತುಗಳೆಂದು ಎರಡು ಭೇದಗಳೆಂದು ತಿಳಿಯಲಾಗಿದೆ ಈ ಸಂಪತ್ತುಗಳ ಅನುಭವವನ್ನು ವಿವೇಕದಿಂದ ಕಾಣಬೇಕು ಕಣ್ಣನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸಿದೆ ಕಣ್ಣುಗಳಿಂದಲೇ ಕಾಣಬೇಕಾಗುವದು, ವಿವೇಕದಿಂದ ವಿವೇಕವನ್ನು ತಿಳಿಯಬೇಕಾಗುವದು ಆತ್ಮನಿಂದಲೇ ಆತ್ಮನನ್ನು ಅರಿಯಬೇಕಾಗುವದು, ಜಡದಿಂದ ಜಡವನ್ನು ತಿಕ್ಕಬೇಕಾಗುವದು ಅದರಂತೆ ಸೂಕ್ಷ್ಮದಿಂದಸೂಕ್ಷ್ಮವನ್ನೂ, ಹೃದಯದಿಂದ ಹೃದಯವನ್ನೂ ತಿಳಿದುಕೊಳ್ಳಬೇಕು ಹಾಗು ಈ ತಿಳುವಳಿಕೆಗಳಿಗನುಸರಿಸಿ ವರ್ತಿಸಬೇಕು ಇದಲ್ಲದೆ ವಿಚಾರದಿಂದ ವಿಚಾರವನ್ನು, ಅಂತರದಿಂದ ಅಂತರವನ್ನು ತಿಳಿದುಕೊಳ್ಳಬೇಕು ಪರಾಂತರನೊಡನೆ ಸ್ವರೂಪೈಕ್ಯತೆ ಹೊಂದಿ ಪರಾಂತರನನ್ನು ಅರಿತುಕೊಳ್ಳಬೇಕು ಅರವಿನಲ್ಲಿ ಮರೆವುಉಂಟಾಗುವದರಿಂದ ಸೃಷ್ಟಿಯು ಭೇದ ಮಯವಾಗಿ ತೋರುವದು ಜೀವನು ಒಂದೆಡೆಗೆ ಸ್ಥಿತನಾಗಿರುವ ಮೂಲಕ ವ್ಯಾಪಕನಲ್ಲ ಮುಂದೆ ಕಲಿಯುವದು, ಹಿಂದೆ ಕಲಿತದ್ದನ್ನು ಮರೆಯುವದು, ಮುಂದೆ ಬೆಳಕು, ಹಿಂದೆ ಕತ್ತಲು, ಮುಂದೆ ನೆನಪು ಹಿಂದೆ ಮರೆವು, ಈ ಎಲ್ಲ ಸ್ಥಿತ್ಯಂತರಗಳು ಎಲ್ಲರಿಗೂ ಇರ್ರುವವು ನಮ್ಮಶರೀರಕ್ಕೆತುರ್ಯೆಯೆಂದೂ ಸುಷುಪ್ತಿಯೆಂದೂ ಎರಡು ಅವಸ್ಥೆಗಳಿರುವವು ತುರ್ಯೆಯು ನಮ್ಮಲ್ಲಿ ಸ್ಮರಣ ರೂಪದಿಂದ ಇರುವದು ಸುಷುಪ್ತಿಯು ಸ್ಮರಣೆಯ ರೂಪದಲ್ಲಿರುವದು ”

ಶ್ರೀ ರಾಮ || ೮ ಸೂಕ್ಷ್ಮ ಜೀವ ನಿರೂಪಣೆ || ಗುರುಗಳು ಶಿಷ್ಯರಿಗೆ- "ಸೃಷ್ಟಿಯಲ್ಲ ಎಷ್ಟೋ ಪ್ರಾಣಿಗಳು ಕ್ರಿಮಿ ಕೀಟಕ ರೂಪದಿಂದ ತೀರಸಣ್ಣ ವೆಂದರೆ ಒಂದು ರೇಣು ಕಣಕ್ಕಿಂತಲೂ ಸಣ್ಣವಾಗಿ ಜೀವಿಸುವವು ಅವುಗಳ ಶರೀರಮಾನಕ್ಕನುಸರಿಸಿಯೇ ಅವುಗಳಲ್ಲಿ ಯುಕ್ತಿ-ಬುದ್ಧಿಗಳು ಸೂಕ್ಷ್ಮವಾ ಗಿಯೇ ಇರುವವು ಕಣ್ಣಿಗೆ ಕೂಡ ಕಾಣಿಸಿದಷ್ಟು ಸಣ್ಣ ಪ್ರಾಣಿಗಳೆಷ್ಟೋ ಇರುವವು ಅಂಥವುಗಳಲ್ಲಿಯೂ ಅಂತಃಕರಣ ಪಂಚಕದ ವ್ಯವಸ್ಥೆಯು ಇರುವದು ಈ ಪಂಚಕಗಳಾವವೆಂದರೆ- ೧ ಅಂತಃಕರಣ ೨ ಮನ ೩ ಬುದ್ಧಿ ೪ ಚಿತ್ತ ಮತ್ತು ೫ ಅಹಂಕಾರ ಇವು ಇವೆಲ್ಲ ಕ್ರಮವಾಗಿ ಆಕಾಶಾದಿ ಪಂಚಭೂತಗಳಲ್ಲೊಂದೊಂದರಿಂದ ಉಂಟಾಗಿರುವವು ಕ್ರಿಮಿ ಕೀಟಕ ಪ್ರಾಣಿಗಳಿಗೆ ಅವವುಗಳ ಜ್ಞಾನ, ವಿಷಯ, ಇಂದ್ರಿಯಗಳು ಅವವುಗಳ ಮಾನಕ್ಕನುಸರಿಸಿಯೇ ಇರುವವು ದೊಡ್ಡ ದೇಹದ ಮಾನವನು ಸೂಕ್ಷ್ಮ ಶರೀರಗಳ ವಿಚಾರದ ಗೊಡವೆಗೆ ಹೋಗಲಾರನು ಸೂಕ್ಷ್ಮ ಪ್ರಾಣಿಗ ಳೆಂದರೆ ಇಷ್ಟೇ, ಅವುಗಳ ಮಾನದಿಂದ ಒಂದು ಇರುವೆಯು ಆ ಪ್ರಾಣಿಗಳ ಕಣ್ಣಿಗೆ ನಮಗೆ ಆನೆ ಕಂಡಂತೆ ತೋರುವದು ಇರುವೆಯು ನಮ್ಮ ದೃಷ್ಟಿ ಯಿಂದ ಸಣ್ಣದಾದರಿಂದಲೇ 'ಇರುವೆಗೆ ಮಾನವನ ಮೂತ್ರವೇ ಮಹಾಪೂರ' ಎಂದೆನ್ನುವದು ರೂಢಿಯಲ್ಲಿದೆ ಇರಿವೆಯಂಥ ಸಣ್ಣ ಶರೀರದ ಪ್ರಾಣಿ ಜಾತಿಗಳು ಲಕ್ಷಗಟ್ಲೆ ಇರುವವು ಆದರೆ ಅವು ಮೊದಲಾಗಿ ಎಲ್ಲ ಪ್ರಾಣಿ ಗಳಲ್ಲಿಯೂ ಅಂತರಾತ್ಮನ ವಸತಿಯುಂಟು ಕ್ರಿಮಿ ಕೀಟಕಗಳ ಅಸಂಖ್ಯ ಜೀವ ಸಮುದಾಯಗಳಲ್ಲಿ ಅತಿ ಸೂಕ್ಷ್ಮ ಜೀವಿಗಳಿಗೆ ಬೇರೆ ಕೆಲವು ಜೀವಿಗಳ್ಯ ಗುಡ್ಡದೋಪಾದಿ ತೋರುವವು ಮತ್ತು ಅವುಗಳ ಆಯುರ್ಮರ್ಯಾದೆಯಾ ದರೂ ದೀರ್ಘ ಕಾಲದ್ದೆಂದು ತೋರಿಬರುವದು ಪಕ್ಷಿ,ಸರ್ಪ,ಹಾಗು ಮೀನು ಇವು ಅತಿ ಸಣ್ಣವೂ ಉಂಟು, ಅತಿ ದೊಡ್ಡವೂ ಉಂಟು ಅವುಗಳಿಗಿಂತ ಸಣ್ಣ ಜೀವಗಳ ದೃಷ್ಟಿಯಿಂದ ಅವು ಬಹಳೇ ದೊಡ್ಡವು ಮತ್ತು ಪಕ್ಷಿ ಮೊದಲಾದವುಗಳಿಗಿಂತ ಅತಿ ದೊಡ್ಡ ಶರೀರದ ಪ್ರಾಣಿಗಳು ಇರುವವು ಅವು ಗಳ ದೃಷ್ಟಿಯಲ್ಲಿ ಪಕ್ಷಿ ಮೊದಲಾದವು ಸಣ್ಣದಾಗಿಯೇ ಇರುವವು ಇರಿವೆ ಯಿಂದ ಆನೆಯವರೆಗೆ ಹೆಚ್ಚೆಚ್ಚಿನ ಶರೀರದ ಪ್ರಾಣಿಗಳು ಅನೇಕವಿರುವವು, ಅವುಗಳನ್ನು ನೋಡಿ ತಿಳಿಯಲು ಬರುವದು ಅವುಗಳಲ್ಲಿ ಹಲವು ವರ್ಣದ

ವೆಷ್ಟೋ ಇರುವವು ಅವುಗಳ ರಂಗ, ಆಕೃತಿ, ಡೌಲು, ಮೃದು, ಕಠಿಣತೆ, ದೀಪ್ತಿಗಳಲ್ಲಿಯೂ ಅನೇಕತೆ ಕಂಡುಬರುವದು ಇಂಥ ಅನಂತ ಜೀವಿಗಳನ್ನು ಜಗದೀಶ್ವರನು ನಿರ್ಮಿಸಿರುವನು ಶರೀರ, ಆಹಾರ, ವಾಕ್ಯ, ಸ್ವಭಾವ ಇತ್ಯಾದಿಗಳ ಸಂಬಂಧದಿಂದ ಅವುಗಳಲ್ಲಿ ಭೇದ ಕಂಡುಬಂದರೂ ಎಲ್ಲವುಗಳ ಅಂತರದಲ್ಲಿ ಅಂತರಾತ್ಮನು ಅಭಿನ್ನನಾಗಿಯೇ ಆಶ್ರಯಿಸಿರುವನು ಎಷ್ಟೋ ಪ್ರಾಣಿಗಳು ಭಯಾನಕವಾಗಿರುವವು, ಕೆಲವು ಉಪದ್ರವದಾಯಕಗಳಾಗಿರುವವು, ಇನ್ನೂ ಹಲವು ಹಿಂಸಕವೃತ್ತಿಯುವಾಗಿರುವವು ಇದೆಲ್ಲವನ್ನೂ ಕಾಣಲು ಸೃಷ್ಟಿಯಲ್ಲಿ ಜರಗುತ್ತಿರುವ ಚಮತ್ಕಾರಗಳಿಂದ ಮನಸು ದಂಗುಗೊಳ್ಳುವದಲ್ಲದೆ ನಿರ್ಮಾಪಕ ಪರಮೇಶ್ವರನ ಬಗೆಗೆ ಕೌತುಕವು ಉಂಟಾಗುವದು

ಪಶುಪಕ್ಷಿ ಕೀಟಕಾದಿ ಹಲವು ಪ್ರಾಣಿಗಳ ನಿಜತ್ವವನ್ನು ವಿವರವಾಗಿ ಅದಾರು ತಿಳಿಯುವರು ? ಪ್ರತಿಯೊಬ್ಬನು ತನ್ನ ಮಟ್ಟಿಗೆ ತಾನು ಅಲ್ಪಮಾತ್ರನೆಂದರಿತುಕೊಂಡಿರುವನು ಈ ನವಖಂಡ ಪ್ರಥ್ವಿಯೂ ಅದನ್ನು ಆವರಿಸಿರುವ ಸಪ್ತಸಾಗರಗಳೂ ಬ್ರಹ್ಮಾಂಡ ಮೀರಿ ಇರುವ ಜಲವೂ ಇವೆಲ್ಲವನ್ನು ಅದಾವನು ನೋಡಲು ಸಮರ್ಥನು ? ಆ ಜಲದಲ್ಲಿ ಅಸಂಖ್ಯ ಜೀವಿಗಳಿರುವವು ಆ ಸಣ್ಣದೊಡ್ಡ ಜೀವಿಗಳ ಸ್ಥಿತಿಯನ್ನು ಅದಾರು ವಿಚಾರಿಸುವರು ? 'ಜೀವನವಿದ್ದಲ್ಲಿ ಜೀವವು' ಈ ಮಾತು ಸೃಷ್ಟಿ ಸ್ವಭಾವವಾಗಿರುವದು ಇನ್ನೂ ಇದರ ವಿಚಾರವನ್ನು ಹಲವು ಬಗೆಯಿಂದ ಮಾಡಲು ಬರುವದು ಪೃಥ್ವಿಯ ಗರ್ಭದಲ್ಲಿರುವ ಜಲದಲ್ಲಿ ಅದೆಷ್ಟೋ ಸಣ್ಣದೊಡ್ಡ ಜೀವಿಗಳಿರುವವು ಎಷ್ಟೋ ಪ್ರಾಣಿಗಳು ರೆಕ್ಕೆ ಮೂಡಿದ ಕೂಡಲೆ ಹಾರಿ ಹೋಗುವವು ಅವು ಒಮ್ಮೆ ಆಕಾಶದ ಕಡೆಗೆ ಹಾರಿ ಹೋದವೆಂದರೆ ಪುನಃ ಪೃಥ್ವಿಯನ್ನು ಹೊಂದಲಾರವು ಖೇಚರ, ಭೂಚರ, ವನಚರ, ಹಾಗೂ ಜಲಚರ ಇತ್ಯಾದಿ ಎಂಭತ್ನಾಲ್ಕು ಲಕ್ಷ ಬಗೆಯ ಯೋನಿ ಜನಿತ ಪ್ರಾಣಿಗಳೆಷ್ಟೋ ಇರುವವು ಅವನ್ನೆಲ್ಲ ಅದಾರು ತಿಳಿಯುವರು ? ಉಷ್ಣತೇಜವಿರುವ ಪ್ರದೇಶವನ್ನಷ್ಟುಳಿದು ಉಳಿದೆಲ್ಲ ಸೃಷ್ಟಿಯಲ್ಲಿ ಜೀವಗಳೇ ತುಂಬಿರುವವು ಎಷ್ಟೋ ಪ್ರಾಣಿಗಳು ಕೇವಲ ಕಲ್ಪನೆಯಿಂದಾಗುವವು, ಕೆಲವು ಪ್ರಾಣಿಗಳು ತಪದಿಂದ, ಕೆಲವು ಇಚ್ಛೆಯಿಂದ ಇನ್ನೂ ಕೆಲವು ಉಶ್ಯಾಪದೇಹ

ದಿಂದ ಉಂಟಾಗುವವು ಮಾಯೆಯು ಹಾಗು ದೇವತೆಗಳ ದೇಹ ಧರಿಸಿದ ಕೆಲ ಪ್ರಾಣಿಗಳಿರುವವು ಕ್ರೋಧ, ತಪ, ಉಶ್ಯಾಪಗಳಿಂದ ಎಷ್ಟೋ ದೇಹ ಗಳುಂಟಾಗಿರುವವು ಭಗವಂತನ ಲೀಲೆ ವಿಚಿತ್ರವಾಗಿರುವದು ಮಾಯೆಯ ಗುಣದಿಂದ ಎಲ್ಲವೂ ಉಂಟಾಗುವದು ಈ ಸೃಷ್ಟಿರಚನೆಯಾದರೂ ದೇವನ ವಿಚಿತ್ರ ಲೀಲೆಗಳಲ್ಲೊಂದಾಗಿದೆ ಕೇವಲ ಹೊಟ್ಟೆಯ ಪಾಡಿಗಾಗಿ ನಾಲ್ಕಕ್ಷರ ಕಲಿತ ಮಾನವನು 'ನಾನೇ ಜ್ಞಾನವಂತನು' ಎಂದು ಗರ್ವದಿಂದ ಮೆರೆಯುವದು ಕೇವಲ ವ್ಯರ್ಥವು ಎಲ್ಲರಲ್ಲಿಯೂ ಸರ್ವಾತ್ಮಕನಾಗಿ ವ್ಯಾಪಿಸಿದ ಅಂತರಾತ್ಮನು ಮಾತ್ರ ನಿಜವಾದ ಜ್ಞಾನವಂತನು ಆದರೆ ಅವನ ಮಹಿಮೆಯು ಈ ಮಾನವೀ ಬುದ್ಧಿಗೆ ಅದೆಂತು ಗೋಚರವಾಗುವದು ? ಮೂಲ ಪಂಚ ತತ್ವಗಳು ಹಾಗು ಅಹಂಕಾರ, ಮಹತ್‌ತತ್ವ ಈ ಏಳು ಆವರಣಗಳಿಂದ ಆವೃತ್ತವಾಗಿದ್ದ ಅಂದರೆ ಸಪ್ತಕಂಚುಕವಾದ ಬ್ರಹ್ಮಾಂಡವು ಅದರಂತೆ ಪಿಂಡವು ಹಾಗು ಆ ಪಿಂಡಾಂತರ್ಗದ ಅನಂತ ಜೀವಗಳು ಇವೆಲ್ಲವುಗಳ ಜ್ಞಾನವು ಮಾನವನಿಗೆ ಅಶಕ್ಯವೇ ಸರಿ ತನ್ನ ಪಿಂಡದಲ್ಲಿಯ ವಿಚಾರವೇ ತನಗೆ ತಿಳಿಯುವದಿಲ್ಲವೆಂದ ಮೇಲೆ ಬ್ರಹ್ಮಾಂಡದಲ್ಲಿಯದೆಂತು ಗೊತ್ತಾಗುವದು ? ಸಾಧ್ಯವಿಲ್ಲ

ಜನರು ಅಲ್ಪಜ್ಞಾನದಿಂದ ಅಹಂಕಾರ ವೃತ್ತಿಯುಳ್ಳವರಾಗುವರು ಅಣುರೇಣುಗಳಷ್ಟು ಸಣ್ಣ ಜೀವಿಗಳ ಮಾನದಿಂದ ನಮಗೆ ನಾವು ವಿರಾಟ ಪುರುಷರೆಂದು ಅಂದುಕೊಳ್ಳಬಹುದು ಮತ್ತು ಆ ಜೀವಿಗಳ ಮಾನದಿಂದ ನಮ್ಮ ನೂರು ವರುಷಗಳ ವಯೋ ಮರ್ಯಾದೆಯು ಅತಿ ದೀರ್ಘವಾದದ್ದೆಂದೇ ತಿಳಿಯಬಹುದು ಪರಮೇಶ್ವರನ ಕೃತಿಯು ಧನ್ಯವಾಗಿರುವದು ಮಾನವನಿಗೆ ಆ ದೇವನ ಕೃತಿಯ ಬಗೆಗೆ ಏನೊಂದೂ ಅನುಮಾನ ಮಾಡಲಿಕ್ಕೆ ಬರಲಾರದು ಆದರೂ ದುಷ್ಟ ಅಹಂಕಾರವು ಜೀವನನ್ನು ನಿರರ್ಥಕವಾಗಿ ಕುಣಿಯಲಿಕ್ಕೆ ಹಚ್ಚಿರುವದು ನಮ್ಮಲ್ಲಿಯ ಆ ಅಹಂಕಾರವನ್ನು ಬಿಟ್ಟು ನಾವು ಆ ದೇವ ಕೃತಿಯನ್ನು ಕಾಣಬೇಕು ಆದರೆ ಹಾಗೆ ನೋಡುವದಕ್ಕೆ ನಮ ಬದಕುವಿಕೆಯ ಕಾಲವಾದರೂ ಎಷ್ಟಿರುವದು ? ಸ್ವಲ್ಪಾಯುಷ್ಯ, ಕ್ಷಣಭಂಗುರ ಶರೀರ, ನಾವು ಧರಿಸಿದ ಇಂಥ ಶರೀರವೆಂದು ಬಿದ್ದು ಹೋಗುವದರ ಭರವಸೆಯಿಲ್ಲ ಹೀಗಿದ್ದು ನಾವು ಗರ್ವವನ್ನು ಆದೇಕೆ ಪಡಬೇಕು ? ಈ ಶರೀ

ರವು ನಶ್ವರವು ಹಾಗು ನಿಂದ್ಯ ನೀಚವಾದದ್ದು ಸ್ತ್ರೀಯ ರಜಸ್ವಲೆಯ ದೋಷದಿಂದ ಜನಿತವಾದದ್ದು ಆದುದರಿಂದ ಇದು ಆಧಿ ವ್ಯಾಧಿಗಳಿಗೆ ಗುರಿಯಾಗಿ ಅದರಲ್ಲಿಯೇ ಆಯುಷ್ಯವನ್ನು ಕಳೆದುಕೊಳ್ಳುವದು ಜನರು ಭ್ರಾಮಕತೆಯಿಂದ ದೊಡ್ಡಿಸ್ತನವನ್ನು ಮೆರೆಯಿಸುವರು ಶರೀರ ಸಂಪತ್ತಿಯ ಸ್ಥಿರತೆಯುಎರಡುದಿನಗಳ ಮಟ್ಟಿಗೆ ಇರುವದು ಇಷ್ಟೇ ಅಲ್ಲ ಕ್ಷಣ ಭಂಗುರವಾದದ್ದು ಜನನ ಹಾಗು ಮರಣ ಕಾಲದಲ್ಲಿ ಅನನ್ಯ ತಾಪವನ್ನು ಹೊಂದುವಂತಹದು. ಇಂಥ ಶರೀರವನ್ನು ವಸ್ತ್ರಾಲಂಕಾರಗಳಿಂದ ಶೋಭೆಗೊಳಿಸಿ ಮೆರೆಯಿಸುವದರಲ್ಲಿಯ ಜಾಣತನವು ವ್ಯರ್ಥವಾದುದು ಆದರೂ ದೇಹ ಬಿದ್ದ ಕೂಡಲೆ ದೇಹವು ಬತ್ತಲೆಯ ಸ್ವರೂಪದಲ್ಲಿಯೇ ಹೊರಗೆಳೆಯಲ್ಪಡುವದು ಬಳಿಕ ಅದು ಕೊಳೆತು ದುರ್ಗಂಧವನ್ನು ಹರಡುವದು ಈ ಎಲ್ಲ ಅನವಸ್ಥೆಗಳು ಶರೀರಕ್ಕೆ ಉಂಟಾಗುವವೆಂಬದನ್ನು ವಿವೇಕದಿಂದ ಅರಿತುಕೊಂಡವನೇ ಧನ್ಯನೆಂದು ಹೇಳಬಹುದು ಇದೆಲ್ಲ ತಿಳಿದೂ ಅಹಂಕಾರ ಮದದಿಂದ ವ್ಯರ್ಥಕಲಹಕಾರಿಯಾಗುವದು ಸರಿಯಲ್ಲ ಅಹಂಕಾರದಿಂದುಂಟಾಗುವ ದಾಳಿ ದಂಗೆಗಳನ್ನು ಮುರಿದು ವಿವೇಕದಿಂದ ದೇವನನ್ನು ಶೋಧಿಸುವದೇ ಎಲ್ಲದರಲ್ಲಿಯೂ ಉತ್ತಮವಾಗಿರುವದು "

ಶ್ರೀ ರಾಮ ‖ ೯ ಪಿಂಡೋತ್ಪತ್ತಿ ನಿರೂಪಣೆ ‖ ಗುರುಗಳು ಪಿಂಡೋತ್ಪತ್ತಿಯ ಬಗೆಗೆ ಹೇಳಹತ್ತಿದರು

" ಸೃಷ್ಟಿಯಲ್ಲಿಯ ನಾಲ್ಕು ಪ್ರಾಣಿ ಕೋಟಿಗಳಲ್ಲಿಯ ಪ್ರಾಣಿಗಳ ಸಂಖ್ಯೆಯು ಲೆಕ್ಕವಿಲ್ಲದಷ್ಟಾಗುವದು. ಈ ಎಲ್ಲ ಪ್ರಾಣಿಗಳು ಹುಟ್ಟುವವು, ಸಾಯುವವು ಅವೆಲ್ಲವುಗಳ ಬೆಳವಣಿಗೆ ನೀರಿನಿಂದಲೇ ಆಗುವದು ಈ ಶರೀರವು ಅಂತರಾತ್ಮನನ್ನೊಳಗೊಂಡ ಎಲ್ಲ ತತ್ವಗಳಿಂದಾದ ಗಂಟೆನ್ನುತಿರುವದು ಇದರ ಮೂಲವಾದರೂ ನೀರಿನಲ್ಲಿಯೇ ಇರುವದು ಅನ್ನ ರಸದಿಂದ ದೇಹದಲ್ಲಿ ರಸವು, ದೇಹ ರಸದಿಂದ ರಕ್ತ ರೇತಸ್ಸುಗಳು ಮತ್ತು ಆ ಶುಕ್ಲ ಶೋಣಿತಗಳಿಗಾಗಿ ಮುಸಿಯು ಕಟ್ಟಿದೆ ಅವುಗಳ ಕೋಮಲತೆಯ್ತು ಕಠಿಣ ಸ್ವರೂಪವಾಗಿ ಹಲವು ಅವಯವಗಳು ಜಲದಿಂದಲೇ ಸಿದ್ಧವಾಗುವವು ಅವಯವಗಳು ಪೂರ್ಣತ್ವ ಪಡೆದ ಕೂಡಲೆ ಶಿಶುವಾಗಿ ಜನ್ಮ ತಾಳುವದು ತಾಳಿದ ಜನ್ಮದಿಂದ ಮರಣದವರೆಗೆ ಎಲ್ಲ ಜೀವಗಳ ಕ್ರಮವು

ಒಂದೇ ಆಗಿರುವದು ಬೀಜಗಳು ಜಲದಿಂದ ಅಂಕುರಿಸುವವು ಬೇರು ನೆಲದೊಳಕ್ಕೆ ನೇರುವವು ಅಗ್ರವು ತುದಿಯಂತರದಲ್ಲಿ ಹೊಯ್ದಾಡುವದು ಈ ಪ್ರಕಾರ ಎಲೆ, ಹೂ, ಹಣ್ಣು ಕಾಯಿಗಳಿಂದ ಗಿಡ ವೃಕ್ಷಗಳು ಸಮೃದ್ಧಿಯೊಗುವವು ಇನ್ನು ಹಣ್ಣಿನಿಂದ ಹಿಂದಿರಿಗಿ ವಿಚಾರಿಸಲು ಫಲಕ್ಕೆ ಹೂಗಳು ಹಿರಿಯವು, ಹೂಗಳಿಗೆ ಎಲೆಗಳು ಹಿರಿಯವು, ಎಲೆಗಳಿಗೆ ಕಾಷ್ಟಗಳು ಹಿರಿಯವು, ಇದರಂತೆ ಕಾಷ್ಟಗಳಿಗೆ ಬೇರುಗಳು, ಬೇರುಗಳಿಗೆ ನೀರು, ಹೀಗೆ ಹಿರಿಯವುಗಳಾಗಿವೆ ಕೊನೆಗೆ ನೀರು ಸಂಚರಿಸಿ ಭೂಮಂಡಲದ ಕೌತುಕವನ್ನು ವ್ಯಕ್ತಪಡಿಸುವದು ಆದ್ದರಿಂದ ಎಲ್ಲಕ್ಕೂ ಹಿರಿಯವೆಂದರೆ ಜಗತ್ತೆಂದು ಸ್ಪಷ್ಟವಾಗುವದು ಇನ್ನೂ ಸ್ವಲ್ಪ ಹಿಂದೆ ಹೋಗಿ ವಿಚಾರಿಸಲು ಪೃಥ್ವಿಗೆ ನೀರು ಹಿರಿಯವು, ನೀರಿಗೆ ಅಗ್ನಿಯು, ಅಗ್ನಿಗೆ ವಾಯುವು, ವಾಯು ದೇವನಿಗೆ ಅಂತರಾತ್ಮನ ಸ್ವಭಾವವು ಹಿರಿಯದಾಗುವದು ಒಟ್ಟಿನ ಮೇಲೆ ಅಂತರಾತ್ಮನೇ ಎಲ್ಲಕ್ಕೂ ಹಿರಿಯನಾಗುವನೆಂದು ಸಿದ್ಧವಾಗುವದು ಈ ಅಂತರಾತ್ಮನನ್ನು ಅರಿಯದವನೇ ದುರಾತ್ಮನು ಆ ಅಂತರಾತ್ಮನನ್ನು ಅನುಭವದಿಂದ ತಿಳಿಯದಿದ್ದರೆ ಹತ್ತಿರಿದ್ದ ಪ್ರಾಣಿಯು ಕಣ್ಮರೆಯಾಯಿತು ’ ಎಂಬಂತಾಗಿ ತಿಳಿಯದವನ ಜನ್ಮ ನಿರರ್ಥಕವಾಗುವದು ಆದ್ದರಿಂದ ಎಲ್ಲಕ್ಕೂ ಹಿರಿಯನಾದ ದೇವ ಅಂತರಾತ್ಮನೊಡನೆ ಅನನ್ಯನಾಗಬೇಕು ಅಂದರೆ ಪ್ರಕೃತಿಯ ಸ್ವಭಾವವು ಬದಲಾಗ ಹತ್ತುವದು ಅಂದರೆ ಅವನು ತನ್ನ ಎಲ್ಲ ಕರ್ಮಗಳನ್ನು ಕಾಯ್ದು ಕೊಳ್ಳುವನು ಅವನ ಧ್ಯಾನದಲ್ಲಿ ಭಂಗತೆಯುಂಟಾಗಲಾರದು ನಡೆ ನುಡಿಗಳಲ್ಲಿ ಎಂದೂ ತಪ್ಪಿ ನಡೆ ನುಡಿಯಲಾರನು ಆತನಿಂದ ನಿರ್ಮಿತವಾದವುಗಳನ್ನೆಲ್ಲ ನೋಡಬೇಕು ಸರ್ವಕರ್ತನಿಂದ ಉಂಟಾದವುಗಳನ್ನು ಎಲ್ಲಿಯವರೆಗೆ ನೋಡುವದು? ಆ ಎಲ್ಲಕ್ಕೂ ಹಿರಿಯ ಅಂತರಾತ್ಮನು ಪ್ರಕಾಶಿಸುವವನಲ್ಲಿಯೇ ಭಾಗ್ಯವಿರುವದು ಅಂದರೆ ಅವನೇ ನಿಜವಾದ ಭಾಗ್ಯವಂತನು

ಆತನ ಪ್ರಕಾಶವು ಅಲ್ಪವಾಗಿದ್ದರೆ ಭಾಗ್ಯವೂ ಅಲ್ಪವಾಗುವದು ಅವನ ಚೇತನವು ಪೂರ್ಣವಾದರೆ ಭಾಗ್ಯವೂ ಪೂರ್ಣವಾಗುವದು ಆ ಅಂತರಾತ್ಮ ದೇವನನ್ನು ಅಂದರೆ ನಾರಾಯಣನನ್ನು ನಿರಂತರವಾಗಿ

ಸ್ಮರಿಸತಕ್ಕದ್ದು ಅಂದ ಬಳಿಕ ಆತನ ಲಕ್ಷ್ಮಿ ( ಪ್ರಕೃತಿ )ಯು ಸ್ಮರಣೆ ಮಾಡುವವನಿಂದ ಬಿಟ್ಟು ಎಲ್ಲಿಯೂ ಹೋಗುವದಿಲ್ಲ ನಾರಾಯಣನು ವಿಶ್ವದಲ್ಲೆಲ್ಲ ವ್ಯಾಪಿಸಿ ಬಿಟ್ಟಿರುವನು ಆತನ ಪೂಜೆಯನ್ನು ಮಾಡಬೇಕು ಆವನ ಪೂಜೆಯೆಂದರೆ ಎಲ್ಲ ಭೂತಗಳಲ್ಲಿ ನಾರಾಯಣ ಸ್ವರೂಪವನ್ನೇ ನಿರೀಕ್ಷಿಸುವದು ಮತ್ತು ಎಲ್ಲ ಭೂತಗಳನ್ನು ತೃಪ್ತಿಗೊಳಿಸುವದು ಇವೇ ಆ ನಾರಾಯಣನ ಪೂಜೆಗಳು ಇದರಿಂದ ಉಪಾಸನೆಯೆಂದರೆ ವಿಶ್ವ ಸಂತುಷ್ಟತೆ ವಿಶ್ವ ಪ್ರತಿಪಾಲಕನಾದ ಸರ್ವ ಭೂತಾಂತರಾತ್ಮ ನಾರಾಯಣನನ್ನು ಎಲ್ಲ ಭೂತಗಳಲ್ಲಿ ನೋಡುವದೆಂದರೆ ಎಲ್ಲ ಭೂತ ಗಳಿಗೆ ಸುಖವನ್ನುಂಟು ಮಾಡುವದು ಮತ್ತು ಅವುಗಳನ್ನು ಪ್ರತಿಪಾಲಿ ಸುವದು ಉಪಾಸನೆಯ ಮೂಲವನ್ನು ಶೋಧಿಸಿ ನೋಡಲು ಈ ಪ್ರಕಾರ ಉಪಾಸನೆಯ ವಿಶ್ವದಕ್ಷತೆಯು ಕಂಡು ಬರುವದು ನಾರಾಯಣನ ಲೀಲೆಯು ನಾರಾಯಣನಲ್ಲದವನಿಗೆ ತಿಳಿಯುವದು ಸಾಧ್ಯವಿಲ್ಲ ನೋಡಿದಲ್ಲೆಲ್ಲ ದೇವನ ರೂಪಗಳೇ ಇರುವವು ಈ ದೃಷ್ಟಿಯಿಂದ ನೋಡಿದರೆ ಆತ್ಮಾ ರಾಮನಂತೆಯೇ ಉಪಾಸನೆಯು ವಿಶ್ವ ವ್ಯಾಪಿನಿಯೂ ವಿಶ್ವ ಪಾಲತೆಯೂ ಆಗಿರುವದು

ನನ್ನ ರಾಮೋಪಾಸನೆಯು ಇದಾಗಿರುವದು. ಇದು ಅನುಮಾನ ದಿಂದ ಸಾಧಿಸಲಾರದು ಅಂತರಾತ್ಮಾ ನಾರಾಯಣ ರಾಮ ಇವರ ಉಪಾ ಸನೆಯು ಮೂಲ ಮಾಯೆಯು ಆಚೆಗಿದ್ದ ನಿರಂಜನನೂ ನಿರ್ಗುಣನೂ ವಿಮಲನೂ ಆಗಿರುವ ಬ್ರಹ್ಮನಲ್ಲಿ ಒಯ್ದು ಬಿಡುವದು ಸರ್ವ ಕರ್ಮ ಮಾರ್ಗಗಳು ಅಂತರಾತ್ಮ ದೇವನಿಗಾಗಿ ಇರುವವು ಉಪಾಸನೆಯೂ ಆವ ನಿಗಾಗಿ ಇರುವದು ಉಪಾಸಕನೂ ಅವನ ಜ್ಞಾನವೂ ದೇವನಿಗಾಗಿ ಜ್ಞಾನಿಯೂ ಕೂಡ ದೇವನಿಗಾಗಿ ಇರುವನು ಹಲವು—ಶಾಸ್ತ್ರ–ಮತಗ ಳೆಲ್ಲ ದೇವನೆಂದೇ ಹೇಳುವವು ಮೌನತೆಯೂ, ಬಡಬಡಿಕೆಯೂ, ವ್ಯವ ಸ್ಥಿತ ಅವ್ಯವಸ್ಥಿತಗಳೂ ಮುಂತಾದವೆಲ್ಲವೂ ಜೀವಿಗಳ ಕರ್ಮಕ್ಕನುಸರಿಸಿ ಎಲ್ಲವೂ ಆ ದೇವನಿಂದಲೇ ಮಾಡಲ್ಪಡುವವು ಅವುಗಳಲ್ಲಿ ನಮಗೆ ಆವ ಶ್ಯಕವಾದವುಗಳನ್ನು ಗ್ರಹಿಸಬೇಕು ನಮ್ಮ ಶಕ್ತಿ ಅಧಿಕಾರಿಗಳಿಗನುಸರಿಸಿ

ನಾವು ನಡೆಯಬೇಕು ಅಂದರೆ ಯೋಗ್ಯವಾಗುವದು ಅವಾಹನ ವಿಸರ್ಜನೆಗಳೆಂದು ಹೇಳುವ ವಿಧಾನಗಳು ಹೇಗಾಗುವವೆಂಬುದನ್ನು ನೋಡುವದೇ ದೇವನ ಉಪಾಸನೆಯು ಇದು ಪೂರ್ವಪಕ್ಷವಾಯಿತು ಸಿದ್ಧಾಂತವು ಇನ್ನು ಮುಂದೆ ಹೇಳಲ್ಪಡುತ್ತದೆ ಶಾಸ್ತ್ರ, ಗುರು, ಸ್ವಾನುಭವ ಈ ಮೂರನ್ನು ಏಕತ್ವಕ್ಕೆ ತಂದುಕೊಳ್ಳಬೇಕು ಪಂಚೀಕರಣದಿಂದ ಪಿಂಡ ಬ್ರಹ್ಮಾಂಡ ವಿಚಾರ ಮಾಡಿ ಆ ವಿಚಾರಗಳನ್ನೂ ಬಿಟ್ಟು ಕೊಡಬೇಕು ಮತ್ತು ಮಹಾವಾಕ್ಯದ ವಿಚಾರ ಮಾಡಬೇಕು "

ಶ್ರೀ ರಾಮ || ೧೦ ಸಿದ್ಧಾಂತ ನಿರೂಪಣೆ || ಗುರುಗಳು ಶಿಷ್ಯರಿಗ ಸಿದ್ಧಾಂತ ನಿರೂಪಣೆ ಮಾಡಿದ ಬಗೆಯು - "ಮುಗಿಲಲ್ಲಿ ಎದೆಷ್ಟೋ ಅಗು ಹೋಗುಗಳು ನಡೆದಿರುವವು ಯಾವವೂ ಸ್ಥಿರವಿಲ್ಲದೆ ಗಗನವೊಂದೇ ನಿಜವಾಗಿ ಉಳಿಯುವದು ಅದರಂತೆ ನಿಶ್ಚಲನಲ್ಲಿ ಚಂಚಲವು ಸ್ಥಗಿತಗೊಳ್ಳುವದಿಲ್ಲ ನಿಬಿಡವಾದ ಕತ್ತಲೆಯಿಡಗಲು ಆಕಾಶವೆಲ್ಲ ಕಪ್ಪಗೆ ಕಾಣುವದು ಸೂರ್ಯ ಪ್ರಕಾಶದಿಂದ ಹಳದಿಯಾಗಿ ತೋರುವದು ಚಳಿಬೀಳಲು ಆಕಾಶಕ್ಕೆ ಶೀತವಾಗಿದೆ ಎಂದು ಭಾವನೆಯಾಗುವದು ಉಷ್ಣತೆ ಬೀಸಲು ಅದು ಒಣಗುವದು ಆದರೆ ಇವಾವವೂ ಸ್ಥಿತ್ಯಂತರಗಳು ಗಗನಕ್ಕೆ ಉಂಟಾಗುವದಿಲ್ಲ ಗಗನವು ಇರುವದು ಅದರಂತೆ ಅದು ನಿರಾಭಾಸವಾಗಿದ್ದು ಭಾಸವಾದಂತೆ ಭಾಸಿಸುವದು ಮಿಥ್ಯವು ಜಲ, ವಾಯು ಮುಂತಾದ ತತ್ವಗಳು ಹೊರಗೆ ಪಸರಿಸಿದವೆಂದರೆ ಅವು ಭಾಸವಾಗುವವು ಇದು ಅಂತರ್ಯಾಮದಲ್ಲಿ ತಿಳಿಯುವದು ಚಂಚಲ ನಿಶ್ಚಲಗಳು ಯಾವವೆಂಬದು ಇದೆಲ್ಲ ವಿವರಣೆಯಿಂದ ತಿಳಿಯುವದು ವಿವೇಕದಿಂದ ತತ್ವ ವಿವರಣೆ ಮಾಡಮಾಡುತ್ತಾ ನಿವೃತ್ತಿಪದವು ಒಮ್ಮೆ ದೊರಕಿತೆಂದರೆ ಅನನ್ಯತೆಯುಂಟಾಗುವದು ಹಿರಿಯನೆನ್ನಿಸಿದ ಅಂತರಾತ್ಮನನ್ನು ಶೋಧಿಸಿ ಕಾಣಲು ಚಂಚಲವು ನಿಶ್ಚಲವಾಗುವದು ಮತ್ತು ದೇವ ಹಾಗು ಭಕ್ತ ಎಂಬ ದ್ವೈತ ಭಾವವು ಅಲ್ಲಿಯೇ ಮುಳುಗುವದು ಅಜ್ಞಾನವೃತ್ತಿಯ ಜೊತೆಗೂ ಜ್ಞಾನವೃತ್ತಿಯೂ ಇಲ್ಲದಾಗುವದು ಬಳಿಕ ನಿವೃತ್ತಿಪದವು ಉಳಿಯುವದು ಚಂಚಲವು ಅಲ್ಲಿಯೇ ಅಟ್ಟಿಸುವದು ಇದೇ ಮುಖ್ಯ ಶಕ್ತಿಪಾತವು ಚಂಚಲ ಚಕ್ರದಲ್ಲಿ ಸುತ್ತಾಡುವದು ಮುಗಿಯಿತೆಂದರೆ ನಿರ್ವಿಕಾರಿಯು ನಿವಾಂತವಾಗುವದು

ಚಂಚಲದ ಹಲವು ವಿಭ್ರಮೆಗಳೆಲ್ಲ ಅದರೊಡನೇ ನಷ್ಟವಾಗುವವು ನಿಶ್ಚ
ಲವೂ ಚಂಚಲವೂ ಏಕರೂಪವಾಗುವದೆಂದು ಹೇಳಲಿಕ್ಕೆ ಬರಲಾಗದು
ಮಹಾ ವಾಕ್ಯದ ವಿಚಾರ ಮಾಡುವ ಅಧಿಕಾರವು ಸಂನ್ಯಾಸಿಯಾದವನಿಗೆ
ಮಾತ್ರ ಇರುವದು ಅಥವಾ ಈಶ್ವರೀ ಕೃಪೆಯಾದವನಿಗೆ ಸಾಧ್ಯವು
ಸಂನ್ಯಾಸಿಯೆಂದರೆ ಷಡ್ರಿಪುಗಳನ್ನು ತ್ಯಾಗ ಮಾಡಿದವನು ಅವನು
ಜಿತೇಂದ್ರಿಯನೂ ವಾಸನಾರಹಿತನೂ ಆಗಿರುವನು ಒಟ್ಟಿನ ಮೇಲೆ ಎಲ್ಲ
ವಿಚಾರಯುಕ್ತ ಪುರುಷನೇ ಸಂನ್ಯಾಸಿಯೆಂದು ಹೇಳಬಹುದು ಪರಮಾ
ತ್ಮನ ಪ್ರಸನ್ನತೆಯುಂಟಾದ ಮೇಲೆ ಅನುಮಾನಕ್ಕೆ ಆಸ್ಪದವುಳಿಯಲಾರದು
ವಿಚಾರವಂತರು ವಿಚಾರಗಳನ್ನು ತಿಳಿಯುವರು, ವಿಚಾರವಂತನಲ್ಲಿ
ಯಥಾರ್ಥ ವಿಚಾರಗಳು ಉದಿಸಲು ಅವನು ನಿಸ್ಸಂಗತಿಯನ್ನು ಹೊಂದು
ವನು ದೇಹಾಭಿಮಾನಿಗಳು ದೇಹದ ಅಭಿಮಾನವನ್ನೇ ಬೆಳೆಯಿಸಿಕೊಳ್ಳು
ವರು ಅಲಕ್ಷ್ಯವಸ್ತುವಿನಲ್ಲಿ ಚಿತ್ತವು ಬೆರೆಯಿತೆಂದರೆ ಪೂರ್ವಪಕ್ಷವು
ಹಾರಿ ಹೋಗುವದು. ಹೇತು ರೂಪ ಅಂತರಾತ್ಮನೂ ಅಲ್ಲಿ ಮುಳುಗಿ
ಹೋಗುವನು ಕೊನೆಗೆ ಶುದ್ಧ ಸ್ವರೂಪವೇ ಉಳಿಯುವದು ಆಕಾಶ
ಪಾತಾಳಗಳೆರಡೂ ಕೂಡಿದರೆ ಆಕಾಶವೇ ಸರಿ, ಅವುಗಳ ನಡುವೆ ಪರದೆ
ಯಂತಿರುವ ದೃಶ್ಯ ವಸ್ತುವನ್ನು ತೆಗೆದು ನೋಡಲು ಆಕಾಶ-ಪಾತಾಳಗಳು
ಒಂದೇಯಾಗಿ ತೋರುವವು ಆಕಾಶವು ಒಂದೇ ಅದು ಅಖಂಡವಾಗಿರು
ವದು ಮನಸ್ಸು ಯಾವಾಗಲೂ ಉಪಾಧಿಗಳನ್ನು ಮುಂದಿಟ್ಟುಕೊಂಡು
ನೋಡುವ ಚಟವುಳ್ಳದ್ದಾಗಿದೆ ಆದರೆ ಉಪಾಧಿಗಳ ನಿರಾಸವಾದ ಮೇಲೆ
ಶಬ್ದವೇ ಉಳಿಯಲಾರದು ಗಗನದಂತಿರುವ ಬ್ರಹ್ಮವಸ್ತುವು ಶಬ್ದ, ಕಲ್ಪನೆ,
ಮನ, ಬುದ್ಧಿ, ಇವುಗಳ ಆಚೆಯ ಕಡೆಗೇ ಇರುವದು ಇದನ್ನು ಅಂತರ್ಯಾ
ಮದಲ್ಲಿ ವಿಚಾರ ಮಾಡಿ ನೋಡಬೇಕು ಅಂದರೆ ತತ್ಕ್ಷಣವೇ ತಿಳಿಯು
ವದು ಮುಂದೆ ಈ 'ತಿಳಿಯುವದು' ಎಂಬ ಶಬ್ದವೂ ಉಳಿಯುವದಿಲ್ಲ
ಯಾಕಂದರೆ ತಿಳಿದಿರುವದೆಲ್ಲವೂ ವ್ಯರ್ಥವಾಗಿ ಹೋಗುವದು ತಿಳಿಯುವ
ದೆಂಬ ಮಾತೂ ಸಹ ಬ್ರಹ್ಮನಲ್ಲಿ ಒಪ್ಪಿಗೆಯಾಗದು ಇಂಥ ಆ ಸೂಕ್ಷ್ಮ
ಅನುಭವವನ್ನು ಶಬ್ದಗಳಿಂದ ಹೇಳಲಿಕ್ಕೆ ಬರಲಾರದು ವಾಕ್ಯದ ಅರ್ಥ
ವನ್ನು ನೋಡಿದಂತೆ ವಾಚ್ಯಾಂಶವು ಸಿಗುವದು ಅದರ ಮನನ ಮಾಡಲು

ಲಕ್ಷ್ಯಾಂಶವು ವಿದಿತವಾಗಿ ವಾಚ್ಯಾಂಶವು ಹಾರಿ ಹೋಗುವದು ಬಳಿಕ ಲಕ್ಷ್ಯಾಂಶವೂ ಕೂಡ ಅಲಕ್ಷ್ಯ ವಸ್ತುವಿನಲ್ಲಿ ಮುಳುಗುವದು ಇದನ್ನು ತಿಳಿದು ಮುಂದೆ ಯಾರಾದರೂ ಮಾತಾಡಿರಿ ನೋಡೋಣ ? ಮಾತಾಡಲು ಬರಲಾರದು ಮಹಾ ವಾಕ್ಯದ ಲಕ್ಷ್ಯಾಂಶವು ಸಹ ಅಲಕ್ಷ್ಯ ವಸ್ತುವಿನಲ್ಲಿ ಅಂದರೆ ಬ್ರಹ್ಮರೂಪದಲ್ಲಿ ಮುಳುಗಿದ ಮೇಲೆ ಮಾತಾಡುವವರಾರು ? ಜ್ಞಾನಿಯ ೨ ಶಾಶ್ವತವನ್ನು ಹುಡುಹುಡುಕುತ್ತ ಜ್ಞಾನ ಸ್ವರೂಪ ಹೊಂದುವನು ವಿಕಾರ ತ್ಯಾಗ ಮಾಡುವದರಿಂದ ನಿರ್ವಿಕಾರನಲ್ಲಿ ಕೂಡುವನು. ದುಃಸ್ವಪ್ನಗಳು ಎಚ್ಚರಾದ ಕೂಡಲೆ ನಾಶವಾಗುವವು ಪುನಃ ಅವುಗಳನ್ನು ಸ್ಮರಣಕ್ಕೆ ತಂದುಕೊಂಡರೂ ಕೂಡ ಅವು ಮಿಥ್ಯಗಳೆಂದೇ ಅನುಭವವಾಗುವದು ಜ್ಞಾನಿಯು ನಿಶ್ಚಲಪದದಲ್ಲಿ ಸ್ಥಿತನಾದ ಮೇಲೆ ದೇಹವು ಪ್ರಾರಬ್ಧಯೋಗದಿಂದ ಉಳಿದರೂ ಅಳಿದರೂ ಆವನು ಅದನ್ನು ಗಣನೆಗೆ ತರುವದಿಲ್ಲ ಜ್ಞಾನಿಯ ವಾಸನಾ ಬೀಜಗಳು ಜ್ಞಾನಾಗ್ನಿಯಿಂದ ಹುರುಪುಳಿಸಿದವೆಂದರೆ ಮುಂದೆ ಅವು ಚಿಗಿಯುವದಿಲ್ಲ ಆತ್ಮ ನಿಶ್ಚಯದ ಬುದ್ಧಿಯಿಂದ ಮಾಡಿದವು ಕೃತಕಾರ್ಯಗಳಾಗುವವು ಚಂಚಲವು ನಶಿಸುವದು ಪಂಚಭೌತಿಕಗಳ ಧ್ಯಾನವನ್ನು ಮಾಡುವವನು ಪಂಚ ಭೌತಿಕಗಳಲ್ಲಿಯೇ ಇದ್ದು ಜನನ–ಮೃತ್ಯುಗಳಿಗೆ ಗುರಿಯಾಗುವನು ಚಂಚಲ ಅಂತರಾತ್ಮನ ಧ್ಯಾನ ಮಾಡುವವನು ಚಂಚಲನಾಗುವನು ಮತ್ತು ನಿಶ್ಚಲ ಪರಬ್ರಹ್ಮನ ಧ್ಯಾನ ಮಾಡುವವನು ನಿಶ್ಚಲ ಪದವನ್ನು ಹೊಂದುವನು ಕೊನೆಯವರೆಗೆ ಹೋಗಿ ನಿಶ್ಚಲ ಬ್ರಹ್ಮನನ್ನು ಹೊಂದಿದ ಅಂತರ್ನಿಷ್ಠನಿಗೆ ಮಿಥ್ಯಾಮಾಯೆಯಿಂದೇನಾಗುವದು ? ಮಾಯೆಯು ಮಿಥ್ಯವಾದದ್ದು ಎಂಬುದನ್ನು ವಿಚಾರದಿಂದ ಅರಿತು ವಿಚಾರವನ್ನು ದೃಢವಾಗಿ ಮಾಡಿಕೊಂಡದ್ದಾದರೆ ಹಿಂದಿನಿಂದ ಮಾಯೆಯ ಅಂಜಿಕೆಯು ಇಲ್ಲದಂತಾಗಿ ಅಭಯಪ್ರಾಪ್ತಿಯಾಗುವದು ಉಪಾಸನೆಗಳಿಂದ ದೊರೆಯುವ ಪರಮ ಲಾಭವೆಂದರೆ ಇದೇ ಆಗಿರುವದು ಅಂತರಾತ್ಮನ ಉಪಾಸನೆಯಿಂದ ನಿಶ್ಚಲಪದ ದೊರಕುವದು,

ಇನ್ನು ಉಪಾಸನೆಯು ಉತ್ತೀರ್ಣತೆಯಾಗಬೇಕಾದರೆ ಭಕ್ತ ಜನರ ಹೆಚ್ಚಳವಾಗಬೇಕು ಎಲ್ಲರ ಅಂತರ್ಯದಲ್ಲಿ ವಿವೇಕೋದಯವಾಗಬೇಕು. ಈ ಬಗೆಯಾಗಿ ಭಕ್ತರಿಂದ ಉಪಾಸನೆಯ ಮಾರ್ಗವನ್ನು ಬೆಳೆಯಿಸಿದ್ದಾದರೆ ಉಪಾಸನೆಯು ಋಣದಿಂದ ಪಾರಾದಂತಾಗುವದು ”

ಇತಿ ದಾಸಬೋಧೆ ೧೫ನೆಯ ದಶಕ ಮುಗಿದುದು





|| ಜಯ ಜಯ ರಘುವೀರ ಸಮರ್ಥ ||

## ೧೬ನೆಯ ದಶಕ (ಸಪ್ತತಿನ್ವಯ)

ಶ್ರೀ ರಾಮ ಸಮರ್ಥ || ೧ ವಾಲ್ಮೀಕಿ ಸ್ತವನ || ಗುರುಗಳ ಶಿಷ್ಯರಿಗೆ

''ವಾಲ್ಮೀಕ ಮಹರ್ಷಿಯು ಎಲ್ಲ ಋಷಿಗಳಲ್ಲಿ ಪುಣ್ಯ ಶ್ಲೋಕನೆನ್ನಿಸಿದ ಋಷಿಯು ಧನ್ಯನಾದ ಆತನಿಂದ ತ್ರಿಲೋಕಗಳು ಪುನೀತವಾದವು ಇಡೀ ಸೃಷ್ಟಿಯನ್ನು ಶೋಧಿಸಿದರೂ ಭವಿಷ್ಯ ಸಂಗತಿಗಳುಳ್ಳ ಒಂದುನೂರು ಕೋಟಿ ಶ್ಲೋಕಗಳುಳ್ಳ ಅದ್ಭುತ ಗ್ರಂಥವು ಈ ಮಹರ್ಷಿಯು ಬರೆದ ರಾಮಾಯಣದ ಹೊರತು ಇನ್ನಾವದೂ ದೊರೆಯುವದಿಲ್ಲ ಯಾವದೊಂದು ಭವಿಷ್ಯದ ಸಂಗತಿಯು ನಿಜವಾಗಿ ವರ್ತಿಸಿದರೆ ಆ ಭವಿಷ್ಯವಾದಿಯ ಕೀರ್ತಿಯ ಪರಾಕು ಜಗತ್ತಿನಲ್ಲೆಲ್ಲ ಯಾವಾಗಲೂ ಕೇಳಬರುವದು ಶಾಸ್ತ್ರಾಧಾರವಿಲ್ಲದೆ ಶ್ರೀ ರಾಮನ ಅವತಾರದ ಮೊದಲೇ ರಾಮ ಕಥೆಯನ್ನು ವರ್ಣಿಸಿದ ವಾಲ್ಮೀಕಿಯ ವಾಗ್ವಿಲಾಸಕ್ಕೆ ಶ್ರೀಶಂಕರನು ಸಂತುಷ್ಟತೆ ಹೊಂದಿದನು ಬಳಿಕ ಆ ದೇವನು ವಾಲ್ಮೀಕಿಯ ಶತಕೋಟಿರಾಮಾಯಣವನ್ನು ಮೂರೂ ಲೋಕಗಳಿಗೆ ಹಂಚಿಕೊಟ್ಟನು, ವಾಲ್ಮೀಕಿಯ ಕವಿತ್ವದ ಪೂರ್ಣ ರಹಸ್ಯವು ಶಂಕರನೊಬ್ಬನಿಗೆ ತಿಳಿಯಿತಲ್ಲದೆ ಇನ್ನಿತರರಿಗೆ ತಿಳಿಯಲಿಲ್ಲ ಆದರೂ ಶ್ರೀ ರಾಮನ ಭಕ್ತರಿಗೆ ಶ್ರೀ ವಾಲ್ಮೀಕಿಯು ಬರೆದ ರಾಮಾಯಣ ಗ್ರಂಥ ದರ್ಶನ ಪಠಣಗಳಿಂದ ಅತೀವ ಸಮಾಧಾನವೆನ್ನಿಸುವದು ವಾಲ್ಮೀಕಿಯ ಮೊದಲೂ ತರುವಾಯವೂ ಅದೆಷ್ಟೋ ಋಷಿಗಳು ಕವಿತ್ವರಚಿಸಿದರು ಆದರೆ ವಾಲ್ಮೀಕಿಯಂಥ ಮಹಾನ್ ಕವೀಶ್ವರರು ಹಿಂದು ಮುಂದು ಎಂದೂ ಆಗಲಿಲ್ಲ ಮತ್ತು ಆಗುವದಿಲ್ಲ ಪೂರ್ವ ವಯಸ್ಸಿನಲ್ಲಿ ಆ ವಾಲ್ಮೀಕಿಯ ಕೈಯಿಂದ ಎಷ್ಟೋ ಕ್ರೂರ ಕರ್ಮಗಳು ಎಸಗಲ್ಪಟ್ಟವು ಆದರೆ ಮುಂದೆ ಆವನು ರಾಮನಾಮದಿಂದ ಪುನೀತನಾದನು ದೃಢ ವ್ರತದಿಂದ ರಾಮ ನಾಮ ಸ್ಮರಣೆಯನ್ನು ಆತನು ಮಾಡುತ್ತಿರಲು ಅವನ ಪುಣ್ಯಕ್ಕೆ ಎಣೆಯೇ ಇಲ್ಲದಾಯಿತು ರಾಮನಾಮದಲ್ಲಿಯ ಎರಡೂ ಅಕ್ಷರಗಳನ್ನು ಆತನು ಅದಲುಬದಲಾಗಿ ಉಚ್ಚಾರ ಮಾಡ ಮಾಡುತ್ತಾ ಇರಲು ಅವನಲ್ಲಿ ಸಂಚಿತವಾಗಿದ್ದ ಪರ್ವತಪ್ರಾಯದ ಪಾಪಗಳೆಲ್ಲ ಭಗ್ನವಾಗಿ ಕಳಚಿ ಹೋದವು

ಮತ್ತು ಆತನ ಪುಣ್ಯ ಪತಾಕೆಯು ಬ್ರಹ್ಮಾಂಡದ ಶಿಖರವನ್ನೇರಿ ನಿಂತು ಮೆರೆಯಹತ್ತಿತು ಆತನು ತಪಸ್ಸು ಮಾಡಿದ ವನವೂ ಕೂಡ ಅವನಿಂದ ಪಾವಿತ್ರ್ಯತೆ ಹೊಂದಿತು ಅವನ ತಪಃ ಸಾಮರ್ಥ್ಯದಿಂದ ಒಣ ಕಟ್ಟಿಗೆ ಕೂಡ ಚಿಗುರೊಡೆಯಿತು

ಈ ವಾಲ್ಮೀಕಿಯು ಮೊದಲು ನರವಧೆಯಂಥ ನಿಂದಕರ್ಮ ಮಾಡುವ ನೀಚ ಬೇಡನಾಗಿದ್ದನು ಆದರೆ ಅವನೇ ಮುಂದೆ ದೊಡ್ಡ ದೊಡ್ಡ ಜ್ಞಾನಿಗಳಿಗೂ ಋಷಿ ಶ್ರೇಷ್ಠರಿಗೂ ವಂದ್ಯನಾಗಿಬಿಟ್ಟನು ವೈರಾಗ್ಯ ಹಾಗು ಅನುತಾಪಗಳ ಎದುರು ಪಾಪಗಳು ಉಳಿಯುವದೆಂದಿಗೂ ಸಾಧ್ಯವಿಲ್ಲ ದೇಹಾಂತವೇ ಆಗುವಂಥ ಕಠೋರವಾದ ಆತನ ತಪಶ್ಚರ್ಯೆಯಿಂದ ಅವನಿಗೆ ಪುನರ್ಜನ್ಮ ಲಭಿಸಿತು, ಮತ್ತೂ ಆ ಜನ್ಮವೂ ಕೂಡ ಪುಣ್ಯರೂಪವುಳ್ಳದ್ದಾಯಿತು 'ವಲ್ಮೀಕ'ವೆಂದರೆ ಹುತ್ತಿಗೆ ಹೆಸರುಂಟು ಇವನು ಏಕಾಸನಸ್ಥನಾಗಿ ಹಲವಾರು ವರುಷ ಘೋರ ತಪಸ್ಸು ಮಾಡ ಮಾಡಹತ್ತಿರಲು ಅವನ ಇಡೀ ಶರೀರವೇ ಹುತ್ತಿನ ಸ್ವರೂಪವನ್ನು ಹೊಂದಿತು ಆದ್ದರಿಂದಲೇ ಇವನಿಗೆ 'ವಾಲ್ಮೀಕ' ಎಂಬ ಹೆಸರು ಪ್ರಾಪ್ತವಾಯಿತು ಆತನ ತೀವ್ರ ತಪಶ್ಚರ್ಯವನ್ನು ಕಂಡು ಎಷ್ಟೋ ತಪಸ್ವಿಗಳ ಹೃದಯಗಳ ಕಳವಳಿಕೆಯುಂಟಾಯಿತು ಈತನು ತಪಸ್ಸಿನಿಂದ ಶ್ರೇಷ್ಠ ತಪಸ್ವಿಯು: ಕವಿತ್ವದಿಂದ ಶ್ರೇಷ್ಠ ಕವೀಶ್ವರನು ಈತನ ಅಸಂದಿಗ್ಧ ಕವಿತ್ವವಾಣಿಗಳೂ, ನಿಷ್ಠಾವಂತರಲ್ಲಿಯ ಈತನ ಶ್ರೇಷ್ಠತೆಯೂ, ಶ್ರೀ ರಾಮ ಭಕ್ತರಲ್ಲಿಯ ಈತನ ನಿಸ್ಸೀಮ ಪ್ರೇಮವೂ ಮತ್ತು ಈತನಲ್ಲಿಯ ಅಸಾಮಾನ್ಯ ಧಾರಣಾಶಕ್ತಿಯೂ ಮುಂತಾದವೆಲ್ಲವುಗಳ ನಿರೀಕ್ಷಣೆಯಿಂದ ಸಾಧಕರ ಬುದ್ಧಿಯು ವೃದ್ಧಿಂಗಿತವಾಗಿ ಧೃಡತೆಗೊಳ್ಳುವದು ಇಂಥ ಸಮರ್ಥ ಶ್ರೀ ರಾಮ ಪ್ರಭುವಿನ ಪುಣ್ಯ ಪ್ರಕಾಶನ ಕರ್ತೃ ಕವೀಶ್ವರ ವಾಲ್ಮೀಕಿ ಮಹರ್ಷಿಯು ಧನ್ಯ ಧನ್ಯನು! ಆ ವಾಲ್ಮೀಕಿ ಮಹರ್ಷಿಗಳಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳು ಆ ಕವೀಶ್ವರನಿಂದ ಕವಿತ್ವ ರಚನೆಯಾಗದಿದ್ದರೆ ಶ್ರೀ ರಾಮ ಕಥೆಯು ನಮಗೆಂದಿಗೂ ದೊರೆಯುತ್ತಿದ್ದಿಲ್ಲ ಆ ಮಹರ್ಷಿಯೇ ಶ್ರೀ ರಾಮನ ಕೀರ್ತಿ ದುಂದುಭಿಯ ಧ್ವನಿಯನ್ನು ಬ್ರಹ್ಮಾಂಡದಲ್ಲೆಲ್ಲ ತುಂಬಿಬಿಟ್ಟನು ಇವನಿಂದಲೇ ರಾಮ ಭಕ್ತರು ಸುಖಿಗಳಾದರು ತನ್ನ ಜನ್ಮವನ್ನು ಸಾರ್ಥಕಗೊ

ಳಿಸಿಕೊಂಡ ಈ ಪವಿತ್ರಾತ್ಮಕನು ಶ್ರೀ ರಾಮನ ಯಶಸ್ಸಿನಲ್ಲಿ ಎಲ್ಲ ಲೋಕಗಳನ್ನು ಮಗ್ನಗೊಳಿಸಿ ಎಲ್ಲರನ್ನೂ ಉದ್ಧರಿಸಿದನು. ವಾಲ್ಮೀಕಿಯಂತೆ ಆಗಿ ಹೋದ ಇನ್ನಿತರ ರಾಮ ಭಕ್ತರಿಗೆಲ್ಲರಿಗೂ ಶ್ರೀ ರಘುರಾಮ ದಾಸನಾದ ನಾನು ಆ ದೇವನ ದಾಸಾನುದಾಸನಾಗಿರುವೆನು "

ಶ್ರೀ ರಾಮ ‖ ೨ ಸೂರ್ಯ ಸ್ತವನ ‖ ಗುರುಗಳು ಶಿಷ್ಯರಿಗೆ — "ಸೂರ್ಯವಂಶವು ಎಲ್ಲ ವಂಶಗಳಲ್ಲಿ ಶ್ರೇಷ್ಠವೆನ್ನಿಸಿ ಪರಮಧನ್ಯತೆ ಪಡೆದಿರುವದು ಈ ವಂಶಕ್ಕೆ ಸೂರ್ಯ ಭಗವಾನ್‌ನೇ ಆದ್ಯನು ಹಾಗು 'ಪೂರ್ವಜನು ಆತನ ತೇಜ ಪ್ರಕಾಶಗಳು ವ್ಯಾಪಿಸಿ ಭೂಮಂಡಲವು ಬೆಳಗುತ್ತಿರುವದು ಕಲೆಗಳಿಂದ ಚಂದ್ರನಿಗೆ ಕ್ಷಯ—ವೃದ್ಧಿಗಳುಂಟು ಸೂರ್ಯನೆದರು ಆ ಕಲಾವಂತನು ನಿಸ್ತೇಜನಾಗುವನು ಅಂದ ಮೇಲೆ ಸೂರ್ಯನ ಯೋಗ್ಯತೆಯು ಆದಾರಿಗೂ ಬರಲಾರದು ಇವನಿಂದಲೇ ಜಗತ್ತಿನ ಪ್ರಾಣಿ ಮಾತ್ರಗಳಿಗೆಲ್ಲ ಪ್ರಕಾಶವು ಎಲ್ಲ ಬಗೆಯ ಸುಗಮ ದುರ್ಗಮ ನಿತ್ಯ ನೇಮಗಳೂ, ಉತ್ತಮಾದಿ ನಾನಾಧರ್ಮ—ಕರ್ಮಗಳೂ, ಸೃಷ್ಟಿಯಲ್ಲಿ ನಡೆಯುತ್ತಿರುವವು ವೇದ—ಶಾಸ್ತ್ರ—ಪುರಾಣಾದಿಗಳೂ, ಯಂತ್ರ—ಮಂತ್ರ ಸಾಧನಗಳೂ, ಸ್ನಾನ-ಸಂಧ್ಯಾ-ಅರ್ಚನಾದಿ ನಿತ್ಯ ವಿಧಾನಗಳೂ ಸೂರ್ಯನಿಲ್ಲದೆ ಸಾಗವು ಜಪತಪಯೋಗಧ್ಯಾನಗಳೂ,ಮತ-ಪಂಥಗಳಿಗನುಸರಿಸಿದಕರ್ಮಕ್ರಿಯೆಗಳೂ ಪ್ರಾಪಂಚಿಕ ಪಾರಮಾರ್ಥಿಕಗಳೆಲ್ಲ ಕರ್ಮಗಳೂ ರವಿಯುದಯದ ಧೋರಣವನ್ನನುಸರಿಸಿ ಆತನ ಅಧಿಷ್ಠಾನದಿಂದಲೇ ಜರಗುವವು ಸೂರ್ಯನು ನಯನಾಧಿಷ್ಠಿತನು ಕಣ್ಣುಗಳಿಲ್ಲದೆ ಹೋದರೆ ಜಗತ್ತೇ ಶೂನ್ಯವು ಅಂತೆಯೇ ಸೂರ್ಯಪ್ರಕಾಶ ವಿರದಿರಲು ಜಗತ್ತೇ ಅಂಧಃಕಾರ ಮಯವು ಆದ್ದರಿಂದ ಸೂರ್ಯನಿಲ್ಲದೆ ಏನೊಂದೂ ಕಾರ್ಯಗಳು ಘಟಿಸುವದಿಲ್ಲ ಹುಟ್ಟುಗುರುಡನೊಬ್ಬನಲ್ಲಿ ಕವಿತ್ವ ಸಾಮರ್ಥ್ಯವಿದ್ದುದಾದರೆ ಎಂದೂ ಸೂರ್ಯನನ್ನು ಕಾಣದ ಅವನಲ್ಲಿ ಕಾವ್ಯ ಸ್ಫೂರ್ತಿಯು ಸೂರ್ಯನಿಂದಲೇ ಉಂಟಾಗುವದು ಸೂರ್ಯನೇ ಬುದ್ಧಿ ಪ್ರಕಾಶಕನು. ಮಾನವನ ಬುದ್ಧಿಯಲ್ಲಿ ರವಿತೇಜವಿರದೆ ಹೋದರೆ ಆ ಮಾನವನ ಮತಿಯು ಬೆಳಗಲಾರದು ರವಿ—ಚಂದ್ರರೀರ್ವರ ಪ್ರಕಾಶಗಳು ಕ್ರಮವಾಗಿ ಉಷ್ಣ ಶೀತಗಳಾಗಿರುವವು ಶರೀರದಲ್ಲಿಯ ಉತಿಷ್ಣಯು ಲಯವಾಗಲು

ಆ ದೇಹದ ಕ್ರಿಯೆಗಳೆಲ್ಲವೂ ನಿಂತು ಹೋಗುವವು ಆದುದರಿಂದ ಸೂರ್ಯನಿಲ್ಲದೆ ಏನೊಂದು ಚಲನವಲನೆಯಿಲ್ಲೆಂಬ ವಿಚಾರವನ್ನು ಮನಸಿನಲ್ಲಿ ತಂದುಕೊಳ್ಳಬೇಕು ಹರಿ–ಹರ ಶಿವ–ಶಕ್ತಿ ಮುಂತಾಗಿ ಎಷ್ಟೋ ಅವತಾರಗಳು ಆಗಿ ಹೋಗಿವೆ ಆ ಅವತಾರ ಕಾಲಗಳಿಗಿಂತಲೂ ಮೊದಲೇ ಸೂರ್ಯನ ಅಸ್ತಿತ್ವವಿದ್ದಿತು ಈಗಲೂ ಉಂಟು ಜಗದುದ್ಧಾರಾರ್ಥವಾಗಿ ಅವತರಿಸಿದ ದೇವತೆಗಳೆಲ್ಲ ಮಾನವ ದೇಹ ಧರಿಸಿಕೊಂಡು ಸಂಸಾರಕ್ಕೆ ಬಂದರು ಅವರೆಲ್ಲರೂ ಸೂರ್ಯನ ನಿಂಯಂತ್ರತೆಯಲ್ಲಿಯೇ ಸಂಸಾರ ಸಾಗಿಸಿಕೊಂಡರು ಮತ್ತು ತಾವು ಧರಿಸಿದ್ದ ಶರೀರಗಳನ್ನು ಇಲ್ಲಿಯೇ ಸೂರ್ಯನ ಸಮ್ಮುಖದಲ್ಲಿಯೇ ಬಿಟ್ಟು ಹೋದರು ಚೆಲುವ ಚಂದ್ರನು ಚಂಚಲ ಲಕ್ಷ್ಮಿಯ ಒಡಹುಟ್ಟಿದವನು ಹಿಂದಕ್ಕೆ ದೇವ–ದಾನವರು ಸಮುದ್ರವನ್ನು ಕಡೆದು ಆದರಲ್ಲಿಂದ ತೆಗೆದ ಹದಿನಾಲ್ಕು ರತ್ನಗಳಲ್ಲಿ ಚಂದ್ರನೂ ಲಕ್ಷ್ಮಿಯೂ ಒಂದೊಂದು ರತ್ನಗಳು ಸೂರ್ಯನು ಜಗತ್ತಿಗೆ ಕಣ್ಣಿನಂತೆಯೇ ಇರುವನೆಂದು ಎಲ್ಲರೂ ಒಪ್ಪಿಕೊಳ್ಳುವರು ಆದ್ದರಿಂದ ದಿವಾಕರನಾದ ಈ ಸೂರ್ಯನು ಪರಮ ಶ್ರೇಷ್ಠನೆಂದು ತಿಳಿಯಬೇಕು ಇವನಾದರೂ ಸಮರ್ಥನೊಬ್ಬನ ಆಜ್ಞಾಧೀನನು ಆ ಸಮರ್ಥನ ಹೇಳಿಕೆಯಂತೆ ಈತನು ಲೋಕೋಪಕಾರಕ ಕ್ರಿಯೆಗಳನ್ನು ಮಾಡಹತ್ತಿರುವನು ಆ ಸಮರ್ಥ ಪರಮಾತ್ಮನು– 'ನೀನು ನಿತ್ಯವೂ ಅಪಾರವಾದ ಆಕಾಶ ಮಾರ್ಗದಲ್ಲಿ ಸಂಚರಿಸುತ್ತಿರು' ಎಂದು ಸೂರ್ಯನಿಗೆ ಅಪ್ಪಣೆ ಕೊಟ್ಟಿರುವನು ನಿಯಂತನ ಅಪ್ಪಣೆಯನ್ನು ಉಲ್ಲಂಘಿಸದೆ ಅಂದಿನಿಂದಲೂ ಏನೋ ಇಂದಿನವರೆಗೆ ಸೂರ್ಯನು ತನ್ನ ಲೋಕೋಪಕಾರದ ಕೆಲಸ ನಡಿಸಿಯೇ ಇರುವನು ಇದರಿಂದ ಜಗತ್ತಿಗೆ ಸೂರ್ಯನು ಮಾಡುತ್ತಿರುವ ಉಪಕಾರವು ಅಷ್ಟಿಷ್ಟೆಂದು ಹೇಳಲು ಯಾರಿಗೂ ಬರುವಂತಿಲ್ಲ ದಿನದಲ್ಲಿ ಕೆಲಹೊತ್ತು ಸೂರ್ಯನು ಮರೆಯಾಗಲು ಎಲ್ಲ ಕಡೆಯಲ್ಲಿ ಕತ್ತಲೆ ಮುಸುಕಿ ಎಲ್ಲರ ಸಾರಾಸಾರ ವಿಚಾರಗಳು ಕುಂಠಿತವಾದವು ಸೂರ್ಯನಿಲ್ಲದಾಗ ಅಂದರೆ ರಾತ್ರಿ ಕಾಲದಲ್ಲಿ ಕಳ್ಳರ ಹಾಗು ದಿವಾಭೀತವೆನ್ನಿಸುವ ಗೂಬೆಗಳ ಸಂಚಾರ ಮಾತ್ರ ನಡೆಯುವದು ತೇಜೋರಾಶಿ ಸೂರ್ಯನ ಮುಂದೆ ಯಾರ ಆಟವೂ ಸಾಗದು ಅಂಥವನು ಇನ್ನಾವನೂ ಇರುವದಿಲ್ಲ ಇಂಥ ಸರ್ವೋಪಕಾರಕ ಸೂರ್ಯ ಮಹಾಪ್ರಭುವು ಶ್ರೀ ರಾಮಚಂದ್ರನ ಸದ್ವಂಶಕ್ಕೆ ಆಧ್ಯನು ಆ

ಪ್ರಭಾಕರನ ಅಗಾಧವಾದ ಮಹಿಮೆಯನ್ನು ಐದಾವ ಮಾನವನೂ ತನ್ನ ಮುಖದಿಂದ ವರ್ಣಿಸಲು ಸಮರ್ಥನಾಗಲಾರನು

ಶ್ರೀ ರಘುರಾಮಚಂದ್ರನ ವಂಶವು ಅನಾದಿಯಾದದ್ದು ಹಾಗು ಅನನ್ಯವಾದ ಘನತೆಯುಳ್ಳದ್ದು ಆ ವಂಶದಲ್ಲಿ ಉತ್ತರೋತ್ತರ ಮಹಿಮಾಸ್ಪದರಾದ ಘನವಂತ ವಿಭೂತಿಗಳೇ ಭೂಷಿತರಾಗಿ ಮೆರೆದರು

ಶ್ರೀ ರಾಮ ಭಕ್ತರ ಸಮುದಾಯದಲ್ಲಿ ನನ್ನ ಚಿತ್ತವು ನೇರಿಕೊಂಡಿರುವದು ಇಂತು ಅಂತರ್ಭಾವಯುಕ್ತನಾಗಿದ್ದರೂ ಆ ಸದ್ವಂಶದಮಹತ್ವವನ್ನು ವರ್ಣನೆ ಮಾಡುವಲ್ಲಿ ನಾನು ವಾಗ್ದುರ್ಬಲನೇ ಆಗಿರುವೆನು ಆ ವಂಶಾದ್ಯ ಸೂರ್ಯನಿಗೆ ನಮಸ್ಕಾರ ಮಾಡುವದರಿಂದ ಎಲ್ಲ ಪಾಪಗಳ ಪರಿಹಾರವಾಗುವದು ನಿತ್ಯ ನಿರಂತರವಾಗಿ ಸೂರ್ಯ ದರ್ಶನ ಕೊಳ್ಳುವದರಿಂದ ಹೃದಯದಲ್ಲಿ ಸ್ಫೂರ್ತಿಯು ಮತ್ತಿಷ್ಟು ಇನ್ನಿಷ್ಟು ವರ್ಧಿಸುತ್ತ ಹೋಗುವದು"

ಶ್ರೀ ರಾಮ ॥ ೩ ಪೃಥ್ವೀಸ್ತವನ ॥ ಗುರುಗಳು ಶಿಷ್ಯರಿಗೆ—"ಸಕಲ ಭಾಗ್ಯಾನ್ವಿತೆಯಾದ ಈ ಪೃಥ್ವೀಮಾತೆಯು ಧನ್ಯಳು ಈಕೆಯ ಮಹಿಮೆಯನ್ನು ವರ್ಣಿಸಲು ಅಸಾಧ್ಯವಾದುದು ಪ್ರಾಣಿ ಮಾತ್ರಗಳಿಗೆಲ್ಲ ಈ ಪೃಥ್ವಿಯೇ ಆಧಾರವು ಎಷ್ಟೋ ಜೀವನಗಳು ಅಂತರಿಕ್ಷದಲ್ಲಿರುವವು ಆದಾದರೂ ಪೃಥ್ವಿಯ ಸ್ವಭಾವ ಧರ್ಮವು, ಯಾಕಂದರೆ ದೇಹವು ಜಡವಾಗಿರದಿದ್ದರೆ ಅದಕ್ಕೆ ಉಳಿವೇ ಇರುತ್ತಿದ್ದಿಲ್ಲ ಪೃಥ್ವಿಯ ಮೇಲೆ ಸುಡುವದು, ತೆಗ್ಗು ತೋಡುವದು, ಹುಗಿಯುವದು, ಉಳುವದು, ಉತ್ತುವದು, ಬಿತ್ತುವದು, ಅಗಿಯುವದು, ಮಲಮೂತ್ರ ವಿಸರ್ಜಿಸುವದು, ಹೊಲಸು ಮಾಡುವದು, ಕೊಳೆತ ಹಾಗು ದುರ್ಗಂಧವಿಡಿಗಿದ ಪದಾರ್ಥಗಳನ್ನು ಚಲ್ಲುವದು, ಈ ಮುಂತಾದ ಕ್ರಿಯೆಗಳೆಲ್ಲವೂ ಮಾನವರಿಂದ ಅವ್ಯಾಹತನಾಗಿವೆ ಈ ಕ್ರಿಯೆಗಳಿಗೆಲ್ಲ ಪೃಥ್ವಿಯನ್ನು ಬಿಟ್ಟರೆ ಬೇರೆ ಆಧಾರವೇ ಇಲ್ಲ ಶರೀರಪತನವಾದ ಕೂಡಲೆ ಹೆಣವನ್ನೊಯ್ದು ಪೃಥ್ವಿಯ ಮೇಲೆಯೇ ಇಡಬೇಕಾಗುವದು ಸುಷ್ಟ-ದುಷ್ಟ ಕ್ರಿಯೆಗಳಿಗೆಲ್ಲ ಪೃಥ್ವಿಯೇ ಆಶ್ರಯವು ಹಲವು ಧಾತು ದ್ರವ್ಯಗಳೆಲ್ಲ ಪೃಥ್ವಿಯಿಂದಲೇ ಹೊರಬರುವವು ಪ್ರಾಣಿಗಳ ಅನ್ಯೋನ್ಯ ಸಂಹಾರ ಕ್ರಿಯೆಗಳು ಪೃಥ್ವಿಯ ಮೇಲೆಯೇ ನಡೆಯುವವು ಯಾರಿಗೂ ಪೃಥ್ವಿಯನ್ನು ಬಿಟ್ಟುಗೊಟ್ಟು ಅತ್ತಿತ್ತ ಹೋಗಲಿಕ್ಕೆ ಬರಲಾರದು ಪೃಥ್ವಿ

ಯಲ್ಲಿಯೇ ಪರ್ಯಟನ ಮಾಡಬೇಕಾಗುವದು. ಪೃಥ್ವಿಯ ಸಂಚಾರದಿಂದ ಕೋಟೆ-ಕೊತ್ತಳಗಳು, ಪುರ-ಪಟ್ಟಣಗಳು, ಹಲವು ದೇಶ-ಕೋಶಗಳು ಇವೆಲ್ಲವುಗಳನ್ನು ಕಂಡುಕೊಳ್ಳಲು ಬರುವದು ಪೃಥ್ವಿಯ ಮೇಲೆ ದೇವದಾನವ ಮಾನವರೆಲ್ಲರ ವಾಸ್ತವ್ಯವಿದೆ ರತ್ನ-ಮಾಣಿಕಗಳು, ಸ್ಪರ್ಶಪಾಷಾಣಗಳು, ಹಲವು ಧಾತು-ಶಿಲೆಗಳು, ದ್ರವ್ಯಗಳು, ಅಮೂಲ್ಯ ವಸ್ತುಗಳು, ಮುಂತಾದವೆಲ್ಲವೂ ಪೃಥ್ವಿಯ ಹೊಟ್ಟೆಯಲ್ಲಿಯೇ ಇದ್ದು ಅಲ್ಲಿಂದಲೇ ಹೊರದೆಗೆಯಲ್ಪಡುವವು ಮೇರು, ಮಂದಾರ, ಹಿಮಾಲಯ, ಮುಂತಾದ ಹಲವು ಕುಲಗಿರಿಗಳೂ, ತರತರದ ಪಕ್ಷಿ ಸಂಕುಲಗಳೂ, ಹಾವು-ಮೀನು ಮುಂತಾದ ಜೀವಿಗಳೂ ಎಲ್ಲವೂ ಪೃಥ್ವಿಯಮೇಲಿರುವವು ಅದೆಷ್ಟೋ ಸಮುದ್ರಗಳಿವ ಅವುಗಳಾಚೆಗೆ ಆವರಣೋದಕಗಳು ಸುತ್ತುಗಟ್ಟಿರುವವು ದೊಡ್ಡ ದೊಡ್ಡ ಪರ್ವತಗಳ ಸಿಡಿದು ಬಿದ್ದ ಭಾಗಗಳು ಪೃಥ್ವಿಯ ಮೇಲಿರುವವು ಆ ಪರ್ವತಗಳಲ್ಲಿ ಎಷ್ಟೋ ಕಡೆಗೆ ಸಣ್ಣದೊಡ್ಡ ಗುಪ್ತನೆಲಮಾರ್ಗಗಳು ಕತ್ತಲೆಯಿಂದ ತುಂಬಿಕೊಂಡಿರುವವು ಪೃಥ್ವಿಯನ್ನು ಸುತ್ತರಿದ ಆವರಣೋದಕಕ್ಕೆ ಮಿತಿಯಿಲ್ಲ ಆ ಜಲದಲ್ಲ ಪರ್ವತ ಪ್ರಾಯದ ಆಕಾರವುಳ್ಳ ಜಲಚರಗಳು ಅಪರಿಮಿತವಿರುವವು ಆ ಆವರಣೋದಕಕ್ಕೆ ಸಾಂದ್ರವಾದ ವಾಯುವು ಆಧಾರವಾಗಿರುವದು ಅದರಿಂದಲೇ ಆ ನೀರು ಎಲ್ಲಿಯೂ ಚಿಮ್ಮಿ ಹೊರಸೂಸುವದಿಲ್ಲ ಈ ವಾಯುವು ಕೂಡ ಕಠಿಣ ತಮೋಮಯ ಅಹಂಕಾರದ ಆಧಾರವನ್ನು ಅವಲಂಬಿಸಿರುವದು ಈ ಪ್ರಕಾರವಾಗಿದ್ದ ಭೂಗೋಲಿನ ಅಂತವು ಆದಾರಿಗೂ ನೆಲೆಹತ್ತಲಾರದು ಭೂಗೋಲಿನ ಮೇಲೆ ಹಲವು ಪದಾರ್ಥಗಳ ಕಣಿಗಳು, ಹಲವು ಬಗೆಯ ಧಾತುರತ್ನಗಳು, ಕಲ್ಪವೃಕ್ಷ ಚಿಂತಾಮಣಿಗಳು, ಅಮೃತದ ಮಡವುಗಳು, ಹಲವು ದ್ವೀಪ ಹಾಗು ಹಲವು ಖಂಡಗಳು ಅದೆಷ್ಟೋ ನಿರ್ಜನ ಹಾಗು ಮಳಲು ಭೂಮಿಗಳು, ಜನವಸತಿಯಿಂದ ದಟ್ಟವಾದ ಭೂಪ್ರದೇಶಗಳು, ಅವುಗಳಲ್ಲಿ ಹಲವು ಜಲಾಶಯಗಳ ವಿಚಿತ್ರತೆಗಳು ಮೇರುವಿನ ಸುತ್ತಲಿನ ಕಡಿದಾದ ಭಾಗಗಳ, ಅದೆಷ್ಟೋ ಕಡೆಯಲ್ಲಿಯ ವಿಲಕ್ಷಣ ಕತ್ತಲೆಯ ಗವಿ ಗಂಹ್ವರಗಳು, ಹಲವು ಜಾತಿಯ ಗಿಡ ಮರಗಳ ದಟ್ಟಣೆಗಳು, ಅವುಗಳ ಬದಿಯಲ್ಲಿಯೇ ಲೋಕಾಲೋಕ ಪರ್ವತಗಳು, ಅವುಗಳ ಸುತ್ತಲು ಸುತ್ತರಿದ ಸೂರ್ಯ ಮಂಡಲವು, ಚಂದ್ರ, ದ್ರೋಣ,

ಮೈನಾಕ, ಮೊದಲಾದ ಗಿರಿಗಳೂ, ಬೇರೆ ಬೇರೆ ಪ್ರಕಾರದ ಪಾಷಾಣಗಳೂ ಮಣ್ಣು, ಬೂದಿ, ನಿಧಿ-ನಿಕ್ಷೇಪಗಳೂ ಕಣಿಗಳೂ ಇಂತು ನಾನಾಬಗೆಯ ರತ್ನಗಳಿಂದ ಸಂಪನ್ನವಾಗಿ ಈ ಪೃಥ್ವಿಯು ಇರುವದು ಇದರಂತಹದು ಇನ್ನೊಂದಾವದೂ ಇದು ಅತ್ತಿತ್ತ ಬಹು ವಿಸ್ತೃತವಾಗಿ ಹಬ್ಬಿದೆ ಇದಕ್ಕೆ ಸರಿಯಾದ ಬೆಲೆಯುಳ್ಳ ವಸ್ತುವು ಯಾವುದೂ ಇಲ್ಲ ಇಡೀ ಪೃಥ್ವಿಯನ್ನು ಅಡ್ಡಾಡಿ ಸಂಚಾರವನ್ನು ಮುಗಿಸುವದಾರಿಗೂ ಸಾಧ್ಯವಿಲ್ಲ ವಿವಿಧ ಪ್ರಕಾರದ ಅನಂತ ಲತಾವೃಕ್ಷಗಳು, ಧಾನ್ಯಗಳೂ ತುಂಬಿ ಹೋಗಿವೆ ಸ್ವರ್ಗ ಮೃತ್ಯು, ಪಾತಾಳಗಳೆಂಬ ಈ ಮೂರು ಲೋಕಗಳು ಅತ್ಯದ್ಭುತವಾಗಿವೆ ಪಾತಾಳಲೋಕದಲ್ಲಿ ಸರ್ಪಗಳ ವಸತಿಯು ಅಗಣಿತವಾಗಿದೆ ಈ ಪೃಥ್ವಿಯೆಂದರೆ ಅನಂತಾನಂತ ಬಳ್ಳಿಗಳ ಹಾಗು ಬೀಜಗಳ ಕಣಜವೇ ಆಗಿದೆ ಬ್ರಹ್ಮದೇವನಿಂದ ಈ ಅದ್ಭುತ ಸೃಷ್ಟಿಯ ಉತ್ಪತ್ತಿ ರಚನೆಗಳಾದವು ಕೋಟಿ ಕೊತ್ತಳಗಳು, ಸುಂದರ ಶಹರಗಳು, ಎಲ್ಲ ಕಡೆಯಲ್ಲಿಯೂ ಜಗದೀಶ್ವರನ ವಾಸ್ತವ್ಯವು ಇವೆಲ್ಲವುಗಳಿಂದ ಪೃಥ್ವಿಯು ಮೆರೆಯುವದು ಅದೆಷ್ಟೋ ಶೂರ ವೀರರು ಬಲಾಢ್ಯತೆಯಿಂದ ಮೆರೆದು ಹೋದರು ಆದರೂ ಆತ್ಮ ಸಾಮರ್ಥ್ಯದಿಂದ ಈ ಪೃಥ್ವಿಯ ಹೊರತು ಬೇರೊಂದು ಪೃಥ್ವಿಯನ್ನು ಕಟ್ಟಿಕೊಂಡು ಆಳುವ ಬಲವಂತರಾರೂ ಆಗಲಿಲ್ಲ ಯಾಕಂದರೆ- ಈ ಪೃಥ್ವಿಯೇ ಅತಿ ವಿಸ್ತೃತೆಯುಳ್ಳದಾದುದರಿಂದ ಇನ್ನೊಬ್ಬರ ಯಾವ ಹವಣಿಕೆಗೂ ಅದರಿಂದ ಆಸ್ಪದವಾಗುವಂತಿರಲಿಲ್ಲ ಈ ಕಾರಣದಿಂದಲೇ ಅನ್ಯ ಜಗತ್ತಿನ ನಿರ್ಮಾಣವಿಲ್ಲ ಪೃಥ್ವಿಯ ಮೇಲೆ ಅಸಂಖ್ಯ ಜೀವಿಗಳ ಪ್ರಾದುರ್ಭಾವ ಲಯಗಳು ನಡದೇ ಇರುವವು ನೂರಾರು ಅವತಾರಗಳೂ ಆವರ್ತಿಸಿ ಹೋದವು ಸದ್ಯಕ್ಕೂ ಅದು ಪ್ರತ್ಯಕ್ಷವಿದೆ ಅನುಮಾನ ಮಾಡಲಿಕ್ಕಾಗದು ಪೃಥ್ವಿಯ ಆಧಾರದಿಂದಲೇ ಎಲ್ಲಕ್ಕೂ ಜೀವನ ಪ್ರಾಪ್ತಿಯು ಪೃಥ್ವಿಯಿಂದಲೇ ಜೀವವು ಜೀವಂತವಾಗಿ ಉಳಿಯುವದು ಈ ಭೂಮಿಯು ನನ್ನದ ನನ್ನದು ಎಂಬ ಅಹಂಕಾರದಿಂದ ವರ್ತಿಸಿ ಅದೆಷ್ಟೋ ಜನರು ಇದುವರೆಗೆ ಆಗಿ ಹೋದರು ಆದರೆ ಅವರೆಲ್ಲ ಪೃಥ್ವಿಯಲ್ಲಿಯೇ ಮಣ್ಣಾಗಿ ಹೋದರೇ ಹೊರತು ಪೃಥ್ವಿಯು ಅವರದಾಗಲಿಲ್ಲ ಅದೆಷ್ಟೋ ಕಾಲ ಗತಿಸಿದ್ದರೂ ಕೂಡ ಪೃಥ್ವಿಯು ಇದ್ದಂತೆಯೇ ಇರುವದು

ಇಂತಿದು ಪೃಥ್ವಿಯ ಮಹಿಮೆಯು ಟು ಇರುವೆಯಿಂದ ಮೊದಲಾಗಿ ಬ್ರಹ್ಮನ ವರೆಗಿನ ಎಲ್ಲರಿಗೂ ಪ್ರಥ್ವಿಯು ಆಶ್ರಯ ಸ್ಥಾನವಾಗಿದೆ ಇದರ ಮಹಿಮೆಯನ್ನು ವರ್ಣನೆ ಮಾಡುವದಾದಲ್ಲಿ ಪೃಥ್ವಿಗೆ ಪೃಥ್ವಿಯು ಉಪ ಮೆಯೇ ಹೊರತು ಬೇರೊಂದು ಉಪಮೆಯು ಸಿಗಲಾರದೆಂಬುದನ್ನು ನೆನಪಿಡತಕ್ಕದ್ದು"

ಶ್ರೀ ರಾಮ ॥ ೪ ಆಪನಿರೂಪಣೆ ॥ ಗುರುಗಳು ಶಿಷ್ಯನನ್ನು ಕುರಿತು—

"ಇನ್ನೂ ಎಲ್ಲರಿಗೂ ಜನ್ಮಸ್ಥಾನವೂ, ಸರ್ವರ ಜೀವನವೂ, ಎನ್ನಿಸಿದ್ದ ಆಪೋನಾರಾಯಣನ ಸ್ತವನ ಮಾಡುವೆವು ಈ ಪೃಥ್ವಿಯನ್ನು ಸಪ್ತ ಸಮುದ್ರಗಳು ಸುತ್ತುಗಟ್ಟಿ ಆದಕ್ಕೆ ಆಧಾರ ರೂಪವಾಗಿ ಆವರಣವಾಗಿವೆ ಈ ಆವರೋಣದಕವೂ ಮೋಡಗಳಿಂದ ಉದುರಿದ ನೀರೂ ಭೂಮಂಡಲದ ಮೇಲೆ ಪ್ರವಹಿಸುತ್ತಿರುವವು ಭೂಮಿಯ ಮೇಲಿರುವ ಅನೇಕ ದೇಶಗಳಲ್ಲಿ ಅದೆಷ್ಟೋ ನದಿಗಳು ಹರಿ ಹರಿದು ಬಂದು ಸಮುದ್ರಕ್ಕೆ ಕೂಡುವವು ಹೆಚ್ಚು ಕಡಿಮೆ ಮಾನದಿಂದ ಎಲ್ಲ ಪ್ರವಾಹಗಳು ಪುಣ್ಯಪಾವಿತ್ರ್ಯವುಳ್ಳವುಗಳೆಂದು ಎಣಿಸಲ್ಪಡುವವು ಹಾಗು ಅವವುಗಳ ಮಹಾತ್ಮ್ಯವು ಯಥಾವತ್ತಾಗಿ ವರ್ಣಿಸಲ್ಪಟ್ಟಿರುವವು ನದಿಗಳು ಪರ್ವತಗಳ ಇಳಿಜಾರು ಪ್ರದೇಶಗಳಲ್ಲಿ ಹಾಯ್ದು ದರಿ ಕಂದರುಗಳಲ್ಲಿ ಹಾರಿ ನಡುವೆ ಉಂಟಾಗಿರುವ ಅಡೆತಡೆಗಳನ್ನು ಲೆಕ್ಕಿಸದೆ ಭರದಿಂದ ಮುಂದೆ ಹರಿಯುತ್ತಿರುವವು ಆಣೆಕಟ್ಟು, ಬಾವಿ, ಸಣ್ಣ ದೊಡ್ಡ ಕೆರೆ, ಸರೋವರ, ಮುಂತಾದ ಜಲಾಶಯ ಸ್ಥಾನಗಳನ್ನು ಜಲದಿಂದ ಸಮೃದ್ಧಗೊಳಿಸಿ ಹಲವು ಪ್ರದೇಶಗಳಲ್ಲಿಂದ ಹಾಯ್ದು ಓಡುತ್ತಿರುವವು ಗೋಮುಖ, ಕಟ್ಟೆ, ಕಾಲುವೆ, ಝರಿ, ಮಡು, ಬಾವಿಯ ನೆಲೆ, ಬುಗ್ಗೆ, ಮುಂತಾದ ಹಲವು ನೀರಿನ ಪ್ರಕಾರಗಳು ಭೂಮಂಡದಲ್ಲಿರುವವು ಪ್ರತಿಯೊಂದು ಪರ್ವತದ ಮೇಲಿಂದ ಹರಿದು ಬಂದು ನೀರು ಭಯಂಕರ ತೆರೆಗಳಿಂದ ಯುಕ್ತವಾಗಿ ಸಾಗುತ್ತ ಅಲ್ಲಲ್ಲಿ ಜಲ ಸಂಚಯಗೊಳಿಸುತ್ತ ಮುಂದೆ ಸಾಗುವವು ಕೆಲವೆಡೆ ಕಾರಂಜಿಗಳನ್ನು ಚಿಮ್ಮಿಸುವವು ಈ ಎಲ್ಲ ಬಗೆಯಿಂದ ನೋಡಲು ಭೂಮಿಯ ಮೇಲೆ ಜಲವೆಷ್ಟಿದೆ? ಮತ್ತು ಅದು ಹೇಗೆ ಹರಿಯುವದು? ಎಂಬುದನ್ನು ಹೇಳುವದು ಕಠಿಣವು ಹಲವು ದರಿಕಂದರಗ

ಳಲ್ಲಿ ಎಷ್ಟೋ ಜಲ ಸಂಚಯಗಳಿರುವವು ಒಂದರಿಂದಿನ್ನೊಂದು ಹೆಚ್ಚು ಪವಿತ್ರವಾದ ತೀರ್ಥಗಳೆಷ್ಟೋ ಇರುವವು ಕೆಲವೆಡೆ ಬರ್ಫದಂತಹ ತಣ್ಣೀರಿನ ಪ್ರವಾಹಗಳಿವೆ. ಎಷ್ಟೋ ಕಡೆಯಲ್ಲಿ ಬಿಸಿನೀರಿನ ನೆಲೆ–ಪ್ರವಾಹಗಳಿರುವವು ಇವಲ್ಲದೆ ಹಲವು ಗಿಡಬಳ್ಳಿಗಳಲ್ಲಿ, ಹೂಹಣ್ಣುಕಾಯಿಗಳಲ್ಲಿ, ಕಂದಮೂಲಗಳಲ್ಲಿ ಇವುಗಳಲ್ಲಿ ಎಷ್ಟೋ ಬಗೆಯಿಂದ ಔಷಧಿಯಂತೆ ಗುಣಕಾರಕವಾಗಿರುವ ಉದಕವು ಕಂಡು ಬರುತ್ತದೆ ಉಪ್ಪು-ನೀರು, ಸೌಳು ನೀರು, ವಿಷಜಲವು, ಅಮೃತೋದಕವು ಹೀಗೆ ಅನೇಕ ಸ್ಥಳಗಳಲ್ಲಿ ಅನೇಕ ಗುಣ ವಿಶಿಷ್ಟ ನೀರು ಇರುತ್ತವೆ ಕಬ್ಬಿನಲ್ಲಿಯ ರಸ, ರುಚಿಕರ ಹಣ್ಣುಗಳಲ್ಲಿಯ ರಸ, ಹಾಲು, ಮೊಸರು, ಬೆಣ್ಣೆ, ತುಪ್ಪ ಈ ಗೋರಸಗಳು, ಜೇನ ತುಪ್ಪ, ಪಾರಜ, ಬೆಲ್ಲದ ಮೂರು ರೂಪಗಳಲ್ಲಿಯ ರಸಗಳು, ಇವೆಲ್ಲವು ನೀರಿನ ಸ್ವರೂಪಗೂಡಿದ ಪದಾರ್ಥಗಳು ಇದರಂತೆ ಮುತ್ತು, ರತ್ನ, ಶಸ್ತ್ರ ಇವುಗಳ ಮೇಲೆ ನೀರು ಹೊಳೆಯುತ್ತಿರುವದು ಈ ನೀರು ರೇತಸ್ಸು, ಶುಕ್ಲ, ಜೊಲ್ಲು, ಮೂತ್ರ, ಬೆವರು ಇವೆಲ್ಲವೂ ನೀರಿನ ಪ್ರಕಾರದವು ವಿಚಾರ ಮಾಡಿದರೆ ಇವೆಲ್ಲವೂ ತಿಳಿದು ಬರುವವು ದೇಹಗಳೆಲ್ಲವೂ ನೀರಿನಿಂದಲೇ ಪೃಥ್ವಿ, ಚಂದ್ರ, ಸೂರ್ಯ ಇವರಾದರೂ ನೀರಿನಿಂದಲೇ ಆಗಿರುವರು ಲವಣ ಸಮುದ್ರ, ಕ್ಷೀರಸಮುದ್ರ, ಮದಿರಾಸಮುದ್ರ, ಆಜ್ಯಸಾಗರ, ದಧಿಸಮುದ್ರ ಇಕ್ಷುರಸ ಸಾಗರ ಹಾಗೂ ಶುದ್ಧೋದಕ ಸಮುದ್ರ ಈ ಏಳೂ ಸಮುದ್ರಗಳು ನೀರೇ ಆಗಿರುವವು ಈ ಪ್ರಕಾರ ಆದ್ಯಂತವಾಗಿ ಎಲ್ಲ ಕಡೆಗೂ ನೀರೇ ಪಸರಿಸಿರುವದು ಆದರೆ ಆ ನೀರು ಕೆಲವೆಡೆ ಗುಪ್ತವೂ, ಕೆಲವೆಡೆ ಪ್ರಕಟವೂ ಆಗಿರುವದು ಯಾವದೊಂದು ಬೀಜದಲ್ಲಿ ಬೆರೆತ ನೀರು ಆ ಬೀಜದ ಗುಣವನ್ನೇ ಹೊಂದುವದು ಕಬ್ಬಿನಲ್ಲಿ ಸೇರಿದ ನೀರು ಸಿಹಿಯಾಗಿ, ಹಾಗಲ ಕಾಯಿಯಲ್ಲಿ ಸೇರಿದ ನೀರು ಕಹಿಯಾಗಿ ಆ ಪದಾರ್ಥಗಳ ಗುಣಗಳನ್ನೆತ್ತಿ ತೋರಿಸುವವು, ಶರೀರ ರಚನೆಯು ನೀರಿನಿಂದ ಆಗಿದೆ, ಬಳಿಕ ಅದು ನೀರಿನಿಂದ ಬೆಳೆಯುವದು, ಈ ಪ್ರಕಾರ ನೀರಿನಿಂದ ಉಂಟಾಗುವ ಪರಿಣಾಮಾವಸ್ಥೆಗಳನ್ನು ಇಂತಿಷ್ಟೇ ಎಂದು ಹೇಳಲಿಕ್ಕೆ ಬರಲಾರದು ನೀರಿನಲ್ಲಿ ತಾರಕ ಹಾಗು ಮಾರಕ ಈ ಎರಡೂ ಗುಣಗಳುಂಟು ವಿಚಾರದಿಂದ ನೋಡಲು ಆ ನೀರು ಸುಖದಾಯಕವೂ ಅನುಮೂಲ್ಯ ಪದಾರ್ಥವೂ ಆಗಿರು

ವದು ನೀರು ಭೂಮಿಯಲ್ಲಿ ಎಲ್ಲ ಕಡೆಗೂ ಹರಿದು ಓಡುವದು ಆಗ ಅದರಿಂದುಂಟಾಗುವ ಧ್ವನಿ-ಸಪ್ಪಳಗಳು ಕೇಳುವದಕ್ಕೆ ಸೊಗಸೆನ್ನಿಸುವದು ಮುಗಿಲಲ್ಲಿಂದ ಧೋ-ಧೋ ಎಂದು ಸುರಿಯುತ್ತಿರುವ ಮಳೆಯಿಂದ ವಾಪೀ ಕೂಪ ತಟಾಗಗಳುತುಂಬುವವು, ಹೊಳೆ, ಹಳ್ಳ, ಕೆರೆ-ಕಾಲುವೆಗಳು ಸೂಸಿ ಹರಿಯುವವು ಹೊಳೆ ಹಳ್ಳಗಳಿಗೆ ಮಹಾಪೂರು ಉಂಟಾಗುವವು ಎಷ್ಟೋ ನದಿಗಳು ಗುಪ್ತವಾಗಿ ಹರಿಯುವವು ಆಗ ಅವುಗಳ ಪ್ರದೇಶ ದಲ್ಲಿ ವರ್ತಿಗಳನ್ನು ತೋಡಿ ನೀರು ಪಡೆಯಲು ಬರುವದು ಭೂಗರ್ಭದಲ್ಲಿ ನೀರು ಇದ್ದೇ ಇರುವದು ಅದು ಅಲ್ಲಿ ಮಡುಗಟ್ಟಿರುವದೆಂಬದು ಇದು ವರೆಗೆ ಯಾರೂ ಕಂಡಿಲ್ಲ ಕೇಳಿಲ್ಲ ಕೆಲವೆಡೆ ವಿದ್ಯುಲ್ಲತೆ ಸಿಡಿದು ನೀರಿನ ಝರಿಗಳುಂಟಾಗುವವು ಪೃಥ್ವಿಯ ಕೆಳಗೂ, ಒಳಗೂ, ಮೇಲೂ ಎಲ್ಲ ಕಡೆಗೆ ಅತ್ಯಂತ ಜಲವು ತುಂಬಿ ಹರಿಯುತ್ತಿರುವದು ಅಂತರಿಕ್ಷದಲ್ಲಿ ಮೋಡಗಳು ಜಲದಿಂದ ತುಂಬಿರುವವು ಅದೇ ಮಳೆ ರೂಪದಿಂದ ಭೂಮಿಗೆ ಬೀಳುವದು ಪೃಥ್ವಿಯ ಮೂಲವು ಆಪ, ಆಪದ ಮೂಲವು ಅಗ್ನಿ ಅಗ್ನಿಯ ಮೂಲ ವಾಯು, ಆ ವಾಯು ಮೂಲವಾಕಾಶವು ಅವನೇ ಅಂತರಾತ್ಮನು ಅವನೇ ಹೆಚ್ಚಿನ ಮಹದ್ಭೂತನ ಹೀಗೆ ಇವು ಒಂದ ರಿಂದೊಂದು ಹೆಚ್ಚಿನವು ಆದರೆ ಇವೆಲ್ಲಕ್ಕಿಂತ ಪರಾತ್ಪರ ಪರಬ್ರಹ್ಮನೇ ಹೆಚ್ಚಿನವನು

ಶ್ರೀ ರಾಮ ॥ ೫ ಅಗ್ನಿ ನಿರೂಪಣೆ ॥ ಗುರುಗಳು ಶಿಷ್ಯರಿಗೆ ಅಗ್ನಿಯ ಬಗೆಗೆ ನಿರೂಪಣೆ ಮಾಡಿದ್ದೆಂತೆಂದರೆ —

"ಈ ವೈಶ್ವಾನರನು ಧನ್ಯಧನ್ಯನು ಈತನು ಶ್ರೀ ರಘುರಾಮನ ಮಾವನು ಅಂದರೆ ಸೀತಾದೇವಿಯ ತಂದೆಯು ಇವನು ವಿಶ್ವವ್ಯಾಪ ಕನು ಇವನ ಮುಖದಿಂದಲೇ ಭಗವಂತನು ಹವಿರ್ಭಾಗವನ್ನು ಸ್ವೀಕರಿ ಸುವನು ಯಜ್ಞ ಯಾಗಾದಿಕ ಪ್ರಸಂಗಗಳಿಂದ ಈತನು ಋಷಿಗಳಿಗೆ ಫಲ ದಾಯಕನಾಗುವನು ಇಂತು ವಿಶ್ವಕ್ಕೊಡೆಯನೆನಿಸಿದ್ದ ಈ ಅಗ್ನಿಯು ತ್ತಲೆ, ಶೀತಗಳೆಂಬ ರೋಗಗಳನ್ನು ದೂರ ಮಾಡುವನು ವರ್ಣ ಮೊದ ಲಾದ ಹಲವು ಭೇದಗಳಿದ್ದರೂ ಎಲ್ಲ ಜೀವಗಳಿಗೂ ಬ್ರಹ್ಮಾದಿಕರಿಗೂ ಈತನು ಅಭೇದನಾಗಿಯೇ ಇರುವನು ಈತನಿಂದಲೆ ಸೃಷ್ಟಿಯು ಮುನ್ನ

ಡೆಯುವದು ಇವನಿಂದಲೇ ಜನರು ತೃಪ್ತಿಕರವಾಗಿ ಉಣ್ಣುವರು ಶರೀರ ಧಾರಿಗಳು ಅಗ್ನಿಯಿಂದಲೇಸಜೀವರಾಗಿರುವರು ಅಗ್ನಿಯಿಂದಲೇ ಭೂಗೋಲು ರೂಪುಗೊಂಡಿತು. ಆದ್ದರಿಂದಲೇ ಜೀವಗಳಿಗೆ ನಿಲ್ಲಲು ಸ್ಥಳ ದೊರೆಯಿತು. ಸಣ್ಣ ದೊಡ್ಡ ಜ್ಯೋತಿಗಳು, ಜ್ವಾಲೆಗಳು ಅಗ್ನಿಯಿಂದಲೇ ಉರಿಯುವವು ದೇಹದಲ್ಲಿಯ ಜಠರಾಗ್ನಿಯಿಂದಲೇ ಹಸಿವು, ನೀರಡಿಕೆ, ರುಚಿಗಳುಂಟಾಗುವವು ಅಗ್ನಿಯು ಶರೀರದ ಅಂಗಾಂಗಗಳನ್ನೆಲ್ಲ ವ್ಯಾಪಿಸಿಬಿಡುವದು ಶರೀರದಲ್ಲಿ ಉಷ್ಣತೆಯಿರುವ ವರೆಗೆ ಪ್ರಾಣಿಗಳಿಗೆ ಮರಣವಿಲ್ಲ ಅಗ್ನಿಯು ಮಂದವಾಗಲು ಮೃತ್ಯು ಮಾರ್ಗವೇ ತೋರುವದು ಇದು ಎಲ್ಲರ ಅನುಭವದ ಸಂಗತಿಯು. ಶತ್ರು ಸಂಹಾರಕ್ಕೆ ಅಗ್ನಿಯು ಅವಶ್ಯ. ಅಗ್ನಿಯಿರುವ ವರೆಗೆ ಜೀವನವುಂಟು ಹಲವು ಬಗೆಯ ಔಷಧಿ ರಸಗಳ ನಿರ್ಮಾಣವು ಅಗ್ನಿಯಿಂದ ಆಗುವದು ಆ ಔಷಧಗಳ ಸಹಾಯದಿಂದ ಘನ ರೋಗಿಗಳು ಆರೋಗ್ಯತೆ ಪಡೆಯುವರು. ಸೂರ್ಯನು ಎಲ್ಲಕ್ಕೂ ಹೆಚ್ಚಿನವನು ಅವನ ಮೇಲೆ ಅಗ್ನಿಪ್ರಕಾಶವಿರುವದು ಕತ್ತಲೆಯ ರಾತ್ರಿಯಲ್ಲಿ ಅಗ್ನಿಯ ಸಹಾಯವು ಅವಶ್ಯವು ಅಗ್ನಿಯು ಎಲ್ಲಿದ್ದರೂ ಶುದ್ಧವಾದುದು ಹೊಲಯ ಮಾದಿಗರ ಮನೆಯಲ್ಲಿಯ ಬೆಂಕಿಯನ್ನು ತಂದು ಉಪಯೋಗ ಮಾಡಿಕೊಂಡರೂ ದೋಷವಿಲ್ಲ ಯಾಕಂದರೆ ಸ್ವಯಂ ಪವಿತ್ರವಾದುದು, ಹಾಗು ಅದರಿಂದಲೇ ಎಲ್ಲ ಮನೆಗಳು ಪಾವಿತ್ರ್ಯತೆ ಹೊಂದುವವು ಯಜ್ಞ-ಯಾಗಾದಿಗಳು, ಅಗ್ನಿಹೋತ್ರವು ಇವೆಲ್ಲ ಅಗ್ನಿಯಿಂದಲೇ ಸಾಗುವವು ಅಗ್ನಿಯು ತೃಪ್ತನಾದರೆ ಪ್ರಸನ್ನನಾಗುವನು. ಇವನಿಂದಲೇ ದೇವ-ದಾನವ ಮಾನವರಎಲ್ಲವ್ಯವಹಾರಗಳು ನಿರಾಂತಕವಾಗಿನಡೆಯುವವು ಲಗ್ನಮುಂತಾದ ಮಂಗಲ ಪ್ರಸಂಗಗಳಲ್ಲಿ, ಜಾತ್ರೆಗಳು ಮುಂತಾದ ಉತ್ಸವ ಕಾರ್ಯಗಳಲ್ಲಿ ಅಗ್ನಿಯು ಮದ್ದು-ಬಾಣ ಮುಂತಾದ ಸ್ವರೂಪಗಳಿಂದ ಮೆರೆಯುತ್ತಿರುವನು ಬಹುಜನರೋಗಿಗಳು ಉಷ್ಣಕರವಾದ ಔಷಧಸೇವನೆಗಳಿಂದನಿರೋಗಿಗಳಾಗುವರು ಅಗ್ನಿಯಿಂದಲೇ ದೇಹದ ಆರೋಗ್ಯ ವರ್ಧನೆಯು ಸೂರ್ಯ ಹಾಗು ಅಗ್ನಿದೇವತೆಗಳನ್ನು ಬ್ರಾಹ್ಮಣರುತನು-ಮನಗಳಿಂದಆರಾಧಿಸುವರು ಪ್ರಾಣಿಗಳಲ್ಲಿ ಒಡಲಾಗ್ನಿಯು,ಸಮುದ್ರದಲ್ಲಿ ಒಡವಾಗ್ನಿಯು ಭೂಗೋಲದಸುತ್ತಲೂ ಆವರಣಾಗ್ನಿಯು ಮತ್ತು ಶಿವನ ನಯನದಲ್ಲಿ ವಿದ್ಯುಲ್ಲತಾಗ್ನಿಯು ಇಂತು

ಇವೆಲ್ಲವುಗಳಲ್ಲಿ ಅಗ್ನಿಯು ರೂಪವೇ ಇರುವದ ಎಲುವಿನಿಂದಲೂ, ಸೂರ್ಯಕಾಂತ ಕನ್ನಡಿಯಿಂದಲೂ, ಕಾಷ್ಠ ಮಂಥನದಿಂದಲೂ, ಹಾಗು ಚಕಮಕ್ಕಿಯಿಂದಲೂ ಅಗ್ನಿಯು ಪ್ರಕಟವಾಗುವದು ಅಗ್ನಿಯು ಎಲ್ಲ ವಸ್ತುಗಳಲ್ಲಿ ಗುಪ್ತವಾಗಿ ಇರುವದು ಆದರೆ ಅದು ಘರ್ಷಣೆಯಿಂದ ಪ್ರತ್ಯಕ್ಷ ತೋರುವದು ಅಗ್ನಿ ಸರ್ಪಗಳ ಫೂತ್ಕಾರದಿಂದ ಗುಡ್ಡದರಣ್ಯಗಳೇ ದಹಿಸಿ ಹೋಗುವವು ಈಅಗ್ನಿಯಿಂದಉಪಾಯವೂಉಂಟು. ಅಪಾಯವೂ ಉಂಟು ವಿಚಾರದಿಂದ ನೋಡಲು ಸಣ್ಣದೊಡ್ಡವುಗಳಿಗೆಲ್ಲ ಅಗ್ನಿಯೇ ಆಧಾರವಾಗಿರುವದು ಅಗ್ನಿಯ ದ್ವಾರದಿಂದಪರಮೇಶ್ವರನ ಪ್ರಸನ್ನತೆಯಾಗುವದು ಈಪ್ರಕಾರವಾಗಿ ಅಗ್ನಿಯ ಮಹಿಮೆಯುಂಟು ಅದರ ಘನತೆಗೆ ಇನ್ನೊಂದು ಉಪಮೆ ದೊರೆಯಲಾರದು. ಹೆಚ್ಚೆಚ್ಚು ವಿಚಾರ ಮಾಡಿದಂತೆ ಅಗ್ನಿದೇವನ ಮಹಿಮೆಯು ಉತ್ತರೋತ್ತರವೇ ಕಂಡು ಬರುವದು ಪ್ರಾಣಿಗಳು ಜೀವಯುತವಾಗಿದ್ದರೆ ಅವುಗಳಿಗೆ ಸುಖವನ್ನುಂಟು ಮಾಡುವನು, ಸತ್ತು ಪ್ರೇತಸ್ವರೂಪ ಹೊಂದಲು ಸುಟ್ಟು ಭಸ್ಮ ಮಾಡುವನು ಈ ಅಗ್ನಿ ಮಹಾತ್ಮನು ಸರ್ವಭಕ್ಷಕನು ಸಕಲ ಸೃಷ್ಟಿಯ ಸಂಹಾರಕ್ರಿಯೆಯೂ, ಪ್ರಳಯವೂ, ಈತನಿಂದಲೇ ಕೊನೆಗೊಳ್ಳುವವು ಇವನ ಸಲ್ಲಗ್ನತೆಯಿಂದ ಪದಾರ್ಥಗಳ ಸ್ಥಿತಿಯು ಉಳಿಯಲಾರದು ಹಲವು ಹೋಮಗಳನ್ನು ಅಗ್ನಿಯ ಮೂಲಕವಾಗಿಯೇ ಕೈಕೊಳ್ಳುವರು ವೈಶ್ವದೇವ ವಿಧಾನಕ್ರಮವು ಪ್ರತಿ ಮನೆಯಲ್ಲಿ ಅಗ್ನಿಯಿಂದಲೇ ನಾಗುವವು ಕ್ಷೇತ್ರಕ್ಷೇತ್ರಗಳಲ್ಲಿ ದೀಪೋತ್ಸವ ದೀಪಾರಾಧನೆಗಳು ಅಗ್ನಿಯಿಂದಲೇ ನೆರವೇರುವವು ಆರತಿ- ನೀರಾಜನಗಳ ಜ್ಯೋತಿಗಳು ಅಗ್ನಿಯಿಂದಲೇ ಪ್ರಕಾಶಿತವಾಗಿ ಬೆಳಗಲ್ಪಡುವವು ಸತ್ಯಾಸತ್ಯಗಳನ್ನು ಪರೀಕ್ಷಿಸುವಲ್ಲಿ ರವಿ ಎದ್ದುವದು, ಕಾದ ಕಬ್ಬಿಣ ಹಿಡಿಯುವದು, ಬೆಂಕಿಯಲ್ಲಿ ಹಾರುವದು ಇತ್ಯಾದಿ ದಿವ್ಯ ಕ್ರಿಯೆಗಳೆಲ್ಲ ಅಗ್ನಿಯ ಸಾಕ್ಷಾತ್ತಾಗಿಯೇ ಸಾಗಿ ಕಡೆಗೆ ಸತ್ಯ ನಿರ್ಣಯವಾಗುವದು ಅಷ್ಟಧಾ ಪ್ರಕೃತಿ ಹಾಗು ತ್ರಿಲೋಕ ಬ್ರಹ್ಮಾಂಡವನ್ನೆಲ್ಲವನ್ನು ಅಗ್ನಿಯು ವ್ಯಾಪಿಸಿ ಬಿಟ್ಟದುವನು ಇನ್ನು ಈ ಉಷ್ಣ ಮೂರ್ತಿಯ ಸ್ವರೂಪವೆಂದರೆ– ಈ ಅಗ್ನಿಗೆ ಎರಡು ಶಿರಸ್ಸುಗಳು, ನಾಲ್ಕು ಕೋಡುಗಳು, ಮೂರೇ ಕಾಲಗಳು ಮತ್ತು ಏಳು ಕೈಗಳು ಈ ಸ್ವರೂಪದ ಅಗ್ನಿಯನ್ನು ಶಾಸ್ತ್ರಗಳು ಪ್ರಚೀತಿಯಿಂದಲೇ ಕಂಡು ವರ್ಣಿಸಿರುವವು

ಇಂತು ಅಗ್ನಿದೇವನನ್ನು ನಮ್ಮ ಮತಿಗನುಸರಿಸಿ ವರ್ಣಿಸಿದೆವು ಇದ ರಲ್ಲಿಯ ನ್ಯೂನತೆಗಳನ್ನು ಕ್ಷಮಿಸುವದು

ಶ್ರೀ ರಾಮ || ೬ ವಾಯೋಸ್ತವುನ || ಶ್ರೀ ಗುರುಗಳು ಶಿಷ್ಯರಿಗೆ ವಾಯುದೇವನನ್ನು ಕುರಿತು — "ವಾಯು ದೇವನು ಧನ್ಯನು ಅವನ ಸ್ವಭಾವವು ವಿಚಿತ್ರವಾದದ್ದು ಇವನಿಂದಲೇ ಜೀವಿಗಳು ಜಗತ್ತನ್ನು ಕಂಡಿ ರುವರು ಆ ಜೀವಿಗಳ ಉಸುರಾಡಿಸುವ ಕ್ರಿಯೆಯೂ, ಅವಯವಗಳ ಚಲನ ವಲನವೂ, ವಿದ್ಯಾಭ್ಯಾಸಾದಿ ವ್ಯಾಪಾರಗಳೂ ವಾಯುವಿನಿಂದಲೇ ನಡೆಯುತ್ತಿ ರುವವು ಈ ವಾಯುವಿನ ಸ್ವಭಾವಗಳಿಂದರೆ— ಚಲನ, ವಲನ, ಧಾವನ, ಪ್ರಸಾರಣ ಹಾಗು ಆಕುಂಚನಗಳು, ಪ್ರಾಣ, ಅಪಾನ, ವ್ಯಾನ, ಉದಾನ, ಹಾಗು ಸಮಾನಗಳು, ನಾಗ, ಕೂರ್ಮ, ಕೃಕಲ, ದೇವದತ್ತ ಹಾಗು ಧನಂ ಜಯ ಇವೆಲ್ಲವು ಇನ್ನು ವಾಯುವಿನ ಪ್ರಾಣ ಪಂಚಕಗಳ ವಿವರವುಃ-

ಪ್ರಾಣ – ಇದು ಜೀವನ ಹೃದಯ ಸ್ಥಾನವನ್ನು ಆಶ್ರಯಿಸಿರುವದು ಹಗಲು ರಾತ್ರಿಗಳೊಂದೊಂದರಲ್ಲಿ ಕೂಡಿ ೨೧೬೦೦ ಶ್ವಾಸೋಚ್ಛ್ವಸನ ಕ್ರಿಯೆಯುಗಳೆನ್ನಿಸಿಗುವದು ಇದರ ಕರ್ಮವಾಗಿರುವದು

ಅಪಾನ — ಇದು ಶರೀರದ ಗುಧ ಸ್ಥಾನದಲ್ಲಿದ್ದು ಮಲೋತ್ಸರ್ಗ ಕ್ರಿಯೆಯಲ್ಲಿ ಪ್ರವೃತ್ತವಾಗಿರುವದು ಇದೇ ಇದರ ಕರ್ಮವು

ವ್ಯಾನ – ಇದು ಜೀವನು ಧರಿಸಿದ ದೇಹದ ಸರ್ವಾಂಗವನ್ನು ವ್ಯಾಪಿ ಸಿರುವದು. ಶರೀರದ ಸಂದುಗಳನ್ನು ಹಿಂದು ಮುಂದು ಸರಿಸುವದು ಇದರ ಕರ್ಮವು

ಉದಾನಃ— ಇದು ಕಂಠ ಸ್ಥಾನದಲ್ಲಿರುವದು ಅನ್ನ ರಸವನ್ನು ವಿಭಜನೆ ಮಾಡುವದೂ ಹಿತಾ ಎಂಬ ಹೆಸರಿನ ನಾಡಿಯಲ್ಲಿಂದ ಬಿಕ್ಕನ್ನು ಉತ್ಪನ್ನ ಮಾಡುವದೂ, ಸ್ವಪ್ನಗಳನ್ನು ಕೆಡುವುವುದೂ ಇದರ ಕೆಲಸವು

ಸಮಾನಃ— ಇದು ಹೊಕ್ಕಳಿನ ಸ್ಥಾನದಲ್ಲಿರುವದು ಮತ್ತು ನಾಡಿ ದ್ವಾರದಿಂದ ರೋಮ ರೋಮಗಳಿಗೆ ಅನ್ನವನ್ನು ಮುಟ್ಟಿಸುವದು ಇದರ ಕೆಲಸವು ಇನ್ನು ನಾಗಾದಿ ಐದು ಉಪಪ್ರಾಣಗಳ ವಿವರವು—

ನಾಗಃ- ಇದರಿಂದ ತೇಗು ಅಬ್ಬಳಿಕೆಗಳು ಬರುವವು

ಕೂರ್ಮ – ಕಣ್ಣುಗಳ ರೆಪ್ಪೆಗಳನ್ನು ಮುಚ್ಚಿಸುವದು ತೆರೆಯಿಸುವದು
ಕೃಕಲಃ- ಸೀನು ಆಕಳಿಕೆಗಳನ್ನುಂಟು ಮಾಡುವದು
ದೇವದತ್ತಃ— ಮಬ್ಬು ಬರುವದು

ಧನಂಜಯ – ಜೀವವಿದ್ದಾಗ ಶರೀರಕ್ಕೆ ಪುಷ್ಟತೆ, ಸತ್ತಾಗ ಹೆಣವನ್ನು ಉಬ್ಬಿಸುವದು

ವಾಯುವು ಮೊದಲು ಬ್ರಹ್ಮಾಂಡದಲ್ಲಿ ಪ್ರಕಟವಾಯಿತು ಆ ಬ್ರಹ್ಮಾಂಡ ದೇವತೆಗಳನ್ನೆಲ್ಲ ತಾನು ಮುಸುಕಿಕ್ಕಿ ಬಳಿಕ ಹಲವು ಪ್ರಕಾರದ ಪಿಂಡಗಳಲ್ಲಿ ಹಲವು ಬಗೆಗಳಿಂದ ಪ್ರಕಟವಾಯಿತು ಸ್ವರ್ಗೀಯ ದೇವತೆಗಳು, ಪ್ರತಾಪಿಗಳಾದ ದಾನವರು, ರಾಜನಿಂದ ದರಿದ್ರನ ವರೆಗಿನ ಮಾನವರು, ಎಲ್ಲಬಗೆಯ ಶ್ವಾಪದಗಳು, ಆನಂದದಿಂದ ಕ್ರೀಡಿಸುವ ಖೇಚರ, ಜಲಚರ, ವನಚರಗಳು, ಮುಂತಾಗಿ ಇವೆಲ್ಲ ಪ್ರಾಣಿಗಳಲ್ಲಿ ವಾಯು ಸಂಚಾರವಿರುವದು ಅಗ್ನಿಯ ತೆರೆಗಳು ವಾಯುವಿನಿಂದ ಉತ್ಪನ್ನವಾಗುವವು ವಾಯುವು ಮುಗಿಲಲ್ಲಿ ಉಗಿಯನ್ನು ತುಂಬಿ ಮೋಡಗಳನ್ನುಂಟು ಮಾಡುವದು ಮತ್ತು ತಾನೇ ಆ ಮೋಡಗಳನ್ನು ಚದುರಿಸಿ ಅವುಗಳಿಂದ ನೀರನ್ನು ಸುರಿಸಲಿಕ್ಕೆ ಹಚ್ಚುವದು ಮತ್ತೆ ಮುಗಿಲನ್ನು ಮೋಡರಹಿತವನಾಗಿ ಮಾಡುವದು ವಾಯುವಿನಂಥ ಕರ್ತೃತ್ವಶಾಲಿಯು ಇನ್ನೊಂದಿಲ್ಲ ಆತ್ಮನ ಅಂಕಿತದಲ್ಲಿದ್ದುಕೊಂಡೇ ಅದು ಶರೀರದಲ್ಲಿ ಹಲವುಬಗೆಯ ಚಲ್ಲಾಟ ನಡೆಯಿಸುವದು ವ್ಯಾಪಕತೆಯಲ್ಲಿ ವಾಯುವನ್ನು ಯಾವದೂ ಹಿಂದೆ ಸರಿಸುವದಿಲ್ಲ ಕೇವಲ ಜಗತ್ತಿನ ಹಿತಕ್ಕಾಗಿ ಗಿರಿಶಿಖರಗಳ ಮೇಲಿನಿಂದ ಮೋಡಗಳ ಸೈನ್ಯವನ್ನೇ ಸಿದ್ಧಪಡಿಸಿಕೊಂಡು ವಿದ್ಯುಲ್ಲತೆಯ ಗರ್ಜನೆ ಹುಟ್ಟಿಸುವದು ಇಷ್ಟೆಲ್ಲವೂ ವಾಯುವಿನ ಪ್ರತಾಪವಿರುವದು ಚಂದ್ರ, ಸೂರ್ಯರು, ನಕ್ಷತ್ರ ತಾರೆಗಳು, ಮೇಘ ಮಂಡಲವು ಇವೆಲ್ಲವೂ ವಾಯುವಿನ ಮೂಲಕವಾಗಿಯೇ ಇರುವವು ಪಂಚಭೂತಗಳ ಏಕೀಕರಣದಲ್ಲಿಂದ ಅವವುಗಳನ್ನು ಬೇರೆ ಬೇರೆ ಮಾಡಿ ತೋರಿಸಲಿಕ್ಕೆ ಬಾರದ ಸ್ಥಿತಿಯು ವಾಯುವಿನಿಂದಾಗುವದು ವಾಯುವು ಭಯಂಕರ ಬಿರಗಾಳಿಯಾಗಿ ಬೀಸುವನು, ಪ್ರಚಂಡವಾದ ಆಣೆಕಲ್ಲುಗಳ ಮಳೆ ಸುರಿಸು

ವನು , ಸುರಿಯುವ ನೀರಿನೊಡನೆ ಎಷ್ಟು ಜೀವಿಗಳನ್ನು ಉದುರಿಸುವನು ವಾಯುರೂಪ ಕಮಲ ಕಲೆಯೇ ನೀರಿಗೆ ಆಧಾರವು ಮತ್ತು ನೀರಿನ ಆಶ್ರಯದಿಂದಲೇ ಶೇಷನು ಭೂಗೋಲವನ್ನು ತನ್ನ ಹೆಡೆಯ ಮೇಲೆ ಧರಿಸಿರುವನು ಆ ಶೇಷನು ವಾಯುವನ್ನೇ ಭಕ್ಷಿಸಿ ಪುಷ್ಟನಾಗಿರುವನು ಆದರಿಂದ ಅವನಲ್ಲಿ ಭೂಗೋಲದ ಭಾರ ಸಹಿಸುವ ಸಾಮರ್ಥ್ಯವುಂಟಾಗಿದೆ ಮಹಾ ಕೂರ್ಮದ ಶರೀರವು ವಾಯುವಿನಿಂದಲೇ ಪ್ರಚಂಡವಾಗಿ ಅದು ಬ್ರಹ್ಮಾಂಡವನ್ನೇ ಹೊರಳಿಸಿ ಒಗೆಯಿತು ವರಾಹವು ಪೃಥ್ವಿಯನ್ನು ಕೋರೆದಾಡಿಯ ಮೇಲೆ ಹಿಡಿದುಕೊಂಡಿತು ಆದಕ್ಕೆ ಆ ಸಾಮರ್ಥ್ಯವು ವಾಯುವಿನಿಂದಲೇ ಪ್ರಾಪ್ತವಾಯಿತು ತ್ರಿಮೂರ್ತಿಗಳೂ ಅಂತರಾತ್ಮನೂ ಈ ನಾಲ್ವರೂ ವಾಯುರೂಪವೇ ಆಗಿರುವರು ಇದು ವಿವೇಕವುಳ್ಳವರಿಗೆ ತಿಳಿಯುವದು ೩೩ ಕೋಟಿ ದೇವತೆಗಳು ೮೮ ಸಾವಿರ ಋಷೀಶ್ವರರು, ಸಿದ್ಧಯೋಗಿಗಳು ಇವರೆಲ್ಲರೂ ಸಂಪೂರ್ಣ ವಾಯುರೂಪಿಗಳೇ ಆಗಿರುವರು ಮತ್ತು ನವ ಕೋಟಿಕಾತ್ಯಾಯನಿಗಳು, ೫೬ ಕೋಟಿ ಚಾಮುಂಡಿಯರು ೩॥ಕೋಟಿ ಭೂತ ಯೋನಿಯಲ್ಲಿಯ ಪ್ರಾಣಿಗಳು, ಭೂತಗಳು, ದೈವತೆಗಳು ಹಲವು ಶಕ್ತಿಗಳು ಇವೆಲ್ಲವು ವಾಯುರೂಪವಾಗಿವೆ. ಮತ್ತು ಬ್ರಹ್ಮಾಂಡದಲ್ಲಿ ಎಷ್ಟೋ ಜೀವಿಗಳು ವಾಯುರೂಪವಾಗಿರುವವೆಂಬುದನ್ನು ಯಾರಿಗೂ ಹೇಳಲಿಕ್ಕೆ ಬರುವಂತಿಲ್ಲ ಪಿಂಡಗಳಲ್ಲಿ, ಬ್ರಹ್ಮಾಂಡದಲ್ಲಿ, ಎಲ್ಲೆಡೆಗೆ ತುಂಬಿ ಬ್ರಹ್ಮಾಂಡದ ಹೊರಗೆ ಆವರಣ ಸ್ವರೂಪದಿಂದಿರುವ ಈ ಸರ್ವಸಮರ್ಥ ವಾಯುವು ಸರ್ವ ಪ್ರದೇಶದಲ್ಲಿ ತುಂಬಿಬಿಟ್ಟಿರುವನು ಹೀಗೆ ವಾಯುದೇವನ ಸಾಮರ್ಥ್ಯವು ಅತುಲವಾಗಿದೆ ಈ ವಾಯುವಿನ ಮಗನೇ ಹನುಮಂತನು ಆ ಹನುಮಾನನು ಶ್ರೀ ರಾಮ ಚರಣದಲ್ಲಿ ತನ್ನ ತನುಮನಗಳನ್ನು ಅರ್ಪಿಸಿರುವನು ಅತನು ತನ್ನ ತಂದೆ ವಾಯುವಿನಂತೆಯೇ ಪ್ರಸಿದ್ಧನು ಹಾಗು ಪರಾಕ್ರಮಿಯು ಈ ಮಗನು ತಂದೆಗಿಂತ ಒಂದು ಅಣುಮಾತ್ರವೂ ಕಡಿಮೆಯವನಲ್ಲ ಇಬ್ಬರೂ ತೀರ ಅಭೇದರಾಗಿ ಏಕರೂಪವೇ ಆಗಿರುವರು ಇಬ್ಬರಲ್ಲಿಯೂ ಸಮಾನವಾದ ಅಪ್ರತಿಮ ಪುರುಷಾರ್ಥವುಂಟು ಈ ಹನುಮಂತನಿಗೆ ಪ್ರಾಣ ಪುರುಷಾನಾಥನೆಂದು ಸಂಬೋಧಿಸುವರು ಇದರಿಂದ ಆತನ ಸಾಮರ್ಥ್ಯದ ಪರಮಾವಧಿಗೆ ಮೇರೆಯಿಲ್ಲೆಂದು ಸಿದ್ಧವಾಗುವದು

ಹಿಂದಕ್ಕೊಮ್ಮೆ ಹನುವಂತನ ಬಳಿಗೆ ಮೃತ್ಯುವು ಬಂದು ತನ್ನ ಕ್ರಿಯೆಯನ್ನು ನಡೆಯಿಸಲು ಪ್ರವೃತ್ತಳಾಗಲು ಮಾರುತಿಯು ಬ್ರಹ್ಮಾಂಡವನ್ನು ರೋಧಿಸಿ ಬಿಟ್ಟನು ಆಗ ದೇವತೆಗಳೆಲ್ಲ ಅಂಜಿ ಮಾರುತಿಯ ಸ್ತವನವನ್ನು ಮಾಡಹತ್ತಿದರು ಆ ದೇವತೆಗಳ ಸ್ತುತಿಗೆ ಸಂತುಷ್ಟನಾಗಿ ಮಾರುತಿಯು ತನ್ನ ನಿರೋಧ ಶಕ್ತಿಯನ್ನು ಹಿಂತೆಗೆದುಕೊಂಡನು ಅದರಿಂದ ಬ್ರಹ್ಮಾಂಡವು ಪ್ರಾಣ ಸಂಕಟದಿಂದ ಪಾರಾಯಿತು ಅಂತೆಯೇ ಹನುಮಂತನ ಪ್ರತಾಪವು ಪ್ರಕಟವಾಯಿತು ಅವನು ಸಾಕ್ಷಾತ್ ಈಶ್ವರನ ಅವತಾರಿತನು ದೇವತೆಗಳು ಅವನ ಪರಾಕ್ರಮಕ್ಕೆ ದಂಗಾಗಿ ಹೋದರು ದೇವತೆಗಳೆಲ್ಲ ಒಂದುಸಾರೆ ರಾವಣನ ಬಂಧನದಲ್ಲಿ ಸಿಕ್ಕು ಬಿದ್ದಿದ್ದರು ಅದನ್ನು ಕಂಡು ಹನುಮಂತನಿಗೆ ಕರುಣೆ ಹುಟ್ಟಿತು ಆಗ ಅವನು ಲಂಕೆಯನ್ನು ಮುತ್ತಿ ಅಲ್ಲಿಯ ಎಲ್ಲ ರಾಕ್ಷಸರನ್ನು ದುರ್ದೆಸೆಗೀಡುಮಾಡಿ ಅವರನ್ನು ಸಂಹರಿಸಿದನು ಈ ಪ್ರಕಾರ ದೇವತೆಗಳನ್ನು ಪೀಡಿಸಿದ ರಾಕ್ಷಸರ ನಾಶವು ಹನುಮಂತನಿಂದಾಯಿತು ಅವನು ಆ ರಾಕ್ಷಸರ ಮೂಲವನ್ನೇ ನಿರ್ಮೂಲ ಮಾಡಿಬಿಟ್ಟನು ಊರ್ಧ್ವ ಪುಚ್ಛನೆನಿಸಿದ್ದ ಹನುಮಂತನ ಧನ್ಯತೆಯು ಅವರ್ಣನೀಯವು ಲಂಕೆಯ ಸಿಂಹಾಸನಾಧಿಷ್ಠಿತ ಗರ್ವಿಷ್ಠ ರಾವಣನನ್ನು ಹಣಿದು ಅವನನ್ನು ಕಣಕಕ್ಕಿಂತಲೂ ಮೆತ್ತಗೆ ಮಾಡಿದ ಹನುಮಂತನ ಸಾಮರ್ಥ್ಯವು ಅಸಾಮಾನ್ಯವಾದದ್ದು ಅವನು ಲಂಕೆಗೆ ಮುತ್ತಿ ಅಲ್ಲಿಯವರ ಪ್ರಾಣವನ್ನು ನಿರೋಧಿಸಿದ್ದುದರಿಂದ ಆ ರಾಕ್ಷಸರಲ್ಲಿ ನೀರೇ ಉಳಿಯಲಿಲ್ಲ

ಈ ಪ್ರಕಾರ ಪರಾಕ್ರಮ ಬೀರಿದ ಹನುಮಂತನು ತಮ್ಮ ಬಲವಂತ ಮುಂದಾಳುವೆಂದು ಭಾವಿಸಿ ದೇವತೆಗಳೆಲ್ಲ ಧೈರ್ಯ ಪೂರಿತರಾದರು ಅವರೆಲ್ಲ ಆತನ ಪರಾಕ್ರಮಕ್ಕೆ ಮೆಚ್ಚಿದರು ಅವನಿಗೆ ಚಿರಂತನವಾಗಿ ಆಯುರಾರೋಗ್ಯ ಪ್ರಾಪ್ತವಾಗಲೆಂಬ ಭಾವನೆಯಿಂದ ಅವರೆಲ್ಲರು ಮನಸ್ಸಿನಿಂದ ಪರಮಾತ್ಮನಾದ ರಾಮನನ್ನು ಪ್ರಾರ್ಥಿಸಿದರು ಹನುಮಂತನೇ ಎಲ್ಲ ದೈತ್ಯರನ್ನು ಹಣಿದನು ಆಗ ದೇವತೆಗಳು ರಾವಣನ ಸೆರೆಯಿಂದ ಮುಕ್ತರಾದರು ಮತ್ತು ಸಂತೋಷ ಯುಕ್ತರಾಗಿ ತ್ರೈಲೋಕ್ಯದ ಪ್ರಾಣಿಗಳಿಗೆಲ್ಲ ಸೌಖ್ಯವನ್ನು ನೀಡಿದರು

ಶ್ರೀ ರಾಮ || ೭ ಮಹದ್ಭೂತ ನಿರೂಪಣೆ || ಗುರುಗಳು ಶಿಷ್ಯರಿಗೆ–

" ಪೃಥ್ವಿಯ ಮೂಲವು ಜಲವಾಗಿರುವದು ಜಲಕ್ಕೆ ಮೂಲವು ಅಗ್ನಿ, ಅಗ್ನಿಗೆ ಮೂಲವು ವಾಯುವು ಹಾಗು ವಾಯುವಿನ ಮೂಲವು ಅಂತರಾತ್ಮನು ಈ ಅಂತರಾತ್ಮನು ಎಲ್ಲರಲ್ಲಿಯೂ ಇದ್ದು ಅತ್ಯಂತ ಚಂಚಲವಾಗಿರುವನು. ಇದಕ್ಕೆ ಬರೆ–ಹೋಗುವಿಕೆಗಳು ಇದ್ದರೂ ಕೂಡ ಕಾಣಿಸಲಾರದು ಸ್ಥಿರವಾಗಿಯೂ ನಿಲ್ಲಲಾರದು ಇದರ ರೂಪದ ಬಗೆಗೆ ಶ್ರುತಿ ಶಾಸ್ತ್ರಗಳಿಗೂ ಕೂಡ ಅನುಮಾನ ವಿರುವದಿಲ್ಲ ಮೊದಲು ಬ್ರಹ್ಮನಲ್ಲಿ ಆದಿ ಸಂಕಲ್ಪವು ಸ್ಫುರಿತವಾಯಿತು ಆ ಆದಿ ಸಂಕಲ್ಪದ ಸ್ಫುರಣವೇ ಅಂತರಾತ್ಮನ ಸ್ವರೂಪವು ಅವನೇ ಜಗದೀಶ್ವರನು ಅವನಿಂದಲೇ ಮುಂದೆ ತ್ರಿಗುಣಗಳು ಉದಿಸಿದವು ಆ ತ್ರಿಗುಣಗಳಿಂದ ಭೂತಗಳ ವ್ಯಕ್ತತೆಯುಂಟಾಯಿತು ಆ ಭೂತಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ಕೊಳ್ಳಬೇಕು ಭೂತಗಳು ಐದು ಅವುಗಳಲ್ಲಿ ನಾಲ್ಕರಿಂದ ವಿಶಿಷ್ಟವಾದ ಆಕಾಶ ಭೂತವು ಸರ್ವಪ್ರಕಾಶಕವಾಗಿರುವದು 'ಏಕೋ ವಿಷ್ಣುರ್ಮಹದ್ಭೂತಂ' ಎಂಬದಾಗಿ ಆಕಾಶಕ್ಕೆ ಅಂದರೆ ಅಂತರಾತ್ಮನಿಗೆ ಮಹತಿಯುಂಟು ಈ ಮಹದ್ಭೂತವು ಎಲ್ಲದರಲ್ಲಿ ವ್ಯಾಪಕವಾಗಿರುವದೆಂಬುದು ವಿವೇಕದಿಂದ ಅನುಭವಕ್ಕೆ ತೋರುವದು

ಈ ಆತ್ಮನ ಚಾಪಲ್ಯತೆಯ ಮುಂದೆ ವಾಯುವಿನ ಚಂಚಲತೆಯು ಏನೊಂದಲ್ಲ ಆ ಆತ್ಮನ ಚಪಲತನವನ್ನು ಪ್ರತ್ಯಕ್ಷವಾಗಿ ಅರಿತುಕೊಳ್ಳಬೇಕು ಆತ್ಮನಿಲ್ಲದೆ ಯಾವ ಕಾರ್ಯವೂ ನಡೆಯಲಾರದು ಆ ಆತ್ಮನು ಕಾಣಿಸನು ಮತ್ತು ದೊರಕಲಸಾಧ್ಯನು ಆತನು ಗುಪ್ತವಾಗಿಯೇ ಇದ್ದುಕೊಂಡು ಎಲ್ಲವನ್ನು ವಿಚಾರಮಾಡುವನು ಪಿಂಡ ಬ್ರಹ್ಮಾಂಡಗಳಲ್ಲಿದ್ದುಕೊಂಡು ಅನಂತ ಶರೀರಗಳಲ್ಲಿ ಆಡುತ್ತಿರುವನು ವಿವೇಕಿಗಳು ಆತನನ್ನು ಜಗದಂತರದಲ್ಲಿ ನಿರೀಕ್ಷಿಸುವರು ಆತ್ಮನಿಲ್ಲದೆ ಶರೀರ ಚಲನವಲನವು ಕಲ್ಪಾಂತದಲ್ಲಿಯೂ ಕೂಡ ಉಂಟಾಗಲಾರದು ಅಷ್ಟಧಾ ಪ್ರಕೃತಿಯಿಂದುಂಟಾದ ಅನಂತ ಜೀವಗಳು ಆತ್ಮನಿಂದಲೇ ಪ್ರತ್ಯಕ್ಷ ಕಾಣುತ್ತಿರುವವು- ಮೂಲ ಮಾಯೆಯಿಂದ ಕೊನೆಯವರೆಗೆ ಅಂದರೆ ಯಾವ

ದೊಂದು ಜೀವ ಶರೀರದ ವರೆಗೆ ಎಲ್ಲವೂ ಆತ್ಮನಿಂದ ಒದಗುವವು ಆತ್ಮನಿಂದಾಚೆಗೆ ಕೇವಲ ನಿರ್ವಿಕಾರಿ ಪರಬ್ರಹ್ಮನಿರುವನು ಆತ್ಮನು ಶರೀರದಲ್ಲಿದ್ದು ಇಂದ್ರಿಯಗಳ ಚಾಲಕತ್ವ ವಹಿಸುವನು ದೇಹದ ಜೊತೆ ಗಿದ್ದು ಹಲವು ಸುಖ–ದುಃಖಗಳನ್ನನುಭವಿಸುವನು, ಸಪ್ತಾವರಣಯುಕ್ತ ಪಿಂಡ–ಬ್ರಹ್ಮಾಂಡಗಳಲ್ಲೆಲ್ಲ ಇರುವ ಆತ್ಮನು ಶ್ರೇಷ್ಠನಾಗಿರುವನು ಆತ ನನ್ನು ವಿವೇಕದಿಂದ ತಿಳಿದುಕೊಳ್ಳಬೇಕು ಆ ಆತ್ಮನು ಶಬ್ದಗಳನ್ನು ಕೇಳುವನು, ಅವುಗಳ ಅರ್ಥವನ್ನು ಗ್ರಹಿಸುವನು, ಮತ್ತು ಆ ಅರ್ಥಕ್ಕೆ ಸರಿಯಾಗಿ ಉತ್ತರ ಕೊಡುವನು ಸ್ಪರ್ಶೇಂದ್ರಿಯದಿಂದ ಶೀತೋಷ್ಣಗಳ ನ್ನರಿತು ಕೊಳ್ಳುವನು, ಕಣ್ತುಂಬ ಪದಾರ್ಥಗಳನ್ನು ನಿರೀಕ್ಷಿಸುವನು, ಅವುಗಳನ್ನು ಪರೀಕ್ಷಿಸುವನು, ಅವುಗಳಲ್ಲಿಯ ಶ್ರೇಷ್ಠ—ಕನಿಷ್ಠಗಳನ್ನು ಗೊತ್ತು ಪಡಿಸುವನು ಕಣ್ಣಿನಲ್ಲಿಂದ ವ್ಯಕ್ತವಾಗುವ ಕ್ರೂರತೆ, ಸೌಮ್ಯತೆ, ಕಪಟತೆ, ದಯಾವಂತಿಕೆ ಮುಂತಾದ ವೃತ್ತಿ ಭೇದಗಳು ಆತನಿಗೆ ಕಂಡು ಬರುವವು ನಾಲಿಗೆ, ಮೂಗು, ಗುದ, ಶಿಶ್ನ ಇವುಗಳ ವ್ಯಾಪಾರಗಳನ್ನೆಲ್ಲ ಒಬ್ಬನೇ ಮೂರೂ ಲೋಕಗಳಲ್ಲಿಯೂ ಸಾಗಿಸುವನು ಅವನ ಮಹತ್ವ ವನ್ನು ವರ್ಣಿಸುವದು ಕಠಿಣವು ಎಲ್ಲ ವಿದ್ಯೆಗಳು, ಕಲೆಗಳು, ಐಹಿಕ ವ್ಯಾಪಾರಗಳು ಮತ್ತು ಪಾರಲೌಕಿಕ ವಿಚಾರಗಳು ಇವೆಲ್ಲವನ್ನೂ ಆತನು ತಿಳಿದು ಕೊಳ್ಳುವನು ಹಲವು ಮತಗಳು ಹಲವು ಭೇದಗಳು, ಸಂವಾದ ವಿವಾದಗಳು, ಇವೆಲ್ಲವುಗಳ ನಿರ್ಣಯಗಳು ಆತನಿಂದಲೇ ನಿಶ್ಚಿತಗೊಳಿಸ ಲ್ಪಡುವವು ಮುಖ್ಯ ತತ್ವ ಅಂದರೆ ಮಹತ್ತತ್ವದ ಬಗೆಗೆ ವಿಸ್ತಾರವುಂಟಾ ಯಿತೆಂದು ಆತನ ರೂಪದ ಬಗೆಗೆ ಇಷ್ಟೆಲ್ಲ ಹೇಳಬೇಕಾಯಿತು ಬರೆ ಯುವದು, ಓದುವದು, ಹಿಡಿಯುವದು, ಬಿಡುವದು, ಸುಖ–ದುಃಖಗಳು, ನಟ—ನಾಟ್ಯಗಳು, ಕಲಾ–ಕುಶಲತೆಗಳು ಇವೆಲ್ಲವು ಆ ಆತ್ಮನ ವಿಲಾಸ ಗಳೇ ಆಗಿರುವವವು ಆತನು ಹಲವು ಶರೀರಗಳಲ್ಲಿ ಸೇರಿ ಒಬ್ಬನೇ ನಟನೆ ಮಾಡುವನು ಅವನು ಇಂಥ ಬಹುರೂಪಿಯೂ ಬಹುರಂಗಿತನೂ ಆಗಿರುವನು ಪ್ರತಾಪವಂತನೆಂದರೆ ಅವನೇ ಸರಿ ಹೇಡಿಯಾ ದರೂ ಅವನೇ. ಒಬ್ಬನೇ ಇಷ್ಟು ಎಲ್ಲದರಲ್ಲಿ ಹಬ್ಬಿದಂತಿರುವನು ಮತ್ತು ಅಲ್ಲಲ್ಲಿಯ ಚಮತ್ಕಾರಗಳನ್ನು ನೋಡುವನು ಆತನಲ್ಲಿ ದಾಂಪತ್ಯ

ಸುಖದುಃಖಿಗಳ ಭೋಕ್ತಾರನು ಮುಂತಾಗಿ ನಾವು ಬೇರೆ ಬೇರೆ ಜನರಿಗೆ ಆರೋಪಿಸುವ ಮಾತುಗಳೆಲ್ಲ ಆ ಆತ್ಮನಿಂದಲೇ ಉಂಟಾಗಿ ಬರುವವು ಬ್ರಹ್ಮ ನಿಂದ ಕೀಳಪ್ರಾಣಿಯ ವರೆಗೆ ಎಲ್ಲರ ಚಾಲಕತ್ವವು ಆ ಆತ್ಮನ ಒಬ್ಬನಕಡೆಗೇ ಇರುವದು ಇದು ಆತ್ಮಜ್ಞಾನಿಗೆ ಗೊತ್ತು ಪತಿಯು ತನ್ನ ಚೆಲುವ ಹೆಂಡತಿಯಲ್ಲಿ ಬಲುಆಸಕ್ತನು ಆದರೆ ಆ ಆಸಕ್ತಿಯು ಆವಳದೇಹದಲ್ಲಿಆತ್ಮಾ ರಾಮನು ಇರುವವರೆಗೆ ಮಾತ್ರ ಇರುವದು ಆ ಆತ್ಮಾರಾಮನು ದೇಹ ತ್ಯಾಗ ಮಾಡಿ ಹೋದಮೇಲೆ ಆಕೆ ಚೆಲುವೆಯಲ್ಲ ಚೆಲ್ಲಿ ಕೊಡುವ ಹೆಣವು ಆತ್ಮನು ಕಣ್ಣಿಗೆ ಕಾಣಿಸನು, ಭಾಸವಾಗನು, ಬಾಹ್ಯಸ್ವರೂಪ ನಿರೀಕ್ಷಿ ಸಲು ಆತನ ಅನುಮಾನವು ಉಂಟಾಗಲಾರದು ಆದರೆ ಆತನ ಬಲದಿಂದಲೇ ಮನಸು ಹಲವು ಕಲ್ಪನೆಗಳನ್ನು ಮಾಡುವದು ಅವನು ಶರೀರದಲ್ಲಿ ಇರು ವವರೆಗೆ ಬ್ರಹ್ಮಾಂಡದ ವಿಚಾರ ಮಾಡುವನು, ಹಲವು ವಾಸನೆ ಭಾವನೆಗ ಳಿಗೆ ಎಡೆಗೊಡುವನು ಅನಂತ ಪ್ರಾಣಿಗಳಲ್ಲಿ ಅನಂತ ಕಲ್ಪನೆಗಳು ರಾಜ ಕಾರಣ,ಸುಬುದ್ಧಿ,ಕುಬುದ್ಧಿ ಗುಪ್ತವಿಚಾರ, ಮೋನಗಾರಿಕೆ ಈ ಮುಂತಾದ ವೆಲ್ಲ ಆತ್ಮನಿಂದಲೇ ವರ್ತಿಸುವವು ಒಬ್ಬರಿಗೊಬ್ಬರು ಹೊಂಚುಹಾಕುವರು ಒಬ್ಬನು ಇನ್ನೊಬ್ಬನಿಗೆ ಹೆದರಿ ಅಡಗಿ ಕೂಡುವನು, ಇದರಂತೆ ಹೊಡೆ ಯುವದು, ಬಡಿಯುವದು, ಹಗೆತನ ತಾಳುವದು, ಕಪಟಕೃತ್ಯ ನಡೆಯಿ ಸುವದು, ಪರೋಪಕಾರದಲ್ಲಿ ದಂಗಾಗುವದು, ಇವೆಲ್ಲ ಭೇದಮಯ ಕೃತ್ಯ ಗಳಲ್ಲೆಲ್ಲ ಆತ್ಮನ ಅಭೇದತ್ವವು ಅಲುಗಾಡುವದಿಲ್ಲ, ಅರ್ಥಾತ್ ಅವನಿಲ್ಲದೆ ಈ ಕಾರ್ಯಗಳು ಒದಗುವದಿಲ್ಲ ಗಂಡಸಿಗೆ ಹೆಂಗಸಿನ, ಹೆಂಗಸಿನ ಗಂಡಸಿನ ನಾದಗಳು ಇರುವವು ಆದರೆ ವಿಷಯ ಸುಖಗಳ ರುಚಿಯಲ್ಲಿ ಭೇದವಿದ್ದರೂ ಆ ರುಚಿಯನ್ನು ಸವಿಯುವ ಅಂತರಾತ್ಮನು ಒಬ್ಬನೇ ಎರಡೂ ಕಡೆಯಲ್ಲಿ ಇರುವನು ಪ್ರಾಣಿಗಳಿಗೆ ಅವಶ್ಯಕ ಆಹಾರದಲ್ಲಿಯೇ ಆತನು ತತ್ಪರನಾಗಿ ರುವನು ಪಶುಗಳ ಆಹಾರ ವಿಷಯದಲ್ಲಿ ಮನುಷ್ಯರು ಉದಾಸೀನರಿರು ವರು ಆಹಾರದಲ್ಲಿ, ದೇಹದಲ್ಲಿ ಭೋಗದಲ್ಲಿ, ಸುಖಾನುಭವದಲ್ಲಿ ಇವೆಲ್ಲ ರಲ್ಲಿ ಭೇದಗಳಿರುವವು ಆದರೆ ಎಲ್ಲ ಭೇದಗಳಲ್ಲಿ ಆತ್ಮನು ಅಭೇದತ್ವದಿಂದ ಏಕರೂಪವಾಗಿ ಇರುವನು ಸಮುದ್ರದ ಒಡಲಲ್ಲಿ ಅಸಂಖ್ಯ ಪ್ರಾಣಿಗಳಿರು ವವು ಅದಕ್ಕಿಂತಲೂ ಆವರಣೋದಕದಲ್ಲಿಯ ಜಲಚರಗಳು ಬಹಳ

ದೊಡ್ಡವಾಗಿರುವವು ಸೂಕ್ಷ್ಮದೃಷ್ಟಿಯಿಂದ ನೋಡಲು ಅಪರಿಮಿತವಾಗಿ ಅಸಂಖ್ಯ ಶರೀರಗಳು ಇರುವವು ಅವುಗಳ ಅಂತವೇ ಅರಿಯದು ಅಂದ ಮೇಲೆ ಆ ಅನಂತನ ಅಂತ ತಿಳಿಯುವದೆಂತು? ಸಾಧ್ಯವಿಲ್ಲ ದೇಹ ಮತ್ತು ಆತ್ಮ ಇವುಗಳ ಮಿಲನದಿಂದ ಉಂಟಾಗಿ ತೋರುವ ಕಾರ್ಯಗಳ ಬಗೆಗೆ ಸೂಕ್ಷ್ಮವಾಗಿ ಶೋಧ ಮಾಡುವದರಿಂದಲೇ ಅಂತರಾತ್ಮನ ಬಗೆಗೆ ಅನುಮಾನವಾಗುತ್ತದೆ ಇಲ್ಲವಾದರೆ ಸ್ಥೂಲ, ಸೂಕ್ಷ್ಮ, ಇವುಗಳ ಗೊಂದಲದಲ್ಲಿ ಏನೊಂದೂ ತಿಳಿಯುವದಿಲ್ಲ ಈ ಎಲ್ಲ ನಿರೂಪಣೆಗಳು ಅಂತರಾತ್ಮನ ಬಗೆಗೆ ಅನುಭವವುಂಟಾಗುವ ಕುರಿತೇ ನಡೆದಿರುವವು ಆ ನಿರೂಪಣೆಗಳೂ ಕೂಡ ಅಂತರಾತ್ಮನೇ ಸಂತ ಸಜ್ಜನರ ಮುಖಗಳಿಂದ ಹೊರ ಹೊರಡಿಸಿರುವನು"

ಶ್ರೀ ರಾಮ || ೯ ನಾನಾ ಉಪಾಸನಾ ನಿರೂಪಣೆ || ಗುರುಗಳು ಉಪಾಸನೆಗಳ ಬಗೆಗೆ ಶಿಷ್ಯರ ಪ್ರಶ್ನೆಗಳಿಗೆ ಉತ್ತರಿಸಿದ್ದು—

ಪ್ರಶ್ನೆ:- ಜಗತ್ತಿನ ಮೇಲೆ ಅನೇಕ ಜನರಿರುವರು ಮತ್ತು ಅವರವರ ಅನೇಕ ಉಪಾಸನೆಗಳೂ ಇರುವವು ಜನರು ತಮ್ಮ ತಮ್ಮ ಭಾವನೆಗಳಿಗನುಸರಿಸಿ ಅಲ್ಲಲ್ಲಿ ಪೂಜ್ಯತೆಯನ್ನಿಟ್ಟು ಭಜಿಸುವರು ಕೆಲವರು 'ತಮ ದೇವನು ನಿರ್ಗುಣನು, ನಾವು ಮಾಡುವ ಉಪಾಸನೆಯು ಆ ನಿರ್ಗುಣನ ಬಗೆಗಿರುವದು' ಎಂದೆನ್ನುವರು ಇದರ ಯುಕ್ತಾಯುಕ್ತತೆ ಹೇಗೆ?

ಉತ್ತರ:- ಸ್ತುತಿಯ ಸ್ವಭಾವವು ಹೀಗೆ ಇರುವದು ಇದರಿಂದೇನೂ ಕೆಡಕು ಇಲ್ಲ ನಿರ್ಗಣನೆಂದರೆ ಬಹುಗುಣವು ಈ ಬಹುಗುಣವುಳ್ಳವನು ಅಂತರಾತ್ಮನು ಒಬ್ಬನೇ ಎಲ್ಲವೂ ಆತನ ಅಂಶಗಳೆಂದು ತಿಳಿದು ಅನುಭವದಿಂದ ನೋಡು ಯಾವದೇವನ ಉಪಾಸನೆ ಮಾಡಿದರೂ ಅವೆಲ್ಲ ಅಂತರಾತ್ಮನಿಗೇ ಸಲ್ಲುವವು ಆದ್ದರಿಂದ ಯಾವ ದೇವನನ್ನಾದರೂ ತಮ್ಮಅಧಿಕಾರಕ್ಕನುಸರಿಸಿ ಯಾರೇ ಭಜಿಸಿದರೂ ಅದು ಎಲ್ಲಕ್ಕೂ ಮೂಲವಾದ ಅಂತರಾತ್ಮನ ಭಜನೆಯೇ ಆಗುವದು ಆದ್ದರಿಂದ ಆ ಭಜನೆಯನ್ನು ಒಪ್ಪತಕ್ಕದ್ದು ಒಟ್ಟಿನ ಮೇಲೆ ಎಲ್ಲರೂ ತಮ್ಮ ತಮ್ಮ ಉಪಾಸ್ಯ ದೇವರನ್ನು ಭಜಿಸುತ್ತ ಇರುವಾಗ 'ನಾವು ನಿರ್ಗುಣನನ್ನು ಭಜಿಸುತ್ತೇವೆ' ಎಂದು ಅವರು ನುಡಿದರೆ ಅದೇನು ತಪ್ಪಾಗಲಾರದು

ಪ್ರಶ್ನೆ: ನಿರ್ಗುಣೋಪಾಸನೆಯು ಶ್ರೇಷ್ಠವಾದದ್ದು, ಅದನ್ನು ಎಲ್ಲರೂ ಅನುಸರಿಸತಕ್ಕದ್ದು ಹಲವು ದೇವದೇವತೆಗಳ ನಾದಿಗೆ ಬೀಳಬಾರದು ಹೇಗೆಂದರೆ— ಮರದ ಬೊಡ್ಡೆಗೆ ನೀರನ್ನು ಹಣಿಸಿದರೆ ಅದು ಪ್ರತಿಯೊಂದು ಎಲೆಯು ವರೆಗೆ ಹೋಗಿ ಮುಟ್ಟುವದು ಆ ಪ್ರಕಾರ ನಿರ್ಗುಣೋಪಾಸನೆಯಲ್ಲಿ ದೇವ ದೇವತೆಗಳೆಲ್ಲ ಬಂದಂತಾಗುವದಿಲ್ಲವೇ ?

ಉತ್ತರ – ತುಳಸೀ ಗಿಡದ ಮೇಲೆ ಅಂದರೆ ಅದರ ತುದಿಯ ಮೇಲೆ ಎಲೆಗಳ ಮೇಲೆ ಎಲ್ಲಿ ಬೇಕಾನಲ್ಲಿ ನೀರು ಹಣಿಸಲು ಅದು ಅಲ್ಲಿ ನಿಲ್ಲದೆ ಆ ಗಿಡದ ಬೊಡ್ಡೆಗೇ ಬರುವದಿಲ್ಲವೇ ? ಅದರಂತೆ ಬೇಕಾದ ದೇವ ದೇವತೆಗಳ ಪೂಜೆ ಮಾಡಿದರೆ ಆ ಪೂಜೆಯು ಮುಖ್ಯ ಪರಮೇಶ್ವರನಿಗೇ ಮುಟ್ಟುವದು

ಪ್ರಶ್ನೆ - ಸಣ್ಣ ಗಿಡದ ಮೇಲೆ ನೀರು ಹಣಿಸಲು ಮಾತ್ರ ಬೊಡ್ಡೆಯ ವರೆಗೆ ಬರಬಹುದು ಅದರೆ ಆಲದ ಮರದಂಥ ದೊಡ್ಡ ಮರದ ಮೇಲೆ ಕೈಯಿಂದ ನೀರು ಹಾಕಲು ಬರಲಾರದು ಬಂದರೂ ಅದು ಬೊಡ್ಡೆಯ ವರೆಗೆ ಇಳಿದು ಬರಲಾರದು ಇದರ ಮರ್ಮವೇನು ?

ಉತ್ತರ – ದೊಡ್ಡ ಮರದ ತುದಿಯ ವರೆಗೆ ಕೈಯೆತ್ತಿ ಕಲಶದಿಂದ ನೀರು ಹನಿಸಲು ಬರಲಾರದು ಆದರೆ ಮಳೆಯ ನೀರು ಆ ಮರದ ತುದಿಗೆ ಸುರಿದರೆ ಅದು ಬೊಡ್ಡೆಯ ಕಡೆಗೆ ಇಳಿದು ಬರುವದನ್ನು ನಾವು ನೋಡುತ್ತೇವೆ ಎಲ್ಲ ನೀರಿಗೂ ಬೊಡ್ಡೆಯ ಕಡೆಗೇ ಬರುವದು ಶಕ್ಯವಿಲ್ಲ ಅದೇ ಪ್ರಕಾರ ಭಜಕನಲ್ಲಿ ಬಹಳ ಪುಣ್ಯಸಂಗ್ರಹವಿರದಹೊರತು ಮೂಲ ದೊರೆಯುವದಿಲ್ಲ ಸಾಧುಗಳ ವಿವೇಕ ದೃಷ್ಟಿಯು ಮೂಲದ ಕಡೆಗೇ ಹೋಗಿ ಅಲ್ಲಿ ನೆಡುತ್ತದೆ ಆದರೂ ಮರದ ದೃಷ್ಟಾಂತದಿಂದ–ನೀರನ್ನು ಎಲ್ಲಿ ಬೇಕಾದಲ್ಲಿ ಸುರುವಿದರೂ ಅದು ಬೊಡ್ಡೆಯ ಕಡೆಗೇ ಸಾಗುವದು ಅದರಂತೆ ಭಕ್ತಿ ಭಾವದಿಂದ ದೇವ ದೇವತೆಗಳ ಉಪಾಸನೆ ಕೈಕೊಂಡರೆ ಅದು ಮುಖ್ಯ ಪರಮಾತ್ಮನಿಗೇಮುಟ್ಟುತ್ತದೆ' ಎಂಬುದು ಸ್ಪಷ್ಟವಾಗುವದು

ಪ್ರಶ್ನೆ – ಜನರು ಸಗುಣಕ್ಕೆ ನಿರ್ಗುಣ ಎಂದೆನ್ನುವರು ಇದುಹೇಗೆ? ನಿರ್ಗುಣನಲ್ಲಿ ಪ್ರಥಮ ಸ್ಫೂರ್ತಿಯಾದುದೇ ಸಗುಣ ಗುಣಗಳ ಆಚೆಗೆ ನಿರ್ಗುಣನು ಇದ್ದೇ ಇರುವನಲ್ಲವೇ ?

ಉತ್ತರ – ಈ ಮಾತು ಸರಿಯದೆ ಸಾರಾಸಾರ ವಿಚಾರಗಳನ್ನು ನೋಡಬೇಕು ಅಸಾರವನ್ನು ಬಿಟ್ಟು ಸಾರ ಅಂದರೆ ಶಾಶ್ವತ ಪರಬ್ರಹ್ಮ ನನ್ನು ಸ್ವೀಕರಿಸಬೇಕು ಅಂದರೆ 'ತತ್ವಮಸಿ' ಬೋಧೆಯಿಂದ ಬ್ರಹ್ಮನಲ್ಲಿ ಐಕ್ಯತ್ವದ ನಿರ್ಧಾರವಾದ ಮೇಲೆ ಸಗುಣ ಮತ್ತು ನಿರ್ಗುಣಗಳಲ್ಲಿ ಭೇದವೇ ಉಳಿಯುವದಿಲ್ಲ ಆದರೆ ಆ ಹೆಸರುಗಳು ಗೊತ್ತಾಗದಂತಾಗುವವು ಇದು ವಿವೇಕದಿಂದ ತಿಳಿಯುವದು. ಸೇವಕನೊಬ್ಬನಿಗೆ 'ರಾಜ' ಎಂದು ಹೆಸರಿಟ್ಟರೆ ಅವನು ನಿಜವಾದ ರಾಜನಾಗನು ಇದು ಕೌತುಕದ ಮಾತಾಗುವದು ಇದರಂತೆಯೇ ಸಗುಣಕ್ಕೆ ನಿರ್ಗುಣ ಎಂದೆನ್ನುವದರಿಂದ ಸಗುಣವು ನಿರ್ಗುಣವಾಗಲಾರದು ಯಾರಾದರೂ ಹಾಗೆ ಅಂದರೂ ಸಹ ಅದರಿಂದೇನು ತಪ್ಪಾಗುವದಿಲ್ಲ ಕಲ್ಪಾಂತ ಪ್ರಳಯವಾದನಂತರ ಉಳಿಯುವದೇ ನಿರ್ಗುಣವು ಅದನ್ನುಳಿದುವೆಲ್ಲ ಮಾಯೆಯಲ್ಲಿ ಬರುವವು ಸಗುಣ, ನಿರ್ಗುಣಗಳ ವಿಚಾರವು ಬಲು ಸೂಕ್ಷ್ಮವಾಗಿರುವದು ಆ ವಿಚಾರವು ಶಬ್ದಗಳಿಂದಾಗದು ಈಗ ಜಗತ್ತಿನಲ್ಲಿ ಹಲವು ಉಪಾಸನೆಗಳು ಇದ್ದರೂ ಶಬ್ದಗಳ ಮೇಲಿಂದ ಅವುಗಳ ತೊಂದರೆಯಿರುವವರೆಗೆ ಆ ಉಪಾಸನೆಗಳನ್ನು ಕುರಿತು ವಿವೇಚಿಸವ ಗೊಡವೆ ಸರಿಯಾಗುವದಿಲ್ಲ ಮತ ಮತಗಳಲ್ಲಿಯ ಗೊಂದಲವು ನಡೆವೇ ಇರುವದು ಸೈನ್ಯದಲ್ಲಿ ದಟ್ಟ ವಸತಿಯ ಪಟ್ಟಣದಲ್ಲಿ, ಜಾತ್ರೆಯಲ್ಲಿ, ಇಲ್ಲವೆ ಸಂತೆ ನೆರೆದಲ್ಲಿ ಶಬ್ದಗಳ ಗಜಬಿಜಿಯು ಹೇಳಕೊಡದಷ್ಟಿರುವದು ಹೀಗೆ ನಡೆದ ಆ ಶಬ್ದಗಳಲ್ಲಿ ಇಂಥವೇ ಮಾತುಗಳು ನಡೆಯುತ್ತಿರುವದೆಂಬದನ್ನು ತಿಳಿಯಲಿಕ್ಕೆ ಬರಲಾರದು ಇದರ ವಿಚಾರವನ್ನು ಹೇಗೆ ಮಾಡಬೇಕು ? ದೊಡ್ಡ ಮಳೆ ಸುರಿದು ಮಧ್ಯರಾತ್ರಿಯಲ್ಲಿ ಸ್ವಲ್ಪ ನಿವಾಂತ ಸ್ಥಿತಿಯಾದಾಗ ಹಲವು ಜೀವಿಗಳ ಮಾತಿನ ಶಬ್ದಗಳು ಕೇಳಬರುವವು ಆ ಶಬ್ದಗಳನ್ನು ಹೇಗೆ ಗೊತ್ತುಮಾಡಿಕೊಳ್ಳತಕ್ಕದ್ದು ? ಈ ಜಗತ್ತಿನ ಮೇಲೆ ಹಲವು ದೇಶಗಳು, ಹಲವು ಭಾಷೆಗಳು, ಹಲವು ಋಷಿಗಳ ಹಾಗು ವಿಚಾರವಂತರ ಅನೇಕ ಮತಾಭಿಪ್ರಾಯಗಳು, ಇವುಗಳನ್ನು ಹೇಗೆ ಗೊತ್ತುಮಾಡಿಕೊಳ್ಳತಕ್ಕದ್ದು ? ಖೇಚರ, ಭೂಚರ, ಜಲಚರ, ಹೀಗೆ ಅನೇಕ ಪ್ರಾಣಿಗಳು ಭಿನ್ನ ಭಿನ್ನ ಪ್ರಕಾರಗಳ, ಚಿತ್ರ ವಿಚಿತ್ರ ಆಕೃತಿಗಳ ಅನಂತ ಶರೀರಗಳು ಇರುವವು ಅವನ್ನು ಯಾವ್ಯಾವ ಬಗೆಯಿಂದ ವಿಂಗಡಿಸಿ ತಿಳಿದುಕೊಳ್ಳ

ಬರುವದು ? ಮುಂಗಾರಿ ಮಳೆಯು ಬಿದ್ದ ಮೇಲೆ ಸೃಷ್ಟಿಯಲ್ಲೆಲ್ಲ ಭೂಮಿ ಯಲ್ಲಿಂದ ಹಲವು ಬಗೆಯ ಅಂಕುರಗಳು ಮೊಳೆತು ಹೊರಬರುವವು ಅವು ಗಳಲ್ಲಿ ಬೇರೆಬೇರೆ ಬಗೆಯ ವರ್ಗೀಕರಣವನ್ನೆಂತು ಮಾಡಬೇಕು ? ಪಂಚ ಭೂತ ತ್ರಿಗುಣಾತ್ಮಕ ಸೃಷ್ಟಿಯು ಮೂಲಮಾಯೆಯಲ್ಲಿಂದ ಪ್ರಕಟವಾಗುತ್ತಾ ಬಂದು ಅನಂತ ವಿಕಾರಗಳಿಂದ ವಿಸ್ತೃತಿ ಹೊಂದಿರುವದು ಇಂಥ ಆ ಸೃಷ್ಟಿ ಯಲ್ಲಿ ಯಾವ ಯಾವವುಗಳನ್ನು ಹೇಗೆ ಹೇಗೆ ಬೇರ್ಪಡಿಸತಕ್ಕದ್ದು ? ಆಕಾಶ ದಲ್ಲಿ ಗಂಧರ್ವ ನಗರಗಳು ಅಂದರೆ ಸಣ್ಣದೊಡ್ಡ ಆಕಾರಗಳುಳ್ಳ ಅನಂತ ಆಕೃತಿಗಳುಂಟಾದುದು ಕಂಡುಬರುವವು ಅವನ್ನು ಯಾವ ಪ್ರಕಾರ ವಿಂಗ ಡಿಸಬೇಕು ? ಹಗಲು, ರಾತ್ರಿ ಕತ್ತಲೆ, ಬೆಳಕು ವಿಚಾರ ಅವಿಚಾರ ಮತ್ತು ಅರವು ಮರವು, ಜೊಳ್ಳುಮಾತು-ಅನುಭವ- ಅನುಮಾನಗಳು, ನ್ಯಾಯ, ಅನ್ಯಾಯಗಳು, ಅಹುದು ಅಲ್ಲಗಳು, ಇತ್ಯಾದಿಗಳಿಂದ ಸಗಡ ಬಗಡುಗಳು ಸೃಷ್ಟಿಯಲ್ಲಿ ಸರ್ವಕಾಲವೂ ನಡೆದೇ ಇರುವವು ವಿವೇಕವಿಲ್ಲದೆ ಸತ್ಯವು ತಿಳಿಯುವದಿಲ್ಲ ಕಾರ್ಯಕರ್ತ ಹಾಗೂ ವ್ಯೈಗಳ್ಳ, ಶೂರಮತ್ತು ವಿಷಯಾ ಸಕ್ತ, ಧಾರ್ಮಿಕ, ಹಾಗು ಧರ್ಮಲಂಡ, ಧನಾಢ್ಯ ಹಾಗು ದಿವಾಳಿ ತೆಗೆ ದ , ಸಾಧು ಹಾಗು ಕಳ್ಳ, ಸತ್ಯ ಹಾಗು ಅಸತ್ಯ, ವರಿಷ್ಠ ಹಾಗು ಕನಿಷ್ಠ ಬ್ರಷ್ಟ ಹಾಗು ಅಂತರ್ನಿಷ್ಠ ಇವೆಲ್ಲವುಗಳಲ್ಲಿಯ ತಾರತಮ್ಯ ಭಾವವು ಸ್ಪಷ್ಟ ವಾಗಿ ತಿಳಿಯಬೇಕು ಒಟ್ಟಿನ ಮೇಲೆ ಸೃಷ್ಟಿಯಲ್ಲಿ ಎಲ್ಲೆಡೆಗೂ ವಿವಿಧ ಪ್ರಕಾರಗಳು ತುಂಬಿ ಹೋಗಿವೆ ಅವುಗಳಲ್ಲಿಯೇ ಅನೇಕ ಪ್ರಕಾರದ ಸಂಪ್ರ ದಾಯ ಉಪಾಸನೆಗಳೂ ವಿವಿಧ ಬಗೆಯಾಗಿರುವವು ವಿವಿಧತ್ವವೆಲ್ಲವೂ ಮಾಯೆಯ ಮೂಲಕ ತೋರುವವು ಅಂದ ಮೇಲೆ ಅವು ಅಸಾರವಾಗಿ ರುವವು ಈ ಅಸಾರವನ್ನು ವಿವೇಕದಿಂದ ತ್ಯಾಗಮಾಡಿ ಸಾರವುಳ್ಳ ಶಾಶ್ವತ ಹಾಗು ನಿರ್ಗುಣನನ್ನು ಸ್ವೀಕರಿಸತಕ್ಕದ್ದು

ಶ್ರೀ ರಾಮ ॥ ೧೦ ಗುಣಭೂತ ನಿರೂಪಣೆ ॥ ಗುರುಗಳು ಶಿಷ್ಯರಿಗೆ

"ಈ ಜಗತ್ತು ಪಂಚಭೂತಗಳ ಯೋಗದಿಂದ ನಡೆಯುವದು ಎಲ್ಲ ಚಲನವಲನವು ಆ ಭೂತಗಳದ್ದೇ ಆಗಿರುವದು. ಈ ಪಂಚ ಭೂತಗಳು ಅಡಗಿದ ಮೇಲೆ ಮುಂದೇನು? ಈ ಬಗೆಗೆ ಯಾರಾದರೂ ಆಕ್ಷೇಪಗೊಂಡರೆ ಅವರಿಗೆ ಈ ಬಗೆಯಾಗಿ ಉತ್ತರವಿದೆ ಏನೆಂದರೆ—?

ಆಕಾಶವೆಂದರೆ ಅಂತರಾತ್ಮನು ಈ ಆಕಾಶವು ಐದನೆಯ ಭೂತವು ತ್ರಿಗುಣಗಳು ಅದರ ಅಂಗಭೂತಗಳು ಅರ್ಥಾತ್ ಆಕಾಶದಲ್ಲಿಯೇ ತ್ರಿಗುಣಗಳ ಅಂತರ್ಭಾವವು ಇದರ ಹೊರತು ಉಂಟಾದ ಭೂತಗಳೆಲ್ಲವೂ ತ್ರಿಗುಣಗಳ ಜಾಲದಲ್ಲಿಯೇ ಉಂಟಾಗಿರುವವು ಇಷ್ಟರಿಂದಲೆ ಮೂಲ ಆಕ್ಷೇಪವು ನಿರಸನವಾಗುವದು ಭೂತಗಳ ಹೊರತು ಏನೂ ಇಲ್ಲ ಎಲ್ಲವೂ ಭೂತಗಳಿಂದ ಉತ್ಪಾದಿತಗಳು ಒಂದನ್ನು ಬಿಟ್ಟು ಇನ್ನೊಂದರಿಂದೇ ಒದಗುವದಿಲ್ಲ ಆತ್ಮನಿಂದ ವಾಯುವು, ವಾಯುವಿನಿಂದ ಅಗ್ನಿಯು ಅಗ್ನಿಯಿಂದ ಜೀವನವು, ಹೀಗೆ ಹೇಳಲ್ಪಡುವದು ಎಲ್ಲಿಡೆಗೆ ಜೀವನ (ನೀರು) ತುಂಬಿ ಅದು ಸೂರ್ಯನ ತೇಜದಿಂದ ಆಟ್ಟಿಸಿತು ಆಗ ಅಗ್ನಿ ಮತ್ತು ವಾಯುಗಳ ಸಹಾಯದಿಂದ ಪೃಥ್ವಿಯುಂಟಾಯಿತು ಅಗ್ನಿ, ವಾಯು, ಸೂರ್ಯ, ಇವರು ಇರದಿದ್ದರೆ ಎಲ್ಲ ಕಡೆಗೆ ನೀರು ತುಂಬಿ ಚಳಿಯುಂಟಾಗುತ್ತಿತ್ತು. ಶೀತಲತೆಯಲ್ಲಿಯೇ ಉಷ್ಣತೆಯು ಈ ನ್ಯಾಯದಂತೆ ಅನ್ಯೋನ್ಯ ಹಗೆತನ ಉಂಟಾಗಿದ್ದದರಿಂದಲೇ ಸೃಷ್ಟಿಯ ವಿಸ್ತಾರವುಂಟಾಯಿತು ಅಂತೆಯೇ ಪಂಚಭೂತಾತ್ಮಕ ಶರೀರವುಂಟಾಗಿದೆ ಎಲ್ಲವೂ ನೀರಿನ ಶೀತಲತೆಯಿದ್ದುದಾದರೆ ಪ್ರಾಣಿಗಳು ಚಳಿಯಿಂದ ನಡನಡುಗಿ ಸಾಯುತ್ತಿದ್ದವು ಅದರಂತೆ ಎಲ್ಲವೂ ಉಷ್ಣತೆಯಿದ್ದುದಾಗಿದ್ದರೆ ಪ್ರಾಣಿಗಳೆಲ್ಲ ಹುರುಪುಳಿಸಿ ಹೋಗುತ್ತಿದ್ದವು. ಪೃಥ್ವಿಯು ಆರಿ ಗಟ್ಟಿ ಗುಂಡಾಗಿ ಅದು ಸೂರ್ಯ ತೇಜದಿಂದ ಒಣಗಿ ಹೋಯಿತು ಆ ಮೇಲೆ ಅದಕ್ಕೆ ಪುನರುಪಾಯವೆಂದು ದೇವನು ಪರ್ಜನ್ಯಕಾಲವನ್ನು ನಿರ್ಮಾಣಗೊಳಿಸಿ ಅದಕ್ಕೆ ತಂಪನ್ನು ಉಂಟು ಮಾಡಿದನು ಆ ಬಳಿಕ ಕೆಲವು ಉಷ್ಣ ಕೆಲವು ತಂಪು ಹೀಗೆ ಮೇಲನಗೊಳಿಸಿ ಚಳಿಗಾಲನ್ನುಂಟು ಮಾಡಿದನು ಚಳಿಯಿಂದ ಪ್ರಾಣಿಗಳು ಬಳಲಿದವು, ಮತ್ತು ವೃಕ್ಷಗಳು ತರೆದು ನಿಂತವು ಇದಕ್ಕಾಗಿಯೇ ದೇವನು ಆ ಬಳಿಕ ಬೇಸಿಗೆಯನ್ನು ಉಂಟು ಮಾಡಿದನು ಅದರಲ್ಲಿಯೂ ಮತ್ತೆ ಮುಂಜಾವು, ಮಧ್ಯಾಹ್ನ ಹಾಗು ಸಂಜೆ ಹೀಗೆ ಮೂರುಕಾಲಗಳನ್ನು ಮಾಡಿ ಉಷ್ಣ ಹಾಗು ತಂಪುಗಳ ತಾರತಮ್ಯವನ್ನಿಟ್ಟನು ಈ ಪ್ರಕಾರ ಒಂದರ ಹಿಂದೊಂದು ವ್ಯವಸ್ಥೆ ಮಾಡಿದ್ದರಿಂದ ಜೀವಗಳು ರಕ್ಷಿತವಾಗುತ್ತವೆ. ನಾನಾ ರಸ ಸೇವನೆಯಿಂದ ಕಠಿಣ ರೋಗಗಳ ಉತ್ಪತ್ತಿಯಾಗಲು ಅವುಗಳ ನಿವಾರಣೆಗೆಂದು

॥ ಜಯ ಜಯ ರಘುವೀರ ಸಮರ್ಥ ॥

## ೧೭ನೆಯ ದಶಕ (ಪ್ರಕೃತಿ ಪುರುಷರು)

ಶ್ರೀ ರಾಮ ಸಮರ್ಥ ॥ ದೇವ ಬಲಾತ್ಕಾರ ॥ ಗುರುಗಳು ಶಿಷ್ಯನಿಗೆ:-

" ನಿಶ್ಚಲ ಬ್ರಹ್ಮನಿಂದ ಚಂಚಲ ಆತ್ಮವುಂಟಾಯಿತು ಆ ಆತ್ಮನು ಪಂಚ ಭೂತ ಹಾಗು ತ್ರಿಗುಣಗಳ ಆಚೆಗೆ ಇರುವನು. ಆತನಿಗೆ ಪರಮಾತ್ಮಾ, ಚೈತನ್ಯ, ಸಾಕ್ಷಿ, ಜ್ಞಾನಾತ್ಮಾ, ಷಡ್‌ಗುಣೇಶ್ವರ ಹೀಗೆ ಹೆಸರುಗಳುಂಟು ಅವನೇ ಜಗತ್ತಿನ ಒಡೆಯನು ಆದ್ದರಿಂದ ಅವನಿಗೆ ಜಗದೀಶ್ವರನೆಂದೂ ಹೆಸರು ಈತನಿಂದಲೇ ಸೃಷ್ಟಿಯು ವಿಸ್ತಾರಗೊಂಡಿತು ಶಿವಶಕ್ತಿ, ಜಗದೀಶ್ವರಿ, ಪ್ರಕೃತಿ—ಪುರುಷ, ಮೂಲಮಾಯೆ ಗುಣಮಾಯೆ, ಕ್ಷೇತ್ರಜ್ಞ, ದ್ರಷ್ಟಾ ಕೂಟಸ್ಥ, ಶುದ್ಧಸತ್ವ, ಮಹತ್ತತ್ವ, ಮುಂತಾದ ಹೆಸರುಗಳೆಲ್ಲವೂ ಆ ಚಂಚಲ ಆತ್ಮನಿಗೆ ಅಂದರೆ ಅಂತರಾತ್ಮನಿಗೆ ಉಂಟು ಅವನು ಬ್ರಹ್ಮ, ವಿಷ್ಣು, ಮಹೇಶ್ವರ, ಅನಂತ ಪಿಂಡಗಳಲ್ಲಿಯ ಜೀವ, ಸರ್ವ ಪ್ರಾಣಿ ಮಾತ್ರಗಳು ಇವುಗಳನ್ನೆಲ್ಲ ತಿಳಿಯುವನು ದೇಹವೆಂಬ ಗುಡಿಯಲ್ಲಿ ಕುಳಿತ ಆತನು ತನ್ನನ್ನು ಭಜಿಸದ ದೇಹವನ್ನು ಶಿಕ್ಷಿಸುವನು ಅದರಿಂದಲೇ ಜನರು ಭಯದಿಂದ ಆತನನನ್ನು ಭಜಿಸುವರು ಭಜನೆಯಲ್ಲಿ ತಾತ್ಸಾರ ಮಾಡುವವರನ್ನು ಒಳಿತಾಗಿ ದಂಡಿಸುವನು ಆದ್ದರಿಂದಲೇ ಎಲ್ಲ ಜನರು ಅವನ ಮುಂದೆ ನಮ್ರರಾಗುವರು ತನ್ನಲ್ಲಿ ಬೇಡ ಬಂದವರ ಅಪೇಕ್ಷೆಗಳನ್ನು ಆತನು ಪೂರೈಸುವನು. ಅದಕ್ಕಾಗಿಯೇ ಪ್ರಾಣಿ ಮಾತ್ರರು ಅವನಿಗೆ ಶರಣು ಹೋಗುವರು. ಶಬ್ದಾದಿ ಐದು ವಿಷಯಗಳ ನೈವೇದ್ಯವನ್ನು ಅವನಿಗಾಗಿ ಯಾವಾಗಲೂ ಸಿದ್ಧಪಡಿಸಿ ಇಡಬೇಕಾಗುವದು ಇಲ್ಲದೆ ಹೋದರೆ ಅವನು ಆ ದೇಹಕ್ಕೆ ಅನೇಕ ರೋಗಗಳ ಏರ್ಪಾಡು ಮಾಡುವನು ಅವನಿಗೆ ನೈವೇದ್ಯ ಸಿಗದಿದ್ದರೆ ಅವನು ಉದಾಸೀನನಾಗಿ ಭೋಗ್ಯ ಪದಾರ್ಥಗಳನ್ನು ವೈಭವವನ್ನೂ ಮತ್ತು ಉಳಿದೆಲ್ಲವನ್ನೂ ಬಿಟ್ಟು ಹೋಗುವನು ಅವನು

ಹೋಗುವ ಪರಿಯು ಮಾತ್ರ ಯಾರಿಗೂ ಗೊತ್ತಾಗವದಿಲ್ಲ ಆವನೊಡನೆ ಅನನ್ಯನಾಗದವನಿಗೆ ಅವನು ತನ್ನ ಸ್ವರೂಪವನ್ನು ತೋರಿಸುವದಿಲ್ಲ ಹೀಗಾಗಿ ಆ ದೇವನ ದರ್ಶನ ತೆಗೆದುಕೊಳ್ಳುವದಕ್ಕೆ ಗುಡಿಯನ್ನು ಶೋಧಿಸಬೇಕಾಗುವದು ಆದರೆ ಅವನು ಎಲ್ಲಿಯೋ ಒಂದೆಡೆಗೆ ಪ್ರಕಟನಾಗುವನು ಗುಡಿಯಲ್ಲಿ ಅಂದರೆ ಶರೀರದಲ್ಲಿ ಜೀವೇಶ್ವರನಿರುವನು ಶರೀರಗಳು ಹಲವಾಗಿ ಇದ್ದು ಅವು ಭಿನ್ನ ಭಿನ್ನವಿರುವವು ಗುಡಿಯಲ್ಲಿ ನಡೆ ನುಡಿಯುತ್ತ ದೇವನಿರುವನು ಎಲ್ಲ ಗುಡಿ(ಶರೀರ)ಗಳಲ್ಲಿ ದೇವ (ಅಂತರಾತ್ಮ)ನು ಇರುವನೆಂಬುದು ತಿಳಿಯಲಿಕ್ಕೆ ಬೇಕು ಮತ್ಸ್ಯ, ಕೂರ್ಮ ವರಾಹ, ಭೂಗೋಲದಲ್ಲಿಯ ಎಲ್ಲ ಪ್ರಾಣಿಗಳು [ಭಯಂಕರ ಪ್ರಾಣಿಗಳು ಸಹ] ಈ ಎಲ್ಲವುಗಳಲ್ಲಿ ಆತನು ಇದ್ದೇ ಇರುವನು ಎಷ್ಟೋ ಗುಡಿಗಳಲ್ಲಿ ಸಾಗರವುಕ್ಕೇರುವಂತೆ ಸೌಖ್ಯವೇ ಕಾಣಿಸುವದು ಆದರೆ ಆ ಸುಖವು ಚಿರಂತನವಿಲ್ಲ ಅಶಾಶ್ವತವು ಅನಿತ್ಯ ಸೃಷ್ಟಿಯ ಶಿರೋರತ್ನವೆಂದರೆ ಮೂಲ ಪುರುಷನು ಅವನ ಮಹತ್ಕೃತಿಗಳು ಕಣ್ಣಿಗೆ ತೋರದಿದ್ದರೆ ಏನಾಯಿತು? ಜೀವಗಳೆಲ್ಲ ಅವನೇ ತಮ್ಮ ಯಜಮಾನನೆಂದು ಒಪ್ಪಿಕೊಳ್ಳಬೇಕಾಗುವದು ಆತನು ಸರ್ವರ ಉತ್ಪನ್ನದ ಕಡೆಗೆ ನೋಡಿ ತಿರುವಿ ನೋಡಿದರೆ ಅವರೊಡನೆ ಆತನ ಅಭೇದವುಂಟಾಗುವದು ವಿಮುಖನಾದರೆ ಮಾತ್ರ ಎಲ್ಲವೂ ದುಃಖಮಯವಾಗುವದು ಹೀಗೆ ಜವನ ಸಂಬಂಧದಿಂದ ಅಧ ಮತ್ತು ಊರ್ಧ್ವಗಳು ಅಂದರೆ ಸುಖ ದುಃಖಳು ಇವುಗಳ ಸಂಬಂಧವುಂಟಾಗುವದು ಎಲ್ಲರಿಗೂ ಮೂಲನಾದ ಅಂತರಾತ್ಮನು ಕಾಣಿಸುವದಿಲ್ಲ, ಮತ್ತು ಭವ್ಯನಾಗಿರುವದರಿಂದ ಅವನು ಭಾಸವಾಗುವದಿಲ್ಲ ಕ್ಷಣಮಾತ್ರವೂ ಅವನು ಎಲ್ಲಯೂ ಸ್ಥಿರನಾಗಿರುವದಿಲ್ಲ ಇಂಥ ಪರಮಾತ್ಮನ ಅಗಾಧ ಮಹಿಮೆಯನ್ನು ಯಾರೂ ಅರಿಯರು ಆ ಸರ್ವೋತ್ತಮನು ತನ್ನ ಲೀಲೆಯನ್ನು ತಾನೇ ತಿಳಿಯುವನು. ನಿತ್ಯಾನಿತ್ಯ ವಿವೇಕದಿಂದ ಇಹ—ಪರಗಳನ್ನು ಸಾಧಿಸಿಕೊಂಡವನ ಜನ್ಮವು ಸಾರ್ಥಕವು ಮನನ ಶೀಲನಾದ ಮಾನವನ ಬಳಿಯಲ್ಲಿ ಅನಾದ್ಯಂತ ಪರಮೇಶ್ವರನು ಹಗಲಿರುಳೂ ಬಿಡುವಿಲ್ಲದೆ ಇರುವನು ಅಂಥ ಮಾನವನ ಪುಣ್ಯಕ್ಕೆ ಎಣೆಯೇ ಇಲ್ಲ ದೇವನಲ್ಲಿ ಆತನ ಅಖಂಡ ಯೋಗವಿರುವದ

ರಿಂದಲೇ ಅವನೇ ನಿಜವಾದ ಯೋಗಿಯೆನ್ನಬಹುದು ಯೋಗವಿಲ್ಲದ ವನು ನಿಯೋಗಿಯು ಅವನು ದೇವನಿಂದ ಸಿಡಿದು ಹೋಗಿದ್ದರೂ ಆತನು ಯೋಗ ಬಲದಿಂದ ಯೋಗಿಯೇ ಆಗುತ್ತಾನೆ ಇಂಥವನೇ ಒಳ್ಳೆಯ ಹಾಗು ನಿಜವಾದ ಮಾನವನು

ಸಮುದ್ರದಲ್ಲಿ ಈಜು ಬಾರದೆ ಮುಳುಗುತ್ತಿರುವವನನ್ನು ಎಳೆದು ದಂಡೆಗೆ ತರುವಂತೆ ಇವನು ಇತರರನ್ನು ಸನ್ಮಾರ್ಗಕ್ಕೆ ಎಳದೊಯ್ಯು ವನು ಸ್ಥೂಲ ಮತ್ತು ಸೂಕ್ಷ್ಮ ತತ್ವಗಳನ್ನು ನೀಗಿ ಪಿಂಡ—ಬ್ರಹ್ಮಾಂಡ ಗಳನ್ನು ವಿಚಾರದಿಂದ ನಿರಸನ ಮಾಡಿಕೊಂಡು ಆತ್ಮಾನುಭವವನ್ನು ಕಾಣುವ ಇಂಥ ಪುರುಷರು ವಿರಳರಾಗಿರುವರು ಇವರು ವೇದದಲ್ಲಿಯ ಪಂಚೀಕರಣ ಅಂದರೆ ಮೂಲ ಮಾಯೆಯಿಂದ ಪಿಂಡದ ವರೆಗಿನ ಸರ್ವ ಸೃಷ್ಟಿಯ ನಿತ್ಯ ವಿಚಾರವನ್ನು ಮಾಡಿ ಅಂತಸ್ಥದೇವನನ್ನು ಮಹಾ ವಾಕ್ಯದ ಮನನದಿಂದ ಕಾಣುವರು ಇಂಥ ವಿವೇಕಿಗಳ ಸಂಗತಿಯು ಧನ್ಯವಾದುದು ಇಂಥವರ ಮುಖದಿಂದ ನಿರೂಪಣೆಯನ್ನು ಕೇಳುವ ದರಿಂದ ಪ್ರಾಣಿ ಮಾತ್ರರು ಉದ್ಧೃರಾಗುವರು ಇವರಿಂದ ಸತ್ಸಂಗ, ಸತ್ ಸಾಸ್ತ್ರ ಶ್ರವಣಗಳೊದಗಿ ಪರೋಪಕಾರ ಗುಣವು ಉಂಟಾಗು ತ್ತದೆ ಈ ಪ್ರಕಾರದ ಕೀರ್ತಿವಂತ ಪುರುಷರು ದೆವಾಂಶರೆಂದು ಹೇಳ ತಕ್ಕದ್ದು ಇವರಲ್ಲಿಯೇ ಧರ್ಮ ಸ್ಥಾಪನೆಯ ಬಗೆಗೆ ಪ್ರೀತಿಯಿರುವದು

ವಿಶೇಷವಾಗಿ ಹೇಳುವದೇನಂದರೆ— ಎಲ್ಲರಲ್ಲಿ ಸಾರಾಸಾರ ವಿಚಾರ ವಿರಬೇಕು ಆದರಿಂದ ಜಗತ್ತಿನ ಉದ್ಧಾರವಾಗುವದು ನಿಸ್ಸಂಗದಿಂದ ಸ್ವರೂಪಾಕಾರವುಂಟಾಗುವದು ”

॥ ಶ್ರೀ ರಾಮ ೨ ಶಿವಶಕ್ತಿ ನಿರೂಪಣೆ ॥ ಗುರುಗಳು ಶಿಷ್ಯರಿಗೆ —

“ ಬ್ರಹ್ಮನು ಆಕಾಶದಂತೆ ನಿಶ್ಚಲನು, ನಿರ್ಮಲನು, ನಿರಾಕಾರನು ಹಾಗು ನಿರ್ವಿಕಾರನು. ಅವನು ಅಂತರಹಿನಾದುದರಿಂದ ಅನಂತನೆಂದು ಅವನಿಗೆ ಹೆಸರು ಮತ್ತು ಆತನು ಶಾಶ್ವತನು, ನಿರಂತರನು, ಸದಾವ ಕಾಲವೂ ಸಂತನು ಪರಬ್ರಹ್ಮನೆನ್ನಿಸಿದ ಆತನು ಅವಿನಾಶನು ಆತನು ಆಕಾಶದಂತೆ ಒಡೆಯುವದಿಲ್ಲ, ಹರಿಯುವದಿಲ್ಲ, ಯಾವಾಗಲೂ ಇದ್ದಂತೇ ಇರುವನು. ಅವನಲ್ಲಿ ಜ್ಞಾನ—ಅಜ್ಞಾನಗಳಿಲ್ಲ, ಸ್ಮರಣ—ವಿಸ್ಮರಣಗಳಿಲ್ಲ,

ಆತನು ನಿರಾವಲಂಬಿಯಾಗಿರುವನು ಅಂದರೆ ಇನ್ನೊಂದರ ಆಶ್ರಯು ವಿಂದೆ ಸ್ವಯಂಭೂ ಆಗಿರುವನು ಆತನೂ ಅಖಂಡನೂ, ನಿರ್ಗುಣನೂ ಆಗಿರುವನಲ್ಲದೆ ಅವನಲ್ಲಿ ಸೂರ್ಯಾಗ್ನಿ ಚಂದ್ರರಿಲ್ಲ, ಬೆಳಕು—ಕತ್ತಲೆ ಗಳಿಲ್ಲ, ಅವನು ದ್ವೈತರಹಿತನಾಗಿ ಅದ್ವಯನೂ ನಿರುಪಾಧಿಕನೂ ಆಗಿ ರುವನು ಆ ನಿಶ್ಚಲನಲ್ಲಿ ಸ್ಮರಣವು ಸ್ಫುರಿಸಿ ಅದಕ್ಕೆ ಚೈತನ್ಯವೆಂದು ಕಲ್ಪನೆಮಾಡಿತು ಅಲ್ಲಿ ತ್ರಿಗುಣಗಳು ಸಮಾನವಾಗಿದ್ದುದರಿಂದಲೇ ಅದಕ್ಕೆ ಗುಣಮಾಯಾ ಎಂಬ ಹೆಸರುಂಟಾಯಿತು ಆಕಾಶದಲ್ಲಿ ಬಂದ ಮೋಡಗಳ ನೆರಳಿನಂತೆ ಮೂಲ ಮಾಯೆಯನ್ನು ತಿಳಿಯಬೇಕು ಮೋಡ ಗಳೂ ಪಸರಿಸಲಿಕ್ಕೂ ಬಯಲಾಗಲಿಕ್ಕೂ ಹೆಚ್ಚು ಕಾಲ ಬೇಕಾಗುವ ದಿಲ್ಲ ಅದರಂತೆ ಬ್ರಹ್ಮನಲ್ಲಿ ಮೂಲ ಮಾಯೆಯ ಆವರಣವು ನಿಂತಿರು ವದು ನಿರ್ಗುಣನಲ್ಲಿಯ ಮೋಡದಂತಿರುವ ವಿಕಾರಕ್ಕೇ ಮೂಲಮಾಯೆ ಎಂಬ ಹೆಸರು ಈ ಹೆಸರಲ್ಲದೆ ಷಡ್ಗುಣೈಶ್ವರ, ಅರ್ಧನಾರೀ ನಟೇಶ್ವರ ಆದಿಶಕ್ತಿ, ಶಿವಶಕ್ತಿ ಮುಂತಾದ ಹೆಸರುಗಳಿವೆ ಮೂಲ ಮಾಯೆಯ ಲ್ಲಿಯೇ ಸೃಷ್ಟಿ ರಚನೆಯ ಸರ್ವ ಶಕ್ತಿಯಿರುತ್ತದೆ ಅದರಿಂದ ಮುಂದೆ ನಾನಾ ವ್ಯಕ್ತಿಗಳುದಿಸಿದವು ಅಲ್ಲಿಂದ ಮುಂದೆ ರಜತ ಮಹಿ ಗೂಢತ್ವವುಳ್ಳ ಶುದ್ಧ ಸತ್ವವುಂಟಾಯಿತು ಇದೇ ಮಹತ್ತತ್ವ ಅಥವಾ ಗುಣಮಾಯೆಯು ಇನ್ನೂ ಮೂಲ ಮಾಯೆಯೇ ಅವ್ಯಕ್ತವಿರುವಾಗ ಅದರಲ್ಲಿ ಶಿವಶಕ್ತಿಯು ಎಲ್ಲಿಂದ ಬಂದಿತೆಂದು ಕೇಳಿದರೆ ಆ ಬಗೆಗೆ ಸಾವ ಧಾನದಿಂದ ವಿಚಾರ ಮಾಡಬೇಕು ಪಿಂಡದ ಮೇಲಿನಿಂದ ಬ್ರಹ್ಮಾಂಡವು ಬ್ರಹ್ಮಾಂಡದ ಮೇಲಿನಿಂದ ಪಿಂಡವು ಕೆಳಗಿನಿಂದ ಮೇಲಕ್ಕೆ, ಮೇಲಿ ನಿಂದ ಕೆಳಕ್ಕೆ ಹೇಗಾದರೂ ವಿಚಾರಮಾಡಿ ನೋಡಿದರೆ ತಿಳಿಯುವದು ಮಾವಿನ ಬೀಜವನ್ನು ಒಡೆದು ನೋಡಲು ಅದರಲ್ಲಿ ಫಲವು ಏನೂ ಕಾಣಿಸುವದಿಲ್ಲ. ಆದರೆ ಅದೇ ಬೀಜವನ್ನು ನೆಲದಲ್ಲಿ ಊರಿ ನೀರು ಹನಿಸಿ ಬೆಳೆಯಿಸಿ ಮರವನ್ನು ಮಾಡಲು ಕಡೆಗೆ ಫಲಗಳು ಕಂಡುಬರು ವವು ಹಣ್ಣು ಬಿಚ್ಚಿನೋಡಲು ಒಳಗೆ ಬೀಜವಿರುವದು. ಕಂಡು ಬರು ವದು ಆ ಬೀಜವನ್ನು ಒಡೆದು ನೋಡಲು ಅದರಲ್ಲಿ ಹಣ್ಣು ಕಾಣಿ ಸುವದಿಲ್ಲ ಹೀಗೆಯೇ ಪಿಂಡ ಬ್ರಹ್ಮಾಂಡದ ಬಗೆಗೆ ವಿಚಾರವನ್ನು

ಮಾಡಬೇಕು ಪಿಂಡದಲ್ಲಿ ಸ್ತ್ರೀ—ಪುರುಷರೆಂಬ ಭೇದವು ಕಂಡು ಬರುವದು. ಆದರೆ ಮೂಲತಃ ಈ ಭೇದವಿರದಿದ್ದರೆ ಪಿಂಡದಲ್ಲಿ ಅದೆಂತು ಕಾಣುವದು? ಬೀಜ ರೂಪ ಕಲ್ಪನೆಯ ಹೊಟ್ಟೆಯಲ್ಲಿ ಅನಂತ ಕಲ್ಪನೆಗ ಳಿರುವವು. ಅವು ಸೂಕ್ಷ್ಮವಾಗಿರುವದರಿಂದ ಭಾಸವಾಗುವದಿಲ್ಲ. ಸ್ಥೂಲದ ಮೂಲವು ವಾಸನೆಯಲ್ಲಿರುವದು ಆದರೆ ಆ ವಾಸನೆಯು ಕಂಡು ಬರು ವದಿಲ್ಲ ಇದನ್ನು ಹೇಳುವ ತಾತ್ಪರ್ಯವೇನಂದರೆ— ಸ್ಥೂಲದಿಂದ ಸೂಕ್ಷ್ಮದ ಹಾಗು ಸೂಕ್ಷ್ಮದಿಂದ ಸ್ಥೂಲದ ಕಲ್ಪನೆ ಮಾಡಬೇಕಾಗುತ್ತದೆ ಕಲ್ಪನೆ ಯಿಂದ ಸೃಷ್ಟಿಯುಂಟಾಯಿತೆಂದು ವೇದಶಾಸ್ತ್ರಗಳು ಹೇಳುವವು ಮತ್ತು ಅವೇ ವೇದಶಾಸ್ತ್ರಗಳು ಕಲ್ಪನೆಗಳು ಕಾಣಿಸ ವದಿಲ್ಲವೆಂದೂಹೇಳುವವು ಅವು ಗಳ ಹೇಳಿಕೆಯು ಅಸತ್ಯವಲ್ಲ ಒಂದೊಂದು ಜನ್ಮವು ಒಂದೊಂದು ಪರದೆಯಂತಿರುವದು ಇಂಥ ಹಲವು ಪರದೆಗಳು ನಡುವೆ ಬರುವದ ರಿಂದ ನಮಗೆ ಮೂಲದ ವಿಚಾರವು ತಿಳಿಯುವದಿಲ್ಲ ಆದರೆ ಅದರ ನಿಶ್ಚಿತ ರಹಸ್ಯವು ಮಾತ್ರ ಹೀಗೆಯೇ ಗೂಢವಾಗಿರುವದು ಅದು ವಿವೇ ಕದ ಹೊರತು ಗೊತ್ತಾಗಲಾರದು ಸ್ತ್ರೀ ಪುರುಷರ ಹಲವು ಜೀವಗಳಿ ರುವವು ಆದರೆ ಅವವುಗಳ ದೇಹ ಸ್ವಭಾವಗಳು ಭಿನ್ನ ಭಿನ್ನವಾಗಿಯೇ ಇರುವವು ವಧುವಿಗೆ ಬೇರೊಂದು ವಧುವು ಬೇಕಾಗುವದಿಲ್ಲ ಆದರೆ ಆ ವಧುವಿಗೆ ವರನೇಬೇಕು ಇದು ಪಿಂಡದ ನಿಯಮವು ಈ ವಿವರಣೆ ಯಿಂದ ಬ್ರಹ್ಮಾಂಡ ಬೀಜವಾದ ಮೂಲ ಮಾಯೆಯ ಬಗೆಗೆ ವಿಚಾರ ಮಾಡತಕ್ಕದ್ದು ವಧುವಿನ ಮನಸ್ಸು ವರನ ಮೇಲೆ ವರನ ಮನಸ್ಸು ವಧುವಿನ ಮೇಲೆ ಹೀಗೆ ಪಿಂಡಗಳಲ್ಲಿ ಭಿನ್ನವಾಸನೆ ಕಂಡು ಬರುವದು. ಅದನ್ನು ಮೂಲ ಮಾಯೆಯಿಂದಲೇ ಕಂಡು ಕೊಳ್ಳಬೇಕು ವಾಸನೆಯು ಅಭಿನ್ನವಾದರೂ ದೇಹ ಸಂಬಂಧದಿಂದ ಭೇದವಾಗುವದು ಆ ದೇಹ ಸಂಬಂಧವು ದೂರಾದರೆ ಭೇದವಿಲ್ಲದಾಗುವದು. ಪಿಂಡದಲ್ಲಿ ತೋರುವ ನರನಾರಿಯರ ಭೇದ ಸಂಬಂಧವು ಮೂಲ ಮಾಯೆಯಲ್ಲಿ ಶಿವಶಕ್ತಿ ರೂಪದಿಂದ ಸೂಕ್ಷ್ಮತ ಇರಲಿಕ್ಕೆಬೇಕು. ಇದು ಸ್ಥೂಲದಿಂದ ಸೂಕ್ಷ್ಮದ ಕಡೆಗೆ ಹಿಂದೆ ಹಿಂದೆ ಹೋದಂತೆ ತಿಳಿದು ಬರುವದು ಪ್ರೀತಿಯ ಸೂಕ್ಷ್ಮ ವಾಸನೆಗಳು ಹಲವು ಇರುವವು ಆದರೆ ಆ ವಾಸನೆಗಳಲ್ಲಿ

ಒಂದು ಇನ್ನೊಂದಕ್ಕೆ ಗೊತ್ತಾಗುವದಿಲ್ಲ ಸೂಕ್ಷ್ಮ ವಿಚಾರ ಮಾಡಿದರೆ ಏನೊಂದು ಸ್ಮರಣೆಗೆ ಬರುವದು ತಾಯಿಯು ಮಗುವನ್ನು ಸಂಗೋಪನ ಮಾಡುವಳು ಆದರೆ ಈ ಕ್ರಿಯೆಯು ಗಂಡಸಿನಿಂದ ಆಗುವದಿಲ್ಲ ಸ್ತ್ರೀಯಿಂದಲೇ ಎಲ್ಲ ಉಪಾಧಿಗಳು ಬೆಳೆಯುವವು ಸ್ತ್ರೀಯಳಿಗೆ ಆಲಸ್ಯವೂ ಹೇಸಿಕೆಯೂ, ಬೇಸರಿಕೆಯೂ, ಉಪದ್ರವವೂ ಇವು ಏನೂ ಅನ್ನಿಸುವದಿಲ್ಲ ಕೇವಲ ಆಕೆಯಲ್ಲಿ ಅತ್ಯಂತ ಮಮತೆಯು ನೆಲೆಸಿರುವದು ತಾಯಿಯ ಮಮತೆಯು ಇನ್ನಾರಿಗೂ ಬರಲಾರದು ಹಲವು ಉಪಾಧಿಗಳನ್ನು ಹೆಚ್ಚಿಸುವದೂ, ಮಾಯಾ ಮಮತೆಯಿಂದ ಕೂಡಿಕೊಳ್ಳುವದೂ, ಪ್ರೇಮ ಪ್ರೀತಿಯಿಂದ ತನ್ನನ್ನು ಪ್ರಪಂಚ ಪಾಶದಿಂದ ಬಂಧಿಸಿಕೊಳ್ಳುವದೂ ಇವೆಲ್ಲವು ತಾಯಿಯಿಂದಲೇ ಒದಗುವವು ಆಕೆಯೇ ಈ ಕಾರ್ಯಗಳಿಗೆ ಸಮರ್ಥಳು ಪುರುಷನ ವಿಶ್ವಾಸವು ಸ್ತ್ರೀಯ ಮೇಲಿರುವದು ಸ್ತ್ರೀಯಳ ಸಂತೋಷದ ಸ್ಥಾನವು ಪುರುಷನಾಗಿರುವನು ಈ ಪ್ರಕಾರದ ಅನ್ಯೋನ್ಯ ವಾಸನೆಗಳ ಪಾಶಗಳು ಉಭಯತರಲ್ಲಿ ಐಕ್ಯವಾಗುವಂತೆ ಬಂಧಿಸಿ ಬಿಡುವವು ಈಶ್ವರೀ ಸೂತ್ರವು ಅಗಾಧವಾದದ್ದು ಅದರ ತೊಡಕನ್ನು ಬಿಡಿಸುವದು ಮನುಷ್ಯ ಮಾತ್ರರಿಗೆ ದುರ್ಘಟವಾಗಿರುವದು ಯಾಕೆಂದರೆ ಆ ಸೂತ್ರವು ಪ್ರೇಮ ಜಾಲದಲ್ಲಿ ಹೆಣೆಯಲ್ಪಟ್ಟಿರುವದು ಸ್ತ್ರೀ ಪುರುಷರಲ್ಲಿಯ ಈ ರುಚಿಕಟ್ಟು ಮೂಲ ಮಾಯೆಯಿಂದಲೇ ನಡೆದು ಬಂದಿದೆ ಇದನ್ನೂ ಪ್ರತ್ಯಕ್ಷಾನುಭವದಿಂದ ಕಾಣತಕ್ಕದ್ದು ಮೂಲ ಮಾಯೆಯಲ್ಲಿ ಸೂಕ್ಷ್ಮ ನಿರ್ಮಾಣವಾಯಿತು ಅದೇ ಮುಂದೆ ಸ್ಪಷ್ಟವಾಗಿ ತೋರಿ ಸ್ತ್ರೀ ಪುರುಷರಿಗಾಗಿ ಉತ್ಪತ್ತಿ ಕಾರ್ಯಗಳು ನಡೆದವು ಮೂಲ ಮಾಯೆಯಲ್ಲಿಯ ಶಿವಶಕ್ತಿಯರು ಮುಂದೆ ಅವರೇ ವಧೂವರರಾದರು

ಇದೇ ಬಗೆಯು ೮೪ ಲಕ್ಷ ಜೀವಯೋನಿಗಳಿಗೆ ಸಂಬಂಧಿತವಾಗಿ ಸೃಷ್ಟಿಯ ವಿಸ್ತಾರವಾಯಿತು

ಇಲ್ಲಿ ಶಿವಶಕ್ತಿ ರೂಪವನ್ನು ವಿವರವಾಗಿ ನಿರೂಪಿಸಿದೆವು ಇದನ್ನು ಶ್ರೋತೃಗಳು ಮನನ ಮಾಡಿಕೊಳ್ಳತಕ್ಕದು ಯಾವದೊಂದು ಸಂಗತಿ

ಯನ್ನು ವಿವರಿಸದೆ ಸ್ವಲ್ಪ ಮಾತಿನಲ್ಲಿ ಹೇಳುವದು ಸರಿಯಲ್ಲವೆಂದು ತಿಳಿಯತಕ್ಕದ್ದು."

ಶ್ರೀ ರಾಮ || ೩ ಶ್ರವಣ ನಿರೂಪಣೆ || ಗುರುಗಳು ಶಿಷ್ಯರಿಗೆ ಶ್ರವಣ ನಿರೂಪಿಸುವರು

"ನಿಲ್ಲಿರಿ, ನಿಲ್ಲಿರಿ ನಾನು ಹೇಳುವದನ್ನು ಸಾವಧಾನದಿಂದ ಕೇಳಿರಿ. ಮೊದಲಿಗೇ ಗ್ರಂಥವನ್ನು ಬಿಡಬೇಡಿರಿ ಎಲ್ಲ ಶ್ರವಣಗಳಲ್ಲಿ ಅಧ್ಯಾತ್ಮ ಶ್ರವಣವು ಹೆಚ್ಚಿನದು ಏಕಾಗ್ರತೆಯಿಂದ ಗ್ರಂಥದಲ್ಲಿಯ ತತ್ವಗಳನ್ನು ಮನನ ಮಾಡಿಕೊಳ್ಳಿರಿ ಹಾಗು ಅನುನನವಾದುದರ ಚಿಂತನಮಾಡಿಕೊಳ್ಳಿರಿ ಇಂತು ನಿದಿಧ್ಯಾಸವಾಗವಾಗುತ್ತಲೇ ಸಾಕ್ಷಾತ್ಕಾರವುಂಟಾಗುವದು ಮೋಕ್ಷವು ತಾತ್ಕಾಲಕ್ಕೇ ಲಭಿಸುವಂತಹದು ಅದಕ್ಕೆ ದಿನಾವಧಿ ಬೇಕಾಗಿಲ್ಲ ಮುತ್ತು ರತ್ನ ಮಾಣಿಕಗಳನ್ನು ಪರೀಕ್ಷಿಸುವಲ್ಲಿ ಅವುಗಳ ತೂಕ ಮೊದಲಾದವುಗಳನ್ನು ಸರಿಯಾಗಿ ನೋಡಿ ಪರೀಕ್ಷಿಸತಕ್ಕದ್ದು ಬಂಗಾರಕ್ಕೆ ಪುಟಕೊಟ್ಟು ನಿರೀಕ್ಷಿಸುವಲ್ಲಿ ಚಿತ್ತವಿರಬೇಕು ವಿಚಾರವಂತನು ಎಚ್ಚರದಿಂದ ಮಾತುಗಳನ್ನಾಡಬೇಕು ಸ್ತ್ರೀಯರು ಲಕ್ಷ ಅಕ್ಷತೆಗಳನ್ನು ದೇವರಿಗೆ ಏರಿಸುವಲ್ಲಿ ದಕ್ಷತೆ ತಾಳುವರು ಅವರು ಆ ಅಕ್ಷತೆಯ ಕಾಳುಗಳನ್ನು ಎಣಿಸಿ ಸಮಂತ್ರಕವಾಗಿ ಒಂದೊಂದನ್ನು ಏರಿಸುವರು ಕಾಳುಗಳನ್ನು ಲೆಕ್ಕ ಮಾಡದ ಹಾಗೇ ಸಮರ್ಪಿಸುವದರಿಂದ ದೇವನು ಕೋಪಗೊಳ್ಳುವನು. ರಾಜಕಾರಣಿಗಳು ರಾಜ್ಯ ಕಾರಭಾರದ ಇಂಗಿತ ಸಂಗತಿಗಳನ್ನು ಕುರಿತು ಏಕಾಂತದಲ್ಲಿ ಸಾವಧಾನದಿಂದ ವಿಚಾರ ಮಾಡುವರು. ಇದರ ಕೋಟಿಪಟ್ಟು ಬುದ್ಧಿಯ ಸೂಕ್ಷ್ಮತೆಯನ್ನು ಅಧ್ಯಾತ್ಮ ಗ್ರಂಥಗಳ ಮನನ ಮಾಡುವಲ್ಲಿ ಉಪಯೋಗಿಸಬೇಕಾಗುವದು. ಹಾಡು, ಕಥೆ, ಚರಿತೆ, ಪವಾಡಗಳು, ಅವತಾರ ಚರಿತ್ರೆಗಳು ಮುಂತಾದವುಗಳಿಗಿಂತ ಅಧ್ಯಾತ್ಮ ವಿದ್ಯೆಯು ಮಹತ್ತ್ವವಾದದ್ದು. ಹಿಂದೆ ಆಗಿ ಹೋದವರ ಕಥೆಯಿಂದ ನಮಗೆ ಆಗಬೇಕಾದುದೇನು? ಪುಣ್ಯ ಪ್ರಾಪ್ತಿಯೆಂದು ಕೆಲವರು ಹೇಳುವರು ಆದರೆ ಅದರಲ್ಲಿ ಪುಣ್ಯಾಂಶವು ಕಾಣುವದಿಲ್ಲ ಅಧ್ಯಾತ್ಮ ವಿಷಯದ ಬಗೆಗೆ ಮಾತ್ರ ಹಾಗೆ ಹೇಳಲಾಗದು. ಅಧ್ಯಾತ್ಮವು ತತ್‌ಕ್ಷಣವೇ ಮೋಕ್ಷದಾಯಕವಾದುದು. ಇದರ ಅನುಭವದ ಜೊತೆಗೇ ಆನುಮಾನಿಕ ಜ್ಞಾನವು

ಸಂಹಾರವಾಗುತ್ತ ಹೋಗುವದು ಆದೆಷ್ಟೋ ಮಹಾ ಜನರುಗಳು ಆತ್ಮ ಲಾಭಕ್ಕಾಗಿ ಪ್ರಯಾಸ ಹೊಂದಿದರು ಈ ಆತ್ಮನ ಮಹಿಮೆಯನ್ನು ಅದಾರು ವರ್ಣಿಸುವರು? ಯುಗ ಯುಗಾಂತರಗಳಿಂದ ಈ ತ್ರೈಲೋಕ್ಯ ವನ್ನು ಆತ್ಮನೊಬ್ಬನೇ ಸಾಗಿಸುತ್ತ ಬಂದಿರುವನು ಆ ಆತ್ಮನ ಬಗೆಗೆ ವಿಚಾರಿಸಬೇಕು ಈ ಸೃಷ್ಟಿಯಲ್ಲಿ ಅನಂತ ಪ್ರಾಣಿಗಳ ಬರು-ಹೋಗುವಿಕೆ ಗಳು ಎಂದಿನಿಂದಲೋ ನಡೆಯುತ್ತ ಬಂದಿವೆ ಅವು ಹೇಗೆ ಹೇಗೆ ವರ್ತಿಸಿ ದವೋ ಆ ವರ್ತನೆಗಳನ್ನು ಅವುಗಳ ಇಚ್ಛೆಯಂತೆ ಹೇಳಿದೆ ಆತ್ಮನಿಲ್ಲದೆ ಎಲ್ಲವೂ ವ್ಯರ್ಥವು ಅವನಿಲ್ಲದ ಪ್ರಾಣಿಯು ಕಟ್ಟಿಗೆಯ ಬೊಂಬೆ ಇದ ನ್ನವನು ಎಂತು ತಿಳಿಯುವನು? ಈ ಪ್ರಕಾರ ಆತ್ಮಜ್ಞಾನವು ಎಲ್ಲ ಜ್ಞಾನ ಗಳಲ್ಲಿ ಹೆಚ್ಚಿನದು ಆ ಜ್ಞಾನಸಂಥ ಇನ್ನೊಂದಾವುದೂ ಇರುವದಿಲ್ಲ ವಿವೇ ಕಿಗಳಾದ ಸಜ್ಜನರು ಅದರ ಮಹತ್ವವನ್ನು ತಿಳಿಯುವರು ಪೃಥ್ವಿ, ಆಪ, ತೇಜಗಳೆಲ್ಲ ಪೃಥ್ವಿಯಲ್ಲಿ ಸಮಾವೇಶವಾದನಂತರ ಆಕಾಶವು ಬೇರೆಯೇ ಉಳಿಯುವದು ಈ ತತ್ವವು ಎಲ್ಲ ತತ್ವಗಳ ಬೀಜವಾಗಿದೆ ವಾಯು ತತ್ವದ ಆಚೆಯ ಬಗೆಗೆ ವಿಚಾರ ಮಾಡುವವನಿಗೆ ಹತ್ತಿರದಲ್ಲಿಯೇ ಅಂತರಾತ್ಮನು ದೊರೆಯುವನು ವಾಯುವಿನ ಮುಂದೆ ಆಕಾಶವು, ತದ ನಂತರ ಗುಣಮಾಯೆಯು ಆ ಬಳಿಕ ಪ್ರಕೃತಿ ಪುರುಷವು ಅಂದರೆ ಮೂಲ ಮಾಯೆಯು ಇದು ಉತ್ತರೋತ್ತರ ಸೂಕ್ಷ್ಮವಿರುವದು ಮತ್ತು ಸೂಕ್ಷ್ಮ ರೂಪದಿಂದಲೇ ಅದರ ಪ್ರಚೀತಿಯನ್ನು ತಕ್ಕೊಳ್ಳಬೇಕು ಮಾಯೆಯ ಗೊಂದಲದಲ್ಲಿ ಸಿಕ್ಕು ಬಿದ್ದ ಜೀವವು ತನ್ನ ಮನಸ್ಸನ್ನು ಆಷ್ಟೊಂದು ಸೂಕ್ಷ್ಮ ದಲ್ಲಿ ತೊಡಗಿಸುವದು ಕಂತು ಬರಲಾರದು ಆದರೆ ವಿವೇಕದಿಂದ ತಿಳಿದು ಸೂಕ್ಷ್ಮದಲ್ಲಿ ನಿಸ್ಸಂದೇಹವಾಗಿ ಪ್ರವೇಶ ಮಾಡಲು ಬರುವದು ಮೂಲ ಮಾಯೆಯು ಬ್ರಹ್ಮಾಂಡದ ಒನೆಯ ಶರೀರವು ಅದನ್ನು ವಿವೇಕದಿಂದ ನಿರಸನ ಮಾಡಿಕೊಳ್ಳಬೇಕು ಎಂಟೂ ಶರೀರಗಳಿಂದ ಅತೀತನಾಗಿರುವ ಸಾಧುವು ಧನ್ಯನು. ವಿಚಾರದಿಂದ ಉನ್ನತಿಗೇರಿದವನಿಗೆ ಊರ್ಧ್ವಗತಿ ದೊರಕುವದು ಇತರ ಪದಾರ್ಥಗಳ ಜ್ಞಾನದಲ್ಲಿ ಮನಸ್ಸನ್ನು ತೊಡಗಿ ಸುವವನು ಅಧೋಗತಿಗಿಳಿಯುವನು ಪದಾರ್ಥಗಳು ರಮ್ಯವಾಗಿ ತೋರು ವವು ಆದರೆ ಅವು ನಶ್ವರವಾದವುಗಳು ಹೀಗೆ ಅಜ್ಞಾನದಿಂದಲೇ ಪ್ರಾಣಿ

ಗಳು ಯಾವ ಗತಿಯನ್ನೂ ಕಾಣದೆ ಜನ್ಮವನ್ನು ನಿರರ್ಥಕ -ಮಾಡಿಕೊ ಳ್ಳುವವು. ಪದಾರ್ಥ ಜ್ಞಾನವೆಲ್ಲ ಅನುಮಾನಿಕವು ಆದ್ದರಿಂದ ಅವನ್ನು ಬಿಟ್ಟು ನಿರಂಜನನನ್ನು ಶೋಧಿಸಬೇಕು ತತ್ವಜ್ಞಾನವು ಅಷ್ಟಾಂಗಯೋಗ ಹಾಗು ಪಿಂಡಜ್ಞಾನ ಇವುಗಳಿಗಿಂತ ಶ್ರೇಷ್ಠವು. ತತ್ವವಿಚಾರಕ್ಕಿಂತ ಆತ್ಮಜ್ಞಾನವು ಶ್ರೇಷ್ಠವು ಹಾಗು ಸರ್ವೋತ್ತಮವು ಆದ್ದರಿಂದಆತ್ಮಜ್ಞಾನವನ್ನು ಅವಶ್ಯ ಸಂಪಾದಿಸಬೇಕು ಮೂಲ ಮಾಯೆಯ ಕೊನೆಗೆ ವಿಮಲಬ್ರಹ್ಮ (ಹರಿಯು)ನು ಇರುವನು ಆ ಹರಿಯಲ್ಲಿಯೇ ಆದಿಸಂಕಲ್ಪ ಹುಟ್ಟು ವದು, ಅಲ್ಲಿಯೇ ಉಪಾಸನೆಯು ಯೋಗದಿಂದ ಸರ್ವಸ್ವವನ್ನು ಅರ್ಪಿಸ ಬೇಕು ಆ ವಿಮಲ ಬ್ರಹ್ಮನ ಆಚೆಗೆ ನಿರ್ಗುಣಬ್ರಹ್ಮನಿರುವನು ಅವನು ಗಗನದಂತೆ ನಿಶ್ಚಲನೂ ನಿರ್ಮಲನೂ ಆಗಿರುವನು. ಅವನು ಇಲ್ಲಿಂದ ಅಲ್ಲಿಯ ವರೆಗೆ ಅಂದರೆ ಮೂಲ ಮಾಯೆಯಿಂದ ಪಿಂಡದ ವರೆಗೆ ಸಾಂದ್ರ ವಾಗಿ ಹಬ್ಬಿರುವನು ಪ್ರಾಣಿ ಮಾತ್ರರಿಗೂ ಜಡಪದಾರ್ಥಗಳಿಗೂ ಆತನು ಹೊಂದಿಕೊಂಡಿರುವನು ಅವನಂಥ ದೊಡ್ಡವನಾರೂ ಇಲ್ಲ ಅತ್ಯಂತ ಸೂಕ್ಷ್ಮವಿಚಾರದಿಂದ ಪಿಂಡ-ಬ್ರಹ್ಮಾಂಡ ಶರೀರಗಳನ್ನು ನಿರ ಸನ ಮಾಡಿಕೊಳ್ಳಲು ಆತನು ತಿಳಿದುಬರುವನು ಇಲ್ಲವೆ ಪಿಂಡ-ಬ್ರಹ್ಮಾಂಡ ವಿದ್ದರೂ ವಿವೇಕ ಪ್ರಳಯವನ್ನು ನೋಡಲು ಆ ಶಾಶ್ವತ ಬ್ರಹ್ಮನು ತಿಳಿದು ಬರುವನು ಎಲ್ಲ ತತ್ವಗಳ ನಿರಸನ ಮಾಡಿಕೊಳ್ಳಬೇಕು ಸಾರಾಸಾರ ವಿಚಾರ ದಿಂದಶುದ್ಧ ಬ್ರಹ್ಮನನ್ನು ತಿಳಿಯಬೇಕು ಇಷ್ಟಾದ ಬಳಿಕ ಅತಿಸುಖದಿಂದಲೂ ಸಾವಧಾನದಿಂದಲೂ ಗ್ರಂಥವನ್ನು ತೊರೆಯಬೇಕು ”

ಶ್ರೀ ರಾಮ|| ೪ ಅನುಮಾನ ನಿರಸನ|| ಗುರುಗಳ ಬೋಧೆಯು ಇಂತಿದೆ-

“ಬಹು ಜನರ ಉದ್ಧಾರದ ಮಾರ್ಗವಾವುದು ? ಎಂದು ಯಾರಾ ದರೂ ಬೋಧಿಸುವ ವಕ್ತಾರನನ್ನು ನಡುವೇ ಪ್ರಶ್ನೆ ಮಾಡಿದರೆ ಅದಕ್ಕೆಆತನ್ನು ಬೇಜಾರುಗೊಳ್ಳಬಾರದು ಮತ್ತು ಪೃಚ್ಛಕನ ಮೇಲೆ ಹರಿಹಾಯಬಾರದು ಬೋಧೆ ಮಾಡಮಾಡುತ್ತ ವಿಷಯದ ಪೂರ್ವಾಪರ ಸಂಬಂಧಕ್ಕೆ ವ್ಯತ್ಯಯ ತಂದುಕೊಳ್ಳಬಾರದು. ಶ್ರೋತೃಗಳ ಸಂಶಯಗಳು ಯಾವವೇ ಇರಲಿ, ಅವನ್ನು ಕೇಳಿಕೊಂಡು ಅವರನ್ನು ಸಮಾಧಾನಗೊಳಿಸಬೇಕು ವಕ್ತಾರನು ಬೋಧಿಸುವದೊಂದು, ಶ್ರೋತೃಗಳಿಗೆ ಅರಿಕೆಯಾಗುವದು ಇನ್ನೊಂದು

ಈ ಬಗೆಯ ಬೋಧನೆಯಾಗಬಾರದು. ಹೇಳ ಹೇಳುತ್ತ ಮುಂದೆ ಸಾಗಿ ದಂತೆ ಹಿಂದಿನ ವಿಷಯದಲ್ಲಿ ತೊಡಕು ಉಂಟಾಗದಂತೆ ಬೋಧೆಯಿರಬೇಕು. ಅದರಂತೆ ಮುಂದೆ ವಿಷಯ ಸಾಗಿದಾಗ ಹಿಂದಿನದನ್ನು ಅನುಸರಿಸಿ ಹೇಳು ವಲ್ಲಿ ಮುಂದೆ ಹೇಳುವದನ್ನೇ ಹಾರಿಸಿ ಬಿಡಬಾರದು ಈಜು ಚೆನ್ನಾಗಿ ಬರುವವನೇ ಮುಳುಗಿ ಜೀವ ಬಿಡುವ ಪ್ರಸಂಗದಲ್ಲಿ ಮುಳುಗುತ್ತಿರುವ ಇನ್ನೊಬ್ಬನನ್ನು ಅವನು ಉಳಿಸುವನೆಂತು ? ಸಾಧ್ಯವಿಲ್ಲ. ಈ ಪ್ರಕಾರ ವಕ್ತಾರನ ಸ್ಥಿತಿಯುಂಟಾದರೆ ಶ್ರೋತೃಗಳಲ್ಲಿ ಉದ್ಭವವಾದ ಸಂಶಯಗಳ ನಿರ ಸನವಾಗದೆ ಹಾಗೆ ಉಳಿಯುವವು ವಕ್ತಾರನು ಸೃಷ್ಟಿಯ ಸಂಹಾರವು ಇಂತಾಗುವದೆಂದು ಒಮ್ಮೆ ಹೇಳಿ ಮತೆ 'ಸರ್ವಂಬ್ರಹ್ಮ'ನಂದು ಪ್ರತಿಪಾದಿಸ ಹತ್ತಿದರೆ ಮಾಯೆಯ ತೀರವನ್ನು ದಾಟುವ ಉಪಾಯವನ್ನು ಶ್ರೋತೃಗಳಿಗೆ ಆದಾರು ಹೇಳುವರು ? ಸೂಕ್ಷ್ಮದಲ್ಲಿಯ ಹೆಸರುಗಳನ್ನು ತೆಗೆದುಕೊಂಡು ಬೋಧಿಸುವ ಪ್ರತಿಸಮಯದಲ್ಲಿ ಆ ಹೆಸರಿಗನುಸರಿಸಿದ ರೂಪಗಳನ್ನುಶ್ರೋತೃ ಗಳ ಮನಸ್ಸಿಗೆ ಬಿಂಬಿಸುವಂತೆ ಹೇಳಬೇಕು ಇಂತಾದರೆ ಮಾತ್ರ ಆತನು ನಿಜವಾದ ವಕ್ತಾರನೆನ್ನಿಸುವನು ಬ್ರಹ್ಮನೆಂಥವನು ? ಮೂಲಮಾಯೆಯ ಸ್ವರೂಪವೆಂತು ? ಮುಂದೆ ಆ ಮೂಲ ಮಾಯೆಗೆ ಅಷ್ಟಧಾಪ್ರಕೃತಿ, ಶಿವ ಶಕ್ತಿ, ಷಡ್ಗುಣೈಶ್ವರ ಮುಂತಾದ ಹೆಸರುಗಳು ಹೇಗೆ ಅನ್ವರ್ಥಕಗಳಾದವು ? ಗುಣಸಾಮ್ಯತಯುಕ್ತ ಗುಣಮಾಯೆಯಾವದು? ತ್ರಿಗುಣಗಳು ಯಾವವು? ಪೂರ್ವಪಕ್ಷವು ಎಲ್ಲಿಂದ ಎಲ್ಲಿಯ ವರೆಗೆ ? ವಾಚ್ಯಾರ್ಥ ಲಕ್ಷ್ಯಾರ್ಥಗಳೆಂದ ರೇನು ? ಮುಂತಾಗಿ ಇವೆಲ್ಲ ಪ್ರಶ್ನ ವಿಷಯಕ ಸೂಕ್ಷ್ಮ ವಿಚಾರಗಳನ್ನು ಕುರಿತು ನಿಶ್ಚಿತ ಬೋಧೆಯ ಜ್ಞಾನವಿದ್ದ ಸಾಧುವೇ ಧನ್ಯನು ವಕ್ತೃತ್ವದ ಅಧಿಕಾರವು ನಿಜವಾಗಿ ಅವನಿಗೇ ಇರುವದು ಅವನ ಬೋಧೆಯು ಅತಿ ವಿಸ್ತೃತವಿರುವದಿಲ್ಲ ಮತ್ತು ಬೇಸಿದ್ದನ್ನೇ ಬೇಸುವಂತೆ ಅವನು ಯಾವ ದೊಂದನ್ನು ಕುರಿತು ಅರ್ಥವಿಲ್ಲದೆ ಮತ್ತೆ ಮತ್ತೆ ಬಳಸುವದಿಲ್ಲ ಅವನು ತನ್ನ ವಾಗ್ವಿಶ್ರಾಂತಿಯಿಂದೆ ಮೌನತ್ವ ವುಂಟಾದ ಕೂಡಲೆಶ್ರೋತೃಗಳ ಹಿಡತದಲ್ಲಿ ಬ್ರಹ್ಮವನ್ನು ತಂದಿಳಿಸಿಯೇ ಬಿಡುವನು ಅಯುಕ್ತ ವಕ್ತಾರನು ಎಂತಿರು ವನೆಂದರೆ— ಅವನು ಒಮ್ಮೆ ಬ್ರಹ್ಮನು ವಿಮಳನು ಹಾಗು ನಿಶ್ಚ ಲನು ಎಂದ್ರೂ ಮತ್ತೊಮ್ಮೆ 'ಸರ್ವಂಬ್ರಹ್ಮ' ಎಂದೂ ಪ್ರತಿಪಾದಿಸುವನು

ಒಮ್ಮೆ ಸಾಕ್ಷಿತ್ವ ಹಾಗು ಸತ್ತೆಗಳನ್ನೊಯ್ದು ಬ್ರಹ್ಮನ ತಲೆಗೆ ಅಪ್ಪಳಿಸುವನು ಮತ್ತೊಮ್ಮೆ ಅವನು ನಿಶ್ಚಲಕ್ಕೆ ಚಂಚಲನೆಂದೂ, ಚಂಚಲಕ್ಕೆ ನಿಶ್ಚಲ ಬ್ರಹ್ಮನೆಂದೂ, ಅನ್ನುವನು, ಹೀಗೆ ಹಲವು ಪ್ರಸಂಗಗಳಲ್ಲಿ ಆತನು ಅಸಂಬದ್ಧ ಮಾತುಗಳನ್ನಾಡುವನು ಮತ್ತು ನಿಶ್ಚಯಾತ್ಮಕವನ್ನೇನೂ ಹೇಳನು ಅಂದ ಮೇಲೆ ಇವನೆಂಥ ವಕ್ತಾರನು ? ಚಂಚಲ ನಿಶ್ಚಲಗಳೆರಡೂ ಬೇರೆ ಬೇರೆ ಇದ್ದರೂ ಹಾಗೇ ಸ್ಪಷ್ಟವಾಗಿ ಆತನು ಹೇಳುವದಿಲ್ಲ ಚಂಚಲ ನಿಶ್ಚಲಗಳೆಲ್ಲವೂ ಚೈತನ್ಯವೆಂದೆನ್ನುವನು ಹೀಗಾಗಿ ಅವನು ವ್ಯರ್ಥವಾಗಿ ಗೊಂದಲದಲ್ಲಿ ಬೀಳುವನು ಇಂಥವನು ಶ್ರೋತೃಗಳಿಗೆ ನಿಶ್ಚಯಾತ್ಮಕ ಜ್ಞಾನವನ್ನು ಅದೆಂತು ಮಾಡಿಕೊಡುವನು ? ಹಲವು ನಿಶ್ಚಯಗಳನ್ನು ಹೇಳುವದನ್ನು ಬಿಟ್ಟರೆ ಎಲ್ಲವೂ ಗೊಂದಲಮಯವಾಗುವದು ಭ್ರಮೆಗೆ ಪರಬ್ರಹ್ಮನೆಂದೂ ಪರಬ್ರಹ್ಮನಿಗೆ ಭ್ರಮೆಯೆಂದೂ ಹೇಳಿ ತನ್ನಲ್ಲಿಯ ಜ್ಞಾನವನ್ನು ಮೆರೆಯಿಸುವನು. ಶಾಸ್ತ್ರ ವಚನಗಳ ಆಧಾರಗಳನ್ನು ಮುಂದೆ ಮಾಡಿ ಶ್ರೋತೃಗಳನ್ನು ಮೋಹಗೊಳಿಸುವನು ಆದರೆ ಇಂಥವರಲ್ಲಿ ಅನುಭವದ ಲವಲೇಶವು ಇರುವದಿಲ್ಲ ಇವರಲ್ಲಿ ನಿಶ್ಚಿತ ಬುದ್ಧಿಯಿರದ್ದರಿಂದ ಶ್ರೋತೃಗಳ ಸಂಶಯಗಳಿಗೆ ಸಮಾಧಾನ ಹೇಳುವ ಚಾತುರ್ಯವು ಇವರಿಗೆ ಬರಲಾರದು ದುಡ್ಡಿಗಾಗಿ ಹಪಾಪಿಸುವ ಇಂಥ ನೀಚರು ಬ್ರಹ್ಮಜ್ಞಾನ ಉಪದೇಶವನ್ನು ಅದೆಂತು ಹೇಳುವರು ? ನಿರ್ದುಷ್ಟವಾದ ಸಾರಾಸಾರ ವಿಚಾರವಿರಬೇಕು ವೈದ್ಯನು ತನ್ನಲ್ಲಿಯ ಮಾತ್ರೆ ಔಷಧಗಳ ಗುಣಗಳನ್ನು ಪ್ರಶಂಸೆ ಮಾಡಿಕೊಳ್ಳುವದರಿಂದ ಮಾತ್ರರೋಗಿಗಳಿಗೆ ಗುಣವಾಗುವದೇ? ಈ ಸಾಮತಿಯಂತೆ ಜೊಳ್ಳು ವಿಜ್ಞಾನಿಗಳಮಾತಾಗಿರುವದು ಇವರಲ್ಲಿಯ ಜ್ಞಾನವು ಕೇವಲ ಬಡಬಡಿಕೆ ರೂಪವಾಗಿ ಇರುವದು ಆ ಜ್ಞಾನದಿಂದ ಶ್ರೋತೃಗಳಿಗೆ ಅನುಭವವಾಗುವದಿಲ್ಲ ಅಂದಮೇಲೆ ಅದರ ಉಪಯೋಗವೇನು ? ಸಾರ ಮತ್ತು ಅಸಾರ ಇವುಗಳ ನಿಸ್ಸಂದಿಗ್ಧ ತಿಳುವಳಿಕೆಯಿಲ್ಲದ ಜ್ಞಾನವು ಆನುಮಾನಿಕ ಜ್ಞಾನವು ಅರ್ಥಾತ್ ಅಜ್ಞಾನವು ಇದರಿಂದ ಸತ್ಯಾ ಸತ್ಯತೆಗಳ ಪರೀಕ್ಷೆಯಾಗುವದಿಲ್ಲ 'ಸರ್ವಂಬ್ರಹ್ಮ' ವಾದಿಗಳಿಗೆ ಪಾಪ ಪುಣ್ಯ, ಸ್ವರ್ಗ, ನರಕ, ವಿಚಾರ—ಅವಿಚಾರ, ಪತನ—ಉತ್ಥಾಪನ, ಇವೆಲ್ಲವುಗಳ ದ್ವಂದ್ವ ತಿಳಿಯುವದಿಲ್ಲ ಅವರಿಗೆ ನಿಶ್ಚಯ ಹಾಗು ಸಂಶಯಗಳೆರಡೂ ಬ್ರಹ್ಮರೂಪವೇ

ಎಲ್ಲವೂ ಬ್ರಹ್ಮರೂಪ ಹಾಗು ಕಂಡದ್ದೆಲ್ಲ ಸಕ್ಕರೆ ಎನ್ನುವ ಇವರಲ್ಲಿ ನಿಜವಾದ ವಿಚಾರವೆಂತು ಬರುವದು ? ಅವರಿಗೆ ಸಾರವೂ ಅಷ್ಟೇ ಅಸಾರವೂ ಅಷ್ಟೇ ಅವು ಒಂದೇ ರೂಪವಾಗಿ ಅವರಿಗೆ ತೋರುವವು ತಾತ್ಪರ್ಯವೇನಂದರೆ— ಏಕಾಕಾರವೆಂದರಿಯುವ ಈ 'ಸರ್ವಬ್ರಹ್ಮ' ವಾದಿಗಳ ಮಾತುಗಳೆಲ್ಲ ಅವಿಚಾರಪೂರ್ಣವಾದವು ವಿಚಾರ ಲವಲೇಶವು ಅವುಗಳಲ್ಲಿ ಇರುವದಿಲ್ಲ, ಉಚ್ಚ,ನೀಚ, ವಂದ್ಯ, ನಿಂದ್ಯ, ಇವುಗಳೆಲ್ಲ ಒಂದೇ ಎಂದು ಹೇಳುವರೆಂದ ಮೇಲೆ ಅವರಲ್ಲಿ ನಿಶ್ಚಿತವು ಎಂತು ತೋರುವದು ? ಅಮಲೇರಿ ಗುಂಗಾಗಿದ್ದವನು ಬಾಯಿಗೆ ಬಂದಂತೆ ಬಡಬಡಿಸುವನು ಅವನಂತೆ ಅಜ್ಞಾನವೆಂಬ ಭ್ರಮೆಯಿಂದ ಮೋಸಕ್ಕೆ ಗುರಿಯಾದವನು ಪಾಪಿಷ್ಠನೂ ಸಾಧುವೂ ಒಂದೇ ಎಂದು ಭಾವಿಸುವನು ಸರ್ವಸಂಗ ಪರಿತ್ಯಾಗ ಹಾಗು ಸ್ವೇಚ್ಛಾಚಾರದ ಉಪಭೋಗ ಇವೆರಡೂ ಒಂದೇ ಎಂದು ಒಪ್ಪಿದ ಮೇಲೆ ಅದರಲ್ಲಿ ಸಾಧಕರಿಗೆ ದೊರಕುವದೇನು ? ಈಶ್ವರನಿಂದ ಭೇದವುಂಟಾಗಿದೆ ಅವನು ಇವರ ಮಾತನ್ನು ಮುರಿಯಲಾರನು ಬಾಯಿಯಲ್ಲಿ ಹಾಕುವ ತುತ್ತನ್ನು ಅಪಾನ ದ್ವಾರದಲ್ಲಿ ನೇರಿಸಿದಂತೆ ಈ ಮಾತಾಗುತ್ತದೆ 'ಇಂದ್ರಿಯಗಳಿಗೆ ಅವವುಗಳಿಗೆ ತಕ್ಕ ಭೋಗ ಕೊಡಬೇಕು ಈಶ್ವರನ ನಿಯಮ ಮುರಿಯಬಾರದು ಈ ಎಲ್ಲಬಡಬಡಿಕೆಯು ಅವರ ಮಾತುಳು ಕೇವಲ ಭ್ರಮೆಯಿಂದ ಕೂಡಿದವಾಗಿರುವವು ಹಾಗು ಅನುಭವರಹಿತವಾದವುಗಳು ಇಂಥವರ ಜ್ಞಾನವು ಉಪಯೋಗವಿಲ್ಲ ಸ್ವಾನುಭವವುಳ್ಳ ಹಾಗು ಸಾವಧರಾದ ಬೋಧಕರ ಮುಖದಿಂದಲೇ ಜ್ಞಾನವನ್ನು ಸ್ವೀಕರಿಸತಕ್ಕದ್ದು ಅಂದರೆ ಸ್ವರೂಪ ಲಾಭದ ಗುರುತು ಆ ಕೂಡಲೇ ಸಿಗುವದು ನಡೆನುಡಿಗಳ ಮೇಲಿಂದಲೇ ಹುಚ್ಚರನ್ನೂ ಕುರುಡರನ್ನೂ ತಿಳಿದುಕೊಳ್ಳಬೇಕು ನಿರರ್ಥಕವಾದ ಒಡಬಡಿಕಯು ಮಾತುಗಳನ್ನು ಬಿಡಬೇಕು ಇಷ್ಟೇ ಅಲ್ಲ ಅವುಗಳನ್ನು ಹೇಸಿಕೆ ಕಾರಿಕೆಗಳಂತೆ ತ್ಯಾಜ್ಯಮಾಡಿ ಚೆಲ್ಲಬೇಕು"

ಶ್ರೀ ರಾಮ || ೫ಅಜಪಾ ನಿರೂಪಣೆ || ಗುರುಗಳು ಶಿಷ್ಯರಿಗೆ:—

"ಪ್ರತಿಯೊಬ್ಬ ಮಾನವನು ಪ್ರತಿದಿನದಲ್ಲಿ ೨೧೬೦೦ ಶ್ವಾಸೋಚ್ಛ್ವಾಸ ಕ್ರಿಯೆಯನ್ನು ಸಾಗಿಸುವನು. ಇಂತಾಗುವ ಶ್ವಾಸೋಚ್ಛ್ವಾಸಗಳ ಕಡೆಗೆ ಏಕಾಗ್ರತೆಯಿಂದ ಲಕ್ಷ್ಯವನ್ನಿಡುವದೇ'ಅಜಪಾ'ಜಪವೆಂದು ಹೇಳಲ್ಪಡುತ್ತದೆ

ವಿಚಾರ ಮಾಡಿದರೆ ಈ ಜಪವನ್ನು ಸಾಧಿಸುವದು ಕಠಿಣವಲ್ಲ ಮುಖ ಹಾಗು ಮೂಗು ಇವುಗಳಲ್ಲಿ ಪ್ರಾಣವಿದ್ದು ಅದರ ಶ್ವಾಸ ಮತ್ತು ಉಚ್ಛ್ವಾಸವು ಒಂದೇಸವನೆ ಸಾಗುತ್ತಿರುವದು ಇದನ್ನು ಸೂಕ್ಷ್ಮದೃಷ್ಟಿ ಯಿಂದ ಅವಲೋಕಿಸಬೇಕು ಮೂಲದಲ್ಲಿ ಸ್ವರವು ಒಂದೇ ಇರುವದು ಆದರೆ ಅದರಲ್ಲಿ ತಾರ (ಮೇಲಿನಷಡ್ಜ), ಮಂದ್ರ (ನಡುವಿನ ಷಡ್ಜ), ಹಾಗು ಘೋರ (ಕೆಳಗಿನ ಷಡ್ಜ), ಹೀಗೆ ಮೂರು ಭೇದಗಳಿರುವವು ಅವುಗಳಲ್ಲಿ ಘೋರ ಸ್ವರಕ್ಕಿಂತಲೂ ಅಜಪೆಯ ವಿಚಾರವು ಸೂಕ್ಷ್ಮವಾಗಿರುವದು ಸಾ, ರೀ, ಗ, ಮ, ಪ, ಧ, ನೀ, ಇವು ಏಳು ಸ್ವರಗಳು ಈ ಎಲ್ಲ ಮಾತ್ರಿಕೆಗಳನ್ನು ಉಚ್ಚರಿಸಿ ನೋಡಿರಿ ಈ ಸಪ್ತ ಸ್ವರಗಳಲ್ಲಿ ಯಾವದೊಂದು ಸ್ವರವನ್ನು ಪ್ರಥಮವಾಗಿ ಹಿಡಿದು ಅಲ್ಲಿಂದ ಮುಂದೆ ಉಚ್ಚರಿಸಿ ನೋಡಿರಿ ನಾಭಿ (ಹೊಕ್ಕಳು)ಯ ಸ್ಥಾನದಲ್ಲಿ ಇರುವಂಥ ಪರಾವಾಣಿಯು ಈಚೆಗೆ ಅಂದರೆ ಮೇಲೆ ಮತ್ತು ಹೃದಯ ಸ್ಥಾನದಲ್ಲಿ ಇದ್ದ ಪಶ್ಯಂತೀ ವಾಣಿಯು ಕೆಳಗೆ ಅರ್ಥಾತ್ ನಾಭಿ ಮತ್ತು ಹೃದಯಗಳ ಮಧ್ಯದಲ್ಲಿ ಸ್ವರದ ಜನ್ಮಸ್ಥಾನವಿದೆ ಅಲ್ಲಿಂದಲೇ ಸ್ವರವು ಹುಟ್ಟುವದು ನಿವಾಂತ ಸ್ಥಳದಲ್ಲಿ ಸ್ವಸ್ಥವಾಗಿ ಕುಳಿತುಕೊಂಡು ಇದರ ಅನುಭವವನ್ನು ನೋಡತಕ್ಕದ್ದು ವಾಯುವನ್ನು ಒಳಗೆ ಎಳೆದುಕೊಳ್ಳಬೇಕು ಮತ್ತು ಸೂಕ್ಷ್ಮ ಬಗೆಯಿಂದ ನೋಡಬೇಕು ಅಂದರೆ 'ಸೋಽಹಂ ಸೋಽಹಂ' ಶಬ್ದವಾಗುತ್ತಿರುವದು ಕೇಳಬರುವದು ಉಚ್ಚಾರವಿಲ್ಲದೆ ಈ ಶಬ್ದವು ಉಂಟಾಗುವದು ಆದ್ದರಿಂದಲೇ ಇದಕ್ಕೆ ಸಹಜ ಶಬ್ದವೆನ್ನುವರು ಇದು ಅನುಭವಕ್ಕೆ ಬಂದರೂ ಅದರ ನಾದ ಸಫಲವು ಆಗುವದಿಲ್ಲ ಈ ಶಬ್ದವನ್ನು ಸಹ ಬಿಟ್ಟು ಕುಳಿತವನು ನಿಜವಾದ ಮೌನಿಯು ಯೋಗಾಭ್ಯಾಸದ ಪ್ರಯತ್ನವು ಇಷ್ಟು ತೊಂದರೆಯದಾಗಿರುವದು ಎಷ್ಟು ಪ್ರಯತ್ನ ಮಾಡಿದರೂ ಅದು ಆ ಅಂತರಾತ್ಮನಿಗಾಗಿಯೇ ಇರುವದು ಏಕಾಂತದಲ್ಲಿ ಇದೇ ಪ್ರಕಾರವಾಗಿ ಮೌನವನ್ನು ಹಿಡಿದು ಕೂಡಲು ಯಾವ ಶಬ್ದವಾಗುವದೋ ಅದೇ ಸೋಽಹಂ ಒಳಗೆ ಸೋಽಹಂ ಶಬ್ದವಾದಂತೆ ಭಾಸವಾಗುವದು. ಶ್ವಾಸವನ್ನು ಒಳಗೆ ಎಳೆದುಕೊಳ್ಳುವಾಗ 'ಸಃ' ಎಂದೂ ಹೊರಗೆ ಬಿಡುತ್ತಿರುವಾಗ 'ಅಹಂ' ಎಂದೂ ಇವು ಒಟ್ಟಾಗಿ 'ಸೋಽಹಂ ಸೋಽಹಂ' ಈ ಜಪವು ಅಖಂಡವಾಗಿ ನಡೆಯುತ್ತಿರುವದು ಈ

ಬಗೆಗೆ ಇನ್ನೂ ವಿಚಾರಗಳನ್ನು ಹೇಳುವದಾದರೆ ಅದು ಬಹು ವಿಸ್ತೃತವಾಗು ವದು ಜಾರಜ, ಅಂಡಜ, ಸ್ವೇದಜ, ಹಾಗು ಉದ್ಭಿಜ್ಜ ಈ ಪ್ರಕಾರ ನಾಲ್ಕು ಬಗೆಯ ಪ್ರಾಣಿಗಳಿರುವವು ಆ ಎಲ್ಲ ಪ್ರಾಣಿಗಳಲ್ಲಿ ಈ ಜಪವು ಸಹಜವಾಗಿ ನಡೆದಿರುವದು ಈ ಶ್ವಾಸ ಜಪದ ಹೊರತು ಆ ಪ್ರಾಣಿಗಳು ಬದಕುವದಿಲ್ಲ ಹೀಗೆ ಈ ಅಜಪಾಜಪವು ಎಲ್ಲ ಪ್ರಾಣಿಗಳಲ್ಲಿ ಅಖಂಡವಾಗಿ ನಡೆದಿರುವದು ಆದರೆ ಇದು ತಿಳಿದವರಿಗೆ ಮಾತ್ರ ಅನುಭವಕ್ಕೆ ಬರುವದು ಇಂಥ ಈ ಸಹಜ ಜಪವನ್ನು ಬಿಟ್ಟು ಕಷ್ಟಕರವಾದ ಜಪ ಕೈಕೊಳ್ಳಕೂಡದು ಇದರಂತೆ ನಿಶ್ಚಲದೇವನು ಸ್ವಾಭಾವಿಕವಾಗಿರುವನು ಅವನನ್ನು ಬಿಟ್ಟು ಪ್ರಯಾಸದಿಂದ ಉಂಟುಮಾಡಿಕೊಂಡ ದೇವ ವಿಗ್ರಹವು ಒಡೆಯುವದು, ಹರಿಯುವದು, ಮುರಿಯುವದು ಇಂಥ ನಾಶವಂತ ದೇವನ ಮೇಲೆ ಅದಾರು ವಿಶ್ವಾಸವಿಡುವರು ? ಜಗದಂತರನಾದ ಅಂತರಾತ್ಮನ ದರ್ಶನ ತೆಗೆದುಕೊಂಡರೆ ಅಖಂಡವಾಗಿ ಸಹಜಧ್ಯಾನವಾಗುತ್ತಿರುವದು ಅವನ ಇಚ್ಛೆಯಂತೆಯೇ ಪ್ರಾಣಿಮಾತ್ರಗಳು ನಡೆಯುವವು ನಮ್ಮ ತಿಂಬುಂಬುವದು, ಭೋಗಗಳು, ಇವೆಲ್ಲ ಆತನಿಂದಲೇ ಸಮಾಧಾನವಾಗಿ ನಡೆಯುವವು ಬುದ್ಧಿಪೂರ್ವಕವಾಗಿ ಅರ್ಪಿಸಿದ್ದಿರಲಿ, ಇರದಿರಲಿ ಎಲ್ಲವೂ ಆತ್ಮಾರಾಮನಿಗೇ ಸಮರ್ಪಣವಾಗುವವು ನಮ್ಮ ಹೊಟ್ಟೆಯಲ್ಲಿ ವೈಶ್ವಾನರ ರೂಪದಿಂದಿರುವ ಯಜ್ಞಪುರುಷನಿಗೆ, ನಾವು ಪೂರ್ಣಾಹುತಿಯನ್ನು ಕೊಡುವೆವು ಆ ಯಜ್ಞಪುರುಷನ ಆಜ್ಞೆಯಂತೆಯೇ ನಾವೆಲ್ಲರು ನಡೆಯುತ್ತಿರುವೆವು ಜಪ, ಧ್ಯಾನ, ಸ್ತುತಿ-ಸ್ತೋತ್ರ, ಇವು ನಮ್ಮಿಂದ ಸಹಜವಾಗಿ ಒದಗುವವು ನಮ್ಮಿಂದ ಸಹಜವಾಗಿ ಮಾಡಲ್ಪಟ್ಟವುಗಳೆಲ್ಲ ಭಗವಂತನಿಗೆ ಮಾನ್ಯವಾಗುವವು ಇದೆಲ್ಲವೂ ಸಹಜವಾಗಿ ಆಗುತ್ತಿರುವದು ಇದನ್ನು ತಿಳಿಯುವದಕ್ಕಾಗಿಯೇ ಜನ ೨ ಹಟಯೋಗ ಮಾಡುವರು. ಆದರೆ ಅವರಿಗೆ ಒಮ್ಮೆಲೇ ತಿಳಿಯುವದು ಅಸಾಧ್ಯವು ನಿಧಿಯ ಸ್ಥಾನವು ಸರಿಯಾಗಿ ತಿಳಿಯದ್ದರಿಂದಲೇ ಮನುಷ್ಯನು ವಿನಾಕಾರಣವಾಗಿ ದಾರಿದ್ರ್ಯದಲ್ಲಿ ಕಾಲ ಕಳೆಯುವನು ಆ ನಿಧಿಯು ಅವನ ಬುಡದಲ್ಲಿಯೇ ನಿಕ್ಷೇಪವಾಗಿದೆ. ಹೀಗಿದ್ದು ಅವನು ಅದರ ಮೇಲೆ ಕುಳಿತು ಉಪವಾಸ ಮಾಡುವನು. ಏನು ಮಾಡುವದು ? ನಿಧಿಯು ತನ್ನ ಹತ್ತರದಲ್ಲಿಯೇ ಇರುವದು ಆ

ದರಿದ್ರನಿಗೆ ಗೊತ್ತಿಲ್ಲ. ಕೆಳಮನೆ (ನೆಲಮನೆ)ಯಲ್ಲಿ ದ್ರವ್ಯವಿದೆ, ಗೋಡೆ ಯಲ್ಲಿ ಬದಕು ಇಟ್ಟಿದೆ, ಮನೆಯ ಕಂಬದಲ್ಲಿ, ತೊಲೆಯಲ್ಲಿ ಈ ಪ್ರಕಾರ ಇಡಿಯ ಮಂದಿರದಲ್ಲೆಲ್ಲ ಕಡೆಗೂ ದ್ರವ್ಯ ಹುಗಿದಿಟ್ಟಿರುವದು ಆದರೆ ಇಂಥ ಲಕ್ಷ್ಮೀ ನಿವಾಸದಲ್ಲಿ ಕುಳಿತುಕೊಂಡ ಕಂಗಾಲನು ಹೆಚ್ಚಾಗಿ ದಾರಿದ್ರ್ಯವನ್ನೇ ಅನುಭವಿಸುವನು ಇದೆಂಥ ಪರಮಾನಂದ ಪರಮಾತ್ಮನ ಕೌತುಕ ಕೃತಿಯು? ಜಗತ್ತಿನ ಮೇಲೆ ಒಬ್ಬನು ಊಟ ಮಾಡುವನು, ಇನ್ನೊಬ್ಬನು ಹೊಟ್ಟೆಗಿಲ್ಲದೆ ಅವನು ಉಣ್ಣುವದನ್ನು ನೋಡುತ್ತ ಕೂಡ್ರು ವನು ಆದರೆ ಈ ಅಂತರವು ಆದೇಕೆ? ವಿವೇಕದಲ್ಲಿಯೇ ಈ ಅಂತರದ ಬೀಜವು ಇರುವದು ವಿವೇಕ ಅಥವಾ ಬುದ್ಧಿಮತ್ತೆಯು ಅಧಿಕವಾಗಿದ್ದವನ ಭಾಗ್ಯವು ಅಧಿಕವಾಗಿರುವದು ಕಡಿಮೆ ಇದ್ದವನ ದಾರಿದ್ರ್ಯವು ಅಧಿಕವಾಗಿರುವದು ಪ್ರವೃತ್ತಿಯಲ್ಲಿ ಅಥವಾ ನಿವೃತ್ತಿಯಲ್ಲಿ ಮಾನವ ಮಾನವರಲ್ಲಿ ಅಂತರ ತೋರುವದು ಈ ಅಂತರವು ಕೇವಲ ಅವರವರ ವಿವೇಕ ಬುದ್ಧಿಮತ್ತೆಗಳ ಆಧಿಕ್ಯತೆ ನ್ಯೂನತೆಗಳನ್ನು ಅವಲಂಬಿಸಿ ಉಂಟಾಗಿ ರುವದು ಇದಿರಲಿ ಅಂತಸ್ಥದಲ್ಲಿ ನಾರಾಯಣನಿದ್ದಮೇಲೆ ಲಕ್ಷ್ಮಿಗೇನೂ ಕೊರತೆಯಿಲ್ಲ ಆದ್ದರಿಂದ ಲಕ್ಷ್ಮಿಯನ್ನು ದಾಸಿಯನ್ನಾಗಿ ಮಾಡಿಕೊಂಡಿದ್ದ ಶ್ರೀ ನಾರಾಯಣನನ್ನು ಹೃದಯದಲ್ಲಿ ನಿಧಿಯಾಗಿರಿಸಿಕೊಳ್ಳಬೇಕು "

ಶ್ರೀ ರಾಮ ॥ ೬ ದೇಹಾತ್ಮನಿರೂಪಣೆ ॥ ಗುರುಗಳು ದೇಹಾತ್ಮ ನಿರೂಪಣೆ ಮಾಡಿದ ಬಗೆಯು —

" ಅಂತರಾತ್ಮನು ದೇಹದಲ್ಲಿದ್ದುಕೊಂಡು ಹಲವು ಸುಖದುಃಖಗ ಳನ್ನು ಅನುಭವಿಸುವನು ಕೊನೆಗೊಮ್ಮೆ ಆತನು ಶರೀರ ತ್ಯಾಗಮಾಡಿ ಹೋಗುವನು ಪ್ರಾಯದಲ್ಲಿ ಶಕ್ತಿ ಇರುವಾಗ ಸುಖ ಭೋಗಿಸುವನು ಇಳಿತರ ವಯದಲ್ಲಿ ಬಲಗುಂದಲು ದುಃಖಭೋಗಿಸುವನು ಆ ದುಃಖ ಗಳು ಬಹು ದುರ್ಧರವಾಗಿರುವವು ಮರಣವು ಅಪ್ರಿಯವಾದುದರಿಂದಲೇ ಪ್ರಾಣಿಯು ದೇಹ ಬಿಡುವ ಕಾಲಕ್ಕೆ ಒದ್ದಾಡಿ ದೇಹ ಬಿಡುವದು ಆತ್ಮನು ದೇಹ ಸಂಗದಿಂದ ಸುಖೋಪಭೋಗ ಹೊಂದಿ ಅಂತ್ಯ ಕಾಲದಲ್ಲಿ ಚಡಪಡಿಸುತ್ತ ದೇಹ ತ್ಯಾಗ ಮಾಡುವನು ಈ ಪ್ರಕಾರ ದುಃಖಕ್ಕೆ ಪರಿಮಿತಿಯುಳಿಯುವದಿಲ್ಲ ಒಂದೊಂದು ಪ್ರಾಣಿಯು

ಇನ್ನೊಂದರ ಪ್ರಾಣ ತೆಗೆದುಕೊಳ್ಳುವದು ಕಂಡು ಬರುವದು ಈ ಆತ್ಮನು ಕೇವಲ ಎರಡು ದಿನಗಳ ಭ್ರಮೆಯೆಂದು ಹೇಳಬಹುದು ಆದರೂ ಆ ಆತ್ಮನಿಗೆ ಕೆಲವರು ಪರಬ್ರಹ್ಮನೆನ್ನುವರು. ಆತ್ಮನು ಹಲವು ದುಃಖಪ್ರಸಂಗಗಳನ್ನು ರುಚಿಕಟ್ಟಾಗುವಂತೆ ಮಾಡಿಕೊಂಡು ಅನುಭವಿಸುವನು. ದುಃಖವನ್ನು ಹೊಂದಿ ಚಡಪಡಿಸುವದರಲ್ಲಿ ಸಮಾಧಾನವಿಲ್ಲ ಸುಖವನ್ನು ಅಲ್ಪ ಕಾಲ ಅನುಭೋಗಿಸುವಷ್ಟರಲ್ಲಿಯೇ ಆದರ ಹಿಂದೆ ದುಃಖಗಳು ಇದ್ದೇ ಇರುವವು ಜನ್ಮದಾರಭ್ಯ ಅನುಭವಿಸಿದ ದುಃಖಗಳು ಎಷ್ಟೆಂಬುದರ ವಿಚಾರ ಮಾಡಲಿಕ್ಕೇ ಬೇಕು ಅನೇಕ ಜೀವಗಳ ಜೊತೆಯಿಂದ ಅನೇಕ ದುಃಖಗಳು ಪ್ರಾಪ್ತವಾಗುವವು ಇವರಿಂದ ಪ್ರಾಣಿಯು ದೀನತೆ ಹೊಂದುವದು ಜನ್ಮಾಂತ್ಯದ ವರೆಗೆ ಕೆಲವು ಸುಖ ಕೆಲವು ದುಃಖಗಳು ಗಂಟು ಬಿದ್ದೇ ಬೀಳುವವು ಮನಸಿನ ವಿರುದ್ಧ ಹಲವು ಸಂಗತಿಗಳೊದಗಿ ದುಃಖಕೊಡುವವು ಎಷ್ಟೋ ವಿಯೋಗ ದುಃಖ ಸೋಸಬೇಕಾಗುವದು `ಮಲಗಿದಾಗ ತಗಣಿ-ಚಿಕ್ಕಾಡಗಳು ತೊಂದರೆ ಕೊಡುವವು ಅವುಗಳ ಕಾಟ ತಪ್ಪಿಸಲು ಉಪಾಯ ಯೋಜಿಸುವಲ್ಲಿಯೇ ತೊಂದರೆಯಾಗುವದು ಊಟಕ್ಕೆ ಕುಳಿತಾಗ ನೊಣಗಳ ಕಾಟವು ವಿಪರೀತವಾಗುವದು, ಮನೆಯೊಳಗಿನ ಎಷ್ಟೋ ಪದಾರ್ಥಗಳನ್ನು ಇಲಿಗಳು ಹೋರಿನೊಳಕ್ಕೆ ಎಳೆದೊಯ್ಯುವವು ಹೇನು, ಕೂರಿ, ತೊನಸಿ, ಕುಡ್ಡಿನೊಣ, ಹಾವು ಮುಂತಾದ ಪ್ರಾಣಿಗಳು ಪರಸ್ಪರವಾಗಿ ಜೀವಕ್ಕೆ ಪೀಡೆಯನ್ನುಂಟು ಮಾಡುವವು ಹಾವು ಚೇಳುಗಳು, ಕರಡಿ-ಹುಲಿಗಳು, ಮೊಸಳೆಗಳು, ತೋಳಗಳು ಇಷ್ಟೇ ಏಕ? ಮನುಷ್ಯರಿಗೆ ಮನುಷ್ಯರೂ ಕೂಡ ಒಂದನ್ನೊಂದು ಹೈರಾಣ ಮಾಡುವವು ಹಾಗು ಕೊಲ್ಲುವವು ಇವೆಲ್ಲವು ಪರಸ್ಪರ ಸುಖ-ಸಂತೋಷದಿಂದ ಇರಲಾರವು ೮೪ ಲಕ್ಷ ಪ್ರಾಣಿಕೋಟಿಗಳನ್ನು ನೋಡಲು ಒಂದನ್ನೊಂದು ಭಕ್ಷಿಸುವವು. 'ಜೀವೋ ಜೀವಸ್ಯ ಜೀವನಂ' ಎಂಬುದೇ ಇವಕ್ಕೆ ನ್ಯಾಯವಾಗಿ ಬಿಟ್ಟಿದೆ. ಪೃಥ್ವಿಯ ಮೇಲೆ ಪ್ರಾಣಿಗಳ ದಟ್ಟ ವಸತಿಯಾಗಿದೆ ಅವುಗಳಲ್ಲಿ ಪರಸ್ಪರ ಸಂಹಾರ ಕ್ರಿಯೆಯು ನಡೆದಿದೆ ಇದೆಲ್ಲವೂ ಅಂತರಾತ್ಮನ ಕೃತಿಯೇ ಎಂದು ಹೇಳಬಹುದು, ಅಳುವದು, ಚಡಪಡಿಸುವದು, ಚಿಂತಗೊಳಪಟ್ಟು ಆತ್ಮಹತ್ಯ ಮಾಡಿಕೊಳ್ಳುವದು ಇವೆಲ್ಲವನ್ನು ಅಂತರಾತ್ಮನು ಮಾಡುವನು

ಹಾಗು ಮಾಡಿಸುವನು ಹೀಗಿದ್ದರೂ ಮೂಢರು ಆ ಅಂತರಾತ್ಮನಿಗೆ ಪರಬ್ರಹ್ಮನೆನ್ನುವರು ನಿಜವಾಗಿ ಪರಬ್ರಹ್ಮನು ಅಚಲನಾಗಿರುವನು, ಅವನು ಯಾರಿಗೂ ದುಃಖ ಕೊಡುವದಿಲ್ಲ ಅವನಿಗೆ ನಿಂದೆ-ಸ್ತುತಿಗಳೆರಡೂ ಮುಟ್ಟುವದಿಲ್ಲ ನೂರೆಂಟು ಬೈಗುಳುಗಳೂ ಶಾಪಗಳೂ ಅವನನ್ನು ತಟ್ಟಲಾರವು ಅವನ ಸಂಬಂಧವಾಗಿ ಯಾವ ಕಲ್ಪನೆಗಳೂ ನಡೆಯಲಾರವು 'ವಿಸಂಗತ ಜ್ಞಾನವನ್ನು ಯಾರೂ ಒಪ್ಪಲಾರರು ಸೃಷ್ಟಿಯಲ್ಲಿಯ ಎಲ್ಲ ಜೀವಿಗಳಿಗೆ ವೈಭವವೆಲ್ಲಿ? ಆದ್ದರಿಂದ ದೇವನು ಮಾಡಿದ್ದೇ ಒಳಿತು ಹಾಗು ಯಥಾಯೋಗ್ಯವು ಎಂದರಿಯಬೇಕು ಸಂತೆಯಲ್ಲಿ ಎಲ್ಲ ಪದಾರ್ಥಗಳು ಮಾರಾಟಕ್ಕೆ ಬರುವವು, ಮತ್ತು ಎಲ್ಲವೂ ವಿಕ್ರಯವಾಗಿ ಹೋಗುವವು. ಆದರೆ ಅವುಗಳಲ್ಲಿಯ ಉತ್ತಮ ಪದಾರ್ಥಗಳನ್ನು ಸಿರಿವಂತರೇ ಕೊಂಡು ತಕ್ಕೊಂಡು ಹೋಗುವರು ಇದೇ ನ್ಯಾಯದಿಂದ ಅನ್ನವಸ್ತ್ರ, ದೇವತಾರ್ಚನೆ, ಬ್ರಹ್ಮಜ್ಞಾನ ಇವೆಲ್ಲವು ಜೀವಿಗಳಿಗೆ ಪ್ರಾರಬ್ಧಕ್ಕನುಸರಿಸಿ ಪ್ರಾಪ್ತವಾಗುವವು

ಇನ್ನು ಜನರು ಸಂಸಾರವನ್ನು ಚನ್ನಾಗಿ ಸಾಗಿಸಿಕೊಂಡು ಸುಖಿಯಾಗಿರುವರು ಹೀಗಿದ್ದರೂ ರಾಜನ ವೈಭವವು ದರಿದ್ರನಿಗೆ ಎಲ್ಲಿಂದ ಬರಬೇಕು? ಆದರೆ ಎಲ್ಲ ಜೀವಿಗಳಿಗೆ ಸಾಮಾನ್ಯವಾದುದು 'ಒಂದು ಮಾತ್ರವಿರುವದು ಅದೇ ಕೊನೆಯದಾದ ಮರಣದುಃಖವು ಇದನ್ನು ಎಲ್ಲರೂ ಸಮನಾಗಿ ಭೋಗಿಸಲೇಬೇಕಾಗುವದು ತಾರುಣ್ಯದಲ್ಲಿ ಸುಖಗಳನ್ನು ಭೋಗಿಸಿದ್ದರಿಂದಲೇ ಕೊನೆದುಃಖಗಳು ಜಡವೆನ್ನಿಸುವವು ಶರೀರದಿಂದ ಪ್ರಾಣವು ಒತ್ತಾಯವಿಲ್ಲದೆ ಹೋಗುವದಿಲ್ಲ ಮರಣದುಃಖವು ಎಲ್ಲರಿಗೂ ಕ್ಲೇಶಕಾರಕವಾಗಿರುವದು ಮರಣವೊದಗಿಬರಲು ರೂಪ-ಲಾವಣ್ಯಗಳು ನಶಿಸುವವು, ಶರೀರ ಸಾಮರ್ಥ್ಯವು ಕ್ಷೀಣವಾಗುವದು, ಅವಯವಗಳ ಚಲನವಲನ ಕುಂದುವದು, ಒಂದು ವೇಳೆ ಹತ್ತರ ಯಾರೂ ಇಲ್ಲದಿದ್ದರೆ ಒದ್ದಾಡಿ ಸಾಯಬೇಕಾಗುವದು ಪ್ರಾಣಿಗಳೆಲ್ಲ ಅಂತ್ಯ ಕಾಲದಲ್ಲಿ ದೀನವಾಗಿ ಬಿಡುವವು, ಈ ಪ್ರಕಾರವೆಲ್ಲವು ಅಂತರಾತ್ಮನ ಕೃತಿಗಳು ಈತನು ಅವಲಕ್ಷಣನೂ ದುಃಖಕಾರಕನೂ ಆಗಿರುವನು ಆ ಅಂತರಾತ್ಮನಿಗೆ ಜನರು 'ಭೋಗಿಸಿದರೂ ಅಭೋಕ್ತನು' ಎಂದೆನ್ನುವರು ಆದರೆ ಅವರ ಈ ನುಡಿಯು ಸರಿಯಲ್ಲ ಜನರು ನೋಡದೆ ಮಾತಾಡುವರು ಅಂತ್ಯಕಾಲವು

ಅತ್ಯಂತಕಠಿಣವಾದದ್ದು. ಪ್ರಾಣವು ಶರೀರವನ್ನು ಬಿಡಲಿಕ್ಕೆ ಒಲ್ಲದಾಗುವದು ಹೀಗಾಗಿ ಅಂತ್ಯ ಕಾಲದಲ್ಲಿ ಪ್ರಾಣಿಯು ಆಶಾಬದ್ಧ ಕಂಗಾಲನಂತಾಗಿ ಹೀನ ಸ್ಥಿತಿಯನ್ನು ಹೊಂದುವದು "

ಶ್ರೀ ರಾಮ ॥ ೭ ಜಗಜ್ಜೀವನ ನಿರೂಪಣೆ ॥ ಗುರುಗಳು ಶಿಷ್ಯರಿಗೆ—

"ನೀರು ಮೂಲತ ನಿರ್ಮಲವಾದದ್ದು ಆದರೆ ಅದು ಹಲವು ಬಳ್ಳಿಗಳಲ್ಲಿ ಸೇರಿ ಅವುಗಳ ಸಂಗತಿಯಿಂದ ಹುಳಿ, ಕ್ಷಾರ ಮುಂತಾದ ರುಚಿಯುಳ್ಳದ್ದಾಗುವದು ಅದರಂತೆ ಆತ್ಮನು ಆತ್ಮತ್ವದಿಂದ ನಿರ್ವಿಕಾರ ಹಾಗು ನಿರ್ಮಲನಾಗಿರುವನು ಆದರೆ ಅವನ ದೇಹಸಂಗದಿಂದ ಹಲವು ವಿಕಾರಗಳನ್ನು ಹೊಂದುವನು ಅಭಿಮಾನದ ಹೆಚ್ಚುವಿಕೆಯು ಆತ್ಮನನ್ನು ಸರಿಯಿಲ್ಲದ ಮಾರ್ಗಕ್ಕೆ ಎಳೆದೊಯ್ಯುವದು ಸತ್ಸಂಗವು ಕಬ್ಬಿನಲ್ಲಿಯ ಸಿಹಿ ರಸದಂತೆ ಸೊಗಸೆನ್ನಿಸುವದು ನೀಚ ಸಂಗತಿಯು ಮಾನವನನ್ನು ವಿಷ ಬಳ್ಳಿಯ ಹಾಗೆ ನಷ್ಟಕ್ಕೆ ಗುರಿ ಮಾಡುವದು ಜಗತ್ತಿನಲ್ಲಿ ಹೇರಳ ವನಸ್ಪತಿಗಳು ಇರುವವು ಆ ಎಲ್ಲವುಗಳ ಗುಣಗಳನ್ನೆಲ್ಲ ಹೇಳಲು ಬರುವದಿಲ್ಲ ಆತ್ಮನು ಹಲವು ದೇಹಗಳ ಸಂಗತಿಯಿಂದ ಹಲವು ವಿಕಾರಗಳಿಂದ ಯುಕ್ತನಾಗುವನು ಆ ವಿಕಾರಗಳಲ್ಲಿ ಕೆಲವು ಒಳ್ಳೆಯವು ಇರುವವು ಅವು ಸತ್ಸಂಗತಿಯಿಂದ ಸುಖ ಪಡೆಯುವವು ಹಾಗು ಅವು ವಿವೇಕದಿಂದ ದೇಹ ಬುದ್ಧಿಯನ್ನು ತೊಲಗಿಸಿ ಆಚೆಗೆ ಪಾರಾಗುವವು ಇದು ವರೆಗೆ ಆತ್ಮನಿಗೆ ನೀರಿನ ದೃಷ್ಟಾಂತವನ್ನು ಹೇಳಿತು ಆದರೆ ಆ ದೃಷ್ಟಾಂತವು ಸಾಕಷ್ಟಿರುವದಿಲ್ಲ ಯಾಕಂದರೆ ನೀರಿಗೆ ನಾಶತ್ವವುಂಟು ಆದರೆ ಆತ್ಮನು ವಿವೇಕದಿಂದ ದೇಹಬುದ್ಧಿಯ ಆವರಣವನ್ನು ದಾಟಿ ಹೊರಬೀಳುವನು ಈ ಅನುಭವವನ್ನು ಒರೆಹಚ್ಚಿನೋಡತಕ್ಕದ್ದು ಆತ್ಮಹಿತವನ್ನುಮಾಡಿಕೊಳ್ಳುವವನಿಗೆ ಇದಕ್ಕೂ ಹೆಚ್ಚಿಗ ಹೇಳಬೇಕಾಗಿಲ್ಲ ಅವನು ತನ್ನಲ್ಲಿ ತಾನೇ ತಿಳಕೊಂಡು ಜಾಣನಾಗತಕ್ಕದ್ದು ತನ್ನನ್ನು ತಾನೇ ರಕ್ಷಣ ಮಾಡಿಕೊಳ್ಳುವವನು ತನ್ನ ಮಿತ್ರನು ತಾನೇ ಆಗುವನು ತನ್ನ ನಾಶವನ್ನು ತಾನೇ ಮಾಡಿಕೊಳ್ಳುವವನು ತನಗೆ ತಾನೇ ಶತ್ರುವಾಗುವನು ತಾನೇ ಒಂದೆಡೆಗೆ ಹೋಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳುವವನು ಆತ್ಮಘಾತಕನೂ ಪಾಪಿಷ್ಠನೂ ಎನ್ನಿಸುವನು ಆದ್ದರಿಂದ ವಿವೇಕದಿಂದ ತನ್ನನ್ನು ತಾನೇ ಉದ್ಧಾರ

ಮಾಡಿಕೊಳ್ಳಬೇಕು. ಅಂತವನೇ ಸಾಧುವೆನ್ನಿಸುವನು ಅವನೇ ಧನ್ಯನು ಪುಣ್ಯವಂತರಿಗೆ ಸತ್ಸಂಗವೂ ಪಾಪಿಗಳಿಗೆ ದುಸ್ಸಂಗವೂ ದೊರೆಯುವದು ಸದ್ಗತಿ ಇಲ್ಲವೆ ದುರ್ಗತಿದೊರೆಯುವದಕ್ಕೆ ಸಂಗವೇ ಕಾರಣವಾಗಿರುವದು ಆದ್ದರಿಂದ ಸತ್ಸಂಗವನ್ನು ಹಿಡಿಯಬೇಕು. ತನ್ನ ಮುಕ್ತತೆಯ ಬಗೆಗೆ ತಾನೇ ಚಿಂತಿಸಬೇಕು ಬುದ್ಧಿವಂತನು ಸ್ವಬುದ್ಧಿಯಿಂದ ಹೇಗೆ ಉದ್ಧರಿಸಿಕೊಳ್ಳುವನೆಂಬುದನ್ನು ಮನನ ಮಾಡಿಕೊಳ್ಳಬೇಕು ಪ್ರಪಂಚದಲ್ಲಿ ಅಥವಾ ಪರಮಾರ್ಥದಲ್ಲಿ ಬುದ್ಧಿವಂತರ ಸಂಗವಿದ್ದರೆ ಸುಖವಾಗುವದು ಬುದ್ಧಿಹೀನರ ಸಂಗವಿದ್ದರೆ ಅವಿವೇಕವು ವರ್ಧಿಸುವದು. ಬುದ್ಧಿವಂತನಲ್ಲಿ ದೇವಾಂಶವೂ ಬುದ್ಧಿಹೀನನಲ್ಲಿ ದೈತ್ಯಾಂಶವೂ ಇರುವದೆಂದು ತಿಳಿಯಬೇಕು ಇದರ ಮೇಲಿಂದ ಶ್ರೇಯಸ್ಕರ ಸಂಗವನ್ನು ಹಿಡಿಯಬೇಕೆಂದು ಧ್ವನಿತ ವಾಗುತ್ತದೆ ಬುದ್ಧಿವಂತನು ಸರ್ವಮಾನ್ಯನಾಗುವನು, ಬುದ್ಧಿಹೀನನು ಎಲ್ಲೆಡೆಗೆ ಅಮಾನ್ಯನಾಗುವನು ಆದ್ದರಿಂದ ಜನ್ಮಸಫಲತೆಯನ್ನು ಉಂಟು ಮಾಡುವ ಸಂಗತಿಯನ್ನೇ ಹಿಡಿಯಬೇಕು ಉದ್ಯೋಗ ನಿರತನಾದ ಬುದ್ಧಿವಂತನ ಸ್ನೇಹದಿಂದ ಮಾನವನು ಉದ್ಯೋಗಿಯೂ ಬುದ್ಧಿವಂತನೂ ಆಗುವನು ಮತ್ತು ಸೋಮಾರಿಯೂ ಮೂರ್ಖನೂ ಆದವನ ಜೊತೆ ಯಿಂದ ಮೂರ್ಖನಾಗುವನು ಸತ್ಸಂಗತಿಯಿಂದ ಸುಖವಾಗುವದು ನೀಚರ ಗೆಳೆತನದಿಂದ ದುಖವಾಗುವದು ಆನಂದವನ್ನು ಬಿಟ್ಟುಗೊಟ್ಟು ದುಃಖ ಶ್ಲೋಕಗಳನ್ನೇಕೆ ಕೈಕೊಳ್ಳಬೇಕು? ಮೇಲಿನ ಎರಡೂ ಪ್ರಕಾರಗಳಿಂದ ಪ್ರಾಣಿಗಳು ವರ್ತಿಸುವವು ಒಬ್ಬನ ಸ್ನೇಹದಿಂದ ಸರ್ವಸುಖ ಯೋಗ ದೊರೆತರೆ ಇನ್ನೊಬ್ಬನ ಸಂಗದಿಂದ ಸರ್ವ ಕೆಲಸಗಳು ಹದಗೆಟ್ಟು ಹೋಗುವವು ವಿವೇಕ ವಿಚಾರದಿಂದ ಎಲ್ಲ ಕರ್ಮಗಳನ್ನು ಮಾಡುತ್ತ ಹೋಗಬೇಕು ಅಕಸ್ಮಾತ್ತಾಗಿ ಗಂಡಾಂತರ ಪ್ರಾಪ್ತವಾಗಲು ಅದರಿಂದ ಪಾರಾಗಬೇಕು ಅಂದರೆ ಸಮಾಧಾನ ಸುಖ ಸಿಗುವದು ಹಲವು ಪ್ರಕಾರದ ದುಸ್ಸಂಗತಿಯಲ್ಲಿ ಮೇಲೆ ಮೇಲೆ ಮನೋಭಂಗತೆಯುಂಟಾಗಿ ದುಖ ವುಂಟಾಗುತ್ತದೆ ಆದ್ದರಿಂದ ತನ್ನ ಮಹತ್ವವನ್ನು ಕಾಯ್ದುಕೊಂಡು ನಡೆ ಯಬೇಕು ಜಾಣನು ಪ್ರಯತ್ನಶೀಲನಿರುವನು ಅವನಿಗೆ ಯಾವದರಿಂದಲೂ ಕೊರತೆಯಿರುವದಿಲ್ಲ ಅವನಿಗೆ ಸುಖ ಸಂತೋಷಗಳೂ ಶ್ಲಾಘ್ಯತೆಯೂ

ದೊರಕುವವು. ಬಹುರತ್ನಾ ವಸುಂಧರಾ ಎಂಬ ನುಡಿಯಂತೆ ಭೂಮಿಯ ಮೇಲೆ ಹಲವು ಬುದ್ಧಿವಂತರೂ ನಿಪುಣರೂ ಇರುವರು. ಇದನ್ನು ವಿಚಾರ ಮಾಡಲು ಆ ಮಾತು ಅನುಭವಕ್ಕೆ ಬರುವದು. ಈ ಜಗತ್ತಿನಲ್ಲಿ ದುರ್ಬಲರು–ಸಂಪನ್ನರು ಹಾಗು ಹುಚ್ಚರು, ವಿದ್ವಾಂಸರು ಹೀಗೆ ಎರಡು ವರ್ಗಗಳ ಜನರಿರುವರು ಎಷ್ಟೋ ಸಂಪನ್ನರು ಹಾಳಾಗಿ ಹೋಗಿರುವರು; ಅದೆಷ್ಟೋ ದರಿದ್ರರು ಭಾಗ್ಯಶಾಲಿಗಳಾಗಿರುವರು ವಿದ್ಯಾವ್ಯುತ್ಪತ್ತಿಗಳ ಸಂಬಂಧದಲ್ಲಿಯಾದರೂ ಇದೇ ಪ್ರಕಾರ ತೋರುವದು ಸೃಷ್ಟಿಯ ರಾಟೆ ಚಕ್ರವು ಒಂದೇ ಸವನೆ ತಿರುಗುತ್ತಿರುವದು ಒಂದು ತುಂಬುವದು ಇನ್ನೊಂದು ಬರಿದಾಗುವದು ಅವಾದರೂ ಕಾಲಾಂತರದಿಂದಾಗುವವು. ಸಂಪತ್ತು ಮಧ್ಯಾಹ್ನದ ನೆರಳಿನಂತಿದೆ ಆಯುಷ್ಯವು ಸೋರುವ ಕೊಡದಲ್ಲಿಯ ನೀರಿನಂತಿದೆ ಬಾಲ್ಯ, ತಾರುಣ್ಯ, ವಾರ್ಧಕ್ಯ ಈ ಅವಸ್ಥೆ ಮುಗಿದ ಮೇಲೆ ಮೃತ್ಯುವು ಬಂದು ನಿಲ್ಲುವದು ಇದನ್ನರಿತು ಮಾನವನು ತನ್ನ ಆಯುಷ್ಯವನ್ನು ಸಾರ್ಥಕ ಮಾಡಿಕೊಳ್ಳಬೇಕು ದೇಹದಿಂದ ಆಗತಕ್ಕ ಕಾರ್ಯಗಳು ಆಗೇ ಆಗುತ್ತವೆ ಯತ್ನದಿಂದ ಕಾರ್ಯ ಸಿದ್ಧಿಯಾಗುವದು ಇದನ್ನು ಮನುಷ್ಯನು ತಿಳಿದಿದ್ದರೂ ದುಃಖವನ್ನು ಅದೇಕೆ ಅನುಭವಿಸಬೇಕು?

ಶ್ರೀ ರಾಮ ॥ ೮ ತತ್ವ ನಿರೂಪಣೆ ॥ ಗುರುಗಳು ಶಿಷ್ಯರಿಗೆ ಪಂಚೀಕರಣದ ಬಗೆಗೆ ಹೇಳಿದ್ದೆಂತೆಂದರೆ—

“ ನಾಭಿಸ್ಥಾನದಲ್ಲಿ ಮೊದಲು ಸ್ಫುರಣವಾಗುವ ವಾಣಿಯು ಪರಾವಾಣಿಯು ಅದೇ ವಾಣಿಯು ಹೃದಯ ಸ್ಥಾನದಲ್ಲಿ ಬಂದು ಧ್ವನಿ ರೂಪಹೊಂದಿ ಪಶ್ಯಂತಾ ವಾಣಿ ಎನ್ನಿಸುವದು ಅಲ್ಲಿಂದ ಆ ವಾಣಿಯು ಕಂಠಕ್ಕೆ ಸಾಗಿ ನಾದರೂಪ ಹೊಂದಿ ಮಧ್ಯಮಾ ವಾಣಿ ಎನ್ನಿಸುವದು ಮುಂದ ಆ ವಾಣಿಯು ಜಿಹ್ವೆಯ ಮೇಲೆ ಬಂದು ಉದ್ಗಾರ ಹೊಂದಿ ವೈಖರಿ ವಾಣಿ ಎನ್ನಿಸುವದು. ಇಂತು ಇವು ನಾಲ್ಕು ವಾಣಿಗಳು.

ಇನ್ನು ಇವುಗಳಲ್ಲಿ ನಾಭಿಸ್ಥಾನದಿಂದ ಸ್ಫುರಿತವಾದ ಪರಾವಾಣಿಯೇ ಅಂತಃಕರಣವು

ಅಂತಃಕರಣದಲ್ಲಿ ಪ್ರಥಮತಃ ಸಹಜ ಸ್ಫುರಿತವಾಗಿ ಸಂದೇಹದಿಂದ ಚಂಚಲ ವೃತ್ತಿ ತೋರುವ ಸ್ಥಾನವೇ ಮನವು.

ಯಾವದೊಂದು ಕ್ರಿಯೆಯನ್ನು ಕುರಿತು– 'ಅದನ್ನು ಮಾಡಬೇಕು' 'ಇದನ್ನು ಮಾಡಬಾರದು' ಎಂಬದಾಗಿ ಅರಿವನ್ನು ತಂದುಕೊಳ್ಳುವದೇ ಬುದ್ಧಿಯು.

ಬುದ್ಧಿಯಿಂದ ನಿಶ್ಚಿತವಾದ ಕ್ರಿಯೆಯು 'ಮಾಡುವಿಕೆ' 'ಬಿಡುವಿಕೆ' ಗಳ ಚಿಂತನೆಯು ನಡೆಯುವ ಸ್ಥಾನವು ಚಿತ್ತವು.

ಕಾರ್ಯದ ಬಗೆಗೆ ಅಭಿಮಾನ ಹಿಡಿದು ಕಾರ್ಯ ಮಾಡುವದು ಅವಶ್ಯವೆಂದು ಕಾರ್ಯಪ್ರವೃತ್ತವಾಗುವಂತೆ ಮಾಡುವದೇ ಅಹಂಕಾರವು.

ಈ ಪ್ರಕಾರ ಈ ಐದಕ್ಕೂ ಕೂಡಿ ಅಂತಃಕರಣ ಪಂಚಕ ಎಂಬ ಹೆಸರು. ಇದರಂತೆ ಉಳಿದ ಪಂಚಕಗಳ ರೂಪಗಳಿವೆ-

ಇನ್ನು ಸೂಕ್ಷ್ಮ—ಸ್ಥೂಲ ದೇಹಗಳ ತತ್ವಗಳನ್ನು ಹೇಳುವೆವು.

## ಸೂಕ್ಷ್ಮ ದೇಹದ ತತ್ವಗಳು

| ಪಂಚ ಮಹಾ ಭೂತಗಳು | ಆಕಾಶ<br>ಅಂತಃಕರಣ ಪಂಚಕ | ವಾಯು<br>ಪ್ರಾಣಪಂಚಕ | ತೇಜ<br>ಜ್ಞಾನೇಂದ್ರಿಯ ಪಂಚಕ | ಆಪ<br>ಕರ್ಮೇಂದ್ರಿಯ ಪಂಚಕ | ಪೃಥ್ವಿ<br>ವಿಷಯ ಪಂಚಕ |
|---|---|---|---|---|---|
| ಆಕಾಶ | ಅಂತ ಕರಣ<br>ಪ್ರಧನು ಸ್ಫುರಣ | ವ್ಯಾನ<br>ಸರ್ವಾಂಗ | ಕಿವಿ<br>ಶಬ್ದ ಕೇಳುವದು ಕಿವುಡತನ | ಬಾಯಿ<br>ಶಬ್ದವುಚ್ಚಾರ ಮೂಕತನ | ಶಬ್ದ |
| ವಾಯು | ಮನ<br>ಸಂಕಲ್ಪ–ವಿಕಲ್ಪ | ಸಮಾನ<br>ಹೊಕ್ಕಳಿನ ಸ್ಥಾನ | ಚರ್ಮ<br>ಶೀತ– ಉಷ್ಣಗಳನ್ನು ತಿಳಿಯುವದು- | ಕೈ<br>ಕೆಲಸಮಾಡುವದು | ಸ್ಪರ್ಶ |

ಈ ಪ್ರಕಾರ ಸ್ಥೂಲ ದೇಹದಲ್ಲಿ ೨೫ ತತ್ವಗಳಿರುವವು

ಈ ಎರಡೂ ದೇಹಗಳಲ್ಲದೆ ಕಾರಣ ಮಹಾಕಾರಣಗಳೆಂಬ ಎರಡು ದೇಹಗಳು ಇರುವವು ಕಾರಣದೇಹವೇ ಅಜ್ಞಾನವು, ಮಹಾಕಾರಣ ದೇಹವೇ ಜ್ಞಾನವು ಈ ನಾಲ್ಕೂ ದೇಹಗಳನ್ನು ನಿರಸನ ಮಾಡಿ ಕೊಳ್ಳಬೇಕು ವಿಚಾರದಿಂದ ಆತ್ಮನು ದೇಹದಿಂದ ಬೇರೆಯಿರುವನೆಂದು ನಿಶ್ಚಿತ ಮಾಡಿಕೊಳ್ಳಬೇಕು, ಮತ್ತು ಅಹಂಕಾರವನ್ನು ತತ್ವಗಳ ಜೊತೆ ಯಲ್ಲಿ ತ್ಯಾಗಮಾಡಬೇಕು ಇಷ್ಟಾದರೆ ಮುಂದೆ ಪರಬ್ರಹ್ಮನು ಉಳಿ ಯುವನು ಈ ಪರಬ್ರಹ್ಮನಲ್ಲಿ ಅನನ್ಯತೆಯನ್ನು ತಿಳಿದರೆ ಮಾತ್ರ ಆತ್ಮ ನಿವೇದನೆ ಯಾಗುವದು ವಿವೇಕದಿಂದ ಜನ್ಮ ಮೃತ್ಯುವನ್ನು ತಪ್ಪಿಸಿ ಕೊಳ್ಳಬೇಕು ಅಂದರೆ ಮಾನವ ದೇಹಕ್ಕೆ ಬಂದು ಮಹತ್ಕೃತ್ಯವನ್ನು ಸಾಧಿಸಿಕೊಂಡಂತಾಗುವದು ಮತ್ತು ಪರಬ್ರಹ್ಮನ ಅನನ್ಯ ಭಕ್ತಿಯ ಯೋಗದಿಂದ ಜನ್ಮ ಸಾರ್ಥಕ ಮಾಡಿಕೊಳ್ಳಬೇಕು ಈ ಪಂಚೀಕರಣದ ಮನನವನ್ನು ಮೇಲಿಂದ ಮೇಲೆ ಮಾಡಿಕೊಳ್ಳುತ್ತಿರಬೇಕು ಅಂದರೆ ಸ್ಪರ್ಶಗಲ್ಲಿನ ಸಂಗದಿಂದ ಕಬ್ಬಿಣವು ಬಂಗಾರವಾಗುವಹಾಗೆ ಪರಬ್ರಹ್ಮ ನಲ್ಲಿ ಜೀವನು ಅನನ್ಯತೆ ಹೊಂದಿ ಧನ್ಯನಾಗುವನು ಇನ್ನು ಈ ಸ್ಪರ್ಶ ಗಲ್ಲಿನ ದೃಷ್ಟಾಂತವು ಪೂರ್ಣ ಸರಿಬೀಳುವದಿಲ್ಲ ಯಾಕೆಂದರೆ ಸ್ಪರ್ಶ ಗಲ್ಲು ಕಬ್ಬಿಣವನ್ನು ಮಾತ್ರ ಬಂಗಾರವನ್ನಾಗಿ ಮಾಡುವದೇ ಹೊರತು ತನ್ನಂತೆ ಸ್ಪರ್ಶಗಲ್ಲನ್ನು ಮಾಡಿಕೊಳ್ಳುವದಿಲ್ಲ ಆದರೆ ಇಲ್ಲಿ ಹೀಗಲ್ಲ ಜೀವನು ಪ್ರತ್ಯಕ್ಷವಾಗಿ ಪರಬ್ರಹ್ಮನೇ ಆಗುವನು ಹಾಗು ಸಂತ ಕೃಪೆ ಯಿಂದ ಮುಮುಕ್ಷುಗಳೂ ಸಂತರೇ ಆಗುವರು

ಶ್ರೀ ರಾಮ || ೯ ತನು ಚತುಷ್ಟಯ || ಗುರುಗಳು ಶಿಷ್ಯರನ್ನು ಕುರಿತು —

೧) "ಸ್ಥೂಲ, ಸೂಕ್ಷ್ಮ, ಕಾರಣ ಮತ್ತು ಮಹಾಕಾರಣ ಹೀಗೆ ನಾಲ್ಕು ಶರೀರಗಳಿವೆ

೨) ಜಾಗೃತಿ, ಸ್ವಪ್ನ, ಸುಷುಪ್ತಿ ಮತ್ತು ತುರ್ಯಾ ಹೀಗೆ ದೇಹಕ್ಕೆ ನಾಲ್ಕು ಅವಸ್ಥೆಗಳಿರುವವು

೩) ವಿಶ್ವ, ತೈಜಸ, ಪ್ರಾಜ್ಞ, ಮತ್ತು ಪ್ರತ್ಯಗಾತ್ಮಾ ಈ ನಾಲ್ಕು ಅಭಿಮಾನಗಳು ದೇಹಕ್ಕಿ ವೆವು

೪) ನೇತ್ರ, ಕಂಠ, ಹೃದಯ, ಮತ್ತು ಮೂರ್ಧಕ ಈ ನಾಲ್ಕು ದೇಹದ ಸ್ಥಾನಗಳು ಇರುತ್ತವೆ

೫) ಸ್ಥೂಲಭೋಗ, ಸ್ವಪ್ನಭೋಗ ಆನಂದ ಬೋಗ, ಮತ್ತು ಆನಂದಾವಭಾಸಭೋಗ ಇವು ದೇಹದ ಭೋಗಗಳು

೬) ಅಕಾರ, ಉಕಾರ, ಮಕಾರ ಮತ್ತು ಅರ್ಧಮಾತ್ರೆ ಇವು ಅದರ ನಾಲ್ಕು ಮಾತ್ರೆಗಳು

೭) ಸತ್ವಗುಣ, ರಜೋಗುಣ, ತಮೋಗುಣ, ಮತ್ತು ಶುದ್ಧ ಸತ್ವಗುಣ ಇವು ನಾಲ್ಕು ದೇಹದ ಗುಣಗಳು

೮) ಕ್ರಿಯಾಶಕ್ತಿ ದ್ರವ್ಯಶಕ್ತಿ, ಇಚ್ಛಾಶಕ್ತಿ ಮತ್ತು ಜ್ಞಾನಶಕ್ತಿ ಇವು ನಾಲ್ಕು ದೇಹದ ಶಕ್ತಿಗಳು

ಈ ಪ್ರಕಾರ ನಾಲ್ಕು ದೇಹಗಳ ೮ ಪ್ರಕಾರಗಳು. ಪ್ರತಿಯೊಂದಕ್ಕೆ ೪ ತತ್ವಗಳು ಹೀಗೆ ಒಟ್ಟು ೮×೪)=೩೨ ತತ್ವಗಳಾದವು ಹಿಂದೆ ಹೇಳಿದಂತೆ ಸೂಕ್ಷ್ಮದೇಹದ ೫ ತತ್ವಗಳೂ ಸ್ಥೂಲ ದೇಹದ ೨೫ ತತ್ವಗಳೂ ಹಾಗು ಈ ೩೨ತತ್ವಗಳೂ ಒಟ್ಟುಗೂಡಿ ೮೨ ತತ್ವಗಳಾಗುವವು ಇವು ನಾಲ್ಕೂ ದೇಹಗಳಸಂಬಂಧವಾದವು ಈ ಎಲ್ಲ ಅಂದರೆ ೮೨ ತತ್ವಗಳು ಮಾಯಿಕವಾಗಿರುತ್ತವೆ ಇವು ಮಾಯಿಕಗಳೆಂಬದನ್ನು ಅರಿತುಕೊಳ್ಳಬೇಕು ಇವೆಲ್ಲವುಗಳ ಲಯವು ತಾನು ಸಾಕ್ಷಿಯಾಗುವದರಿಂದ ಆಗುತ್ತದೆ ಸಾಕ್ಷಿತ್ವವೇ ಜ್ಞಾನವು ಈ ಜ್ಞಾನದಿಂದ ಅಜ್ಞಾನವನ್ನು ತಿಳಿಯತಕ್ಕದ್ದು ಮತ್ತು ಆ ೮೨ ತತ್ವಗಳ ಸಂಗಡವೇ ಅವುಗಳ ವಿಷಯಕ್ಕಿರುವ ಅಜ್ಞಾನವೂ ಸಾಕ್ಷಿತ್ವದಿಂದ ಉಂಟಾದ ಜ್ಞಾನವೂ ಇವೆರಡನ್ನೂ ನಿರಸನವಾಗಿ ಮಾಡಿಕೊಂಡು ನಿಸ್ಸಂಗತ್ವವನ್ನು ಅನುಭವಿಸಬೇಕು ವಿರಾಟ, ಹಿರಣ್ಯಗರ್ಭ, ಅವ್ಯಾಕೃತ, ಹಾಗು ಮೂಲ ಮಾಯೆ ಈ ಪ್ರಕಾರ ಬ್ರಹ್ಮಾಂಡದಲ್ಲಿಯೂ ನಾಲ್ಕು ದೇಹಗಳನ್ನು ಕೇವಲ ತಿಳಿಯುವದಕ್ಕಾಗಿ ಕಲ್ಪಿಸಿದೆ ಅವುಗಳನ್ನೂ ಸಹ ವಿವೇಕದಿಂದ ನಿರಸನ ಮಾಡಿಕೊಳ್ಳಬೇಕು. ಆತ್ಮಾನಾತ್ಮ ವಿಚಾರವನ್ನು ಸಾರಾಸಾರವಿವೇಕದಿಂದ ತಿಳಿದು ಪಂಚಭೌತಿಕ ಪಿಂಡ ಬ್ರಹ್ಮಾಂಡಗಳನ್ನು ನಿರಸನಮಾಡಿ

ಕೊಳ್ಳಬೇಕು ಹಾಗು ತಾನು ಬ್ರಹ್ಮಾನುಭಾವವನ್ನು ಸ್ವೀಕರಿಸಬೇಕು ಹಿಂದೆ ಹೇಳಿದ ಸೂಕ್ಷ್ಮ ಹಾಗು ಸ್ಥೂಲ ದೇಹಗಳ ತತ್ವಗಳನ್ನು ಕುರಿತು ಸರಿಯಾದ ಜ್ಞಾನವನ್ನು ಮಾಡಿಕೊಳ್ಳಬೇಕು ಅವುಗಳನ್ನು ವಿಚಾರದಿಂದ ಮನನ ಮಾಡಿಕೊಂಡು ಮುಕ್ತನಾಗಬೇಕು "

ಶ್ರೀ ರಾಮ || ೧೦ ಟೊಣಪಸಿದ್ಧಲಕ್ಷಣ || ಗುರುಗಳು ಶಿಷ್ಯರಿಗೆ- "ಜಂಬೂ ದ್ವೀಪಾದಿ ಸಪ್ತದ್ವೀಪಗಳು ಕೂಡಿ ಪೃಥ್ವಿಯಾಗಿದೆ ಈ ಪೃಥ್ವಿಗೆ ಕ್ಷೀರಸಮುದ್ರ, ಸುರಾಸಮುದ್ರ, ಘೃತಸಮುದ್ರ, ದಧಿಸಮುದ್ರ ಇಕ್ಷು ಸಮುದ, ಕ್ಷಾರ ಸಮುದ್ರ ಮತ್ತು ಶುದ್ಧ ಜಲಸಮುದ್ರ ಹೀಗೆ ಏಳು ಸಾಗರಗಳ ಆವರಣವಿರುವದು ಈ ಸಾಗರಾವರಣದಲ್ಲಿಯೇ 'ಹಾಟಕೇಶ್ವರ' ಎಂಬ ಹೆಸರಿನ ಶಂಕರನ ಪಾತಾಳ ಲಿಂಗವು ಉಂಟು ಆ ಲಿಂಗಕ್ಕೆ ನಾವು ಇದ್ದ ಸ್ಥಳದಲ್ಲಿಯೇ ನಮಸ್ಕಾರ ಮಾಡಲು ಅದು ಆ ದೇವನಿಗೆ ಸಲ್ಲುತ್ತದೆ ಆ ಲಿಂಗದ ಮಹಿಮೆ ಅಪಾರವಾಗಿರುವದು ಆದರೂ ಯಾರೂ ಆ ಲಿಂಗವಿದ್ದಲ್ಲಿಗೆ ಹೋಗಲಾರರು ದೇಹಧಾರಿಗಳಿಗೆ ದರ್ಶನವಿಲ್ಲ ಆವರೆ ಆ ಈಶ್ವರನನ್ನು ವಿವೇಕದಿಂದ ಧ್ಯಾನದಲ್ಲಿ ತಂದಿರಿಸಿಕೊಳ್ಳಬೇಕು ಸಪ್ತ ಸಾಗರಗಳಿಂದಾದ ಹೊದಿಕೆಯ ಆಚೆಗೆ ಈ ದೇವನಿರುವ ವಿಸ್ತೃತ ಭೂಪ್ರದೇಶ ವಿದೆ ಅಲ್ಲಿಗೆ ಭೂಮಂಡಲದ ಅಂಚು ಕತ್ತರಿಸಿ ಆ ಭೂಮಿಯಾಗಿದೆ ಏಳೂ ಸಮುದ್ರಗಳನ್ನು ದಾಟಿ ಹೋದಾಗಲೇ ಆ ಪ್ರದೇಶ ನಿಲುಕುವದು ಆದರೆ ದೇಹಿಗಳಿಗೆ ಇದು ಸಂಭವವಿಲ್ಲ ಆದರೂ ಬೇರೆ ಬಗೆಯಿಂದ ಯತ್ನ ಮಾಡಬೇಕು ಅದಕ್ಕಾಗಿ ವಿವೇಕಿ ಪುರುಷನ ಜೊತೆ ಮಾಡಿಕೊಳ್ಳಬೇಕು ನಮಗೆ ತಿಳಿಯದ್ದನ್ನು ಬುದ್ಧಿವಂತರಿಂದ ಕೇಳಿಕೊಳ್ಳಬೇಕು ದೇಹದಿಂದ ಸಹಿತವಾಗಿ ಮನೋವೇಗದಿಂದ ಸಂಚರಿಸಲು ಬರಲಾರದು ಆದ್ದರಿಂದ ಕುಳಿತಲ್ಲಿಯೇ ಬ್ರಹ್ಮಾಂಡವನ್ನು ಧ್ಯಾನದಲ್ಲಿ ತಂದುಕೊಂಡು ಸಮಾಧಾನ ವನ್ನು ಪಡೆಯತಕ್ಕದ್ದು ಯಾಕಂದರೆ ಚರ್ಮಚಕ್ಷುವಿಗೆ ಗೋಚರವಾಗದ್ದನ್ನು ಜ್ಞಾನ ದೃಷ್ಟಿಯಿಂದ ನೋಡಬೇಕು. ಮಧ್ಯದಲ್ಲಿ ಭೂಮಿಯಿದ್ದುದರಿಂದ ಮೇಲೆ ಆಕಾಶವು, ಕೆಳಗೆ ಪಾತಾಳವು ಈ ಪ್ರಕಾರ ಭಿನ್ನತೆಯಾಗಿರುವದು ಮಧ್ಯದಲ್ಲಿ ಭೂಮಿಯು ಇಲ್ಲವೆಂದು ಕಲ್ಪಿಸಿದರೆ ಎಲ್ಲೆ

ಡೆಗೂ ಆಕಾಶವೇ ತೋರುವದು ಆ ಆಕಾಶವು ಪರಬ್ರಹ್ಮವು ಅಲ್ಲಿ ದೃಶ್ಯ ಸೃಷ್ಟಿಯ ಸಂಬಂಧವಾಗುವದಿಲ್ಲ ಕಣ್ಣಿನಿಂದ ನೋಡಿದರೆ ದೃಶ್ಯವು, ಮನಸಿಗ ಹೊಳೆದರೆ ಭಾಸವು ಆದರೆ ಆ ಪರಬ್ರಹ್ಮನು ಇವೆರಡರಿಂದಲೂ ದೂರನು ಅಂದರೆ ದೃಶ್ಯ-ಭಾಸಾತೀತನಾಗಿರುವನು ಆತನು ಇಂದ್ರಿಯಗಳಿಗೂ ಮನಕ್ಕೂ ನಿಲುಕದವನು ಅಂದರೆ ಅವುಗಳಿಂದ ದೂರವಾಗಿ ಇರುವನು ಅವನಿದ್ದಲ್ಲಿ ವಿವೇಕದಿಂದ ಹೋಗಬೇಕು ಆದರೆ ಸೂಕ್ಷ್ಮ ದೃಷ್ಟಿಯಿಂದ ನೋಡಲು ಕೇವಲ ಆಕಾಶದ ಆಚೆಗಿರುವ ಬ್ರಹ್ಮನನ್ನು ನೋಡುವ ಜ್ಞಾನವಂತರು ತೀರ ವಿರಳ ವಾಚ್ಯಾರ್ಥವನ್ನು ಮಾತಿನಿಂದ ಹೇಳಬೇಕು ಲಕ್ಷ್ಯಾರ್ಥವನ್ನು ಬಾಯಿಯಿಂದ ಹೇಳದೆ ಮನಸಿನಿಂದ ತಿಳಕೊಂಡು ಗ್ರಹಿಸಬೇಕು ಸಗುಣತೆಯಿಂದಲೇ ನಿರ್ಗುಣದ ಅನುಭವ ಪಡೆಯಬೇಕು ನಿರ್ಗುಣನ ಹೊರತು ಎಲ್ಲ ಗುಣಗಳಿಗೂ ನಾಶತ್ವವುಂಟು, ನಿರ್ಗುಣನು ಮಾತ್ರ ಶಾಶ್ವತನು ಸ್ಥೂಲ ನಿರೀಕ್ಷಣೆಗಿಂತಲೂ ಸೂಕ್ಷ್ಮವಾಗಿ ಅವಲೋಕಿಸುವದು ವಿಶಿಷ್ಟತೆಯುಳ್ಳದ್ದು ದೃಷ್ಟಿಗೆ ಕಾಣದ್ದನ್ನು ಕಿವಿಯಿಂದ ಕೇಳಿ ತಿಳಿಯಬೇಕು ಶ್ರವಣ ಹಾಗು ಮನನಗಳಿಂದ ಎಲ್ಲವೂ ತಿಳಿಯುವದು ಅಷ್ಟಧಾ ಪ್ರಕೃತಿಯಿಂದ ಅನೇಕ ವಸ್ತುಗಳುಳ್ಳ ಸೃಷ್ಟಿಯಾಯಿತು ಆದರೆ ಆ ಎಲ್ಲ ಸೃಷ್ಟಿಯನ್ನೂ ಅದರೊಳಗಿನ ಎಲ್ಲ ಪದಾರ್ಥಗಳನ್ನೂ ಕಣ್ಣಿನಿಂದ ನೋಡುವದು ಸಾಧ್ಯವಿಲ್ಲ ಆದರೆ ಸೃಷ್ಟಿಯ ಎಲ್ಲ ಪದಾರ್ಥಗಳು ಒಂದೇ ತೆರನೆಂದು ತಿಳಿಯಕೂಡದು ಎಲ್ಲ ವಸ್ತುಗಳೂ ಸರಿಸಮಾನವೆಂದು ಹೇಳುವಲ್ಲಿಯೂ ಭಾವಿಸುವಲ್ಲಿಯೂ ಪರೀಕ್ಷಕನ ಕೆಲಸವಿಲ್ಲ ನಾಲಿಗೆ ರುಚಿಯು ಇಲ್ಲದವನು ಎಲೆಯಲ್ಲಿ ಬಡಿಸಿದ ಊಟದ ಪದಾರ್ಥಗಳನ್ನೆಲ್ಲ ಒಟ್ಟಾಗಿ ಕಲಸಿ ಬಿಡುವನು ಮಂದಮತಿ ಮೂರ್ಖನಿಗೆ ಏನೊಂದರ ಇಂಗಿತವು ತಿಳಿಯಲಾರದು ವಿವೇಕದಿಂದ ಎಲ್ಲವುಗಳನ್ನು ವಿಂಗಡಿಸುವದೂ ಆತನಿಗೆ ತಿಳಿಯುವದಿಲ್ಲ ಅಂಥವನು ವಿವೇಕ ಮತ್ತು ಅವಿವೇಕ ಇವೆರಡನ್ನೂ ಒಂದೇ ಎಂದು ತಿಳಿಯುವನು ಉಚ್ಚ-ನೀಚ, ಸಾರ-ಅಸಾರ ಇವುಗಳಲ್ಲಿಯ ಅಂತರವೇನೂ ಆತನಿಗೆ ತಿಳಿಯದು. ಇದಕ್ಕೆ ಕಾರಣವೇನೆಂದರೆ ಅವನಿಗೆ ಅಂಥವುಗಳ ಬಗೆಗೆ ಅಭ್ಯಾಸವೇ ಇರದಾಗಿರುವದು, ಅನಭ್ಯಾಸಿಯ ಲಕ್ಷಣವೇ ಇದು ತನ್ನಲ್ಲಿ ಹಲವು ವಿಷಯ ಸಂಗ್ರಹವಿದ್ದು

ಯಾವದೊಂದರ ಅಭ್ಯಾಸವಿರದೆ ಹೋದರೆ ಅವನಿಗೆ ಬಿಡುಗಡೆಯ ಮಾರ್ಗವೇ ಇರಲಾರದು ಮಾತಿನ ಬಡಬಡಿಕೆಯುಳ್ಳವನು ಜಗತ್ತಿಲ್ಲಕ್ಕೂ ಹುಚ್ಚು 'ಭ್ರಮೆ', ಎಂಬ ಒಕಾ ಛಾಸ್ಯ ಮಾಡಿದರೆ ಅವನಿಗ ಯಾರೂ ವಿವೇಕಿಯೆನ್ನಲಾರರು. ಅಂಥವರು ನಿತ್ಯ ನಾಶವಾಗುತ್ತಿರುವವುಗಳಿಗೆ ಅವಿನಾಶಿಗಳೆಂದೆನ್ನುವರು ಇವರು 'ಸರ್ವಂಬ್ರಹ್ಮ'ವಾದಿಗಳೆಂದು ಹೇಳಬಹುದ. ಇಂಥ ಸಾರಾಸಾರ ವಿರಹಿತ ಮೂರ್ಖರಿಗೇನೆನ್ನಬೇಕು? ಸೃಷ್ಟಿಯಲ್ಲಿ ಈಶ್ವರನೇ ಅನೇಕ ಭಿನ್ನತೆಗಳನ್ನಿರಿಸುವನು ಹಾಗು ಈ ಸೃಷ್ಟಿಯು ಭೇದದಿಂದಲೇ ನಡೆದಿರವದು ಆದರೆ ನಿರೀಕ್ಷಿಸಿ ಪರೀಕ್ಷೆ ಮಾಡುವವನು ಕುರುಡನಾಗಿದ್ದರೆ ಉಪಯೋಗವೇನು? ಸಾರಾಸಾರ ವಿಚಾರ ರಹಿತರಾದ ಮೂರ್ಖರ ಸಮ್ಮೇಲನದಲ್ಲಿ ಗುಣವಂತನನ್ನು ಕಾಣುವದು ಶಕ್ಯವಿಲ್ಲ ಗುಣವಿಲ್ಲದೆ ಗೌರವವು ಬರಲಾರದು ಸತ್ಯಾಸತ್ಯತೆಗಳನ್ನು ಒಂದೇ ಎಂದು ತಿಳಿವವನಲ್ಲಿ ವಿವೇಕವೆಂದಿಗೂ ಇರಲಾರದು ಅಂಥವನು ಶುದ್ಧ ಮೂರ್ಖನು ಸಂತ ಸಜ್ಜನರು ಸಾರಗ್ರಾಹಿಗಳು ಅಸಾರವನ್ನವರು ತ್ಯಾಜ್ಯವಂದೇ ತಿಳಿಯುವರು ದೈವಹೀನನೊಬ್ಬನಿಂದ ಶ್ರೇಷ್ಠ ವಸ್ತುವಿನ ಪರೀಕ್ಷೆಯೆಂತಾಗುವದು? ಕುಲಗೇಡಿಯಾದವನಿಂದ ಇನ್ನೊಬ್ಬ ಕುಲಗೇಡಿಯು ಶುದ್ಧೀಕರಣವಾಗಲಾರವು ಸತತವೂ ಹೊಲಸುತನದಲ್ಲಿ ಕಾಲ ಕಳೆವವನನ್ನು ನಿರ್ಮಲನನ್ನಾಗಿ ಮಾಡುವದು ಶಕ್ಯವಿಲ್ಲ ಶುಚಿರ್ಭೂತವೆಂತಾಗಬೇಕೆಂಬುವದನ್ನರಿಯದವನಿಗೆ ವೇದಶಾಸ್ತ್ರಪುರಾಣಗಳ ಪ್ರಯೋಜನವೇನು? ಆದ್ದರಿಂದ ಮೊದಲು ಶುದ್ಧಾಚರಣೆಯಿಂದ ವರ್ತಿಸಬೇಕು ಬಳಿಕ ನಿರ್ಮಲ ಮನಸಿನಿಂದ ವಿಚಾರ ಮಾಡಬೇಕು, ಆಚಾರ-ವಿಚಾರಗಳೆರಡೂ ಪವಿತ್ರವಾಗಿದ್ದವನು ಪರಾಂಗತಿಯನ್ನು ಹೊಂದುವನು, ನಿಯಮಾನುವರ್ತಿಗಳಿಗೆ ತಿಳಿಯುದ ದುರ್ಘಟಗಳು ನಿಯಮಬಾಹಿರರಿಗೆ ತಿಳಿಯುವದೆಂದಿಗೂ ಸಾಧ್ಯವಿಲ್ಲ ಕಣ್ಣಿದ್ದವನೇ ಕೈಯಾಡಿಸಿ ಹುಡುಕುತ್ತಿರುವಾಗ ಕುರುಡನು ಕಾಲ್ಲಾಡಿಸಿ ಅದಂತು ಹುಡುಕುವನು? ಪುಣ್ಯ-ಪಾಪ, ಸ್ವರ್ಗ-ನರಕ, ವಿವೇಕ-ಅವಿವೇಕ, ಈ ದ್ವಂದ್ವಗಳು ಘಟಕಗಳು ಒಂದೇ ಎಂದೂ ಆಗಲಾರವು ವಿಷದಿಂದ ಪ್ರಾಣನಾಶವೆಂಬುವದು ಸ್ಪಷ್ಟವದೆ, ನೀಚಕೃತ್ಯಗಳಿಂದ ದುಷ್ಫಲವೊದಗುವದು, ಸತ್ಕ್ರಿಯೆಗಳಿಂದ ಕೀರ್ತಿ ವರ್ಧಿಸುವದು,

ಐಹಿಕ, ಪಾರಲೌಕಿಕಗಳೆರಡರಲ್ಲಿಯೂ ವಿವೇಕವಿರದೆ ಹೋದರೆ ಎಲ್ಲವೂ ವ್ಯರ್ಥವು ಆದ್ದರಿಂದ ಸತ್ಸಂಗ ಹಿಡಿಯಬೇಕು, ಸತ್‌ಶಾಸ್ತ್ರಗಳನ್ನು ಶ್ರವಣ ಮಾಡಬೇಕು, ಮತ್ತು ಪ್ರಯತ್ನಪೂರ್ವಕವಾಗಿ ಸದ್ಗುಣಗಳನ್ನವಲಂಬಿಸಿ ವರ್ತಿಸಬೇಕು''

ಇತಿ ದಾಸಬೋಧೆಯ ೧೭ನೆಯ ದಶಕ ಮುಗಿದುದು





|| ಜಯ ಜಯ ರಘುವೀರ ಸಮರ್ಥ ||

೧೮ ನೆಯ ದಶಕ ( ಬಹು ಜಿನಸೀ )

ಶ್ರೀ ರಾಮ ಸಮರ್ಥ || ೧ ಬಹುದೇವಸ್ಥಾನ ನಿರೂಪಣೆ || ಗಜಾನನನೇ ನಿನಗೆ ನಮಸ್ಕಾರ ಮಾಡುವೆನು

ನಿನ್ನ ಮಹಿಮೆ ಆದಾರಿಗೂ ತಿಳಿಯದು ಎಲ್ಲರಿಗೂ ವಿದ್ಯಾ ಬುದ್ಧಿ ಪ್ರದಾತಾರನು ನೀನಾಗಿರುವಿ ಸರಸ್ವತಿಯೇ! ನಿನಗೆ ವಂದಿಸುವೆನು ನಾಲ್ಕೂ ವೇದಗಳು ನಿನ್ನಿಂದ ಸ್ಫೂರ್ತಿಗೊಂಡವು ಬಹುಜನ ದೇವತೆಗಳು ನಿನ್ನ ನಿಜ ರೂಪವನ್ನು ತಿಳಿಯರು ಸೃಷ್ಟಿ ರಚನೆಗೈದ ಬ್ರಹ್ಮದೇವನೇ! ನೀನು ಧನ್ಯನು ಸೃಷ್ಟಿಯನ್ನು ಉತ್ಪಾದಿಸಿದಿ ಹಲವು ವೇದಶಾಸ್ತ್ರಗಳ ಅನೇಕ ಭೇದಗಳನ್ನು • ಪ್ರಕಟಗೊಳಿಸಿರುವಿ. ಸೃಷ್ಟಿ ಪಾಲಕ ಶ್ರೀ ವಿಷ್ಣುವೇ ನೀನೇ ಧನ್ಯನು ನಿನ್ನ ಒಂದಂಶದಿಂದ ಸಕಲ ಜೀವಗಳು ವೃದ್ಧಿ ಹೊಂದುವವು, ಸ್ಥಿತಿ ಹೊಂದುವವು ಜ್ಞಾನ ಪಡೆಯುವವು ಭೋಲಾನಾಥ ಶಂಕರನೆ! ಅಖಂಡ ರಾಮ ನಾಮ ಜಪವನ್ನು ನಿರಂತರ ಮಾಡುವ ನೀನೇ ಪರಮ ಧನ್ಯನು ಸುರಪತಿ ಇಂದ್ರನೇ ಇಂದ್ರ ಲೋಕದ ವೈಭವ ಪಡೆದ ದೇವಾಧಿ ದೇವ ನೀನೇ ಧನ್ಯನು ಯಮ ಧರ್ಮರಾಯನ! ನಿನಗೆ ಧರ್ಮಾ ಧರ್ಮಗಳ ಯಥಾರ್ಥ ಜ್ಞಾನವೂ ಪ್ರಾಣಿ ಮಾತ್ರಗಳ ಇಂಗಿತವೂ ಪ್ರಕಟವಾಗುವದು ಧನ್ಯನಾದ ನಿನ್ನಿಂದಲೇ. ಶ್ರೀತಿರುಪತಿ ವೇಂಕಟೇಶನೇ! ನಿನ್ನ ಆವಾಸ ಗಿರಿಯಮೇಲೆ ಮಹಾನ್ ಮಹಾ ಜನರುಗಳು ನಿಂತುಕೊಂಡು ನಿನ್ನ ಪ್ರಸಾದ ಭಕ್ಷಿಸುವರು ವಡೆ ಮೊದಲಾದ ಅಪೂಪಗಳ ಸ್ವಾದವನ್ನು ಸವಿಯುವರು ಸುಗಂಧ ಯುಕ್ತ ಸವಿ ಸವಿ ಪಕ್ವಾನ್ನಗಳನ್ನು ಸೇವನ ಮಾಡುವರು ನಿನ್ನ ಧನ್ಯತೆಯು ಅನನ್ಯವಾದದ್ದು ಶ್ರೀ ಬನಶಂಕರಿದೇವಿಯೇ! ಶಾಖಾಹಾರಿಯೇ! ನೀನು ಧನ್ಯದೇವಿಯು. ಮಾರುತಿಯೇ! ತರತರದ ವಡಿಗಳ ಮಾಲೆಗಳಿಂದ ನಿನ್ನನ್ನು ಸುಶೋಭಿತನನ್ನಾಗಿ ಮಾಡುವ ಭಕ್ತರುಗಳಿಗೆ ಮೊಸಂಬಾವಡಿಯ ಪ್ರಸಾದವನ್ನೀಯುವ ದೀರ್ಘ ಬಾಲದವನಾದ ನೀನೇ

ಧನ್ಯನು ಧನ್ಯ ಪ್ಡಾಳಿಸಾ ಕಾಂತ ಖಂಡೇ ರಾಯನ! ಸತತವೂ ಭಂಡಾರದ ಲೇಪನದಿಂದ ಅರಿಸಿನ ವರ್ಣದ ವ್ಯೆಕಾಂತಿಯು ನಿನ್ನ ಭಕ್ತರ ದೇಹಗಳೂ ಕೂಡ ಹಳದೀ ವರ್ಣದವಾಗಿ ಪುನೀತಗೊಳ್ಳುವವು ಭಕ್ತರು ನಿನಗಾಗಿ ನೀರುಳ್ಳಿಯನ್ನು ಮಿಶ್ರಣ ಮಾಡಿದ ರೊಡಗವನ್ನು ಸಿದ್ಧಪಡಿಸಿ ಆ ನೇವೇದ್ಯ ಅರ್ಪಿಸಿ ಭಕ್ಷಿಸುವರು ನಿನ್ನ ಧನ್ಯತೆಯ ಮುಂದೆ ಇನ್ನಾವುದೂ ಇಲ್ಲ. ತುಳಜಾಪುರದ ಭವಾನಿ ದೇವಿಯೆ! ನೀನೇ ಧನ್ಯಳು ಅತ್ಯಂತ ಮಿಗಿಲಾದ ಗುಣ ಸಿರಿಯನ್ನು ಭೋಗಿಸುವ ಹಾಗು ಭಕ್ತರಿಗೆ ಆ ಐಶ್ವರ್ಯವನ್ನು ನೀಡುವ ದೇವೀ ನಿನ್ನಂಥ ಧನ್ಯಳು ನೀನೇ! ಪಂಡರಪುರದಲ್ಲಿ ಅಧಿಷ್ಠಿತ ಪಾಂಡುರಂಗನ! ನಿನ್ನ ಸಂಬಂಧವಾದ ಹರಿ ಕಥೆಯು ಅಖಂಡವಾಗಿ ಅಂತರಿಸಿದೆ ಎಲ್ಲೆಡೆಗೂ ವ್ಯಾಪಿಸಿ ಬಿಟ್ಟಿದೆ ಇದರಿಂದ ನಿನ್ನ ಧನ್ಯತೆಯನ್ನು ಅದೆಷ್ಟು ವರ್ಣಿಸಿದರೂ ಕಡಿಮೆಯೇ ಸರಿ ಕ್ಷೇತ್ರ ಪಾಲಕ ಬೈರವನೆ! ನೀನು ಜನರಲ್ಲಿ ಭಕ್ತಿ ಭಾವವನ್ನು ಹುಟ್ಟಿಸಿ ಅವರು ನಿನ್ನ ಸ್ಮರಣೆಯಲ್ಲಿ ನಿರತರನ್ನಾಗಿ ಮಾಡಿಕೊಂಡಿರುವಿ ಇದರಿಂದ ನಿನ್ನ ಧನ್ಯತೆಯು ಹೆಚ್ಚಿನದು ಶ್ರೀ ರಾಮ ಕೃಷ್ಣರ ಅವತಾರ ಮಹಿಮೆ ಅಪಾರವಾದದ್ದು ಅವರ ಉಪಾಸನೆಯ ಭಕ್ತಿಯಲ್ಲಿ ಅದೆಷ್ಟೋ ನರ–ನಾರಿಯರು ನಿಮಗ್ನರಾಗುವರು

ಈ ಎಲ್ಲ ದೇವತೆಗಳಿಗೆ ಮೂಲನೆನ್ನಿಸುವ ಅಂತರಾತ್ಮನು ಇಡಿಯ ಭೂಮಂಡದಲ್ಲಿಯ ಎಲ್ಲ ಭೋಗಗಳನ್ನನುಭವಿಸುವನು ಇದು ಅವನಿಗೇ ಸಾಧ್ಯವು ಅದೆಷ್ಟೋ ದೇವತೆಗಳು, ಅವುಗಳ ಶಕ್ತಿಗಳು ಇವೆಲ್ಲಕ್ಕ್ಕ ಮೂಲವಾದ ಅಂತರಾತ್ಮನು ಒಬ್ಬನೇ ಮಾತ್ರ ಅದಿಷ್ಠಿತನಾಗಿರುವನು ಅವನೇ ಸಕಲ ವೈಭವಗಳ ಭೋಕ್ತಾರನು ಈ ವಿಚಾರವನ್ನು ಕಾಣುವವರಲ್ಲಿ ಅದೆಷ್ಟೋ ದೇವ—ಮಾನವರು ದೀರ್ಘವಾದ ಆಲೋಚನೆ ಮಾಡುವದರಲ್ಲಿ ದಿನಗಳೆದರು ಎಲ್ಲರಿಗೂ ಉಂಟಾಗುವ ಕೀರ್ತಿ ಅಪ ಕೀರ್ತಿಗಳು, ಸ್ತುತಿ—ನಿಂದ್ಯೆಗಳು, ಭೋಗ ಪ್ರಾಪ್ತಿಗಳೂ ಇವೆಲ್ಲವೂ ಅಂತರಾತ್ಮನಿಗೆ ಅನುಬಂಧಿತವಾಗುವವು ಶರೀರದಲ್ಲಿದ್ದುಕೊಂಡು ಕ್ರಿಯಾ ಪ್ರವೃತ್ತಿಯನ್ನುಂಟು ಮಾಡುವವನೂ ಭೋಗಗಳನ್ನನುಭವಿಸುವವನೂ

ವೈರಾಗ್ಯ ಸುಖವನ್ನು ಸವಿಯುವವನೂ ಆತ್ಮನೊಬ್ಬನೇ ಆಗಿರುವನು. ಅಭಿಮಾನದಿಂದ ಮೋಹಗೊಂಡ ಪ್ರಾಣಿಯು ದೇಹವನ್ನು ನಂಬುವದೇ ಹೊರತು ತನ್ನ ಹೃದಯ ಸ್ಥಿತ ಅಂತರಾತ್ಮನನ್ನು ಅರಿಯದು ಹಾಗು ಆತನಿಂದ ತಪ್ಪಿಸಿಕೊಂಡಂತಾಗುವದು ಆದರೆ ಮುಖ್ಯಚಾಲಕ ಆ ಅಂತರಾತ್ಮನನ್ನು ಮರೆಯುವದು ಇದು ಆಶ್ಚರ್ಯವೇ ಸರಿ ಜಗತ್ತಿನಲ್ಲಿ ಈ ಅಂತರಾತ್ಮನ ಚಲನ ವಲನಗಳನ್ನೆಲ್ಲ ನಿರೀಕ್ಷಿಸುವವರಾರು? ಅಗಾಧ ವಾದ ಪುಣ್ಯ ಸಂಚಿತವಿದ್ದರೆ ಮಾತ್ರ ಆತನ ಅನುಸಂಧಾನವಾಗುವದು. ಈ ಆತ್ಮಾನುಸಂಧಾನವು ಎಲ್ಲ ಪಾಪಗಳನ್ನು ದೂರೀಕರಿಸುವವು ಆದ್ದರಿಂದಲೇ ಅಂತರ್ನಿಷ್ಠರಾದ ಜ್ಞಾನಿಗಳು ಇದನ್ನು ಮನನದಿಂದ ತಿಳಿದು ನೋಡುವರು ಎಲ್ಲ ಅಂತರ್ನಿಷ್ಠರೂ ಉದ್ಧೃತರಾಗುವರು, ಅಂತರ್‌ಭ್ರಷ್ಠರೆಲ್ಲರೂ ಹೊರಗಿನ ಲೋಕ ಆಚಾರಗಳಲ್ಲಿ ಬೆರತು ಅದ್ಯ ಗಳಲ್ಲಿಯೇ ಮುಳುಗಿ ಹೋಗುವರು ''

ಶ್ರೀ ರಾಮ ॥ ೨ ಸರ್ವಜ್ಞ ಸಂಗ ನಿರೂಪಣೆ ॥ ಗುರುಗಳು ಶಿಷ್ಯರಿಗೆ—

'' ಇದು ವರೆಗೆ ಅಜ್ಞಾನತ್ವವು ಒದಗಿದ್ದು ಒದಗಿಹೋಯಿತು ಇನ್ನು ಮುಂದಾದರೂ ಸರಿಯಾದ ಜ್ಞಾನದಿಂದ ಆಚರಿಸುವ ನಿಶ್ಚಯ ವನ್ನು ಮಾಡಿಕೊಳ್ಳಿರಿ ಬುದ್ಧಿವಂತರ ಸ್ನೇಹ ಹಿಡಿಯಿರಿ, ಜ್ಞಾನವಂತರ ಸೇವೆ ಮಾಡಿರಿ, ಕ್ರಮಕ್ರಮವಾಗಿ ಅಂಥವರಲ್ಲಿಯ ಸದ್ಬುದ್ಧಿಯನ್ನು ಆದರ್ಶವಾಗಿ ಗ್ರಹಿಸಿರಿ ಬಲ್ಲವರಿಂದ ಓದುಬರಹ ಕಲಿಯಬೇಕು ತನಗೆ ಅರಿಯದ್ದನ್ನು ಬಲ್ಲವರಿಂದಲೇ ಕೇಳಿ ತಿಳಿದುಕೊಳ್ಳಬೇಕು ಮಾಡಿದ ಉಪ ಕಾರ ಸ್ಮರಿಸುವಂಥ ಬಲ್ಲವರಿಗೇ ಉಪಕಾರ ಮಾಡಿರಿ ಅವರ ದೆಸೆಯಿಂದ ದೇಹ ಸವೆಯಿಸಿರಿ ಆ ಬುದ್ಧಿವಂತರ ವಿಚಾರಗಳೆಂತಹವೆಂಬದನ್ನು ಅಭ್ಯಾಸ ಮಾಡಿರಿ ಬುದ್ಧಿವಂತರ ಜೊತೆಯಿಂದ ಮಾಡಿಯುವದನ್ನು ಆನಂದದಿಂದ ವರ್ತಿಸುವದನ್ನು ಕಲಿತುಕೊಳ್ಳತಕ್ಕದ್ದು, ಅವರನ್ನು ಎಲ್ಲ ಸಂಗತಿಗಳಲ್ಲಿ ಅನುಸರಿಸಬೇಕು, ಔಷಧ—ಪಥ್ಯಗಳಲ್ಲಿ ಅವರು ಹೇಳಿ

ದಂತೆ ನಡೆದುಕೊಳ್ಳತಕ್ಕದ್ದು ಯಾವದೊಂದರ ಪರೀಕ್ಷೆ, ವ್ಯಾಯಾಮ, ಈಜು ಕಲಿಯುವದು, ಇವಲ್ಲವುಗಳಲ್ಲಿ ಆ ಆ ಬಗೆಗೆ ಗೊತ್ತಿದ್ದವರಿಂದಲೇ ಶಿಕ್ಷಣ ಪಡೆಯತಕ್ಕದ್ದು

ಬುದ್ಧಿವಂತರ ಮಾತನ್ನು ಅನುಲಕ್ಷಿಸಿ ನುಡಿಯಲು ಕಲಿಯಬೇಕು ಹಲವು ಬಗೆಯಿಂದ ಜ್ಞಾನವಂತರ ಧ್ಯಾನ ಮಾಡಬೇಕು ಜ್ಞಾನಿಗಳ ಕಥೆಗಳನ್ನು ಕಲಿಯಬೇಕು ಬಲ್ಲವರ ಯುಕ್ತಿ—ಬುದ್ಧಿಗಳನ್ನೂ ಅಂಥವರ ಸದುಕ್ತಿಗಳನ್ನು ಅಭ್ಯಸನ ಮಾಡಬೇಕು ಬುದ್ಧಿವಂತರ ಹಿಡಿತಗಳನ್ನೇ ಗೊತ್ತುಮಾಡಿಕೊಳ್ಳಬೇಕು ಅವರ ಕೃತಿಗಳನ್ನು ಕಲಿಯಬೇಕು, ಅವರ ಸ್ಥಿತಿಯಂತೇ ತನ್ನ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕು ಬಲ್ಲವರಲ್ಲಿಯ ಪ್ರಸಂಗಾವಧಾನವೂ, ಅವರ ಧೋರಣೆಯೂ, ಅವರಲ್ಲಿಯ ಸ್ಫೂರ್ತಿಯ ತರೆಗಳೂ, ಪ್ರತಿಯೊಬ್ಬನು ಅಭ್ಯಾಸ ಮಾಡಲಿಕ್ಕೆ ತಕ್ಕವುಗಳು ಆ ಬುದ್ಧಿವಂತರ ತರ್ಕ ಊಹೆಗಳು, ಉಲ್ಲೇಖಗಳು, ರಾಜಕಾರಣ ಧೂರ್ತತೆಗಳು, ತನ್ನಲ್ಲಿ ಮಾದರಿಯ ರೂಪದಿಂದ ನೆಲೆಗೊಳ್ಳುವಂತೆ ಯತ್ನಿಸಬೇಕು ಜ್ಞಾನಿಗಳ ಬೋಧೆ, ವರ ಕವಿಗಳ ಪದ - ಪದ್ಯ—ಕವಿತ್ವಗಳು, ವಚನಗಳು, ಸವಿ ಮಾತ ಗಳು, ಇವೆಲ್ಲವು ಅಂತರ್ಯಾಮದಲ್ಲಿ ಒಡಮೂಡುವಂತೆ ಪ್ರಯತ್ನಿಸಿ ಕಲಿಯತಕ್ಕದ್ದು, ವಿದ್ವಾಂಸರ ಪ್ರಬಂಧಗಳು, ನಿಪುಣತ್ವದ ವಚನ ಭೇದಗಳು ಜಾಣರ ವಾದಗಳು, ಇವೆಲ್ಲವು ತನ್ನ ಚಿತ್ತದಲ್ಲಿ ಸಂಗ್ರಹಿತವಾಗುವ ತೆರದಿಂದ ಲಕ್ಷಿಸಬೇಕು. ಶೋಧಕ ಬುದ್ಧಿ, ಚಾಣಾಕ್ಷತೆ, ತಾಳ್ಮೆ, ಔದಾರ್ಯ, ಸುಸ್ಪಷ್ಟ ಕಲ್ಪನೆಗಳು, ದೀರ್ಘ ಆಲೋಚನೆಗಳು, ಸದ್ವಿಚಾರಗಳು, ಸಮಯ ನಿಷ್ಠತೆ, ಅಧ್ಯಾತ್ಮ ವಿವೇಕ ಇವೆಲ್ಲವಲ್ಲದೆ ಇನ್ನೂ ಅಪರಿಮಿತ ಬೋಧ ಪರವಾಗುವ ಗುಣಗಳೆಲ್ಲ ಬಲ್ಲವರಿಂದಲೇ ತನ್ನಲ್ಲಿ ಅವರ ನಿರೂಪಣೆ ವರ್ತನೆಗಳನ್ನನುಸರಿಸಿ ಬಂದು ಸೇರುವಂತೆ ಹಲವು ಬಗೆಯಿಂದ ಪ್ರಯತ್ನಿಸತಕ್ಕದ್ದು ಇವಲ್ಲದೆ—

ಭಕ್ತಿ, ಯೋಗಜ್ಞಾನ, ಧ್ಯಾನ, ಅಲಿಪ್ತತೆ, ಸೂಕ್ಷ್ಮಾವಲೋಕನ, ವಿದೇಹ ಲಕ್ಷಣ, ಬ್ರಹ್ಮ ವಿವರಣೆ, ಇವೆಲ್ಲವನ್ನೂ ಬಲ್ಲ ಬಲ್ಲವರಿಂದ ಅರಿತು

ಜ್ಞಾನ ಸಂಗ್ರಹ ಮಾಡಿಮಾಡಿಕೊಳ್ಳತಕ್ಕದ್ದು ಇವೆಲ್ಲವು ಒಬ್ಬ ಅಂತ ರಾತ್ಮನೇ ಗೊತ್ತುಮಾಡಿಕೊಳ್ಳುವನೆಂದನಂತರ ಆ ಅಂತರಾತ್ಮನ ಮಹಿಮೆ ಅವರ್ಣನೀಯವು. ಆ ಅಂತರಾತ್ಮನ ವಿದ್ಯೆ-ಕಲೆಗಳ ಸೀಮೆ ಅಮರ್ಯಾದಿತವಾಗಿರುವವು.

ಪರಮೇಶ್ವರನ ಗುಣಾನುವಾದದಿಂದ ಆನಂದೋದ್ಭವವಾಗಬೇಕೆಂಬ ಉದ್ದೇಶದಿಂದ ನಿರಂತರ ಸಂವಾದ ನಡೆಯಬೇಕು ಆ ದೇವನು ನಿರ್ಮಾಣ ಮಾಡಿದ್ದೆಲ್ಲವೂ ದೃಷ್ಟಿಗೆ ತೋರದೆ ಹೋಗುವದಿಲ್ಲ ಅವೆಲ್ಲವನ್ನು ಸಂಪೂರ್ಣ ಲಕ್ಷಿಸಿಕೊಳ್ಳತಕ್ಕದ್ದು ಇದೇ ವಿವೇಕದ ಲಕ್ಷಣವು ಸೃಷ್ಟಿಯ ಮೇಲೆ ಹುಟ್ಟಿದವುಗಳೆಲ್ಲ ಆ ನಿರ್ಮಾಪಕ ದೇವನಿಂದಲೇ ಎಂದು ತಿಳಿಯಬೇಕು ಮತ್ತು ಅವುಗಳಲ್ಲಿಯ ಭೇದ-ಭಿನ್ನತೆಗಳೆಲ್ಲ ಆ ಜಗದೀಶ್ವರನ ಕೃತಿ ಸಂಬಂಧವಾದವುಗಳು ಆ ನಿರ್ಮಾಪಕನು ದೃಶ್ಯಗಳನ್ನೆಲ್ಲ ರೂಪಿಸಿದ್ದರೂ ಆತನು ನಮ್ಮ ಕಣ್ಣಿಗೆ ತೋರದೆ ಹೋದರೂ ವಿವೇಕ ಬಲದಿಂದ ಅನುಮಾನ ತಂದೊಡ್ಡಿ ಜ್ಞಾನಮಾಡಿಕೊಳ್ಳಬೇಕು ಆ ದೇವನ ಬಗೆಗೆ ನಮ್ಮಲ್ಲಿ ಅಖಂಡ ಧ್ಯಾನವುಂಟಾದರೆ ದಯೆಯಿಂದ ಆತನು ನಮ್ಮ ಯೋಗ ಕ್ಷೇಮವನ್ನು ಸಾಗಿಸುವನು ಆದ್ದರಿಂದ ಸತತವೂ ಆತನ ಅಂಶಾನ್ವಿತ ಸಂಭಾಷಣೆ ಮಾಡುತ್ತಿರಬೇಕು ಅಂಥವನೇ ಆತನ ಭಕ್ತನು. ಧ್ಯಾನವಿಲ್ಲದೆ ಇರುವವನೇ ಅಭಕ್ತನು ಧ್ಯಾನ ಹಿಡಿದವನೇ ಭಕ್ತನು ಅಂಥ ಭಕ್ತರನ್ನು ಆ ದೇವನು ಮುಕ್ತರನ್ನಾಗಿ ಮಾಡುವನು

ಆವದೊಂದು ಉಪಾಸನೆಯ ಕೊನೆಯ ಪರಿಣಾಮವು ಉಪಾಸಕನಿಗೆ ಆ ದೇವನ ಅಖಂಡ ದರ್ಶನವಾಗುವದು ಅನುಭವಿಗಳೇ ಇದನ್ನು ತಿಳಿಯುವರು. ಮತ್ತು ಆ ಬಗೆಯ ಜ್ಞಾನ ಸಂಗತಿಗಳು ಪ್ರತ್ಯಕ್ಷಾನುಭವದಾಗುವದು ”

ಶ್ರೀ ರಾಮ ‖ ೩ ನಿಸ್ಪೃಹ ಸಿಕವಣ ‖ ಗುರುಗಳು ಶಿಷ್ಯರಿಗೆ—

ಈ ಮಾನವ ಶರೀರವು ದುರ್ಲಭವು ಹಾಗು ಜೀವಿತ ಕಾಲವು ಕ್ಷಣಿಕವು ಆದ್ದರಿಂದ ಇವುಗಳ ನಾಶವನ್ನು ಮಾಡಿಕೊಳ್ಳಬಾರದು ಈ

ಬಗೆಗೆ ವಿವೇಕವಿರಬೇಕು ಅದಿಲ್ಲದೆ ಹೋದರೆ ದೈನ್ಯತೆ ಹುಟ್ಟುವದು ಆಲಸ್ಯತನದಿಂದಲೂ ನೀಚಜನರ ಸ್ನೇಹದಿಂದಲೂ ಆತ್ಮನಾಶವುಂಟು ಪ್ರಾಯದಲ್ಲಿ ಮೂರ್ಖತನವೂ ದುಷ್ಪ್ರವೃತ್ತಿಯೂ ಬಹು ಬೇಗ ಅಂಟಿಕೊಳ್ಳುವವು ಅದರಿಂದ ಮಾನವನು ಎಲ್ಲರಿಂದಲೂ ಹೀನನೆನ್ನಿಸುವನು. ಒಳ್ಳೆಯ ಗುಣಗಳಿಂದ ವಿರಹಿತನಾದವನ ಬಯಕೆಗಳು ಕೈಗೂಡಲಾರವು ದಾರಿದ್ರ್ಯವು ಅವನನ್ನು ಬಿಡಲಾರದು, ಒಳ್ಳೆ ಜನರಿಂದ ಅವನು ಹೊರತಾಗುವನು ತನ್ನ ಹಿತಾಹಿತಗಳು ತನಗೆ ತಿಳಿಯದಂತಾಗುವವು, ಅಭ್ಯಾಸವನ್ನು ಅವನ ಮನಸ್ಸು ದುರ್ಲಕ್ಷಿಸುವದು ಓದು ಬರಹಗಳ ಪರಿವೆ ಉಳಿಯುವದಿಲ್ಲ. ಅವನ ನೀಚ ವೃತ್ತಿಯ ಮೂಲಕ ಪರರ ಹಿತೋಪದೇಶಗಳು ಅವನಲ್ಲಿ ನಾಟುವದಿಲ್ಲ ಅವನಲ್ಲಿ ನಿಯಮಿತತನದ ವೃತ್ತಿಯು ಉಳಿಯುವದಿಲ್ಲ 'ತನಗೆ ತಿಳಿಯುವದಿಲ್ಲ ಅನ್ಯರು ಹೇಳಿದ್ದನ್ನು ಕೇಳುವದಿಲ್ಲ' ಈ ಪ್ರಕಾರದ ಸ್ಥಿತಿಯು ಅವನದಾಗುವದು ತನ್ನಲ್ಲಿ ಮೂರ್ಖತನವನ್ನಿರಿಸಿಕೊಂಡು ಸಜ್ಜನರಿಗೆ ದೋಷ ನೀಡುವನು, ಒಳಗೊಂದು ಹೊರಗೊಂದು ವಿವೇಕವನ್ನಿರಿಸಿಕೊಂಡು ನಡೆವವನಿಗೆ ಪರಲೋಕ ಸಾರ್ಥಕತೆಯುಂಟಾಗಲಾರದು ತನ್ನ ಸಂಸಾರ ನಾಶವಾಗಿ ಹೋದ ಬಳಿಕ ಪಶ್ಚಾತ್ತಾಪ ಪಡುವವನು ವಿವೇಕವನ್ನೇ ಆಶ್ರಯಿಸಬೇಕು ಚಿತ್ತವನ್ನು ಏಕಾಗ್ರವಾಗಿರಿಸಿಕೊಂಡು ಸಾಧ್ಯಕ್ಕಾಗಿ ಯತ್ನಿಸಬೇಕು ಆಲಸ್ಯತನಕ್ಕೆ ಅವಸರವನ್ನು ಕೊಡದೆ ಪ್ರಯತ್ನಶೀಲನಾಗಿರಬೇಕು ದುರ್ಗುಣಗಳನ್ನೆಲ್ಲ ಬಿಟ್ಟು ಒಳ್ಳೆ ಗುಣಗಳ ಹೊಂದಿಕೆಗಾಗಿ ಅಭ್ಯಸಿಸಬೇಕು. ವಾಚನಲೋಲುಪತೆಯಿರಬೇಕು ಅರ್ಥವನ್ನರಿಯದ ಓದು ಇರಕೂಡದು ಪದ-ಪದ್ಯಗಳಿಂದಲೂ ಹಲವು ಸಾಹಿತ್ಯ ಬೋಧೆಯಿಂದಲೂ ಉಂಟಾಗುವ ಜ್ಞಾನವು ಆನಂದದಾಯಕವಾಗುವದೆಂಬದನ್ನರಿತುಕೊಂಡು ಅಭ್ಯಾಸ ಮಾಡಬೇಕು ಹೇಯವಾಗುವಂಥ ನಡೆ-ನುಡಿಗಳು ಇರಕೂಡದು, ಅನ್ಯರ ಮನೋಗತವನ್ನರಿತು ಅವರೊಡನೆ ಆದರದ ವರ್ತನವನ್ನಿಡಬೇಕು ಗೀತ-ಗಾಯನಗಳು ಸಮಯಾನುವರ್ತಿಯಾಗಿ ನಡೆಯಬೇಕು ಭಕ್ತಿಯನ್ನು ಉದ್ದೀಪನಗೊಳ್ಳಿಸುವ ಹಾಡು-ಗೀತೆಗಳಿರಬೇಕು. ಅವಕ್ಕೆ ಸರಿಯಾದ ರಾಗ ತಾಳಗಳ ಜ್ಞಾನವಿರಬೇಕು ಶ್ರವಣಗಳಿಂದ ಕಥಾ ಪ್ರವಚನ ಪ್ರಸಂಗಗಳಲ್ಲಿಯ ಅರ್ಥಾಂತರ

ವನ್ನು ಗ್ರಹಿಸಿ ಮನನ ಮಾಡಿಕೊಳ್ಳಬೇಕು ಓದು ಮೇಲ್ತರದ್ದಾಗಿರಬೇಕು ಪುನಃ ಪುನಃ ಓದಿ ವಿಚಾರ ಮಾಡಬೇಕು ಅನ್ಯರು ಹೇಳಿದ ಹಾಗು ತಾನು ಚಿತ್ತಗೊಟ್ಟು ಶ್ರವಣ ಮಾಡಿದ ಸಂಗತಿ ಕಥೆಗಳ ಸ್ಮರಣವು ಸತತವೂ ಸ್ಥಿರವಿರಬೇಕು ಅಭ್ಯಾಸಕ್ಕೆ ಅಖಂಡವಾದ ಏಕಾಂತವು ಅತ್ಯವಶ್ಯವು ಕಾರಣ ಇದನ್ನಾಶ್ರಯಿಸಿ ಗ್ರಂಥವಾಚನ-ಪರಿಶೀಲನಗಳನ್ನು ನಡೆಯಿಸ ಬೇಕು. ಇಂತದರಿಂದ ಹೊರಟ ಅನುಭವವನ್ನು ಸಾರ್ಥಕವಾಗಿ ಮನಸಿ ನಲ್ಲಿ ಸಂಗ್ರಹಿಸಬೇಕು ”

ಶ್ರೀ ರಾಮ ॥ ೪ ದೇಹ ದುರ್ಲಭ ನಿರೂಪಣೆ ॥ ಗುರುಗಳು ಶಿಷ್ಯ ರಿಗೆ—

“ಜೀವನ ಅಧಿಷ್ಠತೆಯಿಂದಲೇ ದೇಹಕ್ಕೆ ಪ್ರತಿಷ್ಠತೆಯುಂಟಾಗಿದೆ ಪ್ರಪಂಚ ಪರಮಾರ್ಥಗಳಿಗೆ ಸಂಬಂಧಿತವಾದ ವ್ಯಾಪಾರಗಳೆಲ್ಲವೂ ಆ ದೇಹದ ಉದ್ದಿಶ್ಯವಾಗಿಯೇ ಸಾಗಿವೆಯೆಂದು ಹೇಳಬಹುದು ಶ್ರೀ ಗಣೇಶ ಶಾರದೆಯರಾದಿಯಾಗಿ ಗುರುಗಳು, ಸಂತ ಸಜ್ಜನರು ಶ್ರೋತೃಗಳು ಇವರೆ ಲ್ಲರು ಮಾನವನಿಂದ ನಮಸ್ಕರಿಸಿಕೊಳ್ಳಲ್ಪಡುವರು ಇದು ಕೇವಲ ಮಾನ ವನ ಆ ದೇಹದ ಉದ್ದಿಶ್ಯವಾಗಿಯೇ ಇರುವದು ಆತನು ತನ್ನ ಶರೀರ ಮೂಲಕವಾಗಿಯೇ ಬಗಬಗೆಯ ಕವಿತ್ವಗಳನ್ನು ರಚಿಸುವನು, ಓದುವನು, ಅರ್ಥಾಂತರ ಗ್ರಹಿಸಿ ಮನನ ಮಾಡಿಕೊಳ್ಳುವನು ಆ ದೇಹಕ್ಕಾಗಿಯೇ ಆತನ ಅಧ್ಯಯನ, ಅಭ್ಯಾಸ, ವಿದ್ಯೆ, ಗ್ರಂಥಲೇಖನ, ಒರಹಜ್ಞಾನ, ಪದಾರ್ಥಜ್ಞಾನ ಇವೆಲ್ಲವು ಸಾಗುವವು. ಮಹಾಜ್ಞಾನಿಗಳು, ಸಿದ್ಧ-ಸಾಧು ಗಳು, ಋಷಿ-ಮುನಿಗಳು ಇವರೆಲ್ಲರೂ ತಾವು ವಹಿಸಿದ ದೇಹ ಮೂಲಕ ವಾಗಿಯೇ ತೀರ್ಥಸಂಚಾರ ಮುಂತಾದವನ್ನು ಅನುಸರಿಸುವರು. ಶ್ರವಣ-ಮನನಾದಿಗಳೂ ದೇಹವಿರುವದರಿಂದಲೇ ಸಾಗುವವು ಆ ದೇಹದುದ್ದಿಶ್ಯ ವಾಗಿಯೇ ಪರಮಾತ್ಮನು ಜೀವಸ್ವರೂಪದಿಂದ ದೇಹಾಂತರ್ಗತವಾಸವಾ ಗಿರುವನು ಉಪಾಸನಾದಿ ಮಾರ್ಗಗಳು ದೇಹಕ್ಕಾಗಿಯೇ ಆಚರಿಸಲ್ಪ ಡುವವು ಯೋಗಿಗಳು, ವೈರಾಗ್ಯನಿರತರು, ತಪಸ್ವಿಗಳು ಇವರೆಲ್ಲರು ಹಲವು ಬಗೆಯಿಂದ ದೇಹಗಳನ್ನು ಆಯಾಸಗೊಳಿಸಿಯೇ ಆತ್ಮನನ್ನು ಪ್ರಕ ಟಿಸಿಕೊಳ್ಳುವರು ಐಹಿಕ-ಪಾರಲೌಕಿಕಗಳ ಸಾರ್ಥಕತೆಯು ದೇಹವಿದ್ದು

ದರಿಂದಲೇ ಸಾಧ್ಯ ಸಾಗು ಸಾರ್ಥಕಗೊಳ್ಳುವವು ಜಪಾನುಷ್ಠಾನ, ಪುರ ಶ್ಚರಣೆಗಳು, ಗೋರಾಂಜನ, ಧೂಮ್ರಪಾನಗಳು, ಶೀತೋಷ್ಣ-ಪಂಚಾಗ್ನಿ ಸಾಧನ ಕ್ರಿಯೆಗಳು, ಪುಣ್ಯಕ್ರಿಯೆಗಳ ಆಚರಣೆಗಳು ಪಾವಿತ್ರ್ಯಕ್ಕಾಗಿ ಹಂಬಲಿಸುವ ವಿಧಿನೇಮಗಳು ಮುಂತಾದವೆಲ್ಲವು ಈ ಮಾನವ ದೇಹದ ನಿಮಿತ್ತವಾಗಿಯೇ ಸಂಘಟಿಸುವವು ಅವತಾರಿಗಳು ದೇಹಕ್ಕಾಗಿಯೇ ಅವ ತರಿಸಿದರು ವೇಷಧಾರಿಗಳು ಪಾಖಂಡಿಗಳು, ವಿಷಯ ಭೋಗಿಗಳು, ತ್ಯಾಗಿಗಳು, ರೋಗಿಗಳು ಇವರೆಲ್ಲರ ಕ್ರಿಯೆಗಳು ದೇಹವನ್ನಿರಿಸಿಕೊಂಡೇ ಸಾಗುವವು ದೇಹವಿದ್ದುದರಿಂದಲೇ ನವವಿಧ ಭಕ್ತಿಗಳು ದೇಹಕ್ಕಾಗಿಯೇ ಚತುರ್ವಿಧ ಮುಕ್ತಿಗಳು, ಅನೇಕ ಯುಕ್ತಿ ಕುಯುಕ್ತಿಗಳು, ಮತ ಧರ್ಮ ಗಳು, ದಾನ ಮಾನಗಳು, ಕ್ರಿಯಾ ಕರ್ಮಗಳು ಇವೆಲ್ಲ ದೇಹದಿಂದಲೇ ಉಂಟಾಗುವವು ಸಂಚಿತಗಳು, ಸ್ವಾರ್ಥವು, ಇಷ್ಟಾರ್ಥವು ಇವೆಲ್ಲ ದೇಹ ವನ್ನು ಅನುಬಂಧಿಸಿ ಉಂಟಾದ ಹೇಳಿಕೆಗಳು ಜನರಿಂದ ಹೇಳಲ್ಪಡುವವು ಅನೇಕ ಕಲೆಗಳು ದೇಹವಿಲ್ಲದಿಲ್ಲ ಭಕ್ತಿ ಮಾರ್ಗದ ಪ್ರೀತಿಯು ಸನ್ಮಾರ್ಗ ಸಾಧನಗಳು ದೇಹದಿಂದಲೇ ರೂಪಿಸುವವು ಆತ್ಮ ನಿವೇದನೆಯಿಂದ ಮೋಕ್ಷ ಪ್ರಾಪ್ತಿಯು ದೇಹವಿದ್ದರೇ ಮಾತ್ರ ಸಾಧ್ಯವು,ಎಲ್ಲದರಲ್ಲಿ ದೇಹವೇ ಶ್ರೇಷ್ಠವು ಯಾಕಂದರೆ ಅದು ಪುರುಷೋತ್ತಮನ ವಾಸ್ತವ್ಯ ಸ್ಥಾನವು ದೇಹಾಂತ ಸ್ಥಿತಿ ಆತ್ಮಾರಾಮನಿಂದಲೇ ಎಲ್ಲ ಕ್ರಿಯೆಗಳೊದಗುವವು ಮಾನ ವನ ಕೀರ್ತಿ ಅಪಕೀರ್ತಿಗಳು, ಅನೇಕ ದೇವರ ಅವತಾರಗಳು, ಭ್ರಮ ವಿಭ್ರಮೆ, ಸಂಭ್ರಮೆಗಳು, ಪರಮಪದ ಭೋಗ್ಯತೆಯು, ಇವೆಲ್ಲ ದೇಹ ಕ್ಕಾಗಿಯೇ ಅಂದರೆ ದೇಹದ ಅಸ್ತಿತ್ವವಿದ್ದಾಗಲೇ ಜರಗುವವು ದೇಹವು ಪರಲೋಕ ಸಾಧನೆಗೆ ಅವಶ್ಯವು ಅದು ಹಲವು ಗುಣಗಳ ನಿಲಯವು ಹೇಮ ರತ್ನಾದಿಗಳ ಬೆಲೆಯು ಮಾನವ ದೇಹದಿಂದಲೇ ಅಧಿಕನೆನ್ನಿಸವವು ಗಾಯನಕಲೆ ಸಂಗೀತ ವಿದ್ಯೆ, ಇವೆಲ್ಲ ನಾನಾ ವಿದ್ಯೆಗಳ ಮಹತ್ವವು ದೇಹವಿಲ್ಲದಲ್ಲಿಲ್ಲ ಈ ಶರೀರವು ಬ್ರಹ್ಮಾಂಡವೆಂಬ ಮರದ ಹಣ್ಣಿನಂತಿರು ವದು ಇದು ದುರ್ಲಭವಾದದ್ದು ಆದರೂ ಈ ದೇಹಕ್ಕೆ ಮಾತ್ರ ಸುಲಭ ಸಾಧ್ಯವು ಜಗತ್ತಿನಲ್ಲಿ ಸಣ್ಣ—ದೊಡ್ಡವರ ವ್ಯವಹಾರಗಳೆಲ್ಲ ದೇಹ ಪ್ರಾಮುಖ್ಯತೆಯಿಂದಲೇ ಸಾಗುವವು ಇದು ವರೆಗೆ ಅದೆಷ್ಟೋ ಜನರು ದೇಹ

ಧಾರಿಗಳಾಗಿ ಬಂದರು, ಅದೆಷ್ಟೋ ಕ್ರಿಯಾಕರ್ಮಗಳನ್ನೆಸಗಿ ಹೋದರು ಎಷ್ಟೋ ದೇಹಧಾರಿಗಳು ಹರಿಭಜನೆಗಳಿಂದ ಪಾವನರಾದರು ಮೂಲ ಮಾಯೆಯು ಕೇವಲ ಸಂಕಲ್ಪರೂಪವುಳ್ಳದ್ದು ಆ ಮಾಯೆಯ ಹಲವು ಸಂಕಲ್ಪಗಳು ದೇಹಫಲಗಳನ್ನೇ ಗ್ರಹಿಸಿಕೊಂಡು ಉದಯವಾದವು ಹರಿಸಂಕಲ್ಪವು ಮೂಲಮಾಯೆಯಲ್ಲಿರುವದು ಅದನ್ನೇ ಹಲವುದೇಹಾಂತರಗಳಲ್ಲಿಶೋಧಿಸಲು ಅದು ಫಲರೂಪದಿಂದ ಇರುವದುಕಂಡು ಬರುವದು ಬಳ್ಳಿಯುಮೂಲವು ಬೀಜವಾಗಿರುವದು ಹಣ್ಣಿನಲ್ಲಿಯೂ ಬೀಜವಿರವದು ಆ ಬೀಜದಲ್ಲಿ ಉದಕ ರೂಪದಿಂದ ಬಳ್ಳಿಯಿರುವದು ಮೂಲದಿಂದ ಹಣ್ಣು, ಹಣ್ಣಿಗಾಗಿ ಮೂಲವು ಇದೇ ಪ್ರಕಾರ ಭೂಮಂಡಲವು ಸಾಗುತ್ತ ಬಂದಿದೆ ಒಟ್ಟಿನ ಮೇಲೆ ಎಲ್ಲ ಕ್ರಿಯೆಗಳು ದೇಹವಿಲ್ಲದೆ ಒದಗಲಾರವು ಆದ್ದರಿಂದ ದೇಹವನ್ನು ಸಾರ್ಥಕಗೊಳಿಸುವದು ಶ್ರೇಯಸ್ಕರವು ಆತ್ಮನಿಗಾಗಿ ದೇಹವುಂಟಾಯಿತು, ದೇಹಕ್ಕಾಗಿ ಆತ್ಮನು ಸಿಕ್ಕು ಬಿದ್ದನು ಇವರಡರಿಂದ ಸಂಸಾರ ಕ್ರಿಯೆಯು ನಾಗಹತ್ತುವದು ನಾವು ಯಾರೂ ಅರಿಯದೆ ಮಾಡಿದ ಕರ್ಮವು ಆತ್ಮನಿಗೆ ಗೊತ್ತಾಗದ ಇರುವದಿಲ್ಲ ಎಲ್ಲ ಕ್ರಿಯೆಗಳನ್ನು ಉಂಟು ಮಾಡಿಸುವ ಕರ್ತೃತ್ವವೇ ಆ ಆತ್ಮನದಾಗಿರುವದು ಆ ಆತ್ಮನು ನಮ್ಮ ದೇಹದಲ್ಲಿಯೇ ಇರುವನು ಆದ್ದರಿಂದ ದೇಹವನ್ನು ಪೂಜಿಸಿದರೆ ಆ ಆತ್ಮನನ್ನೇ ಪೂಜಿಸಿದಂತಾಗುವದು ಅದರಿಂದ ಅತನು ಸಂತುಷ್ಟತೆ ಹೊಂದುವನು ಶರೀರಕ್ಕೆ ತೊಂದರೆ ಕೊಡಲು ಆತ್ಮನು ಕ್ಷೋಭೆಗೊಳ್ಳುವನೆಂಬುದು ಸ್ಪಷ್ಟವು ಹರಿಪೂಜೆಯು ದೇಹವಿಲ್ಲದೆ ಸಾರ್ಥಕವಾಗಲಾರದು ಆದ್ದರಿಂದಲೇ ದೇಹಧಾರಿಗಳಾದ ಜನರಲ್ಲಿ ಜನಾರ್ದನನಿರುವನೆಂಬ ಭಾವನೆಯಿಂದ ಪ್ರಾಣಿಗಳನ್ನು ಸಂತುಷ್ಟಗೊಳಿಸಬೇಕು ಈ ವಿಚಾರವು ಪುಣ್ಯಾತ್ಮರಿಂದ ಪೂರ್ವದಲು ಮಾಡಿ ಪ್ರಾಣಿ ಮಾತ್ರರಿಗೆಲ್ಲ ಅವಗತವಿರುವದು ಹಲವರಿಗೆ ಈ ವಿಚಾರವು ಹೆಚ್ಚೆಚ್ಚು ಫಲದ್ರೂಪವಾಗಿ ಅಂಥವರಿಂದ ಧರ್ಮಸ್ಥಾಪನೆಯಂಥ ಮಹತ್ಕಾರ್ಯಗಳು ಒದಗುವವು ಅಂಥವರೇ ಪೂಜ್ಯರು ಆ ಪೂಜಾಧಿಕಾರವು ಸಂತರಿಗೇ ಇರುವದು ಇಂಥ ಜನತೆಯೇ ಜನಾರ್ದನ ಸ್ವರೂಪವೆಂದು ನಿಶ್ಚಯಿಸಿ ಆ ಎಲ್ಲರನ್ನು ಸಂತುಷ್ಟ ಪಡಿಸುತ್ತಿರಬೇಕು. ಕಂಡ ಕಂಡವರನ್ನೆಲ್ಲ ಜನಾರ್ದನ ಸ್ವರೂಪವೆಂದರಿತು ಪೂಜಿಸುತ್ತ ಹೋಗಲು ಮೂರ್ಖ

ತೆಯು ನಮ್ಮ ಪಾಲಿಗೆ ಬರುವದು ತಿಳಿಯುವಂತೆ ಹೇಳಬೇಕಾದರೆ ಶಕ್ತಿಯನ್ನು ಗಂಧ ಪರಿಮಳ ದ್ರವ್ಯಗಳಿಂದ ಪೂಜಿಸಿದರೆ ಅದಕ್ಕೆ ಏನಾದರೂ ತಿಳಿಯುವದೇ? ಅಂತೆಯೇ ಮೂರ್ಖರ ಪೂಜೆ ತ್ಯಾಜ್ಯವು ಪೂಜ್ಯ ಪುರುಷರನ್ನು ಪೂಜಿಸಬೇಕು ಉಳಿದೆಲ್ಲ ಜೀವಿಗಳನ್ನು ಸಂತುಷ್ಟತೆಗೊಳಿಸಬೇಕು. ಯಾರ ಮನವನ್ನೂ ನೋಯಿಸಬಾರದು ಈ ಮಾರ್ಗವನ್ನರಿತು ವರ್ತಿಸತಕ್ಕದ್ದು ಸರ್ವಾಂತರ್ಯಾಮಿ ದೇವನ ಕ್ಷೋಭೆಗೆ ನಾವು ಗುರಿಯಾದರೆ ನಾವು ಇರುವದೆಲ್ಲಿ? ಜನತೆಯ ಹೊರತು ಜನಕ್ಕೆ ಆಶ್ರಯವಿಲ್ಲ ಪರಮೇಶ್ವರನಲ್ಲಿ ಅನಂತ ಗುಣಗಳುಂಟು ಅನೆಲ್ಲವನ್ನು ಹೇಳುವದು ಮಾನವನಿಗೆ ಎಂದೂ ಸಾಧ್ಯವಿಲ್ಲ ಆದರೂ ಅಧ್ಯಾತ್ಮ ಗ್ರಂಥಗಳ ಶ್ರವಣದಿಂದ ಬೋಧೆಯಾಗಿ ಎಲ್ಲವೂ ಜ್ಞಾನವಾಗುವದು"

ಶ್ರೀ ರಾಮ॥ ೫ ಶರಂಟಪರೀಕ್ಷಾ ನಿರೂಪಣೆ ಗುರುಗಳು ಶಿಷ್ಯರಿಗೆ—

"ಹಲವಾರು-ಉದ್ಗ್ರಂಥಗಳನ್ನೋದಿದರೂ ಸರಿಯಾದ ಅರ್ಥಮಾಡಿಕೊಳ್ಳದೆ ವಿದ್ವಾಂಸನ ಸ್ಥಿತಿಯು ಧಾನ್ಯವನ್ನು ಅಳಿಯುವ ಮಾಪಿನಂತೆ ಇರುವದು ನೂರಾರು ಹೇರು ಕಾಳುಗಳನ್ನು ಆ ಮಾಪಿನಿಂದ ಅಳತೆ ಮಾಡಿದರೂ ಅವರಲ್ಲಿಯ ನಾಲ್ಕಾರು ಕಾಳುಗಳನ್ನು ಸಹ ಆ ಮಾಪು ತಿನ್ನಲಾರದು ಅಂತೆಯೇ ಆ ಓದುಗನ ಸ್ಥಿತಿ ಇರುವದು ಬಾಯಿಯಿಂದ ಗಿಳಿಯಂತೆ ಬೇಕಾದಷ್ಟು ಶ್ಲೋಕ-ಪದ, ಗದ್ಯ-ಪದ್ಯಗಳನ್ನು ತಡೆಯಿಲ್ಲದೇ ಉಚ್ಚರಿಸುವನು ಪ್ರಶ್ನೆಮಾಡಲು ಉತ್ತರಮಾತ್ರ ಕೊಡಲಾರನು. ಅವನಿಗೆ ಏನಾದರೂ ಸ್ವಲ್ಪ ಅನುಭವವುಂಟಾಗಿದ್ದರೆ ಅದು ಅನುಮಾನದಲ್ಲಿಯೇ ಬಿದ್ದುಹೋಗುವದು ಪುರವಲ್ಲಿಯ ಶಬ್ದಗಳೆಂಬ ರತ್ನಗಳನ್ನು ಪರೀಕ್ಷಿಸಬೇಕು ಅವುಗಳ ಮತಿತಾರ್ಥಗಳನ್ನು ಗ್ರಹಿಸಿ ಸಂಗ್ರಹಿಸಬೇಕು ಕೇವಲ ಹೆಸರು-ರೂಪಗಳಿಂದ ಅವುಗಳಿಗೆ ಮಹತ್ವವಿಲ್ಲ ಅವನ್ನು ಬಿಟ್ಟು ಅನುಭವಕ್ಕೆ ಉಪಯೋಗಬೀಳುವಂಥವುಗಳನ್ನೇ ಸ್ವೀಕರಿಸತಕ್ಕದ್ದು ಯೋಗ್ಯಾಯೋಗ್ಯತೆಗಳನ್ನು ಅರಿತುಕೊಳ್ಳಬೇಕು ಸಾರ-ಅಸಾರಗಳೆರಡನ್ನೂ ಒಂದೇ ಎಂದು ಎಣಿಸುವದು ಮೂರ್ಖತನವು ಬರೆದದ್ದನ್ನು ಓದಿ ಅರ್ಥಮರ್ಮವನ್ನು ತಿಳಿಯಬೇಕು ಇದನ್ನು ತಿಳಿಯದೇ ಓದುವದರಲ್ಲಿ ಅರ್ಥವಿಲ್ಲ ಸರಿಯಾಗಿ ಬೋಧೆಯಾಗದ ವಾಚನದಿಂದ ಮನಸು ಅಸಂತೋಷಗೊಳ್ಳುವದು

ವಕ್ತಾರನಲ್ಲಿ ತಾಳ್ಮೆಯಿರಬೇಕು ಆವನ ವಕ್ತೃತ್ವ ನಡೆದಾಗ ಯಾವನೊಬ್ಬ ನಿಂದ ಏನಾದರೊಂದು ಪ್ರಶ್ನೆ ಕೇಳಲ್ಪಟ್ಟರೆ ಆ ಪೃಚ್ಛಕನ ಮೇಲೆ ಒಮ್ಮೆಲೆ ಹರಿಹಾಯಕೂಡದು ಬಹಳ ಶಬ್ದಗಳನ್ನು ಕಂಠಪಾಠಮಾಡಿದರೂ ಅವುಗಳ ಸರಿಯಾದ ಅನುಭವ ವಿಲ್ಲದಿದ್ದರೆ ಉಪಯೋಗವಿಲ್ಲ ಈ ವೃತ್ತಿಯು ಸಭೆ ಗೂಡಿದ ಸಮಯದಲ್ಲಿ ಮುಖಭಂಗವನ್ನು ತಂದುಕೊಳ್ಳುವದು ಬೀಸುವ ಕಲ್ಲಿನ ಬಾಯಿತುಂಬ ಜೋಳವನ್ನು ಒಮ್ಮೆಲೇ ಹಾಕಿ ಗರಗರತಿರುವಲು ನುಚ್ಚಲ್ಲದೆ ಸಣ್ಣಹಿಟ್ಟು ಬೀಳಲಾರದು ಬಾಯಿಯಲ್ಲಿ ಹಾಕಿಕೊಂಡ ತುತ್ತನ್ನು ದವಡೆಯಿಂದ ಸುರಿಸದೆ ಮತ್ತೂ ಮತ್ತೂ ತುತ್ತುಗಳನ್ನು ಹಾಕಿಕೊಳ್ಳಹತ್ತಿದರೆ ಆದು ಸರಿಯಾದ ಊಟವೆನ್ನಿಸಲಾರದು ನಿಜವಾದ ಸಭಾಪತಿಯು ತನ್ನ ಆಧ್ಯಕ್ಷತೆಯಡಿಗೆ ನಡೆದ ಸಭೆಯು ಒಳ್ಳೇ ಮನಹರ ವಾಗಿ ಜರಗುವಕಡೆಗೇ ದೃಷ್ಟಿಯನ್ನಿಟ್ಟಿರುವನು ಮತ್ತು ಸಭಿಕರ ಅಂತಃ ಕರಣಗಳನ್ನು ತನ್ನ ಚಾತುರ್ಯದಿಂದ ತನ್ನಲ್ಲಿಯೇ ಏಕೀಕರಿಸಿಕೊಳ್ಳುವನು ಇದೇ ಬಗೆಯ ಅಧ್ಯಾತ್ಮ ವಿಷಯವನ್ನು ಬೋಧಿಸುವ ವಕ್ತಾರನಿಗೆ ಅನ್ವಯಿಸುವದು ಆ ಶಾಸ್ತ್ರದಲ್ಲಿ ಮೇಲಿಂದಮೇಲೆ ಪ್ರಯೋಗಿಸಲಾಗುವ ಹಲವು ಸಾಂಕೇತಿಕ ಹಾಗೂ ಸೂಕ್ಷ್ಮ ಶಬ್ದಗಳ ಮತಿತಾರ್ಥವನ್ನು ಆತನು ಮೊದಲು ತನ್ನ ಮನಸಿನಲ್ಲಿ ತಂದುಕೊಂಡು ಬಳಿಕ ಶ್ರೋತೃಗಳ ಚಿತ್ತವನ್ನು ಸಾವಧಗೊಳಿಸಿ ಅವರ ಮನಸ್ಸಿನಲ್ಲಿ ತುಂಬಬೇಕಾಗುವದು ವಿಷಯದಲ್ಲಿ ಒಡಮೂಡಿದ ಸಂಶಯಗಳ ನಿರಸನವಾಗಿ ವಕ್ತಾರನಿಂದ ಸಮಸ್ಯೆಗಳೆಲ್ಲ ಪೂರ್ತಿಗೊಂಡರೆ ಶ್ರೋತೃಗಳ ಮನಸ್ಸು ಪ್ರಸನ್ನತೆ ಪಡೆವದು ಇಲ್ಲದಿದ್ದರೆ ಆ ಬೋಧಕನು ಮುಖಭಂಗಿತನಾಗಿ ಹೋಗು ವನು ಒಟ್ಟಿನಮೇಲೆ ಗೋಸಾವಿಯೆನ್ನಿಸಿದ ವಕ್ತಾರನು ಶ್ರೋತೃ ಗಳಿಂದ ನಿಂದಿತನಾಗಿ ಚಡಪಡಿಕೆ ಹೊಂದುವನು ಬಂಗಾರವನ್ನು ಕೊಂಡು ಕೊಳ್ಳುವಲ್ಲಿ ಶುದ್ಧಬಂಗಾರವನ್ನೇ ಕೊಳ್ಳಬೇಕು ಕೊಳ್ಳುವಾಗ ಅದನ್ನು ಒರೆಗ್ಹಚ್ಚಬೇಕು ಒಳಿತಾಗಿ ಕಾಸಬೇಕು ಇಂತಾಗಿ ನಿರೀಕ್ಷಿಸಿಕೊಂಡರೇ ಮಾತ್ರ ಶುದ್ಧ ಬಂಗಾರವನ್ನು ಕೊಂಡಂತಾಗುವದು ಇದರಂತೆಯೇ ಶ್ರವಣ-ಮನನಗಳಿಂದ ನಿರೀಕ್ಷಿಸಿ ಅನುಭವರೂಪಹೊಂದಬೇಕು ವೈದ್ಯನಿಗೆ ಅನುಭವವಿಲ್ಲದೆ ಹೋದರೆ ರೋಗಿಯು ಬೇನೆ ವಾಸಿಯಾಗುವ

ದಿಲ್ಲ ಅಂಥ ವೈದ್ಯನು 'ಔಷಧ ಸರಿಯಾಗಿ ಸೇವಿಸಲಿಲ್ಲ' 'ಯೋಗ್ಯ ಪಥ್ಯ ಮಾಡಲಿಲ್ಲ' ಮುಂತಾದ ಮಾತುಗಳಿಂದ ಸಿಟ್ಟಿಗೇಳುವದು ಯೋಗ್ಯವಾಗಲಾರದು ಈ ಜಗತ್ತಿನಲ್ಲಿ ಸುಳ್ಳಿಗೆ ಎಲ್ಲಿಯೂ ನೆಲೆಯು ಸಿಗಲಾರದು ಮತ್ತು ಅದನ್ನು ಯಾರೂ ಮನ್ನಿಸಲಾರರು ಆದ್ದರಿಂದ ಎಲ್ಲರೂ ಸತ್ಯವನ್ನೇ ಅವಲಂಬಿಸಬೇಕು ಏನೋಂದು ಒರೆಯಲಿಕ್ಕೆ ಬಾರದವನನ್ನು ವ್ಯಾಪಾರ ಮಾಡಹಚ್ಚಲು ಕೆಲದಿನಮಾತ್ರ ನಡೆಯಬಹುದು ಆದರೆ ಕೊನೆಗೆ ವ್ಯಾಪಾರದ ಜಮಾ-ಖರ್ಚ-ಲೆಕ್ಕಗಳನ್ನು ನಿರೀಕ್ಷಿಸಲಾಗಿ ಆ ಗುಮಾಸ್ತನ ತಪ್ಪುಗಳು ಕಂಡ ಬರುವವು ಲೆಕ್ಕ ತಪಾಸಿಸಲು ತಪ್ಪುಗಳು ಹೊರಡುವವು ಅವುಗಳ ನಿರಸನಕ್ಕೆ ಕಾಗದ ಪತ್ರಗಳ ಸಾಕ್ಷಿಗಳು ಅವಶ್ಯವು ಈ ಸಾಕ್ಷಿಗಳೇ ಪ್ರತ್ಯಯುಗಳು. ಇವುಗಳ ಆಧಾರವೇ ದೋಷಪರಿಮಾರ್ಜನೆಗೆ ಬೇಕಾಗುವದು ಅಂದಮೇಲೆ ಇವಿಲ್ಲದ ಅಂದರೆ ಅನುಭವವಿಲ್ಲದ ಗುಮಾಸ್ತನು ದೋಷಿಯಾಗುವನು ತನ್ನ ದೋಷಕ್ಕನುಸರಿಸಿ ಆತನು ಕಷ್ಟಪಡಬೇಕಾಗುವದು ಸೇನಾನಿಯು ತನ್ನ ಸೈನ್ಯವು ಸಜ್ಜಿಲ್ಲದೆ ಯುದ್ಧಗೆಲ್ಲುವದು ಅಸಾಧ್ಯವು ಇಂಥ ಪರಿಸ್ಥಿತಿಯಲ್ಲಿ ರಣಕ್ಕಿಳಿದು ಸೋತದ್ದಾದರೆ ಆ ದೋಷವು ಇನ್ನಾರಿಗಿರದೇ ಸೇನಾನಿಯ ಸಿರನುಭವಕ್ಕೇ ಎಂಬುದು ಸಹಜವು ಅನುಭವಕ್ಕೆ ಬಂದದನ್ನು ಆದರಿಂದ ಸ್ವೀಕರಿಸಬೇಕು ಅನುಭವವಿಲ್ಲದ ಮಾತುಗಳು ಜೊಳ್ಳಾಗಿರುವವು ಯಾವನೊಬ್ಬನಿಗೆ ಬುದ್ಧಿಹೇಳಹೋಗಲು ಅವನು ಹೇಳುವವನಕೂಡ ಗುದ್ದಾಡಬರುವನು, ಆದರೆ ಬುದ್ಧಿಯಿಲ್ಲದೆ ಮುಂದಿನ ಆಟವೇ ಇಲ್ಲ ಅಸತ್ಯಸಂಗತಿಗಳು ಕೂಡಲೇ ಬೆಳಕಿಗೆ ಬರುವವು ಸತ್ಯವನ್ನು ಬದಿಗಿಟ್ಟು ಅಸತ್ಯವನ್ನೇ ಬಲತ್ಕಾರದಿಂದ ಪ್ರಸ್ಥಾಪಿಸಿ ಕಾರ್ಯ ಸಾಧಿಸಿಕೊಳ್ಳಹೋಗುವದು ಅನ್ಯಾಯವು ಆದರೆ ಈ ನ್ಯಾಯಾನ್ಯಾಯಗಳ ನಿಜವಾದ ವಿಚಾರಣೆಯು ಆ ಪರಮೇಶ್ವರನಿಂದ ಆಗೇತೀರುವದು ಜಗತ್ತು ನ್ಯಾಯವನ್ನು ಬಿಟ್ಟು ವರ್ತಿಸಹತ್ತಲು ಕೊನೆಗೆ ಅದರ ಪರಿಣಾಮವಾಗಿ ಜಗತ್ತಿನಲ್ಲಿ ಯುದ್ಧ ಕಲಹಗಳ ಕೋಲಾಹಲವು ಪ್ರಾದುರ್ಭವಿಸುವದು ಅನ್ಯಾಯವು ಬಹುಜನ ಸಮಾಜಕ್ಕೆ ಒಪ್ಪಿತವಾಗುವನೆಂಬ ಮಾತು ಯಾರ ಹೇಳಿಕೆಯಲ್ಲಿಯೂ ಇಲ್ಲ ಮತ್ತು ಅಂಥ ಸಂಗತಿಯೂ ಕಂಡುಬಂದಿಲ್ಲ.ಹೀಗಿದ್ದು ಮೂರ್ಖರು ಅಸತ್ಯವನ್ನವಲಂಬಿಸಿ

ನಿರರ್ಥಕವಾಗಿ ಕಲಹಪ್ರವೃತ್ತರಾಗುವರು ಅಸತ್ಯವೇ ಪಾಪವು ಸತ್ಯವೇ ಬ್ರಹ್ಮಸ್ವರೂಪವು ಇಂತಿರುವ ಈ ಎರಡು ಪಕ್ಷಗಳಲ್ಲಿ ಯಾವಪಕ್ಷವು ವಿಹಿತವಾದುದೆಂಬುದನ್ನು ಪ್ರತಿಯೊಬ್ಬನೂ ವಿಚಾರಿಸಿ ಅನುಸರಿಸಬೇಕು. ನಡಿಯುವದೂ ನುಡಿಯುವದೂ ಇವಲ್ಲ ಮಾಯೆಯು ಅಂತರ್ಗತವಾದ ಕ್ರಿಯೆಗಳು ಅಂದಮೇಲೆ ಮಾಯೆಯನ್ನು ಬಿಟ್ಟ ಮಾತುಗಳೆಂಥವು? ಆದ್ದರಿಂದಲೇ ನಿಃಶಬ್ದ ಮೂಲ ಮೂಲನಾದ ಪರಬ್ರಹ್ಮನನ್ನು ಶೋಧಿಸ ತಕ್ಕದ್ದು ವಾಚ್ಯಾರ್ಥವನ್ನು ಬಿಟ್ಟು ಲಕ್ಷ್ಯಾರ್ಥವನ್ನು ಗ್ರಹಿಸಿ ಸ್ವೀಕರಿಸ ಬೇಕು ಅಂದರೆ ನಿಶಬ್ದದ ವಿಷಯಕ್ಕೆ ಇರುವ ಸಂಶಯಗಳೂ ಮಾಯಾ ಭ್ರಮೆಯೂ ಉಳಿಯಲಾರವು ಪೂರ್ವಪಕ್ಷವಾದ ಅಷ್ಟಧಾ ಪ್ರಕೃತಿಯನ್ನು ವಿವೇಕದಿಂದ ತ್ಯಾಗಮಾಡಿ ಅಲಕ್ಷ್ಯ ಬ್ರಹ್ಮನಲ್ಲಿ ಲಕ್ಷ್ಯವನ್ನಿರಿಸಬೇಕು ನಿರಂತರ ಸಾವಧಾನತೆ ಹಾಗು ಮನನಗಳಿದ್ದವರಿಗ ಮಾತ್ರ ಆ ಅಲಕ್ಷ್ಯ ಬ್ರಹ್ಮನ ಜ್ಞಾನವಾಗುವದು ಹಿಟ್ಟೂ ನುಚ್ಚೂ ಒಂದೇ ಎಂದು ತಿಳಿಯು ವದು ಮೂರ್ಖತನವಾಗುವದು ರಸವನ್ನು ಬಿಟ್ಟು ಸಿಪ್ಪೆಯನ್ನು ತಿನ್ನುವ ವನು ಜಾಣನಲ್ಲ ನಿತ್ಯಾನಿತ್ಯ ವಿವೇಕದಿಂದ ಪಿಂಡದ ಜ್ಞಾನ ಮಾಡಿಕೊ ಳ್ಳಬೇಕು ಹಾಗು ಸಾರಾಸಾರ ವಿವೇಕಗಳಿಂದ ಬ್ರಹ್ಮಾಂಡವನ್ನು ವಿಚಾ ರಿಸಬೇಕು ಈ ಪ್ರಕಾರ ಪಿಂಡ ಬ್ರಹ್ಮಾಂಡಗಳಲ್ಲಿ ಶೋಧಿಸಿ ತೆಗೆದ ಸಾರ [ಪರಬ್ರಹ್ಮ]ವನ್ನು ಸ್ವೀಕರಿಸಬೇಕು ಅಸಾರವನ್ನು ಚೆಲ್ಲಿ ಬಿಡಬೇಕು ಅನ್ವಯ ಹಾಗು ವ್ಯತಿರೇಕಗಳಿಂದ ಮಾಯೆಯ ನಿರಸನ ಮಾಡಿಕೊಳ್ಳ ಬೇಕು ಇಂತು ಮಾಯಾ ನಿರಸನವಾದ ತರುವಾಯ ಆ ವಿವೇಕ–ವಿಚಾರ ಗಳ ಅಗತ್ಯ ಉಳಿಯುವದಿಲ್ಲ ತತ್ವದಿಂದ ತತ್ವವನ್ನು ಲಯಗೊಳಿಸಿದ ಮೇಲೆ 'ತತ್ವಮಸಿ' ಎಂಬ ಮಹಾ ವಾಕ್ಯದಲ್ಲಿ ಪ್ರವೇಶಿಸಬೇಕು ಮತ್ತು ಆತ್ಮನಿವೇದನೆಯೆಂಬ ಭಕ್ತಿಯಿಂದ ಪರಮ ಶಾಂತಿಯನ್ನು ಹೊಂದಬೇಕು"

ಶ್ರೀ ರಾಮ ॥ ೬ ಉತ್ತಮ ಪುರುಷ ನಿರೂಪಣೆ ॥

[ಅಫಝುಲಖಾನನ ವಧೆಗೈದು ಶಿವಛತ್ರಪತಿಯು ದರ್ಶನಕ್ಕೆ ಬಂದಾಗ ನಡೆದ ಸಮರ್ಥರ ಬೋಧೆ]

ಶ್ರೀ ಗುರು ಸಮರ್ಥರು ಶಿವಛತ್ರಪತಿ ಮೊದಲಾದ ಶ್ರೋತೃಗಳನ್ನು ದ್ದೇಶಿಸಿ—

"ಬಾಹ್ಯ ಶರೀರವನ್ನು ಹಲವು ವಸ್ತ್ರಾಭರಣಗಳಿಂದ ಸುಶೋಭಿಗೊಳಿಸುವಂತೆ ಶರೀರದ ಅಂತಸ್ಥವನ್ನು ವಿವೇಕ-ವಿಚಾರಯುಕ್ತ ರಾಜಕಾರಣಗಳಿಂದ ಅಲಂಕರಿಸಬೇಕು ಸುಶೋಭಿತವೂ ಸತೇಜವೂ ಹಾಗು ಸುಂದರತರವೂ ಆಗಿರುವ ಶರೀರದ ಅಂತರ್ಹೃದಯದಲ್ಲಿ ಚಾತುರ್ಯ ಬೀಜವಿರದೆ ಹೋದರೆ ಆ ಶರೀರವು ಎಂದೂ ಶೋಭಿಸಲಾರದು ಬಾಯ್ಬಡಕನು, ಹಟವಾದಿಯು, ಬಿರು ನುಡಿಯುವನು, ಗರ್ವದಿಂದ ಮೆರೆಯುವವನು, ಅನೀತಿ ಅನ್ಯಾಯ ಪ್ರವೃತ್ತಿಯುಳ್ಳವನು, ಸ್ವಚ್ಛಂದಪರನು, ಶೀಘ್ರಕೋಪಿಯು, ರಾಜಕಾರಣ ವಿಷಯದಲ್ಲಿ ಅನ್ಯರೊಡನೆ ಬೆರೆಯುವವನು, ನೀಚನು, ಅವನಂಬುಗೆಯುವನು, ಸುಳ್ಳಾಡುವವನು, ಪಾಪಕರ್ಮರತನು, ಪರಪೀಡೆಗೆಳಸುವವನು, ಈ ಜನರೆಲ್ಲ ಕೇವಲ ರಾಕ್ಷಸರೆಂದೇ ಬಗೆಯುತಕ್ಕದ್ದು ಕಳೆದು ಹೋದ ಕಾಲವು ಮತ್ತೆ ಬರಲಾರದು ರಾಜಕಾರಣ ಸಮಯದಲ್ಲಿ ನಿತ್ಯ ನೇಮಗಳೆಂದೂ ನಡೆಯುವು ಅವಕ್ಕೆ ಅಂಟಿಕೊಂಡರೆ ರಾಜಕಾರಣದಲ್ಲಿ ವ್ಯತ್ಯಯ ಬರುವದು ಪ್ರತಿಯೊಂದರಲ್ಲಿ ಮಿತಿಯಿರಬೇಕಲ್ಲದೆ ಅತಿಯು ಇರಬಾರದು 'ಅತಿಸರ್ವತ್ರಂ ವರ್ಜಯೇತ್' ಎಂಬದು ಇದೇ ಅರ್ಥವನ್ನು ಹೇಳುವದು ವಿವೇಕಿ ಪುರುಷರಲ್ಲಿ ಪ್ರಸಂಗಾವಧಾನವಿರಬೇಕು, ದುರಾಗ್ರಹವನ್ನೆಂದೂ ಅನುಸರಿಸತಕ್ಕದ್ದಲ್ಲ ಬಲುಮೆ ಒತ್ತಾಯಗಳನ್ನು ಬಹಳವಾಗಿ ಮಾಡಕೂಡದು ಅದರಿಂದ ಫಲವಿಲ್ಲ ಕೊನೆಯ ಪರಿಣಾಮವೆಂದರೆ ಬಲುಮೆ ಮಾಡುವವನು ಹಾಗು ಬಲುಮೆಗೆ ಸಿಕ್ಕವನು ಇವರೀರ್ವರಲ್ಲಿ ಒಬ್ಬನ ನಾಶವು ಒಳ್ಳೇದು- ಈಶ್ವರನು ಭಕ್ತರ ಅಭಿಮಾನಿಯು ಶ್ರೀ ಭವಾನೀ ಮಾತೆಯ ಅಭಿಮಾನವೂ ನಿಮ್ಮಲ್ಲಿ ವಿಶಿಷ್ಟವಿರುವದು ಆದರೂ ವಿಚಾರದಿಂದ ತಿಳಿದು ಕಾರ್ಯವನ್ನು ಕೈಕೊಳ್ಳಬೇಕು ಎಲ್ಲ ಪ್ರಸಕ್ತಿಗಳಲ್ಲಿ ಒಳ್ಳೇ ಜಾಗರೂಕರಾಗಿರಬೇಕು ನಿಮಗೆ ಇದಕ್ಕಿಂತಲೂ ಹೆಚ್ಚಾಗಿ ಸೂಚಿತವನ್ನು ಕೊಡಬೇಕಾಗಿಲ್ಲ ಆದರೆ ಕೆಲವೊಂದು ಪ್ರಾಪ್ತವಾಗುವ ಅನುಮಾನಗಳನ್ನು ತಿಳಿದುಕೊಳ್ಳಬೇಕು ಬಲವಂತನ ಜೊತೆಗೆ ಅಭಿಮಾನಯುತರಾದ ಹಲವು ಜನರಿರಬೇಕು ಅವರ ಮನಸ್ಸು

ಯಾವಾಗಲೂ ನಿಶ್ಚಲವಾಗಿರಬೇಕು ದುರ್ಜನವನ್ನೀಂಥರ ಹೆಚ್ಚಳವಾಗಿ ಅವರ ಹಾವಳಿ ಬಹು ದಿನಗಳಿಂದ ನಡೆದಿದೆ ಆದ್ದರಿಂದ ಎಲ್ಲರೂ ಮೈತುಂಬ ಎಚ್ಚರದಿಂದ ವರ್ತಿಸಬೇಕು ಎಲ್ಲವೂ ದೇವನ ಕೃತಿಗಳು ಅವನೇ ಕರ್ತಾರನು ಅವನಲ್ಲಿ ವಿಶ್ವಾಸವಿಟ್ಟು ಕ್ರಿಯೆಗೆ ಪ್ರವೃತ್ತರಾಗಬೇಕು ಆ ದೇವನ ಪ್ರಸನ್ನತೆ ಪಡೆದ ಪುರುಷನ ವಿಚಾರವು ಬಹು ಜನರಿಗೆ ವಿದಿತವಾಗುವದಿಲ್ಲ ಹಲವು ಪ್ರಸಂಗಕ್ಕನುಸರಿಸಿ ಅವನಲ್ಲಿ ನ್ಯಾಯ-ನೀತಿ, ವಿವೇಕ-ವಿಚಾರಗಳು ಉಚಿತವಾಗುವವು ಆತನು ಯಶ ಕೀರ್ತಿಪ್ರತಾಪಗಳು ತನ್ನ ಕರ್ತೃತ್ವದ ಫಲವೆಂದು ತಿಳಿಯುವೆ ಎಲ್ಲವೂ 'ಈಶ್ವರನ ಕೊಡುಗೆ' ಎಂಬದಾಗಿ ದೃಢ ಭಾವದಿಂದ ವರ್ತಿಸಬೇಕು ಇದೇ ಯೋಗ್ಯವು ಜಾಗರೂಕತೆಯಿಂದ ಮಹಾ ಪ್ರಯತ್ನಗಳ ಸಾಧ್ಯತೆಯು ಪ್ರಸಂಗದಲ್ಲಿಯ ಧೀರತೆಯು ಅದ್ಭುತ ಕ್ರಿಯಾಸಫಲತೆಯು ಇವೆಲ್ಲವೂ ಈಶ್ವರನ ಕೊಡುಗೆಗಳು ಯಶ ಕೀರ್ತಿ, ಪ್ರತಾಪ, ಮಹಿಮೆ ಮುಂತಾದ ಶ್ರೇಷ್ಠ ಗುಣಗಳು ನಿಸ್ಸೀಮವಾದವುಗಳು ಇವೆಲ್ಲವೂ ಈಶ್ವರನ ದಯಾ ದೇಣಿಗೆಗಳು ಇವುಗಳನ್ನು ಹೋಲುವ ಇನ್ನಾವ ಕೊಡುಗೆಗಳಿಲ್ಲ ದೇವ-ಬ್ರಾಹ್ಮಣರಲ್ಲಿಯ ನಿಷ್ಠೆ-ಭಕ್ತಿಗಳೂ, ಒಳ್ಳೇ ಆಚಾರ-ವಿಚಾರಗಳೂ ಬಹುಜನರ ಆಧಾರಗಳಾಗಿ ಇವೆಲ್ಲವೂ ಸತತವೂ ನಡೆಯುವ ಪರೋಪಕಾರ ವೃತ್ತಿಯೂ ದೇವರಿಂದಲೇ ಕೊಡುಗೆಯಾಗಿ ಬರುವವು. ಐಹಿಕ-ಪಾರಮಾರ್ಥಿಕ ದೃಷ್ಟಿ, ಜಾಗರೂಕತನದ ವರ್ತನೆ, ಬಹು ಜನರ ಸಹಾಯಕತೆ, ದೇವ-ಬ್ರಾಹ್ಮಣರಲ್ಲಿಯ ನಂಬುಗೆ, ಗೋಬ್ರಾಹ್ಮಣ ಪ್ರತಿಪಾಲನೆ, ಬಹು ಜನರ ರಕ್ಷಣೆ, ಇವೆಲ್ಲವೂ ದೇವನ ಮೆಚ್ಚಿಗೆಯ ದೇಣಿಗೆಗಳು ಧರ್ಮಸ್ಥಾಪನೆ ಕೈಕೊಂಡ ಮಾನವನು ಸಾಕ್ಷಾತ್ ಈಶ್ವರನ ಅವತಾರಿಕನು ಇಂಥವರು ಹಿಂದೆ ಅದೆಷ್ಟೋ ಜನರು ಆಗಿಹೋದರು ಸದ್ಯದಲ್ಲಿ ಆಗಿರುವರು ಮುಂದೆಯೂ ಆಗುವರು ಇವೆಲ್ಲಕ್ಕೂ ಈಶ್ವರನೇ ಕಾರಣನು ಉತ್ತಮ ಗುಣಗ್ರಾಹಿಗಳು, ತಾರ್ಕಿಕರು, ವಿವೇಕಿಗಳು, ಧರ್ಮನಿರತರು, ಪುಣ್ಯಶ್ಲೋಕಿಗಳು ಇವರೆಲ್ಲರೂ ದೇವನು ರಾಷ್ಟ್ರಕ್ಕೆ ನೀಡಿದ ದೇಣಿಗೆಗಳಾಗಿರುವರು ಆದ್ದರಿಂದ ಇಹಪರ ಸಾಧನೆಗಾಗಿ ಮೇಲಿನ ಎಲ್ಲ ಗುಣಗಳ ಸಾರವನ್ನು ವಿವೇಕ ವಿಚಾರಗಳಿಂದ ಸಂಗ್ರಹಿಸಿಕೊಳ್ಳತಕ್ಕದ್ದು ಹಾಗು ಅವುಗಳ ಬಲದಿಂದ ಪ್ರಪಂಚ ಪರಮಾರ್ಥಗಳೆರಡನ್ನೂ ಸಾಧಿಸಿಕೊಳ್ಳತಕ್ಕದ್ದು."

ಶ್ರೀ ರಾಮ ॥ ೭ ಜನಸ್ವಭಾವ ನಿರೂಪಣೆ ॥ ಗುರುಗಳು ಶ್ರೋತೃಗಳನ್ನು ಕುರಿತ. —

"ಮಾನವರ ಸ್ವಭಾವವು ಸಾಮಾನ್ಯವಾಗಿ ಆಶಾಯುಕ್ತವಾಗಿರುವದು. ಅವರು ಮೊದಲು 'ದೇವ' ಎಂದು ಕೈ ಮುಗಿಯುವರು ಯಾಕಂದರೆ ಆ ದೇವನು ಇಚ್ಛಿತವಾದುವನ್ನು ಕೊಡುವನು ಎಂಬ ಆಶೆಯು ಅವರಲ್ಲಿ ತುಂಬಿರುವದು ಒಡೆಯನಲ್ಲಿ ದುಡಿಯದೆ ಪಗಾರ ಕೇಳುವ ನವಕರನಂತೆ ಇದಾಗಿರುವದು ದೇವನಲ್ಲಿ ಏನೊಂದು ಭಕ್ತಿಯನ್ನು ಪ್ರಕಟಿಸದೆ ಆತನಿಂದ ಏನೊಂದನ್ನು ಇಚ್ಛಿಸುವದು ಯುಕ್ತವಲ್ಲ 'ಕಷ್ಟದಿಂದ ಫಲವು' ರಾಜ್ಯಪ್ರಾಪ್ತಿಯು ಕಷ್ಟ ಪ್ರಯತ್ನಗಳಿಲ್ಲದೆ ಸಾಧ್ಯವಿಲ್ಲ ಆಲಸ್ಯದಿಂದ ಕ್ರಿಯಾಸಫಲತೆಯಿಲ್ಲ, ಹಾಗು ಆ ಆಲಸ್ಯವು ಶ್ರಮ ಮಾಡುವದನ್ನು ತಪ್ಪಿಸಿ ಬಿಡುವದು ಇವೆಲ್ಲ ಜನರಲ್ಲಿ ತೋರಿ ಬರುವದು 'ಮೊದಲು ಕಷ್ಟ ಬಳಿಕ ಸುಖ' ಇದೇ ಶ್ರೇಯಸ್ಕರವು ಆಲಸ್ಯತನಕ್ಕೆ ಮೆಚ್ಚಿದವರು ಮೊದಲು ಸುಖವನ್ನು ಬಯಸುವರು ಅಂಥವರಿಗೆ ಮುಂದೆ ಕಷ್ಟಪರಂಪರೆಯು ಬಿಟ್ಟಿರುವದಿಲ್ಲ ಐಹಿಕ—ಪಾರಲೌಕಿಕ ಸುಖಗಳಲ್ಲಿ ಸಮನಾದ ವಿವೇಕದಿಂದ ವರ್ತಿಸತಕ್ಕದ್ದು ಮುಂಧೋರಣೆಯು ಮಾನವನಲ್ಲಿ ಇರಲೇಬೇಕು ಗಳಿಸಿದ್ದೆಲ್ಲವನ್ನು ಇಂದೇ ತಿಂದು ಹಾಳು ಮಾಡುವದು ನಾಳೆಗಾಗಿ ಏನೊಂದನ್ನುಳಿಸದೆ ತೊಂದರೆಗೊಳಗಾಗುವದು ಇದು ಸರಿಯಾದುದಲ್ಲ ಮುಂಧೋರಣೆಯುಳ್ಳ ಪ್ರಾಪಂಚಿಕನ ಸ್ಥಿತಿಯು ಹೀಗಾಗಲಾರದು 'ಇಹಲೋಕದ ಸಂಚಿತವೇ ಪರಲೋಕದ ಪರಮಾರ್ಥವು' ಇದನ್ನರಿತು ಪ್ರತಿಯೊಬ್ಬನು ಉಳಿಕೆಗಾಗಿ ಯತ್ನಿಸಬೇಕು ಸಂಚಿತವಿಲ್ಲದವನು ಜೀವಯುತನಾಗಿದ್ದರೂ ಅವನು ಸತ್ತಂತೆಯೇ ಸರಿಯು ಕಷ್ಟ ತಾಪಗಳು ಆ ಜನ್ಮಪರಿಯಂತವೂ ಬಿಡುವದಿಲ್ಲ ಅಷ್ಟೇ ಏಕೆ? ಜನ್ಮಜನ್ಮಾಂತರಗಳಲ್ಲಿಯೂ ಕೂಡ ಆ ಯಾತನೆಗಳು ನಮ್ಮನ್ನು ನಾಶಗೊಳಿಸುವವು ಅಂದ ಮೇಲೆ ಆ ಯಾತನೆಗಳನ್ನು ದೂರಮಾಡಿಕೊಳ್ಳದವನು ಆತ್ಮಘಾತುಕನೆಂದು ಹೇಳಬಹುದು ಇಂಥ ಆತ್ಮಘಾತುಕತನವು ಪ್ರತಿಯೊಂದು ಜನ್ಮದಲ್ಲಿಯೂ ವರ್ತಿಸುವದೆಂದ ಮೇಲೆ ಅವುಗಳ ಲೆಕ್ಕವೇ ಹೆಚ್ಚಾಗುವದು ಆದ್ದರಿಂದ ಆ ಜನ್ಮ ಹಾಗು ಮರಣಗಳ ಜಂಜಡವೇ

ಬೇಡ ಅವನ್ನು ಹೇಗೆ ತಪ್ಪಿಸಿಕೊಳ್ಳಬೇಕು? ಈ ಬಗೆಗೆ ವಿವೇಕ ವಿಚಾರಗಳನ್ನ ನುಸರಿಸತಕ್ಕದ್ದು 'ಎಲ್ಲಕ್ಕೂ ದೇವನೇ ಕರ್ತಾರನು' ಎಂಬದಾಗಿ ಪ್ರತಿ ಯೊಬ್ಬರೂ ನುಡಿಯುವರು- ಆದರೆ-ಯಾವನೂ ಆ ದೇವನನ್ನು ದೊರಕಿ ಸುವ ಪ್ರಯತ್ನ ಮಾಡುವದಿಲ್ಲ. ವಿವೇಕ ಯೋಗದಿಂದ ಆ ಪರಮಾತ್ಮ ನನ್ನು ದೊರಕಿಸಿಕೊಳ್ಳಬೇಕು. ದೇಹವು ಈ ಲಿಂಗ, ಒಂದೇ ಇರುವದು- ಆ ಒಂದರಿಂದಲೇ ಮುಂದೆ ಹಲವು ದೇಹಗಳಾಗುವವು ಆದರೆ ಈ ಹಲವು ಗಳೆಲ್ಲ ಮೊದಲಿನ ಒಂದೇ ಆಗಲಾರವು. ಆ ಮೂಲ ವಸ್ತುವೊಂದನ್ನೇ ತಿಳಿದುಕೊಳ್ಳತಕ್ಕದ್ದು ದೇವ ಹಾಗು ಆತನ ಕರ್ತೃತ್ವಗಳ ಬಗಗೆ ಚೆನ್ನಾಗಿ ವಿಚಾರ ಮಾಡತಕ್ಕದ್ದು. ದೇವನ ಅಸ್ತಿತ್ವ ತಿಳಿಯದೆ ಜನರು ಆತನ ಬಗೆಗೆ ಮಾತಾಡುವದು ವ್ಯರ್ಥವು ಹೀಗೆ ನಿರರ್ಥಕ ನುಡಿಯುವವರು ಕೇವಲ ತಮ್ಮಲ್ಲಿಯ ವಿದ್ವತ್ತೆಯನ್ನು ತಮ್ಮ ಮೂರ್ಖತನದಿಂದಲೇ ವ್ಯಕ್ತಪಡಿಸಿದಂತಾಗುವದು ಅದೇನೇ ಇರಲಿ, ದೇವ ಸಂತುಷ್ಟತೆಗಾಗಿ ಪರಿಶ್ರಮ ಕೈಕೊಳ್ಳಬೇಕಾಗುವದು ಕಷ್ಟವನ್ನು ಅನುಭವಿಸುವವನು ಭಾಗ್ಯವನ್ನು ಭೋಗಿಸುತ್ತಲೇ ಹೋಗುವನು, ಉಳಿದ ದುರ್ಭಾಗ್ಯರು ಮಾತು ಬಳಿಸುತ್ತ ಇಲ್ಲಿಯೇ ಉಳಿಯುವರು ಬುದ್ಧಿವಂತನಿಗೆ ಮೂರ್ಖನ ಲಕ್ಷಣ ಗಳು ಗೊತ್ತಾಗುವಂತೆ ಮೂರ್ಖನಿಗೆ ಬುದ್ಧಿವಂತನ ಲಕ್ಷಣಗಳ ಜ್ಞಾನ ವಾಗುವದಿಲ್ಲ ಮೂರ್ಖನಲ್ಲಿ ದುಷ್ಟಬುದ್ಧಿಯೇ ಹಬ್ಬುಗೆಯಾಗುತ್ತಿರು ವದು ಅಂದ ಮೇಲೆ ಅವನಲ್ಲಿ ಒಳ್ಳೆಯವೆನ್ನಿಸುವ ಯಾವದೂ ಇರುವ ದಿಲ್ಲ ಅವನು ತನ್ನಲ್ಲಿರುವ ಕುಬುದ್ಧಿಗೇ ಸಬುದ್ಧಿಯೆಂದು ತಿಳಿದುಕೊ ಳ್ಳುವನು ಪಾವಿತ್ರ್ಯತೆಯನ್ನು ತ್ಯಾಗ ಮಾಡಿದವನು ನಿಜವಾಗಿ ಮನು ಷ್ಯನೇ ಅಲ್ಲ ಯಾಕದರೆ ತಿಲಾಂಶವಾದರೂ ವಿಚಾರವಾತನಲ್ಲಿ ಇರುವ ದಿಲ್ಲ ಒಟ್ಟಿನ ಮೇಲೆ ಅವನು ವಿಚಾರಶೂನ್ಯ ಮಾನವನು ಇಹಲೋಕ ಪರಲೋಕ ಸುಖಗಳಿಗೆ ವಿಚಾರವೇ ಸಾಧನವು ವಿಚಾರವೇ ಸಾರ್ಥಕವು ಆದ್ದದಂದ ವಿಚಾರದಿಂದ ನಿತ್ಯಾನಿತ್ಯವಿವೇಕವನ್ನು ಅರಿತುಕೊಳ್ಳಬೇಕು"

ಶ್ರೀ ರಾಮ || ೮ ಅಂತರ್ದೇವ ನಿರೂಪಣೆ || ಗುರುಗಳು ಶಿಷ್ಯರಿಗೆ——

" ಬ್ರಹ್ಮನು ನಿರ್ವಿಕಾರನು ಹಾಗು ನಿಶ್ಚಲನು. ಆತ್ಮನು ಅಂದರೆ ಅಂತರಾತ್ಮನು ವಿಕಾರಯುಕ್ತನು ಹಾಗು ಚಂಚಲನು. ಹೀಗಿದ್ದು ಎಲ್ಲರು ಆತ್ಮನನ್ನೇ ದೇವನೆಂದು ಹೇಳುವರು ಹೀಗಾಗಿ ದೇವನಾರೆಂಬ ನಿಶ್ಚಯವು ಉಂಟಾಗದಾಗಿದೆ ದೇವನಲ್ಲಿ 'ಹಲವು ದೇವ' ಎಂಬ ಅನುಮಾನವನ್ನು ತಂದುಕೊಳ್ಳದೆ ' ಒಬ್ಬನೇ ದೇವ ' ಎಂಬ ಭಾವನೆಯನ್ನು ತಂದುಕೊಂಡು ವರ್ತಿಸುವದು ಯುಕ್ತವು ಆದ್ದರಿಂದ ಪ್ರತಿಯೊಬ್ಬನಲ್ಲಿ ವಿಚಾರವಿರಬೇಕು ಆ ವಿಚಾರದಿಂದಲೇ ದೇವನನ್ನು ಶೋಧಿಸಬೇಕು 'ಹಲವು ದೇವರುಗಳು ' ಎಂಬ ಗೊಂದಲದಲ್ಲಿ ಬೀಳಬಾರದು

ಜನರು ಕ್ಷೇತ್ರದಲ್ಲಿ ಕಂಡ ದೇವನಂತೆಯೇ ಧಾತುವಿನಿಂದ ಪ್ರತಿಮೆ ಸಿದ್ಧಗೊಳಿಸಿಕೊಂಡು ಅದರಲ್ಲಿ ದೇವತ್ವ ಭಾವನೆಯನ್ನಿಟ್ಟು ಪೂಜಿಸುವರು ಇದು ಮೊದಲಿನಿಂದ ನಡೆದು ಬಂದ ರೀತಿಯೇ ಆಗಿದೆ ಇಂತು ಪ್ರತಿಮೆಯ ದೇವನಿಗೆ ಕ್ಷೇತ್ರದಲ್ಲಿಯ ದೇವನೇ ಮೂಲನಾಗಿರುವನು ಆದ್ದರಿಂದ ಭೂಮಿಯ ಮೇಲಿನ ಹಲವು ಕ್ಷೇತ್ರಗಳಲ್ಲಿ ಆ ದೇವ(ಅಂತರಾತ್ಮ)ನನ್ನು ಶೋಧಿಸಿ ಕಾಣಬೇಕು ಕ್ಷೇತ್ರದಲ್ಲಿಯ ಶಿಲಾ ವಿಗ್ರಹಗಳ ಬಗೆಗೆ ವಿಚಾರ ಮಾಡಲು ಆ ಮೂರ್ತಿಗಳ ಮೂಲಗಳು ದೇವನ ಅವತಾರಗಳನ್ನು ವಿಚಾರಕ್ಕೆ ತಂದು ನಿಲ್ಲಿಸುವವು 'ಅವತಾರ ತಾಳಿದ ದೇವನು ಭೂಮಿಯಲ್ಲಿ ದೇಹಧಾರಿಯಾಗಿ ವರ್ತಿಸುವನು, ಅವತಾರ ಕ್ರಿಯೆ ಮುಗಿದ ಕೂಡಲೆ ಆ ದೇವನು ತನ್ನ ಮೂಲ ಸ್ಥಾನವನ್ನು ಸೇರುವನು ' ಇವೆಲ್ಲ ವಿಚಾರಗಳಲ್ಲದೆ ಎಲ್ಲ ಅವತಾರಗಳಲ್ಲಿ ತ್ರಿಮೂರ್ತಿಗಳ ಅವತಾರಗಳೇ ಹೆಚ್ಚಿನವು ಎಂಬದಾಗಿಯೂ ವಿಚಾರ ತಿಳಿಸುವದು ಈ ಮೂರೂ ದೇವತೆಗಳು ಅಂದರೆ ಬ್ರಹ್ಮ, ವಿಷ್ಣು, ಮಹೇಶ್ವರರು ಒಬ್ಬ ಅಂತರಾತ್ಮನ ನಿಯಂತ್ರತೆಯಲ್ಲಿರುವರು ಆ ಅಂತರಾತ್ಮನೇ ನಿಜವಾಗಿ ಕರ್ತಾರನೂ ಅಹುದು, ಭೋಕ್ತಾರನೂ ಅಹುದು ಯುಗ ಯುಗಾಂತರಗಳಿಂದ ಆತನೇ ತ್ರೈಲೋಕ್ಯಗಳನ್ನು ಸಾಗಿಸುತ್ತ ಬಂದಿರುವನು, ವೇದ ಶಾಸ್ತ್ರಗಳೆಲ್ಲವೂ ಇದೇ ನಿಶ್ಚಿತವೆಂದು ಹೇಳುವವು ಆ ಅರಿವಿನ ಸ್ವರೂಪವೇ ವಿವೇಕದಿಂದ ಶರೀರ ಸ್ಥಿತನಾಗಿರುವದು ಅದುವೇ ಅಂತರಾತ್ಮನು ಆ ಅಂತರಾತ್ಮನೇ ದೇವನು ಎಂದು ನಿಶ್ಚಿತವಾಗುವದು ಈ ಪ್ರಕಾರದಿಂದಿರುವ ಅಂತರ್ದೇವನನ್ನು

ತಿಳಿದುಕೊಳ್ಳದೆ ಜನರೆಲ್ಲರು ದೇವನನ್ನು ಕಾಣುವ ತವಕ ಹಾಗು ಆತ್ಮಾಕ್ತಿ ಯುಕ್ತರಾಗುವರು ಅವರು ಎಷ್ಟೋ ತೀರ್ಥ-ಕ್ಷೇತ್ರಗಳ ಪರ್ಯಟನ ಕೈಕೊಂಡು ಶ್ರಮ ಪಡುವರು, ಯಾವನೊಬ್ಬನು ಯಾತ್ರೆಯನ್ನು ಮುಕ್ತಾಯಗೊಳಿಸಿಕೊಂಡು ಬಂದನಂತರ ಅವನು ಎಲ್ಲಿಯೂ ನಾನು ನಿಜವಾದ ದೇವನನ್ನು ಕಾಣಲಿಲ್ಲವಲ್ಲ !' ಎಂದೆಂದು ಕೊಳ್ಳುವನು ಹಾಗು ಅವನು 'ಎಲ್ಲ ತೀರ್ಥ ಕ್ಷೇತ್ರಗಳಲ್ಲಿ ಕಲ್ಲಿನ ಮೂರ್ತಿ, ನೀರಿನ ಕುಂಡಗಳ ಹೊರತು ಇನ್ನೇನನ್ನೂ ಕಾಣಲಿಲ್ಲ ವ್ಯರ್ಥವಾಗಿ ಒಣ ಒಣ ತಿರುಗಾಡಿ ಬರುವದರಲ್ಲಿ ಲಾಭವಿಲ್ಲ' ಈ ಮುಂತಾದ ವಿಚಾರಗಳನ್ನು ತಂದುಕೊಳ್ಳುವನು ಆ ಬಳಿಕ ಅವನು ಸತ್ಸಂಗ ಹಿಡಿಯುವನು ಸತ್ಸಂಗದಿಂದ ಬಹುಜನರಿಗೆ ದೇವನು ದೊರಕಿರುವನು ಮುಂತಾದ ವಿವೇಕಗಳಿಂದ ಆತನಲ್ಲಿ ಅರಿವುಂಟಾಗುವದು ಮೂಢರಾದವರು ಇದನ್ನರಿಯದೆ ಕೇವಲ ಭ್ರಮೆಗೊಳಗಾಗುವರು, ಅಂತರ್ಮುಖರಿಗೇ ಅಂತರಾತ್ಮನ ಜ್ಞಾನವಾಗುವದಲ್ಲದೆ ಬಹಿರ್ಮುಖ ಮೂಢರಿಗೆ ಏನೊಂದೂ ಬೋಧೆಯಾಗುವದಿಲ್ಲ ಆದ್ದರಿಂದಲೇ ಸುಜ್ಞ ಮಾನವರು ಅಂತಃಕರಣವನ್ನು ಶೋಧಿಸುವರು ವಿವೇಕವಿಲ್ಲದೆ ಇರುವ ಭಾವವೇ ಅಭಾವವು 'ಮೂರ್ಖರಿಗೆ ಮೂರ್ತಿಪೂಜೆ' ಎಂಬಮಾತು ಪ್ರಸಿದ್ಧವದೆ ಆದರೂ ಅಡ್ಡಿಯಿಲ್ಲ ಪ್ರತಿಮೆಯಿಂದ ಆರಂಭಿಸಿ ವಿವೇಕದಿಂದ ನೋಡುತ್ತ ನೋಡುತ್ತ ಮೂಲ ಪುರುಷನ ವರೆಗೆ ಹೋಗುವವನೇ ವಿವೇಕಿಯು ಅವನು ಮಾಯಾನ್ವಿತ ತತ್ವಗಳನ್ನು ತ್ಯಾಗಮಾಡಿ ಮಾಯೆಯ ಆಚೆಗಿರುವ ಬ್ರಹ್ಮನ ವರೆಗೆ ಹೋಗಿ ಅಲ್ಲಿ ಅವನನ್ನು ಹೊಂದಿಕೊಳ್ಳುವನು ಆಕಾರಯುಕ್ತವಾದವುಗಳೆಲ್ಲವೂ ನಾಶವಾಗುವವು ಪರಬ್ರಹ್ಮನು ನಾಮ ರೂಪಾದಿಗಳ ತೊಂದರೆಯ ಆಚೇ ಕಡೆಗೆ ಇರುವನು ಅಂತರಾತ್ಮ ದೇವನು ಚಂಚಲನು ಬ್ರಹ್ಮನು ನಿಶ್ಚಲ ಹಾಗು ನಿರ್ಭ್ರಮನು ಆದ್ದರಿಂದ ಈ ಅನುಭವವನ್ನು ಕಾಣುತ್ತಾ ಕಾಣುತ್ತಾ ಭ್ರಮೆಯನ್ನು ನೀಗಿ ಪಾರಾಗಬೇಕು ಬ್ರಹ್ಮಸ್ಥಿತಿಯ ಅನುಭವವಿರುವದು. ಅವಶ್ಯವು. ಆದಿಲ್ಲದೆ ಮಾಡಿದ ಕರ್ಮಗಳೆಲ್ಲ ನಿಷ್ಫಲವು ಕರ್ಮಗಳ ಕಟಕಟೆಯಲ್ಲಿ ಸಿಕ್ಕ ಪ್ರಾಣಿಯು ವ್ಯರ್ಥವಾಗಿ ಶ್ರಮಬಡುತ್ತ ತೊಳಲುವದು ಕರ್ಮ ಬಂಧನದಿಂದ ಅದು ಪಾರಾಗುವದಿಲ್ಲ ಅಂದಮೇಲೆ ದೇವನ ಉಪಾಸನೆಯ ಸಂಬಂ

ಧದ ಕರ್ಮಗಳನ್ನು ಮಾಡುವದು ನಿರರ್ಥಕವೆಂದಂತಾಗುವದು. ದೇವನು ಜಗದಂತರ್ಯಾಮಿಯೆಂಬುದು ವಿಚಾರದಿಂದ ತಿಳಿಯುವದು ಈ ಪ್ರಕಾರ ಜಗಂತರ್ದೇವನ ಅಂದರೆ ಚಂಚಲ ಅಂತರಾತ್ಮನ ಯೋಗದಿಂದ ನಿಶ್ಚಲ ಬ್ರಹ್ಮಪದವನ್ನು ಹೊಂದಲು ಬರುವದು ಸಗುಣವನ್ನು ನೋಡುತ್ತಾ ನೋಡುತ್ತಾ ಹೋಗಲು ನಿರ್ಗುಣಪದ ಪ್ರಾಪ್ತವಾಗುವದು. ಸಗುಣ ಸಂಗವನ್ನು ತೊರೆದಾದರೂ ನಿರ್ಗುಣ ಪದವನ್ನು ಹೊಂದಲಿಕ್ಕೆ ಬರುವದು ಅಂತರಾತ್ಮನ ಅನುಸಂಧಾನದಿಂದ ಇದು ಜ್ಞಾನವೆನ್ನಿಸುವದು ಇದರ ವಿಜ್ಞಾನವೇ ನಿರ್ಗುಣಪದವು ಇದನ್ನು ಶಾಂತ ಮನಸ್ಕರಾಗಿ ಕಾಣತಕ್ಕದ್ದು ಇಂತು ಉಂಟಾದ ನಿತ್ಯಾನಿತ್ಯ ವಿವೇಕದಿಂದಲೇ ಜಗದುದ್ಧಾರವಾಗುವದು ”

ಶ್ರೀ ರಾಮ || ೯ ನಿದ್ರಾನಿರೂಪಣೆ || ಗುರುಗಳು ಶಿಷ್ಯರಿಗೆ—

“ಆದಿ ಪುರುಷನಿಗೆ ನಮಸ್ಕಾರ ಮಾಡುವೆನು ಆತನಿಂದುಂಟಾದ ಮಾಯಾ ನಿದ್ರೆಯ ವಿಲಾಸವನ್ನು ವರ್ಣಿಸುವೆನು ಒಮ್ಮೆ ನಿದ್ರೆಯು ಬಂದ ವೇಳೆ ಅದು ಬೇಗನೆ ದೂರಾಗುವದಿಲ್ಲ ನಿದ್ದೆಯು ಶರೀರದಲ್ಲಿ ವ್ಯಾಪಿಸಲು ಉಂಟಾಗುವ ಲಕ್ಷಣಗಳು ಇಂತಿರುವವು ಏನೆಂದರೆ—

ಶರೀರದಲ್ಲಿ ನಿದ್ರೆಯು ಪ್ರವೇಶವಾದ ಕೂಡಲೆ ಆಲಸ್ಯತನವೂ ಆಕಳಿಕೆಗಳೂ ಉತ್ಪನ್ನವಾಗುವವು ಮೈಯು ಮುರಿದುಕೊಳ್ಳುವಂತಾಗುವದು. ಸೆಳಿತುಕೊಳ್ಳುವದಕ್ಕೆ ನೊಗಸೆನ್ನಿಸದು, ಪುನಃ ಪುನ ಆಕಳಿಕೆಗಳು ಹುಟ್ಟಿ ಚಿಟಕೀ ಬಾರಿಸ ವಂತಾಗುವದು, ಶಿರಸ್ಸು ತೂಗಲಾಡುವದು, ಕಣ್ಣುರೆಪ್ಪೆಗಳು ತಾವೇ ಮುಚ್ಚತೊಡಗುವವು, ಕಣ್ಣುಗಳು ಸುತ್ತಲೆಲ್ಲ ಟಕಮಿಕಿಯಾಗಿ ನೋಡತೊಡಗುವವು, ನಿದ್ರೆಯು ಬಂದ ಕೆಲವರು ಕುಳಿತಲ್ಲಿಯೇ ಬಿದ್ದು ತಲೆಯನ್ನು ಅಪ್ಪಳಿಸಿಕೊಳ್ಳುವರು, ಅವರ ತಲೆಯು ಒಡೆದು ಹೋದರೂ ಅವರಿಗೆ ಪರಿವೆ ಉಳಿಯುವದಿಲ್ಲ, ಕೆಲವರು ಗೋಡೆಗೆ ಆತು ಕುಳಿತಲ್ಲಿಯೇ ಗೊರ್‌ಗೊರ್ ಸಪ್ಪಳ ಮಾಡುತ್ತ ಕಣ್ಣು ಮುಚ್ಚುವರು, ಕೆಲವರು ಡಬ್ಬುಬಿದ್ದುಕೊಂಡೇ ಸ್ಮೃತಿಯಿಲ್ಲದಂತಾಗುವರು, ಆದೆಷ್ಟೋ ಜನರು ತಮ್ಮ ಶರೀರದ ಮೇಲೆ ಎಚ್ಚರವಿಡದೆ ಸಿಕ್ಕಸಿಕ್ಕಂತೆ ಮಲಗಿಕೊಳ್ಳುವರು, ಕೆಲ

ವರು ಕೈ ಕಾಲುಗಳನ್ನು ಅಲುಗಾಡಿಸುವರು, ನಿದ್ದೆಯಲ್ಲಿಯೇ ಬಹು ಜನರ ಕರ್ಕರನೆ ಹಲ್ಲು ಕಡಿಯುವರು ನಿದ್ದೆ ಬಂದು ಮಲಗಿದಾಗ ಅದೆಷ್ಟೋ ಜನರಿಗೆ ಮೈಮೇಲಿನ ಅರಿವೆಗಳ ಪರಿವೆಯೇ ಇರುವದಿಲ್ಲ, ಬಾಯಿಯಿಂದ ಜೊಲ್ಲು ಬಿಡುವವರುಂಟು ಕೆಲವರು ನಿದ್ದಿಗಣ್ಣಿನಲ್ಲಿಯೇ ಎದ್ದು ಗಡಬಡಿಸುವರು, ಕೆಲವರು ಹೆಣದಂತೆ ಅಸ್ತವ್ಯಸ್ತವಾಗಿ ಬಿದ್ದು ನಿದ್ರಿಸುವರು, ಮಲಗಿ ಘೋರ ನಿದ್ದೆಮಾಡುವಾಗ ಕೆಲವರು ಹಲ್ಲು ತೆರೆದು ಭೂತಪಿಶಾಚಗಳಂತೆ ಭಯಂಕರ ತೋರುವರು ಇನ್ನೂ ಕೆಲವರು ಹಾಸಿಗೆಗೂಡಿಸಿಕೊಂಡಿದ್ದು ಕತ್ತಲೆಯಲ್ಲಿಯೇ ಅತ್ತಿತ್ತ ಅಡ್ಡಾಡುವರು, ಸ್ಮೈಮೇಲೆ ಎಚ್ಚರವಿಲ್ಲದೆ ಹೋಗಿ ಎತ್ತರ ಸ್ಥಳದಲ್ಲಿ ಮಲಗುವರು, ಮಲಗಿ ನಿದ್ರಿಸುವಾಗ ಎಷ್ಟೋ ಜನರು ಅಳುವರು, ಖೊಳ್ಳಖೊಳ್ಳನೆ ನಗುವರು,, ಒದರಾಡುವರು, ಚೀರಾಡುವರು, ಶಂಖ ನಾದವನ್ನು ಕೂಡ ಮಾಡುವರು, ಅರನಿದ್ದೆಯಲ್ಲಿಯೇ ಎದ್ದು ದಂಗಾಗಿ ಕೂಡ್ರುವರು, ತಲೆ ತುರಿಸಿ ಕೊಳ್ಳುವರು, ಬಾಯಿಯಲ್ಲಿ ಉಗುಳು ತುಂಬಿಕೊಂಡು ಸಿಕ್ಕ ಸಿಕ್ಕ ಕಡೆಗೆ ಉಗುಳುವರು ಕೆಲವರ ಅಪಾನ ವಾಯುಗಳು ಅವರ ನಿದ್ದೆಯಲ್ಲಿ ಅವರಿಗೆ ತಿಳಿಯದೇ ಹೋಗುವವು ಅದೆಷ್ಟೋ ಜನರು ಬಡಬಡಿಸುವರು, ಕಾಡುವರು, ನಿದ್ದೆಯಲ್ಲಿಯೇ ಎದ್ದು ಕುಣಿಯುವರು ಕೆಲವರು ಮೂತ್ರ ವಿಸರ್ಜನೆಯನ್ನೂ ಮಾಡುವರು ಎಷ್ಟೋ ಜನರಿಗೆ ಕಮರ ತೇಗು ಹಾಯುವವು, ಸೀನುಗಳು ಬರುವವು, ಕೇಕರಿಸಿ ಉಗುಳುವರು, ಮಲ ವಿಸರ್ಜನೆ ಓಕರಿಕೆಗಳೂ ಕೂಡ ಕೆಲವರ ನಿದ್ದೆಯಲ್ಲಿಯೇ ಸಾಗಿ ಹೋಗುವವು, ನಿದ್ದೆಗಣ್ಣಿನಲ್ಲಿ ಎಷ್ಟೋ ಜನರು ನೀರು ಬೇಡುವರು, ದುಸ್ವಪ್ನ ಕಂಡು ಬೆಚ್ಚಿ ಬೀಳುವರು ಕೆಲವರು ಒಳ್ಳೆಯ ಸ್ವಪ್ನ ಕಂಡು ಉಲ್ಲಸಿತರಾಗುವರು; ಕೆಲವರು ಗಾಢ ನಿದ್ರೆಯಲ್ಲಿ ಏನೊಂದರ ಜ್ಞಾನವಿಲ್ಲದಾಗಿ ಮಲಗುವರು

ಇತ್ಯಾದಿ ಬಗೆಯಿಂದ ನಿದ್ದೆಯ ವಿಲಾಸ ಮುಗಿದ ನಂತರ ಎಚ್ಚರಾಗುವರು ಸುಷುಪ್ತಿಯನ್ನು ನೀಗಿ ಜಾಗೃತದ ಬೆಳಕನ್ನು ಕಂಡು ಅದೆಷ್ಟೋ ಜನರು ಓದು–ವಾಚನಕ್ಕಾರಂಭಿಸುವರು ಕೆಲವರು -ಪ್ರಾತಃಸ್ಮರಣೆಯ ಪದ ಪದ್ಯ ಶ್ಲೋಕಗಳನ್ನು ಪಠಿಸುವರು ಹರಿಕೀರ್ತನಕ್ಕಾರಂಭಿಸುವರು, ಕೆಲವರ ಹಲವು ಬಗೆಯಿಂದ ಪಾಠ ಮಾಡಿದ್ದನ್ನು ಆವರ್ತಿಸಿಕೊ

ಳ್ಳುವರು. ಅನೇಕ ವಿದ್ಯೆ-ಕಲೆಗಳ ಶಿಕ್ಷಣ ಪಡೆಯುವರು, ಗಾಯನ ಕಲೆಯು ತಾನ-ಮಾನಕ್ಕನುಸರಿಸಿ ಹಾಡುವರು ಇಂತು ಹಿಂದಿನ ನಿದ್ದೆಯೆಲ್ಲ ಹೋಗಿ ಮುಂದೆ ಜಾಗೃತಿಯು ಉಂಟಾಗುವದು ಬಳಿಕ ಉದ್ಯೋಗ ವ್ಯವಸಾಯ ಬುದ್ಧಿಗಳಿಂದ ಜನರು ಪ್ರೇರಿತರಾಗುವರು ಆಗ ಮಾಯೆಯ ನಿದ್ದೆ ಮುಗಿದು ಸ್ವರೂಪದಲ್ಲಿ ಜಾಗೃತರಾದ ಸಾಧಕರೂ ಕೂಡ ಸಾಧನ ಮಾರ್ಗ ನಿರತರಾಗುವರು ಜ್ಞಾನಿಯು ತತ್ವಗಳ ಬಗೆಗೆ ವಿಚಾರ ಮಾಡಿ ಆ ತತ್ವಗಳಿಂದ ತಾನು ಹೊರತಾಗಿರುವೆನೆಂದು ತಿಳಿದು ತುರ್ಯಾವಸ್ಥೆಯ ಆಚೆಯ ಕಡೆಗೆ ಹೋಗಿ ಸೇರುವನು, ಪರಕ್ಕಿಂತಲೂ ಪರನಾಗುವನು, ಮತ್ತು ಆತ್ಮನಿವೇದನೆಯ ಭಕ್ತಿಯಿಂದ ಬ್ರಹ್ಮಸ್ವರೂಪತೆಯನ್ನು ಹೊಂದುವನು"

ಶ್ರೀ ರಾಮ || ೧೦ ಶ್ರೋತಾ ಅವಲಕ್ಷಣ ನಿರೂಪಣೆ || ಗುರುಗಳು ಶಿಷ್ಯರಿಗೆ—

"ಮಾನವನು ಯಾವದೊಂದು ಕಾರ್ಯವನ್ನು ವಹಿಸಿಕೊಂಡು ಉದ್ಯೋಗ ಮಾಡಹತ್ತಲು ನಡುವೆ ಏನಾದರೂ ಅಡೆತಡೆಗಳು ಉಂಟಾಗುವವು. ಆದರೂ ಅನುಕೂಲ ಕಾಲವಿದ್ದರೆ ಕಾರ್ಯವು ಸುಗಮವಾಗಿ ನೆರವೇರುವದು ಕಾರ್ಯವು ಕೊನೆಗಂಡಿತೆಂದರೆ ಕರ್ತಾರನ ಉತ್ಸಾಹವು ಇಮ್ಮಡಿಯಾಗುವದಲ್ಲದೆ ದಿನದಿನವೂ ಆತನಲ್ಲಿ ವಿಚಾರ ಶಕ್ತಿಯು ಬೆಳೆಯುವದು ಜನ್ಮವೆತ್ತ ಯಾವ ಪ್ರಾಣಿಗಾದರೂ ಕೆಲ ದಿನ ಅನುಕೂಲ ಕಾಲವು ಇದ್ದೇ ಇರುವದು ದಯಾವಂತ ದೇವನು ದುಃಖವನ್ನು ಕಳೆದು ಸುಖವನ್ನು ಕೊಡುವನು ಎಲ್ಲರಿಗೂ ಕಾಲವು ಅನುಕೂಲವಿದ್ದರೆ ಎಲ್ಲರೂ ಅರಸರಾಗಿ ಬಿಡುತ್ತಿದ್ದರು ಆದರೆ ದೇವನ ವಿಚಾರವು ಹಾಗಿಲ್ಲ ಆದರಿಂದಲೇ ಕೆಲವರಿಗೆ ಅನುಕೂಲ ಕಾಲವೂ ಕೆಲವರಿಗೆ ಪ್ರತಿಕೂಲ ಕಾಲವೂ ಇರುತ್ತದೆ. ಐಹಿಕ ಪಾರಲೌಕಿಕ ವಿಷಯದಲ್ಲಿ ವಿವೇಕವೊಂದು ಜಾಗೃತವಾಗಿದ್ದರೆ ದೇವಕೃಪೆಯಿಂದ ಸ್ವಾಭಾವಿಕವಾಗಿ ಏನಾದರೊಂದು ಮಹತ್ವದ ಕಾರ್ಯವು ಒದಗೀ

ತೀರುವದು  ಕೇಳದೆ ಎಂದೂ ತಿಳಿಯುವದಿಲ್ಲ ಹಾಗು ಕಲಿಯದೆ ವಿದ್ಯೆಯು ಎಂದೂ ಬರುವದಿಲ್ಲ  ಕೇಳಿ ಕೇಳಿದಂತೆ ತಿಳಿಯುತ್ತ ಹೋಗುವದು ಜ್ಞಾನ ವಾಗುತ್ತ ಹೋದಂತೆ ವೃತ್ತಿಯಲ್ಲಿ ಪಾವಿತ್ರ್ಯತೆ ಹೆಚ್ಚುತ್ತ ಹೋಗುವದು ಹಾಗು ಚಿತ್ತದಲ್ಲಿ ಸಾರಾಸಾರ ವಿಚಾರವು ಸ್ಫುರಿತವಾಗುವದು  ಶ್ರವಣ ವೆಂದರೆ ಕೇಳುವದು  ಹಾಗು ಮನನವೆಂದರೆ ಕೇಳಿದ್ದನ್ನು ಕುರಿತು ವಿಚಾರ ಮಾಡುವದು  ಈ ಶ್ರವಣ-ಮನನಗಳ ಯೋಗದಿಂದ ಮೂರೂ ಲೋಕ ಗಳ ಕಾರಭಾರ ನಡೆದಿದೆ  ಇನ್ನು ಶ್ರವಣಕ್ಕೆ ಹಲವು ಬಗೆಯ ವಿಕ್ಷೇಪ ಗಳು ಅಡ್ಡ ಬರುವವು  ಆ ವಿಕ್ಷೇಪಗಳ ವಿಚಾರವೇನಂದರೆ:—ಶ್ರವಣಾರ್ಥಿ ಗಳಾಗಿ ಮೊದಲಿನಿಂದ ಬರುತ್ತಿರುವ ಶ್ರೋತೃಗಳು ನಿರೂಪಣೆಯ ಸಮಯ ದಲ್ಲಿ ಏಕಾಗ್ರತೆಯುಳ್ಳವರಾಗುವರು  ಆದರೆ ನಡುವೇ ಹಲವು ಸಂಗತಿ ಗಳನ್ನು ಕೇಳಿ ತಿರುಗಾಡಿ ಬಂದದ್ದರಿಂದ ಅವನ ಮನಸ್ಸಿನಲ್ಲಿ ಅಲೆದಾಡು ವವು  ಪ್ರಸಂಗವನ್ನನುಲಕ್ಷಿಸಿ ವರ್ತಿಸುವವರು ತೀರ ಕಡಿಮೆ  ಇನ್ನು ಶ್ರವಣದಲ್ಲಿ ಬರುವ ವಿಕ್ಷೇಪಗಳಾವವೆಂದರೆ— ಶ್ರವಣಕ್ಕೆ ಕುಳಿತಾಗ ಶರೀ ರವೇ ಅಡ್ಡ ಬರುವದು  ಅಂದರೆ ಆಗ ಆಕಳಿಕೆ, ನಿದ್ರೆಗಳು ಉಂಟಾಗಿ ಶ್ರವಣಕ್ಕೆ ತೊಂದರೆಯನ್ನು ಕೊಡುವವು  ಶ್ರವಣಕ್ಕೆ ಕುಳಿತಾಗ ಕುಳಿತು ಕೊಳ್ಳಲು ಸರಿಯಾದ ಸ್ಥಾನವಿರದೆ ಹೋಗುವದೂ ಒಂದು ವಿಕ್ಷೇಪವಾ ಗಿರುವದು  ಮನಸ್ಸನ್ನು ಏಕಾಗ್ರತೆಯನ್ನಾಗಿಸಿಕೊಂಡು ಕುಳಿತರೂ ಮನಸ್ಸು ಚಲವಿಚಲವಾಗುವದೊಂದು ವಿಕ್ಷೇಪವು  ಮೊದಲು ಕೇಳಿ ದ್ದನ್ನು ಸ್ಮರಿಸಿಕೊಂಡು ಶರೀರವನ್ನು ಅದರಲ್ಲಿ ತತ್ಪರವನ್ನಾಗಿ ಮಾಡಿ ಕೊಳ್ಳಬೇಕು  ಆಗ ಮನಸಿನಲ್ಲಿ ಹಲವು ಕಲ್ಪನೆಗಳು ಹುಟ್ಟುವದುಂಟು ಆದರೂ ಕಿವಿಯ ಮೇಲೆ ಬಿದ್ದ ಸಂಗತಿಗಳನ್ನು ಚೆನ್ನಾಗಿ ತಿಳಿದುಕೊಂಡು ಅವುಗಳ ಮನನಮಾಡಿದರೆ ಮಾತ್ರ ನಿರೂಪಣೆಯು ಉಪಯೋಗವಾಗುವದು. ಇದಿರಲಿ,

ಮನಸ್ಸು ದೃಶ್ಯ ವಸ್ತುವಲ್ಲ  ಆದರೂ ಆದನ್ನು ಹಿಡಿದಿಡಲು ಬರು ವಂತಿರುವದು. ಆದ್ದರಿಂದ ಪ್ರತಿಯೊಬ್ಬನು ತನ್ನ ಮನಸ್ಸನ್ನು ತಾನೇ ಹಿಡಿದಿಟ್ಟುಕೊಳ್ಳಬೇಕು  ಹೀಗೆ ಮನಸ್ಸನ್ನು ಸಂಯಮಿಸಿ ವಿವೇಕದಿಂದ

ಅದನ್ನು ಅರ್ಥಾಂತರದಲ್ಲಿ ತೊಡಕಿಸಬೇಕು ಹೊಟ್ಟೆ ತುಂಬ ಉಂಡು ಶ್ರವಣಕ್ಕೆ ಕುಳಿತರೆ ನೀರಡಿಕೆಯಿಂದ ಜೀವವು ಅಂಜುವದು, ಆಗ ನೀರು ತರಿಸಿ ಗಟಗಟನೆ ಕುಡಿಯುವದು ತರುವಾಯ ಮುಳಮುಳಿ ಹತ್ತುವದು, ಕಡೆಗೆ ಶ್ರವಣ ಸ್ಥಾನದಿಂದ ಹೊರಟು ಹೋಗುವದು. ಕಮುರದೇಗುಗಳು ಹುಟ್ಟಿ ಆಯಾಸವೆನ್ನಿಸುವದು, ಗಾಳಿ ಕಟ್ಟಾಗಿ ತೊಂದರೆಯಾಗುವದು, ಮೇಲೆ ಮೇಲೆ ಮೂತ್ರ ವಿಸರ್ಜನೆಗೆ ಹೋಗುವದು, ಮಲ ವಿಸರ್ಜನೆಗಾಗಿ ಎಲ್ಲವನ್ನೂ ಬಿಟ್ಟು ಓಡುವದು, ದೃಷ್ಟಾಂತದಲ್ಲಿ ಏನಾದರೊಂದು ಅಪೂರ್ವ ಸಂಗತಿಯು ಬಂದರೆ ಶ್ರೋತೃವು ಅದರಲ್ಲಿಯೇ ಮನಸ್ಸನ್ನಿಟ್ಟು ಸಾಗಿ ಬಂದ ನಿರೂಪಣೆಯನ್ನು ಮರೆಯುವದು ನಿರೂಪಣೆ ನಡೆದಾಗ ಯಾವ ನಿಗಾದರೂ ದುಘ೯ಟನೆವೊದಗಲು ಶ್ರವಣವನ್ನು ಅಷ್ಟಕ್ಕೇ ನಿಲ್ಲಿಸಿ ಅವನ ಪರಾಮರಿಕೆಗಾಗಿ ಹೋಗುವದು, ಹೊಟ್ಟೆಯಲ್ಲಿ ವೇದನೆಯುಂಟಾಗುವದು, ಬೆನ್ನಿನಲ್ಲಿ ಶೂಲಿಯುತ್ಪನ್ನವಾಗುವದು, ಇನ್ನೂ ಹಲವು ಪೀಡೆ೯ಳಿಂದ ಶರೀರಕ್ಕೆ ಬಾಧೆಯುಂಟಾಗುವದು, ಅದರಿಂದ ಚಿತ್ತಚಂಚಲತೆಯುಂಟಾ ಗುವದು, ನೆರೆಯಲ್ಲಿ ಗೊಂದಲವೆದ್ದದ್ದನ್ನು ಕಂಡು ನಿರೂಪಣೆಯನ್ನು ಬಿಟ್ಟು ಹೋಗುವದು ಈ ಮುಂತಾಗಿ ಅವಲಕ್ಷಣಗಳು ಅವೆಷ್ಟೋ ಶ್ರವಣಕ್ಕೆ ಕುಳಿತ ಶ್ರೋತೃಗಳಲ್ಲಿ ಕಂಡು ಬರುವವು ಅದೆಷ್ಟೋ ಕಾಮುಕರ ದೃಷ್ಟಿಯು ನಿರೂಪಣೆಗೆ ಬಂದ ಸ್ತ್ರೀಯರ ಕಡೆಗೆ ಇರುವದು, ಕಳ್ಳತನದಿಂದ ನಿರೂ ಪಣೆಯ ಸ್ಥಳದಲ್ಲಿ ಸೇರಿ ಶ್ರವಣಕ್ಕೆ ಬಂದವರ ಪಾದರಕ್ಷೆಗಳನ್ನು ಕದಿಯು ವದು ವಕ್ತಾರನ ಹೇಳಿಕೆಯ ಅರ್ಥ ವಿಪರ್ಯಾಸ ಮಾಡಿಕೊಂಡು ಶ್ರೋತೃಗಳು ತಮ್ಮ ತಮ್ಮಲ್ಲಿ ಬೈಗಳು, ಹೊಡೆದಾಟ ನಡೆಯಿಸುವದೂ ಕೆಲವರು ದೀರ್ಘವಾಗಿ ಅಲ್ಲದ ಸಲ್ಲದ ಮಾತ ಗಳನ್ನಾಡುತ್ತ ಕೂಡ್ರುವದು ಹೊಟ್ಟೆಯ ಪಾಡಿಗಾಗಿ ಕೀರ್ತನೆ ಮಾಡುವ ಹರಿದಾಸನು ಶ್ರೋತೃಗಳ ಮೇಲೆ ಹರಿಹಾಯುವದು, ಸಭೆಯಲ್ಲಿ ಕೂಡಿದ ಹಲವು ಪಂಡಿತರಲ್ಲಿ ಮತ ದುರಾಗ್ರಹತೆಯುಂಟಾಗುವದು, ಅನ್ಯಾಯ ಪ್ರವರ್ತಕರು, ನೀತಿಭ್ರಷ್ಟರು ದೊಡ್ಡಸ್ತನದ ಹೆಮ್ಮೆಯಿಂದ ಬಡಬಡಿಸುವವರು, ಅಹಂಕಾರಮನ್ಯರು, ಕೋಪಿಷ್ಠರು ಇಂಥ ಹಲವು ಬಗೆಯ ಜನರು ಶ್ರೋತೃವರ್ಗದಲ್ಲಿ ಇರು ವದು; ಈ ಎಲ್ಲ ಅವಲಕ್ಷಣಗಳು ನಿರೂಪಣೆಗಾಗಿ ಕಲೆತ ಶ್ರೋತೃವೃಂದ

ದಲ್ಲಿ ಕಂಡು ಬರುವವು ಇವೆಲ್ಲವೂ ಶ್ರವಣಕ್ಕೆ ವಿಕ್ಷೇಪಗಳು ಬುದ್ಧಿವಂತರು ಪ್ರಸಂಗದಲ್ಲಿ ತಾವೇ ಮೊದಲು ತಮ್ಮ ಮೇಲೆ ಮೂರ್ಖತನವನ್ನು ಹೊತ್ತುಕೊಂಡು ಪ್ರಸಂಗದಿಂದುಂಟಾಗುವ ದುಷ್ಪರಿಣಾಮಗಳನ್ನು ತಡೆಗಟ್ಟಿ ನಿವಾರಿಸುವರು 'ತನಗಿಂತಲೂ ದೇವನು ಅಂದರೆ ಅಂತರಾತ್ಮನು ದೊಡ್ಡವನು' ಎಂಬ ವಿಚಾರವನ್ನು ಅರಿತುಕೊಂಡವನು ಜಗದಂತರವನ್ನು ಅಂದರೆ ಜನರ ಚಿತ್ತವನ್ನು ಸುಪ್ರಸನ್ನನಾಗಿ ಇರಿಸತಕ್ಕದ್ದು ಕೂಡಿದ ಸಭೆಯಲ್ಲಿ ಗೊಂದಲವೇಳಲು ಅದರ ಗೂಬೆಯು ಅಲ್ಲಿದ್ದ ಬುದ್ಧಿವಂತರ ತಲೆಯ ಮೇಲೇ ಮೊದಲು ಬಂದು ಕೂಡುವದು ಜನರ ಮನಸ್ಸನ್ನು ಕಾಯ್ದುಕೊಂಡು ಹೋಗದವನು ಬುದ್ಧಿವಂತನಲ್ಲ ವೈಗತ್ವದಿಂದ ವೈರಭಾವವು ಬೆಳೆಯುವದು, ಮತ್ತು ಅದು ದುಃಖ ಭೋಗಿಸಲು ಹಚ್ಚುವದು ಈ ಮಾತಿನ ಇಂಗಿತವು ಪ್ರಜ್ಞರಾದವರಿಗೆ ಗೊತ್ತಾಗಿ ಬಿಟ್ಟಿರುವದು ಆದ್ದರಿಂದಲೇ ಅವರು ತಮ್ಮ ಮನೋವೃತ್ತಿಯನ್ನು ತಮ್ಮ ಅಂಕಿತವಲ್ಲಿಟ್ಟುಕೊಳ್ಳುವರು ಅವರು ಕೀಳುತನವನ್ನು ತಮ್ಮ ಮೇಲೆ ತಂದುಕೊಳ್ಳುವದಿಲ್ಲ ಗೌರವಸ್ಥರನ್ನಿಸುವವರಲ್ಲಿ ಕ್ಷಮೆಯೂ ಶಾಂತಿಯೂ ಆವಶ್ಯವಾಗಿ ಇರತಕ್ಕದ್ದು. ಅವಗುಣಿಯಾದವನೊಬ್ಬನು ಸದ್ಗುಣವಂತನ ಬಳಿಗೆ ಹೋಗಿ ಕುಳಿತುಕೊಳ್ಳಲು ಆತನ ಅವಗುಣಗಳು ತೀವ್ರವೇ ಕಂಡು ಬರುವವು ವಿವೇಕಿಯಾದವನ ವರ್ತನೆಗಳೆಲ್ಲ ವಿವೇಕಪೂರ್ವಕವಾಗಿಯೇ ನಡೆಯುವವು ದೀರ್ಘ ಪ್ರಯತ್ನವು ಉಪಾಯದ ಪರ್ಯಾಯವಾಗಿರುವದು ಆದ್ದರಿಂದ ವಿವೇಕ ಬಲದಿಂದ ಹಲವು ಯತ್ನಗಳನ್ನು ಮಾಡಬೇಕು ಹೀಗೆ ಪ್ರಯತ್ನ ಮಾಡಿದವನ ಮಹಿಮೆಯು ಇನ್ನೊಬ್ಬರಿಗೆ ತಿಳಿಯದೆ ಆವನಿಗೇ ಮಾತ್ರ ತನ್ನ ಮಹಿಮೆ ತಿಳಿಯುವದು. ವಿವೇಕಿಯಾದವನು ದುರ್ಜನರೊಡನೆ ವಾದ ಬೆಳೆಸಲಾರನು, ಬಾಯ್ಬಡಕರ ಬಾಯಿಗೆ ಹತ್ತಲಾರನು. ಒಟ್ಟಿನ ಮೇಲೆ ಏನಾದರೂ ಆತನು ತನ್ನ ವಿವೇಕವನ್ನು ಬಿಡಲಾರನು ಉಪಾಯವು ನ್ಯಾಯದ ಪರ್ಯಾಯವು ಇದು ಮೂರ್ಖರಿಗೆ ತಿಳಿಯದು ಆ ಮೂರ್ಖರಿಂದಲೇ ಸಭೆಯು ದುಸ್ಥಿತಿಗಿಳಿಯುವದು ಆಗ ಬುದ್ಧಿವಂತರು ಸುಧಾರಿಸುವರು ಆ ಬುದ್ಧಿವಂತರು ತಾವೇ ಸಾಹಸ ಮಾಡುವರು, ತಾವೇ ಮಾಡಿ ತೋರಿಸುವರು. ಮತ್ತು ಜನರಿಂದ ಮಾಡಿ

ಸುವರು. ಜಗತ್ತಿನ ಮೇಲೆ ಅಸಂಖ್ಯಾತ ಜನರಿರುವರು ಆ ಜನರಲ್ಲಿಯೇ ಸಜ್ಜನರಿರುವರು. ಆ ಸಜ್ಜನರೇ ಪ್ರಾಣಿ ಮಾತ್ರಕ್ಕೆಲ್ಲ ಸಮಾಧಾನವಾಗುವಂತೆ ಕ್ರಿಯಾಪ್ರವೃತ್ತರಾಗುವರು ಆ ಸಜ್ಜನರಿಗೆ ಅನ್ಯರ ಮನೋಗತವನ್ನು ಅರಿತು ಕಾಯ್ದುಕೊಳ್ಳುವ ಎಲ್ಲ ಪ್ರಕಾರಗಳು ಗೊತ್ತಿರುವವು ಅವರಿಗೆ ವೇಳೆ ಪ್ರಸಂಗಗಳ ಅರಿವು ಇರುವದು, ಉರಿವೆದ್ದವರನ್ನು ಶಾಂತಪಡಿಸುವ ಹಲವು ಬಗೆಗಳು ಅವರಲ್ಲಿರುವವು ಇಂಥ ಸಜ್ಜನರ ವಿವೇಕ ಅಂದರೆ ಬುದ್ಧಿವಂತಿಕೆಯು ಮೇಲ್ತರದ್ದಾಗಿರುವದು ಆ ಸಜ್ಜನರ ಕ್ರಿಯಾ ಕುಶಲತೆಗಳು ಆದಾರಿಗೂ ತಿಳಿಯಲಾರವು ಅವರಿಂದಲೇ ಬಹು ಜನರಲ್ಲಿ ಕ್ರಿಯಾಪ್ರೇರಣೆಯುಂಟಾಗುವದು ಅವರಿಂದಲೇ ಅನೇಕ ಸಂಘ ಸಮುದಾಯಗಳು ಚೇತರಿಸಿ ಕ್ರಿಯಾಪ್ರವೃತ್ತವಾಗುವವು ಮತ್ತು ಆ ಸಜ್ಜನರು ಅನ್ಯರ ಮನೋಗತವನ್ನರಿಯುವರು, ಮಾನ ಪ್ರಸಂಗಗಳ ಸಮಯವನ್ನು ತಿಳಿದುಕೊಳ್ಳುವರು, ಸಂತಪ್ತರನ್ನು ಶಾಂತಗೊಳಿಸುವರು, ಇಂಥ ಜ್ಞಾನವುಳ್ಳವರೇ ಸಮರ್ಥ ಪದವಿಗೆ ಅರ್ಹರು ಅವರ ವಿವೇಕ-ವಿಚಾರಗಳೂ ಕೃತಿಗಳೂ ಇತರರಿಗೆ ಅಗಮ್ಯವು ಬಹು ಜನರ ಚಾಲಕತ್ವವೂ ಅನೇಕ ಮಂಡಲಗಳ ಚಲನವಲನೆಯೂ ಸಮರ್ಥಪದ ಪ್ರಾಪ್ತವಾದ ಮಹಿಮನ ವಿವೇಕದಿಂದಲೇ ಸಾಗುವವು ಇನ್ನು ಸಾಮಾನ್ಯಬೋಧೆಯೆಂದರೆ—

ಏಕಾಂತದಲ್ಲಿ ವಿವೇಕವನ್ನು ವ್ಯಾಪ್ತಿಗೊಳಿಸಬೇಕು ಧಾರಣಾವೃತ್ತಿಯಿಂದ ಜಗದೀಶನನ್ನು ಹಿಡಿದುಕೊಳ್ಳಬೇಕು ಜನರಲ್ಲಿ ಸ್ವಕೀಯ ಪರಕೀಯರೆಂಬ ಭಿನ್ನ ಭಾವನೆಯಿರಕೂಡದು ಮತ್ತೂ ಹೇಳುವದೇನೆಂದರೆ—ಏಕಾಂತದಲ್ಲಿಯೇ ವಿವೇಕಕ್ಕೆ ಸ್ಥಾನವುಂಟು, ಏಕಾಂತದಲ್ಲಿಯೇ ಯತ್ನಗಳು ಕೈಗೂಡುವದುಂಟು ಏಕಾಂತದಲ್ಲಿಯೇ ಬ್ರಹ್ಮಾಂಡ ವಿಷಯದ ತರ್ಕವು ನಿಶ್ಚಿತ ಸ್ವರೂಪ ಪಡೆಯುವದು ಆದ್ದರಿಂದ ಏಕಾಂತದಲ್ಲಿ ಸ್ಮರಣೆ ಮಾಡತಕ್ಕದ್ದು ಅಂದರೆ ಅಂತರಿಸಿದ ನಿಧಾನವು ಕೈಗೆ ಸಿಗವದು ಆ ನಿಧಾನವೆಂದರೆ ಅಂತರಾತ್ಮನು ಅವನೊಡನೆ ಬ್ರಹ್ಮಾಂಡದ ತುಂಬೆಲ್ಲ ಸಂಚರಿಸಬೇಕು ಏಕಾಂತಕ್ಕೆ ಮನವೊಪ್ಪಿದವನಿಗೆ ಎಲ್ಲರಿಗಿಂತ ಮೊದಲೇ

ಜ್ಞಾನವಾಗುವದು. ಆದ್ದರಿಂದ ಈ ಏಕಾಂತದ ಹೊರತು ಶ್ರೇಷ್ಠತ್ವ ದೊರಕುವ ಅನ್ಯ ಮಾರ್ಗಗಳೇ ಇಲ್ಲ”

ಇತಿ ದಾಸಬೋಧೆಯ ೧೯ನೆಯ ದಶಕ ಮುಗಿದುದು





॥ ಜಯ ಜಯ ರಘುವೀರ ಸಮರ್ಥ ॥

## ೧೯ನೆಯ ದಶಕ (ಶಿಕವಣ ನಾಮ)

ಶ್ರೀ ರಾಮ ಸಮರ್ಥ|| ೧ಲೇಖನ ಕ್ರಿಯಾನಿರೂಪಣ|| ಶ್ರೀ ಗುರುಗಳು ಶಿಷ್ಯರಿಗೆ ಭೋಧಿಸುವದೆಂತೆಂದರೆ—

'ಬ್ರಾಹ್ಮಣರು ಬಾಲಬೋಧೆಯ ಅಕ್ಷರಗಳನ್ನು ತಿದ್ದಿ ಸುಂದರವಾಗಿ ಬರೆಯಬೇಕು ಅವನ್ನು ಓದಿ ನೋಡುವ ಚತುರರಿಗೆ ಆನಂದವಾಗುವ ಬರೆಯಬೇಕು ಅಕ್ಷರಗಳನ್ನು ಕರಿಯ ಮಸಿಯಿಂದ ಚಂದವೂ, ಸರಳವೂ, ಆಗುವಂತೆ ಬಿಡಿಬಿಡಿಯಾಗಿ ಬರೆಯಬೇಕು ಮುಕ್ತಾಹಾರದಂತೆ ಅಕ್ಷರಗಳ ಸಾಲುಗಳು ಚಂದವಾಗಿ ಇರಬೇಕು ಪ್ರತಿಯೊಂದು ಅಕ್ಷರವು ನೀಟಾಗಿ ಬರೆಯಲ್ಪಡಬೇಕು ಎರಡು ಅಕ್ಷರಗಳ ನಡುವೆ ಸಮನಾದ ಅಂತರವಿರಬೇಕು ಅಕ್ಷರಗಳ ಕೋಚು-ಮಾತ್ರೆಗಳು, ದೀರ್ಘ ಅಕಾರಾವಳಿಗಳು ಚನ್ನಾಗಿ ಇರಬೇಕು ಗ್ರಂಥದ ಮೊದಲನೆಯ ಅಕ್ಷರದಿಂದ ಗ್ರಂಥ ಸಮಾಪ್ತಿಯವರಗೆ ನಿರೀಕ್ಷಿಸಲು ಇಡೀ ಗ್ರಂಥವು ಒಂದೇ ಲೆಕ್ಕಣಿಕೆಯಿಂದ ಮುಗಿದಿದೆ ಎಂಬ ಭಾಸವಾಗಬೇಕು ಅಕ್ಷರಗಳು ಮಸಿಯಿಂದ ಎದ್ದು ಕಾಣಬೇಕು, ಲೆಕ್ಕಣಿಕೆ ಸರಿಮಾಡಿರಬೇಕು ಎಲ್ಲ ಸಾಲುಗಳ ಬಾಗುಗಳು ಒಂದೇ ಸವನೇ ಇರಬೇಕು ಸಾಲಿಗೆ ಸಾಲು ಕೂಡಬಾರದು, ಅಕಾರಾವಳಿ ಮಾತ್ರೆಗಳು ಒಂದು ಇನ್ನೊಂದರ ಮಾರ್ಗದಲ್ಲಿಬರಬಾರದು ಕೆಳಗಿನ ಹಾಗು ಮೇಲಿನಸಾಲುಗಳು ಒಂದರ ಹತ್ತರ ಇನ್ನೊಂದು ಬರಬಾರದು ಅಕ್ಷರಗಳು ಉದ್ದಾಗಿ ಇರಕೂಡದು ಗ್ರಂಥದ ಪುಟಗಳನ್ನು ಮೊದಲು ಸೀಸ ಪೆನ್ಸಿಲಿನಿಂದ ನಿಯಮಿತ ಸ್ಥಾನದಲ್ಲಿಯೇ ರೇಖಿಸಬೇಕು ಸಾಲುಗಳ ಅಂತರವು ಹೆಚ್ಚುಕಡಿಮೆಯಾಗಿ ನಿರೀಕ್ಷಿಸುವವರಿಗೆ ತೊಂದರೆಯಾಗದಂತೆ ಲೇಖನವಿರಬೇಕು ಬರೆದದ್ದರಲ್ಲಿ ಅಶುದ್ಧ ಹಾಗು ತಪ್ಪು ಅಕ್ಷರಗಳು ಇರಕೂಡದು ಅಕ್ಷೇಪ ಬರುವಂತೆ ತಪ್ಪಾಗಿ ಬರೆಯಬಾರದು ಚಿಕ್ಕಮಕ್ಕಳೂ ಕೂಡ ದಕ್ಷತೆಯಿಂದ ತಪ್ಪದೆ ಬರೆಯಬೇಕು ಅವರ ಬರಹ ನೋಡಿದ ಕೂಡಲೆ ಓದುವವರಿಗೆ ಮುದ್ದು ಉಂಟಾಗಬೇಕು. ಪ್ರಾಯದಲ್ಲಿ ಸಣ್ಣವಾಗಿ ಬರೆದಅಕ್ಷರಗಳು ಮುಪ್ಪಿನಲ್ಲಿಓದ

ಲಿಕ್ಕೆ ಬರಲಾರವು ಆದ್ದರಿಂದ ತೀರ ಸಣ್ಣವೂ ತೀರ ದೊಡ್ಡವೂ ಆದ ಅಕ್ಷರಗಳನ್ನು ಬರೆಯಬಾರದು ಮಧ್ಯಮ ತರಗತಿಯವಿರಬೇಕು ಕಾಗದದ ಸುತ್ತಲೆಲ್ಲ ಮಾರ್ಜನು ಬಿಟ್ಟು ನಡುವೆ ಎದ್ದು ಕಾಣುವಂತೆ ಬರೆಯಬೇಕು ಕಾಗದದ ಮೇಲೆ ಕೈಯಿಂದ ತಿಕ್ಕಿ ಒರಿಸಿದರೂ ಅಕ್ಷರಗಳು ಮಸಮುಸಕಾಗಬಾರದು ಈ ಬಗೆಯಾಗಿ ಗ್ರಂಥ ಬರೆಯಬೇಕು ಆ ಗ್ರಂಥ ನೋಡಿವದರಿಗೆ ಒಳ್ಳೇ ಮನಹರವುಂಟಾಗಬೇಕು ಮತ್ತು ಅದರಲ್ಲಿ ಇಂಥ ಪುಸ್ತಕಗಳನ್ನು ಪುನ ಪುನ ನೋಡುವ ಲವಲವಿಕೆಯುಂಟಾಗಬೇಕು ದೇಹವನ್ನು ಶ್ರಮಗೊಳಿಸಿ ಗ್ರಂಥ ಬರೆದು ಮಿಗಿಲಾದ ಕೀರ್ತಿ ಪಡೆಯಬೇಕು ಬರೆದ ಗ್ರಂಥ ಓದ ವದರಿಂದ ಜನರಲ್ಲಿ ಏನಾದರೊಂದು ಅಭ್ಯಾಸದ ಗುಣವುಂಟಾಗುವಂತೆ ಲೇಖನ ಶೈಲಿಯಿರಬೇಕು ಒಳ್ಳೇ ಜಿಗುಟಾದ ಕಾಗದ ತಕ್ಕೊಂಡು ಅದನ್ನು ಸರಿಯಾಗಿ ವ ಡಿಕೆಗೊಳಿಸಬೇಕು ಬರೆಹ ಸಾಮಗ್ರಿಗಳನ್ನೆಲ್ಲ ಸರಿಪಡಿಸಿ ಇಟ್ಟುಕೊಳ್ಳಬೇಕು ಗ್ರಂಥವನ್ನು ಸಿದ್ಧಪಡಿಸಿಕೊಳ್ಳಲಿಕ್ಕೆ ಆವಶ್ಯಕ ಪದಾರ್ಥಗಳು ಅಂದರೆ ಚಾಕು, ಕತ್ತರಿ, ರಟ್ಟುಗಳು, ಹೊಲಿಯುವ ಸಾಮಾನುಗಳು, ಬಣ್ಣಗಳು, ಮಸಿ ಗುಳಿಗೆಗಳು, ಗಲಗು ಸೀಸ ಪೆನ್ಸಿಲುಗಳು, ರೂಲಪಟ್ಟಿ, ಉಸುಕು, ಮಸಿ ಮಾಡಲಿಕ್ಕೆ ಬೇಕಾಗುವ ಅಳಲೆಕಾಯಿ ಮುಂತಾದವು ಇನ್ನೂ ಬೇಕಾದ ಪದಾರ್ಥಗಳನ್ನು ಸಂಗ್ರಹಿಸಿಕೊಳ್ಳತಕ್ಕದ್ದು ಮಸಿಯ ವಡಿಗಳನ್ನು ಕಟ್ಟಿ ಒಣಗಿಸಿ ಇಟ್ಟುಕೊಳ್ಳಬೇಕು ಈ ಮೇಲಿನ ಸಾಮಾನುಗಳನ್ನು ಉಪಯೋಗಿಸಿಕೊಂಡು ಗ್ರಂಥ ಲೇಖನ ಕ್ರಿಯೆಯನ್ನು ಆರಂಭಿಸಿ ಮುಕ್ತಾಯಗೊಳಿಸಬೇಕು ಗ್ರಂಥದ ಕೊನೆಯಲ್ಲಿ 'ಇತಿಶ್ರೀ' ಎಂಬದಾಗಿ ಬರೆಯಬೇಕು ಈ ಎಲ್ಲ ಪ್ರಕಾರದಿಂದ ಸಿದ್ಧವಾದ ಗ್ರಂಥಗಳನ್ನು ಭದ್ರತೆಯಾಗಿರಿಸಿಕೊಳ್ಳಬೇಕು ಗ್ರಂಥದ ಮೇಲೆ ಅನೇಕ ಚಿತ್ರಗಳನ್ನು ಬಣ್ಣ ಬಣ್ಣಗಳನ್ನುಪಯೋಗಿಸಿ ರೇಖಿಸಿರಬೇಕು ಕೆಂಪು ಬಣ್ಣದ ಜಿಗುಟಾದ ಅರಿವೆ ಹಚ್ಚಿ ಸಿದ್ಧಗೊಳಿಸಿದ ರಟ್ಟನ್ನು ಗ್ರಂಥದ ಕಟ್ಟಿಗಾಗಿ ಉಪಯೋಗಿಸಬೇಕು ಗ್ರಂಥವನ್ನು ಉತ್ತಮ ವಸ್ತ್ರಗಳಲ್ಲಿ ಕಟ್ಟಿ ಪೆಟ್ಟಿಗೆ-ಸಂದುಕಗಳಲ್ಲಿ ಇಡಬೇಕು ಮೇಲೆ ಮೇಣದ ಅರಿವೆಯನ್ನು ಸುತ್ತಿ ಜಾಗ್ರತವಾಗಿಡಬೇಕು "

ಶ್ರೀ ರಾಮ॥ ೨ ವಿವರಣ ನಿರೂಪಣೆ॥ ಗುರುಗಳು ಶಿಷ್ಯರಿಗೆ—

"ಈ ಮೊದಲು ಲೇಖನದ ಪ್ರಕಾರವನ್ನು ಹೇಳಿದೆವು ಇನ್ನು ಬರಹದಲ್ಲಿ ತೋರುವ ಅರ್ಥ ಭೇದಗಳನ್ನು ಹೇಳುವೆವು ಎಲ್ಲ ಭೇದಗಳನ್ನು ಮೊದಲು ತಿಳಿದುಕೊಳ್ಳಬೇಕು ಬೇರೆಬೇರೆ ಶಬ್ದಗಳು, ಶಬ್ದಗಳಿಗಿರುವ ಭಿನ್ನಭಿನ್ನ ಅರ್ಥಗಳು, ಬೇರೆಬೇರೆ ಬಗೆಯ ಮುದ್ರಾ ಪ್ರಬಂಧಗಳು, ಇವೆಲ್ಲವನ್ನು ತಿಳಿದುಕೊಳ್ಳಬೇಕು ಹಲವು ಸಂಶಯಗಳು ಅವುಗಳಿಗೆ ತಕ್ಕ ಸಮಾಧಾನಗಳು, ಅನುಭವದಿಂದ ಸಾಕ್ಷಾತ್ಕಾರದ ಸಂಗತಿಗಳು ಇವುಗಳನ್ನು ಶ್ರೋತೃಗಳಿಗೆ ಮನಗಾಣಿಸಿ ಕೊಡಬೇಕು ಅವನ್ನು ಶ್ರವಣ ಮಾಡಿದ ಆ ಶ್ರೋತೃಗಳಿಗೆ ಚಮತ್ಕಾರವೆನ್ನಿಸಬೇಕು, ಪೂರ್ವ ಪಕ್ಷ ಹಾಗು ಸಿದ್ಧಾಂತಗಳನ್ನು ಸ್ಪಷ್ಟವಾಗಿ ಹೇಳಬೇಕು ಅವರಿಗೆ ತಮ್ಮ ಅನುಭವದ ಜ್ಞಾನ ಹೇಳಬೇಕು. ನಿರರ್ಥಕವಾದ ಶಾಬ್ದಿಕ ಜ್ಞಾನ ಹೇಳಬಾರದು ಅನುಭವವಿಲ್ಲದೆ ಪ್ರಪಂಚ ಪರಮಾರ್ಥಗಳೆರಡರಲ್ಲಿಯು ಎಲ್ಲವೂ ಕೇವಲಭ್ರಮೆಗಳಾಗಿವೆ ಒಲೆಯ ಮೇಲೆ ಮೇಲಿನಿಂದ ಬಿದ್ದ ಇಲ್ಲಣ ಮೊದಲಾದ ಹೊಲಸು ಪದಾರ್ಥಗಳನ್ನು ಒಲೆಯೊಳಗಿನ ಬೆಂಕಿಯು ಸುಡುವದಿಲ್ಲ ಅದರಂತೆಯೇ ಸಂಶಯಿತ ಜ್ಞಾನವನ್ನು ಜ್ಞಾನಾಗ್ನಿಯು ಸುಡುವದಿಲ್ಲ ಪರರ ಉದ್ದೇಶಗಳನ್ನು ಅರಿತುಕೊಂಡು ಮಾತಾಡಬೇಕು ಅವರ ಮನೋಗತವನ್ನರಿಯಬೇಕು ಇದೇ ಚಾತುರ್ಯದ ಮುಖ್ಯ ಲಕ್ಷಣವು ಚತುರತೆಯಿಲ್ಲದ ವಿದ್ಯೆಯು ನಿರರ್ಥಕವು ಸಭೆಯು ಸರಿಯಾಗಿ ಸಾಗದಿದ್ದರೆ ಸಮಾಧಾನವಾಗುವದಿಲ್ಲ ಜನರ ಹಲವು ಮಾತುಗಳನ್ನು ಕೇಳಿಕೊಳ್ಳಬೇಕು ಆದರೆ ಅವರ ಮಾತಿನಲ್ಲಿ ತಾನು ಮಾತಾಡಕೂಡದು ಸ್ವಲ್ಪದರಿಂದ ಜನರ ಹೃದಯವನ್ನು ತಿಳಿದುಕೊಳ್ಳಬೇಕು ಬಾಹ್ಯಾತ್ಮಿನ ಜನರೊಂದಿಗೆ ಬೆರೆಯಬಾರದು ದುರಾಗ್ರಹಿಗಳೊಡನೆ ಶಬ್ದವಾದ ಮಾಡಬಾರದು, ತನ್ನ ಜ್ಞಾನದ ದೆಸೆಯಿಂದ ಹಲವರಿಗಾಗ ವ ಸಮಾಧಾನಕ್ಕೆ ವ್ಯತ್ಯಯ ತರಕೊಡದು ತಾನು ಅರಿಯೆನೆಂಬುದನ್ನು ಬಿಡಬಾರದು ಹಾಗು ತನ್ನ ಅರಿವಿನಿಂದ ಮೆರೆಯಬಾರದು ಸವಿ ನುಡಿಗಳಿಂದಲೇ ಜನರ ಹೃದಯ ಕರಗುವಂತೆ ನುಡಿಯಬೇಕು ಅಂದರೆ ಅವರನ್ನು ತನ್ನ ಹಿಡಿತದಲ್ಲಿ ತಕೊಳ್ಳಬೇಕು. ಯೋಗ್ಯ ಕಾಲವನ್ನು ತಿಳಿದುಕೊಳ್ಳಬೇಕು ತನ್ನ ಅಭಿಪ್ರಾಯಕ್ಕೆ ಹಲವರು ವಿರೋಧಿಸಿದರೆ ಅವರೊಡನೆ ಕಲಹ ಬೆಳಿಸಬಾರದು ಒಂದು ವೇಳೆ ತನ್ನ ಅಭಿ

ನ್ಯಾಯವೇ ಸರಿಯಿದ್ದರೆ ಅದನ್ನು ಆಗ್ರಹದಿಂದ ಪ್ರತಿಪಾದಿಸಿ ಸಭೆಯನ್ನು ಮುರಿಯಬಾರದು ಏನಾದರೊಂದನ್ನು ಶೋಧಿಸುವಲ್ಲಿ ಆಲಸ್ಯವಿರಕೂಡದು, ನೀಚರಲ್ಲಿ ಕುಳಿತುಕೊಳ್ಳಬಾರದು, ಒಂದು ವೇಳೆ ಕುಳಿತರೂ ಯಾರ ಮೇಲೂ ಮಿಥ್ಯವಾದ ಆರೋಪದೋಷಗಳನ್ನು ಇಡಬಾರದು ದು ಖಾನ್ವಿತರ ಅಂತರ್ವೇದನೆಯನ್ನು ಅರಿತುಕೊಳ್ಳಬೇಕು, ತನ್ನ ಕೈಲಾದಮಟ್ಟಿಗೆ ಅದನ್ನು ನಿವಾರಿಸಲು ಯತ್ನಿಸಬೇಕು ಸಭೆಯಲ್ಲಿ ತನ್ನ ಹೇಳಿಕೆಯ ಸತ್ಯತೆಯ ಬಗೆಗೆ ಅವಶ್ಯ ಬಿದ್ದರೆ ಗ್ರಂಥ ಆಧಾರವನ್ನು ಶ್ರೋತೃಗಳಿಗೆ ಓದಿ ಹೇಳಬೇಕು ಆದರೆ ಆ ಓದುಸ್ವಲ್ಪದರಲ್ಲಿ ಇರಬೇಕು ಹಾಗು ಅದನ್ನು ಕೇಳಿದವರಲ್ಲಿ ತಾವೂ ಓದಬೇಕೆಂಬ ಲವಲವಿಕೆ ಹುಟ್ಟಬೇಕು ಸಭೆಯ ನಟ್ಟನಡುವೆ ಹೋಗಿ ಕೂಡ್ರಬಾರದು ಮುಕ್ತದ್ವಾರವಿದ್ದ ಸಭೆಯ ಸಮಾರಾಧನೆಗೆ ಹೋಗಬಾರದು ಯಾಕಂದರೆ ಆದರಿಂದ ತನ್ನ ಕಡಿಮೆತನವು ವ್ಯಕ್ತವಾಗುವದು ಮೂರ್ಖರೆದುರು ತನ್ನಲ್ಲಿಯ ಉತ್ತಮಗಳನ್ನು ಪ್ರಕಟಿಸಲ್ಕೆ ಹೋಗಬಾರದು ಸಜ್ಜನರೊಂದಿಗೆ ಸ್ನೇಹ ಬಳಿಸಿ ಮಾತಾಡಬೇಕು ಉಪಾಸನೆಯ ಬೋಧೆಯಾದಂತೆ ಮಾತಾಡಬೇಕು ಎರಡನೇಯವರಲ್ಲಿ ಇರುವ ಉಪಾಸನೆಯ ಪ್ರೀತಿಯನ್ನು ಅನುಲಕ್ಷಿಸಿ ಮಾತಾಡಬೇಕು ಎಲ್ಲರಿಗೂ ಸಂತೋಷ ಉಂಟಾಗುವಂತೆ ವರ್ತಿಸಬೇಕು ಎಲ್ಲರೊಡನೆ ಸರಿಯಾಗಿ ಒಳ್ಳೆಯತನದಿಂದ ನಡೆಯಬೇಕು. ಬೇರೆ ಬೇರೆ ಕಡೆಯಲ್ಲಿ ಉತ್ತಮವಾದವುಗಳನ್ನು ಶೋಧಿಸಿ ಸಂಗ್ರಹಿಸಿಕೊಂಡು ತನ್ನ ಊರನ್ನು ಪ್ರವೇಶಿಸಬೇಕು. ಪ್ರಾಣಿ ಮಾತ್ರರಲ್ಲೆಲ್ಲ ತನ್ನ ವಿಷಯಕ್ಕೆ ಆತ್ಮೀಯ ಭಾವನೆ ಹುಟ್ಟುವಂತೆ ಮಾತುಕತೆಯನ್ನಾಡಬೇಕು ಬಡವ—ಬಲ್ಲಿದ, ಉಚ್ಚ-ನೀಚ ಇತ್ಯಾದಿ ದ್ವಂದ್ವ-ಭೇದವಿಲ್ಲದೆ ಸರ್ವರೊಡನೆ ವರ್ತಿಸಿ ಅವರವರ ಆತ್ಮಗಳಿಗೆ ಸುಖವನ್ನುಂಟು ಮಾಡಬೇಕು ಸೂರ್ಯಾಸ್ತ ಸಮಯಕ್ಕೆ ಹೋಗಿ ಅಪರಿಚಿತವಾಗಿರುವ ಹಳ್ಳಿಯಲ್ಲಿ ಪ್ರವೇಶ ಮಾಡಬಾರದು ಜಗತ್ತಿನಲ್ಲಿ ಶತ್ರುಮಿತ್ರಗಳನ್ನು ದೊರಕಿಸಿಕೊಡುವ ಸೂತ್ರವೆಂದರೆ ನಮ್ಮ ನಾಲಿಗೆಯು, ನಮ್ಮ ಸವಿಮಾತುಗಳಿಂದ ಯೋಗ್ಯ ಸ್ಥಾನವನ್ನು ಶೋಧಿಸಿ ಅಲ್ಲಿ ವಸತಿ ಮಾಡಬೇಕು. ಎಲ್ಲಿಯಾದರೂ ಹರಿಕಥೆ ನಡೆದಲ್ಲಿ ಹೋಗಿ ಅಲ್ಲಿ ದೂರದಲ್ಲಿ ದೀನನಂತೆ ಕುಳಿತುಕೊಳ್ಳಬೇಕು ಅಲ್ಲಿ ನಡೆದ ಎಲ್ಲ ಕಥೆಯನ್ನು ಕೇಳಿ ಹೃದಯದಲ್ಲಿರಿಸಿ

ಕೊಂಡು ಬರಬೇಕು ಅಲ್ಲಿ ಒಳಿತಾಪದ್ದಾವುದು ? ವ್ಯಾಪಕವಾವುದು ? ಇವೆಲ್ಲವು ತಿಳಿದುಬರುವವು. ಇಷ್ಟೆಲ್ಲ ತಿಳಿದ ಮೇಲೆ ಅಲ್ಲಿ ಮೆಲ್ಲ ಮೆಲ್ಲನೆ ಪ್ರವೇಶಿಸಬೇಕು ಎಲ್ಲದರಲ್ಲಿ ಶ್ರವಣವು ಹೆಚ್ಚಿನದಾಗಿರುವದು ಮನನವು ಅದಕ್ಕಿಂತಲೂ ಹೆಚ್ಚಿನದು ಆದ್ದರಿಂದ ಇವೆರಡರಿಂದಲೂ ಜನರಿಗೆ ರುಚಿಯು ಹೆಚ್ಚಾಗಿ ಅವರು ಸಂತೋಷಗೊಳ್ಳುವರು ಧೋರಣೆಯಿಂದ ಎಲ್ಲವನ್ನೂ ತಿಳಿದುಕೊಳ್ಳಬೇಕು ಶ್ರೋತೃಗಳ ಮನಸ್ಸಿಗೆ ತನ್ನ ಮನಸ್ಸನ್ನು ಪರಿಚಯ ಮಾಡಿಕೊಡಬೇಕು ಹೀಗೆ ಪರಿಚಯವಾಗದಿದ್ದರೆ ಎಲ್ಲ ಶ್ರಮವೂ ನಿರರ್ಥಕವಾಗುವದು

ಶ್ರೀ ರಾಮ || ೩ ಕರಂಟೆ ಲಕ್ಷಣ ||ಗುರುಗಳು ಶಿಷ್ಯರಿಗೆ—

" ಇನ್ನು ಮಾನವನಲ್ಲಿ ಇರಬಾರದಾದ ದರಿದ್ರ ಲಕ್ಷಣಗಳನ್ನು ಹೇಳುವೆವು ಚಿತ್ತಗೊಟ್ಟು ಕೇಳಬೇಕು ಈ ದುಷ್ಟ ಲಕ್ಷಣಗಳನ್ನು ತ್ಯಾಗ ಮಾಡಲು ನಿರಾಯಾಸವಾಗಿ ಭಾಗ್ಯವಂತನ ಲಕ್ಷಣಗಳು ತಮಗೆ ತಾವೇ ಪ್ರಾಪ್ತವಾಗುವವು ಪಾಪಗಳಿಂದ ದರಿದ್ರತನವು ಬಂದೊದಗುವದು,ದಾರಿದ್ರ್ಯವು ಬಂದೊಡನೆ ಪಾಪ ಕ್ರಿಯೆಗಳು ಹೆಚ್ಚಾಗುವವು ಆ ದಾರಿದ್ರ್ಯ ಲಕ್ಷಣಗಳು ಯಾವವೆಂದರೆ-

ಆಲಸ್ಯತನವು ದರಿದ್ರನಿಗೆ ಬಹಳೇ ನೇರುವದು. ಯತ್ನ-ಪ್ರಯತ್ನಗಳು ಆತನಿಗೆ ರುಚಿಸುವದಿಲ್ಲ, ಅಧರ್ಮದ ಕಡೆಗೆ ಅವನ ಚಿತ್ತವು ಓಡುತ್ತಿರುವದು, ಅವನು ಸತತವೂ ನಿದ್ರಾಸಕ್ತನಾಗಿಯೂ ಭ್ರಮಿಷ್ಠನಾಗಿಯೂ ವರ್ತಿಸುವನು ಮನಬಂದಂತೆ ವ್ಯರ್ಥ ಮಾತುಗಳಿನ್ನಾಡುವನು ಯಾರ ಮನೋಗತವೂ ಆತನಿಗೆ ತಿಳಿಯದು ಓದು ಬರಹಗಳು ಅವನಿಗೆ ಬರಲಾರವು ವ್ಯವಹಾರವೂ ಲೆಕ್ಕ ಪತ್ರಗಳ ಜ್ಞಾನವೂ ಅವನಿಗಿರುವದಿಲ್ಲ ಧಾರಣಾಶಕ್ತಿಯು ಮೂಲತಃ ಅವನಲ್ಲಿರುವದಿಲ್ಲ ಕಳೆದುಕೊಳ್ಳುವದು, ಚೆಲ್ಲುವದು, ಕೆಡಿಸುವದು, ಒಡೆಯುವದ, ಮರೆಯುವದು, ತಪ್ಪುವದು ಈ ಬಗೆಯಾಗಿ ಆ ದರಿದ್ರನಗೆ ಮನೋವೃತ್ತಿಗಳುಂಟಾಗುವದು ಅವನಿಗೆ ಸತ್ಸಂಗತಿಯು ಪ್ರೀತಿಯೆನ್ನಿಸುವದಿಲ್ಲ ದುಷ್ಟರೂ ದೂರಾಚಾರಿಗಳೂ ನೀಚರೂ ಪಾಪಿಗಳೊ ಆದವರ ಸ್ನೇಹ ಗಳಿಸಿಕೊಳ್ಳುವದಕ್ಕಾಗಿಯೇ ಆತುರ ಪಡುವನು ಕಂಡ ಕಂಡವರೊಡನೆ ಕಲಹ, ತುಡುಗು,

ಪರರ ಹಾನಿಯನ್ನು ಮಾಡುವ ಮನಸ್ಸು, ಸುಲಿಗೆ ಇವೆಲ್ಲವನ್ನು ಆತನು ಕೈಕೊಳ್ಳುವನು ಅವನಲ್ಲಿ ಹಿಂದು ಮುಂದಿನ ವಿಚಾರವಿರುವದಿಲ್ಲ ನ್ಯಾಯ ನೀತಿಗಳ ಅರಿವು ಇರುವದಿಲ್ಲ ಪರರಿಗೆ ಮೋಸ ಮಾಡುವ ಬುದ್ಧಿಯು-ಅವನಲ್ಲಿ ಇರುವದು ಅವನ ಶರೀರವು ಆಲಸ್ಯಕ್ಕೆ ವಶವಾಗಿರುವದರಿಂದ ಹೊಟ್ಟೆ ತುಂಬಿಕೊಳ್ಳುವ ಉದ್ಯೋಗ ಕೈಕೊಳ್ಳದಾಗುವನು ಉಡು-ತೊಡಲಿಕ್ಕೆ ಅರಿವೆ ಅಂಚಡಿಗಳಿಂದ ವರ್ಜಿತನಾಗುವನು, ಸದಾವಕಾಲವೂ ಡೊಕ್ಕೆಯನ್ನು ತುರಿಸಿಕೊಳ್ಳುತ್ತ ಬಿದ್ದಲ್ಲಿಯೇ ಹೊರಳಾಡಿ ನಿದ್ದೆ ಹೋಗುವನು, ಇವೆಲ್ಲವೂ ಆ ದರಿದ್ರನ ಲಕ್ಷಣಗಳಾಗಿವೆ ಅವನಿಗೆ ಜನರ ಸ್ನೇಹ ಸಂಪಾದಿಸಲಿಕ್ಕೆ ಬರಲಾರದು, ತನ್ನ ಬಿರಸು-ನುಡಿಗಳಿಂದ ಪರರ ಮನಸ್ಸನ್ನು ನೋಯಿಸುವನು ತನ್ನ ಮೂರ್ಖತನದಿಂದ ಅವನು ಯಾಗನ್ನೂ ಲೆಕ್ಕಿಸುವದಿಲ್ಲ ಒಳ್ಳೆಯುವರ ಗುಂಪಿನಲ್ಲಿ ಸೇರ್ಪಡೆಯಾಗುವದಕ್ಕೆ ಆತನು ಮನಸ್ಸು ಮಾಡುವದಿಲ್ಲ ನೀಚರೆನ್ನಿಸುವ ಬೇರಡ ಜನರಲ್ಲಿ ಸೇರಿಕೊಂಡು ನಿಂದ್ಯ ಕರ್ಮ ಪ್ರವೃತ್ತನಾಗುವನು ಬಹು ಜನರನ್ನು ಸುಲಿದು ಹೊಟ್ಟೆ ತುಂಬಿಕೊಳ್ಳುವ ಈ ದರಿದ್ರ ಪಾಪಿಗೆ ಪರೋಪಕಾರವೆಂದರೇನೆಂಬದು ಸಹ ಗೊತ್ತಿರುವದಿಲ್ಲ ಇವನು ಸದಾ ಪಾಪಕರ್ಮ ನಿರತನು, ಪರರಿಗೆ ಕೇಡನ್ನು ಮಾಡುವನು ಭ್ರಮೆಯಿಂದ ವರ್ತಿಸುವನು ಅವನ ಮಾತಿನಲ್ಲಿ ಸಹ ಅವಿಚಾರತನವು ತುಂಬಿರುವದು. ಇವನಾಡುವ ಮಾತು ಯಾರಿಗೂ ಸೇರಿಕೆ ಬರುವದಿಲ್ಲ ನಂಬುಗೆ, ಗೆಳೆತನ, ವಿದ್ಯಾ ವೈಭವ ಮುಂತಾದವುಗಳಾವವೂ ಇವನಲ್ಲಿ ಇರುವದಿಲ್ಲ ಸದ್ಬೋಧೆಗಳಿಗೆ ಇವನು ಕಿವಿ ಗೊಡಲಾರನು ಸ್ವತಃ ತನಗೇನೂ ತಿಳಿಯುವದಿಲ್ಲ ಅನ್ಯರು ಹೇಳಿದ್ದನ್ನು ಕೇಳಿ ಕೊಳ್ಳುವದಿಲ್ಲ ಇಂಥ ಸ್ಥಿತಿಯು ಈ ದರಿದ್ರ ಮಾನವನದಾಗಿರುತ್ತದೆ ಇಂಥವನನ್ನು ಸುಧಾರಿಸುವದು ಯಾರಿಂದಲೂ ಆಗುವದಿಲ್ಲ ಹಾಗೂ ಇವನ ಮೇಲೆ ಯಾವ ಉಪಾಯಗಳೂ ನಾಟುವದಿಲ್ಲ ಈ ದರಿದ್ರನಲ್ಲಿ ಕಲ್ಪನೆಗಳಿಗೆ ಮಿತಿಯಿಲ್ಲ, ಇವನಿಗೆ ಲಕ್ಷಾಂಶ ಜ್ಞಾನವಿಲ್ಲ ಯಾವಾಗಲೂ ಸಂಶಯ ವೃತ್ತಿಯು ಇವನದಾಗಿರುವದು. ಇವನ ಮನಸಿನಲ್ಲಿ ಸ್ವಲ್ಪವಾದರೂ ಪುಣ್ಯದ ವಿಚಾರವಿರುವದಿಲ್ಲ. ಅಂದ ಮೇಲೆ ಇವನ ಪಾಪಗಳು ಅದೆಂತು ದೂರಾಗುವವು? ತನಗೆ ಏನೊಂದು

ತಿಳಿಯದಿದ್ದರೂ ಮಾತು ಬಳಿಸುವದನ್ನು ಮಾತ್ರ ಬಿಡಲಾರನು ಇವನ ನಿರರ್ಥಕ ಒಡಬಡಿಕೆಗಳೂ, ಕ್ಷುದ್ರ ವೃತ್ತಿಯೂ ಜನರಿಗೆ ಆಗಲೇ ಗೊತ್ತಾಗಿ ಬಿಡುವವು ಈ ಮನುಷ್ಯನು ದರಿದ್ರನಾಗಿದ್ದರೂ ಕೆಲವೊಂದು ನಿಯಮಿತ ವೃತ್ತಿಯಿಂದ ನಡೆಯುವವನೆಂದು ಬಹು ಜನರಿಗೆ ಗೊತ್ತಾದರೆ ಮಾತ್ರ ಇವನು ಲೋಕಮಾನ್ಯನಾಗುವನೆಂದೇ ಹೇಳಬಹುದು ದೇಹ ಸವೆಯಿಸದೆ ಕೀರ್ತಿ ದೊರೆಯಲಾರದು ಜೊಳ್ಳು ವೃತ್ತಿಯಿಂದ ಮಾನ್ಯತೆ ಬರಲಾರದು ಯಾವನಾದರೂ ದರಿದ್ರ ವೃತ್ತಿಯ ಅವಲಕ್ಷಣಗಳಿಂದ ಜನರಲ್ಲಿ ತಿರಸ್ಕಾರಕ್ಕೆ ಗುರಿಯಾಗುವನು ಒಳ್ಳೆಯವರ ಸ್ನೇಹ ಹಿಡಿಯುವದಿಲ್ಲ, ತಾನು ಬುದ್ಧಿವಂತನಾಗುವದಿಲ್ಲ, ಮತ್ತು ತನ್ನ ಹಿತವನ್ನು ತಾನು ತಿಳಿದುಕೊಳ್ಳುವದಿಲ್ಲ ಅಂದಮೇಲೆ ಇವೆಲ್ಲವು ಅವನಿಗೆ ಆತ್ಮಘಾತಕ ಸಂಗತಿಗಳಾಗುವವು ಜನರ ಹಿತವನ್ನು ಮಾಡಹೋಗಿ ತನ್ನ ಹಿತವನ್ನು ಮಾಡಿಕೊಳ್ಳುವವನೂ, ಲೋಕ ಕಲ್ಯಾಣದ ಮರ್ಮವನ್ನು ಅರಿಯದವನೂ, ಸುಗುಣಗಳಿಂದ ರಹಿತನಾದವನೂ ಇವರೆಲ್ಲರು ದರಿದ್ರರೆಂದು ತಿಳಿಯತಕ್ಕದ್ದು ನೀಚ ದರಿದ್ರನ ಗುಣಗಳು ಬಹುಜನರಿಗೆ ಮಾನ್ಯವಾಗುವದಿಲ್ಲ ಆದರಿಂದಲೇ ಅವನ ಗುಣಗಳಿಗೆ 'ಅವಲಕ್ಷಣಗಳು' ಎಂದು ಹೇಳುವರು ಈ ಜಗತ್ತು ಕಾರ್ಯ ಕಾರಣಗಳಿಂದ ವಿಶಿಷ್ಟವಾದುದು ಕಾರ್ಯವಿಲ್ಲದೆ ಏನೊಂದು ಕ್ರಿಯೆಯುಂಟಾಗಲಾರದು ಕೆಲಸವಿಲ್ಲದ ಅಂದರೆ ಕರ್ಮ ಮಾಡದವನು ದುಃಖ ಪ್ರವಾಹದಗುಂಟ ಹರಿದು ಹೋಗುವನು ಎಲ್ಲರಿಗೂ ಮಾನ್ಯವಾಗದ ಪಾಪಿಗಳು ಯಾರಿಂದಲೂ ಆಶ್ರಯ ಹೊಂದದೆ ಸಿಕ್ಕ ಸಿಕ್ಕಲ್ಲಿ ಬಿದ್ದು ನಾಶವಾಗಿ ಹೋಗುವರು ಈ ಎಲ್ಲ ವಿವರವನ್ನರಿತು ಪ್ರತಿಯೊಬ್ಬನು ಅವಗುಣಗಳನ್ನು ಬಿಟ್ಟು ಗೊಟ್ಟು ಉತ್ತಮ ಗುಣಗಳನ್ನು ತಿಳಿದುನೋಡಿ ಸಂಗ್ರಹಿಸಿ ಕೊಳ್ಳತಕ್ಕದ್ದು ಅಂದರೆ ಎಲ್ಲವೂ ಮನಸ್ಸಿಗೆ ತಕ್ಕಂತೆ ಉಂಟಾಗುವದು ''

ಶ್ರೀ ರಾಮ || ೪ ಸದೇವ ಲಕ್ಷಣ ||ಗುರುಗಳು ಶಿಷ್ಯರಿಗೆ—

'' ಈ ಮೊದಲು ದಾರಿದ್ರ್ಯ ಲಕ್ಷಣಗಳನ್ನು ಹೇಳಿದೆವು ಆ ಅವಲಕ್ಷಣಗಳನ್ನೆಲ್ಲ ನಿಶ್ಶೇಷವಾಗಿ ತ್ಯಾಗಮಾಡಿ ಬಿಡತಕ್ಕದ್ದು ಈಗ ಸುಖಕರವಾದ ' ಸದೇವ ಲಕ್ಷಣ 'ಗಳನ್ನು ಶ್ರವಣಮಾಡತಕ್ಕದ್ದು ಹಾಗು

ಅವನ್ನು ಸ್ವೀಕರಿಸಿ ಭಾಗ್ಯವನ್ನು ಸಂಪಾದಿಸಬೇಕು ಪರೋಪಕಾರ ಗುಣವುಳ್ಳವನೂ, ಎಲ್ಲರ ಹೃದ್ಗತವನ್ನು ಪ್ರೀತಿಸುವವನೂ, ಬರಹದಲ್ಲಿ ನಿಪುಣನೂ, ಶುದ್ಧ ಹಾಗು ಸ್ಪಷ್ಟವಾಗಿ ಓದುವವನೂ ಯೋಗ್ಯವಾಗಿ ಅರ್ಥಾಂತರಗಳನ್ನು ತಿಳಿದುಕೊಳ್ಳುವವನೂ, ಹಾಗೂ ತಾನರಿತಂತೆ ಬೋಧಿಸುವವನೂ, ಸದಾ ಸಜ್ಜನರ ಸ್ನೇಹ ಬಳಸುವವನೂ ಯಾರ ಮನಸ್ಸನ್ನು ನೋಯಿಸದೆ ಯೋಗ್ಯ ಮಾರ್ಗದಿಂದ ನಡೆಯುವವನೂ ಈ ಲಕ್ಷಣಯುಕ್ತನು ಭಾಗ್ಯವಂತನೆಂದು ಹೇಳಬಹುದು ಇವನು ಸತತವೂ ಸರ್ವಜನ ಪ್ರಿಯನು ಮೂರ್ಖತನದ ಯಾವ ಕ್ರಿಯೆಗಳೂ ಇವನಿಂದ ಘಟಿಸಲಾರವು ತನ್ನಲ್ಲಿಯ ಸದ್ಗುಣಗಳಿಂದ ಈತನು ಜಗನ್ಮಿತ್ರನಾಗಿ ಬಿಡುವನು ಇವನ ಗುಣಗಳಿಂದಲೇ ಇವನ ಕೀರ್ತಿಯು ಪಸರಿಸುವದು ಆ ಕೀರ್ತಿಯು ನಿಷ್ಕಲಂಕವಾಗಿರುವದು ಈ ಭಾಗ್ಯವಂತನು ಎಲ್ಲರ ಮನಸ್ಸನ್ನು ಆಕರ್ಷಿಸಿಕೊಳ್ಳುವನು ಇವನ ವಾಚನ ವಿಚಾರಗಳು ಮಹತ್ವವಾದವು ನಿಯಮಿತ ವೃತ್ತಿಯು ಇವನಿಂದ ಅಂತರಿಸಲಾರದು ವಿನಯವು ಇವನಲ್ಲಿ ಮೂರ್ತಿಮತ್ತಾಗಿರುವದು ಯಾರನ್ನಾದರೂ ನಮ್ರತೆಯಿಂದ ಕಾಣುವನು ಹಾಗು ಕೇಳುವನು ತನ್ನನ್ನು ಬೇಕಾದವರು ಪ್ರಶ್ನೆ ಮಾಡಿದರೂ ಯೋಗ್ಯ ಉತ್ತರಕೊಡುವನು ನುಡಿಯಂತೆ ನಡತೆಯು ಇವನದಿರುವದು, ಸದಾಚಾರ ಪಾಲಿಸುವನು ಈ ಸದೇವ ಲಕ್ಷಣಯುತ ಭಾಗ್ಯವಂತನಿಗೆ ದೋಷವನ್ನಿಡಲು ಯಾರಿಗೂ ಧೈರ್ಯವಿಲ್ಲ ತೇಜೋಮಯ ಪುಣ್ಯ ರಾಶಿಯಾದ ಮಹಾಪುರುಷನೂ, ಲೋಕಪ್ರಿಯನೂ, ಪರೋಪಕಾರಿಯೂ ಆಗಿರುವವನಿಗೆ ಈ ಜಗತ್ತಿನಲ್ಲಿ ಯಾವುದರಿಂದಲೂ ಕೊರತೆಯುಂಟಾಗಲಾರದು ಬಹು ಜನರು ಅವನ ಸಹಾಯದ ಮಾರ್ಗ ನಿರೀಕ್ಷಿಸುವರು, ಅವನು ಹೋಗಿ ನಿಂತಲ್ಲೆಲ್ಲ ಅವನಿಗೆ ಯಾರೂ ನ್ಯೂನತೆಯನ್ನು ತೋರಲಾರರು ಸಕಲ ವಿದ್ಯೆ ಕಲೆಗಳು ಆತನಲ್ಲಿ ಒಟ್ಟುಗೂಡಿ ನಿಂತಿರುವವು ಸಂಗೀತ ಗಾಯನಗಳು ಅವನಿಗೆ ಅವಗತವಿರುವವು ಆಧ್ಯಾತ್ಮವು ಅವನ ಅತ್ಯಂತ ಜೀವಾಳವಾಗಿರುವದು ಎಲ್ಲರೊಡನೆ ನಮ್ರತೆಯಿಂದಿರುವನು, ಪರರ ಮನೋಗತವನ್ನರಿತು ನಡೆಯುವನು ಎಲ್ಲರನ್ನು ಸಂತೋಷಗೊಳಿಸುವ ವೃತ್ತಿಯು

ಇವನದಾಗಿರುವದು ನ್ಯಾಯ—ನೀತಿಗಳು, ಭಜನ—ಪೂಜನಗಳು, ಇವುಗಳ ಸಾರ್ಥಕತೆಯನ್ನು ಇವನು ಪಡೆದಿರುವನು ಇಂಥ ಭಾಗ್ಯವಂತ ಸದೇವ ಪುರುಷನನ್ನು ದಾರಿದ್ರ್ಯಾದಿ ಅವಗುಣಾಪದುಗಳು ಅದೆಂತು ಪೀಡಿಸುವವು? ಉತ್ತಮ ಗುಣ ಗಣ ಮಂಡಿತರಾದ ಇಂಥ ಪುರುಷರು ಬಹು ಜನರಲ್ಲಿ ಪ್ರತಾಪ ಸೂರ್ಯನಂತೆ ತೊಳಗಿ ಬೆಳಗಿ ಪ್ರಕಾಶಮಾನರಾಗುವರು. ಪ್ರತಿ ಸಮಾಜದಲ್ಲಿ ಇಂಥ ಪುರುಷರಿರಬೇಕು ಅಂತಾದರೆ ಸಮಾಜವು ಒಳ್ಳೆ ಸುಧಾರಿಸುವದು ಈ ಸದೇವ ಭಾಗ್ಯವಂತನಲ್ಲಿಯ ಗುಣಗಳು ಇಲ್ಲದವನೇ ದರಿದ್ರನು, ಈ ಭಾಗ್ಯವಂತನಿಗೆ ಪ್ರಪಂಚದಲ್ಲಿಯ ರಾಜಕಾರಣಮರ್ಮವು ಚೆನ್ನಾಗಿ ತಿಳಿದಿರುವದು ಪರಮಾರ್ಥದಲ್ಲಿಯಾದರೂ ಅಧ್ಯಾತ್ಮ ವಿಷಯದಮೇಲೆ ಉತ್ಕೃಷ್ಟವಾದ ವಿವರಣೆ ಮೇಲ್ತರದ್ದಾಗಿರುವದು ಎಲ್ಲದರಲ್ಲಿ ತೋರುವ ಉತ್ತಮಗಳನ್ನು ಯಥೇಚ್ಛೆಯಾಗಿ ಸ್ವೀಕರಿಸು ಭೋಕ್ತಾರನು ಇವನೇ ಆಗಿರುವನು ಇವನೇ ಐಶ್ವರ್ಯವಂತನು ಇವನಿಗೆ ಹಿಂದೊಂದು ಮುಂದೊಂದು ನುಡಿಯುವ ನಡೆಯುವ ಚಟವಿಲ್ಲ ಎಲ್ಲರೂ ಇವನಿಗೆ ಧನ್ಯವಾದಗಳನ್ನರ್ಪಿಸುವರು. ಯಾರ ಹೃದಯುವನ್ನೂ ಇವನು ವ್ಯಥೆಪಡಿಸಲಾರನು ಎಲ್ಲಿಡೆಯಲ್ಲಿಯೂ ಇವನು ತನ್ನ ವಿವೇಕದಿಂದಲೇ ವರ್ತಿಸುವನು ಆವನಲ್ಲಿ ಕರ್ಮ, ಉಪಾಸನೆ, ಜ್ಞಾನ, ವೈರಾಗ್ಯ, ವಿಶಾಲ ಬುದ್ಧಿ, ಸ್ಥಿರ ಬುದ್ಧಿ ಇವೆಲ್ಲವೂ ಚೆನ್ನಾಗಿರುವವು ಇವನಿಗೆ ಹೀನನೆಂದು ಯಾರೂ ಅನ್ನಲಾರರು ಆತ್ಮಾರಾಮನು ಎಲ್ಲ ಶರೀರಗಳಲ್ಲಿರುವನು ಆದರಂತೆ ಆವನು ಸರ್ವರ ಅಂತರ್ಯಾಮದಲ್ಲಿ ಪ್ರಿಯನಾಗಿ ಬಿಟ್ಟಿರುವನು ಸಣ್ಣ ದೊಡ್ಡವರೆಲ್ಲ ತಮ್ಮ ತಮ್ಮ ಕರ್ತವ್ಯ ತತ್ಪರರಾಗಿರುವಂತೆ ಈತನು ಪರರ ಕಾರ್ಯಗಳಲ್ಲಿ ಪ್ರಯತ್ನಿಸುವನು ಅನ್ಯರ ಸುಖವೇ ತನ್ನ ಸುಖವು. ಅವರ ದುಃಖವೇ ತನ್ನ ದುಃಖವು ಈ ಭಾವನೆಯು ಆತನದಾಗಿರುವದು

ಒಬ್ಬ ತಂದೆಗಿರುವ ಹಲವು ಮಕ್ಕಳ ಪ್ರಕೃತಿ ಗುಣಗಳು ಭಿನ್ನ ಭಿನ್ನವಾಗಿರುವದು ಸಹಜವು ಆದರೂ ತಂದೆಯ ಮನಸ್ಸು ಎಲ್ಲ ಮಕ್ಕಳ ಮೇಲೆ ಇರುವಂತೆ ಈ ಮಹಾಪುರುಷನು ಸರ್ವರ ಕಲ್ಯಾಣ

ಕ್ಕಾಗಿ ಸರ್ವದಾ ಚಿಂತಿಸುವನು ಇವನು ಯಾರ ನ್ಯೂನತೆಗಳನ್ನು ಕಾಣನು. ದುಡ್ಡಿನ ಮೇಲೆ ಆಶೆಯಿಲ್ಲದವನನ್ನು ಯಾರು ಬೇಕಾದಷ್ಟು ಧಿಕ್ಕಾರ ಮಾಡಿದರೂ ಆತನ ಅಂತಸ್ಥವು ನಿಶ್ಚಲವಾಗಿಯೇ ಇರುವದು ಇವನೇ ಮಹಾ ಪುರುಷನು. ನಶ್ವರ ಹಾಗು ಮಿಥ್ಯ ಶರೀರವನ್ನು ಯಾರು ನಿಂದೆ ಮಾಡಿದರೂ ಅದು ಆ ಮಹಾಪುರುಷನಿಗೆ ಏನು ಪರಿಣಾಮವನ್ನುಂಟು ಮಾಡಲಾರದು ದೇಹ ಬುದ್ಧಿಯು ದರಿದ್ರನ ಅವ ಲಕ್ಷಣವಾಗಿರುವದು ಜ್ಞಾನಿಯು ತಾನು ತನ್ನ ದೇಹದಿಂದ ವಿಲಕ್ಷಣ ಅಂದರೆ ಹೊರತಾಗಿರುವೆನೆಂದು ಸಂಪೂರ್ಣವಾಗಿ ಅರಿತುಕೊಂಡಿರುವನು ಮಾನವನು ತನ್ನಲ್ಲಿಯ ಉತ್ತಮ ಗುಣಗಳಲ್ಲಿ ಕೆಲವನ್ನಾದರೂ ತಾನು ಜನರಲ್ಲಿ ಪ್ರಕಟಗೊಳಿಸಬೇಕು ಮನುಷ್ಯ ಮಾತ್ರರು ಪರರ ಉತ್ತಮ ಗುಣಗಳಿಗೆ ಲುಬ್ಧರಾಗುವರು ಹಾಗು ದುರ್ಗುಣಗಳಿಂದ ಸಂತಾಪ ಪಡು ವರು ಸಾಮಾನ್ಯರಿಗೆ ಜ್ಞಾನಿಗಳ ತೀಕ್ಷ್ಣ ಬುದ್ಧಿಯ ಇಂಗಿತವು ತಿಳಿ ಯುವದೆಂದಿಗೂ ಸಾಧ್ಯವಿಲ್ಲ ಜ್ಞಾನಿಯು ಜನರ ಅವಗುಣಗಳನ್ನು ಲಕ್ಷ್ಯಕ್ಕೆ ತಾರದೆ ಅವನ್ನು ಶಾಂತತೆಯಿಂದ ಸಹಿಸಿಕೊಳ್ಳುವನು ಇದು ಆ ಜ್ಞಾನಿಯ ಮಿಗಿಲಾದ ಕ್ಷಮಾಶೀಲತೆಯು ಇದರ ಅನುಭವವು ಜನರಿಗ ಚೆನ್ನಾಗಿ ಉಂಟಾಯಿತೆಂದರೆ ಜನತೆಯು ಆ ಮಹಾಪುರುಷ ನನ್ನು ಬೆಂಬಳಿಸುವರು, ಅವನ ಸೇವಕತ್ವವನ್ನು ಪತಕರಿಸುವರು ಜಗ ತ್ತಿನಲ್ಲಿ ಎಷ್ಟೋ ಜನರು ತಮಗೆ ತಾವೇ ಗೌರವಸ್ಥರೆಂದು ಬಗೆಯು ವರು ಆದರೆ ಇದು ಸರಿಯಲ್ಲ ಜನತೆಯು ಗೌರವವನ್ನು ಒಪ್ಪಿದ ಮಹಾಪುರುಷನೇ ಗೌರವಸ್ಥನು ಹಾಗು ಅವನೇ ಸರ್ವಮಾನ್ಯನು ನಿಜಕ್ಕೂ ಅವನೇ ದೊಡ್ಡವನು ಮಹಾಪುರುಷನಲ್ಲಿ ಧೀರತೆ, ಉದಾ ರತೆ, ಗಂಭೀರತೆಗಳು ನಿರಂತರವಾಗಿ ಅಚ್ಚಳಿಯದೆ ಇರುವವು ಇನ್ನು ಮಹಾ ಪುರುಷನಾದ ಸಮರ್ಥನ ಲಕ್ಷಣವೆಂದರೆ ಉತ್ತಮ ಗುಣಗಳೆ ಲ್ಲವು ಆ ಭಾಗ್ಯವಂತನಲ್ಲಿ ಮಿಲನವಾಗಿರುವವು ಇದಕ್ಕೆ ವಿಪರೀತವಾಗಿ ದರಿದ್ರ ಲಕ್ಷಣವೆಂದರೆ ಎಲ್ಲ ಅವಗುಣಗಳ ಸಮಾವೇಶವೆಂಬದು ಸಹಜ ವಾಗುವದು ”

ಶ್ರೀ ರಾಮ || ೫ ದೇಹಮಾನ್ಯ ನಿರೂಪಣೆ || ಶ್ರೀ ಗುರುಗಳು ಶಿಷ್ಯರಿಗೆ—

"ಜನರು ಪೂಜಿಸುವ ದೇವತೆಗಳು ಹಲವುಂಟು ಯಾವವೆಂದರೆ— ಮಣ್ಣು, ಕಲ್ಲು, ಬಂಗಾರ, ಕಂಚು, ತಾಮ್ರ, ಇವೆಲ್ಲವುಗಳಿಂದ ಸಿದ್ಧಪಡಿಸಿದ ಮೂರ್ತಿಗಳು ಪೂಜಿಸಲ್ಪಡುವವು ಕಾಗದದ ಮೇಲೆ, ಗೋಡೆಯ ಮೇಲೆ, ಕಲ್ಲಿನ ಇಲ್ಲವೆ ಇತರ ವಸ್ತುಗಳ ಮೇಲೆ ಚಿತ್ರಿಸಿ ರೇಖಿಸಿದ ಇಲ್ಲವೆ ಕೊರೆದ ಆಕೃತಿಗಳು ದೇವಮೂರ್ತಿಗಳೆಂದು ಪೂಜಿಸಲ್ಪಡುವವು ಇವಲ್ಲದೆ ಕಾಶ್ಮೀರಿ ಕಲ್ಲಿನ ದೇವರು, ಕಟ್ಟಿಗೆಯ ದೇವರು, ಅರಳೀ ಕಟ್ಟಿಗೆಯ ದೇವರು, ನರ್ಮದಾನದಿಯಲ್ಲಿ ಸಿಗುವ ಬಾಣ,ಕಲ್ಲುಗಳು, ಸೋಮಕಾಂತ-ಸೂರ್ಯಕಾಂತಮಣಿಗಳು, ತಾಮ್ರ-ಬಂಗಾರದ ನಾಣ್ಯಗಳು, ಚಕ್ರ ತೀರ್ಥದಲ್ಲಿಯ ಚಕ್ರಾಂಕಿತಗಳು ಇವೆಲ್ಲವು ಭಾವಿಕರಿಂದ ದೇವತೆಗಳೆಂದು ಪೂಜೆ ಮಾಡಲ್ಪಡುವವು ಇದರಂತೆ ಉಪಾಸನೆಯ ಪ್ರಕಾರಗಳೂ ಹಲವುಂಟು ಭಾವುಕ ಭಕ್ತರು ತಮತಮಗೆ ಸರಿಗಂಡ ದೇವತೆಗಳನ್ನು ಮನಬಂದ ಉಪಾಸನೆಯುಕ್ತರಾಗಿ ಪೂಜಿಸುವರು ಆದರೆ ಇವೆಲ್ಲವಕ್ಕೂ ಮೂಲ ಮಾಯೆಯು ಸಾಮಾನ್ಯ ಕಾರಣವಾಗಿದೆ ಆ ಮೂಲ ಮಾಯೆಯ ಸ್ಮರಣೆ ಮಾಡಬೇಕು ಸ್ಮರಣ, ಆದಿಸ್ಫೂರ್ತಿ, ಮೂಲಮಾಯೆ ಇದೇ ಮುಖ್ಯದೇವತೆ ಈ ಮೂಲಮಾಯೆಯ ಮೂಲ ಪುರುಷನ ಅಂಶಗಳೇ ಅನೇಕ ದೇವದೇವತೆಗಳಾಗಿರುವವು ಮೂಲ ಮಾಯೆಯಲ್ಲಿ ದೃಷ್ಟಾರ ದೇವನು ಒಬ್ಬನೇ ಆಗಿರುವನು, ಆ ದೇವನಿಂದಲೇ ಹಲವು ದೇವತೆಗಳಾಗಿವೆ ಇದನ್ನು ವಿವೇಕದಿರಿದ ತಿಳಿಯಬೇಕು ದೇಹದಿಂದ ವ್ಯತಿರಿಕ್ತವಾಗಿ ಭಕ್ತಿಯನ್ನು ಮಾಡಲಿಕ್ಕೆ ಬರಲಾರದು ಆದ್ದರಿಂದ ಭಜನಕ್ಕೆ ದೇಹವೇ ಮೂಲಕಾರಣವಾಗಿರುವದು ದೇಹವನ್ನು ಮಿಥ್ಯೆಯೆಂದು ತಿಳಿಯುವ ವರೆಗೆ ಮಾತ್ರ ಪೂಜೆ-ಭಜನಗಳು ಆ ನಂತರ ಅವುಗಳ ಆವಶ್ಯಕತೆಯಿಲ್ಲ ಆದ್ದರಿಂದಲೇ ದೇಹವನ್ನು ಬಿಟ್ಟು ಭಜನೋಪಾಯವಿಲ್ಲ ಭಜನ-ಪೂಜನ, ಮಹೋತ್ಸವ, ಗಂಧ-ಪತ್ರ, ಫಲಪುಷ್ಪ, ತಾಂಬೂಲ, ಧೂಪ-ದೀಪ, ಪೂಜಾ ಸಾಹಿತ್ಯ ಮುಂತಾದವೆಲ್ಲವೂ ದೇಹಾಧಾರದಿಂದಲೇ ನಡೆಯುವವು ದೇವನ ತೀರ್ಥವನ್ನು ಹೇಗೆ ಸ್ವೀಕರಿಸಬೇಕು ? ಗಂಧವನ್ನು ಎಲ್ಲಿ ಹಚ್ಚಬೇಕು ? ಮಂತ್ರಪುಷ್ಪಗಳನ್ನು ಎಲ್ಲಿ

ಏರಿಸಬೇಕು ? ಇವೆಲ್ಲವು ದೇಹವನ್ನನುಸರಿಸಿಯೇ ಸಾಗಬೇಕಾಗುವದು ದೇಹವಿರುವದರಿಂದಲೇ ಭಜನ ನಡೆಯುವದು ದೇವ ದೇವತೆಗಳು, ಭೂತಗಳು, ದೈವತಗಳು, ಇವುಗಳಲ್ಲಿಯಾದರೂ ಮೂಲ ಪುರುಷನದೇ ಸಾಮರ್ಥ್ಯವಿರುವದೆಂದು ನಂಬಿ ಅವುಗಳ ಅಧಿಕಾರಗಳಿಗನುಸರಿಸಿ ಭಜನೆ ಮಾಡಬೇಕು ಹಲವು ದೇವರುಗಳ ಭಜನೆ ಮಾಡಿದರೂ ಅವೆಲ್ಲ ಮೂಲ ಪುರುಷನಿಗೇ ಸಲ್ಲುತ್ತದೆ ಆದ್ದರಿಂದಲೇ ಎಲ್ಲ ದೇವರುಗಳನ್ನು ಸಂತುಷ್ಟಗೊಳಿಸಬೇಕು ಮೂಲ ಮಾಯೆಯಿಂದ ಸೃಷ್ಟಿಯು ವಿಸ್ತಾರಗೊಳ್ಳುತ್ತ ಹಲವು ದೇಹಗಳ ವರೆಗೆ ಹಬ್ಬಿದೆ ಅಂದರೆ ದೇಹದ ಮಾಯೆಯೆಂಬ ಬಳ್ಳಿಯ ಒಂದು ಹಣ್ಣು ಆಗಿದ ಆದ್ದರಿಂದಲೇ ಮಾಯೆಯಲ್ಲಿಯ ಅರಿವು ಇಡೀ ದೇಹದಲ್ಲಿ ಪ್ರಕಟವಾಗಿರವದು ಆದ್ದರಿಂದ ಹಲವು ದೇವರುಗಳ ಪೂಜೆಯ ಬಗ್ಗೆ ಬೇಜಾರುಗೊಳ್ಳಬಾರದು ಇಲ್ಲಿಯೇ ಮೂಲಪುರುಷನನ್ನು ಕಾಣಬೇಕು ಮತ್ತು ಅದನ್ನು ಸರಿಗಂಡು ಸಮಾಧಾನದಿಂದ ಇರಬೇಕು ಇದನ್ನೇ ಸ್ಪಷ್ಟ ಹೇಳುವದಾದರೆ ಹಲವು ದೇವ ದೇವತೆಗಳಲ್ಲಿ ಮೂಲ ಪುರುಷನ ತಂತು ಸೇರಿದೆ ಎಂದು ತಿಳಿದುಕೊಂಡು ಅವುಗಳ ಸ್ಮರಣದಿಂದ ಸಮಾಧಾನ ಹೊಂದಬೇಕು ಎಷ್ಟೋ ಮಾನವ ಪ್ರಾಣಿಗಳು ಸಂಸಾರ ಬಿಟ್ಟು ದೇವರನ್ನು ಹುಡುಕುತ್ತ ತಿರುಗಾಡುವರು, ಅವರು ಆಗಾಗ್ಗೆ ದೇವನ ಬಗೆಗೆ ಸಂಶಯಗೊಳ್ಳುವರು ಅದು ಹೇಗೆಂದರೆ— ಲೋಕ ರೂಢಿಗನುಸರಿಸಿ ಬಹುಜನರು ದೇವಾರ್ಚನೆ ಮಾಡುವರೆಂದು ಕಂಡುಬರುವದು ಮತ್ತು ಕೆಲವರು ತೀರ್ಥ ಕ್ಷೇತ್ರಗಳನ್ನು ಸಂಚರಿಸಿ ಕ್ಷೇತ್ರ ದೇವನನ್ನು ದರ್ಶನ ಪಡೆಯುವರು, ಕೆಲವರು ಅವತಾರ ಚರಿತ್ರೆಗಳನ್ನು ಕೇಳಿಕೊಂಡು ಯಾವದೊಂದು ಅವತಾರದ ಮೇಲೆ ವಿಶ್ವಾಸವಿಟ್ಟು ವರ್ತಿಸುವರು, ಇನ್ನೂ ಕೆಲವರು 'ಇವೆಲ್ಲವು ಅವತಾರಗಳು ಬ್ರಹ್ಮ–ವಿಷ್ಣು–ಮಹೇಶ್ವರರ ಸಂಬಂಧವಾದವೆಂದು ಅವರನ್ನು ಭಜಿಸುವರು ಇವೆಲ್ಲವೂ ಒಳಿತು ಆದರೆ ಈ ತ್ರಿಮೂರ್ತಿಗಳು ಗುಣಾನ್ವಿತರಾದುದರಿಂದ ಸರ್ವ ಗುಣಾತೀತನಾದ ಜಗದೀಶನನ್ನೇ ಕಂಡುಕೊಳ್ಳಬೇಕು ದೇವನಿಗೆ ಸ್ಥಾನಮಾನಗಳಿಲ್ಲ ಅಂದಬಳಿಕ ಆತನ ಭಜನೆಯನ್ನೆಂತು ಮಾಡಬೇಕು ? ಇತ್ಯಾದಿ ಎಲ್ಲ ವಿಚಾರಗಳು ಸಂಶಯದ ಮಡುವಿನಲ್ಲಿ ನೂಕುವವು ಅದೇನೆ ಇರಲಿ ದೇವದರ್ಶನವಾಗದೆ

ಪಾವನರಾಗುವದು ಶಕ್ಯವಿಲ್ಲ ಎಂಬ ವಿಚಾರದಿಂದ ಸಂತರು ಉಪಾಸನೆಯ
ಬಗೆಗೆ ಪೂರ್ಣ ವಿಚಾರ ಮಾಡುವರು ಹಾಗು ಮುಖ್ಯ ದೇವನನ್ನು ಅರಿ
ತುಕೊಳ್ಳುವರು ಅಂದಮೇಲೆ ಆ ಸಂತರ ಧನ್ಯತೆಯು ಹೊಗಳತಕ್ಕಂತಹದ.
ಭೂಮಿಯ ಮೇಲೆ ಹಲವು ದೇವತೆಗಳಿರುವವು ಆ ದೇವರುಗಳನ್ನು
ನಂಬದೆ ಬಿಡುವದು ಕಷ್ಟವು ಮತ್ತು ಮುಖ್ಯ ದೇವನು ತಿಳಿಯುವದೂ
ಕಷ್ಟ ಹೀಗಾಗಿ ಕರ್ತೃತ್ವವನ್ನು ಬೇರೆಯಾಗಿಸಿ ಬಳಿಕ ಆ ದೇವನನ್ನು
ಕಾಣುವ ಪ್ರಯತ್ನ ಮಾಡಿದ್ದಾದರೆ ಅಧ್ಯಾತ್ಮದ ಮರ್ಮವು ಗೊತ್ತಾಗುವದು
ಆದರೆ ಆ ದೇವನು ಕಾಣುವದಿಲ್ಲ, ಭಾಸವಾಗುವದಿಲ್ಲ ಕಲ್ಪಾಂತವಾದರೂ
ನಾಶ ಹೊಂದುವದಿಲ್ಲ ಬಹಳ ಪುಣ್ಯ ಸಂಚಿತವಿದ್ದರೇ ಮಾತ್ರ ಆ ದೇವ
ನಲ್ಲಿ ಮಾತ್ರ ಮನಸ್ಸು ಹೊಂದಿಕೆಯಾಗುವದು ಮಾನವನಲ್ಲಿ ದೇಹ
ಬುದ್ಧಿಯು ಇರುವವರೆಗೆ ಅದರಲ್ಲಿ ಅನಂತ ಕಲ್ಪನೆಗಳು, ಅನಂತ ವಾಸನೆ
ಗಳು ಇವು ಅವನ ಹೃದಯಾಂತರದಿಂದ ತೆರೆತೆರೆಗಳಾಗಿ ಎದ್ದೇಳುವವು.
ಆದ್ದರಿಂದ ಮಾನವನು ದೇಹಾತೀತನಾಗಬೇಕು, ನಿರ್ವಿಕಲ್ಪವೂ, ಶಾಶ್ವ
ತವೂ ಅನಂತವೂ ಆಗಿರುವ ಪರಬ್ರಹ್ಮವಸ್ತುವನ್ನು ಜ್ಞಾನ ದೃಷ್ಟಿಯಿಂದ
ಕಂಡು ಅವನಲ್ಲಿಯೇ ತನ್ಮಯನಾಗಿ ಇರತಕ್ಕದು ಮತ್ತು ನಿಜಾತ್ಮ ವಸ್ತು
ವಿನ ನಿದಿಧ್ಯಾಸದಿಂದ ಸಂಗತ್ಯಾಗ ಮಾಡಿ ತದ್ರೂಪತೆಯನ್ನು ಹೊಂದಬೇಕು
ಇಂತು ತಾದ್ರೂಪ್ಯತೆ ದೊರಕಿದ ಮೇಲೆ ಕೇಳುವದೇನು? ಆ ತದ್ರೂಪತೆಯ
ಲೀಲೆ ಹಾಗು ಚಮತ್ಕೃತಿಗಳು ದೇಹ ಬುದ್ಧಿಯಿಂದ ಕೂಡಿದವರಿಗೆ ತಿಳಿಯು
ವದು ಸಾಧ್ಯವಿಲ್ಲ ಆದರೂ ಸತ್ಸಂಗ, ಸ್ವಾನುಭವಗಳಿಂದ ಅದರ ನಿಜ
ಸ್ಥಿತಿಯ ಅರಿವು ಉಂಟಾಗುವದು ಇಂತು ಆ ಸೂಕ್ಷ್ಮ ಸ್ಥಿತಿಗಳು ತಿಳಿದು
ಅಪರೋಕ್ಷಾನುಭವ ವುಂಟಾಗಲು ಅಧೋಗತಿಯು ತಪ್ಪುವದು ಹಾಗು ಆ
ಕೂಡಲೇ ಸದ್ಗುರು ಪ್ರಸನ್ನತೆಯಿಂದ ಸದ್ಗತಿಯು ಸಂಪ್ರಾಪ್ತವಾಗುವದು ”

ಶ್ರೀ ರಾಮ ॥ ೬ ಬುದ್ಧಿವಾದ ನಿರೂಪಣೆ ॥ ಗುರುಗಳು ಶಿಷ್ಯರಿಗೆ–

“ಪರಮಾರ್ಥದಲ್ಲಿ ನಿರತರೂ ವಿವೇಕಿಗಳೂ ಆದವರ ಕೃತಿಗಳು ಜಗ
ನ್ಮಾನ್ಯವಾಗುವವು ಯಾಕಂದರೆ ಅಂಥವರು ತಮ್ಮ ಕೆಲಸಗಳಲ್ಲಿ ಪೂರ್ಣ
ವಿಚಾರವನ್ನು ಅನುಸರಿಸಿರುವರು. ಹಾಗು ಎಲ್ಲಿಯೂ ವ್ಯತ್ಯಸ್ತವುಂಟಾಗ
ದಂತೆ ದಕ್ಷತೆ ವಹಿಸಿರುವರು ಜನರಿಗೆ ಸಂಶಯ ಬಾರದಂತೆ ಅವರು ಕೆಲ

ಸವನ್ನು ರೂಪಿಸಿಕೊಂಡು ಕೃತಿಗಿಳಿಸುವವರು ಕೆಲಸದ ಆರಂಭ-ಮುಕ್ತಾಯ ಗಳ ಬಗೆಗೆ ಅವರು ಮೊದಲೇ ವಿಚಾರ ಮಾಡಿಕೊಂಡಿರುವರು. ನಿಸ್ಪೃಹರಲ್ಲದವರ ನಡೆ ನುಡಿಗಳನ್ನು ಯಾರೂ ಮನ್ನಿಸುವದಿಲ್ಲ ಜನತೆಯ ಮನವೊಪ್ಪುವಂತೆ ನಡೆಯುವದು ಕಠಿಣವು ಕೆಲವರು ಒತ್ತಾಯದಿಂದ ಉಪದೇಶ ಮಾಡುವರು, ಕೆಲವರು ಮಧ್ಯಸ್ಥನಿಂದ ಉಪದೇಶ ಕೊಳ್ಳುವರು, ಆದರೆ ಆ ಮಧ್ಯಸ್ಥನ ಸ್ವಾರ್ಥಾಭಿಲಾಷೆಯು ತಿಳಿದು ಬಂದರೆ ಜನರಲ್ಲಿ ಅವನ ಮಹತ್ವವು ಉಳಿಯುವದಿಲ್ಲ ಅವನ ಉಪದೇಶವು ಅವನಿಗೇ ಪ್ರತಿಕೂಲವಾಗುವದು ಅದರಿಂದ ಮುಂದಿನ ಕ್ರಿಯೆಗಳೆಲ್ಲ ಕುಂಠಿತವಾಗಿ ಹೋಗುವವು ಅಣ್ಣನು ತಮ್ಮನಿಗೆ ಉಪದೇಶ ಮಾಡುವನು ಮುಂದೆ ಅದು ಒಳಿತಾಗದು ಪರಿಚಿತ ಜನರಲ್ಲಿ ತನ್ನ ಉಪದೇಶವನ್ನು ಹೇಳಬಾರದು ಮೊದಲು ಬಲು ಒಳಿತಾಗಿ ಕಂಡದ್ದು ಮುಂದೆ ಅದು ಹಾಗೇ ಉಳಿಯುವದಿಲ್ಲ ವಿವೇಕಿಗಳಾದ ಶಿಷ್ಯರು ಆ ಉಪದೇಶವನ್ನು ಒಪ್ಪುವದಿಲ್ಲ, ಅವಿಚಾರಿಗಳು ಮಾತ್ರ ಅಂತೂ ಇಂತೂ ಕೇಳಿಕೊಳ್ಳುವರು ಹೆಂಡತಿಯು ತಾನೇ ಗುರುತ್ವವನ್ನು ವಹಿಸಿ ಗಂಡನಿಗೆ ಬೋಧೆ ಮಾಡುವದೂ ಸರಿಯಲ್ಲ, ಅದೂ ಮುಂದೆ ಪ್ರತಿಕೂಲ ಪರಿಸ್ಥಿತಿಗಿಳಿಯುವದು ಇದು ಹಲವು ಕೀಳ್ತರಗಳಲ್ಲಿ ಒಂದು ಪ್ರಕಾರವಾಗುವದು ಜನರಿಗೆ ಪ್ರತ್ಯಕ್ಷವಾಗಿ ವಿಚಾರ ಮಾರ್ಗವನ್ನು ತೋರಿಸದೆ ಮುಚ್ಚುಮರೆಯಲ್ಲಿ ಉಪದೇಶ ಮಾಡುವದು ಸರಿಯಲ್ಲ ಇದರಿಂದ ಜನರಲ್ಲಿ ಆತ್ಮ ನಿಶ್ಚಯವು ಅನುಮಾನಯುಕ್ತವಾಗಿ ಉಪದೇಶ ನಿಷ್ಫಲವಾಗುವದು. ಯಾರ ವಿಚಾರವನ್ನೂ ಕೇಳದೆ ತನ್ನ ಚಿತ್ತಲಹರಿಯುಂಟಾದ ಕಾಲಕ್ಕೆ ಮಾತ್ರ ಬೋಧೆ ಮಾಡುವದು ಯುಕ್ತವೆನ್ನಿಸಲಾರದು ಯಾಕಂದರೆ ಆ ಉಪದೇಶಕನು ದೂರದರ್ಶಿತ್ವವುಳ್ಳ ಸಾಧುವಾಗಿರಲಾರನು ತಾನು ಆಶೆಯಿಲ್ಲದೆ ಅಂದರೆ ಯಾರಲ್ಲಿಯೂ ಏನನ್ನೂ ಬೇಡದೆ ತನ್ನ ಉಪದೇಶದಿಂದ ಜನರಲ್ಲಿ ಭಗವದ್ಭಜನೆಯನ್ನು ಹೆಚ್ಚಿಸಬೇಕು ಅವರಲ್ಲಿ ವಿವೇಕವನ್ನು ಸ್ಫೂರ್ತಿಗೊಳಿಸಿ ಭಕ್ತಿ ಮಾರ್ಗದಲ್ಲಿ ಅವರನ್ನು ತಂದಿಳಿಸಬೇಕು ಅನ್ಯರ ಹೃದಯವನ್ನೂ ವಿವೇಕ ಮರ್ಮವನ್ನೂ ತಿಳಿದುಕೊಳ್ಳುವದು ಬಲು ಕಠಿಣವು ಜಗಚ್ಚಕ್ರವು ತನ್ನ ಇಚ್ಛೆಯಂತೆ ಹಾಗು ತನ್ನ ಧರ್ಮದಂತೆ ಸುತ್ತಿರುಗುವ ಹಾಗೆ ಪ್ರಯತ್ನ ಮಾಡಬೇಕು

ಮ್ಲೇಂಛನಾದ ಗುರುವೂ ಸಮಗಾರನಾದ ಶಿಷ್ಯನೂ, ಒಳ್ಳೇ ಸಮಾಜಕ್ಕೆ ದೊರೆತ ಮೇಲೆ ಕೇಳುವದೇನು? ಸತ್ಸಹವಾಸದಿಂದ ಜನಸಮುದಾಯವೇ ಭ್ರಷ್ಟವಾಗುವದು ಉಪದೇಶಕರು ಅಲ್ಲಲ್ಲಿಗೆ ಬ್ರಾಹ್ಮಣ ಸಂಘಗಳನ್ನು ಕೂಡಿಸಬೇಕು, ಭಕ್ತಮಂಡಲಗಳನ್ನು ಮರ್ಯಾದಿಸಬೇಕು, ಸಂತ-ಸಜ್ಜ ರನ್ನು ಎಲ್ಲೆಡೆಯಲ್ಲಿ ಶೋಧಿಸಬೇಕು ಉತ್ಕೃಷ್ಟ ಹಾಗು ಭವ್ಯವಾದವುಗ ಳನ್ನು ಸ್ವೀಕರಿಸಬೇಕು, ನಿರುಪಯುಕ್ತವಾದವುಗಳನ್ನು ಬಿಟ್ಟುಬಿಡಬೇಕು ನಿಸ್ಪೃಹತೆಯಿಂದ ವರ್ತಿಸಿ ಎಲ್ಲೆಡೆಯಲ್ಲಿ ವಿಖ್ಯಾತರಾಗಬೇಕು ಇನ್ನು ಉಪ ದೇಶಕನ ಬರೆಹವು ಅಚ್ಚುಕಟ್ಟಾಗಿ ಅಕ್ಷರಗಳು ಸುಂದರವಾಗಿರಬೇಕು, ಓದುವಿಕೆಯು ಕೇಳುವವರಿಗೆ ರಮ್ಯವೆನ್ನಿಸಬೇಕು, ಅರ್ಥಾಂತರ ಜ್ಞಾನವು ಚೆನ್ನಾಗಿರಬೇಕು ಇವೆಲ್ಲವುಗಳಂತೆ- ಗೀತ-ನೃತ್ಯಗಳೂ ಪಾರ ಕಲಿಸು ವಿಕೆಯೂ, ದೀಕ್ಷೆಯೂ ಸ್ನೇಹವೂ, ರಾಜಕಾರಣದಲ್ಲಿ ತರತರಿತ ಬುದ್ಧಿಯೂ ಇವೆಲ್ಲ ಗುಣಗಳು ಇರಬೇಕು ಹಾಗು ಈ ಗುಣಗಳನ್ನು ಉಪಯೋಗಿಸ ಗೊಳಿಸಬೇಕು ಇಷ್ಟಾದರೆ ತಾನು ಅಲಿಪ್ತತೆಯನ್ನು ಪೂರ್ಣವಿರಿಸಿ ಕೊಂಡಂತಾಗುವದು ಮತ್ತು ಬೋಧಕನು ನಿರಂತರವಾಗಿ ಹರಿಕಥೆಯನ್ನು ಸಾಗಿಸಿ ಜನರನ್ನು ನಾಮಸ್ಮರಣೆಯ ಛಂದದಲ್ಲಿ ತೊಡಕಿಸಬೇಕು ಜನ ರಿಗೆ ಸೂರ್ಯಪ್ರಕಾಶದಂತೆ ಸ್ವಚ್ಛ ಹಾಗು ನಿಚ್ಚಳವಾದ ಜ್ಞಾನವನ್ನು ಬೋಧಿಸಬೇಕು ತನ್ನ ಬೋಧಯಿಂದ ದುರ್ಜನರನ್ನು ಸನ್ಮಾರ್ಗಕ್ಕೆ ಹಚ್ಚಬೇಕು ಸಜ್ಜನರಿಗೆ ಶಾಂತಿ ಸುಖ ನೀಡಬೇಕು ಎಲ್ಲರ ಮನೋಗತ ವನ್ನು ಅವರವರ ವೃತ್ತಿಗನುಸರಿಸಿ ಅರಿತುಕೊಳ್ಳಬೇಕು ನೀತಿ, ಗುಣ, ಅಭ್ಯಾಸಗಳಿಗೆ ತಾನು ಇತರರಿಗೆ ಆದರ್ಶನಾಗಬೇಕು ಎಲ್ಲರೂ ಯಾವಾ ಗಲೂ ಈತನನ್ನೇ ಅಂದರೆ ಇವನ ಉಪದೇಶವನ್ನೇ ಬಯಸುತ್ತಿರಬೇಕು ಜನತೆಯ ಪ್ರೀತಿಯು ಇವನಿಂದ ಎಂದೂ ಅಂತರಿಸದಂತಿರಬೇಕು ಈತನು ತನ್ನಲ್ಲಿಯ ಭಕ್ತಿ, ಜ್ಞಾನ, ಚತುರತೆ, ಭಜನ, ಯೋಗ ನಿಸ್ಪೃಹತೆ, ಅನು ಷ್ಠಾನಗಳನ್ನು ಒಳ್ಳೇ ಉತ್ಕೃಷ್ಟವಾಗಿ ಅಧಿಷ್ಠಿಸಿಕೊಂಡದ್ದರಿಂದ ಇವನ ಕೀರ್ತಿಯು ದಿಗಂತದಲ್ಲಿ ಹಬ್ಬುವದು ಜನತೆಯಲ್ಲಿವೂ ಇವನಲ್ಲಿ ತಮ್ಮ ಉತ್ಕಟ ಭಕ್ತಿಯನ್ನು ಬೀರುವರು ತನ್ನಲ್ಲಿ ಏನಾದರೊಂದು ಮೇಲ್ತರ ಗುಣವಿಲ್ಲದ ಮಾನವನು ಜಗತ್ತನ್ನೆಲ್ಲ ವ್ಯರ್ಥ ಸುತ್ತಾಡಿದರೆ ಅವನ ಕೀರ್ತಿ

ಎಂದೂ ಬೆಳೆಯದು. ಶರೀರವು ಅನಿಶ್ಚಿತವು, ಆಯುರ್ಮರ್ಯಾದೆಯೂ ಸ್ವಲ್ಪ. ಪ್ರಸಂಗಗಳು ಅಜ್ಞಾತವು ಇವನ್ನರಿತು ಎಲ್ಲರೂ ಜಾಗರೂಕರಾಗ ಬೇಕು, ಸತ್ಕರ್ಮ ಮಾಡಬೇಕು ಭಗವತ್ಕೀರ್ತಿಯಿಂದ ಭೂಮಂಡಲ ವನ್ನು ತುಂಬಬೇಕು, ಅನುಕೂಲ ಕರ್ಮಗಳನ್ನು ಆಗಲೇ ಮಾಡಬೇಕು, ಪ್ರತಿಕೂಲ ಕರ್ಮಗಳ ಬಗ್ಗೆ ಪೂರ್ಣ ವಿಚಾರ ಮಾಡಬೇಕು, ವಿವೇಕದಿಂದ ಕಾರ್ಯ ಸಿದ್ಧಿಯು ಏಕಾಂತದಲ್ಲಿ ವಿವೇಕ-ವಿಚಾರಗಳಿಗಾಸ್ಪದ ಕೊಡ ಬೇಕು; ಯುಕ್ತಿ ವಿಚಾರಗಳಿಗೆ ಅಸಾಧ್ಯವಾವದೂ ಇಲ್ಲ ಏಕಾಂತದ ಲ್ಲಿಯೇ ಬುದ್ಧಿ ವಿಸ್ತೃತವಾಗುವದು, ಏಕಾಂತ ವಿಚಾರದಿಂದಲೇ ಆತ್ಮಾ ರಾಮನನ್ನು ಅರಿತುಕೊಳ್ಳಬೇಕು ಅಂದರೆ ಆರಂಭದಿಂದ ಕೊನೆಯವರೆಗೂ ಎಲ್ಲಿಯೂ ಅನುಮಾನ ತೊಂದರೆ ಕಷ್ಟಗಳು ಉಳಿಯಲಾರವು"

ಶ್ರೀ ರಾಮ ‖ ೭ ಯತ್ನ ನಿರೂಪಣ ‖ ಗುರುಗಳು ಶಿಷ್ಯರಿಗೆ—

" ಹರಿಕಥೆ ಬೋಧಿಸುವ ಕೀರ್ತನದಲ್ಲಿ ಶ್ರೋತೃಗಳಲ್ಲಿ ಶ್ರವಣ ಭಕ್ತಿಯು ಉದ್ರೇಕವನ್ನು ಹೆಚ್ಚು ಹೆಚ್ಚು ಹುಟ್ಟಿಸಬೇಕು ಅಧ್ಯಾತ್ಮ ನಿರೂಪಣೆಯಲ್ಲಿ ಮನನ ಭಕ್ತಿಯು ಯಾರಲ್ಲಿಯೂ ಕೊರತೆಯಾಗದಂತೆ ಬೋಧಿಸಬೇಕು ಭಜನ ಮಾಡುವವರು ಸ್ಮರಣೆಯಲ್ಲಿ ತಪ್ಪಲು ಅದು ಭಕ್ತಿ ಮಾರ್ಗಬೋಧಕರಿಗೆ ತೀವ್ರ ತಿಳಿಯುವದು ಆದರೆ ಏನನ್ನೂ ಅರಿಯದವರು ಮಾತ್ರ ಅತ್ತಿತ್ತ ಮಿಕಿಮಿಕಿ ನೋಡುತ್ತ ಕೂಡ್ರುವರು ವಕ್ತಾರನಿಂದ ಹೇಳಿಕೆಗೆ ವಿಲಂಬವಾಗಲು ಶ್ರೋತೃಗಳಲ್ಲಿ ಆ ವಕ್ತಾರನ ವಿಷಯಕ್ಕೆ ಇರುವ ಮಹತ್ವವು ಇಲ್ಲದಾಗುವದು ಅಂಥ ಪ್ರಸಂಗ ತಂದುಕೊಳ್ಳದೆ ವಕ್ತಾರನು ಸ್ವಲ್ಪವನ್ನಾದರೂ ಹೇಳಿ ಶ್ರೋತೃಗಳನ್ನು ಸಮಾಧಾನಗೊಳಿಸಬೇಕು ಅವರ ಮೇಲೆ ಸಿಟ್ಟಿನಿಂದ ಹರಿಹಾಯ ಬಾರದು, ತಾಮಸ ವೃತ್ತಿಯಿಂದ ಪ್ರೀತಿಯಿಲ್ಲದಾಗುವದು ಕ್ಷಣಕ್ಷಣಕ್ಕೂ ಶ್ರೋತೃವರ್ಗವನ್ನು ನಿರೀಕ್ಷಿಸುತ್ತ ಬೋಧೆಯಲ್ಲಿ ಅವರಿಗಿರುವ ಆಸ್ಥೆ ಅನಾಸ್ಥೆಗಳನ್ನೂ, ಪ್ರೀತಿ-ಅಪ್ರೀತಿಗಳನ್ನೂ ಕಂಡು ಹಿಡಿದು ಪರಿಣಾಮ ಕಾರಿಯಾಗುವಂತೆ ನಿರೂಪಣೆಯನ್ನು ಸಾಗಿಸುತ್ತ ಹೋಗಬೇಕು ಶಿಷ್ಯ ನಲ್ಲಿ ವಿಕಲ್ಪತೆ ಹುಟ್ಟಿ ಅವನು ವನಾಂತರಕ್ಕೆ ಹೋದರೆ ಗುರುವೂ ಅವನನ್ನು ಬೆಂಬಳಿಸಿ ಓಡಿಹೋಗ ಬೇಕಾದೀತು ಅಂದರೆ ಅವನೂ ವಿಕ

ಲ್ಪನೆ ಹೊಂದುವನೆಂದಾಗುವದು. ವಿಚಾರದಿಂದ ನೋಡಲು ವಿಕಲ್ಪನೆಯು ದುಸ್ಥಿತಿಯು ಗೊತ್ತಾಗುವದು ಗುರು ಮಹಂತನೆನ್ನಿಸುವವನು. ಆಶಾ ಬದ್ಧನಾಗಿರಬಾರದು ಕ್ರಿಯೆಯನ್ನು ಬಿಟ್ಟಿರಬಾರದು ಚಾತುರ್ಯವಂತನಾಗಿರಬೇಕು ಇದಕ್ಕೆ ವಿಪರೀತವಾಗಿದ್ದರೆ ಅವನ ಗುರುತ್ವಕ್ಕೆ ಲಘುತ್ವವುಂಟಾಯಿತೆಂದೇ ಹೇಳಬಹುದು ಇಂತು ಅವನಲ್ಲಿ ಮಹತ್ವವು ಉಳಿಯದೆ ಹೋದಮೇಲೆ ಅವನು ಕಷ್ಟಗಳಿಗೆ ಗುರಿಯಾಗುವನು ಹೀಗಾದರೆ ಅವನ ಜೊತೆಯಿಂದ ಜನರಿಗೆ ಸುಖವೆಲ್ಲಿ ಬರುವದು? ತನ್ನ ಕೀರ್ತಿಯು ಬೆಳೆಯಬೇಕೆಂಬ ಹವ್ಯಾಸವುಳ್ಳವನು ಅದಕ್ಕನುಸರಿಸಿ, ಎಲ್ಲರೊಡನೆ ಪ್ರೇಮ-ಪ್ರೀತಿಯಿಂದ ವರ್ತಿಸಬೇಕು. ದೂರ ದೇಶದಲ್ಲಿ ಹೋಗಿ ಇರಬೇಕು, ಅಲ್ಲಿಂದಲೇ ತನ್ನ ಸಂಪ್ರದಾಯದ ಪರಿಸ್ಥಿತಿಯನ್ನೂ ತನ್ನ ಸಾಂಪ್ರದಾಯಿಕರ ನಡೆವಳಿಯನ್ನೂ ತಿಳಿದುಕೊಳ್ಳಬೇಕು ಜನರಿಂದ ಪುನಃ ಪುನ ಏನೊಂದನ್ನು ಯಾಚಿಸುವದನ್ನು ಮಾಡಬಾರದು, ಎಲ್ಲೆಲ್ಲಿಯೂ ಜಗನ್ನಾಯಕನಿರುವನೆಂಬುದರ ವಿವೇಕವಿರಬೇಕು, ಇದನ್ನರಿತರೆ ಮಾತ್ರ ಅವನು ವಿಚಾರವಂತನು 'ಕಣ್ಣಿಗೆ ಕಂಡವರೆಲ್ಲ ನಾಶವಾಗುವವರೇ' ಎಂದಮೇಲೆ ಉಳಿದೊಬ್ಬ ಮಾನವನು ತಾನೊಬ್ಬನೇ ಶ್ರೇಷ್ಠನೆಂತಾಗುವನು? ಎಲ್ಲವೂ ನಿರ್ಜನ ಪ್ರದೇಶವೆಂದಮೇಲೆ ಅಲ್ಲಿಹೋಗಿ ಅವನು ಮಾಡುವದೇನು? ನೋಡುವದೇನು? ಜನರನ್ನು ಬಿಟ್ಟು ಅದೆಲ್ಲಿ ಹೋಗಿ ಇರುವದು? ಒಟ್ಟಿನಮೇಲೆ ಲೌಕಿಕವನ್ನು ಬಿಟ್ಟು ಅವನಿಗೆ ಆಸ್ಪದವೆಲ್ಲಿಯೂ ಸಿಗಲಾರದೆಂದು ಹೇಳಬಹುದು ಆದ್ದರಿಂದ ತಾನೇ ಶ್ರೇಷ್ಠನೆಂಬುವದು ಅನ್ಯವಹಾರ್ಯವು

ತನಗೆ ಜಗತ್ತಿನೊಂದಿಗೆ ಕೂಡಿ ನಡೆಯಲಿಕ್ಕೆ ಬಾರದಿದ್ದರೆ ತನ್ನಲ್ಲಿ ಗುರುತ್ವದ ಆಶೆಯನ್ನಿಟ್ಟುಕೊಳ್ಳಬಾರದು ಇಂಥವನು ಪರಲೋಕ ಸಾಧನೆಯ ಉಪಾಯವಾದ ಶ್ರವಣ ಭಕ್ತಿಯನ್ನಷ್ಟೇ ಆಚರಿಸುತ್ತಿರಬೇಕು ತನಗೆ ಚೆನ್ನಾಗಿ ಈಜಲಿಕ್ಕೆ ಬಾರದಿದ್ದವನು ಜನರನ್ನು ದಾಟಿಸಲು ಹೋಗಿ ಅವರನ್ನೆಲ್ಲ ಮುಳುಗಿಸಿ ಬಿಡುವದು ಅದೆಂಥ ಮೂರ್ಖತನವು? ಅಭ್ಯಾಸದಿಂದ ತಾನು ಪೂರ್ಣ ತರಬೇತು ಗೊಂಡನಂತರವೇ ಪ್ರಕಟನಾಗಬೇಕು ಇಲ್ಲದಿದ್ದರೆ ಮರೆಯಾಗಿ ಇರುವದು ಒಳ್ಳೇದು ಪ್ರಕಟನಾಗಿ

ಅಪ ಕೀರ್ತಿ ಪಡೆಯುವದು ಮೂರ್ಖತನವು ಮಂದಗತಿಯುಳ್ಳವನು ಸಾವ
ಕಾಶವಾಗಿಯೇ ಹೆಜ್ಜೆ ಹಾಕುವನು. ಆದರೆ ಅವನು ತೀವ್ರಗತಿಯು
ಚಪಲನೊಡನೆ ಓಡಿ ಓಡಿ ಹೋಗುವದು ಶಕ್ಯವಿಲ್ಲ ಅರಬ್ಬೀ ದೇಶದ
ಕುದುರೆಗಳು ಚವಲತೆಯಲ್ಲಿ ಜಗ ಪ್ರಸಿದ್ಧವಾಗಿರುವವು ಅಂಥ ಕುದುರೆ
ಯನ್ನು ಆರೋಹಿಸಿ ದಣಿಸುವವನು ಅದೆಷ್ಟು ಚಪಲನಾಗಿರಬೇಕು?
ಇಂಥ ಸಾಹಸ ಧೀರತೆಯ ಕೆಲಸಗಳು ತೀಕ್ಷ್ಣ ಬುದ್ಧಿಯ ಇಂಗಿತಗಳು
ಅಂಥ ಮರ್ಮಜ್ಞರಿಂದಲೇ ಆ ಕಾರ್ಯಗಳು ಕೊನೆಗೊಳ್ಳುವವು ಕೇವಲ ದರಿದ್ರ
ಹಾಗು ಕೇವಲ ಸಿರಿವಂತರಿಂದ ಸಾಧ್ಯವಿಲ್ಲ ಹೊಲವನ್ನು ಬೀಜಗಾಣಿ
ಸಿದ ಮಾತ್ರಕ್ಕೆ ಅದು ಬೆಳೆಯಲಾರದು ಹಿಂದಿನಿಂದ ಅದಕ್ಕೆ ಕಳೆ
ಮಳೆ ಮುಂತಾಗಿ ಹಲವು ಶ್ರಮದ ಕೆಲಸ ಕೈಕೊಳ್ಳಬೇಕಾಗುವದು

ಮುತ್ತು ರತ್ನಗಳನ್ನು ಮಾರಾಟಕ್ಕೆಂದು ತಂದು ಮನೆ
ಯಲ್ಲಿಟ್ಟುಕೊಂಡರೆ ಬರುವದೇನು? ಊರೂರು, ದೇಶ ದೇಶ ತಿರುಗಿ
ಅವನ್ನು ಮಾರಬೇಕಾಗುವದು ಅದರಂತೆ ಜನತೆಯ ಅಂತರ್ಯಾಮದಲ್ಲಿ
ಉತ್ತರೋತ್ತರ ಪ್ರೇಮವುಂಟಾದರೆ ಮಾತ್ರ ಪರಮಾರ್ಥವು ಹೆಚ್ಚುವದು
ಇದರಲ್ಲಿ ಹಿಂದು ಮುಂದು ನೋಡಿದರೆ ಮಾತ್ರ ಜನರ ಮನಸು ಹೇಸು
ವದು ತನ್ನಲ್ಲಿ ಅನ್ಯರ ಬಗೆಗೂ ಅನ್ಯರಲ್ಲಿ ತನ್ನ ಬಗೆಗೂ ಹೀಗೆ
ವಿಕಲ್ಪತೆಯಿಂದ ಅನ್ಯೋನ್ಯ ಹೀನತೆ ಹೇಯತೆಗಳು ಉತ್ಪನ್ನವಾಗು
ವವು ಆದರಿಂದ ಯಾರಿಗೂ ಸಮಾಧಾನವಾಗದು ವಿನಾಶಕ್ಕೆ ಆಸ್ಪದ
ಕೊಡುವ ಧರ್ಮವೂ, ನೀಚತೆಯೂ ಒಂದಾದ ಮೇಲೆ ಕೇಳುವದೇನು?
ಅಲ್ಲಿ ವಿವೇಕಕ್ಕೆ ಆಸ್ಪದ ಉಳಿಯಲಾರದು ಅವಿವೇಕವೇ ಪ್ರಾಧಾನ್ಯತೆ
ಪಡೆಯುವದು ಅಂದ ಮೇಲೆ ಅಂಥಲ್ಲಿ ವಾಸಿಸುವದು ಸರಿಯಲ್ಲ ಬಹು
ದಿವಸ ಶ್ರಮ ವಹಿಸಿ ಮಾಡಿದ ಕೆಲಸವು ನಿರರ್ಥಕವಾಗಿ ಹೋಗಹತ್ತಿದರೆ
ಅದರ ಕಾರಣ ತಿಳಿಯದೆ ನಾವು ಮತ್ತೆ ಆ ಕೆಲಸ ಮಾಡುವದ
ರಲ್ಲಿ ಅರ್ಥವಿಲ್ಲ ಜನರಲ್ಲಿ ಕೂಡಿಕೊಂಡು ಹೋಗುವದರಿಂದ ವ್ಯಾಪ
ಬೆಳೆಯುವದು, ಇಲ್ಲದೆ ಹೋದರೆ ಸಂತಾಪವಾಗುವದು ಹೀಗೆ ಬಾರಿ
ಬಾರಿಗೂ ವಿಕ್ಷೇಪ ಹುಟ್ಟುವದರಿಂದ ಸಿಟ್ಟು ಬರುವದು ಮೂರ್ಖರು
ತಮ್ಮಲ್ಲಿಯ ದಡ್ಡತನದಿಂದ ಕುಕ್ಕುರಿಸಿ ಬೀಳುವರು, ಬುದ್ಧಿವಂತರು

ತವು ವಿದ್ವತ್ತಿಯ ಮದದಿಂದ ಕಲಹವಾಡುವರು ಇಂತು ಜನರಲ್ಲಿ ಮೂರ್ಖರಿಗೂ ಬುದ್ಧಿವಂತರಿಗೂ ಯಾರಿಗೂ ಮರ್ಯಾದೆ ಉಳಿಯಲಾರದು ಎಷ್ಟೋ ಜನರು ಕಾರ್ಯವನ್ನು ಮಾಡುವದಿಲ್ಲ ಮಾಡಹತ್ತಿದರೂ ಮುಗಿಸುವದಿಲ್ಲ ಮೊದಲೇ ಕಾರ್ಯವನ್ನು ಕೈಕೊಳ್ಳದೆಯೂ ಇರುವದಿಲ್ಲ ಇಂಥವರಿಗೇನೆನ್ನಬೇಕು? ನಾಶಕಾರಕ ಉಪಾಧಿಗಳನ್ನು ಬಿಟ್ಟು ಕೊಡಬೇಕು; ತಾನು ಜೀವಿಸುವ ಕಾಲವನ್ನು ಸಾರ್ಥಕಗೊಳಿಸಬೇಕು, ಎಲ್ಲಿಯಾದರೂ ಗಮನಿಸಿ ಸುತ್ತಾಡಬೇಕು ತಿರುಗಾಡುವದನ್ನು ಕೈಕೊಳ್ಳುವದಿಲ್ಲ, ಎರಡನೆಯವರು ಮಾಡಿದ್ದನ್ನು ಸಹಿಸಲಿಕ್ಕಾಗುವದಿಲ್ಲ ಅಂದ ಮೇಲೆ ಈ ವಿಕಲ್ಪ ಸ್ಥಿತಿಯಿಂದ ದುಃಖಯಾತನೆಗಳು ಉಂಟಾಗುವದು ಸಹಜವು ಪ್ರತಿಯೊಬ್ಬನು ತನ್ನಲ್ಲಿಯೇ ತಾನು ವಿಚಾರ ಮಾಡಬೇಕು ತನ್ನ ವಿಚಾರ ಶೋಧಕ್ಕೆ ಅನುಕೂಲವಾಗುವ ಬಗೆಯಿಂದ ವರ್ತಿಸತಕ್ಕದ್ದು "

ಶ್ರೀ ರಾಮ!! ೮ ಉಪಾಧೀ ಲಕ್ಷಣ ನಿರೂಪಣೆ!! ಗುರುಗಳು ಶಿಷ್ಯರಿಗೆ-

"ಈ ಸೃಷ್ಟಿಯಲ್ಲಿ ಜನಸಂಖ್ಯೆಯು ಬಹಳವಾಗಿದೆ. ಅಲ್ಲಲ್ಲಿ ಎಲ್ಲ ಕಡೆಯಲ್ಲಿ ಸಂಚರಿಸುವದರಿಂದ ಜನತೆಯಲ್ಲಿಯ ವಿವಿಧ ಕೌತುಕವು ಕಂಡುಬರುವದು ಎಷ್ಟೋ ಬಗೆಯ ವಿವೇಕಿಗಳು ಇರುವರು ಅದೆಷ್ಟೋ ಜನರು ಪ್ರಪಂಚದಲ್ಲಿ ಉದಾಸೀನ ವೃತ್ತಿಯಿಂದ ಇರುವರು ಸುಖದುಃಖ ಪ್ರಸಂಗಗಳೊದಗಿದರೂ ಸಮಾಧಾನವನ್ನು ಕಳೆದುಕೊಳ್ಳದವರೂ ಇರುವರು ಅಂಥವರ ನಡೆನುಡಿಗಳು ಯೋಗ್ಯವಾಗಿ ಅವು ಎಲ್ಲರಿಗೂ ಮಾನ್ಯವಾಗುವಂಥವಿರುವವು ತಾಳ-ರಾಗಗಳ ಜ್ಞಾನವೂ ಅವರಲ್ಲಿರುವದು ಅವರಲ್ಲಿಯ ಮಾನ್ಯ ನೀತಿಗಳ ಲಕ್ಷಣಗಳು ಸಹಜವಾಗಿ ತಿಳಿಯುವವು ಶೂರ ಪುರುಷನೊಬ್ಬನು ಭೆಟ್ಟಿಯಾಗಲು ಅವನನ್ನು ಎಲ್ಲರೂ ಪ್ರೀತಿಯಿಂದ ಕಾಣುವರು. ಅಪ್ಪಿತಪ್ಪಿ ಎಷ್ಟೋ ಸಂಗತಿಗಳು ದೃಷ್ಟಿಗೆ ಬೀಳುವವು ಮೇಲ್ತರಗತಿಯ ಗೌರವಸ್ಥನು ಭೆಟ್ಟಿಯಾಗುವನು, ಅವನಲ್ಲಿ ಮಹಂತ ಲಕ್ಷಣಗಳು ಅನಾಯಾಸವಾಗಿ ಸಿದ್ಧವಾಗಿ ಇದ್ದುದು ಕಂಡುಬರುವದು. ಇದಲ್ಲದೆ ಎಷ್ಟೋ ವಿಲಕ್ಷಣ ಗುಣಗ್ರಾಹಿದಳೂ ಕಂಡುಬರುವರು. ಅವರ ನಡೆ ನುಡಿಗಳು ಸಹಜವಾಗಿ ಅನುಭವಯುಕ್ತವಾಗಿರುವವು ತನ್ನ ಅವಗುಣಗಳು ತನಗೆ ಒಳ್ಳೆಯವೆಂದು ಭಾವಿಸುವವನು ಹೆಚ್ಚಿನ ಅವಗುಣಿಯು ಹೀಗೆ ದೋಷವನ್ನು

ಗುಣವೆಂದು ತಿಳಿಯುವದು ಮಹಾದೋಷವು ಈ ದೋಷವಿದ್ದವನ ಸಂಚಿತ ಪಾಪಗಳೂ ಅವುಗಳಿಂದೊದಗಿದ ದಾರಿದ್ರ್ಯವೂ ಎಂದೂ ದೂರಾಗುವದಿಲ್ಲ ಅನ್ಯರಿಗೆ ಅಸಾಧ್ಯವಾದ ಕ್ರಿಯೆಗಳನ್ನು ಅನಾಯಾಸವಾಗಿ ದಕ್ಷತೆಯಿಂದ ಪೂರ್ಣ ಮಾಡುವವನು, ಒಳ್ಳೇ ಪ್ರಭಾವಶಾಲಿಯು ಅವನೂ ಕ್ರಿಯಾ ಸಿದ್ಧತೆಯಲ್ಲಿ ಅಡತಡೆಗಳನ್ನೆದುರಿಸುವ ಕಾರಣವೇ ಉಂಟಾಗುವದಿಲ್ಲ ಒಬ್ಬನಿಗೆ ಅಭ್ಯಾಸವು ಎಷ್ಟು ಶ್ರಮಬಟ್ಟರೂ ಸಾಧ್ಯವಾಗುವದಿಲ್ಲ ಮತ್ತೊಬ್ಬನಿಗೆ ಅನಾಯಾಸವಾಗಿ ಸಾಧ್ಯವಾಗುವದು ಹೀಗೇಕೆ ? ಇದರ ಉತ್ತರವನ್ನು ಹೇಳಲಿಕ್ಕೆ ಒರದಿದ್ದರೂ ಭಗವಂತನ ಮಹಿಮೆಯು ಅತರ್ಕ್ಯವಾದುದು ಎಂದಿಷ್ಟೇ ಉತ್ತರ ಹೇಳಬಹುದು ಆ ಭಗವಂತನ ಮಹಿಮೆಯು ತಿಳಿಯದಾಗಿರುವದು ದೊಡ್ಡ ದೊಡ್ಡ ರಾಜಕಾರಣಿಗಳೂ ಕೂಡ ತಮ್ಮ ಧೋರಣೆಯಲ್ಲಿ ಒಮ್ಮೊಮ್ಮೆ ತಪ್ಪುವದುಂಟು ರಾಜಕೀಯ ಪೇಚುಗಳಿಗೆ ಸಿಕ್ಕು ಅವರು ಹುಚ್ಚು ಹಿಡಿದಂತಾಗುವರು ಜನರಲ್ಲಿ ತಿರಸ್ಕೃತರಾಗುವರು ಆದ್ದರಿಂದ ತಪ್ಪತಕ್ಕದ್ದಲ್ಲ ತಪ್ಪುವದರಿಂದ ಉಪಾಯಗಳು ಅಪಾಯವಾಗುವವು ರಾಜಕಾರಣವು ತಪ್ಪದೆ ಸಾಗಿದರೆ ಹೊಸ ಹೊಸ ಉಪಾಯುಗಳು, ತಲೆದೋರುವವು ತಪ್ಪು ಇಂಥಲ್ಲಿಯೇ ಆಗುವದೆಂಬದು ತಿಳಿಯುವದಿಲ್ಲ ಹಾಗು ಮನುಷ್ಯನ ಮನಸ್ಸು ಜಾಗ್ರತವಾಗುವದಿಲ್ಲ ಈ ಎರಡೂ ಬಗೆಗಳಿಂದ ಮತಿಗೆಟ್ಟು ಅಭಿಮಾನವು ಹೋಗುವದಿಲ್ಲ ಹೀಗಾಗಿ ಸಭೆಯೇ ಮುರಿದು ಹೋಗುವದು ಜನರ ಮನಸ್ಸು ವ್ಯತ್ಯಸ್ತವಾಗುವದು ತಪ್ಪು ಎಲ್ಲಿ ಉಂಟಾಗುವದೆಂಬದನ್ನು ತಿಳಿದು ಅದನ್ನು ತಿದ್ದಿಕೊಳ್ಳುವ ಯುಕ್ತಿಯು ಧ್ಯಾನದಲ್ಲಿ ಬರುವದಿಲ್ಲ ತನ್ನಲ್ಲಿ ಕರ್ತೃತ್ವ ಸಾಮರ್ಥ್ಯವಿರದೆ ಪ್ರಯತ್ನ ಮಾಡ ಹೋಗಲು ಮೋಸಕ್ಕೆ ಬಲಿ ಬೀಳುವದುಂಟು ಯಾಕಂದರೆ ದೂರ ದೃಷ್ಟಿಯಿಂದ ವಿಚಾರ ಮಾಡದೆ ಹೋದುದರಿಂದ ಹೀಗಾಗುವದು ನಿರುತ್ಸಾಹಿ ಮಾನವನೊಬ್ಬನು ಕೆಲಸವನ್ನ ದಕ್ಷತೆಯಿಲ್ಲದೆ ಮಾಡುವನು ಅವನು ಕೆಲಸದಲ್ಲಿ ಹಲವು ಸಂಶಯುಗಳನ್ನು ತಂದು ನಿಲ್ಲಿಸುವನು ಹೀಗಾಗುವದರಿಂದ ಅವನ ಸಂಶಯೆಗಳೇ ಅವನನ್ನು ಕೆಲಸದಿಂದ ಉಕ್ಕರಿಸಿ ಬಿಡುವವು ಅವನ ಈ ವಿಕಲ್ಪನೆಗಳು ಯಾರಿಗೂ ತಿಳಿಯುವದಿಲ್ಲ ಒಂದು ವೇಳೆ ತಿಳಿದರೂ ಅವರು ಮಾಡುವದೇನು ? ಆ ವಿಕಲ್ಪನೆಗಳಿಗೆ ಎಡೆಗೊಟ್ಟ

ವನೇ ತನ್ನಲ್ಲಿ ದೃಢ ಬುದ್ಧಿಯನ್ನು ತಂದುಕೊಂಡು ಅದರಿಂದ ಆ ಕಲ್ಪನೆಗ ಳನ್ನು ಹಿಂದೂಡತಕ್ಕದ್ದು ಉಪಾಧಿಗಳನ್ನು ತಡೆಗಟ್ಟಲು ಬಾರದವನು ತನಗೆ ಅವನ್ನು ಆವರಿಸಲು ಸಾಧ್ಯವಿರದಿದ್ದರೂ ನಿದಾನ ಆ ಉಪಾಧಿಗಳನ್ನು ಬೆಳೆಯಗೊಡತಕ್ಕದ್ದಲ್ಲ ಮನಸ್ಸನ್ನು ಸ್ಥಿರವಾಗಿರಿಸಿಕೊಂಡು ಸಮಾಧಾನ ವನ್ನು ಕಾಯ್ದುಕೊಂಡಿರಬೇಕು ಅವಸರವಸರ ಮಾಡಿ ಉಪಾಧಿಗಳನ್ನು ಹೆಚ್ಚಿಸಿಕೊಳ್ಳುವದು ತನಗೂ ಅನ್ಯರಿಗೂ ಉಪಯೋಗವಾಗುವದಿಲ್ಲ ಈ ಉಪಾಧಿಗಳ ಬೆಳವಣಿಗೆಯೇ ಮನಃಕ್ಷೋಭೆಯು ಇದು ಕೆಲಸಕ್ಕೆ ಬಾರದ ಸಂಗತಿಯು ತನಗೂ ಕಷ್ಟ ಇತರರಿಗೂ ಕಷ್ಟ ಅಂದಮೇಲೆ ಈ ಉಪಾಧಿ ಗಳ ಆಡಂಬರವೇಕೆ ? ಉಪಾಧಿಗಳ ಮೂಲಕ ಕೆಲವು ಕ್ರಿಯೆಗಳು ಸರಳವಾ ಗಿಯೂ ಕೆಲವು ವ್ಯತ್ಯಯವಾಗಿಯೂ ಸಾಗುವವು ಇದೇ ಉಪಾಧಿಯ ಕೆಲಸವು ಜಾಣನಾದವನು ಇದೆಲ್ಲವನ್ನೂ ಅರಿತುಕೊಂಡು ನಡೆಯಬೇಕು ಅಂದರೆ ಒಳಿತಾಗುವದು ಈ ಬಗೆಗೆ ಜನರ ವಿಚಾರ ಕೇಳಬೇಕಾಗಿಲ್ಲ ತನ್ನಲ್ಲಿಯೇ ವಿವೇಕವನ್ನು ಕಾಣಬೇಕು, ಒಟ್ಟಿನ ಮೇಲೆ ಕೊನೆಗೆ ಏನೊಂದು ತೊಂದರೆ ಹುಟ್ಟಬಾರದು ಇದೆಲ್ಲವೂ ನಿರ್ಗುಣನಿಗೇನೂ ಸಂಬಂಧವಿಲ್ಲ ಚಂಚಲ ಅಂತರಾತ್ಮನಿಗೆ ಸಂಬಂಧಿಸುವದು ಎಲ್ಲ ಮೋಸ ಗಾರಿಕೆಯು ಆ ಅಂತರಾತ್ಮನದು ಪವಿತ್ರ ವಿಶ್ರಾಂತಿಯ ಸ್ಥಾನವೆಂದರೆ ನಿರ್ಗುಣ ಬ್ರಹ್ಮಪದವು ಅಲ್ಲಿ ಎಲ್ಲ ವಿಕಾರಗಳ ನಿರ್ವಿಕಾರತೆ ಹೊಂದು ವವು ಚಿಂತೆ, ಉದ್ವೇಗಗಳು ಕಳಚಿ ಬೀಳುವವು ಮನಸ್ಸಿಗೆ ಆರಾಮವೆ ನ್ನಿಸುವದು: ಪರಬ್ರಹ್ಮ ಸ್ಥಿತಿಯು ಇಂಥ ದುರ್ಲಭವಿರುವದು ವಿವೇಕ ದಿಂದ ಆ ಸ್ಥಿತಿಯನ್ನು ಪಡೆಯಬೇಕು 'ನನಗೆ ಮೂಲತಃ ಉಪಾಧಿಗಳಿಲ್ಲ ಸ್ತ್ರೀ-ಪುತ್ರಾದಿಕರೆಲ್ಲ ಋಣಾನುಬಂಧದಿಂದ ಕೂಡಿದವರು ಎಲ್ಲವೂ ಹೊದರೂ ಸರಿ ಬಿಟ್ಟರೂ ಸರಿ ಅದರ ಗೊಡವೆ ನನಗಿಲ್ಲ' ಈ ಬಗೆಯ ಸ್ಥಿತಿಯು ಉಂಟಾಗಬೇಕು ಉಪಾಧಿಗಳಿಂದ ಬೇಜಾರುಗೊಂಡವನು ನಿವಾಂತದಲ್ಲಿ ಕುಳಿತುಕೊಂಡರೆ ಮುಂದೆ ಅವನಿಗೆ ಅವುಗಳಿಂದ ಆಗುವ ದೇನು ? ಆಯುಷ್ಯದಲ್ಲಿ ಕೆಲಕಾಲ ಜಂಜಾಟದಲ್ಲಿ ಕೆಲಕಾಲ ವಿಶ್ರಾಂತಿಯಲ್ಲಿ ಕಾಲ ಕಳೆಯಬೇಕು ಅಂದರೆ ಮಾತ್ರ ವಿಶ್ರಾಂತಿಯ ಕಾಲಸಿಗುವದು ಏನು ಮಾಡಿದರೂ ಉಪಾಧಿಗಳು ಉಳಿದು ನಿಲ್ಲುವದಿಲ್ಲ ಆತ್ಮಸಮಾಧಾನದಷ್ಟು

ದೊಡ್ಡದಾವುದೂ ಇಲ್ಲ ಆ ಸಮಾಧಾನವು ನರದೇಹವಿಲ್ಲದೆ ಸಿಗುವದಿಲ್ಲ, ಮತ್ತು ಆ ನರದೇಹವಾದರೂ ಪುನಃ ಪುನಃ ಪ್ರಾಪ್ತವಾಗುವಂತಹದಲ್ಲ "

ಶ್ರೀ ರಾಮ ॥ ೯ ರಾಜಕಾರಣ ನಿರೂಪಣೆ । ಗುರುಗಳು ಶಿಷ್ಯರಿಗೆ–"ಜ್ಞಾನಿಯಾಗಿದ್ದು ಉದಾಸೀನನಾಗಿದ್ದರೆ ಮತ್ತು ಸಮುದಾಯ ವರ್ಧನೆಯ ಉತ್ಸಾಹವು ಆತನಲ್ಲಿದ್ದರೆ ಅವನು ಸ್ವಸ್ಥಚಿತ್ತದಿಂದ ಏಕಾಂತವನ್ನು ಗ್ರಹಿಸಬೇಕು ಏಕಾಂತ ವಾಸದಿಂದಹಲವು ಹಂಚಿಕೆ ಉಪಾಯಗಳು ತಲೆದೋರುವವು ಹಲವು ಪ್ರಶ್ನಗಳ ಮನನವು ಸಾಗುತ್ತದೆ ಮತ್ತು ಪ್ರಾಣಿಮಾತ್ರಗಳ ಸ್ಥಿತಿಗತಿಗಳು ಗೊತ್ತಾಗುವವು ಹೀಗೆ ವಿಚಾರ ಮಾಡದಿದ್ದರೆ ಆವನಿಗೇನೂ ತಿಳಿಯುವದಿಲ್ಲ ಮತ್ತು ಸಾಲ ಆಖೈರೆಯ ಲೆಕ್ಕದಿಂದ ಶಿಲಕು ಶೂನ್ಯವಾಗಿರುವ ದಿವಾಳಿ ಹೊರಟ ವ್ಯಾಪಾರಿಗನಂತೆ ಆತನ ಸ್ಥಿತಿಯಾಗುವದು ಕೆಲವರು ಅನ್ಯರಿಂದ ಹೊಸದಾಗಿ ಭೂಮಿಯನ್ನು ಕೊಳ್ಳುವರು, ಕೆಲವರು ತಮಗಿದ್ದ ಆಸ್ತಿಯನ್ನು ತಾವಾಗಿ ಕಳೆದುಕೊಂಡು ಕೊಡುವರು, ವ್ಯಾಪಕತನದ ಸ್ಥಿತಿಯು ಹೀಗಿರುವದು ಮೋಸಗಾರನ ಮನೋಗತವು ನಮಗೆ ಮೊದಲೇ ತಿಳಿದರೆ ಅವನು ನಮ್ಮ ಮೇಲೆ ಕೃತ್ರಿಮ ಕ್ರಿಯೆಗಳನ್ನು ಮಾಡಲಿಕ್ಕೆ ಅಸಮರ್ಥನಾಗುವನು ಸತತವೂ ಜನರ ಜೊತೆಯಲ್ಲಿ ಇರುವದರಿಂದ ಅವರೊಡನೆ ಸಲಿಗೆ ಬೆಳೆಯುವದು ಅತಿ ಪರಿಚಯವಾಗುವದು ಅದರಿಂದ ನಮ್ಮ ಹಾಗು ಆವರ ನಡುವೆ ತಿರಸ್ಕಾರ ಹುಟ್ಟುವದು ಆದ್ದರಿಂದ ಒಂದೇ ಸ್ಥಳದಲ್ಲಿ ವಿಶ್ರಾಂತಿಯೆಂದು ವಾಸ್ತವ್ಯ ಮಾಡಬಾರದು ಆಲಸ್ಯದಿಂದ ಆಲಸ್ಯವು ಹೆಚ್ಚಾಗುತ್ತ ಹೋಗಿ ಕೆಲಸವಾಗುವದಿಲ್ಲ ಸಂಘ–ಸಮುದಾಯಗಳನ್ನು ಬೆಳೆಯಿಸುವ ಮನಸಿನ ಉದ್ದೇಶವು ಹಾಗೇ ಉಳಿದು ಬಿಡುತ್ತದೆ ಜನರನ್ನು ಉಪಾಸನೆ ನಿತ್ಯಕರ್ಮಗಳ ಬೆನ್ನು ಹಚ್ಚಿಬಿಟ್ಟರೆ ಅವರಿಗೆ ಕೃತ್ರಿಮಗಳನ್ನು ಮಾಡುವದಕ್ಕೆ ಅನುವು ಉಂಟಾಗುವದಿಲ್ಲ ಕಳ್ಳನ ಕೈಯಲ್ಲಿಯೇ ಬೊಕ್ಕಸದ ಬೀಗವನ್ನು ಒಪ್ಪಿಸಿ ಅವನನ್ನು ಕೋಶಾಧ್ಯಕ್ಷನನ್ನಾಗಿ ಮಾಡಲು ಅಡ್ಡಿಯಿಲ್ಲ ಆದರೆ ಆವನು ಆ ಬೊಕ್ಕಸವನ್ನು ಒಡೆಯದ ಹಾಗೆ ನಾವು ಅವನ ಮೇಲೆ ಲಕ್ಷ್ಯವನ್ನಿಡಬೇಕಾಗುತ್ತದೆ ಮತ್ತು ಆ ಮೂರ್ಖನ ಮನಸ್ಸಿನಲ್ಲಿಯ ಹೊಲ್ಲದ ವಿಚಾರಗಳನ್ನು ಮೆಲ್ಲಮೆಲ್ಲನೆ ಇಲ್ಲದಂತೆ ಮಾಡಬೇಕಾಗುತ್ತದೆ

ಈ ಸಂಗತಿಯು ಹೊಸದಲ್ಲ ಯಾರನ್ನೂ ನೋಯಿಸದೆ ಎಲ್ಲರನ್ನೂ ಯುಕ್ತಿಯಿಂದ ರಾಜಕಾರಣದಲ್ಲಿ ತೊಡಕಿಸಬೇಕು ದುಷ್ಟರನ್ನು ದುಷ್ಟರ ನಿಯಂತ್ರಣದಲ್ಲಿ ಇರಿಸಬೇಕು ಬಾಯ್ಬಡಕರಿಗೆ ಬಾಯ್ಬಡಕರ ಜೊತೆಯನ್ನೇ ಜೋಡಿಸಿ ಬಿಡಬೇಕು ತನ್ನಲ್ಲಿ ಇಲ್ಲದ ಕಲ್ಪನೆಗಳು ಬಂದು ಸೇರದಂತೆ ತಾನು ಅವುಗಳಿಂದ ಅಲಿಪ್ತನಾಗಿರಬೇಕು ಮುಳ್ಳಿನಿಂದ ಮುಳ್ಳು ತೆಗೆಯಬೇಕು ಹಾಗೆ ತೆಗೆದರೂ ಮುಳ್ಳು ನಡಿಸಿಕೊಂಡವನಿಗೆ ಗೊತ್ತಾಗಬಾರದು ಜಗಳಗಂಟನು ಹೂಡುವ ಕದನಕ್ಕೆ ಆಸ್ಪದ ಕೊಡಬಾರದು ಜನರಿಗೆ ತಿಳಿಸದೆ ಮಾಡಿದ ಕೆಲಸವು ಆ ಕೂಡಲೇ ಕೊನೆಗಾಣುವದು ಆದರೆ ಎಲ್ಲರಿಗೂ ಹೇಳಿ ಕೇಳಿ ಕೆಲಸ ಮಾಡಿದರೆ ಹೊಸದರಲ್ಲಿಯ ಸೊಗಸು ಉಳಿಯುವದಿಲ್ಲ ಯಾವದೊಂದರ ಬಗೆಗೆ ಕೇಳಿ ಪ್ರೀತಿಯನ್ನು ಇಡಬೇಕು, ನೋಡಿ ಧೃಡ ಮಾಡಿಕೊಳ್ಳಬೇಕು ಸೇವಕರೊಡನೆ ಸಲಿಗೆಯಿಂದ ನಡೆದುಕೊಳ್ಳಬೇಕು ಯಾವದೊಂದು ಕೆಲಸವು ಮಾಡಿದರೆ ಮಾತ್ರ ಮುಗಿಯುವದು, ಮಾಡದಿದ್ದರೆ ಅಪೂರ್ಣವಾಗುವದು- ಆದ್ದರಿಂದ ಮಾಡುವ ಕೆಲಸದಲ್ಲಿ ಅನಾಸ್ಥೆಯಿರಕೂಡದು ತನ್ನ ಕೆಲಸಕ್ಕಾಗಿ ಅನ್ಯರನ್ನವಲಂಬಿಸುವವನ ಕಾರ್ಯವು ಸಫಲಗೊಳ್ಳಲಾರದು ಸ್ವಂತ ಶ್ರಮದಿಂದ ಕೆಲಸ ಮಾಡಿ ಮುಗಿಯಿಸಿಕೊಳ್ಳುವವನು ಜಾಣನು ಹಲವರ ಹಲವು ತಿಳುವಳಿಕೆಗಳಿಂದ ಕಾರ್ಯ ಮುಗಿಯುವದೆಂದಿಗೂ ಸಾಧ್ಯವಿಲ್ಲ ಇಷ್ಟೇ ಅಲ್ಲ ಆ ಕೆಲಸವು ಮುಕ್ತಾಯಗೊಳ್ಳದೆ ಹಾಗೇ ಉಳಿಯುವದು ಹೀಗೆ ಮಾಡಬಾರದು ಕೆಲಸದ ಮುಖ್ಯಸೂತ್ರವನ್ನು ತನ್ನ ಕೈಯಲ್ಲಿಟ್ಟುಕೊಂಡು ಎರಡನೆಯವರಿಂದ ಆ ಕೆಲಸ ಮಾಡಿಸಿಕೊಳ್ಳಬೇಕು ರಾಜಕಾರಣದಲ್ಲಿ ಧೋರಣೆಯುಳ್ಳ ಹಲವು ಧೂರ್ತರನ್ನೇ ಸೇರ್ಪಡೆ ಮಾಡಿಕೊಳ್ಳಬೇಕು ಕಲಹ–ಕದನಗಳುಂಟಾದಾಗ ಮುಂದಾಳುವಾಗಿ ಮಾತಾಡುವವನ ಮೇಲೆಯೇ ಶೂರತನ ತೋರಿಸಬೇಕು ದುರ್ಜನರ ಯೋಗದಿಂದ ರಾಜಕಾರಣಕ್ಕೆ ವ್ಯತ್ಯಯ ಬರದಂತೆ ವ್ಯವಸ್ಥೆಯಿಡಬೇಕು ಗ್ರಾಮಕಂಟಕರು ಅಥವಾ ದುರ್ಜನ ಸಮಾಜದವರು ರಾಜಕಾರಣಕ್ಕೆ ತೊಂದರೆ ಕೊಡುವದುಂಟು. ಅಂಥ ಪ್ರಸಂಗದಲ್ಲಿ ಅವರಲ್ಲಿಯ ಪ್ರಮುಖರನ್ನು ದೋಷಿಗ

ಳೆಂದು ಹಿಡಿದು ಅವರನ್ನು ಜರ್ಜರಿತರನ್ನಾಗಿ ಮಾಡಬೇಕು ಆದರೆ ಅವರು ತಮ್ಮ ದೋಷ ಹಾಗು ಪಶ್ಚಾತ್ತಾಪಗಳನ್ನು ಪ್ರಕಟಿಸಿದರೆ ಅವ ರನ್ನು ತಮ್ಮಲ್ಲಿ ಕೂಡಿಸಿಕೊಳ್ಳಬೇಕು ಪೂರ್ಣವಾಗಿ ಅವರನ್ನು ರಸಾತ ಳಕ್ಕೆ ಒತ್ತಿ ಸೇರಿಸಬಾರದು, ದುಷ್ಟ-ದುರ್ಜನರ ಭಯದಿಂದ ರಾಜ ಕಾರಣವು ರಕ್ಷಿತವಾಗದೆ ಹೋದರೆ ಒಳಿತು ಹೀನಗಳೂ, ಗುಪ್ತ ಕಾರಸ್ಥಾ ನಗಳೂ ಹೊರಬಿದ್ದು ಕಾರ್ಯ ನಾಶವಾಗಬಹುದು ಸಂಘ–ಸಮುದಾಯ ಶಕ್ತಿಯನ್ನು ಹೆಚ್ಚಿಸುವ ಉತ್ಸಾಹವಿದ್ದರೆ ಮಿಗಿಲಾದ ಆಕ್ರಮಣ ಶಕ್ತಿ ಯಿರಬೇಕಾಗುವದು- ಮರೆವನ್ನು ಮಾಡಿಕೊಂಡು ಮುಳಿಗೆಯಲ್ಲಿ ಬೀಳ ಬಾರದು ದುರ್ಜನರು ಇಂಥಿಂಥವರೇ ಎಂದು ತಿಳಿದುಕೊಳ್ಳಬೇಕು, ಆದರೆ ಅದನ್ನು ಪ್ರಕಟಿಸಬಾರದು ಅಂಥವರನ್ನು ಸಜ್ಜನರಿಗೆ ಒಪ್ಪುವ ಮಾನ್ಯ ತೆಯನ್ನು ಕೊಟ್ಟು ನಡೆಯಿಸಿಕೊಳ್ಳಬೇಕು ಅವರು ದುರ್ಜನರೆಂದುಪ್ರಕಟ ಮಾಡಿದರೆ ಬಿಟ್ಟೂ ಬಿಡದೆ ಪ್ರಯತ್ನ ಮಾಡುತ್ತಲೇ ಇರಬೇಕಾಗುವದು ಆದ್ದರಿಂದ ಈ ಹಾದಿಯು ಯೋಗ್ಯವಾಗಲಾರದು

ಶತ್ರುವಿನ ಸೈನ್ಯವನ್ನು ಕಂಡಕೂಡಲೆ ರಣಧೀರರ ಬಾಹುಗಳು ಸ್ಫುರಿತ ಹೊಂದುವವು ಇಂಥ ಶೂರನೂ ಲೋಕನಾಯಕನೂ ಹಾಗು ಪರಮಾರ್ಥಪರನೂ ಆದ ಅರಸನಿರಬೇಕು ಅವನ ದೃಷ್ಟಿ ಕಿರಣದಿಂದ ದುಷ್ಟರ ಎದೆಯೊಡೆದು ನೀರಾಗಬೇಕು ಅವನ ಪ್ರತಾಪಾಗ್ನಿಯ ಜಳವು ಶಾಕಿ ವೈರಿಗಳಿಗೆ ಅನುಭವವುಂಟಾಗಬೇಕು ಬಂಡುಗಾರರೂ ಪಾಖಂಡಿ ಗಳೂ ಆ ಅರಸನ ಕೀರ್ತಿ ಯವಾತಾಹತದಿಂದ ಹಾರಿ ಹೋಗಬೇಕು. ಇವೆಲ್ಲವೂ ರಾಜನಧೋರಣೆಯಿಂದೊದಗುವ ಕ್ರಿಯೆಗಳು ರಾಜಕಾರಣನಿರ್ಧ ರಣೆಯು ಮಾಡಲ್ಪಡಬೇಕು ರಾಜ್ಯದಾಡಳಿತೆಯಲ್ಲಿ ಶೈಥಿಲ್ಯವಿರಕೂಡದು ಎಲ್ಲಿ ಕೇಳಿದಲ್ಲೆಲ್ಲ ಅರಸನ ಕೀರ್ತಿ ಯಶ ಪ್ರತಾಪಗಳ ವರ್ಣನೆಯೇ ಮುಖ್ಯವಾಗಿ ನಡೆದಿರಬೇಕು ಆತನ ವಾಗ್ವಿಲಾಸವು ಜನತೆಯ ಮನವನ್ನು ಸೆಳೆಯು ವಂತಹದಿರಬೇಕು ಅವನಲ್ಲಿ ಶತ್ರು ನಿರ್ಮೂಲನ ಕ್ರಿಯೆಯು ಯಥಾತಥಾ ಯುಕ್ತವಾದದ್ದಿರಬೇಕು ಅಂದರೆ ಅವನು ಹುಂಬರನ್ನು ಹುಂಬನಿಂದ ಟೊಣಪರನ್ನು ಟೊಣಪನಿಂದ, ಗಟ್ಟಿಗರನ್ನು ಗಟ್ಟಿಗನಿಂದ, ಶೂರರನ್ನು ಶೂರನಿಂದ, ಉದ್ಧೃತರನ್ನು ಉದ್ಧೃತನಿಂದ ಮುಂತಾಗಿ ಪ್ರತಿನಿಧಿಯರ

ದ್ವಂದ್ವವನ್ನು ಸಿದ್ಧಗೊಳಿಸಿ ಯುದ್ಧಕ್ಕಣಿಮಾಡಿ ಗೆಲ್ಲಬೇಕು ಒಟ್ಟಿನ ಮೇಲೆ ಆವರವರ ತೆರದಿಂದ ಸಾಗಿದ ಯುದ್ಧರಂಗದ ಜಯಶ್ರೀಯು ಅರಸನ ಕೊರಳಿಗೆ ಮಾಲೆ ಹಾಕುವದರಲ್ಲಿ ಸಂಶಯವಿಲ್ಲ. ಹಾಗು ಇಂತು ನಡೆದ ರಣರಂಗದ ಒಡೆಯನು ಮಾತ್ರ ಅದೆಲ್ಲಿಯೂ ಕಾಣಿಸದಂತಿರುವನು"

ಶ್ರೀ ರಾಮ || ೧೦ ವಿವೇಕ ಲಕ್ಷಣ ನಿರೂಪಣೆ || ಗುರುಗಳು ಶಿಷ್ಯರಿಗೆ—

"ಅಖಂಡವಾದ ಹಲವು ಚರ್ಚಾತ್ಮಕ ವಿಚಾರಗಳು, ಧಾರಣವು, ರಾಜಕಾರಣಗಳ ತರ್ಕವಿತರ್ಕಗಳು, ಶ್ರೇಷ್ಠ ಗುಣಗಳ ನಿರೂಪಣೆಯು, ಹಲವು ಹೇಳಿಕೆ–ಕೇಳಿಕೆಗಳು, ಸಂಶಯ ಹಾಗು ನಿರಸನಗಳು, ಶಾಸ್ತ್ರಾಧಾರ ಸಹಿತ ಸತ್ಯಾಸತ್ಯಗಳನಿರ್ಣಯವು, ಭಕ್ತಿ-ಉಪಾಸನೆ–ಜ್ಞಾನ–ವೈರಾಗ್ಯ ಉದಾಸೀನತೆ–ಅಲಿಪ್ತತೆ ಇವೆಲ್ಲವುಗಳ ವಿಚಾರಗಳು, ಸುಂದರ ಕಾವ್ಯಗಳ ಪಾರಾಂತರಗಳು, ಸಮರ್ಪಕ ಪ್ರಶ್ನೋತ್ತರ–ಪ್ರತ್ಯುತ್ತರಗಳು, ಆತ್ಮವಿಷಯಕ ಭಾಷಣಗಳು, ಈ ಎಲ್ಲ ವಿಷಯಗಳ ಬಗೆಗೆ ಮಹಾ ಪುರುಷನು ಜನರಿಗೆ ಬೋಧಿಸಿ ರುಚಿ ಪ್ರೀತಿಗಳನ್ನು ಹುಟ್ಟಿಸುವ ಸ್ಥಾನದಲ್ಲಿ ಇನ್ನೊಬ್ಬರಾರದೂ ಏನೂ ಆಟ ಸಾಗದು ಮತ್ತು ಆ ಮಹಾ ಪುರುಷನ ತರುವಾಯ ಸಂಘಸಮುದಾಯಗಳು ನಡೆಯುತ್ತಲಿವೆ ಅಂದ ಮೇಲೆ ಆ ಮಹಾ ಪುರುಷನ ಹಾಗು ಸಂಘ–ಸಮುದಾಯಗಳ ಅಂತ:ಸ್ವರೂಪದ ಬಗೆಗೆ ಯಾರಿಗೂ ಯಥಾರ್ಥ ಜ್ಞಾನವಾಗಲಾರದು

ಆ ಮಹಾ ಪುರುಷನು ಉಪಾಸನೆಯನ್ನು ಬೆಳೆಯಿಸುವದಕ್ಕಾಗಿಯೇ ಎಲ್ಲೆಡೆಗೂ ಸಂಚರಿಸುವನು ಆದ್ದರಿಂದ ಜಗತ್ತಿನಲ್ಲಿ ಅವನು ಬೇಕಾದಲ್ಲಿ ಹೋದರೂ ಜನರು ಅವನಿಗೆ ಪರಿಚಿತರಾಗುವರು ಆದರೂ ಅವರಿಗೆ ಈ ಮಹಾಪುರುಷನ ಅಂತರವು ತಿಳಿಯದು ಇವನು ಮಾಡುವದು ಅವರಿಗೆ ತಿಳಿಯದು ದಿಗ್ದೇಶಗಳಿಂದ ಹಲವರು ಬಂದು ಇವನ ದರ್ಶನ ತೆಗೆದುಕೊಂಡು ಹೋಗುವರು ಎಲ್ಲರ ಮನಸ್ಸನ್ನೂ ಆತನು ಸೆಳೆದುಕೊಳ್ಳುವನು ಅವರೆಲ್ಲರ ಅಂತಕರಣವನ್ನು ವಿವೇಕ ವಿಚಾರಗಳಿಂದ ತುಂಬುವನು ಪೂರ್ಣ ವಿಚಾರವಿಲ್ಲದವರ ಮನಸ್ಸನ್ನು ಮನನ ಭಕ್ತಿಯ ಕಡೆಗೆ ಒಯ್ಯುವನು ಈ ಮಹಾ ಪುರುಷನ ಸಮುದಾಯವು ಇಷ್ಟೇ ಬೆಳೆದಿರುವದೆಂಬದು

ಯಾರಿಗೂ ಗೊತ್ತಾಗುವಂತಿಲ್ಲ ಮಾತ್ರ ಅವನು ಎಲ್ಲರನ್ನು ಶ್ರವಣ—ಮನನಗಳಿಂದ ತರಬೇತುಗೊಳಿಸುವನು ಜನರಿಗೆ ಗದ್ಯ–ಪದ್ಯಗಳನ್ನು ಹೇಳಿ ಅವರವರ ಬುದ್ಧಿಗನುಸರಿಸಿ ತಿಳಿಯುವಂತೆ ಪ್ರಯತ್ನ ಮಾಡುವನು ನಿರಂತರ ವಿವೇಕ ವರ್ತನವೇ ಅವನ ನಡುವಳಿಕೆಯ ಬಗೆಯಾಗಿರುವದು ಇಂಥ ದಕ್ಷತೆಯ ಮಹಾ ಪುರುಷನೆದುರು ಅವಿವೇಕವು ನಿಲ್ಲಲಿಕ್ಕೆ ಸಾಧ್ಯವೇ ಇಲ್ಲ ತನಗೆ ತಿಳಿದದ್ದನ್ನೆಲ್ಲ ಜನರಿಗೆ ಕ್ರಮ ಕ್ರಮವಾಗಿ ಬೋಧಿಸಿ ಬಿಡುವನು ಅದರಲ್ಲಿ ಅನುಮಾನವಿಲ್ಲ

ಇನ್ನು ಆ ಬೋಧಕನ ಉಪದೇಶಗಳು ಯಾವವೆಂದರೆ—

ತಾನು ಅರಿತದ್ದೆಲ್ಲವನ್ನು ಜನರಿಗೆ ಕ್ರಮ ಕ್ರಮವಾಗಿ ಹಲವು ಬಗೆ ಬಗೆಗಳಿಂದ ಬೋಧಿಸಬೇಕು ಶ್ರೋತೃಗಳಿಗುಂಟಾಗುವ ತೊಂದರೆಗಳನ್ನು ನಿವಾರಿಸಿ ಬೋಧಿಸಬೇಕು ನಿಸ್ಪೃಹರಲ್ಲಿ ನಿಸ್ಸಂದೇಹವನ್ನುಂಟು ಮಾಡಬೇಕು ತನ್ನಿಂದಾಗುವ ಕೆಲಸವನ್ನೇ ತಾನು ಮಾಡಬೇಕು ಆಗದ ಪಕ್ಷಕ್ಕೆ ಅನ್ಯರಿಂದ ಮಾಡಿಸಬೇಕು ಭಗವದ್ಭಜನಕ್ಕೆ ವ್ಯತ್ಯಯ ಬರುವದು ಧರ್ಮವಾಗಲಾರದು ನಿರಂತರ ಭಜನೆಯು ಸಾಗಬೇಕು ಇದೇ ಪ್ರಾಣಿ ಮಾತ್ರರ ಧರ್ಮವು ಭಗವದ್ಭಜನವನ್ನು ತಾನೂ ಮಾಡಬೇಕು ಮತ್ತು ಎರಡನೆಯವರು ಮಾಡುವಂತೆ ಪ್ರೇರೇಪಿಸಬೇಕು ತಾನು ನಿರೂಪಣೆ ಬೋಧಿಸಬೇಕು ಇತರರಿಗೂ ಬೋಧೆ ಮಾಡಲಿಕ್ಕೆ ಬರುವಂತೆ ಅವರನ್ನು ತರಬೇತುಗೊಳಿಸಬೇಕು ಎಲ್ಲರೊಡನೆ ಕೂಡಿಕೊಂಡು ಭಕ್ತಿ ಮಾರ್ಗವನ್ನು ಸಾಗಿಸಬೇಕು. ಹಳೆಯದರಿಂದ ಹೇಯತೆಯುಂಟಾದರೆ ಹೊಸದನ್ನು ಕೈಕೊಳ್ಳಬೇಕು ಅಂದರೆ ತರುಣರ ಮನಸ್ಸನ್ನು ಭಕ್ತಿಯ ಕಡೆಗೆ ಸೆಳೆಯಬೇಕು ಅವರಲ್ಲಿಯ ಸೋಮಾರಿತನವನ್ನು ಬಗೆಬಗೆಯಿಂದ ನಿವಾರಿಸಿ ಶಕ್ಯವಿದ್ದವರಿಗೆಲ್ಲ ಶಿಕ್ಷಣ ಕೊಟ್ಟು ತರಬೇತು ಮಾಡಬೇಕು ಭಗವದ್ಭಜನಕ್ಕೆ ಹಿಂದು ಮುಂದಾಗುವ ಶರೀರಧಾರಿಗಳನ್ನು ತಿದ್ದಿ ಅವರಿಗೆ ಬೋಧಿಸುವ ಅಭ್ಯಾಸವಿಲ್ಲದೆ ಹೋದರೆ ಮಹಂತತೆಯು ಮರೆಯಾಯಿತೆಂದೇ ಅರಿಯಬೇಕು ಹೊಸ ಹೊಸ ಜನರನ್ನು ಅದಷ್ಟು ತೀವ್ರ ನಿಪುಣರನ್ನಾಗಿ ಮಾಡಬೇಕು ಉಪಾಧಿಗಳನ್ನು ಬೆಳೆಯಿಸಬೇಕು ಮಾತ್ರ ತಾನು ಉಪಾಧಿಗಳಿಂದ ಅಲಿಪ್ತನಾಗಿರಬೇಕು ಉಪಾಧಿಗಳಿಂದ ಬೇಜಾರು

ಗೊಳ್ಳಬಾರದು ಆಲಸ್ಯತನವು ಎಲ್ಲ ಕೆಲಸಗಳಲ್ಲಿಯೂ ಉಪಯೋಗ ಬೀಳುವದಿಲ್ಲ ಈ ಆಲಸಿಗರಿಂದ ಅಂದರೆ ಕೆಲಸವನ್ನು ಹಾಳು ಮಾಡು ವವರಿಂದ ಏನೂ ಕೆಲಸವಾಗದು ಒಂದು ವೇಳೆ ಇವರನ್ನು ಕೆಲಸಕ್ಕೆ ಹಚ್ಚಿದರೂ ಇವರು ಹುಚ್ಚರಂತೆ ಸುಮ್ಮನೆ ನಿಂತು ನೋಡುವರು ಸೋಮಾರಿ ಹಾಗು ನಿರುತ್ಸಾಹಿಗಳು ಕೆಲಸ ನಾಶವಾಗುವದನ್ನು ತಡೆಯುವದಿಲ್ಲ ಅಶಕ್ತರಾದವರು ತಿಕ್ಕೆಮುಕ್ಕಿ ಬೀಳುವ ಪ್ರಸಂಗದಲ್ಲಿ ಉಪಯೋಗ ಬೀಳುವ ದಿಲ್ಲ ಆದ್ದರಿಂದ ಸಶಕ್ತರಾದ ಅಥವಾ ಕುಲವಂತರಾದ ಜನರನ್ನೇ ಆರಿಸಿ ಕೊಂಡು ಅವರಿಗೇ ಹಲವು ಯುಕ್ತಿಗಳನ್ನು ತಿಳಿಸಿ ತರಬೇತುಗೊಳಿಸಬೇಕು ತನ್ನ ಕೈಲಾದ ಮಟ್ಟಿಗೆ ವ್ಯಾಪಗಳನ್ನು ತಡೆಯಬೇಕು ಹಾಗೆ ತಡೆ ಯುವದು ಅಸಾಧ್ಯವಾದರೆ ಎಲ್ಲಿಗಾದರೂ ಸಂತೋಷದಿಂದ ಹೊರಟಿದ್ದು ಹೋಗಬೇಕು.

ಒಮ್ಮೆ ಉಪಾಧಿಗಳಿಂದ ಬಿಡುಗಡೆಯಾಗಲು ಅವನಲ್ಲಿ ನಿಸ್ಪೃಹ ತೆಯು ಹೆಚ್ಚಾಗುವದು ಮತ್ತು ಅವನು ತನ್ನ ಮನ ಬಂದಲ್ಲಿಗೆ ಅಂದರೆ ತನಗೆ ಅನುಕೂಲ ಪರಿಸ್ಥಿತಿಯಿರುವಲ್ಲಿಗೆ ಹೋಗುವನು ಕೀರ್ತಿಯ ಲವ ಲವಿಕೆಯುಳ್ಳವನು ಶರೀರ ವ್ಯಾಮೋಹವನ್ನು ಬಿಡತಕದ್ದು, ದೇಹಸುಖವೇ ಅವಶ್ಯವಾಗಿದ್ದರೆ ಕೀರ್ತಿ ಲಭಿಸಲಾರದು ದುಡಿಯದೆ ಯಾವ ಕೆಲಸವೂ ಕೊನೆಗೊಳ್ಳುವದಿಲ್ಲ. ದುಡಿಯುವ ಮನಸ್ಸುಳ್ಳವನ ಯಾವ ಕೆಲಸವೂ ಯಾರಿಂದಲೂ ತಡೆದು ನಿಲ್ಲುವದಿಲ್ಲ ಆಗತಕ್ಕದ್ದು ಆಗಿಯೇ ತೀರುವದು ಆದರೆ ದುರ್ಬಲತೆಯೂ ಕೆಲಸ ಮಾಡದಿರುವ ಸ್ಥಿತಿಯೂ ಇದಕ್ಕೆ ಅಡ ಕಾಗಬಾರದು ಕೆಲಸ ಮಾಡುವವನಲ್ಲಿ ಹುರುಪು-ಉತ್ಸಾಹಗಳೂ, ಧೀರ ತೆಯೂ ಇದ್ದುದಾದರೆ ಕೆಲಸ ಕೊನೆಗಂಡು ಅವನ ಸಂಸಾರ ಶಕಟವು ನಿರ್ಬಾಧೆಯಾಗಿ ಉರುಳುವದು ಮೂಲತ ಸಂಸಾರ ಶಕಟವು ಹರಕು ಮುರುಕಾಗಿ ಇರುವದು ಹಾಗೆ ಇದ್ದುದನ್ನು ವಿವೇಕ ಸಾಧನಗಳಿಂದ ಅದನ್ನು ಸರಿಪಡಿಸಿಕೊಳ್ಳತಕ್ಕದ್ದು ಒಮ್ಮೆ ಅದು ಸುಸ್ಥಿತಿ ಹೊಂದಿ ಸರಿ ಯಾಗಿ ಉರುಳುತ್ತ ಹೋಗಲು ಮುಂದೆ ಸಂಸಾರ ಸೀಮೆಯನ್ನು ದಾಟು ವದು ಅಂದರೆ ಆ ಪ್ರಾಣಿಯು ಸಂಸಾರದಿಂದ ನಿವೃತ್ತನಾಗುವನು

ಇಂತು ಸಂಸಾರ ಸ್ವಭಾವವಿದೆ ಇವೆಲ್ಲವು ವಿವೇಕದಿಂದ ತಿಳಿದು ಬರುತ್ತದೆ ಆದರೆ ಯಾರೂ ಧೈರ್ಯಗುಂದಬಾರದು. ಅಂಜಿದರೆ ಆಗುವದೇನು? ಅನುಭವಿಸಬೇಕೆಂಬ ವಿಧಿಯೇ ಇದ್ದರೆ ಅದು ತಪ್ಪಲಾರದು. ಇದರ ಇಂಗಿತವನ್ನು ಹಲವು ಮತಗಳೂ ಹಾಗು ಹಲವು ಬುದ್ಧಿಗಳುಳ್ಳವರೂ ಚೆನ್ನಾಗಿ ತಿಳಿದುಕೊಳ್ಳುವರು"

ಇತಿ ದಾಸಬೋಧೆಯ ೧೯ನೆಯ ದಶಕ ಮುಗಿದುದು





|| ಜಯ ಜಯ ರಘುವೀರ ಸಮರ್ಥ ||

೨೦ನೆಯ ದಶಕ (ಪೂರ್ಣ ದಶಕ)

ಶ್ರೀ ರಾಮ ಸಮರ್ಥ || ೧ ಪೂರ್ಣಾಪೂರ್ಣ ನಿರೂಪಣೆ || ಗುರುಗಳು ಶಿಷ್ಯರ ಪ್ರಶ್ನೆಗೆ ಉತ್ತರ ಹೇಳಿದ್ದೆಂತೆಂದರೆ—

ಪ್ರಶ್ನೆ – ಪ್ರಾಣಿಯು ವ್ಯಾಪಕವು, ಮನಸ್ಸು ವ್ಯಾಪಕವು, ಅದರಂತೆ ಪಂಚಭೂತಗಳೂ ತ್ರಿಗುಣಗಳೂ ವ್ಯಾಪಕಗಳಾಗಿವೆ ಅಂತರಾತ್ಮನೂ ಮೂಲ ಮಾಯೆಯೂ ನಿರ್ಗುಣ ಬ್ರಹ್ಮನೂ ಇವರೂ ವ್ಯಾಪಕರು ಆದರೆ ಹೀಗೆ ಹೇಳುವದು ಯೋಗ್ಯವೇ ? ಅವುಗಳಲ್ಲಿ ಕೆಲವು ಭೇದವಿರಬಹುದೆಂದು ನನಗೆ ಸಂಶಯವುಂಟಾಗಿದೆ ಆದರಂತೆ ಆತ್ಮನಿಗೆ ನಿರಂಜನನೆಂದು ಹೇಳುವದೂ ಸಹ ಸಂಶಯದ ಮಾತಾಗಿದೆ. ಆದ್ದರಿಂದ ಆತ್ಮವು ಸಗುಣವೋ ? ನಿರ್ಗುಣವೋ ? ಅಥವಾ ನಿರಂಜನವೋ ? ಇದನ್ನು ತಿಳಿಸುವದಾಗಬೇಕು

ಉತ್ತರ – ಪ್ರಥಮತಃ ಮೊದಲನೆಯ ಸಂಶಯದ ಬಗ್ಗೆ ಸಮಾಧಾನವನ್ನು ಕೇಳಬೇಕು ನಿಮ್ಮ ವಿವೇಕವನ್ನು ಜಾಗೃತಗೊಳಿಸಿ ಅನುಭವದಿಂದ ನೋಡಿಕೊಳ್ಳಿರಿ ಪ್ರಾಣಿಯು ತನ್ನ ಶರೀರ ಹಾಗು ಸಾಮರ್ಥ್ಯ ಮಾನದಿಂದ ದೊಡ್ಡದಾದ ವ್ಯಾಪವನ್ನು ಸ್ಪಷ್ಟಗೊಳಿಸುತ್ತಿರುವದು ಆದರೆ ವಿಚಾರ ಮಾಡಿ ನೋಡಲು ಮನಸ್ಸಿನ ವ್ಯಾಪಕದಷ್ಟುವ್ಯಾಪಕವು ಇನ್ನೊಂದಕ್ಕಿಲ್ಲ ಮನಸ್ಸು ಚಾಪಲ್ಯವಾದದ್ದು ಹಾಗು ಏಕದೇಶೀಯತೆಯುಳ್ಳದು ಆದುದರಿಂದ ಅದಕ್ಕೆ ಪೂರ್ಣ ವ್ಯಾಪಕತೆಯಿಲ್ಲ ಅದರಂತೆ ಪೃಥ್ವಿ, ಆಪ, ತೇಜ, ಹಾಗು ವಾಯು, ಈ ನಾಲ್ಕೂ ಭೂತಗಳು ಏಕದೇಶೀಯತೆಯವೂ ಅಪೂರ್ಣ ವ್ಯಾಪಕತೆಯವೂ ಆಗಿರುವವು ಇವು ಯಾವವೂ ಪೂರ್ಣ ವ್ಯಾಪಕಗಳಲ್ಲ ಇನ್ನು ಆಕಾಶ ಮತ್ತ ನಿರಂಜನ ಅಂದರೆ ನಿರ್ಗುಣಬ್ರಹ್ಮ ಇವೆರಡೂ ಪೂರ್ಣ ವ್ಯಾಪಕಗಳು ಇದಕ್ಕೆ ಸಂಶಯವಿಲ್ಲ ತ್ರಿಗುಣಗಳ್ಳು ಗುಣಮಾಯಾ, ಮೂಲ ಮಾಯೂ ಇವುಗಳಿಗೆ ವಿಲಯವುಂಟು ಇವಾದರೂ ಅಪೂರ್ಣ ಹಾಗು ಏಕದೇಶೀಯತೆಗಳಾಗಿರುವವು ಅಂದರೆ ಇವು ಪೂರ್ಣ ವ್ಯಾಪಕಗಳಲ್ಲ ಆತ್ಮಾ (ಜೀವಾತ್ಮ), ಮತ್ತು ನಿರಂಜನ(ನಿರ್ಗುಣ) ಈ ಹೆಸರುಗಳನ್ನು ಎರಡಕ್ಕೆ ಅಂದರೆ ಅಂತರಾತ್ಮ (ಜೀವ) ಮತ್ತು ಮೂಲ

ಮಾಯೆ (ಶಿವ) ಇವುಗಳಿಗೆ ಅನ್ವಯಿಸಲು ಬರುವದು ಆದರೆ ಎಲ್ಲಿ ಹಾಗು ಯಾವ ಅರ್ಥದಿಂದ ಈ ಹೆಸರುಗಳನ್ನು ಉಪಯೋಗ ಮಾಡಲು ಬರುವ ದೆಂಬದನ್ನು ಆ ಆ ಸಂದರ್ಭಗಳಿಂದ ತಿಳಿದುಕೊಳ್ಳಬೇಕು ಜೀವಾತ್ಮವೆಂದರೆ ಮನಸ್ಸು ಇದು ಅತಿ ಚಪಲವಾದದ್ದು ಅಂದರೆ ಪೂರ್ಣ ವ್ಯಾಪಕವಾಗಲಾರ ದೆಂಬದನ್ನು ಸೂಕ್ಷ್ಮವಾಗಿ ಅಂತಃಕರಣದಲ್ಲಿ ನೋಡಬೇಕು. ಆಕಾಶದಲ್ಲಿ ಅದನ್ನು ಕಾಣುವಾಗ ಅದು ಪಾತಾಳದಲ್ಲಿ ಇರುವದಿಲ್ಲ ಮತ್ತು ಪಾತಾಳ ದಲ್ಲಿ ನೋಡುವಾಗ ಅದು ಆಕಾಶದಲ್ಲಿ ಇರುವದಿಲ್ಲ ಹಿಂದೆ ನೋಡಿದರೆ ಮುಂದೆ ಇರುವದಿಲ್ಲ ಮುಂದೆ ನೋಡಿದರೆ ಹಿಂದೆ ಇರುವದಿಲ್ಲ ಎಡಕ್ಕೆ ನೋಡಿದರೆ ಬಲಕ್ಕಿಲ್ಲ, ಬಲಕ್ಕೆ ನೋಡಿದರೆ ಎಡಕ್ಕಿರುವದಿಲ್ಲ ಹತ್ತೂ ದಿಕ್ಕು ಗಳಲ್ಲಿ ಅದು ಏಕಸಮಯಾವಚ್ಛೇದವಾಗಿ ಇರುವದಿಲ್ಲ ಅಂತೆಯೇ ಅದು ಪೂರ್ಣ ವ್ಯಾಪಕವು ಆಗಿರಲಾರದು ನಾಲ್ಕೂ ಕಡೆಗೆ ನಾಲ್ಕೂ ನಿಶಾನೆಗ ಳನ್ನು ನಿಲ್ಲಿಸಿ ಅವನ್ನೆಲ್ಲ ಒಮ್ಮೆಲೇ ಮುಟ್ಟಲಿಕ್ಕೆ ಬರಲಾರದು ಈ ಬಗೆ ಯಿಂದ ನೋಡಲು ಆತ್ಮವೂ ಮನಸ್ಸೂ ಇವು ಸರ್ವ ಕಡೆಯಲ್ಲಿ ಸದಾವ ಕಾಲವೂ ಇರುವದಿಲ್ಲವಾದ್ದರಿಂದ ಅವು ಪೂರ್ಣ ವ್ಯಾಪಕವಾಗಿರುವದಿ ಲ್ಲೆಂಬದು ಅನುಭವದಿಂದ ಗೊತ್ತಾಗುತ್ತದೆ ಸೂರ್ಯನ ಪ್ರತಿಬಿಂಬವು ಪ್ರತಿ ಯೊಂದು ಜಲಾಶಯದಲ್ಲಿ ತೋರುವದು ಆದರೆ ಆ ಪ್ರತಿಬಿಂಬಗಳು ಸೂರ್ಯ ನಾಗಲಾರವು ಅದರಂತೆ ನಿರ್ಗುಣ ಬ್ರಹ್ಮನು ಮನ, ಬುದ್ಧಿ ಮೊದಲಾದ ಉಪಾಧಿಗಳ ಮೂಲಕ ಜೀವಾತ್ಮಾ, ಶಿವಾತ್ಮಾ ಈ ವಿಶಿಷ್ಟ ಹೆಸರಿಗೆ ಪಾತ್ರ ವಾದರೂ ಕೂಡ ಜೀವ (ಆತ್ಮ)ವು, ಶಿವ (ಮೂಲಮಾಯ)ಗಳು ನಿರ್ಗುಣ ಬ್ರಹ್ಮವಾಗಲಾರವು ಆದರೂ ಸೂರ್ಯನ ದೃಷ್ಟಾಂತದಿಂದ ನಿರ್ಗುಣ ಬ್ರಹ್ಮನ ಪೂರ್ಣತೆಯನ್ನು ವ್ಯಕ್ತ ಮಾಡಿ ತೋರಿಸಲಿಕ್ಕೆ ಬರುವದಿಲ್ಲ ಹೇಗೆಂದರೆ ಸೂರ್ಯನಿಗೆ ಉದಯಾಸ್ತಗಳಿರುವವು ನಿರ್ಗುಣ ಬ್ರಹ್ಮನು ಸತತವೂ ಪೂರ್ಣ ನಿರುವನು ಸೂರ್ಯ ದೃಷ್ಟಾಂತಕ್ಕಿಂತಲೂ ಆಕಾಶ ದೃಷ್ಟಾಂತವು ಇದಕ್ಕೆ ಹೆಚ್ಚು ಒಪ್ಪುವದು. ಆಕಾಶ ಹಾಗೂ ನಿರ್ಗುಣಗಳಲ್ಲಿ ಅದೆಷ್ಟೋ ಸಾಮ್ಯತೆ ಯುಂಟಾಗುವದು. ದೇಹ ಪರಿಮಿತ ಜೀವಾತ್ಮನೂ ಘಟಾಕಾಶದಂತೆಯೂ ಬ್ರಹ್ಮಾಂಡ ಪರಿಮಿತ ಶಿವಾತ್ಮನು ಮಠಾಕಾಶದಂತೆಯೂ ಎಂಬದಾಗಿ ಕಲ್ಪಿ

ಸಿದರೆ ಘಟಮಠಗಳ ಆಗು ಹೋಗುಗಳಾದರೂ ಆಕಾಶವು ವ್ಯಾಪಕವಾಗಿಯೆ ಇರುವದು ಆದರಂತೆ ಜೀವ-ಶಿವರ ಕಲ್ಪನೆ ಬಿಟ್ಟು ನಿರ್ಗುಣ ಬ್ರಹ್ಮ ಸಂಬಂಧ ವಿಚಾರವಾಗುವದು ಶಕ್ಯವಾಗುತ್ತದೆ ಆಕಾಶವು ಬ್ರಹ್ಮನ ಅಂಶವು ಮನವು ಆಕಾಶದ ಅಂಶವು ಹೀಗಿದ್ದ ಮೇಲೆ ಆಕಾಶವು ಮನಕ್ಕಿಂತಲೂ ಎಷ್ಟು ಪಟ್ಟು ಹೆಚ್ಚು ವ್ಯಾಪಕವಿರುವದೆಂಬದನ್ನು ನೋಡಬೇಕು ಇದೇ ದೃಷ್ಟಿಯನ್ನು ಮುಂದೆ ಸಾಗಿಸಿದರೆ ನಿರ್ಗುಣ ಬ್ರಹ್ಮನು ಆಕಾಶಕ್ಕಿಂತ ಅನಂತ ಪಟ್ಟು ಅಧಿಕವಾಗಿ ವ್ಯಾಪಕನಿರುವನೆಂಬದು ತಿಳಿಯುವದು ಮನವು ಆಕಾಶಕ್ಕೆ ಸರಿಯಾಗದು, ಅಂದಮೇಲೆ ಅದು ನಿರ್ಗುಣನಿಗೆ ಸರಿಯಾಗುವದೆಂತು ? ಮನಸ್ಸು ಮುಂದೆ ಹೋದಂತೆ ಹಿಂದೆ ಬಯಲು ಬೀಳುವದು ಆದರೆ ಆಕಾಶದ್ದು ಹೀಗಾಗುವದಿಲ್ಲ ಅದು ಹಿಂದೂ ಉಂಟು, ಮುಂದೂ ಉಂಟು ಮತ್ತು ಮನಕ್ಕಿಂತಲೂ ವ್ಯಾಪಕವಾಗಿರುವದು ಅಚಲವೆಂದರೆ ಪರ್ವತವು, ಅಚಲವೆಂದರೆ ಬ್ರಹ್ಮನು ಆದರೆ ಹೀಗನ್ನುವದರಿಂದ ಪರ್ವತವನ್ನು ಬ್ರಹ್ಮನಿಗೆ ಸರಿ ಮಾಡುವದು ಶಕ್ಯವಿಲ್ಲ ಜ್ಞಾನ, ಅಜ್ಞಾನ, ಮತ್ತು ವಿಜ್ಞಾನ ಈ ಮೂರು ಶಬ್ದಗಳಲ್ಲಿ ಜ್ಞಾನ ಶಬ್ದವು ಮಾತ್ರ ಸಾಮಾನ್ಯವದೆ ಅಷ್ಟರಿಂದ ಮಾತ್ರ ಆ ಮೂರರ ಸಾಮ್ಯತೆಯಾಗದು ಜ್ಞಾನವೆಂದರೆ ತಿಳಿಯುವದು, ಅಜ್ಞಾನವೆಂದರೆ ತಿಳಿಯದಿರುವದು, ವಿಪರೀತ ಜ್ಞಾನವೆಂದರೆ ಒಂದನ್ನು ಇನ್ನೊಂದು ಬಗೆಯಾಗಿ ತಿಳಿಯುವದು. ಜ್ಞಾನ ಮತು ಅಜ್ಞಾನಗಳ ವಿಚಾರವನ್ನು ಬಿಟ್ಟು ಜಡ ಪಂಚಭೌತಿಕಗಳನ್ನು ಸತ್ಯವೆಂದು ತಿಳಿಯುವದು ವಿಪರೀತ ಜ್ಞಾನವು ದೃಷ್ಟಾ, ಸಾಕ್ಷಿ, ಮತ್ತು ಅಂತರಾತ್ಮನೆಂದರೆ ಜೀವಾತ್ಮನು ಈ ಅಂತರಾತ್ಮನೇ ಜ್ಞಾನದಿಂದ ಶಿವಾತ್ಮನಾಗುವನು ಮತ್ತು ಶಿವಾತ್ಮನೇ ಜನ್ಮ ತಕ್ಕೊಂಡು ಜೀವಾತ್ಮನಾಗುವನು ಆತ್ಮನು ಜನನ ಮರಣಗಳುಳ್ಳವನು ಅವನು ಜನನ ಮರಣಗಳಿಂದ ದೂರಾಗುವದಿಲ್ಲವೆಂದೇ 'ಸಂಭವಾಮಿಯುಗೇ ಯುಗೇ'- ಎಂದು ಭಗವಂತನ ವಚನ ಪ್ರಸಿದ್ಧವಾಗಿದೆ - ಜೀವನು ಹೇಳಿಕೇಳಿ ಏಕದೇಶೀಯನು ಅವನೇ ವಿಚಾರದಿಂದ ವಿಶ್ವಂಭರನಾಗುವದು ಆದರೂ ಆ ವಿಶ್ವಂಭರನು ಸಂಸಾರದಿಂದ ಮುಕ್ತನಲ್ಲ ಜ್ಞಾನ ಮತ್ತು ಅಜ್ಞಾನ ಇವೆರಡೂ ವೃತ್ತಿರೂಪದಿಂದ ಸಮಾನವು ಆದ್ದರಿಂದ ನಿವೃತ್ತಿ ರೂಪದಿಂದ ಜ್ಞಾನದ ವಿ ಜ್ಞಾನ

ವಾಗಲೇಬೇಕು ಜ್ಞಾನದಿಂದ ಇಷ್ಟು ಬ್ರಹ್ಮಾಂಡವಾಯಿತು ಜ್ಞಾನದಿಂದ ಅದು ಬೆಳೆಯಿತು ಹೀಗೆ ಜ್ಞಾನವೇ ಹಲವು ವಿಕಾರಮಯು ವಾಯಿತು ಬ್ರಹ್ಮಾಂಡದ ಎಂಟನೆಯ ಶರೀರವಾದ ಮೂಲ ಮಾಯೆಯೇ ಜ್ಞಾನವು ಆ ಜ್ಞಾನದ ವಿಜ್ಞಾನವಾದರೆ ನಿರಂಜನ ಪದ ಪ್ರಾಪ್ತವಾಗುವದು ”

ಶ್ರೀ ರಾಮ || ೨ ಸೃಷ್ಟಿ ತ್ರಿವಿಧಲಕ್ಷಣ ನಿರೂಪಣೆ || ಗುರುಗಳು ಶಿಷ್ಯರಿಗೆ—

“ ಚಂಚಲ ಮೂಲ ಮಾಯೆಯು ಇಲ್ಲದಿದ್ದರೆ ನಿರ್ಗುಣ ಬ್ರಹ್ಮನು ಆಕಾಶದಂತೆ ಎಲ್ಲ ಕಡೆಯಲ್ಲಿ ಸಂಚಲಿಸುತ್ತಿದ್ದನು ದೃಶ್ಯಗಳು ಬಂದರೂ ಇಲ್ಲವೆ ಹೋದರೂ ಸಹ ಪರಬ್ರಹ್ಮನು ಸುತ್ತಲೆಲ್ಲ ವ್ಯಾಪಿಸಿರುವನು ನೋಡಿದತ್ತೆಲ್ಲ ಅಪಾರವೂ ಏಕವಸ್ತುವೂ ಆದ ಬ್ರಹ್ಮನೇ ತುಂಬಿರುವನು ಬ್ರಹ್ಮಾಂಡದ ಆಚೆಗೆ ಹೋಗಿನಿಂತು ಬ್ರಹ್ಮನು ಇಲ್ಲೆಂಬ ಕಲ್ಪನೆಯಿಂದ ನೋಡಿದರೆ ಅಲ್ಲಿ ಚಂಚಲ ವ್ಯಾಪಕ ಮೂಲ ಮಾಯೆಯು ಕಂಡು ಬರುವದಿಲ್ಲ ವಿವೇಕದಿಂದ ದೃಶ್ಯವನ್ನು ದೂರಮಾಡಿ ನೋಡಿದರೆ ಬಳಿಕ ಪರಬ್ರಹ್ಮನೇ ತೋರುವನೆಂಬದು ಯಾರಿಗೂ ಅನುಮಾನ ಸಹ ಉಂಟಾಗುವದಿಲ್ಲ ಕೆಳಗೆ, ಮೇಲೆ, ಸುತ್ತಲೆಲ್ಲ ಹಾಗು ಮೂಲ ಮಾಯೆಯ ಆಚೆಗೆ ಈ ಎಲ್ಲ ಕಡೆಯಲ್ಲಿ ನಿರ್ಗುಣ ಬ್ರಹ್ಮನೇ ತುಂಬಿರುವನು ಅವನ ಅಂತವು ಚಂಚಲ ಮನಕ್ಕೆ ತಿಳಿಯದು ಚಲನೆಯು ದೃಶ್ಯಕ್ಕೆ ಆದರೆ ಬ್ರಹ್ಮನಿಗಿಲ್ಲ ದೃಶ್ಯವು ತಿಳಿಯುವದು, ಚಲಿಸುವದು ಮತ್ತು ಕಲ್ಪಿಸಲು ಬರುವದು ಆದರೆ ಬ್ರಹ್ಮನಿಗೆ ಈ ಸ್ಥಿತಿಗಳಿಲ್ಲ ಅವನು ಚಲಿಸಲಾರನು, ತಿಳಿಯಲಾರನು ಹಾಗು ಕಲ್ಪನೆಗಳು ಅವನನ್ನು ಹೋಗಿ ಮುಟ್ಟಲಾರವು. ಕಲ್ಪನೆಯೆಂದರೆ ಶೂನ್ಯವು ಆದರೆ ಬ್ರಹ್ಮನು ಒಂದು ವಸ್ತು ಹಾಗು ಒಬ್ಬನೇ ಮಾತ್ರ ಇರುವವನು ಇದನ್ನು ಮಹಾ ವಾಕ್ಯದಿಂದ ಮನನ ಮಾಡಿಕೊಳ್ಳುವದು ಒಳ್ಳೆಯದು ಪರಬ್ರಹ್ಮನಿಗಿಂತ ದೊಡ್ಡವನು ಯಾರೂ ಇಲ್ಲ ಶ್ರವಣಕ್ಕಿಂತ ಹೆಚ್ಚಿನ ಸಾಧನವು ಇನ್ನೊಂದಿಲ್ಲ ಇದನ್ನು ತಿಳಿಯದೆ ಹೋದರೆ ಸಮಾಧಾನವಾಗುವದಿಲ್ಲ

ಇರಿವೆಯು ಗತಿಯಂತೆ ಸಾವಕಾಶ ಹೋದರೆ ಅ-ದರೆ ಉಪಾಸ ನಾದಿ ಕ್ರಮಗಳನ್ನನುಸರಿಸುತ್ತ ಸಾಗಿದರೆ ನಾವಕಾಶ ಬ್ರಹ್ಮಪದ ದೊರ ಕುವದು. ಅದೇ ಹಕ್ಕಿ ಪಕ್ಕಿಗಳ ವೇಗದಿಂದ ಒಮ್ಮೆಲೇ ಮೇಲಕ್ಕೆ ಹಾರಿದರೆ ತೀವ್ರವಾಗಿ ಬ್ರಹ್ಮಪದ ದೊರಕುವದು ಸಾಧಕನು ಮನನ ಮಗ್ನನಾಗುವದೇ ಒಳಿತು ಪರಬ್ರಹ್ಮನಂಥ ಇನ್ನೊಂದಾವದೂ ಇರುವ ದಿಲ್ಲ ಹೊಗಳಿಕೆ—ತೆಗಳಿಕೆಗಳು ಯಾವವೂ ಅವನಿಗೆ ಸಂಬಂಧಿಸುವ ದಿಲ್ಲ ಇಂಥ ಏಕವಸ್ತುವಾಪರಬ್ರಹ್ಮನು ಅತುಲನಾಗಿರುವನು ಪುಣ್ಯ ನಿಧಿಗಳಾದ ಮಹಾನುಭಾವರೇ ಅವನನ್ನು ಸೇರಿಕೊಳ್ಳಲು ಸಾಧ್ಯವಿದೆ ಇತರರಿಗಿಲ್ಲ ಮೂಲ ಮಾಯೆಯಿಂದ ಕೊನೆಯವರೆಗೆ ವಿಚಾರಮಾಡಲು ಚಂಚಲದಂಥ ದುಃಖವು ಇಲ್ಲ, ನಿಶ್ಚಲದಂಥ ವಿಶ್ರಾಂತಿಯಿಲ್ಲ ಎಂಬ ದನ್ನು ಅರಿತೇ ಮಹಾನುಭಾವರು ಚಂಚಲವನ್ನು ತ್ಯಾಗಮಾಡಿ ನಿಶ್ಚ ಲದ ಅನುಭವವನ್ನು ಪ್ರತ್ಯಕ್ಷ ಕಾಣುವದಕ್ಕೆ ಹವಣಿಸುವರು

•

ಎಲ್ಲ ಸೃಷ್ಟಿಯು ಕಲ್ಪನೆಯಿಂದಾದುದು ಇದು ಮೂರು ಬಗೆ ಗಳಿಂದ ಭಾಸವಾಗುದದೆಂಬದನ್ನು ಸೂಕ್ಷ್ಮ ವಿಚಾರದಿಂದ ಮನಗಾಣ ಬೇಕು ವಿಚಾರ ಮಾಡತಕ್ಕ ಆ ಮೂರು ಪ್ರಕಾರಗಳಾವವೆಂದರೆ—

೧) ಮೂಲ ಮಾಯೆಯಿಂದ ತ್ರಿಗುಣ ಅಂದರೆ ಗುಣ ಮಾಯೆ ಯವರೆಗೆ

೨) ಆ ಗುಣ ಮಾಯೆಯಿಂದ ಪೃಥ್ವಿಯವರೆಗೆ

೩) ಪೃಥ್ವಿಯಿಂದ ನಾಲ್ಕು ಪ್ರಾಣಿ ಕೋಟಿಗಳವರೆಗೆ

ಇವುಗಳಲ್ಲಿ ೧ನೆಯದು ಏಕದೇಶೀಯ ಲಕ್ಷಣವುಳ್ಳದು ೨ನೆಯದು ಸ್ಥೂಲ ಪಂಚ ಭೂತಾತ್ಮಕವಾದುದು, ಮತ್ತು ೩ನೆಯದರಲ್ಲಿ ಹಲವು ಜೀವ ಜಂತುಗಳು ನಿರ್ಮಿತವಾಗಿ ಸೃಷ್ಟಿಯ ರಚನೆ ಪೂರ್ಣವಾಗು ವದು ಈ ಪ್ರಕಾರ ಸೃಷ್ಟಿಯ ತ್ರಿವಿಧ ಲಕ್ಷಣಗಳನ್ನು ನಿರೂಪಣೆ ಮಾಡಿದ್ದಾಯಿತು ಶ್ರೋತೃಗಳು ಅಂತ ಕರಣದಿಂದ ಅರಿತುಕೊಳ್ಳ ಬೇಕು

ಇನ್ನು ನಾಭಿಸ್ಥಾನದಲ್ಲಿ ಪರಾವಾಣಿಯು ಪ್ರಥಮ ಸ್ಫುರಣವಾಗುವಂತೆ ಏಕ ಬ್ರಹ್ಮನಲ್ಲಿ ಮೂಲ ಮಾಯೆಯು ಪ್ರಥಮ ಸ್ಫೂರ್ತಿಯಾಯಿತು ಇದು ಅವನ ಆದಿ ಸಂಕಲ್ಪವು ಈ ಮೂಲ ಮಾಯೆಯೇ ಅಷ್ಟಧಾ ಪ್ರಕೃತಿಯ ಮೂಲವು ಅಷ್ಟಧಾ ಪ್ರಕೃತಿಯಲ್ಲಿ ಅಡಕವಾದ ತ್ರಿಗುಣಗಳೂ ಪಂಚ ಭೂತಗಳೂ ಸೂಕ್ಷ್ಮ ರೂಪದಿಂದ ಅಲ್ಲಿಯೇ ಮೊದಲು ಉಂಟಾದವು ಆ ಮೂಲ ಮಾಯೆಯು ಜಡ ವಸ್ತುಗಳನ್ನು ಚೇತರಿಸುವ ನಿಮಿತ್ತವಾಗಿಯೇ ಅದಕ್ಕೆ ಚೈತನ್ಯ ಎಂಬ ಹೆಸರು ಹಲವು ಹೆಸರಗಳು ಮೂಲ ಮಾಯೆಗೆ ಸಂಕೇತವಾಗಿ ಬಂದಿರುವವು ಆ ಮೂಲ ಮಾಯೆಯೇ ಅರ್ಧನಾರೀ ನಟೇಶ್ವರವು ಪ್ರಕೃತಿ-ಪುರುಷರ ವಿಚಾರವೇ ಇದು ತ್ರಿಗುಣಗಳು ಗುಪ್ತವಾಗಿ ಆ ಮೂಲ ಮಾಯೆಯಲ್ಲಿ ಇರುವವು ಇದ ಂದಲೇ ಅದಕ್ಕೆ ಮಹತ್ತತ್ವ ಎಂಬ ಹೆಸರು ಶುದ್ಧ ತತ್ವ ಎಂಬ ಹೆಸರೂ ಆ ಮಾಯೆಯ ನಾಮ ರೂಪವು ಆ ಮಾಯೆಯು ಕ್ಷೋಭ ಹೊಂದಿ ಗುಣಮಾಯೆಯುತ್ಪನ್ನವಾಯಿತು ಇಂತು ತ್ರಿಗುಣಗಳ ಯಥಾರ್ಥ ಸ್ವರೂಪವನ್ನು ತಿಳಿಯುವಂಥ ಸಾಧು ಪುರುಷರೇ ಧನ್ಯರು! ತ್ರಿಗುಣಗಳು ಗುಪ್ತ ರೂಪದಿಂದ ಸೌಮ್ಯವಾಗಿ ಅಲ್ಲಿರುವದರಿಂದ ಅದಕ್ಕೆ 'ಗುಣ ಸಾಮ್ಯ'ವೆನ್ನುವರು ಹೆಸರಿನ ಬಗೆಗೆ ಇರುವ ಈ ವಿವಿಧ ಸಂಕೇತಗಳು ಎಲ್ಲರಿಗೂ ತಿಳಿಯುವದು ಕಠಿಣವು ಈ ಮೂಲ ಮಾಯೆಯಿಂದ ತ್ರಿಗುಣಗಳು ಸೂಕ್ಷ್ಮ ರೂಪವನ್ನು ಹೊಂದುವವು ಅಲ್ಲಿ ಅವು ಚಂಚಲತೆಯುಳ್ಳವೂ ಏಕದೇಶೀಯವೂ ಆಗಿ ಇರುವವು ಇದನ್ನು ಅನುಭವದಿಂದ ತಿಳಿಯಬೇಕು ತ್ರಿಗುಣಗಳಿಂದ ಪೃಥ್ವಿಯವರೆಗೆ ಸೃಷ್ಟಿಯ ೨ನೆಯ ಪ್ರಕಾರವಾಗಿರುವದು ಇಲ್ಲಿ ಪಂಚ ಭೂತಗಳ ಕಲಕು ಹೆಚ್ಚಾಗಿ ಅವು ಜಡ ಸ್ವರೂಪಗೊಳ್ಳುವವು ಆಗ ಅನಂತ ಬ್ರಹ್ಮಾಂಡಗಳು ಸಪ್ತ ದ್ವೀಪಗಳು, ನವಖಂಡ ಪೃಥ್ವಿಯು ನಿರ್ಮಿತವಾಗುವವು ಪೃಥ್ವಿಯಿಂದ ಮುಂದೆ ನಾಲ್ಕು ಕೋಟಿಗಳು ಅಂದರೆ ಅಂಡಜ, ಜಾರಜ, ಸ್ವೇದಜ, ಹಾಗು ಉದ್ಭಿಜ್ಜಗಳೂ, ನಾಲ್ಕು ವಾಣಿಗಳು ಅಂದರೆ ಪರಾ, ಪಶ್ಯಂತೀ, ಮಧ್ಯಮಾ, ಮತ್ತು ವೈಖರಿಗಳೂ, ನಿರ್ಮಾಣವಾಗುವವು ಈ ಬಗೆಯಾಗಿ ನಾಲ್ಕು ಪ್ರಾಣಿ ಕೋಟಿಗಳೂ ನಾಲ್ಕು ವಾಣಿಗಳೂ ಆಗುವವು

ಮತ್ತು ಹೋಗುವವು ಆದರೆ ಜಗತ್ತು ಮಾತ್ರ ಇದ್ದಂತೆ ಇರುವದು ಈ ಪೃಥ್ವಿಯಮೇಲೆ ಅನಂತ ಪ್ರಾಣಿಗಳು ನಿರ್ಮಿತವಾಗುವವು ಹಾಗು ಲಯವಾಗುವವು ಈ ಕ್ರಮವು ನಡೆದೇ ಇದೆ

ಶ್ರೀ ರಾಮ || ೩ ಸೂಕ್ಷ್ಮ ನಾಮಾಭಿಧಾನ || ಗುರುಗಳು ಶಿಷ್ಯರಿಗೆ—

"ಮೂಲ ಮಾಯೆಯಿಂದ ಕೊನೆಯವರೆಗೆ ಸೃಷ್ಟಿಯ ವಿಸ್ತಾರವು ಮೂರು ಪ್ರಕಾರಗಳಿಂದ ಹೇಗಾಯಿತೆಂಬದನ್ನು ಈ ಮೊದಲು ಹೇಳಿದೆವು ಅದೇ ವಿಚಾರದಲ್ಲಿ ವೃತ್ತಿಯನ್ನು ಲೀನಗೊಳಿಸುತ್ತ ಮೂಲ ಮಾಯೆಯ್ವರೆಗೆ ಸಾಗಿ ಅದನ್ನು ಹಿಂತಿರಿಗಿಸಬೇಕು ನಾಲ್ಕೂ ಜೀವ ಕೋಟಿಗಳು, ನಾಲ್ಕೂ ವಾಣಿಗಳೂ, ಎಂಬತ್ನಾಲ್ಕು ಜೀವರಾಶಿಗಳೂ, ಹಲವು ಬಗೆಯ ಪ್ರಾಣಿಗಳೂ ಜನ್ಮ ತಾಳುವವು ಎಲ್ಲವೂ ಪೃಥ್ವಿಯಿಂದಲೇ ಹುಟ್ಟುವವು ಮತ್ತು ಪೃಥ್ವಿಯಲ್ಲಿಯೇ ಲೀನವಾಗುತ್ತವೆ ಎಷ್ಟೋ ಬರುತ್ತವೆ, ಹೋಗುತ್ತವೆ ಆದರೆ ಪೃಥ್ವಿಯು ಮಾತ್ರ ಇದ್ದಂತೆಯೇ ಇರುವದು ಹೀಗೆ ಇದು ಕಟ್ಟ ಕಡೆಯ ಮೂರನೆಯ ಭಾಗವಾಗಿದೆ ಎರಡನೆಯ ಭಾಗವು ಪಂಚ ಭೂತಗಳ ಕಲಿಕೆಯಾಗಿದೆ, ಮತ್ತು ಮೊದಲನೆಯ ಭಾಗವು ಮೂಲ ಮಾಯೆಯಿಂದ ತ್ರಿಗುಣ ವರೆಗಿನ ಸೂಕ್ಷ್ಮ ಭಾಗವಾಗಿದೆ ಇದಕ್ಕೆ ಹಲವು ಹೆಸರುಗಳಿರುವವು ಜಡವನ್ನು ಬಿಟ್ಟು ಸೂಕ್ಷ್ಮವನ್ನು ತಿಳಿದುಕೊಳ್ಳಬೇಕು ಗುಣಗಳಿಂದ ಹಿಂದೆ ಸೂಕ್ಷ್ಮ ಮೂಲ ಮಾಯೆಯವರೆಗೆ ನೋಡುತ್ತ ಹೋಗಬೇಕು ಅರಿವು ಅಜ್ಞಾನಗಳು ಈ ಗುಣಗಳ ರೂಪಗಳು

ಶುದ್ಧವಾದ ಅರಿವು ಸತ್ವ ಗುಣವೆನ್ನಿಸುವದು, ಅರಿವು ಅಜ್ಞಾನಗಳಿಂದ ಕೂಡಿದ್ದು ರಜೋಗುಣವೆನ್ನಿಸುವದು, ಶುದ್ಧವಾದ ಅಜ್ಞಾನವು ತಮೋಗುಣವೆನ್ನಿಸುವದು ಇಂತು ತ್ರಿಗುಣಗಳ ರೂಪಗಳು ತಮಗೆ ತಾವೇ ತಿಳಿಯುವವು ಗುಣಗಳ ತರುವಾಯ ಕಲಕು ಮಲಕಾದ ಕರ್ದಮಕ್ಕೆ ಗುಣಮಾಯೆಯೆಂಬ ಹೆಸರು ತ್ರಿಗುಣಗಳ ಅತ್ಯಂತ ಗುಹ್ಯ

ತ್ವವೇ ಮಹತ್ತತ್ವ, ಪ್ರಕೃತಿ ಪುರುಷ, ಶಿವಶಕ್ತಿ, ಮೂಲ ಮಾಯೆ, ಅರ್ಧನಾರೀ ನಟೇಶ್ವರ ಹೀಗೆ ಹಲವು ಹೆಸರುಗಳಿಂದ ತಿಳಿಯುವದು ಆದರೆ ಈ ಮಹತ್ತತ್ವ ಅಥವಾ ಮೂಲ ಮಾಯೆಯು ಕರ್ದಮ ರೂಪ ವಾಗಿದೆ ಅದೇ ಗುಣ ಸಾಮ್ಯವು, ಚೈತನ್ಯವು, ಮೂಲ ಮಾಯೆಯು ಬಹುವಸ್ತ್ವಾನ್ವಿತವು ಬ್ರಹ್ಮಾಂಡದ ನಾಲ್ಕನೆಯ ಶರೀರವಾದ ಮಹಾ ಕಾರಣ ದೇಹವೇ ಮೂಲ ಮಾಯೆಯು ನಾಲ್ಕೂ ಪ್ರಾಣಿ ಕೋಟಿ ಗಳನ್ನೂ, ಪಂಚ ಭೂತಗಳನ್ನೂ ಹಾಗು ಮೂಲ ಮಾಯೆಯ ಹದಿ ನಾಲ್ಕು ಹೆಸರುಗಳನ್ನೂ ಇವೆಲ್ಲವನ್ನು ಸೂಕ್ಷ್ಮ ರೂಪದಿಂದ ಆ ಕರ್ದಮ ರೂಪ ಮೂಲ ಮಾಯೆಯಲ್ಲಿಯೇ ಶೋಧಿಸಿ ನೋಡಬೇಕು ಮೇಲೆ ಮೇಲೆ ನೋಡಿದರೆ ಮಾತ್ರ ಅವು ತಿಳಿಯುವದಿಲ್ಲ ಮತ್ತು ಎಷ್ಟೋ ಜೀವಗಳು ಇಲ್ಲಿ ಸಂಶಯದಲ್ಲಿ ಬೀಳುವವು ಮೂಲ ಮಾಯೆಯ ಹದಿ ನಾಲ್ಕು ಹೆಸರುಗಳೂ ಪಂಚ ಮಹಾಭೂತಗಳೂ ಕೂಡಿ ೧೯ ಇವುಗಳಲ್ಲಿ ನಾಲ್ಕು ಪ್ರಾಣಿ ಕೋಟಿಗಳನ್ನು ಕೂಡಿಸಲು ೨೩ ಈ ಇಪ್ಪತ್ಮೂರರ ಲ್ಲಿಯೇ ಮೂಲ ಮಾಯೆಯ ೧೪ ಹೆಸರುಗಳ ವಿಚಾರಮಾಡಬೇಕು ಸರಿ ಯಾಗಿ ತಿಳಿದರೆ ಮಾತ್ರ ನಿಸ್ಸಂದೇಹವಾಗುವದು ತಿಳದುಕೊಳ್ಳದೆ ಗಡ ಬಿಡಿ ಮಾಡಿದರೆ ವ್ಯರ್ಥವಾಗುವದು ಮೂಲ ಮಾಯೆಯಲ್ಲಿಯೇ ಸಕಲ ಸೃಷ್ಟಿಯ ಬೀಜವಿರುವದು ಅದನ್ನೆಲ್ಲ ಯಥಾರ್ಥವಾಗಿ ತಿಳಿದುಕೊಳ್ಳು ವದೇ ಪರಮಾರ್ಥವು ಇದನ್ನು ಚನ್ನಾಗಿ ತಿಳಿದುಕೊಂಡವನು ಭ್ರಮೆ ಯಲ್ಲಿ ಬೀಳಲಾರನು ನಿಶ್ಚಿತ ಮತಿಯಾದವನು ಸಂಶಯ ಹಿಡಿಯಲಾ ರನು ಹಾಗು ಪರಮಾರ್ಥದಲ್ಲಿ ಸಿಕ್ಕ ಸಿಕ್ಕಂತೆ ಬುದ್ಧಿಯನ್ನು ಮಾಡಿ ಕೊಳ್ಳಲಾರನು ಬ್ರಹ್ಮನನ್ನು ಶಬ್ದಾತೀತನೆಂದು ಹೇಳುವದು ವಾಚ್ಯಾಂಶ ವೆನ್ನಿಸುವದು, ವಿವೇಕದಿಂದ ಶುದ್ಧ ಲಕ್ಷ್ಯಾಂಶವನ್ನು ಲಕ್ಷಿಸಬೇಕು ಮಾಯೆಯ ಮಂಡನವೇ ಪೂರ್ವ ಪಕ್ಷವು, ಮಾಯೆಯ ಖಂಡನ [ವಿಲ ಯನ] ವೇ ಸಿದ್ಧಾಂತವು ಮಾಯೆಯ ವಿಲಯನವಾದನಂತರ ಉಳಿಯು ವದಕ್ಕೆ ಯಾವ ಹೆಸರನ್ನು ಕೊಡತಕ್ಕದ್ದು? ಅನ್ವಯ ಮತ್ತು ವ್ಯತಿ ರೇಕ ಇವು ಪೂರ್ವ ಪಕ್ಷದಲ್ಲಿಯ ವಿಚಾರಗಳು ಸಿದ್ಧಾಂತವೆಂದರೆ

ಶುದ್ಧ ಬ್ರಹ್ಮನು ಅವನ ಹೊರತು ಬೇರಿಲ್ಲ ಅಧೋಮುಖವಾಗಿ ಮಾಯೆಯ ಕಡೆಗೆ ನೋಡುವದರಿಂದ ಭೇದವು ಹೆಚ್ಚಾಗುವದು, ಮೇಲೆ ಮುಖವಿಟ್ಟು ಬ್ರಹ್ಮನ ಕಡೆಗೆ ನೋಡುವದರಿಂದ ಭೇದವು ಹರಿಯುವದು, ಸರ್ವಸಂಗವನ್ನು ಬಿಟ್ಟುಕೊಟ್ಟು ನಿರ್ಗುಣನಲ್ಲಿ ವಿಶ್ರಾಂತಿ ಪಡೆದವನೇ ಮಹಾಯೋಗಿಯು, ಒಮ್ಮೆ ಮಾಯೆಯ ಮಿಥ್ಯತೆಯು ಗೊತ್ತಾದನಂತರ ಆ ಮಾಯೆಯ ದಾಕ್ಷಿಣ್ಯವೇಕೆ? ಒಂದು ವೇಳೆ ಮಾಯೆಯ ಭಿಡೆಗೆ ಒಳಗಾದರೆ ಸ್ವರೂಪ ಸ್ಥಿತಿಯು ಬಿಟ್ಟು ಹೋಗುವದು ಮಿಥ್ಯಾ ಮಾಯೆಯ ಹಿಡಿತಕ್ಕೆ ಸಿಗುವದೂ, ಸತ್ಯ ಪರಬ್ರಹ್ಮನನ್ನು ಬಿಟ್ಟುಕೊಡುವದೂ ಮತ್ತು ಸತ್ಯ ಪರಬ್ರಹ್ಮನ ನಿಶ್ಚಿತದಾದಮೇಲೆ ಭೂತಲದಮೇಲೆ ಮಾಯೋಪಸ್ಥಿತ್ವಿತ ವಸ್ತುಗಳನ್ನು ಬೆಂಬಳಿಸಿ ತಿರುಗಾಡುವದೂ ಇವಕ್ಕೇನೆನ್ನಬೇಕು? ಭೂಮಿಯ ಮೇಲೆ ಬಹು ಜನರಿರುವರು, ಅವರಲ್ಲಿಯೇ ಕೆಲಜನರು ಸಜ್ಜನರಿರುವರು ಆದರೆ ಆ ಸಜ್ಜನರನ್ನು ಅಂದರೆ ಸಾಧುಗಳನ್ನು ಗುರುತಿಸುವದು ಸಾಧುಗಳಿಗೇ ಸಾಧ್ಯವು ಆದ್ದರಿಂದ ಸಂಸಾರ ಬಿಡಬೇಕು ಬಳಿಕ ಅಲ್ಲಲ್ಲಿಗೆ ಸಂಚರಿಸಿ ಸಾಧುಗಳನ್ನು ಶೋಧಿಸಬೇಕು ಬಹುಜನ ಸಾಧುಗಳು ದೊರೆತರೂ ಅವರಲ್ಲಿಯೇ ಒಬ್ಬನಾದರೂ ಸ್ವಾನುಭವವುಳ್ಳ ಮಹಂತನಿದ್ದೇ ಇರುವನು ಅನುಭವವಿಲ್ಲದೆ ಆತ್ಮಹಿತವು ಎಂದೂ ಸಾಧಿಸುವದಿಲ್ಲ ಪ್ರಪಂಚವೇ ಆಗಲಿ, ಪರಮಾರ್ಥವೇ ಆಗಲಿ ಇವೆರೆಡರಲ್ಲಿಯೂ ಅನುಭವವಿರದೆ ಹೋದರೆ ವ್ಯರ್ಥವು ಸ್ವಾನುಭವವುಳ್ಳವನು ಎಲ್ಲರಲ್ಲಿಯೂ ಶ್ರೇಷ್ಠನು ಹಗಲು ರಾತ್ರಿಗಳಲ್ಲಿಯೂ ಸಾರ (ಅರ್ಥ) ವನ್ನು ನೋಡುವವನೇ ಸಮರ್ಥನು ಪರಲೋಕದ ನಿಜವಾದ ಸ್ವಾರ್ಥವು ಹೀಗೆ ನೋಡಿದರೆ ಮಾತ್ರ ಸಾಧ್ಯವು ಆದ್ದರಿಂದ ನೋಡಿದ್ದನ್ನೇ ಪುನಃ ಮನ ನೋಡಬೇಕು ಶೋಧಿಸಿದ್ದನ್ನೇ ಶೋಧಿಸಬೇಕು, ಈ ಬಗೆಗಳಿಂದ ಯಥಾರ್ಥ ಬೋಧೆಯಾಯಿತೆಂದರೆ ಸಂದೇಹ ವೃತ್ತಿಯು ಹರಿದ್ಹೋಗುವದು ''

ಶ್ರೀ ರಾಮ ॥ ೪ ಆತ್ಮನಿರೂಪಣೆ ॥ ಗುರುಗಳು ಶ್ರೋತೃಗಳಿಗೆ—

"ಶ್ರೋತೃಗಳೆಲ್ಲರಿಗೆ ಬೇಡಿಕೆಯೇನಂದರೆ — ಎಲ್ಲರೂ ನಿರರ್ಥಕವಾಗಿ ಉದಾಸೀನರಾಗಬೇಡಿರಿ ಅನುಭವದ ಬೋಧೆಯನ್ನು ಚಿತ್ತದಲ್ಲಿ ದೃಢ

೩೦ ಅನುಭವವೊತ್ತಟ್ಟಿಗೆ, ನಾವು ಒತ್ತಟ್ಟಿಗೆ ಉಳಿದರೆ ಅಸಾರವಾದ ಮಾಯೆಯನ್ನು ಬಿಟ್ಟು ಸಾರವಾದ ಬ್ರಹ್ಮನನ್ನು ಹೇಗೆ ಹೊಂದುವಿರಿ? ಸಹಜವಾಗಿ ದೃಷ್ಟಿಯಿಂದ ಸೃಷ್ಟಿಯ ನಿರೀಕ್ಷಣೆ ಮಾಡಲು ಕಣ್ಣಿಗೆ ಜಗತ್ತಿನ ಮಾಯಿಕ ಗಡಿಬಿಡಿಗಳೇ ಕಂಡು ಬರುವವು ಆದರೆ ಪರಮೇಶ್ವರಿಯ ನಿಯಂತ್ರತೆಯು ಬೇರೇ ಇರುತ್ತದೆ ಜಗತ್ತಿನ ಮೇಲೆ ಇರುವ ಪ್ರಾಣಿ ಶರೀರಗಳೆಲ್ಲ ಆ ಭಗವಂತನ ಮನೆಗಳೇ ಆಗಿವೆ ಹಲವು ಸುಖಗಳೆಲ್ಲ ಆ ಗೃಹದ್ವಾರಗಳಿಂದಲೇ ಒದಗುವವು ಈ ಜೀವನ ಮಹಿಮೆ ಆದಾರಿಗೂ ತಿಳಿಯದು ಆತನು ಪ್ರತಿಯೊಂದು ಪ್ರಾಣಿಯ ತಾಯಿಯೆನ್ನಿಸಿ ದಯಾನ್ವಿತನಾಗಿ ಜಗತ್ತನ್ನು ಸಂರಕ್ಷಿಸುವನು ಆತನ ಅಧಿಕಾರವು ಇಡೀ ಸೃಷ್ಟಿಯ ಮೇಲೆ ಹರಡಿದೆ ಆದರ ಪ್ರತಿಯೊಂದು ಕಡೆಯಲ್ಲಿ ಅವನ ಅಂಶವೇ ವ್ಯಕ್ತವಾಗಿ ಅದರಿಂದಲೇ ಸೃಷ್ಟಿಯು ನಡೆದಿದೆ ಅಂದರೆ ಮೂಲ ಅಧಿಕಾರವು ಪರಮೇಶ್ವರನದಾಗಿರುವದು ಅವನೇ ಅರವಿನ ಪುರುಷನು ಅವನೇ ಎಲ್ಲ ಶರೀರಗಳಲ್ಲಿ ಅಂಶಾತ್ಮಕನಾಗಿರುವನು ಅವನ ಅಧಿಕಾರದಿಂದಲೇ ಆ ಅಂಶಾತ್ಮಕ ಪ್ರತಿ ಶರೀರದಲ್ಲಿ ಎಲ್ಲ ಚಾತುರ್ಯ ಕಲೆಗಳ ಹೊಂದಿಕೆಯಾಗಿದೆ ಶರೀರವು ಒಂದು ಪುರ[ಪಟ್ಟಣ]ವು ಈ ಶರೀರ ಪುರಕ್ಕೆ ಈತನೇ ಈಶನು ಅಂದರೆ ಒಡೆಯನೇ ಪ್ರಕಾಶನು ಅಂದರೆ ಜಗದೀಶನು ಹಲವು ದೇಹಗಳಲ್ಲಿದ್ದುಕೊಂಡು ಸೃಷ್ಟಿಯ ವ್ಯವಹಾರಗಳನ್ನೆಲ್ಲ ಸಾಗಿಸಹತ್ತಿರುವನು ಸೃಷ್ಟಿಯ ರಚನೆಯ ಬಗೆಗೆ ನೋಡಲು ಅದು ಒಬ್ಬನಿಂದಲೇ ಆಗಿರಲಾರದು ಹಲವು ಶರೀರಗಳ ದ್ವಾರದಿಂದ ಒಬ್ಬನೇ ಮಾತ್ರ ಸಾಗಿಸುತ್ತಿರುವನೆಂಬದು ಕಂಡು ಬರುತ್ತಿದೆ ಆ ಚಾಲಕನು ಮಾತ್ರ ಯಾವ ಶರೀರಗಳಲ್ಲಿಯೂ ಉಚ್ಚ-ನೀಚತ್ವಗಳನ್ನೂ ಒಳಿತು-ಹೀನಗಳನ್ನೂ ಮನಸ್ಸಿನಲ್ಲಿ ತಾರದೆ 'ಯಾರಿಂದಲಾದರೂ ಸೃಷ್ಟಿಯು ಸಾಗಿದರೆ ಸಾಕು' ಎಂಬ ಉದ್ದೇಶದಿಂದಲೇ ಹಲವು ಬಗೆಯ ದೇಹಗಳನ್ನು ನಿರ್ಮಾಣ ಮಾಡಿದನು ಇಂತು ಆತನು ತನ್ನ ಕೃತಿಯನ್ನು ಮಾಡಿದ್ದರೂ ಸೃಷ್ಟಿಯ ಚಾಲನೆಯಲ್ಲಿ 'ಅಜ್ಞಾನ'ವೆಂಬದನ್ನು ಅಡ್ಡಲಾಗಿ ಏಕೆ ಇರಿಸಿದನು? ಹಾಗು 'ಅಭ್ಯಾಸ'ವೆಂಬ ಯತ್ನವನ್ನೇಕೆ ಮುಂದಿಟ್ಟನು? ಈ ಪ್ರಶ್ನೆಗಳ ಉತ್ತರವು ಯಾರಿಂದಲೂ ಹೇಳಲು ಬರುವಂತಿಲ್ಲ ಅವನ ಈ

ವ್ಯವಸ್ಥೆಯ ಬಗೆಯು ಆ ಭಗವಂತನಿಗೇ ಗೊತ್ತು ಆದ್ದರಿಂದಲೇ ಜಗದಾತ್ಮಕನಾದ ದೇವನನ್ನು ನಿರಂತರವಾಗಿ ಧ್ಯಾನದಿಂದ ನಿರೀಕ್ಷಿಸುತ್ತ ಹೋಗುವದೇ ಒಳಿತು ಇದೇ ಧ್ಯಾನವು ಹಾಗೂ ಇದೇ ಜ್ಞಾನವು ಧ್ಯಾನ ಮತ್ತು ಜ್ಞಾನಗಳೆರಡೂ ಒಂದೇ ರೂಪದವಾಗಿುವವು ಮಾನವಪ್ರಾಣಿಯು ಜನ್ಮತಾಳಿ ಅಭ್ಯಾಸದಿಂದ ಅರಿವುಳ್ಳವನಾಗಬೇಕು ಬುದ್ಧಿವಂತಿಕೆಯಿಂದ ಭೂಮಂಡಲದಲ್ಲಿ ಸಂಚರಿಸಬೇಕು ರಾಮಧ್ವಜವನ್ನು ಎತ್ತಿ ಹಿಡಿಯಬೇಕು "ಆತ್ಮಾರಾಮನು ಜ್ಞಾನಸ್ವರೂಪನು, ಆತನು ವಿಶ್ವವನ್ನೆಲ್ಲ ವ್ಯಾಪಿಸಿ ಇದ್ದೇ ಇರುವನು ಆತನ ಭಾಗ್ಯವನ್ನು ತಿಳಿದುಕೊಳ್ಳುವದಕ್ಕಾಗಿ ತಕ್ಕ ಉಪಾಸನೆಯನ್ನು ಶೋಧಿಸುತ್ತಿರುವೆನು" ಎಂಬ ಈ ವಾಸನಯನ್ನು ಆ ಮಾನವ ಪ್ರಾಣಿಯು ಹಿಡಿದದ್ದಾದರೆ ಆ ದೇವನು ಇನ್ನೂ ದೂರ ಹೋಗುವನು ಆತನ ಮಹಿಮೆ ತಿಳಿಯದೆಂಬ ಮಾತು ಸರಿಯಾದದ್ದು ಅನಂತನ ದ ಆತನು ಶರೀರದಲ್ಲಿದ್ದು ದೃಷ್ಟಾರನಾಗಿ ನೋಡುವನು, ಸಾಕ್ಷೀಭೂತನಾಗಿ ತಿಳಿಯುವನು ಹೀಗೆ ಅನಂತ ರೂಪಗಳಿಂದ ವ್ಯವಹರಿಸುವ ಆತನನ್ನು ಹೀಗೆ ಅರಿತುಕೊಳ್ಳಬೇಕು ಸತ್ಸಂಗತಿ ಹಾಗು ಶ್ರವಣ ಬೋಧೆಗಳ ಇವುಗಳ ಯೋಗದಿಂದ ವಿಶ್ರಾಂತಿ ಸುಖ ದೊರೆಯುವದು ಆದರಲ್ಲಿಯೂ ಅನುಭವ ಜ್ಞಾನದಿಂದಲೇ ಅನುಮಾನವನ್ನು ಸುಟ್ಟು ಬಿಡಬೇಕಾಗುವದು ಒಟ್ಟಿನ ಮೇಲೆ ಅನುಭವವಿಲ್ಲದೆ ಸಮಾಧಾನ ಸಿಗುವದಿಲ್ಲ ಮೂಲಮಾಯೆಯ ಸಂಕಲ್ಪವೇ ಭಗವಂತನ ಸಂಕಲ್ಪವು, ಆ ಮೂಲಮಾಯೆಯೇ ಈಶ್ವರನು, ಅವನನ್ನೇ ಜಗದಂತಸ್ಥದಲ್ಲಿ ಕಾಣಬೇಕು, ಜ್ಞಾನಿಗಳು ಮಹಾಕಾರಣ ದೇಹಕ್ಕೆ ಭಕ್ತಿ–ಜ್ಞಾನ ಸ್ವರೂಪವನ್ನು ಆರೋಪಿಸವರು ಈ ಕಾರಣದಿಂದ ಎಲ್ಲ ಸಂಕಲ್ಪಗಳನ್ನು ಬಿಟ್ಟು ಬಿಡಬೇಕು ಅಂದರೆ ಮುಂದೆ ಗಗನ ಸದೃಶ ಘನವಂತನೂ, ಸೂಕ್ಷ್ಮನೂ, ಕೋಮಲನೂ ಆದ ಪರಬ್ರಹ್ಮನೇ ಇರುವನು ಅಂದ ಮೇಲೆ ಕೇಳುವದೇನು? ಉಪಾಸನೆಯೆಂದರೆ ಜ್ಞಾನವು, ಜ್ಞಾನದಿಂದ ನಿರಂಜನವದವಿಯು ಈ ಬಗೆಯು ಯೋಗಿಗಳಿಗೆ ತಕ್ಕದ್ದಾಗಿದೆ ಇದರಿಂದ ಅವರಿಗೆ ಸಮಾಧಾನವೆನ್ನಿಸುವದು ಚೆನ್ನಾಗಿ ವಿಚಾರ ಮಾಡಿ ನೋಡಲು ಉಪಾಸನೆಗಳೆಂದರೇ ನಾವೇ ಆಗಿರುವೆವು ಜೀವವು ಶಿವಸ್ವರೂಪವೆಂದು ತಿಳಿಯುವದು ಜೀವನು ಹೋಗುವನು ಶಿವನು

ಉಳಿಯುವವನು ಈ ಪ್ರಕಾರದ ದ್ವೈತ ವೃತ್ತಿಯು ನಿತ್ಯವೂ ಕೆಳವೇಲು ಮಾಡುವದು ಮೊದಲಿನಿಂದಲೂ ನಡೆದು ಬಂದಿದೆ ಅರಣ್ಯ-ವನಗಳ ಮೇಲೆ ವನಚರರ ಅಧಿಕಾರವು, ಸಾಗರಜಲಗಳ ಮೇಲೆ ಜಲಚರರ ಅಧಿಕಾರವು, ಹಾಗು ಭೂಮಂಡಲದ ಮೇಲೆ ಎಲ್ಲ ರಾಜರುಗಳ ಅಧಿಕಾರವು ಇದೇ ಸರ್ವತ್ರ ನ್ಯಾಯವಾಗಿದೆ ಅದರಂತೆ ಸಾಗಿ ಬಂದಿದೆ ಚಲನವಲನದಿಂದ ಬಲ ಪ್ರಾಪ್ತಿಯಾಗುವದು. ಚಲನವಲನ ಕೈಕೊಳ್ಳುವವರಲ್ಲೆಲ್ಲ ಭಗವಂತನ ಅಧಿಷ್ಠಾನವಿರುವದು ಜಗದೀಶನೇ ನಿಜವಾದ ಕರ್ತಾರನು ಆದರೆ ಅವನ ಅಧಿಕಾರವು ಬೇರೆ ಬೇರೆ ಜೀವ ಮಾತ್ರರಲ್ಲಿ ವಿಭಜಿತವಾಗಿ ನೇರಿರುವದು ಪರಮೇಶ್ವನು ಆ ಜೀವ ಮಾತ್ರರಿಂದಲೇ ಕಾರ್ಯಗಳನ್ನು ಮಾಡಿಸುವನು ಶ್ರೀ ಹರಿಯೇ ದಾತಾರನು, ಶ್ರೀ ಹರಿಯೇ ಭೋಕ್ತಾರನು ಇತ್ಯಾದಿಯಾಗಿ ನಡೆದು ಬಂದ ವಚನಗಳಿಂದ ವಿಚಾರ ಮಾಡಲು ಮಾನವನಲ್ಲಿ ಅಹಂಕಾರದ ಭೂತಬಾಧೆಯು ಉಂಟಾಗುವದಿಲ್ಲ ಎಲ್ಲಕ್ಕೂ ಕರ್ತೃವು ಪರಮೇಶ್ವರನು, ನಾನು ಮಾಡುವೆನೆಂಬ ನನ್ನ ವಿಚಾರವು ಕೇವಲ ಮಾಯಾನ್ವಿತವು ಆದ್ದರಿಂದ ಜಗದಂತಸ್ಥನಾಗಿರುವ ಪರಮಾತ್ಮನ ಪ್ರೇರಣೆಯಿಂದಲೇ ನನ್ನ ಕ್ರಿಯೆಗಳು' ಎಂಬ ವಿಚಾರವನ್ನು ಮಾಡಬೇಕು ದೇವನಂತಹ ಚಾಪಲ್ಯತನವೂ ಬ್ರಹ್ಮನಂತಹ ನಿಶ್ಚಲತ್ವವೂ ಬೇರೆ ಇರುವದಿಲ್ಲ ಇಂತು ಕ್ರಮ ಕ್ರಮವಾಗಿ ವಿಚಾರಗಳನ್ನು ಬಳೆಯಿಸಿ ಆದ್ಯದ ವರೆಗೆ ಏರಿ ಹೋಗತಕ್ಕದ್ದು"

ಶ್ರೀ ರಾಮ ॥ ೫ ಚತ್ವಾರಿ ಜನಸನಾಮ॥ ಗುರುಗಳು ಶಿಷ್ಯರಿಗೆ—

"ನಿಶ್ಚಲ ಬ್ರಹ್ಮನಿಂದ ಪಿಂಡದ ವರೆಗೆ ವಿಚಾರ ಮಾಡಿ ನೋಡಿದರ ಒಂದು, ಹದಿನಾಲ್ಕು, ಐದು ಮತ್ತು ನಾಲ್ಕು ಹೀಗೆ ನಾಲ್ಕು ವಸ್ತುಗಳಿರುವವು ಒಂದು ಎಂದರೆ ನಿಶ್ಚಲ ಬ್ರಹ್ಮನು, 'ಹದಿನಾಲ್ಕು' ಎಂದರೆ ಮೂಲ ಮಾಯೆಯ ಹೆಸರುಗಳು [೧ ಚೈತನ್ಯ ೨ ಗುಣಸಾಮ್ಯ ೩ ಅರ್ಧನಾರೀ ನಟೇಶ್ವರ ೪ ಪ್ರಕೃತಿ ಪುರುಷ ೫ ಶಿವಶಕ್ತಿ ೬ ಷಡ್‌ಗುಣೇಶ್ವರ ೭ಮಹತ್ತತ್ವ ೮ ಗುಣಕ್ಷೋಭಿಣಿ ೯ ೧೦ ೧೧ ತ್ರಿಗುಣಗಳು ೧೨ ಮನ ೧೩ ಮಾಯಾ ೧೪ ಜೀವ (ಅಂತರಾತ್ಮ)] 'ಐದು' ಎಂದರೆ ಪಂಚಭೂತಗಳು, 'ನಾಲ್ಕು'

ಎಂದರೆ ನಾಲ್ಕು ಜೀವಕೋಟಿಗಳು. ಈ ಪ್ರಕಾರ ನಾಲ್ಕು ವರ್ಗದವಸ್ತುಗಳಿರುವವು ೧ನೆಯ ವಸ್ತುವು ಪರಬ್ರಹ್ಮನು ಇವೆಲ್ಲರಿಂದ ಬೇರೆಯವನು ಶ್ರೇಷ್ಠನು, ಕಲ್ಪನಾತೀತನು[ನಿರ್ವಿಕಲ್ಪನು], ಹಾಗು ಒಬ್ಬನೇ ಒಬ್ಬನು ಹೀಗೆ ಇರುವನು ಮತ್ತೂ ಆ ಬ್ರಹ್ಮನು ನಿರ್ಮಲನು, ನಿಶ್ಚಲನು, ನಿರ್ವಿಕಾರನು, ಮತ್ತು ಅಖಂಡನು ಇವನಿಗೆ ಯಾವ ಸಾಮ್ಯತೆಯೂ ಇಲ್ಲ ಇವನೇ ಮುಖ್ಯ ವಸ್ತುವು ಎರಡನೆಯ ವಸ್ತುವೆಂದರೆ— ಅನಂತ ಕಲ್ಪನಾರೂಪವಾದ ಮೂಲ ಮಾಯೆಯು ಇದು ಬ್ರಹ್ಮನಲ್ಲಿ ಆದಿಸಂಕಲ್ಪವಾಗಿ ಸ್ಫುರಿತವಾದುದು ಈ ಮೂಲ ಮಾಯೆಯು ಹಲವು ಸೂಕ್ಷ್ಮರೂಪಾತ್ಮಕವಾಗಿದ್ದು ಕರ್ದಮರೂಪವಾಗಿದೆ ಈ ಮೂಲ ಮಾಯೆಯೇ ಹರಿಸಂಕಲ್ಪವು ಇದುವೇ ಸರ್ವರ ಆತ್ಮಾರಾಮನು ಅದನ್ನು ತಿಳಿಯುವದಕ್ಕೇ ಹದಿನಾಲ್ಕು ಸಂಕೇತ ನಾಮಗಳನ್ನು ಕೊಡಲ್ಪಟ್ಟಿರುವದು ಚಂಚಲವು ನಿಶ್ಚಲನಲ್ಲಿ ಚೇತರಿಸುವದರಿಂದ ಅದಕ್ಕೆ 'ಚೈತನ್ಯ' ಎಂಬ ಹೆಸರು ಬಂದಿದೆ ಅದಕ್ಕೆ ಗುಣಗಳ ಸಮಾನತ್ವದಿಂದ 'ಗುಣಸಾಮ್ಯ' ಎಂಬ ಹೆಸರುಂಟಾಗಿದೆ ಅರ್ಧನಾರಿನಟೇಶ್ವರ, ಪ್ರಕೃತಿ ಪುರುಷ, ಶಿವಶಕ್ತಿ, ಷಡ್‌ಗುಣೇಶ್ವರ ಈ ಹೆಸರುಗಳೂ ಸಹ ಅದಕ್ಕೆ ಉಂಟು ಶುದ್ಧ ಸತ್ವಗುಣರೂಪವಾದ ಅರ್ಧಮಾತ್ರಾ ಗುಣಮಾಯೆಯೂ ಅದೇ ಆಗಿರುವದು ಅದರಿಂದಲೇ ತ್ರಿಗುಣಗಳು ಪ್ರಕಟವಾದವು ಇವೂ ಅದರದೇ ರೂಪಗಳಾಗಿವೆ. ಮನಸ್ಸು ಮಾಯೆ, ಅಂತರಾತ್ಮ ಈ ಹೆಸರುಗಳೂ ಆ ಮೂಲಮಾಯೆಗೆ ಇರುವವು ಜ್ಞಾನಾತ್ಮನು ಈ ಹದಿನಾಲ್ಕು ಸ್ಥಾನಗಳಲ್ಲಿಯೇ ಇರುವನು ಇಂತು ಇದು ಎರಡನೆಯ ವಸ್ತುವಾಯಿತು ಇನ್ನು ೩ನೆಯ ವಸ್ತು:- ಪಂಚಭೂತಗಳು, ಇವಕ್ಕೆ ಅರಿವು ತೀರ ಸ್ವಲ್ಪವಾಗಿರುವದು ಮತ್ತು ಇವುಗಳಿಗೆ ಉತ್ಪತ್ತಿನಾಶಗಳಿರುವವು ೪ನೆಯ ವಸ್ತು.- ನಾಲ್ಕೂ ಕೋಟಿಗಳಲ್ಲಿಯ ಅನಂತ ಪ್ರಾಣಿಗಳು ಇವೆಲ್ಲ ಅರಿವಿನ ರೂಪದಿಂದಿರುವವು ಈ ಪ್ರಕಾರವಾಗಿ ನಾಲ್ಕೂ ವಸ್ತುಗಳ ಬಗೆಗೆ ಹೇಳಿಕೆಯಿದೆ ಸ್ವಲ್ಪ ಬೀಜಗಳನ್ನು ಬಿತ್ತಿದರೂ ಅತ್ಯಧಿಕ ಬೆಳೆ ಬರುವಂತೆ ಆತ್ಮಾರಾಮನಿಂದ ನಾಲ್ಕೂ ಕೋಟಿಗಳೂ, ನಾಲ್ಕೂ ವಾಣಿಗಳೂ, ಹಾಗು ೮೪ಲಕ್ಷ ಜೀವ ಯೋನಿಗಳೂ ಅದ್ಭುತ ವಿಸ್ತಾರವಾಗಿರುವವು ಈ ಪ್ರಕಾರವಾಗಿದ್ದ ಈಶ್ವರೀ ಅಧಿಕಾರವು ಉಗಮದಲ್ಲಿ ಸ್ವಲ್ಪ ಸೂಕ್ಷ್ಮವಾಗಿದ್ದು ಮುಂದೆ ಅದು

ವಿಶ್ವವನ್ನೆಲ್ಲ ವ್ಯಾಪಿಸಿಬಿಟ್ಟದೆ ಮಾನವ ವೇಷದಿಂದ ಆ ಅಧಿಕಾರವು ಸೃಷ್ಟಿಯ ಉಪಭೋಗವನ್ನು ಹಲವು ಪ್ರಕಾರಗಳಿಂದ ತೆಗೆದುಕೊಳ್ಳುವದು ಶ್ವಾಪದವು ಪಶುಗಳನ್ನು ಕೊಂದು ಓಡಿ ಹೋಗುವದು, ಇದಿಷ್ಟರ ಹೊರತು ಇದಕ್ಕೆ ಇನ್ನೊಂದು ಏನೂ ತಿಳಿಯುವದಿಲ್ಲ ಈ ನರದೇಹದಲ್ಲಿಯೇ ಹಲವು ಭೋಗಗಳು ಉಪಭೋಗಿಸಲ್ಪಡುವವು ಶಬ್ದಾದಿ ಪಂಚ ವಿಷಯಗಳ ಭೋಗವು ನರದೇಹವಿದ್ದಾಗಲೇ ಉಂಟಾಗುವದು ಬೆಲೆಯುಳ್ಳ ವಸ್ತ್ರಾಲಂಕಾರಗಳು, ವಾಹನಗಳು, ಶಸ್ತ್ರಾಯುಧಗಳು, ಹಲವು ವಿದ್ಯೆ ಕಲಾ ಕೌಶಲ್ಯಗಳು ಇವೆಲ್ಲವೂ ನರದೇಹದಿಂದಲೇ ಒದಗುವವು ಇಡೀ ಜಗತ್ತಿನಲ್ಲಿ ಈಶ್ವರನ ಅಧಿಕಾರವು ವ್ಯಾಪಿಸಿಬಿಟ್ಟಿದೆ ಪ್ರತಿಯೊಂದು ಸ್ಥಾನದಲ್ಲಿ ಆ ಅಧಿಕಾರವು ತುಂಬಿದೆ ವಿದ್ಯಾ ಕಲಾದಿಗಳೆಲ್ಲ ಅಲ್ಲಲ್ಲಿ ಆ ಈಶ್ವರೀ ಅಧಿಕಾರದ ಆಧಾರದ ಮೇಲೆಯೇ ನಿಂತು ಬಿಟ್ಟಿವೆ ನರದೇಹ ಪ್ರಾಪ್ತವಾದ ಮೇಲೆ ಎಲ್ಲ ದೃಶ್ಯ ವಸ್ತುಗಳನ್ನು ಶೋಧಿಸಿ ನೋಡಬೇಕು ಅವುಗಳ ಸ್ಥಾನಮಾನಗಳನ್ನು ಕಾಯ್ದುಕೊಳ್ಳಬೇಕು ಮತ್ತು ಸಾರಾಸಾರ ವಿಚಾರವನ್ನು ಮಾಡಬೇಕು ಇಹಲೋಕ ಪರಲೋಕಗಳನ್ನೂ ವಿವೇಕ-ಅವಿವೇಕಗಳನ್ನೂ ಮನುಷ್ಯನೇ ತಿಳಿಯುವನು ಪಿಂಡ ಬ್ರಹ್ಮಾಂಡರಚನೆ, ಮೂಲಮಾಯೆಯಿಂದಾದ ಅನಂತಕಲ್ಪನೆಗಳು, ಧಾರಣಾದಿಗಳು, ಅಷ್ಟಭೋಗಗಳು ನವರಸಗಳು ಹಲವು ಬಗೆಯ ವಿಲಾಸಗಳು, ವಾಚ್ಯಾಂಶ–ಲಕ್ಷ್ಯಾಂಶ–ಸಾರಾಂಶಗಳು, ಮುಂತಾದವೆಲ್ಲವೂ ಮನುಷ್ಯ ದೇಹದಿಂದಲೇ ತಿಳಿಯುವವು. ಮಾನವನು ಎಲ್ಲವನ್ನೂ ಹಸ್ತಗತ ಮಾಡಿಕೊಳ್ಳುವನು ಎಲ್ಲವನ್ನು ಆಕರ್ಷಿಸಿಕೊಳ್ಳುವನು, ಆದರೆ ಇಂಥ ಶಕ್ತಿಯುಳ್ಳ ಮಾನವನು ಮಾತ್ರ ಈಶ್ವರನ ರಕ್ಷಣೆಗ ಒಳಗಾಗಿರುವನು ಇದಾದರೂ ನಂದೇಹದಿಂದಲೇ ತಿಳಿಯುವದು. ನರದೇಹವು ಅತ್ಯಂತ ದುರ್ಲಭವಾಗಿರುವದು ಇದರ ಯೋಗದಿಂದಲೇ ಅಲಭ್ಯ ಲಾಭಗಳಾಗುವವು ದುರ್ಲಭಗಳೂ ಸುಲಭವಾಗುವವು ನರದೇಹದ ಹೊರತು ಉಳಿದ ದೇಹಗಳು ಶರೀರ ಕಷ್ಟವನ್ನು ಅನುಭೋಗಿಸುವಂಥವಾಗಿರುವವು. ಮನುಷ್ಯ ಶರೀರವು ಅತ್ಯಂತ ಲಾಭದಾಯಕವು ಆದರೆ ಅದಕ್ಕನುಸರಿಸಿ ಮಹತ್ತರವಾದ ಹಾಗು ಸೂಕ್ಷ್ಮ ವಿಚಾರಗಳು ಅವಶ್ಯವಿರಬೇಕು ಆಲಸ್ಯತನದಿಂದ ವರ್ತಿಸಿದರೆ ಹಾಗು ವಿವೇಕ ಬಲದಿಂದ

ದೇವನನ್ನು ಅರಿಯದೆ ಹೋದರೆ ಬಹಳೇ ನಷ್ಟಕ್ಕೆ ಗುರಿಯಾಗಬೇಕಾಗುವದು ಸದಾವಕಾಲವೂ ಅನುಭವದ ಶ್ರವಣ ಮಾಡಬೇಕು ಅಂದರೆ ಮಾನವನು ಅರ್ಥಾತ್ ನರನು ನಾರಾಯಣ ಸ್ವರೂಪ ಪಡೆಯುವನು ತನಗೆ ಈಜಲಿಕ್ಕೆ ಬರುವವನು ಇನ್ನೊಬ್ಬರ ನಡುವನ್ನು ಹಿಡಿದು ಈಜು ಕಲಿಯುವ ಕಾರಣವಿಲ್ಲ ಸ್ವತಂತ್ರ ಬುದ್ಧಿಯಿಂದ ತನ್ನನ್ನು ತಾನು ಶೋಧಿಸಿಕೊಳ್ಳಬೇಕು ಹೀಗೆ ಎಲ್ಲ ಶೋಧ ಮಾಡಿಕೊಂಡು ಕುಳಿತರೆ ಸಂಶಯ ಉಳಿಯಲಾರದು

ಶ್ರೀ ರಾಮ ॥ ೬ ಆತ್ಮಾಗುಣ ನಿರೂಪಣೆ ॥ ಗುರುಗಳು ಶಿಷ್ಯರಿಗೆ—

"ಜಗತ್ತಿನ ಬಗೆಗೆ ವಿಚಾರ ಮಾಡಲು ಭೂಮಿಯ ಮೇಲೆ ಅಲ್ಲಲ್ಲಿ ಜಲವು ತುಂಬಿದ್ದು ಕಂಡು ಬರುತ್ತದೆ ಎಷ್ಟೋ ವನಾರಣ್ಯಗಳು ನೀರಿಲ್ಲದೆ ಇರುವವು ಅಲ್ಲಿ ನೀರಿನ ಒಂದು ಹನಿಯೂ ಕೂಡ ಇರುವದಿಲ್ಲ ಇದರಂತೆ ಬಾಹ್ಯ ಸೃಷ್ಟಿಯ ಬಗಗೆ ವಿಚಾರ ಮಾಡಲು ಎಷ್ಟೋ ಕಡೆಯಲ್ಲಿ ಅರಿವು ಇರುವದು ಉಳಿದೆಲ್ಲ ಕಡೆಗೂ ಅಜ್ಞಾನವಿರುವದು ನಾಲ್ಕು ಪ್ರಾಣಿ ಕೋಟಿ, ನಾಲ್ಕು ವಾಣಿ, ೮೪ಲಕ್ಷ ಜೀವ ಯೋನಿ ಇವುಗಳೆಲ್ಲ ಕೂಡಿ ಅನಂತ ಪ್ರಾಣಿಗಳೆಲ್ಲ ಹೆಚ್ಚು ಕಡಿಮೆ ಜ್ಞಾನದಿಂದಲೇ ವರ್ತಿಸುತ್ತಿರುವವು. ಅವುಗಳಲ್ಲಿ ನಾಲ್ಕು ಲಕ್ಷ ಮಾನವ ಪ್ರಕಾರಗಳು, ೨೦ಲಕ್ಷ ಪಶು ಯೋನಿಗಳು, ೧೧ಲಕ್ಷ ಕ್ರಿಮಿ ಕೀಟಕ ಯೋನಿಗಳು, ೧೦ಲಕ್ಷ ಖೇಚರ ಯೋನಿ, ೯ಲಕ್ಷ ಜಲಚರ ಯೋನಿಯು, ಹಾಗು ೩೦ಲಕ್ಷ ಸ್ಥಾವರ ಯೋನಿಗಳು ಹೀಗೆ ಒಟ್ಟು೮೪ಲಕ್ಷಯೋನಿಯ ಪ್ರಾಣಿಗಳೆಲ್ಲಅರಿವಿನಿಂದಲೇ ವರ್ತಿಸುತ್ತಿರುವವೆಂದು ಶಾಸ್ತ್ರಗಳಲ್ಲಿ ಹೇಳಿರುವದು ಈ ಎಲ್ಲ ಪ್ರಾಣಿಗಳು ದೇಹದಿಂದಾದರೂ ವಿವಿಧವಾಗಿರುವವು ಎಷ್ಟೋ ಪ್ರಾಣಿಗಳು ಹುಟ್ಟುವವು, ಸಾಯುವವು ಆದರೆ ಅವೆಲ್ಲವುಗಳ ಸ್ಥಿತಿಗತಿಗಳಿಗೆ ಕೇವಲ ಪೃಥ್ವಿಯೇ ಆಧಾರವಾಗಿರುವದು ಅದರ ಹೊರತು ಇನ್ನೊಂದು ಆಧಾರವಿಲ್ಲ ಇದರ ಮುಂದೆ ನೋಡಲು ಪಂಚಭೂತಗಳು ವ್ಯಕ್ತದಶೆಯಲ್ಲಿರುವದು ಕಂಡುಬರುವದು ಅವುಗಳಲ್ಲಿ ಕೆಲವು ಪ್ರಕಟವಾಗಿಯೂ ಕೆಲವು ಗುಪ್ತವಾಗಿಯೂ ಇರುವವು. (ಪೃಥ್ವಿ, ಆಪ, ತೇಜ, ಇವು ಮೂರು ವ್ಯಕ್ತವು, ವಾಯು ಆಕಾಶಗಳು ಅವ್ಯಕ್ತವು) ಚಂಚಲತೆಯಿರುವಲ್ಲಿ ಅಂತರಾತ್ಮನಿರುವನು ಇದೇ

ಆ ಅಂತರಾತ್ಮನ ಗುರುತು ಇನ್ನು ಅರವಿನ ಲಕ್ಷಣಗಳು – ಆತ್ಮಾರಾಮನು ಹಲವು ರೂಪಗಳಿಂದ ನಟಿಸುವನು ಇದೇ ಅವನ ಗುಣವು ಇದು ಹೇಗೆಂಬುದನ್ನು ಮುಂದೆ ಸವಿಸ್ತಾರವಾಗಿ ಹೇಳಿದೆ ಸುಖ–ದುಃಖಗಳನ್ನು ಅರಿಯುವದು ಜೀವ ಹಾಗು ಶಿವ ಇವರ ಗುಣವು ಅಂತಃಕರಣ ಪಂಚಕಗಳು, ಜಡ ದೇಹದಲ್ಲಿಯು ಆಕಾಶದ ಅಂಶವು, ತ್ರಿಗುಣಗಳು, ಅನೇಕ ಶೋಧಗಳು, ಧೃತಿಯು, ನವವಿಧ ಭಕ್ತಿಗಳು, ಚತುರ್ವಿಧ ಮುಕ್ತಿಗಳು, ಅಲಿಪ್ತತೆಯು, ಸಹಜಾವಸ್ಥೆಯು, ಇವೆಲ್ಲವೂ ಆತ್ಮನ ಗುಣಗಳಾಗಿವೆ ದೃಷ್ಟಾ, ಸಾಕ್ಷಿ, ಜ್ಞಾನಘನಸದ್ರೂಪ, ಚಿದ್ರೂಪ ಇವೆಲ್ಲವೂ ಆತ್ಮನ ಗುಣಗಳು ವೇದ-ಶಾಸ್ತ್ರ–ಪುರಾಣಗಳ ಚರ್ಚೆಯು, ಗೌಪ್ಯವಾಗಿ ನಡೆದ ಪರಮಾರ್ಥವು, ಸರ್ವಜ್ಞತ್ವದ ಸರ್ವ ಸಾಮರ್ಥ್ಯವು ಇವೆಲ್ಲವೂ ಆತ್ಮನ ಗುಣಗಳು ಬದ್ಧರು, ಮುಮುಕ್ಷುಗಳು, ಸಿದ್ಧರು ಹಾಗು ಸಾಧಕರು, ವಿಚಾರದಿಂದ ನೋಡುವದು, ಶುದ್ಧಬೋಧೆ, ಪ್ರಬೋಧೆ ಇವೆಲ್ಲವು ಆತ್ಮನ ಗುಣಗಳು ಜಾಗೃತಿ, ಸ್ವಪ್ನ, ಸುಷುಪ್ತಿ, ತುರ್ಯಾ ಈ ಅವಸ್ಥೆಗಳೂ, ಪ್ರಕೃತಿ ಪುರುಷ, ಮೂಲಮಾಯೆ, ಪಿಂಡದ ಹಾಗು ಬ್ರಹ್ಮಾಂಡದ ಒಟ್ಟು ಎಂಟು ಶರೀರಗಳು, ಪರಮಾತ್ಮ ಮತ್ತು ಪರಮೇಶ್ವರಿ, ಜಗದಾತ್ಮಾ ಮತ್ತು ಜಗದೀಶ್ವರಿ, ಮಹೇಶ ಮತ್ತು ಮಾಹೇಶ್ವರಿ, ಇವೆಲ್ಲವೂ ಆತ್ಮನ ಗುಣಗಳು ಒಟ್ಟಿನ ಮೇಲೆ ನಾಮ ರೂಪಗಳೆಲ್ಲವೂ ಆತ್ಮನ ಸ್ವರೂಪಗಳು ಸಂಕೇತವಾಗಿ ಬಂದ ಹೆಸರುಗಳು ಅತಿಶಯವಿರುವವು ಅವಕ್ಕೆ ಮೇರೆಯಿಲ್ಲ ಆದಿಶಕ್ತಿ, ಶಿವಶಕ್ತಿ, ಮೂಲಮಾಯೆ, ಸರ್ವ ಶಕ್ತಿ, ಅನೇಕ ವಸ್ತುಗಳ ಉತ್ಪತ್ತಿ ಸ್ಥಿತಿಗಳು ಇವೆಲ್ಲವು ಆತ್ಮನ ಗುಣಗಳು ಪೂರ್ವಪಕ್ಷ ಹಾಗು ಸಿದ್ಧಾಂತಗಳೂ, ಹಾಡು–ಬಾರಿಸುವದೂ, ಸಂಗೀತವೂ, ಹಲವು ವಿದ್ಯೆಗಳೂ, ಇವೆಲ್ಲವು ಆತ್ಮನ ಅದ್ಭುತ ಗುಣಗಳು ಜ್ಞಾನ ಅಜ್ಞಾನ ವಿಪರೀತ ಜ್ಞಾನಗಳು ಸದಸದ್ವೃತ್ತಿಗಳೂ, ಜ್ಞಪ್ತಿ, ಮಾತ್ರ ಅಲಿಪ್ತತೆಯೂ ಆತ್ಮನ ಗುಣಗಳು ಪಿಂಡ, ಬ್ರಹ್ಮಾಂಡ ತತ್ವನಿರಸನವೂ, ತತ್ವಗಳ ಪಂಚೀಕರಣವೂ, ಸ್ಪಷ್ಟವಾಗಿ ವಿಚಾರ ಮಾಡುವದೂ ಇವೆಲ್ಲ ಆತ್ಮನ ಗುಣಗಳು ಹಲವು ಧ್ಯಾನಗಳು, ಅನುಸಂಧಾನಗಳು, ನಾನಾಸ್ಥಿತಿ–ನಾನಾ ಜ್ಞಾನಗಳು, ಅನ್ವಯ ಆತ್ಮನಿವೇದನೆಗಳು ಇವೆಲ್ಲವು ಆತ್ಮನ ಗುಣಗಳು ೩೩ಕೋಟಿ ದೇವತೆ

ಗಳು, ಲಕ್ಷಸಾವಿರ ಋಷೀಶ್ವರರು, ಅಪಾರವಾದ ಭೂತಗಣಗಳು, ಖೇಚರರು ಇವೆಲ್ಲವು ಆತ್ಮನ ಗುಣಗಳು ಮೂರುವರೆ ಕೋಟಿ ಭೂ ತಾ ವ ಳಿ ಗ ಳು ೫೬ಕೋಟಿ ಚಾಮುಂಡಿಯರು, ೯ಕೋಟಿ ಕಾತ್ಯಾಯನಿಯರು, ಇವೆಲ್ಲವು ಆತ್ಮನ ಗುಣಗಳು ಚಂದ್ರ, ಸೂರ್ಯ, ತಾರಾಮಂಡಲಗಳು, ಹಲವು ನಕ್ಷತ್ರ ಗ್ರಹ ಮಂಡಲಗಳು, ಶೇಷ-ಕೂರ್ಮ-ಮೇಘ-ಮಂಡಲಗಳು, ಇವೆಲ್ಲವು ಆತ್ಮನ ಗುಣಗಳು ದೇವ-ದಾನವ-ಮಾನವರು, ಹಲವು ಪ್ರಕಾರದ ಜೀವ ಗಳು, ಎಲ್ಲ ಭಾವ ಮತ್ತು ಅಭಾವಗಳು ಆತ್ಮನ ಗುಣಗಳಾಗಿವೆ ಇಂತು ಆತ್ಮನು ಬಹು ಗುಣಾನ್ವಿತನು "ನಿರ್ವಿಕಾರ ಬ್ರಹ್ಮನು ನಿರ್ಗುಣನು ಆತ್ಮನ ಗುಣಗಳೆಲ್ಲ ಪೂರ್ಣ ಹಾಗು ಏಕದೇಶಿಗಳಾಗಿರುವವೆಂದು ತಿಳಿಯಬೇಕು ಆತ್ಮಾರಾಮನ ಉಪಾಸನೆಯಿಂದ ನಿರಂಜನಪದ ಪ್ರಾಪ್ತವಾಗುವದು ಇದರಲ್ಲಿ ಸಂದೇಹಾನುಮಾನಗಳಿಲ್ಲ "

ಶ್ರೀ ರಾಮ || ೭ ಆತ್ಮ ನಿರೂಪಣೆ || ಗುರುಗಳು ಶಿಷ್ಯರಿಗೆ—

"ಅನಿರ್ವಚನೀಯ ಸಮಾಧಾನವುಂಟಾದುದನ್ನು ಶಬ್ದಗಳಿಂದ ಹೇಳ ಬೇಕು ನಿಶ್ಯಬ್ದದ ಸಮಾಧಾನವನ್ನು ಶಬ್ದಗಳಿಂದ ಹೇಳಿದರೆ ಸಮಾಧಾನವು ಕುಂದುವದಿಲ್ಲ ಅಂದ ಮೇಲೆ ಹೇಳುವದರಿಂದಾಗುವ ತಪ್ಪೇನು? ಕಾಶೀ ವಿಶ್ವೇಶ್ವರ, ಸೇತುಬಂಧ ರಾಮೇಶ್ವರ ಮುಂತಾದ ಮುಖ್ಯ ದ್ವಾದಶ ಲಿಂಗಗಳು, ಹಲವು ತೀರ್ಥ-ಕ್ಷೇತ್ರಗಳಲ್ಲಿಯ ಸಾಮರ್ಥ್ಯಗಳು, ಸಾಕ್ಷಾ ತ್ಕಾರವು, ಚಮತ್ಕಾರವು, ದೇವ ದೇವತೆಗಳ ಮೂರ್ತಿಗಳು, ಇವೆಲ್ಲವು ಆತ್ಮಾರಾಮನ ಗುಣಗಳು ಉತ್ತಮ ಗುಣಗಳೆಲ್ಲವೂ ಆತ್ಮಾರಾಮನ ಸಂಬಂಧ ವಾದವು ಹಲವು ಸಿದ್ಧರ ಸಾಮರ್ಥ್ಯವು ಮಂತ್ರ ಶಕ್ತಿಯು ಹಲವು ಬಳ್ಳಿಗಳು ಚಿಗುರೊಡೆದು ಫಲಿಸುವಸಾಮರ್ಥ್ಯವು ಭೂಮಿಯಲ್ಲಿಯ ಇನ್ನೂ ಅನೇಕ ಸಾಮರ್ಥ್ಯಗಳು ಆತ್ಮನ ಗುಣಗಳಾಗಿವೆ. ಉತ್ತಮೋತ್ತಮ ಗುಣ ಗಳೆಲ್ಲ ಆತ್ಮನ ಲಕ್ಷಣಗಳಾಗಿವೆ ಒಳಿತು-ಹೀನಗಳೆಲ್ಲ ಆತ್ಮನಿಗಾಗಿಯೇ ಇರುವವು ಸದ್ಗುಣಿಯಾದವನಲ್ಲಿಯು ಶುದ್ಧ ಆತ್ಮವೂ ನೀಚನಲ್ಲಿಯು ಶಬಲ[ಮಿಶ್ರ]ಗುಣವೂ, ಉತ್ತಮ ಕನಿಷ್ಠ ಕೃತ್ಯಗಳೆಲ್ಲವೂ ಆತ್ಮನಿಗೆ ಸಂಬಂಧಿಸಿದವುಗಳಾಗಿವೆ ಹಲವು ಬಗೆಯ ಅಭಿಮಾನವನ್ನು ತಾಳುವದೂ ಪ್ರತಿ ಸೃಷ್ಟಿಗೊಳಿಸುವದೂ, ಶಾಪ-ಉಶ್ಶಾಪ ಕೊಡುವದೂ, ಇವೆಲ್ಲ

ಆತ್ಮನ ಗುಣಗಳು ಪಿಂಡದಲ್ಲಿಯ ಪಂಚೀಕರಣವನ್ನು ತಿಳಿದುಕೊಂಡು ಪಿಂಡದಲ್ಲಿಯ ತತ್ವಗಳನ್ನು ಶೋಧಿಸಬೇಕು ತತ್ವ ಶೋಧ ಮಾಡುವದರಿಂದ ಪಿಂಡ ಜ್ಞಾನವಾಗುವದು ಜಡದೇಹವು ಪಂಚಭೂತಾತ್ಮಕವಾದದ್ದು ಮತ್ತು ಆತ್ಮನ ಗುಣವು ಚಪಲತೆಯುಳ್ಳದ್ದು ಆದರೆ ಏನೇ ಆದರೂ ನಿಶ್ಚಲ ಬ್ರಹ್ಮನ ವ್ಯಾಪಕತೆಯು ಅಬಾಧಿತವಾಗಿರುವದು ನಿಶ್ಚಲಬ್ರಹ್ಮ, ಚಂಚಲ ಆತ್ಮ ಮತ್ತು ಜಡ ದೇಹ ಇವುಗಳ ವಿಂಗಡಿಕೆಯನ್ನು ಪಿಂಡದಲ್ಲಿ ಅಂದರೆ ನರದೇಹವಿರುವಾಗಲೇ ಮಾಡಬೇಕು ಅನುಭವಿಕ ಭಾಷಣಗಳು ಮಹತ್ವವಾದವುಗಳು ಆತ್ಮನು ಪಿಂಡವನ್ನು ತೊರೆದು ಹೋಗುವನು ಇದರ ಮೇಲಿಂದ ಆತ್ಮನು ಪಿಂಡದಿಂದ ಬೇರೆ ಎಂಬದು ಸ್ಪಷ್ಟವಾಗುವದು ಶರೀರವು ಪ್ರೇತರೂಪದಿಂದ ಬೀಳುವದು ಅಂದರೆ ಜಡವು ಇಲ್ಲೇ ಉಳಿಯುವದು ಮತ್ತು ಚಂಚಲವು ಹೊರಟು ಹೋಗುವದು ಇದರಿಂದ ಜಡ-ಚಂಚಲಗಳ ವಿಂಗಡಿಕೆ ಗೊತ್ತಾಗುವದು ಇನ್ನು ನಿಶ್ಚಲನು ಎಲ್ಲೆಡೆಯಲ್ಲಿ ಇರುವನು ಇದನ್ನೇನೂ ಶೋಧ ಮಾಡಬೇಕಾಗಿಲ್ಲ ಯಾಕಂದರೆ ಅವನಿಗೆ ಆತ್ಮನಂತೆ ಗುಣವಿಕಾರವಿರುವದಿಲ್ಲ ಪಿಂಡದ ವಿಚಾರವೇ ಬ್ರಹ್ಮಾಂಡದ ವಿಚಾರವು ಆದರಲ್ಲಿಯೂ ಜಡ—ಚಂಚಲಗಳ ವಿಂಗಡಿಕೆ ಹೀಗೇ ಆಯಿತೆಂದರೆ ಘನಸಾಂದ್ರನಾದ ಪರಬ್ರಹ್ಮನು ಒಬ್ಬನೇ ತೋರುವನು

ಮಹಾಭೂತಗಳಿಂದಾದ ಪಂಜರ ಸ್ವರೂಪದ ದೇಹದಲ್ಲಿ ಆತ್ಮನನ್ನು ಸೇರಿಸಿ ಒಂದು ವಿಗ್ರಹವನ್ನು ಸಿದ್ಧಪಡಿಸಿ ನಿಲ್ಲಿಸಿದೆ ಇದೇ ಬಗೆಯಾಗಿ ಸೃಷ್ಟಿಯ ಕಾರಭಾರವು ಸಾಗಿದೆ ಆತ್ಮನ ಮೂಲಕವಾಗಿಯೇ ಮಾಯೆಯ ಎಲ್ಲ ವಿಕಾರಗಳು ಪ್ರಕಟವಾಗಿ ತೋರುತ್ತವೆ ಆದರೆ ಆತ್ಮನ ಪ್ರಕಾರಗಳು ಬ್ರಹ್ಮನಿಗೆ ಸಂಬಂಧವಾಗುವವು ಅನುಭವದಿಂದ ಎಲ್ಲವನ್ನು ತಿಳಿಯುವವನು ಶ್ರೇಷ್ಠನು ಬ್ರಹ್ಮನ ವ್ಯಾಪಕತೆಯು ಅಖಂಡವಾಗಿದೆ ಉಳಿದೆಲ್ಲವುಗಳ ವ್ಯಾಪಕತೆಯು ಅಖಂಡವಿಲ್ಲ ವಿಚಾರ ಮಾಡಲು ಇದರಲ್ಲೇನೂ ಕಠಿಣವಿಲ್ಲ ಮಹಾ ಪ್ರಳಯವಾಗಿ ಸೃಷ್ಟಿಯ ಸಂಹಾರವಾದರೂ ಆಕಾಶಕ್ಕೆ ಖಂಡತೆಯುಂಟಾಗುವದಿಲ್ಲ ಆಕಾಶವು ನಾಶವಾಗುವದಲ್ಲ ಸಂಹಾರದಲ್ಲಿ ಸಿಕ್ಕಂಥವು ಮಾತ್ರ ಸಹಜ ನಾಶಹೊಂದುವವು ಬಲ್ಲವನಿಗೆ ಈ

ಕಠಿಣ ಸಮಸ್ಯೆ ತಿಳಿಯಲಿಕ್ಕೆ ಬೇಕು ತಿಳಿಯದಿದ್ದರೆ ಸಮಸ್ಯೆಯು ಇನ್ನೂ ಬೆಳೆಯುವದು ತಿಳಿದರೆ ಸ್ಪಷ್ಟ ಕಾಣುತ್ತದೆ ಆದ್ದರಿಂದ ಏಕಾಂತದಲ್ಲಿಯೇ ವಿಚಾರದಿಂದ ನೋಡಬೇಕು ಅಂದರೆ ಎಲ್ಲವೂ ಅರಿಯುವದು ಅನುಭವಿಗಳಾದ ಸಂತರು ಕೂಡಿದಾಗ ಅವರಿಂದಾ ಸಂವಾದವೇ ನಿಜವಾದ ಏಕಾಂತ ಪ್ರಸಂಗವು ಅಲ್ಲಿ ಸಾವಧಾನದಿಂದ ಹೇಳಿ ಕೇಳಿಕೊಂಡು ಗೊತ್ತು ಮಾಡಿಕೊಳ್ಳಬೇಕು ವಿಚಾರದಿಂದ ನೋಡದ ಹೊರತು ತಿಳಿಯುವದಿಲ್ಲ ತಿಳಿಯುತ್ತ ತಿಳಿಯುತ್ತ ಹೋದಂತೆ ಸಂದೇಹ ದೂರಾಗುತ್ತ ಹೋಗುತ್ತದೆ ವಿವೇಕದಿಂದ ನೋಡಿದ ತರ ವಾಯು ವ್ಯಾ ಜಾಲವು ಕಣ್ಣೆದುರಿಗೆ ಉಳಿಯುವದಿಲ್ಲ ಆಕಾಶದಲ್ಲಿ ಮೋಡಗಳು ಬರುವವು ಹಾಗು ತೀವ್ರವೇಗದರುವವು ಅದರಂತೆ ಆತ್ಮನ ಅಧಿಕಾರದಿಂದನಾಮರೂಪಗಳಿಗೆ ಬಂದ ದೃಶ್ಯವು ನಿಶ್ಚಲನ ಮುಂದೆ ನೆಲೆಯೂರಲಾರದು ಆದಿಯಿಂದ ಕೊನೆಯು ವರೆಗೆ ವಿಚಾರಪೂರ್ವಕ ಸರಿಯಾಗಿ ನೋಡಲು ಅಚಲವೇ ನಿಶ್ಚಯವಾಗಿ ಇರುವದು. ನಿಶ್ಚಲ ಬ್ರಹ್ಮನ ನಿಶ್ಚಯದ ಹೊರತು ಉಳಿದ ನಿಶ್ಚಯಗಳು ಅನುಮಾನಿಕಗಳಾಗುವವು ಅನುಮಾನದಿಂದ ನುಡಿದ ನುಡಿಗಳು ಅನುಭವಿಕ ಸಂತರಿಗೆ ಮಾನ್ಯವಾಗಲಾರವು ಅನುಮಾನಿಕ ಮಾತುಗಳ ಉಪಯೋಗವೇನು? ಅಲ್ಲಿ ದೀರ್ಘ ವಿಚಾರಕ್ಕಾಸ್ಪದವಿಲ್ಲ ಅನುಮಾನಿಕ ವಿಚಾರಗಳು ವಿಚಾರಗಳಲ್ಲ, ಅವು ಕೇವಲ ಅವಿಚಾರಗಳು ಏಕಂಕಾರದ ವಿಚಾರವು ಕೇವಲ ಭ್ರಷ್ಟಾಕಾರವು ಹಾಗೆಂದಿಗೂ ಮಾಡಕೂಡದು ಕೃತ್ರಿಮ ಹಾಗು ಅಸತ್ಯಗಳನ್ನು ಬಿಟ್ಟು ಶುದ್ಧ-ನಿಶ್ಚಲ ಬ್ರಹ್ಮನನ್ನು ಸಾರಾಸಾರ ವಿಚಾರದಿಂದ ಕಂಡು ಹಿಡಿಯಬೇಕು''

ಶ್ರೀ ರಾಮ || ೮ ದೇಹಕ್ಷೇತ್ರ ನಿರೂಪಣೆ || ಗುರುಗಳು ಶಿಷ್ಯರಿಗೆ—

"ಬ್ರಹ್ಮದೇವನಿಂದ ಸಂಸಾರ ವೃಕ್ಷವು ಬೆಳೆಯಿತು, ಬೆಳೆಬೆಳೆದು ವಿಸ್ತೀರ್ಣವಾಯಿತು, ಅದು ಫಲಿಸಲಿಕ್ಕೆ ಹತ್ತಿದ ಕೂಡಲೆ ಎಲ್ಲ ಪ್ರಾಣಿಗಳಿಗೆ ಆ ವೃಕ್ಷವು ವಿಶ್ರಾಂತಿಯ ಸ್ಥಾನವೆಂದಾಯಿತು ಆ ಸಂಸಾರ ವೃಕ್ಷದಿಂದ ಹಲವು ರಸಭರಿತ ಫಲಗಳು ಉಂಟಾದವು ಹಲವು ವಸ್ತುಗಳಲ್ಲಿ ರುಚಿಯುತ್ಪನ್ನವಾಯಿತು ಆ ರುಚಿಯನ್ನು ಸ್ವಾದಿಸಲು ಹಲವು ಶರೀರಗಳು ನಿರ್ಮಾಣವಾದವು ಅದೆಷ್ಟೋ ಮೇಲ್ತರದ 'ವಿಷಯುಗಳು ಸಿದ್ಧ

ವಾದವು ಅವೆಲ್ಲವು ಶರೀರದ ಹೊರತು ಉಪಭೋಗಿಸಲಿಕ್ಕಾಗದೆಂದೇ ಹಲವು ಶರೀರಗಳ ಹುಟ್ಟುವಿಕೆಯಾಯಿತು ಶರೀರಕ್ಕೆ ಆವಶ್ಯಕವಾಗಿ ಜ್ಞಾನೇಂದ್ರಿಯಗಳನ್ನು ಹುಟ್ಟಿಸಿದನು ಅವುಗಳಲ್ಲಿ ಭಿನ್ನ ಭಿನ್ನ ಗುಣಗಳನ್ನು ನೇರಿಸಿ ಅವುಗಳನ್ನು ಒಂದೇ ಶರೀರಕ್ಕೆ ಹೊಂದಿಕೆ ಮಾಡಿದನು ಇಷ್ಟೆಲ್ಲವನ್ನು ಮಾಡಿ ತಾನು ಮಾತ್ರ ಬೇರೆಯೇ ಉಳಿದನು ಶ್ರೋತ್ರೇಂದ್ರಿಯವನ್ನುಂಟು ಮಾಡಿ ಅದಕ್ಕೆ ಶಬ್ದ ಕೇಳುವಿಕೆಯ ಕ್ರಿಯೆಯನ್ನು ಒಪ್ಪಿಸಿದನಲ್ಲದೆ ಆ ಶಬ್ದಗಳಲ್ಲಿ ಹಲವು ಭೇದಗಳನ್ನಿರಿಸಿದನು ತ್ವಚೇಂದ್ರಿಯವನ್ನು ಶರೀರಕ್ಕೆ ಹೊದಿಕೆಯನ್ನಾಗಿ ಮಾಡಿದನು ಅದರಿಂದ ಶೀತೋಷ್ಣಗಳ ಜ್ಞಾನ ಮಾಡಿಕೊಳ್ಳುವಂತೆ ಉಪಾಯವನ್ನು ಆ ಇಂದ್ರಿಯಕ್ಕಿರಿಸಿದನು ಚಕ್ಷುರಿಂದ್ರಿಯಕ್ಕೆ ನೋಡುವ ಕ್ರಿಯೆಯನ್ನೊಪ್ಪಿಸಿದನು, ನಾಲಗೆಯಂದರೆ ರಸನೇಂದ್ರಿಯವನ್ನು ಕೇವಲ ರುಚಿ ನೋಡುವದಕ್ಕೆಂದೂ, ಮೂಗು ಅಂದರೆ ಘ್ರಾಣೇಂದ್ರಿಯವನ್ನು ಗಂಧ ವಾಸನೆಗಳ ಪರೀಕ್ಷೆ ಮಾಡುವದಕ್ಕೆಂದೂ ನೇಮಿಸಿದನು ಇಂತು ಬೇರೆ ಬೇರೆ ಇಂದ್ರಿಯಗಳಲ್ಲಿ ಬೇರೆ ಬೇರೆ ಗುಣಗಳನ್ನಿರಿಸಿ ಆತನು ತಾನು ಮಾತ್ರ ಬೇರೆಯಾಗಿಯೇ ಉಳಿದನು ಪ್ರಾಣಪಂಚಕಗಳೊಡನೆ ಅಂತಃಕರಣ ಪಂಚಕಗಳನ್ನು ಬೆರಸಿ ಅವನ್ನು ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳೆಲ್ಲ ನಿಶ್ಶಂಕವಾಗಿ ನೋಡುವ ಹಾಗೆ ತಿರುಗಿಸಹತ್ತಿದನು ಕರ್ಮೇಂದ್ರಿಯಗಳ ಯೋಗದಿಂದ ಜೀವನು ವಿಷಯಗಳನ್ನು ಭೋಗಿಸಬೇಕೆಂಬ ಹಂಚಿಕೆಯನ್ನು ಈಶ್ವರನೇ ಜಗತ್ತಿನಲ್ಲಿ ಉಂಟು ಮಾಡಿದನು ನಿರ್ಮಿತವಾದ ವಿಷಯಗಳೆಲ್ಲ ಶರೀರವಿಲ್ಲದೆ ಅದೆಂತು ಭೋಗಿಸಲ್ಪಡುವವು? ಇದನ್ನರಿತೇ ಅವನು ಹಲವು ಶರೀರಗಳ ನಿರ್ಮಾಪನ ಮಾಡಿರುವನು ಆ ಶರೀರಗಳಾದರೂ ಅಸ್ಥಿ-ಮಾಂಸ-ರುಧಿರಗಳಿಂದ ಯುಕ್ತವಾಗಿ ಗುಣಗಳಿಗನುಸರಿಸಿ ಆ ಶರೀರಯಂತ್ರಗಳು ಸಿದ್ಧವಾಗಿವೆ ಇದರಲ್ಲಿ ಆತನ ವಿಚಾರ ಮತ್ತೊಂದಿಲ್ಲ ಹೀಗೆ ದೇವನು ಶರೀರವನ್ನು ನಿರ್ಮಿಸಿ ವಿಷಯ ಭೋಗಗಳನ್ನು ಬೆಳಿಸಿದನು ಈ ಬಗೆಯಾಗಿ ಆತನಿಂದ ಸಣ್ಣ-ದೊಡ್ಡ ವಸ್ತು ಸಂಗತಿಗಳೆಲ್ಲ ಉಂಟಾದವು ಜಗದೀಶನು ಇಂತು ಅನಂತ ಸಣ್ಣದೊಡ್ಡ ಅಸ್ಥಿ-ಮಾಂಸಯುಕ್ತ ಶರೀರಗಳನ್ನು ಅವವುಗಳ ಗುಣಗಳನ್ನು ಬಹು ವಿವೇಕದಿಂದ ವಿಚಾರಿಸಿ ನಿರ್ಮಾಣ ಮಾಡಿ

ದನು. ಶರೀರವು ಎಲವು ಮಾಂಸಗಳಿಂದಾದ ಗೊಂಬೆಯಾದರೂ ಅದು ಸಕಲ ಕಲಾ ಜ್ಞಾನಗಳಿಂದ ಪ್ರವೀಣವಾಗಿದೆ ಬೇರೆ ಬೇರೆ ಸ್ಥಾನಗಳಿಗ ನುಸರಿಸಿ ಬೇರೆ ಬೇರೆ ಪ್ರಕಾರಗಳ ಶರೀರಗಳ ಯೋಜನೆಯಾಗಿದೆ ಹೀಗೆ ಶರೀರ ಭಿನ್ನತೆಯಾಗಿದ್ದರೂ ಆ ಭೇದಗಳು ಅವವುಗಳ ಕಾರ್ಯಕ್ಕನುಸರಿಸಿ ಕೈಕೊಳ್ಳಲ್ಪಟ್ಟಿದೆ ಆದರೂ ಆ ಭೇದಗಳಂತೆ ಅವುಗಳ ಗುಣಗಳೂ ಭಿನ್ನ ಭಿನ್ನವಾಗಿವೆ ಮತ್ತು ಹಲವಾಗಿವೆ ಇದೆಲ್ಲವೂ ಸೂಕ್ಷ್ಮ ಬುದ್ಧಿ ವಿಚಾರವಿಲ್ಲದೆ ತಿಳಿಯಲಾರದು ಎಲ್ಲವನ್ನೂ ತಾನೇ ಮಾಡುವ ಭಾರ ವನ್ನು ವಹಿಸಿದ ಈಶ್ವರನು ಅರ್ಥಾತ್ ಮೂಲ ಮಾಯೆಯು ಈ ಬಗೆ ಯಾಗಿ ಭಿನ್ನತೆಗಳನ್ನು ಅನುಸರಿಸಬೇಕಾಯಿತು ಈ ನಿರ್ಮಿತವಾದ ಭೇದವು ಊರ್ಧ್ವ ಮುಖವಾದರೆ ಅದಕ್ಕೆ ಉಳಿಯಲು ಸ್ಥಳವೇ ಇಲ್ಲ ದಾಗುವದು. ಸೃಷ್ಟಿಯ ನಿರ್ಮಾಣ ಕಾರ್ಯದಲ್ಲಿ ಎಲ್ಲ ಭೇದಗಳನ್ನು ಆತನು ಉಪಯೋಗಿಸಬೇಕಾಗುವದು, ಆದರೆ ಅದೇ ಸೃಷ್ಟಿಯ ಸಂಹಾರದಲ್ಲಿ ಎಲ್ಲವೂ ನಿರ್ಮೂಲನವಾಗಿ ನಾಶವಾಗುವವು ಅಂದ ಮೇಲೆ ಆತನು ಉಪಯೋಗಿಸಿದ ಭೇದಗಳೂ ನಿರ್ನಾಮವಾಗಿ ಹೋಗುವವು ನಿಜವಾಗಿ ನೋಡಿದರೆ ಈ ಭೇದ ಮತ್ತು ಅಭೇದ ಕಲ್ಪನೆಗಳು ಮಾಯೆಯ ಸಂಬಂಧಿ ಕವಾದವು ಅಂತರಾತ್ಮನ ಮಹಿಮೆ ಆದಾರಿಗೂ ತಿಳಿಯದು ಅವನು ಮಾಯೆಯಲ್ಲಿಯೇ ಬರುವನು ಚತುರ್ಮುಖ ಬ್ರಹ್ಮನೂ ಸಂದೇಹದಲ್ಲಿ ಬೀಳುವನು ಅಂತರಾತ್ಮನ ವಿವರಣೆಯಲ್ಲಿ ಮನಸ್ಸು ಕ್ಷಣಕ್ಷಣಕ್ಕೆ ಹಲವು ತೊಂದರೆಗಳೊಡನೆ ಹೋರಾಡಿ ನುಗ್ಗವಾಗಬೇಕಾಗುತ್ತದೆ ಆತ್ಮತ್ವಕ್ಕಾಗಿ ಇಷ್ಟೆಲ್ಲ ಹೋರಾಡಬೇಕಾಗುತ್ತದೆ ಬ್ರಹ್ಮನ ಸಂಬಂಧವಾಗಿ ವಿಚಾರ ಮಾಡುವಲ್ಲಿ ಇಷ್ಟೆಲ್ಲ ಯಾತನೆಗಳ ಕಾರಣವೇ ಉಳಿಯುವದಿಲ್ಲ ಆ ಬ್ರಹ್ಮನ ಬಗೆಗೆ ಏಕಾಂತದಲ್ಲಿ ವಿಚಾರಿಸಿ ನೋಡಬೇಕು ದೇಹಧರ್ಮ ಕ್ಕನುಸರಿಸಿದ ಸಂಗತಿಗಳೆಲ್ಲ ಜಗದೀಶ್ವರನಿಂದಲೇ ಮಾಡಲ್ಪಡುವವು ಘನವಾದ ಸಾಮರ್ಥ್ಯ ಪ್ರಕಟವಾಗಲು ಆದಕ್ಕೆ 'ಅವತಾರ'ವೆನ್ನುವರು ಭಗವಂತನು ಶೇಷ, ಕೂರ್ಮ, ವರಾಹ ಹೀಗೆ ಹಲವು ದೊಡ್ಡ ದೊಡ್ಡ ದೇಹಧಾರಣ ಮಾಡಿ ಅವತಾರ ಕ್ರಿಯೆ ಸಾಗಿಸಿದ್ದರಿಂದಲೇ ಈ ಸೃಷ್ಟಿಯು ನಡೆದು ಬಂದಿರುವದು ಜಗದೀಶನು ಈ ಸೃಷ್ಟಿಯೆಂಬ ಪ್ರಚಂಡ ಯಂತ್ರ

ವನ್ನು ಅದೆಂಥ ಅದ್ಭುತ ರೀತಿಯಲ್ಲಿ ಸ್ಥಾಪಿಸಿರುವನೆಂಬದನ್ನು ನೋಡಿರಿ ಆತನು— ಸೂರ್ಯಬಿಂಬವನ್ನು ಒಂದೇ ಸವನೆ ಓಡಲಿಕ್ಕೆ ಹಚ್ಚಿರುವನು ಹಾಗು ಅದನ್ನು ಹಿಡಿಯುವ ಕುರಿತು ಅಗಾಧವಾದ ನೀರಿನಿಂದ ಹೊಗೆ ಯಂಥ ಉಗಿ ಮೋಡಗಳನ್ನು ಹುಟ್ಟಿಸಿ ಅವನ್ನು ಆ ಸೂರ್ಯನನ್ನು ಬೆಂಬ ಳಿಸಿ ಬಿಟ್ಟಿರುವನು ದೊಡ್ಡ ದೊಡ್ಡ ಗಿರಿಗಳಾಕಾರದ ಮೋಡಗಳು ಸಾಗಿ ಹೋಗಿ ಆ ಸೂರ್ಯಬಿಂಬವನ್ನು ಮುಸುಕಿಕ್ಕಿ ಬಿಡುವವು ಆ ಕೂಡಲೇ ಅಲ್ಲಿ ಮಹತ್ತ್ವವಾದ ವಾಯುವು ಉತ್ಪನ್ನವಾಗುವದು ಆ ವಾಯುವು ಅದ್ಭುತವಾದ ಆರ್ಭಟೆಯಿಂದ ಯಮದೂತರಂತೆ ಮುಂದರಿದು ಹೋಗಿ ಆ ಮೋಡಗಳನ್ನು ದಿಕ್ಕಾಪಾಲಾಗಿ ಚದರಿಸಿ ಬಿಡುವವು ಹಾಗು ಮೋಡ ಗಳ ಮುತ್ತಿಗೆಯಿಂದ ಸೂರ್ಯಬಿಂಬವನ್ನು ಮುಕ್ತವನ್ನಾಗಿ ಮಾಡುವವು ಆ ಪ್ರಸಂಗದಲ್ಲಿ ಉಂಟಾಗುವ ವಿದ್ಯುತ್ತಿನ ಕೋಲ್ಮಿಂಚುಗಳ ಹೊಡೆತಗ ಳಿಂದಲೂ ಗುಡುಗು ಗರ್ಜನೆಗಳ ರಭಸದಿಂದಲೂ ಭೂಮಿಯ ಮೇಲಿನ ಪ್ರಾಣಿ ಮಾತ್ರರ ಎದೆಗಳೆಲ್ಲ ಧಸ್ಸಕ್ಕೆಂದೆನ್ನುವವು ಈಶ್ವರನು ಈ ಸೃಷ್ಟಿ ಯಲ್ಲಿ ಇನ್ನೂ ಒಂದು ಗುಹ್ಯತಮವನ್ನಿಟ್ಟಿರುವನು ಅದೇನೆಂದರೆ—

ಒಂದು ಮಹದ್ಭೂತವು ಇನ್ನೊಂದು ಮಹದ್ಭೂತವನ್ನು ನುಂಗಿ ಬಿಡುವದು' [ಅಂದರೆ ಆಪ(ಜಲ)ವು ಪೃಥ್ವಿಯನ್ನು, ತೇಜವು ಆಪ (ಜಲ)ವನ್ನು] ಇದರಿಂದಲೇ ಸೃಷ್ಟಿಯ ವ್ಯವಸ್ಥೆಯು ಆ ದೇವನಿಂದ ಹೇಗೆ ಸುಯಂತ್ರಿತವಾಗಿ ಸಾಗಿಸಲ್ಪಡುವದೆಂಬದು ತಿಳಿಯುವದು ಈ ಪ್ರಕಾರವಾಗಿ ಆತ್ಮನ ಅನಂತ ಭೇದಗಳಿರುವವು ಅವನ್ನೆಲ್ಲ ತಿಳಿದು ಕೊಳ್ಳುವದು ಸಾಧ್ಯವಿಲ್ಲ ತಿಳಿದುಕೊಳ್ಳ ಹೋಗಲು ಮನಸ್ಸಿಗೆ ದುರ್ದೆಸೆ ಹಾರಿ ಹೋಗುವದು

ಇಂತು ನಮ್ಮ ಉಪಾಸನೆಯದೆ ಉಪಾಸಕರು' ಇದನ್ನು ಮನಸ್ಸಿ ನಲ್ಲಿ ತಂದುಕೊಳ್ಳಬೇಕು ಬ್ರಹ್ಮನ ಮಹಿಮೆ ಅಗಾಧವಾದುದು ಅದಾ ರಿಗೂ ತಿಳಿಯದು ಭಜನೋಪಾಸನೆಗಳಿಗೆ ಆ ವಾಹನ ಹಾಗು ವಿಸ ರ್ಜನಗಳುಂಟು ಇವೇ ಅವುಗಳ ಲಕ್ಷಣಗಳು ಇವೆಲ್ಲ ಸಜ್ಜನರಿಗೆ ತಿಳಿ ದಿರುವವು ಎಂದ ಮೇಲೆ ನಾವು ಹೇಳುವ ಅವಶ್ಯವಿಲ್ಲ"

ಶ್ರೀ ರಾಮ ॥ ೯ ಸೂಕ್ಷ್ಮ ನಿರೂಪಣೆ ॥ ಗುರುಗಳು ಶಿಷ್ಯರಿಗೆ–

'' ಮಣ್ಣಿನಿಂದ ದೇವ ವಿಗ್ರಹವನ್ನು ಮಾಡಿ ಪೂಜಿಸುವದು ಮತ್ತು ಪೂಜೆ ಕೊನೆಗಂಡನಂತರ ಅದರ ವಿಸರ್ಜನೆ ಮಾಡುವದು ಈ ಕ್ರಮವನ್ನು ಅಂತ ಕರಣವು ಸ್ವಭಾವತಃ ಒಪ್ಪಲಾರದು ದೇವರೆಂದು ಪೂಜಿಸಿ ಅದನ್ನು ಚೆಲ್ಲಿಕೊಡುವದು ಜೀವಕ್ಕೆ ಪ್ರಶಸ್ತವೇ ಹೇಗೆ? ಎಂಬದನ್ನು ಅಂತರ್ಯಾಮದಲ್ಲಿ ವಿಚಾರಿಸತಕ್ಕದ್ದು ದೇವನನ್ನು ವಿರಚಿಸಿ ಪೂಜಿಸುವದೂ ವಿಸರ್ಜಿಸುವದೂ ಈ ಬಗೆಯಲ್ಲ ಅದಕ್ಕಾಗಿ ಏನಾದರೂ ವಿಚಾರ ಮಾಡತಕ್ಕದ್ದು ದೇವನು ಹಲವು ಶರೀರಗಳನ್ನು ಧಾರಣ ಮಾಡುವನು, ಹಿಂದಿನಿಂದ ಆ ಶರೀರಗಳನ್ನು ತ್ಯಾಗ ಮಾಡುವನು ಆದರೆ ಆ ದೇವನ(ಅಂತರಾತ್ಮನ)ನ್ನು ವಿವೇಕದಿಂದ ತಿಳಿದುಕೊಳ್ಳತಕ್ಕದ್ದು ಶ್ರವಣ—ಮನನಾದಿ ಸಾಧನಗಳು, ಬೋಧೆಗಳು, ಇವೆಲ್ಲವು ದೇವನನ್ನು ಶೋಧಿಸುವ ಉದ್ದಿಶ್ಯವಾಗಿಯೇ ಕೈಕೊಳ್ಳಲ್ಪಡುವವು ಇದನ್ನು ಚನ್ನಾಗಿ ಮನಸ್ಸಿನಿಂದ ತಿಳಿದುಕೊಳ್ಳಬೇಕು ಸ್ವತಃ ಅನುಭವ ಗಾಣದ ಹೊರತು ಅನ್ಯರಿಗೆ ಬ್ರಹ್ಮಜ್ಞಾನದ ಉಪಾಯವನ್ನು ತಿಳಿಸಿಕೊಡಲು ಬರುವದಿಲ್ಲ ' ಪದಾರ್ಥವು ಇದ್ದರೆ ಮಾತ್ರ ಅದನ್ನು ತೆಗೆದುಕೊಂಡು ಹೋಗು ' ಎಂದು ಬೇರೊಬ್ಬನಿಗೆ ಹೇಳಲಿಕ್ಕೆ ಬರುವದು ಆದರೆ ಪದಾರ್ಥವೇ ಇಲ್ಲದೆ ಹೋದರೆ ಹಾಗೆ ಹೇಳಲಿಕ್ಕೆ ಬರಲಾರದು ದೇವ ದರ್ಶನ ತೆಗೆದುಕೊಳ್ಳುವ ಇಚ್ಛೆಯು ಎಲ್ಲರಲ್ಲಿಯೂ ಇರುವದು ಸ್ವಾಭಾವಿಕವು. ಆದರೆ ಆ ದೇವನ ದರ್ಶನಮಾಡಿಕೊಳ್ಳುವ ಮಾರ್ಗವೇ ಬೇರೆ ಇರುವದು ವಿಚಾರ ಮಾಡಿ ಮಾಡಿ ದೇವನ ಅಸ್ತಿತ್ವದ ಬಗ್ಗೆ ಸಂಶಯಗೊಂಡರೆ ದೇವನು ದೊರೆಯನು ಆದರೆ ಜನರು ಧೀರತೆಯನ್ನು ಹಿಡಿಯದೆ ಪ್ರಯತ್ನ ಮಾಡಿದರೆ ಉಪಯೋಗವಿಲ್ಲ ದೊಡ್ಡ ದೊಡ್ಡ

ಜನರು ಮರಣ ಹೊಂದಿದಮೇಲೆ ಅವರ ಮೂರ್ತಿ, ಚಿತ್ರ, ಗೊಂಬೆ ಮುಂತಾದವುಗಳನ್ನು ಮಾಡಿಸಿ ಇಡುವರು. ಉಪಾಸನೆಯ ಹಾಡಾದರೂ ಹೀಗೇ ಇರುವದು ದೊಡ್ಡ ಪ್ರಮಾಣದಿಂದ ವ್ಯಾಪಾರ ಕೈಕೊಳ್ಳುವ ಬುದ್ಧಿ ಚಾತುರ್ಯವಿಲ್ಲದೆ ಹೋದಲ್ಲಿ ಶ್ರಮಜೀವಿಯೆನ್ನಿಸಿ ಕೂಲೀ ಮಾಡ ಬೇಕಾಗುವದು ಅಂದಮೇಲೆ ಅಂಥವನಿಗೆ ಸಿರಿ ಸಂಪದುಗಳು ಅದೆಂತು ದೊರೆಯುವವು? ಹೇಡಿತನವು ಅಜ್ಞಾನದ ಸ್ವಭಾವವಾಗಿರುವದು ಅಜ್ಞಾನದಿಂದ ಜ್ಞಾನ ಸ್ವರೂಪ ದೇವಾಧಿ ದೇವನನ್ನು ಅದೆಂತು ಗುರುತಿಸಲಿಕ್ಕೆ ಬರುವದು? ಶಕ್ಯವಿಲ್ಲ ಜ್ಞಾನದ ವಿಚಾರವನ್ನು ಅಜ್ಞಾನವು ಗ್ರಹಿಸಲಾರದು ಮತ್ತು ಜ್ಞಾನಿಯಾದವನಿಗೆ ಅನುಮಾನಿಕ ಸಂಗತಿಗಳೂ ಮೇಳೈಸುವದಿಲ್ಲ ಆದ್ದರಿಂದ ದೇವನನ್ನು ಬಯಸುವವನು ಸಿದ್ಧ ಸ್ಥಿತಿಯವಶ ಅಂದರೆ ದೇವನನ್ನು ಹೊಂದಿದವರ ಮಾರ್ಗವನ್ನೇ ಅನುಸರಿಸಬೇಕು ಆ ಮಾರ್ಗವೆಂದರೆ ವಿವೇಕದಿಂದ ಮಾಯೆಯ ತ್ಯಾಗಮಾಡಿ ಆದ್ಯ ವಸ್ತುವನ್ನು ಕೂಡಿಕೊಳ್ಳಬೇಕು ಇದೇ ದೇವ ಪ್ರಾಪ್ತಿಯ ಮಾರ್ಗವು ಅಂದರೇನೇ ಸಮಾಧಾನ ಸಿಗುವದು ಈ ಮಾರ್ಗವನ್ನು ಹಿಡಿಯದಿದ್ದರೆ ಮನಬಂದಂತೆ ದೇವನನ್ನು ಹುಡುಕುತ್ತ ಕಂಡ ಕಂಡಲ್ಲಿ ತಿರುಗಾಡಬೇಕಾಗುವದು ಆದರೂ ವ್ಯರ್ಥವು ಇನ್ನೂ ಹಲವು ಉಪಾಯಗಳಿದ್ದರೂ ಅವೆಲ್ಲ ನಿರರ್ಥಕವು ಆದರೂ ಮೇಲಿನ ಮಾರ್ಗವಲ್ಲದೆ ನಿಶ್ಚಿತ ಉಪಾಯವಾವದೆಂದರೆ– ಅಧ್ಯಾತ್ಮ ಶ್ರವಣದಿಂದ ಅನುಭವವನ್ನು ಹೊಂದುತ್ತ ದೇವನನ್ನು ಪ್ರಾಪ್ತಿಸಿಕೊಳ್ಳುವದು ಈ ಉಪಾಯ ಬಿಟ್ಟು ಅನ್ಯ ಉಪಾಯ ಸ್ವೀಕರಿಸಿದರೆ ದೇವನಿರುವದು ಒಂದುಕಡೆ, ಆತನನ್ನು ಹುಡುಕುವದು ಇನ್ನೊಂದುಕಡೆ ಹೀಗೆ ತಪ್ಪುಗಂಟು ಉಂಟಾಗುತ್ತದೆ ಸತ್ಯ ಮತ್ತು ಅಸತ್ಯ ಇವು ಸ್ವಚ್ಛವಾಗಿ ತಿಳಿಯಬೇಕು ಅಸತ್ಯದ ವಕ್ರ ಮಾರ್ಗದಿಂದ ಹೋಗದೆ ಸರಳವಾದ ಸತ್ಯ ಮಾರ್ಗದಿಂದಲೇ

ಹೋಗಬೇಕು ಅಸತ್ಯವನ್ನು ನಂಬಬಾರದು ಹಾಗು ಅದನ್ನು ಸಂಗ್ರಹಿಸಲೂ ಬಾರದು ಬ್ರಹ್ಮನೊಬ್ಬನು ಸತ್ಯನು ಅವನ ಹೊರತು ಉಳಿದೆಲ್ಲವೂ ಮಾಯಿಕವು ಅಂದರೆ ಅಸತ್ಯವಾದವು

ಅಸತ್ಯವು ಅಸತ್ಯವೇ ಹೊರತು ಅದು 'ಸತ್ಯ'ವೆಂದು ಹೇಳಿಸಿಕೊಳ್ಳಲಾರದು- ಇಷ್ಟೇ ಅಲ್ಲ ಅದು ಸತ್ಯದ ವಾಸಂಗಕ್ಕೆ ಹತ್ತಲಾರದು ಸತ್ಯದ ಮುಂದೆ ನೆಲೆನಿಲ್ಲಲಾರದು ಸತ್ಯದೇವ (ಬ್ರಹ್ಮ)ನೇ ಬೇಕಾಗಿದ್ದರೆ ಮಾಯೆಯನ್ನು ಬೆಂಬಳಿಸಿ ಕೆಳಮುಖವಾಗಿ ಓಡುತ್ತಿರುವ ಮನಸ್ಸನ್ನು ಸಂಯಮನಗೊಳಿಸಿ ಅದನ್ನು ಊರ್ಧ್ವಮುಖ ಮಾಡಿಸಿ ಉಗಮಕ್ಕೆ ಹಚ್ಚಬೇಕು. ಅಧ್ಯಾತ್ಮ ಶ್ರವಣ ಮಾಡಬೇಕು ಅಂದರೆ ಎಲ್ಲವೂ ಮನನವಾಗುವದು, ಸಂಶಯಗಳ ವಿಚ್ಛೇದನೆಯಾಗುವದು ದಾರದ ತೊಡಕನ್ನು ಬಿಡಿಸಿದಂತೆ ವಿಷಯದಲ್ಲಿ ಸಿಕ್ಕಿರುವ ಮನಸ್ಸನ್ನು ವಿವೇಕದಿಂದ ಬಿಡಿಸಬೇಕು ಈ ಬಗೆಯಾಗಿ ಅದನ್ನು ಸಾವಕಾಶವಾಗಿ ಮೂಲದ ಕಡೆಗೆ ತಿರುಗಿಸಬೇಕು ಜಡ—ಚಂಚಲಗಳ ಕಲಕು ಮಲುಕಾಗಿ ಪಿಂಡ ಬ್ರಹ್ಮಾಂಡಗಳ ರಚನೆಯಾಗಿದೆ ಅದೇ ಅವುಗಳ ಶರೀರಗಳೆಲ್ಲರಲ್ಲಿ ಸೇರಿದೆ ವಿಚಾರವನ್ನೇನಾದರೂ ಮಾಡುವದಿದ್ದಲ್ಲಿ ನರದೇಹದಲ್ಲಿಯೇ ಮಾಡಬೇಕು ಹುಡುಕುವದನ್ನು ಅಲ್ಲಿಯೇ ಹುಡುಕಬೇಕು ಮೂಲ ಮಾಯೆಯ ೧೪ ಹೆಸರುಗಳನ್ನು ಅಲ್ಲಿಯೇ ವಿವರವಾಗಿ ತಿಳಿಯಬೇಕು ನಿರ್ಗುಣ ನಿರ್ವಿಕಾರ ಬ್ರಹ್ಮನು ಎಲ್ಲದರಲ್ಲಿಯೂ ವ್ಯಾಪಕನಾಗಿರುವನು ಹಾಗು ಆತನು ನಮ್ಮ ದೇಹದಲ್ಲಿ ನಿಷ್ಕಲಂಕನಾಗಿರುವನೋ ಇಲ್ಲೋ ಎಂಬದನ್ನು ನೋಡಬೇಕು ಮೂಲ ಮಾಯೆಯು ಸಂಕಲ್ಪ ರೂಪವಾಗಿರುವದು. ಅದು ನಮ್ಮ ದೇಹದಲ್ಲಿ ಅಂತಃಕರಣ ರೂಪದಿಂದಿರುವದು

ಚೈತನ್ಯವು ಜಡವನ್ನು ಜೀತರಿರುವದು ಅದೂ ಶರೀರದಲ್ಲಿಯೇ ಇರುವದು, ಗುಣ ಸಾಮ್ಯದ ಸೂಕ್ಷ್ಮ ವಿಚಾರವು ಅಗಮ್ಯವಾಗಿದೆ. ಅದರ ಸೂಕ್ಷ್ಮತೆಯು ಸಾಧುಗಳಿಗೇ ವಿದಿತವು ಅಂತ ಸಾಧುಗಳಿಗೆ ಸಪ್ರೀತಿಯಿಂದ ನಮಸ್ಕರಿಸಬೇಕು ದೇಹದಲ್ಲಿ ಎಡ—ಬಲಗಳು ಅವುಗಳಂತೇ ಪಿಂಡದಲ್ಲಿ ಅರ್ಧನಾರೀ ನಟೇಶ್ವರ ಎಂದು ತಿಳಿಯಬೇಕು. ಇದರಂತೆ ಪ್ರಕೃತಿ ಪುರುಷ, ಶಿವಶಕ್ತಿ, ಷಡ್ಗುಣೇಶ್ವರ, ಮಹತ್ತತ್ವ, ಸತ್ವ-ರಜ-ತಮಗಳು, ಶುದ್ಧ ಸತ್ವ, ಗುಣಕ್ಷೋಭಿಣಿ, ಗುಣಸಾಮ್ಯ, ಚೈತನ್ಯ, ಮನ, ಅಂತರಾತ್ಮಾ ಹೀಗೆ ೧೪ ಹೆಸರುಗಳು ಆ ಸೂಕ್ಷ್ಮ ಮೂಲ ಮಾಯೆಗಿರುವವು ಆ ಮಾಯೆಯು ಕರ್ದಮ ರೂಪವಾಗಿರುವದು ಅರ್ಥಾತ್ ಶರೀರವೂ ಕರ್ದಮವೆಂದರಿಯಬೇಕು ಮನ, ಮಾಯಾ, ಜೀವ ಇವೂ ಮೂಲ ಮಾಯೆಯ ಸ್ವಭಾವಗಳು ಈ ಎಲ್ಲ ಹೆಸರುಗಳ ಅಭಿಪ್ರಾಯವನ್ನು ಪಿಂಡದಲ್ಲಿ ಕಾಣಬೇಕು ಪಿಂಡವು ನಾಶವಾಗುವದು ಆದರೆ ಪರಬ್ರಹ್ಮನು ಶಾಶ್ವತವುಳಿಯುವನು ಇದನ್ನು ನಂಬತಕ್ಕದ್ದು. ಅಂದರೆ ಸತ್ಯ ದೇವನನ್ನು ಹೃದಯದಲ್ಲಿ ದೃಢವಾಗಿರಿಸತಕ್ಕದ್ದು ”

ಶ್ರೀ ರಾಮ|| ೧೦ ವಿಮಲ ಬ್ರಹ್ಮ ನಿರೂಪಣೆ || ಗುರುಗಳು ಶಿಷ್ಯರಿಗೆ-

“ಪರಬ್ರಹ್ಮನನ್ನು ಮುಟ್ಟಹೋಗಲು ಮುಟ್ಟದಾಗದು, ಬಿಡಹೋಗಲು ಬಿಡದಾಗದು, ಆತನು ಇದ್ದಲ್ಲಿಯೇ ಇರುವನು ಅತ್ತಿತ್ತ ಸುತ್ತಲೆಲ್ಲವೂ ಅವನಿರುವನು ಅವನ ಕಡೆಗೆ ಬೆನ್ನುಮಾಡಿ ಕುಳಿತರೆ ಅವನು ಮುಂದೇ ಇರುವನು. ಎಲ್ಲಿಬೇಕಾದಲ್ಲಿಗೆ ಹೋದರೂ ಆತನು ಎದುರು ಇದ್ದೇ ಇರುವನು ಒಂದೆಡೆಯಲ್ಲಿ ಕುಳಿತವನು ಅಲ್ಲಿಂದ ಎದ್ದು ಹೋಗಲು ಅವನು

ಕುಳಿತ ಸ್ಥಳದಲ್ಲಿ ಆಕಾಶವುಳಿಯುವದು ಎತ್ತ ಬೇಕಾದತ್ತ ಓಡಿಹೋದರೂ ಆಕಾಶದಿಂದ ಆವೃತ್ತವಾಗಿಯೇ ಹೋಗಬೇಕಾಗುವದು ಇನ್ನು ಆಕಾಶವನ್ನು ಬಲವಂತಿಕೆಯಿಂದ ಒಡೆದು ಅದರ ಹೊರಗೆ ಹೋಗುವದು ಸಾಧ್ಯವಿಲ್ಲ ಪ್ರತಿಯೊಂದು ಪ್ರಾಣಿಯು ಎಲ್ಲಿ ಬೇಕಾದಲ್ಲಿ ಇರಲು ಅದಕ್ಕೆ ಆತನು ಎದುರಿನಲ್ಲಿಯೇ ಇರುವನು ನಡು ಹಗಲಿನ ಸೂರ್ಯನಂತೆ ನೆತ್ತಿಯ ಮೇಲೆ ಇರುವನು ಆದರೆ ಇವನಿಗೆ ಸೂರ್ಯನ ದೃಷ್ಟಾಂತವು ಸಂಪೂರ್ಣವಾಗಿ ಅನ್ವಯಿಸುವದಿಲ್ಲ ಕೇವಲ ಕೌತುಕ ದರ್ಶನಕ್ಕಾಗಿ ಕೊಟ್ಟಿದೆ ತೀರ್ಥ-ಕ್ಷೇತ್ರಗಳನ್ನೂ ಹಲವು ದೇಶಗಳನ್ನೂ ಕಾಣಬೇಕಾದರೆ ಶರೀರವನ್ನು ಶ್ರಮಗೊಳಿಸಬೇಕಾಗುವದು ಆದರೆ ಪರಬ್ರಹ್ಮನ ದರ್ಶನಕ್ಕಾಗಿ ಸಿಕ್ಕಲ್ಲಿ ತಿರುಗಾಡಿ ಕಷ್ಟಪಡಬೇಕಾಗಿಲ್ಲ ಆವನು ನಾವುಕುಳಿತಲ್ಲಿಯೇ ನಿಂತಲ್ಲಿಯೇ ಇರುವನು ಪ್ರಾಣಿಯು ಮುಂದರಿದು ಓಡುತ್ತಿರುವಾಗಲೂ, ಕುಳಿತಿರುವಾಗಲೂ ಆ ಪರಬ್ರಹ್ಮ ವಸ್ತುವು ಆವನ ಜೊತೆಗೇ ಇರುವದು ಅಂತರಿಕ್ಷದಲ್ಲಿ ಉಡ್ಡಾಣ ಮಾಡುತ್ತಿರುವ ಪಕ್ಷಿಯ ಸುತ್ತಲೂ ಆಕಾಶವು ಆವೃತವಾಗಿರುವದು ಅದರಂತೇ ಬ್ರಹ್ಮನು ಎಲ್ಲ ಪ್ರಾಣಿಗಳನ್ನು ವ್ಯಾಪಿಸಿಬಿಟ್ಟಿರುವನು ಬ್ರಹ್ಮನು ಅವಕಾಶವುಳ್ಳವನೂ ಆಗಿರುವನು ಹಾಗು ಘನತರಗಟ್ಟಿಯ ಸ್ವರೂಪನೂ ಆಗಿರುವನು ಅವನು ಕೊನೆಗೆ ಕೊನೆಯಾಗಿರುವನು ಮತ್ತು ಪ್ರತಿಯೊಂದು ಪದಾರ್ಥಕ್ಕೆ ಸತತವೂ ನೀಟಾಗಿರುವನು. ಬ್ರಹ್ಮಾಂಡಾಂತರ್ಗತ ದೃಶ್ಯ ವಸ್ತುಗಳ ಒಳ ಹೊರಗೆಲ್ಲ ಆತನು ತುಂಬಿರುವನು ಅಂದಮೇಲೆ ಇಂಥ ವಿಮಲ ವಸ್ತುವಿಗೆ ಸರಿಯಾದ ಇನ್ನೊಂದು ಪದಾರ್ಥವು ಯಾವದಿರುವದು? ವೈಕುಂಠ, ಕೈಲಾಸ-ಸ್ವರ್ಗ ಲೋಕಗಳಲ್ಲಿಯೂ ಇಂದ್ರ ಲೋಕದಲ್ಲಿಯೂ ಹೀಗೆ ಹದಿನಾಲ್ಕು ಲೋಕಗಳಲ್ಲಿಯೂ ಪನ್ನಗರೇ ಮುಖ್ಯವಾಗಿರುವ ಪಾತಾಳಲೋಕಗಳಲ್ಲಿಯೂ ಆತನು ಇದ್ದೇ ಇರುವನು. ಕಾಶಿಯಿಂದ ರಾಮೇಶ್ವರದ ವರೆಗೂ ಹಾಗೂ ಅಲ್ಲಿಂದ ಇಲ್ಲಿಯ ವರೆಗೂ ಆತನು ಅಪಾರವಾಗಿಯೂ

ದಟ್ಟವಾಗಿಯೂ ತುಂಬಿದ ಅಪರಂಪಾರನಾಗಿರುವನು ಆತನು ಒಬ್ಬನೇ ಆದರೂ ಒಮ್ಮೆಲೇ ಎಲ್ಲ ಪ್ರಾಣಿಗಳೆನ್ನೆಲ್ಲ ವ್ಯಾಪಿಸಿ ಬಿಟ್ಟಿರುವನು ಎಲ್ಲ ಕಡೆ ಯಲ್ಲಿ ಎಲ್ಲಕ್ಕೂ ಅವನ ಸ್ಪರ್ಶವು ಇದ್ದೇ ಇರುವದು ಆತನು ಮಳೆಯಿಂದ ತೊಯ್ದು ನೆನೆಯುವದಿಲ್ಲ ಹುದುಲು ಕೆಸರಿನಿಂದ ಲಿಪ್ತನಾಗುವದಿಲ್ಲ ಪೂರ–ಮಹಾಪೂರಗಳ ನೆರೆ ಹಾವಳಿಯಿಂದ ತೇಲಿ ಹೋಗುವದಿಲ್ಲ ಅವನು ಒಂದೇ ಸವನೆ ಎದುರು, ಹಿಂದೆ, ಎಡ, ಬಲಗಳಲ್ಲೆಲ್ಲವುಗಳಲ್ಲಿ ಕೆಳಗೆ ಮೇಲೆ ಮತ್ತು ಅಲ್ಲಲ್ಲಿರುವ ಎಲ್ಲ ಪ್ರಾಣಿಗಳಲ್ಲಿ ವ್ಯಾಪಿಸಿರುವನು ಕಲ್ಪನೆಗೆ ಮೀರಿ ಪಸರಿಸಿದ ಆಕಾಶವೆಂಬ ಮಡುವಿನಲ್ಲಿ ಆತನು ಮುಳುಗಲಾರನು ಗಗನವು ಏಕದೇಶಿತ್ವದಿಂದ ಉದಾಸವಾಗಿದ್ದು ಅದಕ್ಕೆ ದೃಶ್ಯಭಾಸವಿಲ್ಲ ಹೀಗೆ ನಿರಾ ಭಾಸನಾದ ಆ ಪರಬ್ರಹ್ಮನನ್ನು ತಿಳಿಯಬೇಕು ಸಂತ-ಸಾಧು ಮಹಾನು ಭಾವರಿಗೆಲ್ಲರಿಗೂ ಹಾಗು ದೇವ-ದಾನವ—ಮಾನವರೆಲ್ಲರಿಗೂ ಬ್ರಹ್ಮನಿಗೂ ಆ ಪರಬ್ರಹ್ಮನ ಸ್ಥಾನವು ವಿಶ್ರಾಂತಿಯ ಸ್ಥಾನವಾಗಿರುವದು. ಆ ಪರಬ್ರಹ್ಮನ ಕೊನೆಯ ಮರ್ಯಾದೆಯಷ್ಟೇ ಎಂದು ತಿಳಿಯಲಿಕ್ಕೆ ಬರಲಾರದು ಅದನ್ನು ಅರಿಯುಲು ಎತ್ತಲೂ ಹೋಗಲು ಸಾಧ್ಯವಿಲ್ಲ ಆತನು ಸ್ಥೂಲನೂ ಅಲ್ಲ, ಸೂಕ್ಷ್ಮನೂ ಅಲ್ಲ ಹಾಗು ಅವನು ಒಂದೇ ಸವನೆಯೂ ಇರುವದಿಲ್ಲ ಆತ ನನ್ನು ಜ್ಞಾನ ದೃಷ್ಟಿಯಿಂದಲೇ ಕಂಡರೆ ಮಾತ್ರ ಸಮಾಧಾನವೆನ್ನಿಸುವದು ಇಲ್ಲದಿದ್ದರೆ ಇಲ್ಲ ಪಿಂಡ ಬ್ರಹ್ಮಾಂಡಗಳ ಅಂದರೆ ಅಷ್ಟದೇಹಗಳ ನಿರಸನ ವಾಗಿ ಬಳಿಕ ನಿರಾಭಾಸ ಬ್ರಹ್ಮನೇ ಇಲ್ಲಿಂದಲ್ಲಿಯ ವರೆಗೆ ಆಕಾಶದಂತೆ ವ್ಯಾಪಿಸಿಕೊಂಡಿರುವನು ಬ್ರಹ್ಮನ್ನು ವ್ಯಾಪಕನೆಂದು ನಾವು ಅನ್ನುವೆವು ಅದು ಸತ್ಯವು ದೃಶ್ಯವು ವ್ಯಾಪ್ಯವು ಆದರೆ ವ್ಯಾಪವಿಲ್ಲದೆ ವ್ಯಾಪಕವೆಂದು ಹೇಗೆ ಹೇಳಬಹುದು ? ಬ್ರಹ್ಮನಿಗೆ ಶಬ್ದಗಳ ಕೂಡುವಿಕೆಯಿಲ್ಲ, ಅಂದರೆ ಅವನು ನಿಶ್ಶಬ್ದನು, ಅದರಂತೆ ಅವನು ನಿರ್ವಿಕಲ್ಪನು, ಅವನನ್ನು ವಿವೇಕ

ದಿಂದ ಕಲ್ಪನಾತೀತನಾದ ನಿರಂಜನನೆಂದು ತಿಳಿಯಬೇಕು ವಿಮಲ ಬ್ರಹ್ಮನ ಬಗೆಗಿರುವ ಶುದ್ಧ ಸಾರವನ್ನು ಶ್ರವಣಮಾಡಿ ಮನನವನ್ನು ಮಾಡಿ ಕೊಳ್ಳುತ್ತ ಶುದ್ಧ ಅನುಭವವುಂಟಾಯಿತೆಂದರೆ ಬ್ರಹ್ಮ ವಿಜ್ಞಾನ [ಬ್ರಹ್ಮ ಸಾಕ್ಷಾತ್ಕಾರ]ವಾಗಿ ಸಹಜವಾಗಿ ಉನ್ಮನೀಯ ಸ್ಥಿತಿಯುಂಟಾಗುವದು

ಒಟ್ಟಿನ ಮೇಲೆ ಹೇಳುವದೇನೆಂದರೆ—

ಶ್ರವಣಾದಿ ಭಕ್ತಿ ಸಾಧನಗಳ ಫಲವು ಪ್ರಾಪ್ತವಾಯಿತೆಂದರೆ ಸಂಸಾರವು ಸಫಲವಾಗುವದು ಅಂದರೆ ನರದೇಹ ಪ್ರಾಪ್ತವಾದುದು ಸಾರ್ಥಕವಾಗಿ ಜನನ-ಮರಣಗಳ ಪುನರಾವೃತ್ತಿ ತಪ್ಪುವದು, ಅದರಿಂದ ನಿಶ್ಚಲ, ನಿರ್ಗುಣ ಬ್ರಹ್ಮನು ಅಂತಸ್ಥದಲ್ಲಿ ಸ್ಥಿರಗೊಳ್ಳುವನು, ಮಾಯೆಯ ಇತಿಶ್ರೀಯಾಗುವದು, ತತ್ವಗಳು ವಿಂಗಡಿತವಾಗುವವು, ಸಾಧ್ಯಪ್ರಾಪ್ತವಾಗಿ ಸಾಧನೆಗಳು ಲಯಹೊಂದುವವು, ಅಜ್ಞಾನವೆಂಬ ಸ್ವಪ್ನದಲ್ಲಿ ಕಂಡವುಗಳೆಲ್ಲವೂ ಸ್ವರೂಪ ಜಾಗೃತಿಯಿಂದ ಹಾರಿ ಹೋಗುವವು ಸಹಜವಾಗಿ ಸಮಾಧಾನವುಂಟಾದುದನ್ನು ಹೇಳುವದಕ್ಕೆ ಬಾರದೆ ಹೋಗುವದು ಅಂದರೆ ಅದು ಅನಿರ್ವಚನೀಯವಾಗಿರುವದು ಈ ಪ್ರಕಾರ ಇವನ್ನು ವಿವೇಕಗಳಿಂದ ಅರಿತುಕೊಳ್ಳಬೇಕು ಮತ್ತು ಅನುಭವದಿಂದ ಸತ್ಯವಸ್ತುವನ್ನು ಗುರುತಿಸಿ ಹೊಂದಬೇಕು ಇಷ್ಟಾದರೆ ಜನನ–ಮರಣ ಚಕ್ರವು ಮುರಿದು ಬಿದ್ದು ಹೋದಂತಾಯಿತು ಭಕ್ತಾಭಿಮಾನಿ ಶ್ರೀ ರಾಮನು ಭಕ್ತೋದ್ಧಾರಕನು ಅವನು ದಯಾವಂತನು ಅವನ ಪ್ರೇರಣೆಯಿಂದಲೇ ಶ್ರೀ ಸಮರ್ಥ ರಾಮನ ವಚನಗಳೆಲ್ಲ ಒಂದಾಗಿ ಗ್ರಂಥ ರೂಪದಿಂದ ಈ ಮಹತ್ತಮವಾದ ಶ್ರೀ ದಾಸಬೋಧೆ ಗ್ರಂಥವು ಸಿದ್ಧವಾಯಿತು ಈ ಗ್ರಂಥ ರಾಜದಲ್ಲಿ ಇಪ್ಪತ್ತು ದಶಕ

ಗಳಿರುವವು. ಇವುಗಳ ಶ್ರವಣದಿಂದ ಆತ್ಮಶೋಧನೆ ಮಾಡಿಕೊಂಡು ಮನನ ಮಾಡಿಕೊಳ್ಳುವವರಿಗೆ ಪರಮಾರ್ಥವು ಸ್ಪಷ್ಟವಾಗಿ ಕಟ್ಟಿಟ್ಟ ಗಂಟೇ ಆಗುವದು ಇದರಲ್ಲಿಯ ಎಲ್ಲ ದಶಕಗಳಲ್ಲಿ ಒಟ್ಟು ಇನ್ನೂರು ಸಮಾಸ ಗಳು ರೂಪಗೊಂಡಿರುವವು ಸಾಧಕರಾದವರು ಇವನ್ನೆಲ್ಲ ಸಾವಧಾನತೆ ಯಿಂದಲೂ ಶಾಂತವೃತ್ತಿಯಿಂದಲೂ ಓದಿಕೊಳ್ಳಬೇಕು ವಾಚನದ ಮನನ ವಾದಂತೆ ಎಲ್ಲ ಮರ್ಮಗಳು ಹೆಚ್ಚೆಚ್ಚಾಗಿ ತಿಳಿಯುತ್ತ ಹೋಗುವದು ಇನ್ನು ಗ್ರಂಥಸ್ತವನ ಮಾಡುವದು ಅತ್ಯವಶ್ಯವು ಆದರೆ ಈ ಬಗೆಯು ಸ್ತವನ ಮಾಡುವಲ್ಲಿಯಾದರೂ ಉದ್ದೇಶವೇನು ? ಓದುಗರಿಗೆ ಆತ್ಮಾನು ಭಾವವುಂಟಾಗುವದೇ ಮುಖ್ಯೋದ್ದೇಶವು ಅಷ್ಟಾದರೆ ತೀರಿತು ಅದೇ ಗ್ರಂಥದ ಸ್ತವನ [ಹೊಗಳಿಕೆ] ಆದಂತಾಯಿತು

ದೇಹವು ಪಂಚಭೂತಾತ್ಮಕವಾದದ್ದು ಅದರ ಕರ್ತೃತ್ವವೆಲ್ಲವೂ ಆತ್ಮಾ ರಾಮನ ಕಡೆಗಿರುವದು ಮತ್ತು ಈ ಗ್ರಂಥ ಕರ್ತೃತ್ವವು ಮಾತ್ರ ಮನುಷ್ಯನದೆಂದು ಯಾವುದರಿಂದ ಹೇಳತಕ್ಕದ್ದು ? ಎಲ್ಲವೂ ಜಗದೀಶ್ವರನ ಅಂದರೆ ಅಂತರಾತ್ಮನ ಕೃತಿಯೇ ಆಗಿರುವದು ಆದರೆ ಅದು ಮನುಷ್ಯನ ದೆಂದು ಹೇಳುವದು ಅಪ್ರಮಾಣವಾಗುವದು ಹಾಗೆ ಹೇಳುವ ಕಾರಣವೂ ಇಲ್ಲ ಅಷ್ಟ ಶರೀರಗಳ ನಿರಸನವಾಯಿತು, ತತ್ವಗಳ ವಿಂಗಡಿಕೆಯಾ ಯಿತು, ಎಲ್ಲ ತತ್ವಗಳೂ ಹಾರಿ ಹೋದವು ಅಂದಬಳಿಕ ಯಾವನೂ ಯಾವ ಪದಾರ್ಥಗಳಿಗೂ 'ನಾನು'।'ನನ್ನದು' ಈ ಪ್ರಕಾರ ನುಡಿಯುವ ಮೊದಲು ವಿಚಾರ ಮಾಡಬೇಕು ವ್ಯರ್ಥವಾಗಿ ಭ್ರಮೆಗೆ ಒಳಗಾಗಬಾರದು ಎಲ್ಲ

ವೆನ್ನೂ ಜಗದೀಶನು ಕ್ರಮ ಕ್ರಮವಾಗಿ ನೆರವೇರಿಸುತ್ತ ಬಂದಿರುವನು "
ಎಂದು ಗುರುಗಳು ಶಿಷ್ಯರಿಗೆ ಬೋಧಿಸಿದರು

**ಇಂತಿ ಸಮರ್ಥರ ದಾಸಬೋಧೆಯು ಸಮಾಪ್ತಿಯು**



ಶ್ರೀ ಸಮರ್ಥ ಕೃತ

# ಅನುಬಂಧ

ಶ್ರೀ ರಾಮ ॥ ಯೋಗಾನಂದ ರಸ ಭೋಜನಂ ॥ ಶಿಷ್ಯನ ವಿನಯ ಬೇಡಿಕೆ—

"ಶ್ರೀ ಸದ್ಗುರುವರ್ಯನೇ ! ಪೂರ್ಣಬ್ರಹ್ಮ ಪ್ರತಾಪ ಸೂರ್ಯನೇ ! ದಯಾಸಾಗರನೇ ! ನನ್ನ ಗುರುವೇ ! ನಿನಗೆ ನನ್ನ ನಮಸ್ಕಾರಗಳಿಂದ ಜಯಜಯಕಾರ ಮಾಡುವೆನು ನಾನು ಭವಸಾಗರದಲ್ಲಿ ಮುಳುಗಿ ವಿಷಯ ಮದದಿಂದ ಕುರುಡನಾಗಿರುವೆನು ೮೪ ಲಕ್ಷ ಯೋನಿಗಳ ಮಹಾಪೂರದಲ್ಲಿ ತೇಲುತ್ತ ಮುಳುಗುತ್ತ ಗತಿಗಾಣದಾಗಿರುವೆನು ನನ್ನಂತೆಯೇ ಅಸಂಖ್ಯ ಪ್ರಾಣಿಗಳ ಸ್ಥಿತಿಯಾಗಿದೆ ನಾನು ಜೀವದಾಶೆ ಹಿಡಿದು ಓಡುತ್ತಿರುವೆನು. ನನ್ನಲ್ಲಿಯ ಮೂಲ ವಸ್ತುವಿನ ಸ್ಮರಣೆಯಿಲ್ಲದಾಗಿ ನಾನು ಯಾರೆಂಬ ಅರಿವು ನನಗೆ ವಿಸ್ಮರಣೆಯಾಗಿದೆ ನನ್ನನ್ನೂ ನನ್ನಂತೆ ದುಸ್ಥಿತಿಗೀಡಾದವರನ್ನೂ ಈ ತಾಪದಿಂದ ಮುಕ್ತರನ್ನಾಗಿ ಮಾಡುವ ಉದ್ದಿಶ್ಯವಾಗಿಯೇ ಪೂರ್ಣ ಜ್ಞಾನ ಘನವೆಂಬ ವೈದ್ಯನು ನೀವು ಅವತರಿಸಿರುವಿರಿ ಭವರೋಗಿಷ್ಠರಾದ ನಮಗೆ ತಕ್ಕ ಔಷಧ ಕೊಟ್ಟು ಭವವೆಂಬ ರೋಗದಿಂದ ಬಿಡುಗಡೆ ಮಾಡುವದಾಗಬೇಕು ಘನವಾದ ಉದಾರನು ನೀನಾಗಿರುವಿ ಎಂಬ ಭಾವನೆಯಿಂದ ನಿನಗೆ ಶರಣು ಬಂದಿರುವೆನು ದಯಾಸಾಗರನೇ! ದಾತಾರನೇ! ಅಂತಕರುಣದಿಂದ ನನ್ನನ್ನು ಉದ್ಧರಿಸಬೇಕು ಗುರುದೇವಾ! ನನ್ನನ್ನು ನಿಜರೂಪಕ್ಕಿಳಿಸಬೇಕು ಈ ನನ್ನ ವಿಚಾರವನ್ನು ನಿಮಗೆ ತಿಳಿಸುವೆನು ದಾತಾರರಾದ ನೀವು ನನಗೆ ಸಾಕ್ಷಾತ್ಕಾರ ಬ್ರಹ್ಮನನ್ನು ಪ್ರತ್ಯಕ್ಷ ಮಾಡುವದಾಗಬೇಕು''

ಇಂತು ಶಿಷ್ಯನ ಬೇಡಿಕೆಯ ಪ್ರಶ್ನೆಯನ್ನು ಕೇಳಿ ಶ್ರೀ ಗುರುಗಳು:—

"ಎಲೈ ಬಾಲಕನೇ! ನಿಶ್ಚಿತ ಮನದಿಂದ ಕೇಳು ನಿನ್ನ ಪ್ರಶ್ನೆಯೆಂಬ ಕಡಿವಾಣವು ನಿಜವಾಗಿ ನನ್ನ ಕಂಠವನ್ನು ಬಿಗಿದು ಬಿಟ್ಟಿತು ಒಳ್ಳೇದು

ನಿನಗೆ ನಿಜವಸ್ತುವನ್ನು ತೋರಿಸುವೆನು ತೆಗೆದುಕೊಳ್ಳು" ಎಂದು ಹೇಳಿ ಗುರುಗಳು ಆ ಶಿಷ್ಯನನ್ನು ತಮ್ಮ ತೊಡೆಯ ಮೇಲೆ ಕರೆದುಕೊಂಡು ಓಂಕಾರಪ್ರಣವ ರಸವನ್ನು ಆತನ ಕಿವಿಯಲ್ಲಿ ಪೂರ್ಣ ತುಂಬಿ ಬಿಟ್ಟರು ಆ ತೀಕ್ಷ್ಣವಾದ ದಿವ್ಯ ರಸಾಯನವೆಂಬ ಔಷಧವು ಚಮತ್ಕಾರ ಗತಿಯಿಂದ ಕಿವಿಯಲ್ಲಿಂದಿಳಿದು ಆತನ ಕಣ್ಣುಗಳಿಗೆ ಬಂದು ತಾಗಿತು ಅದುರಿಂದ ಅವನಿಗೆ ದಿವ್ಯ ದೃಷ್ಟಿಯುಂಟಾಯಿತು ಮತ್ತು ಸೂರ್ಯನ ದ್ವಾರದಿಂದ ಆ ದೃಷ್ಟಿ ನೋಟವು ಮೇಲಿನ ಆಕಾಶ ಮಂಡಲವನ್ನು ಭೇದಿಸಿತು ಆಗ ಆ ದಿವ್ಯವಾದ ಆಕಾಶದಲ್ಲಿ'ಸೋಹಂ' ಶಬ್ದದಉದಯವಾಗಿಅದರ ಜೀವರೂಪ ಅಂಶದಿಂದ ಎಲ್ಲ ವಿರಾಟ ಸ್ವರೂಪವು ಪ್ರಕಾಶವಾಯಿತು ತ್ರಿಕೂಟ, ಶ್ರೀಹಾಟಗಳು ಇಲ್ಲದಂತಾಗಿ ಎಲ್ಲೆಡೆಯಲ್ಲಿ ಸೋಹಂವೇ ಕಂಡು ಬರ ಹತ್ತಿತು ಆ ವಿರಾಟ ಸ್ವರೂಪದ ಉಗ್ರ ತೇಜಸ್ಸಿನ ಪ್ರಖರತೆಯಿಂದ ಸ್ಥೂಲಾದಿ ನಾಲ್ಕೂ ಶರೀರಗಳು ಲಯವಾಗಿ ಹೋದವು ಆಗ ಶಿಷ್ಯನಲ್ಲಿ ದೇಹಪರಿವೆಯಿಲ್ಲದಂತಾಯಿತು ಆತನು ಸ್ವರೂಪ ಸ್ಥಿತಿಯಲ್ಲಿಯೇ ಲೀನತೆ ಹೊಂದಿ ನಿಶ್ಚೇಷ್ಟಿತನಾಗಿ ಬಿದ್ದುಬಿಟ್ಟನು.

ಇಂತು ಶಿಷ್ಯನಿಗಾದ ಸ್ಥಿತಿಯನ್ನು ಕಂಡು ಸದ್ಗುರುಗಳು ತಮ್ಮ ಪದ್ಮ ಹಸ್ತವನ್ನು ಆತನ ಮಸ್ತಕದ ಮೇಲಿರಿಸಿ—

"ವತ್ಸಾ! ತೀವ್ರವೇ ಎಚ್ಚರಗೊಳ್ಳು, ನಿನ್ನ ನಿಜರೂಪವನ್ನು ಕಾಣು" ಎಂದು ನುಡಿದು ಆತನನ್ನು ಸ್ಮೃತಿ ಪಥದಲ್ಲಿ ತಂದರು ಅವನಲ್ಲಿ ಸ್ವರೂಪಾನುಸಂಧಾನವು ದೃಢವಾಗಿರುವಂತೆ ಅವನನ್ನು ಅಜಪಾಜಪದ ಹಗ್ಗದಿಂದ ಕಟ್ಟಿದ ಅಂತರಿಕ್ಷದ ತೂಗು ಮಣೆಯ ಮೇಲೆ ಕುಳ್ಳಿರಿಸಿದರು ಅವನ ಲಕ್ಷವು ಸತತವೂ ಅಲಕ್ಷವಸ್ತುವಿನ ಕಡೆಗೇ ಇರುವಂತೆ ಬೋಧಿಸಿದರು ಆಗಲಾ ಶಿಷ್ಯನಿಗೆ "ಧೀರತೆಯಿಂದ ನಿನ್ನ ಆಸನವನ್ನು ಸ್ಥಿರಗೊಳಿಸಿಕೊಳ್ಳು, ಇಂದ್ರಿಯಗಳನ್ನು ಪೂರ್ಣ ಸಂಯಮನಮಾಡಿಕೊಳ್ಳು ಊರ್ಧ್ವ ಸತ್ಯಪಥ ಮಾರ್ಗದಿಂದ ಗಮನಿಸಿ ಸ್ವರೂಪದಲ್ಲಿ ಸ್ಥಿರವಾಗಿದ್ದು ಬಿಡು" ಎಂದು ಹೇಳಿದರು ಮುಂದೆ ಅವನ ಅಜ್ಞಾನವನ್ನು ಕಳೆದು ಆವನಲ್ಲಿ ಅರಿವನ್ನು ಹುಟ್ಟಿಸಿದರು ಆಗ ಅವರು ಶಿಷ್ಯನಿಗೆ

'ನೀನು ಅರಿಯುವ ಅಭಿನವ ಜ್ಞಾನಗಳೆಲ್ಲ ಹೊಸವಾದವುಗಳಲ್ಲ ಆದರೂ ನಿನಗೆ ಅವನ್ನೆಲ್ಲ ಹೊಸ ಮಾರ್ಗದಿಂದ ತೋರಿಸುವೆನು' ಎಂದು ಹೇಳಿ ಗಂಟೆ, ಕಿಂಕಿಣಿ, ಅನುಹತ ಹೀಗೆ ಕ್ರಮದಿಂದ ಮೂರು ನಾದಗಳನ್ನು ಅವನ ಶ್ರವಣಕ್ಕೆ ತಾಗಿಸಿದರು, ಮತ್ತು ಅವರು ವತ್ಸಾ ಊರ್ಧ್ವ ಲಕ್ಷವನ್ನಿರಿಸಿ ನೋಡು ನಿನಗೆ ಚಂದ್ರಜ್ಯೋತಿಯು ಕಾಂತಿಯುತವಾಗಿಯೂ ಬಳಿಕ ಬ್ರಹ್ಮ ಸರ್ಗದ ವ್ಯೂಹವು ಬಲವಂತವಾಗಿಯೂ ತೋರುವದು ಅಲ್ಲಿ ದೊರಕುವ ಸುಖವನ್ನು ಅಂತರಂಗದಲ್ಲಿ ದೃಢವಾಗಿ ಇರಿಸಿಕೊಳ್ಳು, ಮತ್ತು ಸ್ವರೂಪಾನುಸಂಧಾನವನ್ನು ಸ್ಥಿರವಾಗಿಟ್ಟುಕೊಂಡು ಮುಂದೆ ಮೆಲ್ಲಮೆಲ್ಲನೆ ಮೇಲೆ ಪ್ರವೇಶಮಾಡು ಅಲ್ಲಿ ನಿನಗೆ ಹಲವು ಮಿಂಚುಗಳೋಪಾದಿ ಚಮಕಿಸುವ ಬಂಗಾರ ವರ್ಣದ ಕಾಮಿನಿಯೊಬ್ಬಳು ಪ್ರಕಾಶಯುತಳಾಗಿ ತೋರುವಳು. ಅದೆಲ್ಲವನ್ನು ತಿಳಿದುಕೊಂಡು ಹಿಂದಕ್ಕೆ ಸರಿ ಅಲ್ಲಿಂದ ಮುಂದೆ ಸೂರ್ಯಬಿಂಬವಿರುವದನ್ನು ನೋಡು ಆ ಬಿಂಬದಿಂದ ಹೊರಟ ಜ್ವಾಲೆಗಳು ನಿನ್ನನ್ನು ಸುತ್ತರಿದು ಪಸರಿಸಿರುವವು ಆದರೆ ಅದನ್ನು ಕಂಡು ಅಂಜಬೇಡ ಹಾಗು ಅಲ್ಲಿ ನಿಲ್ಲದೆ ಊರ್ಧ್ವಮುಖವಾಗಿದ್ದ ನಿನ್ನ ಶ್ವಾಸವನ್ನು ಅಲ್ಲಿ ಕೆಳಮುಖದಿಂದ ಮೇಲೆ ಒಯ್ದು ಸುತ್ತಲೆಲ್ಲ ಪಸರಿಸಿದ ಸೂರ್ಯಕಿರಣಗಳನ್ನು ನುಂಗಿ ಬಿಡು ಅಂದರೆ ಎಲ್ಲೆಡೆಯಲ್ಲಿಯೂ ಆನಂದ ಸೂರ್ಯನೇ ತುಂಬಿ ಬಿಡುವನು ನನ್ನ ವತ್ಸನೆ! ಆಗ ಅನಂತ ಸೂರ್ಯ ಹಾಗು ಅಗ್ನಿಗಳ ತೇಜವು ಕಂಡು ಬರುವದು ಅದ್ಭುತ ಜ್ವಾಲೆಗಳನ್ನು ಕಂಡು ಧೈರ್ಯಗುಂದಬೇಡ ಅಲ್ಲಿಯ ವ್ಯೂಹವು ಅತಿ ದುರ್ಘಟವಾದದ್ದು ಅಲ್ಲಿ ಬಹು ಎಚ್ಚರದಿಂದಿರು ಮೂಲ ಸ್ವರೂಪ ಧಾರಣದ ಧ್ವಜವನ್ನು ಚೆನ್ನಾಗಿ ನಿಲ್ಲಿಸು ಮತ್ತು ಆ ಸೂರ್ಯನನ್ನು ಹಿಂದೆ ಚೆಲ್ಲು ಮುಂದೆ ಕಾಣುವ ಚಮತ್ಕಾರವೇನೆಂಬುದನ್ನು ಕೇಳು

ಅಲ್ಲಿ ಇರುವ ಹಂಸ ಸಮುದಾಯವನ್ನು ನಿರೀಕ್ಷಿಸು ಅಲ್ಲಿಯ ಚಂದ್ರಕಿರಣಗಳಿಂದುಂಟಾಗಿದ್ದ ಶೀತವನ್ನು ಅನುಭವಕ್ಕೆ ತಂದುಕೊಳ್ಳು ಈ ಮೊದಲು ಉಂಟಾಗಿದ್ದ ತಾಪಗಳೆಲ್ಲ ಶಮನವಾಗುವವು ನಿನ್ನ ಸರ್ವಾಂಗವೆಲ್ಲ ಶೀತಲ ಹೊಂದುವದು ಒಟ್ಟಿನ ಮೇಲೆ ನೀನೂ ಚಂದ್ರನಂತೆ ಕಾಂತಿಯುಕ್ತನೂ ಶೀತಲಮಯನೂ ಆಗುವಿ. ಬೆಳ್ದಿಂಗಳಂತೆ ಉಂಟಾಗಿರುವ ಪ್ರಭೆಯನ್ನು ಕಣ್ತುಂಬ ಕಾಣುವಿ ಆ ನಿನ್ನ ಪ್ರಭೆಯೇ ದೇಹಾತೀತ ಪರಮಾತ್ಮನೆನ್ನಿಸುವದು. ಆ ಚಿನ್ಮಯ ಸುಖವನ್ನು ನಿರಂತರ ಅನುಭೋಗಿಸುವಿ ನಿನ್ನ ಆ ಸ್ವಾನುಭವ ಪ್ರಕಾಶವು ಎಲ್ಲ ಕಡೆಗೂ ವ್ಯಾಪಿಸುವದು ಆದರಿಂದ ಆಕಾಶವು ಶುಭ್ರವಾಗುವದು ಇಂತಾದ ಆ ಚಿದಾಕಾಶದ ಮಧ್ಯದಲ್ಲಿ ಘನಸಾಂದ್ರವಾದ ನಿಶ್ಚಲ ಪರಬ್ರಹ್ಮನು ಸರ್ವ ಬ್ರಹ್ಮಾಂಡದ ಆಚೆಕಡೆಗೆ ಇರುವನು ಅದೇ ನಿನ್ನ ಶುದ್ಧ ಸ್ವರೂಪವು ಅಲ್ಲಿ ಎಲ್ಲ ಜ್ಞಾನಗಳು ಒಳಗೊಳ್ಳುವವು ಮತ್ತು ಬಲಾಢ್ಯವಾಗಿ ಪರಿವರ್ತಿಸುವವು ಇಂಥ ಯೌಗಿಕ ಸುಖವು ಪ್ರಾಪ್ತವಾದಮೇಲೆ ದೇಹವು ಮರಣದಿಂದ ಮುಕ್ತವಾಯಿತೆಂದು ಹೇಳುವದೂ ಕೇಳುವದೂ ಇಲ್ಲದಾಗುವದು ಯಾಕಂದರೆ ಎಲ್ಲವೂ ಐಕ್ಯತೆಯಾಗಿ ಒಂದೇ ಒಂದು ಆಗಿಬಿಡುವದು ಆಗ ನಿನಗೆ ಶಾಂತಿ ಎಂಬ ಅಖಂಡ ಆತ್ಮ ತೃಪ್ತಿಯುಂಟಾಗುವದು ಆಮೇಲೆ ನೀನು ಆ ಶಾಂತಿ ವಧುವಿನೊಡನೆ ಅಲಕ್ಷ್ಯವೆಂಬ ಶಯ್ಯೆಯ ಮೇಲೆ ಪವಡಿಸುವಿ ಆ ಸ್ವರೂಪಾನುಭವದಲ್ಲಿಯೇ ಆಕೆಯೊಡನೆ ನಿನ್ನ ಪರಿಣಯನವುಂಟಾಗಿ ಆ ಶಾಂತಿಯಲ್ಲಿ ಸಮರಸ ಹೊಂದುವಿ ಅಲ್ಲಿಯ ಸ್ವಾನುಭವದ ಅನುಭವಗೊಳ್ಳುತ್ತಿರುವಾಗಲೇ ನಿನಗೆ ನೀನು ಬಂದ ಮಾರ್ಗವು ಕಾಣದಂತಾಗುವದು ಇಂತು ನೀನು ಮೂಲ ಪದವನ್ನು ಸೇರಿದ ತರುವಾಯ ಇಲ್ಲಿಗೆ ಬರುವವರೆಗೆ ನಿನ್ನ ಮಾರ್ಗದಲ್ಲಿ

ಹತ್ತಿದ ತ್ರಿಕೂಟ, ಶ್ರೀಹಾಟ, ಗೋಲ್ಹಾಟ, ಮೂರುವರೆ ಮೊಳದಕ
ಸಿಂಹಾಸನ, ಶರೀರ, ಇಡಾ, ಪಿಂಗಳ, ಸುಷುಮ್ನ ಇವೆಲ್ಲವು ನೀನು
ಪಡೆದ ಸ್ವಾತ್ಮ ಸುಖವನ್ನು ಬೆಂಬಳಿಸಿ ನಿನ್ನ ಹಿಂದೆಯೇ ಉಳಿಯುತ್ತ
ವವು ಸ್ಥೂಲಾದಿ ಚತು: ಶರೀರಗಳೂ ಇಂದ್ರಿಯ ವಿಕಾರಗಳು ಇವೆ
ಲ್ಲವು ತಿಳಿಯದೆ ಅವುಗಳ ಓಟವು ಇಲ್ಲದಾಗುವದು ಪಂಚ ಭೂತಗಳೆಲ್ಲ
ವಿಂಗಡಿತವಾಗುವವು ಅದಕ್ಕೆ ಸ್ಥಾನವೇ ಇಲ್ಲದಾಗುವದು ಇಂತು ಅಪರಿಮಿ
ತವಾದ ಸ್ವಾತ್ಮ ಸುಖದ ಭೂಮಿಕೆಯಮೇಲೆ ಸುಖೈಕ್ಯವಾಗಿ ದೇಹದಲ್ಲಿ
ಸ್ವಾತ್ಮತ್ವವು ಪ್ರಕಟವಾಗುವದು ನಿಶ್ಚಿತವು"

ಈ ಪ್ರಕಾರವಾಗಿ ಸದ್ಗುರುವಿನ ಉಪದೇಶ ನಡೆದಾಗಲೇ ಶಿಷ್ಯನು ಸಹಜ ಸಮಾಧಿಗೊಂಡವನು ಆ ಕೂಡಲೇ ಅಡಬಡಿಸಿ ಮೇಲಕ್ಕೆದ್ದನು

ಆಗಲಾತನು ಸ್ಮೃತಿಯ ಮೇಲೆ ಬಂದು 'ಸದ್ಗುರುವೇ! ನಿನ್ನ ಈ ಋಣವನ್ನು ನಾನೆಂತು ತೀರಿಸಿ ಉದ್ಧಾರನಾಗುವೆನು? ಒಂದು ವೇಳೆ ಮುಖದಿಂದ ಸ್ತುತಿಸುವೆನೆಂದರೆ ಆ ಮತಿಯು ನನ್ನಲ್ಲಿಲ್ಲ, ನನ್ನ ಪರಾ ವಾಣಿಯೂ ಅನಿರ್ವಾಚ್ಯವಾಗಿರುವದು, ಗುರುದೇವಾ! ಈಗ ನಾನು ಕೇವಲ ಮಗುವಿನ ಮುದ್ದು ನುಡಿಗಳಿಗನುಸರಿಸಿಯೇ ನಿಮ್ಮ ಕೃಪೆಯಿಂದಲೇ ನಿಮ್ಮನ್ನು ಸ್ತವನ ಮಾಡುವೆನು ನನ್ನ ವಾಣಿಯು ನಿನ್ನೆದುರು ಎಂದರೆ ಸೂರ್ಯನೆದುರು ಮಿಣಿ ಮಿಣಿ ಮಿನುಕುವ ದೀಪದಂತೆ ಆಗಿದ್ದರೂ ಸದ್ಗುರು ದೇವಾ!

ಕರುಣಾ ಸಾಗರನೇ! ಭವರೋಗ ವೈದ್ಯನೇ! ನಿನಗೆ ಜಯ ಜಯವು!
ಬಾಲಕನ ಗುರುವೇ! ಕೃಪಾ ಘನನೇ! ಸಮರ್ಥನೇ! ನಿನಗೆ ಜಯ ಜಯವು!'

೯ವಿನಾಶನೇ ! ಪರೇಶನೇ ! ದಯಾಸಾಗರನೇ ! ಅಧ್ಯಕ್ಷನೇ ನಿನಗೆ ಜಯ ಜಯವು !

೨ಲಕ್ಷ್ಯ ವಿಹಾರಾಕಾಶಶಾಂಕನೆ! ನಿನಗೆ ಜಯ ಜಯಕಾರವು
ಆನಂದ ಪ್ರಭುವೇ ! ಭವಸಾಗರೋದ್ಧಾಕರನೇ ! ಭಾಸ್ಕರನೇ ! ನಿನಗೆ ಜಯ ಜಯವು

( ಇಂತು ಸ್ತೋತ್ರ ಮಾಡಿ )

ಸದ್ಗುರು ದೇವಾ ! ನಿನ್ನನ್ನು ಸ್ತುತಿಮಾಡಿ ವೇದಾದಿಗಳು ಅವ್ಯಂಗ ವಾದವು ಎಂದಮೇಲೆ ನನ್ನಂಥ ಪಾಮರನು ನಿನ್ನನ್ನು ವರ್ಣಿಸುವದು ಶಕ್ಯವೇ?

ಮದ್ಗುರು ಶ್ರೀ ರಾಮದಾಸರೇ! — ' ನನ್ನ ಮೂಕತ್ವವನ್ನು ನೀವು ಶ್ರಮದಿಂದ ನಾಶಗೊಳಿಸಿದಿರಿ! ನನ್ನನ್ನು ತಮ್ಮಂತೆ ಮಾಡಿದಿರಿ " ಎಂದು ಕಲ್ಯಾಣ ಶಿಷ್ಯನು ನುಡಿದನು

ಆಗ ಗುರು ರಾಮದಾಸರು ಆ ಕಲ್ಯಾಣ ಶಿಷ್ಯನ ಸವಿಮಾತು ಗಳನ್ನು ಕೇಳಿ ಅತನನ್ನು ಭರದಿಂದ ಅಪ್ಪಿಕೊಂಡು ವಾತ್ಸಲ್ಯವನ್ನು ಬೀರಿದರು ಆ ಸಮಯವು ಗುರು ಶಿಷ್ಯರೀರ್ವರನ್ನು ಕೆಲಕಾಲ ಮುಗ್ಧ ರನ್ನಾಗಿ ಮಾಡಿತು ಅವರಲ್ಲಿ ಐಕ್ಯವು ಸಮರಸ ಗೊಂಡಿತು ಒಂದೇ ಒಂದಾದ ಪರಮಾತ್ಮ ಸುಖದಿಂದ ಗುರು–ಶಿಷ್ಯ ಮಿಲನದ ಆ ಪ್ರಸಂಗವು ರಸ ಭರಿತವಾಯಿತು

ಅಮೃತದ ಅಡಿಗೆಯಾಗಿದೆ ದೇವತೆಗಳು ನೀಡುವವರು, ಅಕ್ಷಯ ಪದದ ಅಮೃತಾನುಭವನ್ನು ಪಡೆಯುವದಕ್ಕಾಗಿ ಸಾಧುಸಂತರು ಸ್ವಾನಂದ ಂದ ಭುಂಜಿಸಹತ್ತಿರುವರು ಅವರಾಡುವ ಅನಿರ್ವಾಚ್ಯ ಪರಬ್ರಹ್ಮ ಂಬಂಧವಾದ ಮಾತುಗಳು ಸಾಧಕರಿಗೆ ಪ್ರಯೋಜನ ಕಾರಿಯಾದವು ದ್ಧರು ಅವನ್ನುಕೇಳಿ ತಲೆ ದೂಗಿದರು, ಬದ್ಧರು ಮುಮುಕ್ಷುಗಳಾ ು

ದೇವಾ! ಶ್ರೀ ರಾಮ ದಾಶರಥಿಯೆ! ಮೋಕ್ಷೈಕ ಪತ್ನೀತ್ವ ಸುಜ್ಞಾನಿಯೇ! ನಿನ್ನ ಪಾದದಾಸ ನನ್ನನ್ನು ನಿನ್ನ ಪದದಲ್ಲಿ ಹೊಂದಿಸಿಕೊಳ್ಳು. ಇದಿಷ್ಟರ ಹೊರತು ಇನ್ನೊಂದು ನುಡಿಯು ನನ್ನಿಂದ ಬರಲಾರದು!!

ಇಂತಿದೆ ಶ್ರೀ ದಾಸಬೋಧ ಗ್ರಂಥದಲ್ಲಿ ಈ ಸರಸರಸಾತ್ಮಕ ಅರ್ಥವಿರುವದು. ಶ್ರೋತೃಗಳು ಇದನ್ನು ಯಥಾರ್ಥವಾಗಿ ಅರಿತುಕೊಂಡಲ್ಲಿ ಸಹಜ ಸಮಾಧಿಸ್ಥರಾಗುವರು.

|| ಶ್ರೀ ರಾಮಚಂದ್ರಾರ್ಪಣಮಸ್ತು ||

ಓಂ ಶಾಂತಿ ಶಾಂತಿಃ ಶಾಂತಿಃ

